# ಶ್ರೀಮನ್ಮಹಾಭಾರತ

ಭಾರತ ದರ್ಶನ ಪ್ರಕಾಶನ



ವನಪರ್ವ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

ಸಂಪುಟ ೬

ಭಾರತ ದರ್ಶನ ಪ್ರಕಾಶನ

# ಶ್ರೀಮನ್ಮಹಾಭಾರತ

(ವ್ಯಾಸಭಾರತದ ಕನ್ನಡ ಸರಳಾನುವಾದ)

ಭಾತಿ ಸರ್ವೇಷು ವೇದೇಷು
ರತಿಃ ಸರ್ವೇಷು ಜನ್ತುಷು ।
ತರಣಂ ಸರ್ವತೀರ್ಥಾನಾಂ
ತೇನ ಭಾರತಮುಚ್ಯತೇ ॥

**ಸಂಪುಟ 6**

*ಮುದ್ರಕರು:*
**ಭಾರತ ದರ್ಶನ ಮುದ್ರಣಾಲಯ**
163, ಮಂಜುನಾಥ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ,
ಬೆಂಗಳೂರು - 560 028
ದೂರವಾಣಿ: 080-26765381

ಪ್ರಥಮ ಇ-ಮುದ್ರಣ ಜನವರಿ ೨೦೧೪

*ಆದಿ ಅಧ್ಯಕ್ಷರು:*

**ಪರಮಪೂಜ್ಯ ಶ್ರೀ ಶ್ರೀ**
**ರಂಗಪ್ರಿಯಮಹಾದೇಶಿಕಸ್ವಾಮಿಗಳವರು**

*ಆದಿ ವ್ಯವಸ್ಥಾಪಕ ಸಂಪಾದಕರು:*

**ದಿ॥ ಕೆ.ಎಸ್. ಕೌಶಿಕ್ ('ವಿಶ್ವಾಮಿತ್ರ')**

*ಆದಿ ಸಂಪಾದಕರು:*

**ದಿ॥ ವಿದ್ವಾನ್ ಹೆಚ್.ಎನ್. ರಂಗಸ್ವಾಮೀ**

*ಆದಿ ಸಂಪಾದಕರು:*

**ದಿ॥ ವಿದ್ವಾನ್ ರಾಮೇಶ್ವರಾವಧಾನೀ**



ಸಂಪಾದಕ ಮಂಡಲಿ:

ಶ್ರೀ ಶ್ರೀಹರಿ
ಶ್ರೀ ನೆ.ವೆಂ. ಶ್ರೀನಿವಾಸರಾಯ

ಶ್ರೀ ಎ. ಸೂರ್ಯನಾರಾಯಣ್, M.A. B.Com., B.L.,
ಕೋಶಾಧ್ಯಕ್ಷರು

# ವಿನಮ್ರವಚನಗಳು

ದಯಾಮಯನಾದ, ಚಿನ್ಮಯನಾದ, ಸಚ್ಚಿದಾನಂದಸ್ವರೂಪನಾದ ಭಗವಂತನ ಮತ್ತು ತದೇಕರೂಪನಾದ ಗುರುಭಗವಂತನ ಅಪಾರಕರುಣೆಯ ಫಲವಾಗಿ ಈ ಆರನೆಯ ಸಂಪುಟವನ್ನು ಅವನ ಅಡಿದಾವರೆಗಳಲ್ಲರ್ಪಿಸಿ ಪ್ರಿಯವಾಚಕರ ಅಂಜಲಿಪುಟಗಳಲ್ಲಿಡುವಂತಾಯಿತು. ಮೂವತ್ತು ಮೆಟ್ಟಿಲು ಗಳ ಸೋಪಾನದಲ್ಲಿ ಇದಿನ್ನೂ ಆರನೆಯ ಮೆಟ್ಟಲಾಗಿದೆ. ಈ ಆರನೆಯ ಮೆಟ್ಟಲನ್ನು ಹತ್ತಲು ಸ್ವಲ್ಪ ಮುಗ್ಗರಿಸಿ ತಡವರಿಸಬೇಕಾಯಿತು. ಐದನೆಯ ಸಂಪುಟದಿಂದ ಆರನೆಯ ಸಂಪುಟದವರೆಗೆ ಅನುಭವಿಸಿದ ಸಿಹಿ-ಕಹಿಗಳೆ ರಡನ್ನೂ ವಾಚಕರ ಮುಂದಿಟ್ಟರೆ ತಪ್ಪಾಗಲಾರದು. ಆರನೆಯ ಸಂಪುಟವು ಪ್ರಾರಂಭವಾಗುವ ವೇಳೆಗೆ ಸರಿಯಾಗಿ ಕಾಗದಕ್ಕೆ ಬಹಳ ಪರದಾಟವಾಯಿತು. ಕಾಗದವೇ ಎಲ್ಲಿಯೂ ಸಿಕ್ಕುತ್ತಿರಲಿಲ್ಲ. ಬೆಲೆಯು ಇದ್ದಕ್ಕಿದ್ದಂತೆ ಗಗನಕ್ಕೇರಿ ಹೋಯಿತು. ಮುಂದೆ ಹೇಗೆ ಮಾಡುವುದೆಂದು ಚಿಂತಿಸುತ್ತಿರುವಲ್ಲಿ ಮೈಸೂರು ಪೇಪರ್ ಮಿಲ್ಲಿನವರು ಕಾಗದವನ್ನು ಕಳುಹಿಕೊಟ್ಟು ಉಪಕರಿಸಿ ದರು. ಆದರೆ ಕಾಗದದ ಬೆಲೆಯು ಬಹಳ ಹೆಚ್ಚಿಹೋಯಿತು. ಶಾಯಿ, ಬೈಂಡಿಂಗ್ ಸಾಮಾನುಗಳ ಬೆಲೆಯೂ ಸಹ ಒಂದಕ್ಕೆರಡಾಗಿದೆ. ಈ ಕಾರಣ ದಿಂದ ಮನಸ್ಸಿಲ್ಲದಿದ್ದರೂ ಅನಿವಾರ್ಯವಾಗಿ ಸಂಪುಟ 1ಕ್ಕೆ ಕೇವಲ ಒಂದು ರೂ. ಹೆಚ್ಚಿಸಲಾಗಿದೆ. ಗ್ರಾಹಕರು ಸಹಕರಿಸಬೇಕಾಗಿ ಪ್ರಾರ್ಥನೆ.

ಮಹಾಭಾರತಕ್ಕಾಗಿಯೇ ಹೊಸ ಮುದ್ರಣಯಂತ್ರವನ್ನು ತೆಗೆದುಕೊಳ್ಳ ಲಾಗಿದೆ. ಇದರಿಂದ ಮುಂದಿನ ಸಂಪುಟಗಳನ್ನು ಸಾಧ್ಯವಾದಷ್ಟು ಬೇಗ ಪ್ರಕಟಿಸಬಹುದೆಂದು ಆಶಿಸಲಾಗಿದೆ.

ಈಗ ಸಿಕ್ಕಿರುವ ಕೆನರಾ ಬ್ಯಾಂಕಿನ ನೆರವು ಚಿರಸ್ಮರಣೀಯವಾದುದು.

ಕಾಗದವನ್ನು ದಾಸ್ತಾನುಮಾಡಲು ಸೌಕರ್ಯಮಾಡಿಕೊಟ್ಟಿದ್ದಾರೆ. ಇವರ ನೆರವಿಲ್ಲದಿದ್ದರೆ ಮುದ್ರಯಂತ್ರವನ್ನು ಕೊಳ್ಳಲಾಗಲೀ, ಕಾಗದವನ್ನು ದಾಸ್ತಾನುಮಾಡಲಾಗಲೀ–ಸಾಧ್ಯವಾಗುತ್ತಿರಲಿಲ್ಲ. ಪರಮಾತ್ಮನ ದಯೆ ಯಿಂದ ಸಕಾಲದಲ್ಲಿ ಇವರ ನೆರವು ಸಿಕ್ಕಿದಂತಾಯಿತು. ಮಹಾಭಾರತದ ಮೂವತ್ತು ಸಂಪುಟಗಳಿಗೂ ಚಂದಾದಾರರಾಗುವವರಿಗೆ ಸಾಲದ ನೆರವನ್ನೂ ಕೊಡಲು ಯೋಚಿಸಿದ್ದಾರೆ. ಅದೂ ಕಾರ್ಯಗತವಾದೀತೆಂಬ ಭರವಸೆಯಿಂದಿ ದ್ದೇವೆ. ಕೆನರಾ ಬ್ಯಾಂಕಿನಲ್ಲಿ ಲೆಕ್ಕವಿಟ್ಟಿರುವ ಸಾವಿರಾರು ಮಂದಿ ಇದರ ಪ್ರಯೋಜನವನ್ನು ಪಡೆದುಕೊಳ್ಳಬಹುದಾಗಿದೆ.

ಆರನೆಯ ಸಂಪುಟದಿಂದ ಪ್ರತಿ ಸಂಪುಟದ ಎರಡು ಸಾವಿರ ಪ್ರತಿ ಗಳನ್ನು ತೆಗೆದುಕೊಳ್ಳಲು ಕರ್ನಾಟಕ ಸರ್ಕಾರಕ್ಕೆ ಮನವಿ ಮಾಡಿಕೊಳ್ಳ ಲಾಗಿತ್ತು. ನಮ್ಮ ಮಾನ್ಯ ವಿದ್ಯಾಮಂತ್ರಿಗಳು ಪ್ರತಿ ಸಂಪುಟದ ಒಂದು ಸಾವಿರ ಪ್ರತಿಗಳನ್ನು ಕೊಳ್ಳಲು ಶಿಫಾರಸ್ಸು ಮಾಡಿರುವುದಾಗಿ ತಿಳಿದು ಬಂದಿದೆ. ಹಣಕಾಸಿನ ಮಂತ್ರಿಗಳೂ ಸಹ ಈ ಮಹಾಕಾರ್ಯಕ್ಕೆ ನೆರವು ನೀಡುವುದಾಗಿ ಆಶ್ವಾಸನೆಯನ್ನಿತ್ತಿದ್ದಾರೆ. ಇದರ ಸಂಬಂಧವಾದ ಸರ್ಕಾರೀ ಆಜ್ಞೆಯನ್ನು ನಿರೀಕ್ಷಿಸುತ್ತಿದ್ದೇವೆ.

ಸಂಪಾದಕಮಂಡಲಿಯವರು ಹೆಚ್ಚಿನ ಶ್ರಮವಹಿಸಿ ಕಾರ್ಯಮಾಡು ತ್ತಿದ್ದಾರೆ. ನಮ್ಮ ಪ್ರಕಾಶನದ ಅಧ್ಯಕ್ಷರಾದ ವಿದ್ವಾನ್ ಹೆಚ್. ಎಸ್. ವರದ ದೇಶಿಕಾಚಾರ್ಯರೂ ಸಹ ತಮ್ಮ ಅನೇಕಕಾರ್ಯಗಳ ಮಧ್ಯದಲ್ಲಿ ಸಂಪಾದಕತ್ವದ ಕೆಲಸದಲ್ಲಿ ಇತ್ತೀಚೆಗೆ ಪಾಲುಗೊಂಡಿರುವುದನ್ನು ತಿಳಿಸಲು ಹರ್ಷಿಸುತ್ತೇವೆ. ಎಲ್ಲ ವಿದ್ವಾಂಸರೂ ಉದಾರತೆಯಿಂದಲೂ, ನಿಃಸ್ಪೃಹತೆ ಯಿಂದಲೂ ಕಾರ್ಯಮಾಡುತ್ತಿದ್ದಾರೆ. ಅವರ ಸೌಹಾರ್ದ ಮತ್ತು ಒಲುಮೆ ಗಳಿಲ್ಲದಿದ್ದರೆ ಈ ಮಹಾಕಾರ್ಯವು ಸುಗಮವಾಗುತ್ತಿರಲಿಲ್ಲ. ಖಜಾಂಚಿ ಗಳಾದ ಶ್ರೀ ವಿ. ಸೂರ್ಯನಾರಾಯಣ್‌ರವರು ನಮ್ಮ ಸಂಸ್ಥೆಗೆ ಬೆನ್ನೆಲುಬಿ ನಂತಿದ್ದು ಕಾರ್ಯವನ್ನು ನಿರ್ವಹಿಸಿಕೊಡುತ್ತಿದ್ದಾರೆ.

ನಮ್ಮ ಸ್ನೇಹಿತರನೇಕರು ಮಹಾಭಾರತದ ಪ್ರಚಾರಕಾರ್ಯವನ್ನು ನಿಃಸ್ಪೃಹತೆಯಿಂದ ಮಾಡುತ್ತಿದ್ದಾರೆ. ಆದರೆ ಈ ಪ್ರಚಾರವು ಕೆಲವು ಪಟ್ಟಣ

ಗಳಿಗೆ ಮಾತ್ರ ಸೀಮಿತವಾಗಿದೆ. ಇದು ಇನ್ನೂ ಹೆಚ್ಚು ಪ್ರಚಾರವಾಗಬೇಕು. ಮಹಾಭಾರತವನ್ನು ಕರ್ನಾಟಕದ ಹಳ್ಳಿ-ಹಳ್ಳಿಗಳಲ್ಲಿಯೂ ಓದುವಂತಾಗ ಬೇಕು. ಇದು ನಮ್ಮ ಆಶಯವಾಗಿದೆ. ಇದಕ್ಕೆ ಬೇಕಾದ ಸಲಕರಣೆಗಳನ್ನು ಅನುಕ್ರಮವಾಗಿ ಹೊಂದಿಸಿಕೊಳ್ಳುತ್ತಿದ್ದೇವೆ. ಇದು ಒಮ್ಮೆಯೇ ಸಾಧಿಸಬಹು ದಾದ ಕಾರ್ಯವಲ್ಲ. ಜನಬಲ, ಧನಬಲ, ದೈವಬಲ–ಎಲ್ಲವೂ ಕೂಡಿಬರ ಬೇಕು. ನಮ್ಮ ಪ್ರತಿಯೊಬ್ಬ ಗ್ರಾಹಕರೂ ಮತ್ತೊಬ್ಬ ಗ್ರಾಹಕರನ್ನು ಮಾಡಿ ಕೊಟ್ಟು ಉಪಕರಿಸಬೇಕು. ಮಹಾಭಾರತವನ್ನು ಮತ್ತೊಬ್ಬರು ಓದುವಂತೆ ಮಾಡಿದರೆ ಮಹಾಪುಣ್ಯವೆಂಬುದನ್ನು ನಮ್ಮ ಗ್ರಾಹಕರು ಮನಗಾಣಬೇಕು. ಮಹಾಭಾರತವು ಧರ್ಮ-ಅರ್ಥ-ಕಾಮ-ಮೋಕ್ಷಗಳನ್ನು ಬೋಧಿಸುವ ಮಹಾಗ್ರಂಥ. ವಿದ್ಯೆಯ ರಾಶಿ. ಇಂತಹ ಮಹಾಗ್ರಂಥವನ್ನು ಮತ್ತೊಬ್ಬರು ಓದುವಂತೆ ಪ್ರೇರಿಸುವುದರಿಂದ ಮಹಾವಿದ್ಯೆಯನ್ನೇ ದಾನಮಾಡಿದ ಪುಣ್ಯವು ಲಭಿಸುತ್ತದೆ. ಆದುದರಿಂದ ನಮ್ಮೆಲ್ಲ ಗ್ರಾಹಕರೂ ಮತ್ತೊಬ್ಬ ಗ್ರಾಹಕರನ್ನು ಒದಗಿಸಿಕೊಡಲು ಸಂಕಲ್ಪಿಸುವುದು. ಆಗ ನಮ್ಮ ಆಶಯವೂ ಕೈಗೂಡು ವುದು. ನಿಃಸ್ಪೃಹತೆಯಿಂದ ಪ್ರಚಾರಕಾರ್ಯವನ್ನು ಮಾಡುತ್ತಿರುವವರೆಲ್ಲರಿಗೂ ನಾವು ಕೃತಜ್ಞರಾಗಿದ್ದೇವೆ.

ಮೊದಲನೆಯ ಸಂಪುಟದ ಪುನರ್ಮುದ್ರಣವು ಪ್ರಾರಂಭವಾಗಿದೆ. ಸಾಧ್ಯವಾದಷ್ಟು ಬೇಗ ನೂತನಗ್ರಾಹಕರಿಗೆ ಪ್ರಥಮಸಂಪುಟವನ್ನು ಒದಗಿಸ ಲಾಗುವುದು.

ಆರನೆಯ ಸಂಪುಟಕ್ಕೆ ಸಂಗೀತ ಹಾಗೂ ಸಾಹಿತ್ಯಕ್ಷೇತ್ರದಲ್ಲಿ ಚಿರಪರಿ ಚಿತರಾದ ರಾಳ್ಳಪಲ್ಲಿ ಶ್ರೀ ಅನಂತಕೃಷ್ಣಶರ್ಮರು ಮುನ್ನುಡಿಯನ್ನು ಬರೆದು ಕೊಟ್ಟು ಉಪಕರಿಸಿರುತ್ತಾರೆ. ಇವರಿಗೆ ನಾವು ಕೃತಜ್ಞರಾಗಿದ್ದೇವೆ.

ಸಮಯದಲ್ಲಿ ನೆರವು ನೀಡಿದುದಕ್ಕಾಗಿ ಕೆನರಾ ಬ್ಯಾಂಕಿನವರಿಗೂ ಮತ್ತು ಮೈಸೂರು ಪೇಪರ್‌ಮಿಲ್ಸಿನವರಿಗೂ ಪ್ರತ್ಯೇಕವಾಗಿ ಅಭಿನಂದನೆಗಳನ್ನು ಸಲ್ಲಿಸಬೇಕಾಗಿದೆ. ಇವರು ಮುಂದೆಯೂ ಈ ಮಹಾಕಾರ್ಯಕ್ಕೆ ಪೂರ್ಣ ಬೆಂಬಲನೀಡಬೇಕಾಗಿ ಪ್ರಾರ್ಥಿಸುತ್ತೇವೆ. ಕೆನರಾಬ್ಯಾಂಕಿನ ಅಧಿಕಾರಿಗಳೊ ಬ್ಬರ ೨ 'ಮಹಾಭಾರತದ ಪ್ರಚಾರಕ್ಕೆ ಸಹಕಾರನೀಡುವುದು ವಿದ್ಯಾಭ್ಯಾಸಕ್ಕೆ

ಪ್ರೋತ್ಸಾಹಿಸಿದಂತೆ’ ಎಂದು ಹೇಳಿದರು. ಇದು ಶತಾಂಶ ಸತ್ಯವಾದುದು. ನಿಜವಾದ ವಿದ್ಯೆಯೆಂದರೆ ಮಹಾಭಾರತವನ್ನು ಮನನಮಾಡಿಕೊಳ್ಳುವುದು. ಆಧುನಿಕವಿದ್ಯಾಪದ್ಧತಿಯಿಂದ ಯಾರಿಗೂ ಯಾವ ಪ್ರಯೋಜನವೂ ಇಲ್ಲ ವೆಂದು ವಿದ್ಯಾಇಲಾಖೆಯ ದೊಡ್ಡ ದೊಡ್ಡ ಅಧಿಕಾರಿಗಳೇ ಸಾರಿ-ಸಾರಿ ಹೇಳುತ್ತಿದ್ದಾರೆ. ಆದರೆ ಅದನ್ನು ಸಮೀಪಕರಿಸಲು ಯಾರಿಗೂ ಧೈರ್ಯವೇ ಇಲ್ಲವಾಗಿದೆ.

ಹಂತ-ಹಂತವಾಗಿಯಾದರೂ ಮಹಾಭಾರತ, ರಾಮಾಯಣ– ಇತ್ಯಾದಿ ಗ್ರಂಥಗಳನ್ನು ವಿದ್ಯಾರ್ಥಿಗಳು ಓದುವಂತಾಗಬೇಕು. ಅಂದೇ ನಾವು ನಿಜವಾದ ಭಾರತೀಯರೆನಿಸಿಕೊಳ್ಳುವೆವು. ಕೃಣ್ವಂತೋ ವಿಶ್ವಮಾರ್ಯಂ– ವಿಶ್ವವನ್ನೇ ಆರ್ಯವನ್ನಾಗಿ ಪರಿವರ್ತಿಸಲು ಸಮರ್ಥರಾಗುವೆವು. ಅಂತಹ ಒಂದು ಸುವರ್ಣದಿನವನ್ನು ಪರಮಾತ್ಮನು ಕಲ್ಪಿಸಿಕೊಡಲಿ. ಅದುವರೆಗೂ ನಾವು ಈ ಅಳಿಲುಸೇವೆಯನ್ನು ಮಾಡುತ್ತಾ ಹೋಗೋಣ.

ಶಾನ್ತಿಃ ಪುಷ್ಟಿಸ್ತುಷ್ಟಿಶ್ಚಾಸ್ತು ಸಮಸ್ತಸನ್ಮಙ್ಗಲಾನಿ ಭವನ್ತು

**–ಪ್ರಕಾಶಕರು**



ಶ್ರೀಃ

# ಮಂಗಳಾಶಂಸೆ

ಮಹಾಭಾರತದ ಹಿರಿಮೆಯನ್ನು ಈಗ ಕೊಂಡಾಡುವುದು ಬರೀ ಪುನರುಕ್ತಿಯ ಪುನಃಪುನರುಕ್ತಿ. ತೆಲುಗಿನಲ್ಲಿ ೧೧ನೇ ಶತಮಾನದಲ್ಲಿ ಆ ಮಹೋದಾರ ರಚನೆಯನ್ನು ಸಂಸ್ಕೃತದಿಂದ ತರ್ಜುಮೆಮಾಡಲು ಪ್ರಯತ್ನಿಸಿದ ನನ್ನಯ್ಯಭಟ್ಟಾರಕನು ಒಂದು ಸೀಸಪದ್ಯದಲ್ಲಿ ಹೀಗೆ ವರ್ಣಿಸಿದ್ದಾನೆ.

'ಧರ್ಮತತ್ತ್ವಜ್ಞರು ಇದು ಧರ್ಮಶಾಸ್ತ್ರವೆಂದೂ, ಅಧ್ಯಾತ್ಮವಿದರು ಇದು ವೇದಾಂತವೆಂದೂ, ನೀತಿವೇತ್ತರು ಇದು ನೀತಿಶಾಸ್ತ್ರವೆಂದೂ, ಕವೀಶ್ವರರು ಇದು ಮಹಾಕಾವ್ಯವೆಂದೂ, ಲಾಕ್ಷಣಿಕರು ಇದು ಸರ್ವಲಕ್ಷ್ಯ ಸಂಗ್ರಹವೆಂದೂ, ಐತಿಹಾಸಿಕರು ಇದು ಇತಿಹಾಸವೆಂದೂ, ಉತ್ತಮಪೌರಾಣಿಕರು ಇದು ಬಹುಪುರಾಣಗಳ ಸಮುಚ್ಚಯವೆಂದೂ–ಕೊಂಡಾಡುವ ಹಾಗೆ ವಿವಿಧತತ್ತ್ವವೇದಿ ಪರಾಶರನ ಪುತ್ರ, ಮುನಿಗಳಲ್ಲಿ ಅಗ್ರಗಣ್ಯ, ಮಹಾವಿಷ್ಣುಸಮಾನ–ವೇದವ್ಯಾಸನು ವಿಶ್ವಜನಗಳಿಗೂ ಹಿತವಾಗಿ ಬೆಳಗು ವಂತೆ ಮಹಾಭಾರತವನ್ನು ರಚಿಸಿದನು'–ನನ್ನ ನೋಟಕ್ಕೆ ಇದು ಸರ್ವಂಕಷ ವಾದ ಮಹಾಭಾರತದ ಸ್ವರೂಪಸಂಗ್ರಹ.

ನನ್ನಯ್ಯನಿಂದ ತೆಲುಗು ಮಹಾಭಾರತ ಮೊದಲನೆಯ ಎರಡೂವರೆ ಪರ್ವಗಳಷ್ಟು ಮಾತ್ರ ಪರಿವರ್ತಿತವಾಯಿತು. ತರುವಾಯ ೧೩ನೇ ಶತಕದಲ್ಲಿ ತಿಕ್ಕನ ಸೋಮಯಾಜಿ ವಿರಾಟಪರ್ವದಿಂದ ಕ್ರಮವಾಗಿ ೧೫ ಪರ್ವಗಳನ್ನು ಪೂರ್ತಿಮಾಡಿದನು. ಅರಣ್ಯಪರ್ವದ ಉಳಿದ ಉತ್ತರಾರ್ಧವನ್ನು ೧೪ನೇ ಶತಕದ ಪೂರ್ವಭಾಗದಲ್ಲಿ ಶಂಭೂದಾಸನು ನನ್ನಯ್ಯನ ಹೆಸರಿನಲ್ಲೇ ರಚಿಸಿದನು. ಈ ಮೂವರು ಮಹಾಪ್ರಾಜ್ಞರಾದ ಮಹಾಕವಿಗಳು. ಎಲ್ಲರೂ ಮೂಲದ ಮುಖ್ಯವಿಷಯಗಳಿಗೆ ಲೋಪ ಮಾಡದೆ ವಿರೋಧವಿಲ್ಲದೆ ಸಂಗ್ರಹಿಸಿದ್ದಾರೆ. ಅಂದಿನಿಂದ ಇಂದಿನವರೆಗೂ ಮಹಾಭಾರತವು ತೆಲುಗುಸಾಹಿತ್ಯದಲ್ಲಿ ಪರಮಪ್ರಾಮಾಣಿಕವಾದ ಜೀವನಾಡಿಯಾಗಿದೆ. ಆಮೇಲೆ ಯಥಾ ಮೂಲವಾಗಿ ಪದ್ಯ-ಗದ್ಯರೂಪಗಳಿಂದ ವಿವಿಧವಾಗಿ ಹಲವಾರು ವಿದ್ವಾಂಸರು ಕನ್ನಡದಲ್ಲಿನಂತೆ ತೆಲುಗಿನಲ್ಲೂ ಭಾರತವನ್ನು ಬರೆದಿದ್ದಾರೆ.

ಈಗ ಕನ್ನಡದಲ್ಲಿ ಹೊರಡುತ್ತಿರುವ ಈ ಮಹಾಭಾರತದ ಪರಿವರ್ತನೆಯನ್ನು ಕೈಗೊಂಡಿರುವ ಪಂಡಿತಮಂಡಲಿ ಕನ್ನಡವನ್ನೋದಿ ತಿಳಿಯಬಲ್ಲವ

ರೆಲ್ಲರ ಗೌರವ-ಕೃತಜ್ಞತೆಗಳಿಗೂ ಪೂರ್ಣಪಾತ್ರರಾದವರು. ಇದು ಸಂಸ್ಕೃತ ಮೂಲದ ತುಂಬು ಪಡಿಯಚ್ಚು ಮಾತ್ರವಲ್ಲ ; ವಿವರಣವೂ ಆಗಿ ಸಾಗುತ್ತಿದೆ. ಮುಖ್ಯವಾಗಿ ತೋರುವ ಮೂಲಶ್ಲೋಕಗಳನ್ನೂ ಓದುವವರಿಗೆ ಪರಿಚಯ ಮಾಡಿಕೊಡುವ ಈ ಪಂಡಿತರ ಪ್ರಣಾಳಿಕೆ ಬಹಳ ಉದಾರವಾದದ್ದು. ಇದರಿಂದ ಕೆಲವು ಸಾವಿರ ಮೂಲಶ್ಲೋಕಗಳನ್ನು ವಿವರಣಸಹಿತವಾಗಿ ಈ ಸಂಪುಟಗಳಲ್ಲಿ ಕನ್ನಡಿಗರು ಕಾಣಬಹುದು. ಈ ಮಹಾಕಾರ್ಯ ಸರ್ವಾಂಗ ಸೌಷ್ಠವದಿಂದ ತುಂಬಿರಬೇಕಾದರೆ ಎಷ್ಟು ವ್ಯಯ-ಪ್ರಯಾಸಗಳ ಸಾಹಸಕ್ಕೆ ಸಂಪಾದಕರು ಸಿದ್ಧವಾಗಿರಬೇಕೋ ಊಹಿಸುವುದೂ ಸಾಧ್ಯವಲ್ಲ!

ಇದರ ಜತೆಗೆ ಈ ಪಂಡಿತಮಹಾಶಯರು ಸಂಪುಟಗಳ ಕೊನೆಯಲ್ಲಿ ಒಂದು 'ಪರಿಶಿಷ್ಟ'ವನ್ನು ಸೇರಿಸಿ ಅದರಲ್ಲಿ ಮೂಲಭಾರತದ ಕೆಲವು ತೊಡಕುಗಳನ್ನು ಚರ್ಚೆಮಾಡಿ ಬಿಡಿಸುವ ಮಹಾಪ್ರಯತ್ನ ಮಾಡುತ್ತಿದ್ದಾರೆ. ಈ ಹೊರೆ ಇನ್ನೂ ಹೆಚ್ಚಿನದು. ಮಹಾಭಾರತದ ಮಹತ್ತಿಗೆ ಮಾರುಹೋಗಿ ಭರತಖಂಡದ ಎಲ್ಲಾ ಕಡೆಗಳಿಂದಲೂ ಎಷ್ಟೋಮಂದಿ, ಸಣ್ಣ-ದೊಡ್ಡ, ಪ್ರಕ್ಷೇಪ-ವಿಕ್ಷೇಪಗಳಿಂದ, ಪಾಠಾಂತರಗಳಿಂದ, ಟೀಕಾಂತರಗಳಿಂದ ಅನಾದಿಯಾಗಿ ಅದನ್ನು ತುಂಬಿದ್ದಾರೆ; ಇನ್ನೂ ತುಂಬುತ್ತಿದ್ದಾರೆ! ಆದ್ದರಿಂದ ಪ್ರಾಮಾಣಿಕಮೂಲಪಾಠ ಯಾವುದು? ಎಷ್ಟು? ಎಲ್ಲಿಯದು?–ಎಂಬ ವಿಮರ್ಶೆ ಈಗ ಪ್ರಾಜ್ಞರನೇಕರು ಮಾಡುತ್ತಿದ್ದಾರೆ. ಅಂಥಾ ತೊಡಕುಗಳನ್ನು ತೃಪ್ತಿಕರವಾಗಿ ಬಿಡಿಸುವುದು ಎಷ್ಟು ದುಸ್ಸಾಧ್ಯ–ಎಂಬುವುದಕ್ಕೆ ಈ ಸಂಪುಟದ 'ಪರಿಶಿಷ್ಟ'ದಲ್ಲಿ ಚರ್ಚೆಗೊಳಗಾದ ವಿಷಯವನ್ನು ನೋಡಬಹುದು.

ರಂತಿದೇವನ ವಿಷಯವನ್ನು ಹೇಳುವ ಅರಣ್ಯ-ಶಾಂತಿಪರ್ವಗಳೆರಡರ ಶ್ಲೋಕಗಳ ಪರಿವರ್ತನೆಯಲ್ಲೂ, ತೆಲುಗು ಮಹಾಭಾರತ ಮಹಾಕವಿಗಳು, ಆರಾರ್ಷಿ ಗೋವಧೆ ಮಾಡುತ್ತಿದ್ದನೆಂದೂ ಆತನಲ್ಲಿಗೆ ಗೋವುಗಳು ಉತ್ತಮಗತಿಗಾಗಿ ತಾವಾಗಿಯೇ ಬರಲು ಅವುಗಳನ್ನು ಆತನು 'ವಿಶಸನ' ಮಾಡುತ್ತಿದ್ದನೆಂದೂ, ಸ್ಪಷ್ಟವಾಗಿ ಬರೆದಿದ್ದಾರೆ. ಪೂರ್ವೋತ್ತರ ಸಂದರ್ಭಗಳಿಗನುಸಾರವಾಗಿ ಆ ಮೂಲವಾಕ್ಯಗಳಿಗೆ ಭಿನ್ನತಾತ್ಪರ್ಯ ಕಲ್ಪನೆ ಮಾಡಬೇಕೆನ್ನುವುದು ಈ 'ಪರಿಶಿಷ್ಟ'ದ ಪಂಡಿತರ ಅಭಿಪ್ರಾಯ. ಇದನ್ನು ಒಪ್ಪಿಕೊಳ್ಳುವುದು ಅಷ್ಟು ಸುಲಭವಾಗಿ ಕಾಣುವುದಿಲ್ಲ–ನನಗೆ, ಅದಿರಲಿ.

ಈ ಮಹಾಕಾರ್ಯವನ್ನು ಕಡೆದುಂಬಿಸುವ ಸಂಕಲ್ಪವನ್ನು ಶ್ರೀ ಶ್ರೀನಿವಾಸರು ಮಾಡಲಿ! ಅದಕ್ಕೆ ಬೇಕಾದ ಆಯುರಾರೋಗ್ಯೈಶ್ವರ್ಯಾದಿ ಸಮೃದ್ಧಿಯನ್ನು ದಯಪಾಲಿಸಲಿ! ಇದು ನನ್ನ ಮಂಗಳಾಶಂಸೆ.

ಬೆಂಗಳೂರು —ರಾಳ್ಳಪಲ್ಲಿ ಅನಂತಕೃಷ್ಣಶರ್ಮಾ
ಆನಂದ ಭಾದ್ರಕೃಷ್ಣ ೧೪

---

## ಎರಡನೆಯ ಮುದ್ರಣದ ಪ್ರಸ್ತಾವನೆ

ಅಕ್ಟೋಬರ್ 1974ರಲ್ಲಿ ಪ್ರಥಮಮುದ್ರಣವಾದ 6ನೆಯ ಸಂಪುಟವು ಇಷ್ಟು ಬೇಗ ಪುನರ್ಮುದ್ರಣಕ್ಕೆ ಬರುವುದೆಂಬ ನಿರೀಕ್ಷೆಯಿರಲಿಲ್ಲ. ಮೊದಲ ನೆಯ ಆವೃತ್ತಿಯಲ್ಲಿ ಐದು ಸಾವಿರ ಪ್ರತಿಗಳನ್ನು ಅಚ್ಚುಹಾಕಿಸಿದ್ದೆವು. ಪರ ಮಾತ್ಮನ ದಯೆಯಿಂದ ಈ ಮಹಾಗ್ರಂಥವು ಜನಪ್ರಿಯವಾಗಿ ಪುನ ರ್ಮುದ್ರಣವನ್ನು ಮಾಡಲೇಬೇಕಾಯಿತು. ಸತತವಾಗಿ ಈ ಮಹಾಗ್ರಂಥಕ್ಕೆ ಪ್ರೋತ್ಸಾಹವನ್ನು ಕೊಡುತ್ತಿರುವ ನಮ್ಮ ಕನ್ನಡ ಬಾಂಧವರಿಗೆ ನಾವು ಚಿರ ಋಣಿಗಳಾಗಿದ್ದೇವೆ.

ಆರನೇ ಸಂಪುಟದ ಪುನರ್ಮುದ್ರಣಕಾರ್ಯದಲ್ಲಿಯೂ ಸಂಪಾದಕ ಮಂಡಲಿಯವರು ಪೂರ್ಣರಾಗಿ ಸಹಕರಿಸಿ ಮುದ್ರಾರಾಕ್ಷಸನ ಹಾವಳಿಯನ್ನು ಸಾಧ್ಯವಾದಷ್ಟು ಮಟ್ಟಿಗೂ ತಪ್ಪಿಸಲು ಸಹಕಾರ ನೀಡಿರುತ್ತಾರೆ. ಇವರಿಗೆ ದಯಾಮಯನಾದ ಪರಮಾತ್ಮನು ಸಕಲೇಷ್ಟಾರ್ಥಗಳನ್ನೂ ದಯಪಾಲಿಸಲಿ.

ಪುನರ್ಮುದ್ರಣಕಾರ್ಯವು ಆರ್ಥಿಕದೃಷ್ಟಿಯಿಂದ ಹಿತಕರವಲ್ಲದಿದ್ದರೂ ನಾಡಜನತೆಗೆ ಮಹಾಭಾರತವನ್ನು ಹಂಚಬೇಕೆಂಬ ಏಕೈಕಧ್ಯೇಯದಿಂದ ಪುನರ್ಮುದ್ರಣವನ್ನು ಮಾಡುತ್ತೇವೆ. ನೂತನಗ್ರಾಹಕರಿಗೆ ಎಲ್ಲ ಸಂಪುಟಗಳನ್ನೂ ಒದಗಿಸುತ್ತೇವೆ. ಅಂತೆಯೇ ನಮ್ಮ ಕನ್ನಡಬಾಂಧವರೆಲ್ಲರೂ ಹೆಚ್ಚು ಹೆಚ್ಚು ಗ್ರಾಹಕರನ್ನು ಮಾಡಿಕೊಟ್ಟು ಪುನರ್ಮುದ್ರಣದ ಭಾರವು ಕಡಿಮೆಯಾಗುವಂತೆ ಸಹಕರಿಸಬೇಕಾಗಿ ಪ್ರಾರ್ಥಿಸುತ್ತೇವೆ.

ಇಂತಹ ಅಗಾಧಕಾರ್ಯವನ್ನು ನಿರಾತಂಕವಾಗಿ ನಡೆಸಿಕೊಡುತ್ತಿರುವ ದಯಾಮಯನಾದ ಪರಮಾತ್ಮನ ದಿವ್ಯಪಾದಾರವಿಂದಗಳಲ್ಲಿ ನಮಿಸಿ ವಿರಮಿ ಸುವೆವು.

—ಪ್ರಕಾಶಕರು.

## ಮೂರನೆಯ ಮುದ್ರಣದ ಪ್ರಸ್ತಾವನೆ

1984ನೇ ಫೆಬ್ರವರಿಯಲ್ಲಿ ಶ್ರೀಮನ್ಮಹಾಭಾರತದ 28ನೆಯ ಸಂಪುಟ ವನ್ನು ಪ್ರಕಾಶಿಸಿದನಂತರ ಈಗ 6ನೆಯ ಸಂಪುಟದ ಮೂರನೆಯ ಮುದ್ರಣ ವನ್ನು ಮುಗಿಸುತ್ತಿದ್ದೇವೆ. ಮುದ್ರಣಾಲಯದಲ್ಲಿ ಕಳ್ಳತನ, ಹಣಕಾಸಿನ ಅಡ ಚಣೆ ಮುಂತಾದವುಗಳಿಂದ ಇದರ ಮುದ್ರಣವು ಒಂದು ತಿಂಗಳು ತಡ ವಾಯಿತು. ಈ ವರ್ಷ ಮೊದಲಾಗಿ ಕಾಗದದ ದರವೂ ಇನ್ನೂ ಹೆಚ್ಚಿದೆ. 1983ನೆ ಡಿಸೆಂಬರ್‌ನಲ್ಲಿ ಟನ್ ಒಂದಕ್ಕೆ 9,850/-ರೂ.ಗಳಿದ್ದುದು ಈ ಸಂಪು ಟಕ್ಕೆ ಕಾಗದವನ್ನು ತರುವ ವೇಳೆಗೆ ಟನ್ ಒಂದಕ್ಕೆ 10,300/- ರೂ. ಆಗಿದ್ದಿತು. ನಾವು 1982ನೇ ವರ್ಷದಲ್ಲಿ ರಿಯಾಯ್ತಿದರದಲ್ಲಿ ಕೊಳ್ಳುತ್ತಿದ್ದುದು ಟನ್ 1ಕ್ಕೆ 4,200/-ರೂ.ಗಳಂತೆ. ಎಷ್ಟು ಹೆಚ್ಚಾಗಿರುವುದೆಂಬುದನ್ನು ಗ್ರಾಹಕರೇ ಊಹಿಸಬಹುದು. ಶ್ರೀಮನ್ಮಹಾಭಾರತದ 28ನೆಯ ಸಂಪುಟದ ಪ್ರಕಾಶನ ಸಮಾರಂಭದಲ್ಲಿ ಸಂಪುಟವನ್ನು ಪ್ರಕಾಶನಗೊಳಿಸಿದ ನಟರತ್ನಾಕರ ಶ್ರೀ ಮಾಸ್ಟರ್ ಹಿರಣ್ಣಯ್ಯನವರು ನಮ್ಮ ಆರ್ಥಿಕಪರಿಸ್ಥಿತಿಯನ್ನು ಮನಗಂಡು ತಮ್ಮ ನಾಟಕವೊಂದನ್ನು ಉಚಿತವಾಗಿ ಪ್ರದರ್ಶಿಸಿ ನೆರವು ನೀಡುವುದಾಗಿ ತಾವಾಗಿಯೇ ಭರವಸೆಯನ್ನಿತ್ತಿದ್ದರು. ಅದರಂತೆ ದಿನಾಂಕ 20-5-84ರಂದು ರವೀಂದ್ರ ಕಲಾಕ್ಷೇತ್ರದಲ್ಲಿ 'ನಡುಬೀದಿ ನಾರಾಯಣ' ಎಂಬ ಸಾಮಾಜಿಕ ನಾಟಕವನ್ನು ಪ್ರದರ್ಶಿಸಿದರು. ಈ ರೀತಿಯಲ್ಲಿ ಸ್ವಯಂಪ್ರೇರಿತವಾಗಿ ನಮಗೆ ನೆರವು ನೀಡಿದುದಕ್ಕೆ ಶ್ರೀ ಮಾಸ್ಟರ್ ಹಿರಣ್ಣಯ್ಯನವರಿಗೂ ಅವರ ನಾಟಕ ತಂಡದವರಿಗೂ ಚಿರಋಣಿಗಳಾಗಿದ್ದೇವೆ. ನಾಟಕದ ಯಶಸ್ಸಿಗೆ ಕಾರಣರಾದ ನಮ್ಮ ಗೆಳೆಯರಿಗೆ ಕೃತಜ್ಞತಾಪೂರ್ವಕ ವಂದನೆಗಳು. ಸಂಪಾದಕ ಮಂಡಲಿ ಯವರು ಈ ಸಂಪುಟದ ತಪ್ಪು-ಒಪ್ಪುಗಳನ್ನು ಶ್ರಮವಹಿಸಿ ತಾಳೆನೋಡಿ ಕೊಟ್ಟಿದ್ದಾರೆ. ಅವರಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು.

ದಯಾಮಯನಾದ ಜನಾರ್ದನನೊಬ್ಬನೇ ಪರಮಾಶ್ರಯನೆಂಬು ದನ್ನು ದೃಢವಿಶ್ವಾಸದಿಂದ ನಂಬಿ ಕಾರ್ಯವನ್ನು ಮುಂದುವರಿಸುತ್ತೇವೆ. ಅವನ ಪಾದಾರವಿಂದಗಳಲ್ಲಿ ಬಿದ್ದವರಿಗೆ ಆ ಮಹಾನುಭಾವನಲ್ಲದೇ ಬೇರೆ ಯಾರು ತಾನೇ ಆಶ್ರಯವನ್ನೀಯುವರು? ಭಗವನ್ನಾಮಸ್ಮರಣೆಯೊಡನೆ ವಿರಮಿಸುವೆವು.

—ಪ್ರಕಾಶಕರು

# ಮಹಾಭಾರತ–ವನಪರ್ವ–ಆರನೆಯ ಸಂಪುಟ
## ವಿಷಯಾನುಕ್ರಮಣಿಕೆ

ಅಧ್ಯಾಯ ವಿಷಯಗಳು ಪುಟ

ಶ್ರೀಮಹಾಗಣಪತಯೇ ನಮಃ     ಶ್ರೀ ಸರಸ್ವತ್ಯೈ ನಮಃ     ಶ್ರೀಸದ್ಗುರವೇ ನಮಃ



**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।**
**ದೇವೀ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥**

# ಮಹಾಭಾರತ-ವನಪರ್ವ ; ಆರನೆಯ ಭಾಗ

೧೪೩ನೆಯ ಅಧ್ಯಾಯ          ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಪಾಂಡವರು ಗಂಧಮಾದನಪರ್ವತವನ್ನು ಹತ್ತುತ್ತಿದ್ದಾಗ ಚಂಡಮಾರುತ ಮತ್ತು ಮಳೆಗಳಿಂದ ತೊಂದರೆ ಮತ್ತು ನಿವಾರಣೆ

ವೈಶಂಪಾಯನರು ಪ್ರಣವೋಚ್ಚಾರಣಪೂರ್ವಕವಾಗಿ ಕಥಾನಕವನ್ನು ಪ್ರಾರಂಭಿಸಿ, ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಧನುರ್ಧಾರಿಗಳಲ್ಲಿ ಶ್ರೇಷ್ಠರಾದ ಶೂರರಾದ ಮತ್ತು ಮಹಾತೇಜಸ್ವಿಗಳಾದ ಪಾಂಡವರು ಬತ್ತಳಿಕೆಗಳನ್ನೂ, ಧನುರ್ಬಾಣಗಳನ್ನೂ, ಗೋಧಾಂಗುಲಿತ್ರಾಣಗಳನ್ನೂ, ಖಡ್ಗಗಳನ್ನೂ ಧರಿಸದವರಾಗಿ–ಬ್ರಾಹ್ಮಣರನ್ನೂ, ದ್ರೌಪದಿಯನ್ನೂ ತಮ್ಮ ಜೊತೆಯಲ್ಲಿ ಕರೆದುಕೊಂಡು ಗಂಧಮಾದನ ಪರ್ವತದೆಡೆಗೆ ಪ್ರಯಾಣಮಾಡಿದರು. ಹೋಗುತ್ತಿರುವ ಮಾರ್ಗದಲ್ಲಿ ಪಾಂಡವರು ಸರಸ್ಸುಗಳನ್ನೂ, ನದಿಗಳನ್ನೂ, ವನಗಳನ್ನೂ, ಪರ್ವತಗಳನ್ನೂ, ಪರ್ವತದ ಮೇಲ್ಗಡೆಯಲ್ಲಿ ಹೆಚ್ಚು ನೆಳಲಿರುವ ಮಹಾವೃಕ್ಷಗಳನ್ನೂ ನೋಡಿದರು. ಸರ್ವರ್ತುಗಳಲ್ಲಿಯೂ ಫಲ-ಪುಷ್ಪಭರಿತವಾಗಿರುತ್ತಿದ್ದ ಮರಗಳುಳ್ಳ, ದೇವರ್ಷಿಗಳಿಂದ ಸಂಸೇವ್ಯಮಾನವಾಗಿದ್ದ ಪುಣ್ಯಕ್ಷೇತ್ರಗಳನ್ನೂ ಸಂದರ್ಶಿಸುತ್ತಾ ಪರಾವಲಂಬನೆಯಿಲ್ಲದೆ ಪ್ರಯಾಣಮಾಡಿದರು. ತಮ್ಮ ಮನಸ್ಸನ್ನು ಸಂಪೂರ್ಣವಾಗಿ ನಿರೋಧಿಸಿ ಅಥವಾ ಆತ್ಮನಲ್ಲಿಯೇ ಲೀನಗೊಳಿಸಿ, ಕಂದ-ಮೂಲ-ಫಲಗಳನ್ನೇ ಸೇವಿಸುತ್ತಾ ; ಹಳ್ಳ-ದಿಣ್ಣೆಗಳಿಂದ ಕೂಡಿದ್ದ ದುರ್ಗಮ

ವಾದ ಪ್ರದೇಶಗಳಲ್ಲಿ ಸಿಂಹ-ವ್ಯಾಘ್ರ-ವರಾಹಾದಿ ವಿವಿಧ ಮೃಗಸಮೂಹ ಗಳನ್ನು ನೋಡುತ್ತಾ ನರವ್ಯಾಘ್ರರಾದ ಪಾಂಡವರು ಪ್ರಯಾಣಮಾಡು ತ್ತಿದ್ದರು. ಈ ರೀತಿಯಲ್ಲಿ ಬಹುದುರ್ಗಮವಾಗಿದ್ದ, ಗಂಧರ್ವಾಪ್ಸರೆಯರಿಗೆ ಪ್ರಿಯವಾದ ಋಷಿಗಳಿಂದಲೂ ಸಿದ್ಧರಿಂದಲೂ ಕೂಡಿದ ಕಿನ್ನರರು ಸಂಚರಿಸು ತ್ತಿದ್ದ ಮಹಾಗಿರಿಯಾದ ಆ ಗಂಧಮಾದನ ಪರ್ವತದ ಸಮೀಪವನ್ನು ಬಹು ಪ್ರಯಾಸದಿಂದ ಸೇರಿದರು.

ಜನಮೇಜಯ! ಪಾಂಡವರು ಗಂಧಮಾದನಪರ್ವತದ ಮೇಲೆ ಅಡಿ ಗಳನ್ನಿಡುತ್ತಿರುವಾಗಲೇ ಚಂಡಮಾರುತವು ರಭಸದಿಂದ ಬೀಸತೊಡಗಿತು. ಅದರ ಹಿಂದೆಯೇ ಮಳೆಯೂ ಸುರಿಯಲಾರಂಭಿಸಿತು. ಚಂಡಮಾರುತ ದಿಂದ ತರಗೆಲೆಗಳಿಂದ ಕೂಡಿದ ಧೂಳು ಮೇಲೆದ್ದು ಭೂಮ್ಯಾಕಾಶಗಳನ್ನೂ-ಸ್ವರ್ಗ ವನ್ನೂ ಆವರಿಸಿಬಿಟ್ಟಿತು. ಅಗಾಧವಾದ ಧೂಳಿಯಿಂದ ಆಕಾಶವು ಆವರಿಸಲ್ಪ ಟ್ಟಿರಲಾಗಿ ಎಲ್ಲಿಯೂ ಏನೂ ಕಾಣುತ್ತಿರಲಿಲ್ಲ. ಪಾಂಡವರೂ ಸಹ ಒಬ್ಬರ ನ್ನೊಬ್ಬರು ಮಾತನಾಡಿಸಲೂ ಅಸಮರ್ಥರಾದರು. ಎಷ್ಟೇ ಹತ್ತಿರದಲ್ಲಿ ನಿಂತಿ ದ್ದರೂ ಒಬ್ಬರ ಮಾತು ಮತ್ತೊಬ್ಬರಿಗೆ ಕೇಳಿಸುತ್ತಿರಲಿಲ್ಲ. ಧೂಳಿನಿಂದ ಕಣ್ಣು ಗಳು ಮುಚ್ಚಿದುದರಿಂದ ಒಬ್ಬರು ಮತ್ತೊಬ್ಬರನ್ನು ನೋಡಲು ಆಗುತ್ತಿರ ಲಿಲ್ಲ. ಕಲ್ಲುಪುಡಿಯಿಂದ ಕೂಡಿದ ಬಿರುಗಾಳಿಯು ಅವರನ್ನು ಸೆಳೆಯುತ್ತಿತ್ತು. ಹಲವು ಮರಗಳು ಬುಡಮೇಲಾದುವು. ಸಣ್ಣ-ಸಣ್ಣ ವೃಕ್ಷಗಳು ಚಂಡಮಾರು ತದ ರಭಸಕ್ಕೆ ಸಿಕ್ಕಿ ಹಾರಾಡತೊಡಗಿದುವು. ಇದರಿಂದ ಮಹಾಶಬ್ದವುಂಟಾ ಯಿತು. ಅಂತಹ ಚಂಡಮಾರುತವು ಎಡೆಬಿಡದೇ ಬೀಸುತ್ತಿರುವುದನ್ನು ಕಂಡು ಪಾಂಡವರು ವ್ಯಾಕುಲಗೊಂಡರು. ಸ್ವರ್ಗವೇ ಕಳಚಿಬೀಳಬಹುದೆಂದು ಭ್ರಾಂತ ರಾದರು. ಭೂಮಿಯೋ ಅಥವಾ ಪರ್ವತವೋ ಸೀಳಿಹೋಗುತ್ತಿರಬಹು ದೆಂದು ಬಗೆದರು. ಅಗಾಧವಾದ ಧೂಳಿನಿಂದಾಗಿ ಅವರಿಗೆ ಎಲ್ಲಿ ಏನಿದೆ ಯೆಂಬುದರ ಅರಿವೇ ಇರಲಿಲ್ಲ. ಕೈಗಳಿಂದಲೇ ತಡಕಾಡುತ್ತಾ ಹಾದಿಯ ಪಕ್ಕ ದಲ್ಲಿದ್ದ ಮರಗಳನ್ನೂ, ಹುತ್ತಗಳನ್ನೂ ಅವಲಂಬನಕ್ಕಾಗಿ ಹಿಡಿದುಕೊಂಡರು. ಭೀಮಸೇನನು ಒಂದು ಕೈಯಿಂದ ಧನುಸ್ಸನ್ನೂ, ಮತ್ತೊಂದು ಕೈಯಿಂದ ದ್ರೌಪದಿಯನ್ನೂ ಹಿಡಿದುಕೊಂಡು ಒಂದು ವೃಕ್ಷಕ್ಕೆ ಒರಗಿ ನಿಂತುಕೊಂಡನು.

ಧೌಮ್ಯ-ಯುಧಿಷ್ಠಿರರು ಮಹಾವನದ ಮಧ್ಯದಲ್ಲಿ ನುಸುಳಿಕೊಂಡರು. ಯಜ್ಞೇಶ್ವರನನ್ನು ಹೊತ್ತಿದ್ದ ಸಹದೇವನು ಬಂಡೆಯೊಂದರ ಕೆಳಭಾಗದಲ್ಲಿ ಆಶ್ರಯಪಡೆದನು. ನಕುಲನೂ, ಮಹಾತಪಸ್ವಿಗಳಾದ ಲೋಮಶರೂ ಮತ್ತು ಬ್ರಾಹ್ಮಣರೂ ಒಂದೊಂದು ಮರದ ಆಶ್ರಯವನ್ನು ಪಡೆದು ನಿಂತುಕೊಂಡರು. ಸ್ವಲ್ಪಕಾಲ ಕಳೆದನಂತರ ಚಂಡಮಾರುತವು ಶಾಂತವಾಗಿ ಧೂಳು ಅಡಗಲು ಮಹಾವರ್ಷವು ಆರಂಭವಾಯಿತು. ಕಾರ್ಮುಗಿಲು ಆಕಾಶವನ್ನು ಕವಿಯಿತು. ಗುಡಗು-ಸಿಡಿಲುಗಳ ಆರ್ಭಟವು ನಾಲ್ಕು ದಿಕ್ಕುಗಳಲ್ಲಿಯೂ ಪ್ರತಿಧ್ವನಿಸಿತು. ಕ್ಷಣ-ಕ್ಷಣಕ್ಕೂ ಮಿಂಚಿನ ಪ್ರಭೆಯು ಕಾರ್ಮುಗಿಲಿನ ಮೇಲೆ ತೋರುತ್ತಿದ್ದಿತು. ಚಂಡಮಾರುತವು ನಿಂತುಹೋಗಿದ್ದುದರಿಂದ ಆಲಿ ಕಲ್ಲುಗಳಿಂದ ಕೂಡಿದ ಮಳೆಯು ಅವ್ಯಾಹತವಾಗಿ ಸುರಿಯತೊಡಗಿತು. ಕ್ಷಣಮಾತ್ರದಲ್ಲಿ ಪರ್ವತ ವೆಲ್ಲವೂ ಜಲಮಯವಾಗಿ ನದಿಗಳೋಪಾದಿಯಲ್ಲಿ ನೂರಾರು ಪ್ರವಾಹಗಳು ಪರ್ವತದ ಮೇಲಿಂದ ಹರಿಯತೊಡಗಿದುವು. ಆ ಪ್ರವಾಹಗಳು ಪರ್ವತದ ಮಣ್ಣಿನಿಂದ ಕೂಡಿ ಕದಡಿಹೋಗಿದ್ದುವಲ್ಲದೇ-ನೊರೆಗಳಿಂದಲೂ ಕೂಡಿ ದ್ದುವು. ಪರ್ವತದ ಮೇಲಿನಿಂದ ಹರಿದುಬರುತ್ತಿದ್ದಾಗ ಎದುರಿಗೆ ಸಿಕ್ಕಿದ ವೃಕ್ಷ ಗಳನ್ನು ಬುಡಮೇಲುಮಾಡುತ್ತಾ ಪ್ರವಹಿಸುತ್ತಿದ್ದುವು. ಸ್ವಲ್ಪ ಹೊತ್ತಾದ ನಂತರ ಮೆಲ್ಗಾಳಿಯು ಬೀಸತೊಡಗಿತು. ಕಾರ್ಮುಗಿಲು ಕರಗಿತು. ಸೂರ್ಯನು ಯಥಾಪೂರ್ವಕವಾಗಿ ಪ್ರಕಾಶಿಸತೊಡಗಿದನು. ವೃಕ್ಷಗಳ ಕೆಳಗೂ, ಬಂಡೆಗಳ ಮರೆಯಲ್ಲಿಯೂ ಇದ್ದ ಪಾಂಡವರು ಒಂದಾಗಿ ಸೇರಿ ಪುನಃ ಗಂಧಮಾದನಪರ್ವತವನ್ನು ಆರೋಹಣಮಾಡಲು ಉಪಕ್ರಮಿಸಿದರು.

ದ ೧೪೩ನೆಯ ಅಧ್ಯಾಯವು ಮುಗಿಯಿತು.

೧೪೪ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಗಂಧಮಾದನಪರ್ವತವನ್ನು ಹತ್ತುತ್ತಿದ್ದಾಗ ದ್ರೌಪದಿಯು ಆಯಾಸದಿಂದ ಮೂರ್ಛಿತಳಾದುದು : ಪಾಂಡವರಿಂದ ಶೈತ್ಯೋಪಚಾರ : ಧರ್ಮಜನ ಅನುಜ್ಞೆಯಂತೆ ಭೀಮನಿಂದ ಘಟೋತ್ಕಚನ ಸ್ಮರಣೆ : ಅವನ ಆಗಮನ

"ಜನಮೇಜಯ! ಹೀಗೆ ಪಾಂಡವರು ತಮ್ಮ ಪ್ರಯಾಣವನ್ನು

ಮುಂದುವರಿಸುತ್ತಾ ಒಂದು ಕ್ರೋಶದಷ್ಟು ಪ್ರಯಾಣಮಾಡುತ್ತಲೇ ಕಾಲ್ನಡಿಗೆಯಲ್ಲಿ ಸಂಚರಿಸಲು ಯೋಗ್ಯಳಲ್ಲದ ದ್ರೌಪದಿಯು ಬಹುವಾಗಿ ಆಯಾಸಗೊಂಡು ಕುಳಿತುಕೊಂಡಳು. ಅವಳಿಗೆ ಮುಂದೆ ಕಾಲಿಡಲೇ ಸಾಧ್ಯ ವಾಗಲಿಲ್ಲ. ಬಹಳವಾಗಿ ಆಯಾಸಗೊಂಡಿದ್ದ ದುಃಖಪರೀತಳಾಗಿದ್ದ ತಪಸ್ವಿನಿ ಯಾದ ಸುಕುಮಾರಿಯಾದ ಪಾಂಚಾಲಿಯು ಚಂಡಮಾರುತ, ಭೋರ್ಗರೆ ಯುವ ಮಳೆ, ಗುಡುಗು-ಸಿಡಿಲುಗಳು, ನೀರಿನ ಪ್ರವಾಹ–ಇತ್ಯಾದಿಗಳಿಂದ ಭ್ರಾಂತಳಾಗಿ ಗಾಬರಿಗೊಂಡು ನಡುಗುತ್ತಿದ್ದ, ಕಪ್ಪಾದ ಕಣ್ಣುಗಳಿಂದ ಕೂಡಿದ್ದ ದ್ರೌಪದಿಯು ಸುಂದರವಾಗಿಯೂ ಮತ್ತು ದುಂಡಾಗಿಯೂ ಇದ್ದ ತೋಳು ಗಳಿಂದ ತೊಡೆಯನ್ನು ಅವಲಂಬಿಸಿ ಪುನಃ ನಿಂತುಕೊಂಡಳು. ಆನೆಯ ಸೊಂಡಿಲಿಗೆ ಸದೃಶವಾಗಿದ್ದ ಎರಡು ತೊಡೆಗಳನ್ನು ತೋಳುಗಳಿಂದ ಬಿಗಿ ಯಾಗಿ ಹಿಡಿದುಕೊಂಡು ನಿಂತಿದ್ದ ದ್ರೌಪದಿಯು ಬಾಳೆಯ ಗಿಡವು ಕೆಳಕ್ಕೆ ಬೀಳುವಂತೆ ನಡು-ನಡುಗುತ್ತಾ ಕೆಳಕ್ಕೆ ಬಿದ್ದುಬಿಟ್ಟಳು. ಬಳ್ಳಿಯಂತೆ ಕುಸಿದು ಬೀಳುತ್ತಿದ್ದ ಶ್ರೇಷ್ಠವಾದ ಅಂಗಗಳಿಂದ ಕೂಡಿದ್ದ ದ್ರೌಪದಿಯನ್ನು ಕಂಡು ವೀರನಾದ ನಕುಲನು ಒಡನೆಯೇ ಅವಳ ಬಳಿಗೆ ಓಡಿಹೋಗಿ ಅವಳಿಗೆ ಆಸರೆಯನ್ನಿತ್ತು ಹಿಡಿದುಕೊಂಡು ಧರ್ಮಜನಿಗೆ ಹೇಳಿದನು :

"ಅಣ್ಣ! ಅಸಿತೇಕ್ಷಣೆಯಾದ (ಕಪ್ಪಾದ ಕಣ್ಣುಗಳಿಂದ ಕೂಡಿರುವ) ಪಾಂಚಾಲರಾಜಕುಮಾರಿಯಾದ ದ್ರೌಪದಿಯು ಆಯಾಸಗೊಂಡು ಕುಸಿಯು ತ್ತಿದ್ದಾಳೆ. ಹಳ್ಳ-ತಿಟ್ಟುಗಳಿಂದಲೂ, ಕಲ್ಲು-ಮುಳ್ಳುಗಳಿಂದಲೂ ಕೂಡಿರುವ ಈ ದಾರಿಯಲ್ಲಿ ನಡೆದು ಇವಳಿಗೆ ಬಹಳ ಆಯಾಸವಾಗಿದೆ. ರಾಜಕುಮಾರಿ ಯಾದ ಇವಳು ದುಃಖವನ್ನನುಭವಿಸಲು ಯೋಗ್ಯಳಲ್ಲ. ಆದರೂ ದುರ್ದೈವ ವಶದಿಂದ ಇವಳಿಂದು ಮಹಾದುಃಖಕ್ಕೆ ಈಡಾಗಿದ್ದಾಳೆ. ಇವಳು ಮೆಲ್ಲನೆ ಹೆಜ್ಜೆಯಿಡುತ್ತಿದ್ದರೂ ಇವಳಿಗೆ ಆಯಾಸವು ಹೆಚ್ಚಾಗಿದೆ. ಈ ಪ್ರಯಾಣ ದಿಂದಾಗಿ ಬಹಳ ಬಳಲಿ ಕುಸಿದುಬೀಳುತ್ತಿರುವ ದ್ರೌಪದಿಯನ್ನು ಸವಿಮಾತು ಗಳಿಂದ ಸಂತೈಸು."

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ನಕುಲನ ಮಾತುಗಳನ್ನು ಕೇಳಿದೊಡನೆಯೇ

ಯುಧಿಷ್ಠಿರ-ಭೀಮ-ಸಹದೇವರು ಬಹುದುಃಖಿತರಾಗಿ ದ್ರೌಪದಿಯ ಕಡೆಗೆ ಧಾವಿಸಿದರು. ದ್ರೌಪದಿಯು ಬಹಳ ನಿಶ್ಶಕ್ತಳಾಗಿರುವುದನ್ನೂ ಮತ್ತು ಅವಳ ಮುಖವು ಆಯಾಸದಿಂದ ಕಾಂತಿಹೀನವಾಗಿರುವುದನ್ನೂ ಕಂಡು ಯುಧಿಷ್ಠಿರನು ಶೋಕಿಸುತ್ತಾ ದ್ರೌಪದಿಯನ್ನೆತ್ತಿ ತನ್ನ ತೊಡೆಯ ಮೇಲೆ ಮಲಗಿಸಿಕೊಂಡು ಪ್ರಲಾಪಿಸತೊಡಗಿದನು :-



"ಅಯ್ಯೋ! ರಾಜಕುಮಾರಿಯಾದ ಇವಳು ಸುಖೋಚಿತಳಾದವಳು ; ಸುಂದರವಾಗಿ ಸಿಂಗರಿಸಿದ ಶಯನಾಗಾರದಲ್ಲಿ ಹಂಸತೂಲಿಕಾತಲ್ಪದಲ್ಲಿ ಮಲಗಲು ಯೋಗ್ಯಳಾದವಳು. ಇಂತಹ ಸುಂದರಾಂಗಿಯಿಂದು ಬಹುಕಠಿನವಾದ ನೆಲದ ಮೇಲೆ ಹೇಗೆ ತಾನೇ ಮಲಗುವಳು? ನನ್ನ ಕಾರಣದಿಂದಲೇ ಶ್ರೇಷ್ಠ

ವಾದ ವಸ್ತುಗಳನ್ನು ಧರಿಸಲು ಅರ್ಹಳಾದ ಇವಳ ಸುಕೋಮಲವಾದ ಪಾದ ಗಳೂ ಮತ್ತು ಕಮಲಸದೃಶವಾದ ಮುಖಾರವಿಂದವೂ ಕಪ್ಪಿಟ್ಟಿವೆ. ಅಯ್ಯೋ! ಬುದ್ಧಿಯಿಲ್ಲದ ನಾನು ಎಂತಹ ಅವಿವೇಕವನ್ನು ಮಾಡಿಬಿಟ್ಟೆನು? ಜೂಜು ಕೋರನಾದ ನಾನು ರಾಜ್ಯ-ಕೋಶಾದಿಗಳೆಲ್ಲವನ್ನೂ ಕಳೆದುಕೊಂಡು ದುಷ್ಟ ಮೃಗಗಳಿಂದ ನಿಬಿಡವಾಗಿರುವ ಈ ಘೋರಾರಣ್ಯದಲ್ಲಿ ದ್ರೌಪದಿಯೊಡನೆ ಸುತ್ತಾಡುತ್ತಿರುವೆನಲ್ಲಾ!

**ಸುಖಂ ಪ್ರಾಪ್ಸ್ಯಸಿ ಕಲ್ಯಾಣಿ ಪಾಣ್ಡವಾನ್ಪ್ರಾಪ್ಯ ವೈ ಪತೀನ್ ।**
**ಇತಿ ದ್ರುಪದರಾಜೇನ ಪಿತ್ರಾ ದತ್ತಾಯತೇಕ್ಷಣಾ ॥೧೩॥**

**ತತ್ಸರ್ವಮನವಾಪ್ಯೇಯಂ ಶ್ರಮಶೋಕಾಧ್ವಕರ್ಶಿತಾ ।**
**ಶೇತೇ ನಿಪತಿತಾ ಭೂಮೌ ಪಾಪಸ್ಯ ಮಮ ಕರ್ಮಭಿಃ ॥೧೪॥**

'ಪಾಂಡವರನ್ನು ಪತಿಗಳನ್ನಾಗಿ ಪಡೆದ ನೀನು ಪರಮಸುಖವನ್ನು ಅನುಭವಿಸುವೆ'-ಎಂದು ಹೇಳಿ ಇವಳ ತಂದೆಯಾದ ದ್ರುಪದರಾಜನು ಈ ವಿಶಾಲಾಕ್ಷಿಯನ್ನು ನಮಗೆ ಮದುವೆಮಾಡಿಕೊಟ್ಟನು. ದ್ರುಪದರಾಜನ ಭಾವ ನೆಗೆ ವಿರುದ್ಧವಾಗಿ ಇವಳಿಂದು ಮಾರ್ಗಶ್ರಮ-ಶೋಕಾದಿಗಳಿಂದ ಪೀಡಿತಳಾಗಿ ನೆಲದ ಮೇಲೆ ಮಲಗಿರುತ್ತಾಳೆ. ಇದು ಪಾಪಿಷ್ಠನಾದ ನನ್ನ ದುಷ್ಕರ್ಮಗಳ ಫಲವೇ ಆಗಿರುವುದು."

ಜನಮೇಜಯ! ಧರ್ಮರಾಜನು ದ್ರೌಪದಿಯನ್ನು ತೊಡೆಯ ಮೇಲೆ ಮಲಗಿಸಿಕೊಂಡು ಮೇಲೆ ಹೇಳಿದಂತೆ ಪ್ರಲಾಪಮಾಡುತ್ತಿರಲಾಗಿ ಧೌಮ್ಯರೇ ಮೊದಲಾದ ಬ್ರಾಹ್ಮಣರು ಅದೇ ಸ್ಥಳಕ್ಕೆ ಆಗಮಿಸಿದರು.

ಧೌಮ್ಯಪ್ರಮುಖರಾದ ಬ್ರಾಹ್ಮಣರು ಯುಧಿಷ್ಠಿರನನ್ನು ಆಶೀರ್ವದಿಸಿ ಸವಿಮಾತುಗಳಿಂದ ಆತನನ್ನು ಸಮಾಧಾನಪಡಿಸಿದರು. ರಾಕ್ಷಸರ ಭಯ ನಿರಸನಕ್ಕಾಗಿ ರಾಕ್ಷೋಘ್ನಮಂತ್ರಗಳನ್ನು ಜಪಿಸಿ ಅದಕ್ಕೆ ಅನುರೂಪವಾದ ಕರ್ಮಗಳನ್ನೂ ಬ್ರಾಹ್ಮಣರು ಮಾಡಿದರು. ಶಾಂತ್ಯರ್ಥವಾಗಿ ಬ್ರಾಹ್ಮಣರು ಮಂತ್ರಗಳನ್ನು ಜಪಿಸುತ್ತಿರಲಾಗಿ ; ಪಾಂಡವರು ತಮ್ಮ ಶೀತಳವಾದ ಕೈಗ ಳಿಂದ ದ್ರೌಪದಿಯ ಮೈದಡವುತ್ತಿರಲಾಗಿ ; ಜಲಮಿಶ್ರವಾದ ಮತ್ತು ಶೀತಲ ವಾದ ವಾಯುವಿನಿಂದ ಸೇವಿಸಲ್ಪಡುತ್ತಿದ್ದ ದ್ರೌಪದಿಯು ಸುಖವನ್ನು ಹೊಂದಿ

ಮೆಲ್ಲ-ಮೆಲ್ಲನೆ ಚೇತನೆಯನ್ನು ಪಡೆದುಕೊಂಡಳು. ಹೆಚ್ಚು ಆಯಾಸದಿಂದ ಮೂರ್ಛೆಹೊಂದಿ ಬಿದ್ದಿದ್ದ ದ್ರೌಪದಿಯು ಶೈತ್ಯೋಪಚಾರದಿಂದಲೂ–ಬ್ರಾಹ್ಮಣರು ಮಾಡಿದ ಮಂತ್ರಪುನಶ್ಚರಣೆಯಿಂದಲೂ ಮೂರ್ಛೆಯಿಂದ ಎಚ್ಚೆತ್ತಳು. ಅವಳ ಆಯಾಸವೂ ಕಡಿಮೆಯಾಯಿತು. ಪಾಂಡವರು ಲಬ್ಧಸಂಜ್ಞಳಾದ, ತಪಸ್ವಿನಿಯಾದ ದ್ರೌಪದಿಯನ್ನು ಕೃಷ್ಣಾಜಿನದ ಮೇಲೆ ಮಲಗಿಸಿದರು. ಕೆಂಪಾದ ತಳಭಾಗಗಳಿಂದಲೂ-ಶುಭಲಕ್ಷಣಗಳಿಂದಲೂ ಕೂಡಿದ್ದ ದ್ರೌಪದಿಯ ಮೃದುವಾದ ಪಾದಕಮಲಗಳೆರಡನ್ನೂ ನಕುಲ-ಸಹದೇವರು ಶಿಂಜಿನಿಯ ಸೆಳೆತದಿಂದ ಜಡ್ಡುಗಟ್ಟಿದ್ದ ತಮ್ಮ ಹಸ್ತಯುಗಳಗಳಿಂದ ಒತ್ತುತ್ತಿದ್ದರು. ಧರ್ಮಾತ್ಮನಾದ ಯುಧಿಷ್ಠಿರನು ದ್ರೌಪದಿಯನ್ನು ಸವಿಮಾತುಗಳಿಂದ ಸಂತೈಸಿ ಭೀಮಸೇನನಿಗೆ ಹೇಳಿದನು :

"ಭೀಮಸೇನ! ನಮ್ಮ ಮುಂದೆ ದುರ್ಗಮವಾದ, ಮಂಜಿನಿಂದ ತುಂಬಿರುವ ಇನ್ನೂ ಅನೇಕ ಪರ್ವತಗಳಿವೆ. ಇವುಗಳೆಲ್ಲವನ್ನೂ ನಾವು ದಾಟಿ ಹೋಗಬೇಕಾಗಿದೆ. ಈ ಪರ್ವತಗಳಲ್ಲಿ ಕೋಮಲಾಂಗಿಯಾದ ಕೃಷ್ಣೆಯು ಹೇಗೆ ತಾನೇ ಸಂಚರಿಸಿಯಾಳು?"

"ಅಣ್ಣ! ಇದಕ್ಕಾಗಿ ನೀನು ಯೋಚಿಸಬೇಕಾಗಿಲ್ಲ. ನಿರಾಶೆಯನ್ನೂ, ಹೊಂದಬೇಕಾಗಿಲ್ಲ. ನಾನೊಬ್ಬನೇ ನಿನ್ನನ್ನೂ, ಈ ರಾಜಕುಮಾರಿಯನ್ನೂ, ನಕುಲ-ಸಹದೇವರನ್ನೂ ಮತ್ತು ನಮ್ಮೊಡನೆ ಬಂದಿರುವ ಈ ಬ್ರಾಹ್ಮಣರನ್ನೂ ಎತ್ತಿಕೊಂಡು ಹೋಗಬಲ್ಲೆನು ಅಥವಾ ನಿನ್ನ ಅನುಜ್ಞೆಯಾದರೆ ಆಕಾಶದಲ್ಲಿ ಸಂಚರಿಸುವ ಸಾಮರ್ಥ್ಯವಿರುವ, ನನ್ನ ಬಲದಷ್ಟೇ ಬಲವನ್ನು ಹೊಂದಿರುವ, ಹಿಡಿಂಬಾಪುತ್ರನಾದ ಘಟೋತ್ಕಚನು ನಮ್ಮೆಲ್ಲರನ್ನೂ ಕ್ಷಣ ಮಾತ್ರದಲ್ಲಿ ಎಲ್ಲಿಗೊಂದರಲ್ಲಿಗೆ ಎತ್ತಿಕೊಂಡು ಹೋಗುತ್ತಾನೆ."

ಜನಮೇಜಯ! ಯುಧಿಷ್ಠಿರನ ಅನುಜ್ಞೆಯನ್ನು ಪಡೆದು ಭೀಮನು ತನ್ನ ಮಗನಾದ ಘಟೋತ್ಕಚನನ್ನು ನೆನೆದನು. ತನ್ನ ತಂದೆಯು ತನ್ನನ್ನೊಮ್ಮೆ ನೆನೆಸಿಕೊಂಡ ಮಾತ್ರದಿಂದಲೇ ಧರ್ಮಾತ್ಮನಾದ ಘಟೋತ್ಕಚನು ಪ್ರತ್ಯಕ್ಷವಾಗಿ ಬಂದು ಅಲ್ಲಿದ್ದ ಪಾಂಡವರಿಗೂ, ಬ್ರಾಹ್ಮಣರಿಗೂ ಸಾಷ್ಟಾಂಗ ನಮಸ್ಕಾರಮಾಡಿ ಕೈಜೋಡಿಸಿ ನಿಂತುಕೊಂಡನು. ಬ್ರಾಹ್ಮಣರೂ

ಪಾಂಡವರೂ ಘಟೋತ್ಕಚನನ್ನು ಆಶೀರ್ವದಿಸಿದನಂತರ ಹಿಡಿಂಬಾಪುತ್ರನು ತಂದೆಯಾದ ಭೀಮನೊಡನೆ ಹೇಳಿದನು :

"ತಂದೆಯೇ! ನಿನ್ನಿಂದ ಸ್ಮರಿಸಲ್ಪಟ್ಟ ನಾನು ನಿನ್ನ ಸೇವೆಮಾಡುವ ಸಲುವಾಗಿ ಒಡನೆಯೇ ಆಗಮಿಸಿರುವೆನು. ನಾನು ನಿನಗಾಗಿ ಯಾವ ಕಾರ್ಯವನ್ನು ಮಾಡಬೇಕೆಂಬುದನ್ನು ಕೂಡಲೇ ಆಜ್ಞಾಪಿಸು. ನೀನು ಯಾವ ಕಾರ್ಯವನ್ನೇ ಮಾಡಲು ಹೇಳಿದರೂ ಆ ಕಾರ್ಯವನ್ನು ಮಾಡುವೆನು. ಇದರಲ್ಲಿ ಸಂಶಯವಿಲ್ಲ."

ಜನಮೇಜಯ! ಮಗನ ಆ ಮಾತುಗಳನ್ನು ಕೇಳಿದೊಡನೆಯೇ ಭೀಮಸೇನನು ಆನಂದಭರಿತನಾಗಿ ಮಗನನ್ನು ಬಾಚಿ ತಬ್ಬಿಕೊಂಡನು."

ಗಳಳನೆಯ ಅಧ್ಯಾಯವು ಮುಗಿಯಿತು.

ಗಳಚನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಘಟೋತ್ಕಚ ಮತ್ತು ಅವನ ಅನುಯಾಯಿಗಳು ಪಾಂಡವರನ್ನು ಬದರೀಕಾಶ್ರಮಕ್ಕೆ ಒಯ್ದುದು : ಬದರೀವೃಕ್ಷ, ನರ-ನಾರಾಯಣಾಶ್ರಮ ಮತ್ತು ಗಂಗಾನದಿಗಳ ವರ್ಣನೆ

ಅನಂತರ ಧರ್ಮಜನು ಭೀಮನಿಗೆ ಹೇಳಿದನು :-

"ಭೀಮಸೇನ! ಧರ್ಮಜ್ಞನಾದ, ಬಲಿಷ್ಠನಾದ, ಶೂರನಾದ, ರಾಕ್ಷಸಶ್ರೇಷ್ಠನಾದ, ಸತ್ಯವಂತನಾದ, ಭಕ್ತನಾದ ನಿನ್ನ ಔರಸಪುತ್ರನಾದ ಈ ಘಟೋತ್ಕಚನು ನಮ್ಮನ್ನು ಈ ಕೂಡಲೇ ಎತ್ತಿಕೊಂಡು ಹೋಗಲಿ. ಮಹಾಪರಾಕ್ರಮವುಳ್ಳ ಭೀಮಸೇನನೇ! ನಿನ್ನ ಮಗನ ನೆರವಿನಿಂದ ಸ್ವಲ್ಪವಾದರೂ ತೊಂದರೆಯಾಗದ ರೀತಿಯಲ್ಲಿ ಪಾಂಚಾಲಿಯೊಡನೆ ಗಂಧಮಾದನಪರ್ವತವನ್ನು ಬಹುಶೀಘ್ರವಾಗಿ ಸೇರುತ್ತೇವೆ."

ಅಣ್ಣನ ಮಾತುಗಳನ್ನು ಕೇಳಿ ನರಪುಂಗವನಾದ ಭೀಮಸೇನನು ಶತ್ರುನಿಷೂದನನಾದ ತನ್ನ ಮಗನಾದ ಘಟೋತ್ಕಚನಿಗೆ ಹೀಗೆ ಹೇಳಿದನು :

"ಹಿಡಿಂಬಾಪುತ್ರನೇ! ಈ ನಿನ್ನ ತಾಯಿಯು (ದ್ರೌಪದಿಯು) ಮಾರ್ಗಾಯಾಸದಿಂದ ಬಹುವಾಗಿ ಬಳಲಿದ್ದಾಳೆ. ನೀನಾದರೋ ಬಹಳ

ಬಲಿಷ್ಠನೂ, ಇಚ್ಛೆಬಂದಲ್ಲಿಗೆ ಹೋಗುವ ಶಕ್ತಿಯುಳ್ಳವನೂ ಆಗಿರುವೆ. ಗಗನದಲ್ಲಿಯೂ ಸಂಚಾರಮಾಡುವ ಸಾಮರ್ಥ್ಯವಿರುವ ನೀನು ದ್ರೌಪದಿಯನ್ನು ಎತ್ತಿಕೊ. ನಿನಗೆ ಶುಭವುಂಟಾಗಲಿ. ನಿನ್ನ ಹೆಗಲಿನ ಮೇಲೆ ಇವಳನ್ನು ಕುಳ್ಳಿರಿಸಿಕೊಂಡು ನಮ್ಮ ಜೊತೆಯಲ್ಲಿಯೇ ಬರಬೇಕು. ಅತಿವೇಗವಾಗಿ ಪ್ರಯಾಣಮಾಡಕೂಡದು. ನಿಧಾನವಾಗಿ ಇವಳಿಗೆ ಸ್ವಲ್ಪವೂ ಆಯಾಸವಾಗದ ರೀತಿಯಲ್ಲಿ ಪ್ರಯಾಣಮಾಡಬೇಕು, ತಿಳಿಯಿತೇ?"

ಭೀಮಸೇನನ ಮಾತಿಗೆ ಘಟೋತ್ಕಚನು ಉತ್ತರಿಸಿದನು :

"ತಂದೆಯೇ! ನಾನೊಬ್ಬನೇ ಯುಧಿಷ್ಠಿರನನ್ನೂ, ಧೌಮ್ಯರನ್ನೂ, ನಮ್ಮ ತಾಯಿಯಾದ ದ್ರೌಪದಿಯನ್ನೂ, ನಕುಲ-ಸಹದೇವರನ್ನೂ ಎತ್ತಿ ಕೊಂಡು ಹೋಗಲು ಸಮರ್ಥನಾಗಿರುವಾಗ ನನಗೆ ಇನ್ನೂ ಅನೇಕ ಸಹಾಯಕರಿರುವ ಕಾಲದಲ್ಲಿ ಹೇಳುವುದೇನಿದೆ? ಬಲಾಢ್ಯರಾದ, ಆಕಾಶ ದಲ್ಲಿಯೂ ಸಂಚರಿಸುವ ಸಾಮರ್ಥ್ಯವುಳ್ಳ ಕಾಮರೂಪಿಗಳಾದ ನೂರಾರು ಮಂದಿ ರಾಕ್ಷಸರು ನನ್ನ ಆಜ್ಞಾಧಾರಕರಾಗಿದ್ದಾರೆ. ಅವರೆಲ್ಲರೂ ಬಂದು ನಿಮ್ಮನ್ನೂ ಮತ್ತು ಈ ಬ್ರಾಹ್ಮಣರನ್ನೂ ನೀನು ಹೇಳಿದೆಡೆಗೆ ಎತ್ತಿಕೊಂಡು ಹೋಗಲು ಸಿದ್ಧರಾಗಿರುವರು."

ಹೀಗೆ ಹೇಳಿ ಘಟೋತ್ಕಚನು ಪಾಂಡವರ ಮಧ್ಯದಲ್ಲಿ ಸಂಚರಿಸುತ್ತಾ ಕೃಷ್ಣೆಯನ್ನು ತನ್ನ ಹೆಗಲ ಮೇಲೆ ಕುಳ್ಳಿರಿಸಿಕೊಂಡು ಹೊರಟನು. ಅವನನ್ನನುಸರಿಸಿ ಘಟೋತ್ಕಚನ ಸೇವಕರಾದ ಇತರರಾಕ್ಷಸರು ಪಾಂಡವರನ್ನೂ ಮತ್ತು ಬ್ರಾಹ್ಮಣರನ್ನೂ ಎತ್ತಕೊಂಡರು.

**ಲೋಮಶಃ ಸಿದ್ಧಮಾರ್ಗೇಣ ಜಗಾಮಾನುಪಮದ್ಯುತಿಃ ।**
**ಸ್ವೇನೈವ ಚ ಪ್ರಭಾವೇಣ ದ್ವಿತೀಯ ಇವ ಭಾಸ್ಕರಃ ॥೯॥**

ಅನುಪಮತೇಜಸ್ವಿಗಳಾದ ಲೋಮಶರು ಯಾರ ಸಹಾಯವೂ ಇಲ್ಲದೇ ತಮ್ಮ ಪ್ರಭಾವದಿಂದಲೇ ಆಕಾಶಮಾರ್ಗದಿಂದ ಪ್ರಯಾಣಮಾಡುತ್ತಾ ತಮ್ಮ ದಿವ್ಯಕಾಂತಿಯಿಂದ ಎರಡನೆಯ ಸೂರ್ಯನಂತೆಯೇ ಪ್ರಕಾಶಿಸಿದರು. ಘಟೋತ್ಕಚನ ಆಜ್ಞೆಯಿಂದ ಅವನ ಸೇವಕರು ಬ್ರಾಹ್ಮಣರನ್ನು ಎತ್ತಿಕೊಂಡು ಎಲ್ಲರೊಡನೆ ಹೋದರು. ಹೀಗೆ ಪಾಂಡವರು ಅನೇಕಾನೇಕ ಸುಂದರವಾದ

ಕಾನನಗಳನ್ನು ಸಂದರ್ಶಿಸುತ್ತಾ ವಿಶಾಲವಾದ ಬದರೀವೃಕ್ಷ (ಕ್ಷೇತ್ರ) ದ ಕಡೆಗೆ ಪ್ರಯಾಣಮಾಡುತ್ತಿದ್ದರು.



ಜನಮೇಜಯ! ಶೀಘ್ರಗಾಮಿಗಳಾದ, ಮಹಾವೀರರಾದ ಆ ರಾಕ್ಷಸರ ಸಹಾಯದಿಂದ ಪಾಂಡವರು ಬಹುದೂರದ ಮಾರ್ಗವನ್ನು ಅತ್ಯಲ್ಪಕಾಲ ದಲ್ಲಿಯೇ ಆಯಾಸವಿಲ್ಲದೇ ತಲುಪಿದರು. ಅವರು, ತಾವು ಹೋಗುತ್ತಿದ್ದ ಮಾರ್ಗದಲ್ಲಿ ಮ್ಲೇಚ್ಛಜನರಿಂದ ಕೂಡಿದ್ದ, ವಜ್ರ-ವೈಡೂರ್ಯಾದಿಗಳಿಂದ ಸಮೃದ್ಧವಾಗಿದ್ದ ದೇಶಗಳನ್ನೂ-ಅನೇಕವಿಧವಾದ ಲೋಹಗಳ ಗಣಿಗಳಿಂದ ಕೂಡಿದ್ದ ಪರ್ವತಪ್ರದೇಶಗಳನ್ನೂ ಸಂದರ್ಶಿಸಿದರು. ಅವರು ಹೋಗುತ್ತಿದ್ದ ಮಾರ್ಗದಲ್ಲಿಯೇ ಅನೇಕವಿದ್ಯಾಧರರೂ, ಕಿನ್ನರ-ಕಿಂಪುರುಷರೂ, ಗಂಧ

ರ್ವರೂ ತಂಡ-ತಂಡವಾಗಿ ಹೋಗುತ್ತಿದ್ದರು. ಕಪಿಗಳ ಸಂಖ್ಯೆಯೂ ಅಗಣಿತ ವಾಗಿದ್ದಿತು. ಅವರು ಹೋಗುತ್ತಿದ್ದ ಮಾರ್ಗವು ನವಿಲುಗಳಿಂದಲೂ, ಚಮರೀ ಮೃಗಗಳಿಂದಲೂ, ಹಂದಿಗಳಿಂದಲೂ, ಕಾಡುಹಸುಗಳಿಂದಲೂ, ಕಾಡುಕೋಣಗಳಿಂದಲೂ ನಿಬಿಡವಾಗಿದ್ದಿತು. ಅನೇಕನದಿಗಳ ಸಂಗಮ ಪ್ರದೇಶಗಳನ್ನೂ ಅವರು ಬಹಳ ಸುಲಭವಾಗಿ ದಾಟಿದರು. ಆ ಸಂಗಮ ಪ್ರದೇಶಗಳು ಅನೇಕಾನೇಕ ಪಕ್ಷಿಗಳಿಂದಲೂ, ಜಿಂಕೆಗಳಿಂದಲೂ ಕೂಡಿ ನೋಡಲು ಬಹಳ ಅಂದವಾಗಿ ಕಾಣುತ್ತಿದ್ದುವು. ನದಿಗಳ ತೀರಪ್ರದೇಶದಲ್ಲಿ ಅನೇಕಾನೇಕ ಜಾತಿಯ ಮರಗಳಿದ್ದು ಅವುಗಳ ಮೇಲೆ ಮದಿಸಿದ ಪಕ್ಷಿಗಳು ನಿನಾದಮಾಡುತ್ತಿದ್ದುವು. ಅಂತಹ ಸುಂದರವಾದ ಪ್ರಕೃತಿಯ ಸೊಬಗನ್ನು ನೋಡುತ್ತಿದ್ದ ಪಾಂಡವರನ್ನೂ, ಬ್ರಾಹ್ಮಣರನ್ನೂ ಎತ್ತಿಕೊಂಡಿದ್ದ ಘಟೋತ್ಕಚಪ್ರಮುಖರಾದ ರಾಕ್ಷಸರು ಅನೇಕಾನೇಕ ದೇಶಗಳನ್ನೂ–ಉತ್ತರಕುರುದೇಶವನ್ನೂ ದಾಟಿ ಅತ್ಯಾಶ್ಚರ್ಯಕರವಾದ, ಅನೇಕದೃಶ್ಯಗಳಿಂದ ಕೂಡಿದ್ದ, ಉತ್ತಮೋತ್ತಮವಾದ ಕೈಲಾಸಪರ್ವತವನ್ನು ಸೇರಿದರು. ಪಾಂಡವಾದಿಗಳು ಅದರ ಸಮೀಪದಲ್ಲಿಯೇ ಇದ್ದ ದಿವ್ಯವಾದ ನರ-ನಾರಾಯಣಾಶ್ರಮವನ್ನೂ ಸಂದರ್ಶಿಸಿದರು.

ನರ-ನಾರಾಯಣರ ಆಶ್ರಮದ ಸುತ್ತಲೂ ಸದಾಕಾಲದಲ್ಲಿಯೂ ಫಲ-ಪುಷ್ಪಗಳಿಂದ ಸಮೃದ್ಧವಾಗಿದ್ದ ಅನೇಕವೃಕ್ಷಗಳಿದ್ದುವು. ಸುಪ್ರಸಿದ್ಧವಾದ, ದುಂಡಾದ ರೆಂಬೆಗಳಿಂದ ಕೂಡಿದ್ದ ಬದರೀವೃಕ್ಷವನ್ನು ಪಾಂಡವರು ಆ ನರ-ನಾರಾಯಣಾಶ್ರಮದಲ್ಲಿ ಸಂದರ್ಶಿಸಿದರು. ಬದರೀವೃಕ್ಷದ ಎಲೆಗಳು ಆಗ ತಾನೇ ಚಿಗುರಿದಂತೆ ಕಾಣುತ್ತಿದ್ದುವು. ಎಲೆಗಳು ದಟ್ಟವಾಗಿದ್ದುವು. ಆ ವೃಕ್ಷವು ಅದ್ಭುತವಾದ ಕಾಂತಿಯಿಂದಲೂ, ಸೌಂದರ್ಯದಿಂದಲೂ ಕೂಡಿದ್ದಿತು. ಅದರ ಕೊಂಬೆಗಳು ಉದ್ದವಾಗಿಯೂ ವಿಸ್ತಾರವಾಗಿಯೂ ಇದ್ದುವು. ಅವು ಗಳಲ್ಲಿ ಬಲಿತ ಅನೇಕಾನೇಕ ಹಣ್ಣುಗಳಿದ್ದುವು. ಅವುಗಳಿಂದ ಮಧುವು ತೊಟ್ಟಿಕ್ಕುತ್ತಿದ್ದಿತು. ಆ ಮಹಾವೃಕ್ಷವು ಅನೇಕಾನೇಕ ಋಷಿ-ಮಹರ್ಷಿಗಳಿಂದ ಸೇವಿಸಲ್ಪಡುತ್ತಿದ್ದಿತು. ಆ ವೃಕ್ಷದ ಮೇಲೆ ನಾನಾಜಾತಿಯ ಪಕ್ಷಿಗಳು ವಾಸಮಾಡುತ್ತಿದ್ದುವು. ಪಕ್ಷಿಗಳು ಹಣ್ಣಿನ ರಸವನ್ನು ಸವಿದು ಮದಿಸಿ

ಧ್ವನಿಮಾಡುತ್ತಿದ್ದುವು. ಆ ನರ-ನಾರಾಯಣಾಶ್ರಮದಲ್ಲಿ ಸೊಳ್ಳೆಗಳಾಗಲೀ, ಕಾಡುನೊಣಗಳಾಗಲೀ ಇರಲಿಲ್ಲ. ಗೆಡ್ಡೆ-ಗೆಣಸುಗಳೂ, ಫಲಗಳೂ ಯಥೇಚ್ಛವಾಗಿ ಸಿಕ್ಕುತ್ತಿದ್ದುವು. ಅಮೃತಪ್ರಾಯವಾದ ನೀರಿನ ಚಿಲುಮೆಗಳು ಎಲ್ಲೆಲ್ಲಿಯೂ ಹರಿಯುತ್ತಿದ್ದುವು. ನೆಲವು ಸಮತಟ್ಟಾಗಿದ್ದಿತು. ನೆಲದ ಮೇಲೆ ಹಚ್ಚನೆಯ ಹುಲ್ಲು ಬೆಳೆದಿದ್ದಿತು. ಯಕ್ಷ-ಗಂಧರ್ವರು ಆ ಪುಣ್ಯಭೂಮಿಗೆ ಪದೇ-ಪದೇ ಬಂದು ಹೋಗುತ್ತಿದ್ದರು. ಹಿಮವು ಬೀಳುತ್ತಿದ್ದುದರಿಂದ ವಾತಾವರಣವು ಶೀತಲವಾಗಿದ್ದಿತು. ಆ ಪ್ರದೇಶದಲ್ಲಿ ಮುಳ್ಳು-ಗಿಡಗಳ ಬಾಧೆಯಿರಲಿಲ್ಲ. ಅಂತಹ ಪುಣ್ಯಪ್ರದವಾದ, ಸುಖಪ್ರದವಾದ ನರ-ನಾರಾಯಣಾಶ್ರಮಭೂಮಿಗೆ ರಾಕ್ಷಸರ ಹೆಗಲಮೇಲೆ ಕುಳಿತು ಪಾಂಡವರೂ ಮತ್ತು ಅವರ ಪರಿವಾರದವರೂ ಬಂದು ಸೇರಿದರು. ಆಶ್ರಮಭೂಮಿಗೆ ಬಂದೊಡನೆಯೇ ಎಲ್ಲರೂ ಘಟೋತ್ಕಚನೇ ಮೊದಲಾದ ರಾಕ್ಷಸರ ಹೆಗಲಿನಿಂದ ಕೆಳಕ್ಕಿಳಿದರು.

ಅನಂತರದಲ್ಲಿ ಪಾಂಡವರು ಬ್ರಾಹ್ಮಣರೊಡನೆ ನರ-ನಾರಾಯಣಶ್ರಮವನ್ನು ಸಂದರ್ಶಿಸಲು ಹೊರಟರು. ಆ ಆಶ್ರಮದಲ್ಲಿ ಸೂರ್ಯನ ರಶ್ಮಿಯು ಬೀಳದಿದ್ದರೂ ಕತ್ತಲೆಯಿರಲ್ಲಿಲ್ಲ. ಜನಮೇಜಯ! ಅದು ಬಹಳ ಪುಣ್ಯಪ್ರದವಾದ ಆಶ್ರಮ. ಆ ಆಶ್ರಮದಲ್ಲಿರುವವರಿಗೆ ಯಾವ ವಿಧವಾದ ಶೋಕವೂ ಉಂಟಾಗುತ್ತಿರಲಿಲ್ಲ. ಯುಧಿಷ್ಠಿರನಿದ್ದ ಆ ಸಮಯದಲ್ಲಿ ಆ ಆಶ್ರಮಕ್ಕೆ ಅನೇಕ ಋಷಿ-ಮಹರ್ಷಿಗಳು ಸದಾಕಾಲದಲ್ಲಿಯೂ ಬಂದು ಹೋಗುತ್ತಿದ್ದರು. ಆ ಪುಣ್ಯಾಶ್ರಮವು ಬ್ರಾಹ್ಮೀಲಕ್ಷ್ಮಿಯಿಂದ ಕೂಡಿದ್ದಿತು. ('ಬ್ರಾಹ್ಮೀಶ್ರೀ' ಎಂದರೆ "ಋಚಸ್ಸಾಮಾನಿ ಯಜೂಗ್ಂಷಿ ಸಾ ಹಿ ಶ್ರೀರಮೃತಾಸತಾಮ್" ಎಂಬ ವೇದವಾಕ್ಯದಂತೆ ಋಗ್ಯಜುಸ್ಸಾಮವೇದಗಳ ಅಧಿಷ್ಠಾನ.) ಆ ನರ-ನಾರಾಯಣಾಶ್ರಮದಲ್ಲಿ ಸರ್ವಕಾಲದಲ್ಲಿಯೂ ಋಗ್ಯಜುಸ್ಸಾಮವೇದಗಳ ಪಾರಾಯಣವು ನಡೆಯುತ್ತಿದ್ದಿತು. ಧರ್ಮಬಾಹಿರರಾದ ಮನುಷ್ಯರು ಆ ಆಶ್ರಮಕ್ಕೆ ಹೋಗಲು ಸಾಧ್ಯವೇ ಇಲ್ಲ.

ಆ ಆಶ್ರಮದಲ್ಲಿ ಬಲಿಹರಣ, ಹೋಮ, ಅರ್ಚನೆಗಳೂ-ಸಮ್ಮಾರ್ಜನ, ಅನುಲೇಪನಾದಿಗಳೂ ಅನವರತವಾಗಿ ನಡೆಯುತ್ತಿದ್ದುವು. ದಿವ್ಯವಾದ ಪುಷ್ಪಹಾರಗಳಿಂದ ಅದು ಯಾವಾಗಲೂ ಅಲಂಕರಿಸಲ್ಪಡುತ್ತಿದ್ದಿತು. ಆಶ್ರಮದ

ಒಂದು ಕಡೆಯಲ್ಲಿ ವಿಶಾಲವಾದ ಅಗ್ನ್ಯಗಾರಗಳಿದ್ದುವು. ಅವುಗಳಲ್ಲಿ ಹೋಮಕ್ಕೆ ಬೇಕಾಗುವ ಸ್ರುಕ್-ಸ್ರುವ-ಭಾಂಡಾದಿಗಳು ಸರ್ವಕಾಲದಲ್ಲಿಯೂ ಸಿದ್ಧವಾಗಿರುತ್ತಿದ್ದುವು. ಅರ್ಚನೆಗಾಗಿ ಸಿದ್ಧಪಡಿಸಿದ್ದ ಶುಭಜಲದಿಂದ ತುಂಬಿದ್ದ ಸಾವಿರಾರು ಕಲಶಗಳಿದ್ದುವು. ಸರ್ವಭೂತಗಳಿಗೂ ಆ ಆಶ್ರಮವು ಆಶ್ರಯದಾಯಕವಾಗಿದ್ದಿತು. ವೇದಮಂತ್ರಗಳಿಂದ ಆ ಆಶ್ರಮವು ಯಾವಾಗಲೂ ಮೊಳಗುತ್ತಿದ್ದಿತು. ಶ್ರಮನಾಶಕವಾದ ಆ ದಿವ್ಯಾಶ್ರಮವು ಸಕಲರಿಂದಲೂ ಆಶ್ರಯಿಸಲು ಅರ್ಹವಾಗಿದ್ದಿತು. ವರ್ಣಸಲಸದಳವಾದ ಕಾಂತಿಯಿಂದ ಆ ಆಶ್ರಮವು ಕೂಡಿದ್ದಿತು. ದೇವತೆಗಳ ಅನವರತವಾದ ಆಗಮನ-ನಿರ್ಗಮನಗಳಿಂದ ಆಶ್ರಮವು ಹೆಚ್ಚಿನ ಕಾಂತಿಯಿಂದ ಪ್ರಕಾಶಿಸು ತ್ತಿದ್ದಿತು. ಫಲಮೂಲಾಶನರಾದ, ಜಿತೇಂದ್ರಿಯರಾದ, ಕಪ್ಪಾದ ಜಿಂಕೆಯ ಚರ್ಮವನ್ನು ಧರಿಸಿದ್ದ, ಸೂರ್ಯಾಗ್ನಿಸದೃಶವಾದ ತೇಜಸ್ಸಿನಿಂದ ಪ್ರಕಾಶಿಸು ತ್ತಿದ್ದ, ಅನವರತವಾದ ತಪಸ್ಸಿನಿಂದ ಆತ್ಮಜ್ಞಾನವನ್ನು ಪಡೆದಿದ್ದ, ಮೋಕ್ಷಾ ಪೇಕ್ಷಿಗಳಾದ ಮಹರ್ಷಿಗಳಿಂದಲೂ–ನಿಯತೇಂದ್ರಿಯರಾದ ಯತಿ ಗಳಿಂದಲೂ–ಬ್ರಹ್ಮೀಭೂತರಾದ, ಮಹಾಭಾಗರಾದ ಮಹರ್ಷಿಗಳಿಂದಲೂ ಕೂಡಿ ಆ ನರ-ನಾರಾಯಣಾಶ್ರಮವು ವಿರಾಜಿಸುತ್ತಿದ್ದಿತು. ಪರಿಶುದ್ಧನಾದ, ನಿಯತಾತ್ಮನಾದ ಯುಧಿಷ್ಠಿರನು ಅನುಜರೊಡನೆಯೂ ಮತ್ತು ಬ್ರಾಹ್ಮಣ ರೊಡನೆಯೂ ಆ ದಿವ್ಯಾಶ್ರಮಕ್ಕೆ ಹೋಗಿ ಅಲ್ಲಿದ್ದ ಋಷಿ-ಮಹರ್ಷಿಗಳನ್ನು ಸಂದರ್ಶಿಸಿದನು.

ದಿವ್ಯಜ್ಞಾನವನ್ನು ಪಡೆದಿದ್ದ ಆ ಮಹರ್ಷಿಗಳಿಗೆ ತಮ್ಮನ್ನು ಸಂದರ್ಶಿ ಸಲು ಬಂದಿರುವವರು ಯುಧಿಷ್ಠಿರಾದಿಗಳೆಂದು ತಿಳಿಯಿತು. ಒಡನೆಯೇ ಎಲ್ಲರೂ ಮೇಲೆದ್ದು ಬಂದು ಯುಧಿಷ್ಠಿರನನ್ನೂ ಅವನ ಪರಿವಾರದವರನ್ನೂ ಸ್ವಾಗತಿಸಿ ಆಶೀರ್ವದಿಸಿದರು. ಯಜ್ಞೇಶ್ವರನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ಆ ಋಷಿ-ಮಹರ್ಷಿಗಳು ಯುಧಿಷ್ಠಿರನನ್ನೂ, ಅವನ ಪರಿವಾರದವ ರನ್ನೂ ಯಥಾಯೋಗ್ಯವಾಗಿ ಅರ್ಘ್ಯ-ಪಾದ್ಯಾದಿಗಳನ್ನೂ, ಪರಿಶುದ್ಧವಾದ ಕಂದ-ಮೂಲ-ಫಲಗಳನ್ನೂ ಕೊಟ್ಟು ಸತ್ಕರಿಸಿದರು. ಯುಧಿಷ್ಠಿರನು ಮಹರ್ಷಿಗಳಿತ್ತ ಸತ್ಕಾರವನ್ನು ಹೆಚ್ಚು ಆದರದಿಂದಲೂ ಗೌರವದಿಂದಲೂ ಸ್ವೀಕರಿಸಿದನು.

ಇಂದ್ರನ ಅರಮನೆಗೆ ಸಮಾನವಾಗಿದ್ದ, ದಿವ್ಯರೂಪದ ಸುವಾಸನೆ ಯಿಂದ ಕೂಡಿದ್ದ, ಸುಮನೋಹರವಾಗಿದ್ದ, ಸ್ವರ್ಗೋಪಮವಾಗಿದ್ದ, ವೇದ-ವೇದಾಂಗ ಪಾರಂಗತರಾಗಿದ್ದ ಸಾವಿರಾರು ಬ್ರಾಹ್ಮಣರಿಂದ ಕೂಡಿದ್ದ, ದಿವ್ಯ ವಾದ ನರ-ನಾರಾಯಣಾಶ್ರಮವನ್ನು ಪರಮಪ್ರೀತನಾದ ಯುಧಿಷ್ಠಿರನು ತನ್ನ ಅನುಜರಿಂದಲೂ ಮತ್ತು ಕೃಷ್ಣೆಯಿಂದಲೂ ಕೂಡಿದವನಾಗಿ ಪ್ರವೇಶಿಸಿದನು. ಆ ದಿವ್ಯಾಶ್ರಮವನ್ನು ಯುಧಿಷ್ಠಿರನು ಪ್ರವೇಶಿಸಿ, ದೇವತೆಗಳಿಂದಲೂ–ದೇವರ್ಷಿಗಳಿಂದಲೂ ಪೂಜಿಸಲ್ಪಡುತ್ತಿದ್ದ. ಭಾಗೀರಥೀನದಿಯಿಂದ ಸುತ್ತುವರಿಯಲ್ಪಟ್ಟಿದ್ದ, ನರ-ನಾರಾಯಣರು ತಪಸ್ಸುಮಾಡುತ್ತಿದ್ದ ದಿವ್ಯಭೂಮಿ ಯನ್ನು ಸಂದರ್ಶಿಸಿದನು. ಬ್ರಹ್ಮರ್ಷಿಗಳಿಂದಲೂ-ಬ್ರಾಹ್ಮಣರಿಂದಲೂ ಸಂಸೇವ್ಯಮಾನವಾಗಿದ್ದ, ಮಧುವನ್ನು ಸುರಿಸುವ ಫಲವೃಕ್ಷಗಳಿಂದ ಕೂಡಿದ್ದ ಆ ದಿವ್ಯಕ್ಷೇತ್ರವನ್ನು ಕಂಡು ಪಾಂಡವರು ಹರ್ಷದಿಂದ ಪುಲಕಿತರಾದರು. ಯುಧಿಷ್ಠಿರಾದಿಗಳು ಆ ದಿವ್ಯಸ್ಥಳದಲ್ಲಿಯೇ ಅಲ್ಲಿದ್ದ ಬ್ರಾಹ್ಮಣರ ಜೊತೆಯಲ್ಲಿ ಹಲವು ದಿನಗಳವರೆಗೆ ವಾಸಮಾಡುತ್ತಿದ್ದರು.

ನಾನಾವಿಧವಾದ ಪಕ್ಷಿಸಮೂಹಗಳಿಂದ ಕೂಡಿದ್ದ, ಸುವರ್ಣಮಯ ವಾದ ಶಿಖರಗಳಿಂದ ಶೋಭಾಯಮಾನವಾಗಿದ್ದ ಮೈನಾಕಪರ್ವತವನ್ನೂ ಮತ್ತು ಮಂಗಳಕರವಾದ ಬಿಂದುಸರೋವರವನ್ನೂ ಆ ದಿವ್ಯಕ್ಷೇತ್ರದಲ್ಲಿ ಪಾಂಡವರು ಸಂದರ್ಶಿಸಿದರು.

ಜನಮೇಜಯ! ನರ-ನಾರಾಯಣಾಶ್ರಮದ ಸಮೀಪದಲ್ಲಿದ್ದ ಆ ಅರಣ್ಯವೂ ಬಹುಮನೋಜ್ಞವಾಗಿದ್ದಿತು. ಆ ಅರಣ್ಯದಲ್ಲಿ ಸರ್ವರ್ತುಗಳಲ್ಲಿಯೂ ಪುಷ್ಪ-ಫಲಗಳನ್ನು ಬಿಡುವ ಅನೇಕಾನೇಕ ವೃಕ್ಷಗಳಿದ್ದುವು. ಆ ವೃಕ್ಷಗಳ ಕೊಂಬೆಗಳು ಹಣ್ಣುಗಳ ಭಾರದಿಂದ ಕೆಳಗೆ ಬಗ್ಗಿದ್ದುವು. ಅಂತಹ ಮಧುರ ವಾದ ಹಣ್ಣುಗಳನ್ನು ಸವಿದು ಗಂಡುಕೋಗಿಲೆಗಳು ಸುಮಧುರವಾಗಿ ನಿನಾದ ಮಾಡುತ್ತಿದ್ದುವು. ಆ ವೃಕ್ಷಗಳಲ್ಲಿ ಎಲೆಗಳು ದಟ್ಟವಾಗಿದ್ದು ಅವುಗಳ ನೆರಳು ತಂಪಾಗಿರುತ್ತಿದ್ದಿತು. ಸುತ್ತಲೂ ಇದ್ದ ಅರಣ್ಯದಲ್ಲಿ ಚಿತ್ರ-ವಿಚಿತ್ರವಾದ, ಅಮೃತಪ್ರಾಯವಾದ ನೀರಿನಿಂದ ಕೂಡಿದ್ದ ಅನೇಕ ಸರೋವರಗಳಿದ್ದುವು. ಆ ಸರೋವರಗಳು ಕಮಲಗಳಿಂದಲೂ, ಕನ್ನೈದಿಲೆಗಳಿಂದಲೂ ಶೋಭಾಯ ಮಾನವಾಗಿದ್ದುವು. ಅಂತಹ ನಯನಮನೋಹರವಾದ ಸರೋವರ

ಗಳನ್ನೂ ವೃಕ್ಷಸಮೂಹಗಳನ್ನೂ ಪಾಂಡವರು ಸಂದರ್ಶಿಸಿ ಆನಂದಪರವಶರಾದರು. ಅಲ್ಲಿ ಗಾಳಿಯು ಮಂದವಾಗಿಯೂ, ಸುಗಂಧಯುಕ್ತವಾಗಿಯೂ ಬೀಸುತ್ತಿದ್ದಿತು. ಆದರಿಂದಾಗಿ ಪಾಂಡವರು ಪರಮಸಂತುಷ್ಟರಾದರು.

ಸುತೀರ್ಥಲಾದ, ಬಿಳುಪಾದ ಪ್ರವಾಹದಿಂದ ಕೂಡಿದ್ದ, ಕೆಸರಿನಿಂದ ರಹಿತಳಾದ, ಶೀತಳಜಲಯುಕ್ತಳಾದ, ಮಣಿಪ್ರವಾಳದಂತೆ ಪ್ರಕಾಶಮಾನವಾದ ಸೋಪಾನದಿಂದ ಕೂಡಿದ್ದ, ಎರಡು ದಂಡೆಗಳಲ್ಲಿಯೂ ಸಾಲುಮರಗಳಿಂದ ಪರಿಶೋಭಿಸುತ್ತಿದ್ದ, ದೇವಪುಷ್ಪಗಳ ಸಾಲಿನಿಂದ ಸಮಲಂಕೃತಳಾಗಿದ್ದ, ಪ್ರೇಕ್ಷಕರ ಮನಸ್ಸಿಗೆ ಮಹಾನಂದವನ್ನುಂಟುಮಾಡುತ್ತಿದ್ದ, ಬದರೀವೃಕ್ಷದ ಸಮೀಪದಲ್ಲಿದ್ದ ಭಾಗೀರಥಿಯನ್ನು ಪಾಂಡವರು ಸಂದರ್ಶಿಸಿ ಆನಂದಭರಿತರಾದರು. ಜಿತೇಂದ್ರಿಯರಲ್ಲದವರಿಂದ ಸಂದರ್ಶಿಸಲು ದುಸ್ಸಾಧ್ಯವಾದ, ದೇವರ್ಷಿಗಳಿಂದ ಸಂಸೇವ್ಯಮಾನವಾದ ಭಾಗೀರಥೀನದಿಯನ್ನುಸೇರಿ ಪಾಂಡವರು ಸ್ನಾನ-ಸಂಧ್ಯಾದಿಗಳನ್ನು ಮುಗಿಸಿ, ದೇವ-ಪಿತೃಗಳಿಗೆ ತರ್ಪಣಾದಿಗಳನ್ನಿತ್ತು ಪೂಜಿಸಿದರು.

ಜನಮೇಜಯ! ಈ ರೀತಿಯಲ್ಲಿ ಕುರುಕುಲಾವತಂಸರಾದ ಪಾಂಡ ವರು ನಿತ್ಯ-ನೈಮಿತ್ತಿಕಕರ್ಮಗಳನ್ನೂ, ಜಪ-ತಪಾದಿಗಳನ್ನೂ ಭಾಗೀರಥೀ ನದಿಯ ತೀರದಲ್ಲಿ ಮಾಡುತ್ತಾ ಬ್ರಾಹ್ಮಣರೊಡನೆ ಕಾಲಕಳೆಯುತ್ತಿದ್ದರು.

ದ್ರೌಪದಿಯೂ ಸಂತೋಷಭರಿತಳಾಗಿ ಸ್ವೇಚ್ಛೆಯಿಂದ ನಲಿದಾಡುತ್ತಾ, ಚಿತ್ರ-ವಿಚಿತ್ರವಾದ ಕ್ರೀಡೆಗಳನ್ನಾಡುತ್ತಾ ಇದ್ದುದನ್ನು ದೇವರೂಪಿಗಳಾದ ಪಾಂಡವರು ನೋಡಿ ಅಮಿತಾನಂದವನ್ನು ಹೊಂದಿದರು.”

ನೂರನಲವತ್ತೈದನೆಯ ಅಧ್ಯಾಯವು ಮುಗಿಯಿತು.

೧೪೬ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಸೌಗಂಧಿಕಕಮಲವನ್ನು ತರಲು ಭೀಮಸೇನನ ಪ್ರಯಾಣ : ಕದಲೀವನದಲ್ಲಿ ಭೀಮಾಂಜನೇಯರ ಸಮ್ಮಿಲನ

“ಜನಮೇಜಯ! ಪವಿತ್ರಾತ್ಮರಾದ ಪಾಂಡವರು ನರ-ನಾರಾಯಣಾಶ್ರಮದಲ್ಲಿ ಧನಂಜಯನ ಆಗಮನವನ್ನು ನಿರೀಕ್ಷಿಸುತ್ತಾ ಆರು ರಾತ್ರಿಗಳನ್ನು

ಕಳೆದರು. ಯುಧಿಷ್ಠಿರ-ಭೀಮ-ನಕುಲ-ಸಹದೇವರೂ, ಬ್ರಾಹ್ಮಣರೂ ಮತ್ತು ಪಾಂಚಾಲಿಯೂ ಸುಂದರವಾದ ಅರಣ್ಯದ ಒಂದೆಡೆಯಲ್ಲಿ ಕಾನನದ ಸೊಬಗನ್ನು ನೋಡುತ್ತಾ ಕುಳಿತಿದ್ದಾಗ-ಈಶಾನ್ಯದಿಕ್ಕಿನಿಂದ ವೇಗವಾಗಿ ಗಾಳಿಯು ಬೀಸಿ ಆ ಗಾಳಿಯ ಮೂಲಕವಾಗಿ ಸಹಸ್ರದಳಗಳಿದ್ದ, ಸೂರ್ಯನಿಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ, ಘಮಘಮಿಸುತ್ತಿದ್ದ ದೇವಕಮಲ ಪುಷ್ಪವು ದ್ರೌಪದಿಯು ಕಳಿತಿದ್ದೆಡೆಗೆ ಬಂದು ಬಿದ್ದಿತು. ದಿವ್ಯಗಂಧದಿಂದ ಕೂಡಿದ್ದ, ಮನೋಹರವಾಗಿದ್ದ, ವಾಯುದೇವನಿಂದ ಆಹೃತವಾಗಿ ಭೂಮಿಯ ಮೇಲೆ ಬಿದ್ದಿದ್ದ ಸೌಗಂಧಿಕಪುಷ್ಪವನ್ನು ದ್ರೌಪದಿಯು ಕಂಡು. ತನ್ನ ಕೋಮಲವಾದ ಕೈಗಳಿಂದ ಸುಮನೋಹರವಾದ ಆ ಕುಸುಮವನ್ನೆತ್ತಿಕೊಂಡು ಆನಂದಪರವಶಳಾದಳು. ಆದರೆ ಆ ಒಂದು ಹೂವಿನಿಂದಲೇ ಅವಳಿಗೆ ತೃಪ್ತಿಯಾದಂತೆ ಕಾಣಲಿಲ್ಲ. ಅಂತೆಯೇ ತನ್ನ ಸಮೀಪದಲ್ಲಿದ್ದ ಭೀಮಸೇನನನ್ನ ಕುರಿತು ಹೇಳಿದಳು :

"ಭೀಮಸೇನ! ಈ ಹೂವಿನ ಸೊಬಗನ್ನಾದರೂ ನೋಡಿದೆಯಾ? ಎಷ್ಟು ಅಂದವಾಗಿದೆ! ಘಮ-ಘಮಿಸುವ ವಾಸನೆಯಿಂದಲೇ ಈ ಪುಷ್ಪವನ್ನು ಮಾಡಿದಂತಿದೆ. ಸುಗಂಧಕ್ಕೆ ಇದು ಸಂಸ್ಥಾನವಾಗಿದೆ. ವಾಯುಪುತ್ರ! ಈ ದೇವಕುಸುಮವು ನನ್ನ ಮನಸ್ಸಿಗೆ ಬಹಳ ಆಹ್ಲಾದವನ್ನುಂಟುಮಾಡಿದೆ. ಪ್ರಾಣೇಶ್ವರನೇ! ಆದರೆ ಅಮೋಘರಾದ ಈ ಕುಸುಮವನ್ನು ಧರ್ಮಾತ್ಮನಾದ ಯುಧಿಷ್ಠಿರನಿಗೆ ಅರ್ಪಿಸಬೇಕೆಂದು ನಿಶ್ಚಯಿಸಿದ್ದೇನೆ. ಪ್ರಿಯನೇ! ನನಗಾಗಿ ಇಂತಹುದೇ ಕುಸುಮಗಳನ್ನು ಹುಡುಕಿ ತಂದುಕೊಡುವೆಯಾ? ನಾನು ಅವುಗಳನ್ನು ಕಾಮ್ಯಕವನದಲ್ಲಿರುವ ನಮ್ಮ ಆಶ್ರಮಕ್ಕೆ ತೆಗೆದುಕೊಂಡು ಹೋಗಬೇಕೆಂದು ಬಯಸಿದ್ದೇನೆ. ನೋಡು, ಭೀಮಸೇನ! ನಾನು ನಿನಗೆ ಪ್ರಿಯಳಾಗಿದ್ದರೆ ನನಗೆ ಬೇಕಾದಷ್ಟು ಇಂತಹ ಹೂಗಳನ್ನು ತಂದುಕೊಡು. ನಾನವುಗಳನ್ನು ನಮ್ಮ ಆಶ್ರಮಕ್ಕೆ ತೆಗೆದುಕೊಂಡು ಹೋಗಬೇಕೆಂದು ಬಹಳ ವಾಗಿ ಇಷ್ಟಪಟ್ಟಿದ್ದೇನೆ."

ಭೀಮಸೇನನನ್ನು ಕುರಿತು ಈ ಮಾತನ್ನು ಹೇಳಿ ಶುಭದರ್ಶನಳಾದ, ಅನಿಂದಿತೆಯಾದ ದ್ರೌಪದಿಯು ಸಹಸ್ರದಳಗಳ ಸೌಗಂಧಿಕಪುಷ್ಪವನ್ನು

ಅಂಜಲಿಪುಟದಲ್ಲಿಟ್ಟುಕೊಂಡು ಯುಧಿಷ್ಠಿರನ ಸಮೀಪಕ್ಕೆ ಹೋಗಿ ಅರ್ಪಿಸಿದಳು.

ಪ್ರೇಯಸಿಯು ಪುಷ್ಪವನ್ನು ತನಗೆ ತಂದುಕೊಡಬೇಕೆಂದು ಕೇಳಿದರೆ ಇಲ್ಲವೆನ್ನುವ ಪುರುಷನಾರು? ಮೇಲಾಗಿ ಭೀಮಸೇನನೆಂದಾದರೂ ದ್ರೌಪದಿಯು ಕೇಳಿದುದನ್ನು ಇಲ್ಲವೆನ್ನುವನೇ? ತನ್ನ ರಾಣಿಯ ಆಶಯವನ್ನು ಪೂರ್ಣಗೊಳಿಸಲು ಮಹಾಬಲಶಾಲಿಯಾದ ಭೀಮಸೇನನು ನರ-ನಾರಾಯಣಾಶ್ರಮದಿಂದ ಹೊರಟನು. ಸಾಧ್ಯವಾದಷ್ಟು ಬೇಗ ದ್ರೌಪದಿಗೆ ಹೂಗಳನ್ನು ತಂದುಕೊಡಬೇಕೆಂಬ ಆಶಯದಿಂದ-ಗಾಳಿಯು ಸೌಗಂಧಿಕ ಕುಸುಮವನ್ನು ಹೊತ್ತು ತಂದ-ಈಶಾನ್ಯದಿಕ್ಕಿಗೆ ಅಭಿಮುಖವಾಗಿ ಬಹುವೇಗ ವಾಗಿ ಹೊರಟನು. ಚಿನ್ನದ ಕಟ್ಟುಗಳುಳ್ಳ ಧನುಸ್ಸನ್ನೂ, ವಿಷಸರ್ಪಗಳಿಗೆ ಸಮಾನವಾದ ಬಾಣಗಳನ್ನೂ ತೆಗೆದುಕೊಂಡು-ಕುಪಿತನಾದ ಮೃಗರಾಜ ನಂತೆಯೂ (ಸಿಂಹದಂತೆಯೂ), ಮದಿಸಿದ ಆನೆಯಂತೆಯೂ-ರಭಸದಿಂದ ನಡೆದುಹೋಗುತ್ತಿದ್ದನು. ಮಹಾಧನುಸ್ಸನ್ನೂ ಮತ್ತು ಬಾಣಗಳನ್ನೂ ಧರಿಸಿ ವೇಗವಾಗಿ ನಡೆದುಹೋಗುತ್ತಿದ್ದ ಭೀಮನನ್ನು ಸರ್ವಪ್ರಾಣಿಗಳೂ ಎವೆ ಯಿಕ್ಕದೇ ನೋಡುತ್ತಿದ್ದುವು. ವಾಯುಪುತ್ರನಾದ ಭೀಮಸೇನನನ್ನು ಮನ ಸ್ಸಿನ ಅಥವಾ ದೇಹದ ಆಯಾಸವಾಗಲೀ, ದುಃಖವಾಗಲೀ, ಭಯವಾಗಲೀ– ಯಾವ ಕಾಲದಲ್ಲಿಯೂ ಆಶ್ರಯಿಸಲಿಲ್ಲ. ಅರ್ಥಾತ್ ಭೀಮಸೇನನಿಗೆ ಆಯಾಸ-ದುಃಖ-ಭಯ-ಭ್ರಾಂತಿಗಳೊಂದೂ ಇರಲಿಲ್ಲ. ದ್ರೌಪದಿಗೆ ಪ್ರಿಯ ವಾದ ಕಾರ್ಯವನ್ನೇ ಮಾಡಬೇಕೆಂಬ ಒಂದೇ ಧ್ಯೇಯದಿಂದ–ಬಾಹು ಬಲವನ್ನೇ ಆಶ್ರಯವನ್ನಾಗಿ ಪಡೆದಿದ್ದ, ಭಯ-ಭ್ರಾಂತಿರಹಿತನಾದ ಭೀಮ ಸೇನನು ತನ್ನ ಮುಂದಿದ್ದ ಪರ್ವತವನ್ನು ಹತ್ತಲಾರಂಭಿಸಿದನು. ಅವನು ಹೋಗುತ್ತಿದ್ದ ಪರ್ವತಪ್ರದೇಶವು ಬಹಳ ಸುಂದರವಾಗಿದ್ದಿತು. ನಾನಾವಿಧ ವಾದ ವೃಕ್ಷಗಳಿಂದಲೂ, ಪೊದೆಗಳಿಂದಲೂ, ಬಳ್ಳಿಗಳಿಂದಲೂ ಆವೃತವಾಗಿ ದ್ದಿತು. ಆ ಪರ್ವತದ ಮೇಲೆ ನೀಲಿಯ ಬಣ್ಣದ ಕಲ್ಲುಗಳಿದ್ದುವು. ಅದರಿಂದ ಪರ್ವತವು ನೀಲಪರ್ವತದಂತೆಯೇ ಕಾಣುತ್ತಿದ್ದಿತು. ಕಿನ್ನರರು ಆ ಪರ್ವತ

ದಲ್ಲಿ ಸಂಚರಿಸುತ್ತಿದ್ದರು. ಆ ಪರ್ವತದಲ್ಲಿ ನಾನಾವಿಧವಾದ ಗೈರಿಕಾದಿ ಧಾತುಗಳಿದ್ದುವು. ನಾನಾವಿಧವಾದ ವೃಕ್ಷಗಳಿದ್ದುವು. ಆ ಪರ್ವತವು ನಾನಾ ವಿಧ ವಾದ ಮೃಗಗಳಿಂದಲೂ, ಪಕ್ಷಿಗಳಿಂದಲೂ ನಿಬಿಡವಾಗಿದ್ದಿತು. ಆ ಪರ್ವತ ವನ್ನು ನೋಡಿದರೆ ಭೂದೇವಿಯ ಮೇಲೆತ್ತಿರುವ ಅಲಂಕೃತವಾದ ಭುಜವೋ ಎಂಬಂತೆ ಕಾಣುತ್ತಿದ್ದಿತು. ಈ ರೀತಿಯಾಗಿ ಸರ್ವತ್ರ ರಮಣೀಯವಾಗಿ ಕಾಣುತ್ತಿದ್ದ ಗಂಧಮಾದನಪರ್ವತದ ತಪ್ಪಲುಪ್ರದೇಶದಲ್ಲಿ ಮಹಾಪರಾಕ್ರಮಿಯಾದ ಭೀಮಸೇನನು ಸೌಗಂಧಿಕಪುಷ್ಪದ ಆಹರಣದಲ್ಲಿಯೇ ನೆಟ್ಟ ಮನಸ್ಸುಳ್ಳವನಾಗಿ ತನ್ನ ಮುಂದಿದ್ದ ಪರ್ವತದ ಸೊಬಗನ್ನು ನೋಡುತ್ತಾ, ಗಂಡುಕೋಗಿಲೆಗಳ ಇಂಚರದಲ್ಲಿಯೂ ಝೇಂಕರಿಸುತ್ತಿರುವ ದುಂಬಿಗಳ ಓಡಾಟಗಳಲ್ಲಿಯೂ ನಿಬದ್ಧವಾದ ಕಣ್ಣು-ಕಿವಿ-ಮನಸ್ಸುಗಳುಳ್ಳವನಾಗಿ ಮುಂದೆ-ಮುಂದೆ ನಡೆದುಹೋಗುತ್ತಿದ್ದನು.

ಮದಿಸಿದ ಆನೆಯು ಸೊಂಡಿಲನ್ನು ಎತ್ತಿಕೊಂಡು ಗಂಧವನ್ನು ಆಘ್ರಾಣಿಸುವಂತೆ-ಭೀಮಸೇನನು ಸರ್ವರ್ತುಗಳಲ್ಲಿಯೂ ಇರುವ ಕುಸುಮಗಳ ಸುವಾಸನೆಯನ್ನು ಆಘ್ರಾಣಿಸುತ್ತಾ ಹೋಗುತ್ತಿದ್ದನು. ಸುಗಂಧಮಯವಾದ ಕುಸುಮಗಳ ಮೇಲೆ ಬೀಸಿದ ಮಂದಮಾರುತನು–ತಂದೆಯಾದವನು ಮಗನನ್ನು ಆದರದಿಂದ ಸ್ಪರ್ಶಮಾಡುವಂತೆ–ಭೀಮನ ಮೇಲೆ ಬೀಸಿ ಅವನ ದಣಿವನ್ನು ಪರಿಹರಿಸುತ್ತಿದ್ದನು. ತಂದೆಯಾದ ವಾಯುದೇವನು ತನ್ನನ್ನು ಮಂದವಾಗಿ ಸ್ಪರ್ಶಿಸಿ ದಣಿವನ್ನು ನಿವಾರಣೆಮಾಡುತ್ತಲೇ ಭೀಮಸೇನನಿಗೆ ರೋಮಾಂಚನವಾಯಿತು. ಆ ಸಮಯದಲ್ಲಿ ಭೀಮಸೇನನು ಸೌಗಂಧಿಕ ಪುಷ್ಪವನ್ನು ಹುಡುಕುವ ಆಶಯದಿಂದ ಗಂಧರ್ವರಿಂದಲೂ, ದೇವತೆಗಳಿಂದಲೂ, ಬ್ರಹ್ಮರ್ಷಿಗಳಿಂದಲೂ ಸಂಸೇವ್ಯಮಾನವಾದ ಆ ಗಂಧಮಾದನ ಪರ್ವತದ ಸುತ್ತಲೂ ವೀಕ್ಷಿಸಿದನು. ಆ ಪರ್ವತದಲ್ಲಿ ಹಲವು ಏಳೆಲೆಗಳ ಬಾಳೆಯ ಮರಗಳಿದ್ದುವು. (ಪಚ್ಚಕರ್ಪೂರದ ಗಿಡಗಳೂ ಇದ್ದುವು). ಕೆಂಪು, ಕಪ್ಪು ಮತ್ತು ಬಿಳಿಯ ಧಾತುಗಳೂ ಇದ್ದುವು. ಅವುಗಳನ್ನು ನೋಡಿದರೆ ಪರ್ವತಕ್ಕೆ ಊರ್ಧ್ವಪುಂಡ್ರವನ್ನು ಎಳೆದಿರುವಂತೆ ಭಾಸವಾಗುತ್ತಿದ್ದಿತು. ಪರ್ವತದ ಎರಡು ಪಾರ್ಶ್ವಗಳಲ್ಲಿಯೂ ಮೋಡಗಳಿದ್ದುದನ್ನು ನೋಡಿದರೆ ಮೋಡಗಳೆಂಬ ರೆಕ್ಕೆಗಳನ್ನು ಹರಡಿ ಪರ್ವತವು ನರ್ತಿಸುತ್ತಿರುವಂತೆ ಕಾಣ

ತ್ತಿದ್ದಿತು. ಆ ಪರ್ವತದಲ್ಲಿ ಅನೇಕನದಿಗಳು ಪ್ರವಹಿಸುತ್ತಿದ್ದುವು. ಚಿಮ್ಮು ತ್ತಿರುವ ಪ್ರವಾಹದ ಹನಿಗಳಿಂದ ಕೂಡಿದ ಆ ಪರ್ವತವು ಮುಕ್ತಾಹಾರ ಗಳಿಂದ ಅಲಂಕೃತವಾಗಿದೆಯೋ–ಎಂಬಂತೆ ಕಾಣುತ್ತಿದ್ದಿತು.

ಆ ಪರ್ವತದಲ್ಲಿ ಮನೋಹರವಾದ ಲತಾಗೃಹಗಳೂ, ದರಿಗಳೂ, ಬೆಟ್ಟದ ಪ್ರವಾಹಗಳ ನೀರು ತುಂಬಿದ ಕಂದರಗಳೂ ಅನೇಕವಾಗಿದ್ದುವು. ಹಾರಾರ್ಥವಾಗಿ ಬರುವ ಅಪ್ಸರಸ್ತ್ರೀಯರ ಕಾಲಂದುಗೆಗಳ ಶಬ್ದಕ್ಕೆ ಸರಿಯಾಗಿ ನೃತ್ಯಮಾಡುವ ಅನೇಕ ನವಿಲುಗಳು ಆ ಪರ್ವತದಲ್ಲಿದ್ದುವು. (ಅಂತಹ ನವಿಲುಗಳಿಂದ ಆ ಪರ್ವತವು ಶೋಭಾಯಮಾನವಾಗಿದ್ದಿತು.) ದಿಗ್ಗಜಗಳ ದಂತಗಳ ಉಜ್ಜುವಿಕೆಯಿಂದ ಆ ಪರ್ವತದಲ್ಲಿದ್ದ ಕಲ್ಲುಗಳೆಲ್ಲವೂ ಸವೆದುಹೋಗಿದ್ದುವು. ಅನೇಕನದಿಗಳ ಪ್ರವಾಹಗಳು ಆ ಪರ್ವತದ ಮೇಲಿ ನಿಂದ ಹರಿದುಬರುತ್ತಿರುವುದನ್ನು ಕ್ಷಣಕಾಲ ದಿಟ್ಟಿಸಿ ನೋಡಿದರೆ ಪರ್ವತದ ಆವರಣವಸ್ತ್ರವು ಕಳಚಿಬೀಳುತ್ತಿರುವುದೋ–ಎಂಬ ಭ್ರಾಂತಿಯನ್ನುಂಟು ಮಾಡುತ್ತಿದ್ದಿತು.

ಗರಿಕೆಯ ಹುಲ್ಲನ್ನು ತಿನ್ನುತ್ತಿದ್ದ ಜಿಂಕೆಗಳು ಭೀಮಸೇನನು ರಭಸ ದಿಂದ ಹೋಗುತ್ತಿರುವುದನ್ನು ಎವೆಯಿಕ್ಕದೇ ನೋಡುತ್ತಿದ್ದುವು. ಆ ಪ್ರಾಣಿ ಗಳಿಗೆ ಯಾರಿಂದಲೂ ಯಾವಾಗಲೂ ಭಯವೆಂಬುದೇ ಇಲ್ಲದುದರಿಂದ ಅವು ಭೀಮನನ್ನು ನೋಡಿ ಹಾಗೆಯೇ ಕುತೂಹಲದಿಂದ ನಿಂತು ನೋಡುತ್ತಿದ್ದುವೇ ಹೊರತು ಭಯದಿಂದ ಓಡಿಹೋಗುತ್ತಿರಲಿಲ್ಲ. ವಾಯುದೇವನ ಪ್ರಿಯಸುತನಾದ ಭೀಮಸೇನನು ವಿನೋದದಿಂದಲೂ, ಸಂತೋಷದಿಂದಲೂ ಕೂಡಿದವನಾಗಿ ರಭಸದಿಂದ ನಡೆದುಹೋಗುತ್ತಿರುವಾಗ ಅವನು ಹೋಗು ತ್ತಿದ್ದ ಮಾರ್ಗದಲ್ಲಿದ್ದ ಅನೇಕಲತೆಗಳು ಸಮೂಲವಾಗಿ ಕಿತ್ತುಬರುತ್ತಿದ್ದುವು. ಭೀಮಸೇನನು ಪ್ರಿಯೆಯಾದ ದ್ರೌಪದಿಯ ಮನೋರಥವನ್ನು ಪೂರೈಸುವು ದರಲ್ಲಿಯೇ ನೆಟ್ಟದೃಷ್ಟಿಯುಳ್ಳವನಾಗಿ ಹೋಗುತ್ತಿದ್ದನು. ಅವನು ಸಿಂಹದಂತೆ ದೃಢವಾದ ಶರೀರವನ್ನು ಹೊಂದಿದ್ದನು. ಅವನ ಶರೀರಕಾಂತಿಯು ಸುವರ್ಣದಕಾಂತಿಗೆ ಸಮಾನವಾಗಿದ್ದಿತು. ದೇಹವು ಎತ್ತರವಾಗಿದ್ದಿತು. ನಡಿ ಗೆಯ ಮದಿಸಿದ ಆನೆಯ ನಡಿಗೆಗೆ ಸಮಾನವಾಗಿದ್ದಿತು. ಅವನ ವೇಗ ಮತ್ತು

ಅವನ ಕೆಂಪಾದ ಕಣ್ಣುಗಳೂ ಮದಿಸಿದ ಆನೆಗೆ ಅನುರೂಪವಾಗಿದ್ದುವು. ಮದಿಸಿದ ಆನೆಯನ್ನೂ ಸಹ ತಡೆದು ಅದರೊಡನೆ ಹೋರಾಡಿ ಅದನ್ನು ಧ್ವಂಸಮಾಡುವ ವಿಕ್ರಮವು ಅವನಿಗಿದ್ದಿತು. ಅಂತಹ ಮಹಾಪರಾಕ್ರಮಿಯಾದ ಭೀಮಸೇನನು ತನ್ನ ಪ್ರಿಯೆಯ ಮನೋರಥವನ್ನು ಈಡೇರಿಸುವುದಕ್ಕಾಗಿ ದಿಟ್ಟತನದಿಂದ ಗಂಧಮಾದನಪರ್ವತವನ್ನು ಹತ್ತಿಹೋಗುತ್ತಿದ್ದನು. ವಿಹಾರಾರ್ಥವಾಗಿ ಬಂದಿದ್ದ ಯಕ್ಷ-ಗಂಧರ್ವಸ್ತ್ರೀಯರು ತಮ್ಮ-ತಮ್ಮ ಪ್ರಣಯಿಗಳೊಡನೆ ಅದೃಶ್ಯರಾಗಿ ಕುಳಿತು ಭೀಮಸೇನನನ್ನು ಎವೆಯಿಕ್ಕದೇ ನೋಡುತ್ತಿದ್ದರು. ರಾಜಕುಮಾರಿಯಾಗಿದ್ದರೂ ವನವಾಸದ ಕಷ್ಟವನ್ನು ಅನುಭವಿಸುತ್ತಿದ್ದ ದ್ರೌಪದಿಯ ಆಶಯವನ್ನು ಪೂರೈಸಲು ಉದ್ಯುಕ್ತನಾಗಿದ್ದ ಭೀಮಸೇನನು ಗಂಧಮಾನದಪರ್ವತದ ಸುಂದರವಾದ ತಪ್ಪಲಿನಲ್ಲಿ ನಡೆದುಹೋಗುತ್ತಿದ್ದಾಗ-ದುರ್ಯೋಧನನು ಕೊಟ್ಟ ಕ್ಲೇಶಪರಂಪರೆಗಳನ್ನು ನೆನೆಯುತ್ತಾ, ನಿಟ್ಟುಸಿರುಬಿಡುತ್ತಾ, ಹಲ್ಲುಗಳನ್ನು ಕಟಕಟನೆ ಕಡಿಯುತ್ತಾ ಧಾವಿಸುತ್ತಿದ್ದನು. ಅಂತೆಯೇ ಅವನಿಗೆ ಯುಧಿಷ್ಠಿರನ ಸ್ಮರಣೆಯೂ ಉಂಟಾಯಿತು. ತನ್ನಲ್ಲಿಯೇ ಯೋಚಿಸತೊಡಗಿದನು :

"ಎಂತಹ ಕಾರ್ಯವನ್ನು ಮಾಡಿಬಿಟ್ಟೆನು! ಅಣ್ಣನಿಗೊಮ್ಮೆ ಹೇಳಿಯೇ ಬರಲಿಲ್ಲವಲ್ಲ? ಅರ್ಜುನನಾದರೋ ಸ್ವರ್ಗಕ್ಕೆ ಹೊರಟುಹೋಗಿದ್ದಾನೆ. ನಾನು ಸೌಗಂಧಿಕಪುಷ್ಪಗಳ ಆಹರಣಕ್ಕಾಗಿ ಬಂದುಬಿಟ್ಟಿದ್ದೇನೆ. ನಾನು ಇಷ್ಟುಹೊತ್ತಿನವರೆಗೂ ಅವನ ಸಮೀಪಕ್ಕೆ ಹೋಗದಿರುವುದನ್ನು ಕಂಡು ಯುಧಿಷ್ಠಿರನು ಏನೆಂದು ತರ್ಕಿಸುತ್ತಿರಬಹುದು? ಬಾಲಕರಾದ ನಕುಲ-ಸಹದೇವರನ್ನು ಖಂಡಿತವಾಗಿಯೂ ನನ್ನನ್ನು ಹುಡುಕಿ ಕರೆತರಲು ಕಳುಹಿಸಲಾರನು. ಏಕೆಂದರೆ : ಅವರಿನ್ನೂ ಬಾಲರೆಂದೂ ಅವರಿಗೆ ಹೆಚ್ಚು ಸಾಮರ್ಥ್ಯವಿಲ್ಲವೆಂದೂ ಯುಧಿಷ್ಠಿರನು ಭಾವಿಸಿದ್ದಾನೆ. ಮೇಲಾಗಿ ಒಂದು ಕ್ಷಣಕಾಲವೂ ನಮ್ಮಣ್ಣನಿಗೆ ನಕುಲ-ಸಹದೇವರನ್ನು ಬಿಟ್ಟಿರಲು ಸಾಧ್ಯವೂ ಇಲ್ಲ. ಆದುದರಿಂದ ನಾನು, ನಮ್ಮಣ್ಣನು ಗಾಬರಿಪಡದಂತೆ ಸಾಧ್ಯವಾದಷ್ಟು ಬೇಗ ಹಿಂದಿರುಗಲೇಬೇಕು. ಆದರೆ ದ್ರೌಪದಿಯು ಆಶಿಸಿರುವ ಹೂಗಳನ್ನು ತೆಗೆದುಕೊಳ್ಳದೇ ಹಿಂತಿರುಗುವ ಸಾಧ್ಯತೆಯೂ ಇಲ್ಲ. ಬಹುಶೀಘ್ರವಾಗಿ ಸೌಗಂಧಿಕಪುಷ್ಪಗಳನ್ನು ಪಡೆಯುವ ಬಗೆ ಹೇಗೆ?"

ಹೀಗೆ ಯೋಚಿಸುತ್ತಾ ಭೀಮಸೇನನು ಅರಳಿದ ಹೂಗಳುಳ್ಳ ಪರ್ವತದ ತಪ್ಪಲಿನ ಸುಂದರದೃಶ್ಯಗಳನ್ನು ನೋಡುತ್ತಾ ಪಕ್ಷಿರಾಜನಾದ ಗರುಡನೋಪಾದಿಯಲ್ಲಿ ಬಹುವೇಗವಾಗಿ ನಡೆದುಹೋಗುತ್ತಿದ್ದನು.

'ನಾನು ನಿನಗೆ ಪ್ರಿಯಳಾಗಿದ್ದರೆ'–ಎಂದು ದ್ರೌಪದಿಯಾಡಿದ ಮಾತು ಭೀಮಸೇನನ ಕಿವಿಗಳಲ್ಲಿ ಪ್ರತಿಧ್ವನಿಸುತ್ತಿದ್ದು ಅದೇ ಅವನಿಗೆ ಪ್ರಯಾಣದ ಬುತ್ತಿಯಂತಾಗಿ ಅವನ ಬಲವು ಇಮ್ಮಡಿಯಾಯಿತು. ಅಮಿತವಾದ ಉತ್ಸಾಹವುಂಟಾಗಿ ಅವನ ನಡಿಗೆಯ ರಭಸವೂ ಹೆಚ್ಚಿತು. ವಾಯುಕುಮಾರನು ವಾಯುವಿನಂತೆಯೇ ಹಾರಿಕೊಂಡೇ ಹೋಗುತ್ತಿದ್ದನು. ಪರ್ವಕಾಲ ದಲ್ಲಿ ಬೀಳುವ ಉಲ್ಕಾಪಾತದೋಪಾದಿಯಲ್ಲಿ ಅವನು ಹೆಜ್ಜೆಗಳನ್ನಿಡುತ್ತಿದ್ದಾಗ ಭೂಮಿಯೇ ನಡುಗಿತು. ಅವನ ರಭಸವನ್ನು ನೋಡಿ ಆನೆಗಳ ಗುಂಪುಗಳೂ ನಡುಗಿದುವು. ಭೀಮಸೇನನು ತನ್ನೆದುರಾಗಿ ಬಂದ ಸಿಂಹಗಳನ್ನೂ, ಹುಲಿಗಳನ್ನೂ ಧ್ವಂಸಮಾಡುತ್ತಾ ಮುಂದೆ ನಡೆದನು. ಅವನು ತನ್ನ ಉತ್ಸಾಹಾಧಿಕ್ಯದಿಂದ ಎದುರಿಗೆ ಸಿಕ್ಕಿದ ಅನೇಕಾನೇಕ ವೃಕ್ಷಗಳನ್ನೂ, ಲತೆಗಳನ್ನೂ ಕಿತ್ತೊಗೆಯುತ್ತಾ ಮದಿಸಿದ ಆನೆಯೋಪಾದಿಯಲ್ಲಿ ಪರ್ವತವನ್ನು ಹತ್ತಿಹೋಗುತ್ತಿದ್ದನು. ಆ ಸಮಯದಲ್ಲಿ ಅವನು ಮಾಡುತ್ತಿದ್ದ ಗರ್ಜನೆಯು ಮೇಘದ ಶಬ್ದವನ್ನು ಅನುಕರಿಸುತ್ತಿದ್ದಿತು. ಆ ಭಯಂಕರಶಬ್ದವನ್ನು ಕೇಳಿ ಗುಹೆಗಳಲ್ಲಿದ್ದ ಹುಲಿಗಳೂ, ಸಿಂಹಗಳೂ ಹೊರಕ್ಕೆ ಬಂದುವು. ವನವಾಸಿಗಳು ಭಯದಿಂದ ಬಚ್ಚಿಟ್ಟುಕೊಂಡರು. ಪಕ್ಷಿಗಳು ಭೀಮಸೇನನ ಗರ್ಜನೆಯನ್ನು ಕೇಳಿದೊಡನೆಯೇ ಭಯದಿಂದ ಮೇಲಕ್ಕೆ ಹಾರಿದುವು. ಸ್ವಲ್ಪಹೊತ್ತಿಗೆ ಮೊದಲು ಅವನನ್ನು ನೋಡಿದರೂ ಓಡಿಹೋಗದಿದ್ದ ಜಿಂಕೆಗಳು ಆ ಶಬ್ದವನ್ನು ಕೇಳುತ್ತಲೇ ಭಯದಿಂದ ಓಡಲಾರಂಭಿಸಿದುವು. ಕರಡಿಗಳು ಮರಗಳನ್ನು ಬಿಟ್ಟುವು ; ಸಿಂಹಗಳು ಗುಹೆಗಳನ್ನು ತ್ಯಜಿಸಿದುವು. ಕಾಡುಕೋಣಗಳು ನಿಂತಲ್ಲಿಯೇ ನಿಂತು ಭ್ರಾಂತಿಯಿಂದ ದುರ-ದುರನೆ ನೋಡುತ್ತಿದ್ದುವು. ಹೆಣ್ಣಾನೆಗಳೊಡನೆ ಗಂಡಾನೆಗಳು ಭಯದಿಂದ ಬೇರೆಯ ಕಾಡಿಗೆ ಧಾವಿಸಿದುವು. ಕಾಡುಹಂದಿಗಳೂ, ಜಿಂಕೆಗಳೂ, ಸಿಂಹಗಳೂ, ಕಾಡುಕೋಣಗಳೂ, ಹುಲಿಗಳೂ, ನರಿಗಳೂ, ಗವಯಗಳೂ (ಎತ್ತಿನ

ಆಕಾರದ ಒಂದು ಕಾಡುಪ್ರಾಣಿ) ಗುಂಪು-ಗುಂಪಾಗಿ ನಿಂತು ಭಯದಿಂದ ಅರಚಿಕೊಳ್ಳುತ್ತಿದ್ದುವು. ಚಕ್ರವಾಕ, ಮಯೂರ, ಚಾತಕ, ಗಿಣಿ, ಗಂಡು ಕೋಗಿಲೆ, ಕಾರಂಡವ–ಮುಂತಾದ ಪಕ್ಷಿಗಳು ಭ್ರಾಂತಿಯಿಂದ ದಿಕ್ಕಾಪಾಲಾಗಿ ಹಾರಿಹೋದುವು.

ಹೆಣ್ಣಾನೆಗಳೊಡನಿದ್ದ ಕೆಲವು ಮದಗಜಗಳು ಹೆಣ್ಣಾನೆಗಳಿಂದ ಪ್ರೇರಿತವಾಗಿ ಭೀಮನ ಮೇಲೆ ಬಿದ್ದುವು. ಗರ್ಜನೆಯನ್ನು ಕೇಳಿ ಬಹುವಾಗಿ ಕೋಪಗೊಂಡ ಕೆಲವು ಸಿಂಹ-ವ್ಯಾಘ್ರಗಳೂ ಏಕಕಾಲದಲ್ಲಿ ಅವನ ಮೇಲೆ ಬಿದ್ದುವು. ಮತ್ತೆ ಕೆಲವು ಪ್ರಾಣಿಗಳು ಭಯದಿಂದ ಮೂತ್ರ-ಪುರೀಷೋತ್ಸರ್ಜನೆಮಾಡುತ್ತಾ, ದಾರುಣಧ್ವನಿಮಾಡುತ್ತಾ ಘೋರವಾಗಿ ನಿನಾದ ಮಾಡುತ್ತಾ ನಿಂತಿದ್ದುವು. ತನ್ನ ಮೇಲೆ ಬೀಳಲು ಬಂದ ಗಜ-ಸಿಂಹ-ವ್ಯಾಘ್ರಗಳನ್ನು ಭೀಮಸೇನನು ಏಕಕಾಲದಲ್ಲಿ ಎದುರಿಸಿ ನಿಂತು ತನ್ನ ಭುಜಬಲದಿಂದಲೇ ಒಂದಾನೆಯನ್ನೆತ್ತಿ ಮತ್ತೊಂದಾನೆಯ ಮೇಲೆ ಪ್ರಯೋಗಿಸಿ ಸಂಹರಿಸುತ್ತಿದ್ದನು. ಒಂದು ಸಿಂಹವನ್ನು ಮತ್ತೊಂದು ಸಿಂಹದ ಮೇಲೂ, ಒಂದು ಹುಲಿಯನ್ನು ಮತ್ತೊಂದು ಹುಲಿಯ ಮೇಲೂ ಅಪ್ಪಳಿಸಿ ಕೊಲ್ಲುತ್ತಿದ್ದನು. ಹೀಗೆ ಎದುರಾಗಿ ಬಂದು ಎಲ್ಲ ಪ್ರಾಣಿಗಳನ್ನೂ ಸಂಹರಿಸಿದನು. ಕೈಯಿಂದ ಅಪ್ಪಳಿಸಿಯೇ ಬೇರೆಯ ಪ್ರಾಣಿಗಳನ್ನು ಕೊಲ್ಲುತ್ತಿದ್ದನು. ಭೀಮನು ಒಂದು ಬಾರಿ ಪ್ರಹರಿಸಿದೊಡನೆಯೇ ಸಿಂಹ-ವ್ಯಾಘ್ರ-ವರಾಹಗಳು ಮಲ-ಮೂತ್ರಗಳನ್ನು ವಿಸರ್ಜನೆಮಾಡುತ್ತಾ ಕೂಗಿಕೊಳ್ಳುತ್ತಾ ನಿಂತಲ್ಲಿಯೇ ಸತ್ತುಬೀಳುತ್ತಿದ್ದುವು. ಈ ರೀತಿಯಾಗಿ ಭೀಮಸೇನನು ತನಗೆದುರಾಗಿ ಬಂದ ಪ್ರಾಣಿಗಳೆಲ್ಲವನ್ನೂ ನಿರ್ದಯನಾಗಿ ನಿರ್ಮೂಲಮಾಡಿ ದಿಕ್ಕುಗಳನ್ನು ತುಂಬುವಂತಹ ವೀರಗರ್ಜನೆಯನ್ನು ಮಾಡಿದನು. ಹಾಗೆಯೇ ಭೀಮನು ಗಂಧಮಾದನಪರ್ವತದ ತಪ್ಪಲಿನಲ್ಲಿ ನಡೆದು ಹೋಗುತ್ತಿರುವಾಗ ಅತಿಸುಂದರವಾದ, ಅನೇಕಯೋಜನವಿಸ್ತೀರ್ಣವಿದ್ದ ಬಾಳೆಯ ತೋಟವನ್ನು ಕಂಡನು. ಮದಿಸಿದ ಸಿಂಹದಂತೆ ಮಹಾಪರಾಕ್ರಮಿಯಾಗಿದ್ದ ಭೀಮಸೇನನು ಹಾದಿಯಲ್ಲಿದ್ದ ಹಲವು ಮರ-ಗಿಡ-ಬಳ್ಳಿಗಳನ್ನು ಮುರಿದುಹಾಕುತ್ತಾ, ಕಿತ್ತುಹಾಕುತ್ತಾ ಆ ಬಾಳೆಯ ತೋಟದ ಸಮೀಪಕ್ಕೆ ಧಾವಿಸಿದನು. ತಾಳೆಯ ಮರದಂತೆ ಎತ್ತರವಾಗಿದ್ದ ಬಾಳೆಯ ಗಿಡಗಳನ್ನು ಬೇರುಸಹಿತ ಕಿತ್ತು ಮನ

ಬಂದಂತೆ ಅರಣ್ಯದ ಸುತ್ತಲೂ ಬಿಸುಟನು. ಅಲ್ಲಿಯೂ ಬೃಹದಾಕಾರದ ಕೋತಿಗಳೂ, ಸಿಂಹಗಳೂ, ಕಾಡೆಮ್ಮೆಗಳೂ ಅವನ ಮೇಲೆ ಬೀಳಲು ಬಂದುವು. ಆ ಪ್ರಾಣಿಗಳ ಗರ್ಜನೆಗಳಿಂದಲೂ, ಭೀಮನ ಪ್ರತಿಗರ್ಜನೆ ಯಿಂದಲೂ ಬಹುದೂರದಲ್ಲಿದ್ದ ಪಕ್ಷಿಗಳೆಲ್ಲವೂ ಭೀತಿಗೊಂಡು ಮೇಲೆ ಹಾರಿದುವು. ಆ ಪಕ್ಷಿಗಳ ರೆಕ್ಕೆಗಳು ನೀರಿನಿಂದ ತೋಯ್ದಿತ್ತಾದ್ದರಿಂದ ಭೀಮನು ಅವುಗಳು ಬರುತ್ತಿರುವ ಕಡೆ ಸರೋವರವಿರಬಹುದೆಂದು ಊಹಿಸಿ ಆ ದಿಕ್ಕಿನೆಡೆಗೆ ಪ್ರಯಾಣಮಾಡಿದನು. ಅನತಿದೂರದಲ್ಲಿಯೇ ಭೀಮಸೇನನು ಸುಂದರವಾದ ಸರೋವರವೊಂದನ್ನು ಕಂಡನು. ಆ ಸರೋವರವು ಬಹಳ ಆಳವಾಗಿದ್ದಿತು. ಅದರ ತೀರದಲ್ಲಿ ಸ್ವರ್ಣಮಯವಾದ ಹಲವು ಬಾಳೆಯ ಗಿಡಗಳಿದ್ದುವು. ಮಂದಮಾರುತವು ಆ ಬಾಳೆಯ ಗಿಡಗಳ ಮೇಲೆ ಬೀಸಿದಾಗ ಒಂದು ತೀರದಿಂದ ಮತ್ತೊಂದು ತೀರದವರೆಗೂ ಹರಡಿಕೊಂಡಿರುವ ಬಾಳೆಯ ಗಿಡಗಳ ಸಮೂಹಗಳು ಸರೋವರಕ್ಕೆ ಗಾಳಿ ಬೀಸುವಂತಿದ್ದುವು. ಭೀಮಸೇನನು ತಾವರೆ ಮತ್ತು ಕನ್ನೈದಿಲೆಗಳಿಂದ ತುಂಬಿ ಹೋಗಿದ್ದ ಸುಂದರವಾದ ಆ ಸರೋವರದಲ್ಲಿಳಿದು ಮದಿಸಿದ ಆನೆಯಂತೆ ಸ್ವಲ್ಪಕಾಲ ಸ್ವೇಚ್ಛೆಯಿಂದ ಜಲಕ್ರೀಡೆಯನ್ನಾಡುತ್ತಿದ್ದನು. ಜಲಕ್ರೀಡೆಯನ್ನಾಡಿ ದಣಿವಾರಿಸಿಕೊಂಡ ಭೀಮಸೇನನು ವೃಕ್ಷನಿಬಿಡವಾಗಿದದ ಆ ಅರಣ್ಯವನ್ನು ಪ್ರವೇಶಿಸುವಸಲುವಾಗಿ ಸರೋವರದಿಂದ ಮೇಲೆ ಹತ್ತಿ ಬಂದನು. ಉತ್ಸಾಹ ಭರಿತನಾಗಿದ್ದ ಭೀಮಸೇನನು ತನ್ನ ಕೈಯ್ಯಲ್ಲಿದ್ದ ಶಂಖವನ್ನು ಗಟ್ಟಿಯಾಗಿ ಊದಿ ತನ್ನ ಭುಜಗಳೆರಡನ್ನೂ ಕೈಗಳಿಂದ ಜೋರಾಗಿ ಅಪ್ಪಳಿಸಿಕೊಂಡನು. ಆ ಶಬ್ದಗಳು ನಾಲ್ಕು ದಿಕ್ಕುಗಳಲ್ಲಿಯೂ ಪ್ರತಿಧ್ವನಿಸಿದುವು. ನಾಲ್ಕು ದಿಕ್ಕುಗಳ ಲ್ಲಿಯೂ ಉಂಟಾದ ಆ ಪ್ರತಿಧ್ವನಿಯು ಪರ್ವತದಲ್ಲಿರುವ ಗುಹೆಗಳೇನಾ ದರೂ ಕೂಗುತ್ತಿರುವುವೋ–ಎಂಬ ಭ್ರಾಂತಿಯನ್ನುಂಟುಮಾಡುತ್ತಿದ್ದಿತು. ಸಿಡಿಲಿಗೆ ಸಮಾನವಾಗಿದ್ದ ಭುಜಪ್ರಹಾರದ ಮತ್ತು ಶಂಖದ ಧ್ವನಿಯನ್ನು ಕೇಳಿ ಗುಹೆಗಳಲ್ಲಿ ಮಲಗಿದ್ದ ಸಿಂಹಗಳು ಪ್ರತಿಧ್ವನಿಮಾಡಿದುವು. ಸಿಂಹಗಳ ಗರ್ಜನೆಯನ್ನು ಕೇಳಿ ಆನೆಗಳು ಭಯದಿಂದ ಘೀಳಿಟ್ಟುವು. ಆನೆ ಮತ್ತು ಸಿಂಹಗಳು ಮಾಡಿದ ಆ ನಿನಾದವು ಪರ್ವತವನ್ನೇ ಆವರಿಸಿಬಿಟ್ಟಿತು.

ಭೀಮನು ಮಾಡಿದ ಶಂಖನಿನಾದವನ್ನೂ ಮತ್ತು ಆನೆ-ಸಿಂಹಗಳು ಮಾಡಿದ ಪ್ರತಿಗರ್ಜನೆಯನ್ನು ಕೇಳಿ, ಭೀಮಸೇನನು ತನ್ನ ಸಹೋದರನೆಂಬುದನ್ನೂ ತಿಳಿದು, ವಾಯುಸುತನಾದ ಹನುಮಂತನು ಭೀಮಸೇನನಿಗೆ ಒಳ್ಳೆಯದನ್ನು ಮಾಡಬೇಕೆಂಬ ಆಶಯದಿಂದ ಸ್ವರ್ಗಮಾರ್ಗಾಭಿಮುಖವಾಗಿ ಪ್ರಯಾಣ ಮಾಡುತ್ತಿದ್ದ ಭೀಮಸೇನನನ್ನು ತಡೆದನು. ಬಾಳೆಯ ಗಿಡಗಳಿದ್ದ ಆ ಮಾರ್ಗದಲ್ಲಿ ಪ್ರಯಾಣಮಾಡಿದರೆ ಭೀಮಸೇನನಿಗೆ ಅಪಾಯವುಂಟಾಗ ಬಹುದೆಂದು ಭಾವಿಸಿ, ಒಬ್ಬ ಮನುಷ್ಯನು ಮಾತ್ರ ಹೋಗುವಷ್ಟು ಸಂಕು ಚಿತವಾಗಿದ್ದ ಆ ದಾರಿಯಲ್ಲಿ ತಾನು ಕುಳಿತನು. 'ಅದುವರೆಗೂ ಮಾಡಿದಂತೆ ಇನ್ನು ಮುಂದೆಯೂ ಭೀಮಸೇನನು ಚೆಲ್ಲಾಟವಾಡುತ್ತಾ ಸುಂದರವಾದ ಬಾಳೆಯ ವನವನ್ನು ಧ್ವಂಸಮಾಡುತ್ತಾ ಹೋದರೆ ಶಾಪಕ್ಕೆ ಗುರಿಯಾಗುತ್ತಾನೆ ಅಥವಾ ಯಕ್ಷ-ಗಂಧರ್ವರೊಡನೆ ಯುದ್ಧದಲ್ಲಿ ಪರಾಭವವನ್ನು ಹೊಂದುತ್ತಾನೆ'–ಎಂಬುದಾಗಿ ಬಾಳೆಯಗಿಡಗಳ ಮಧ್ಯದಲ್ಲಿ ಆಕಳಿಸುತ್ತಾ ಕುಳಿತಿದ್ದ ಹನುಮಂತನು ನಿಶ್ಚಯಿಸಿದನು. ನಿದ್ರಾವಶನಾಗಿದ್ದ ಹನುಮಂತನು ಕ್ಷಣ-ಕ್ಷಣಕ್ಕೂ ಆಕಳಿಸುತ್ತಾ ಇಂದ್ರಧ್ವಜಕ್ಕೆ ಸಮಾನವಾಗಿದ್ದ ತನ್ನ ಬಾಲವನ್ನೊಮ್ಮೆ ಮೇಲೆತ್ತಿ ಪರ್ವತದ ಮೇಲೆ ಅಪ್ಪಳಿಸಿದನು. ಹೀಗೆ ಅಪ್ಪಳಿಸಿದುದರಿಂದ ಉಂಟಾದ ಘೋರನಿನಾದವು ಸಿಡಿಲಿನ ಶಬ್ದವನ್ನು ಅನುಕರಿಸಿತು. ಪರ್ವತದ ತಪ್ಪಲಲ್ಲಿದ್ದ ಗುಹೆಗಳಲ್ಲಿ ಗೂಳಿಯ ಗುಟುರೆಯಂತೆ ಆ ಶಬ್ದದ ಪ್ರತಿಧ್ವನಿಯುಂಟಾಯಿತು. ಲಾಂಗೂಲದ ಪ್ರಹಾರದಿಂದಾಗಿ ಪರ್ವತದ ಶಿಖರವು ಕಂಪಿಸಿತು. ಮದಿಸಿದ ಆನೆಗಳ ನಿನಾದವನ್ನು ಮೀರಿಸಿದ್ದ ಲಾಂಗೂಲಪ್ರಹಾರಶಬ್ದವು ಗಂಧಮಾದನಪರ್ವತವೆಲ್ಲವನ್ನೂ ವ್ಯಾಪಿಸಿತು.

ಈ ಘೋರಗನಿನಾದವನ್ನು ಕೇಳಿ ಭೀಮನು ರೋಮಾಂಚಿತನಾದನು. ಆ ಘೋರಧ್ವನಿಯು ಎಲ್ಲಿಂದ ಬಂತೆಂಬುದನ್ನು ಆ ಬಾಳೆಯ ವನದಲ್ಲಿ ಹುಡುಕತೊಡಗಿದನು. ಎತ್ತರವಾದ ಪ್ರದೇಶದಲ್ಲಿ ಬಂಡೆಯ ಮೇಲೆ ಕಪಿಗಳ ನಾಯಕನಾದ ಹನುಮಂತನು ಕುಳಿತಿರುವುದನ್ನು ಭೀಮಸೇನನು ಕಂಡನು. ಮಿಂಚಿನಂತೆ ಮಹಾತೇಜಸ್ವಿಯಾಗಿದ್ದ ಹನುಮಂತನನ್ನು ದಿಟ್ಟಿಸಿ ನೋಡಲೂ

ಅವನಿಗೆ ಸಾಧ್ಯವಾಗಲಿಲ್ಲ. ಹನುಮಂತನು ವಿದ್ಯುತ್ತಿನಂತೆ ಅಪಾರವಾದ ತೇಜಸ್ಸಿನಿಂದ ಕೂಡಿದ್ದನಲ್ಲದೇ–ಅವನು ಮಿಂಚಿನ ಬಣ್ಣದವನೂ ಆಗಿದ್ದನು. ಅವನ ಧ್ವನಿಯೂ ಮಿಂಚಿನ ಜೊತೆಯಲ್ಲಿ ಮೇಘದಿಂದ ಹೊರಬರುವ ಸಿಡಿಲಿನಂತಿದ್ದಿತು. ಅವನು ಮಿಂಚಿನಂತೆಯೇ ಬಹುಶೀಘ್ರವಾಗಿ ಒಂದೆಡೆಯಿಂದ ಮತ್ತೊಂದೆಡೆಗೆ ಹೋಗುವ ಸಾಮರ್ಥ್ಯವನ್ನೂ ಪಡೆದಿದ್ದನು.

ಹನುಮಂತನು ಎರಡು ಭುಜಗಳ ಮೇಲೂ ತನ್ನ ತಲೆಯನ್ನಿಟ್ಟುಕೊಂಡು ಕುಳಿತಿದ್ದನು. ಅವನ ಭುಜಗಳೆರಡೂ ದಪ್ಪವಾಗಿದ್ದು ಸೊಂಟವು ಕೃಶವಾಗಿದ್ದಿತು. ಅವನ ಎತ್ತರಕ್ಕೆ ಎರಡರಷ್ಟು ಎತ್ತರವಾಗಿ ಅವನ ಬಾಲವಿದ್ದಿತು. ಬಾಲದಲ್ಲಿ ನೀಳವಾದ ಕೂದಲುಗಳಿದ್ದುವು. ನಿಮಿರಿ ನಿಂತಿದ್ದ ಆ ಬಾಲವು ಇಂದ್ರನ ಧ್ವಜದಂತೆ ಕಾಣುತ್ತಿದ್ದಿತು. ಹನುಮಂತನ ತುಟಿಗಳು ಚಿಕ್ಕದಾಗಿದ್ದುವು. ಹುಬ್ಬುಗಳು ಪ್ರತಿಕ್ಷಣದಲ್ಲಿಯೂ ಅದುರುತ್ತಿದ್ದುವು. ಅವನ ಕೋರೆ-ದಾಡೆಗಳು ಹೊರಚಾಚಿದ್ದು, ಬಹುತೀಕ್ಷ್ಣವಾಗಿಯೂ ಇದ್ದುವು. ಅವನ ಮುಖಬಿಂಬವು ಚಂದ್ರಬಿಂಬದಂತೆ ಪ್ರಕಾಶಿಸುತ್ತಿದ್ದಿತು. ಬಾಯಲ್ಲಿ ಪ್ರಕಾಶಮಾನವಾದ, ಬಿಳುಪಾದ, ದಂತಪಙ್ಕ್ತಿಯಿದ್ದಿತು. ಅವನ ಕೂದಲುಗಳು ಅಶೋಕಪುಷ್ಪಗುಚ್ಛದಂತೆ ಗುಂಪುಗುಂಪಾಗಿದ್ದುವು. ಸ್ವರ್ಣಮಯವಾದ ಆ ಬಾಳೆಯ ವನದ ಮಧ್ಯದಲ್ಲಿ ಕುಳಿತು ಯಜ್ಞೇಶ್ವರನೋಪಾದಿಯಲ್ಲಿ ತನ್ನ ಸುತ್ತಲೂ ಪ್ರಭೆಯನ್ನು ಚೆಲ್ಲುತ್ತಿದ್ದನು. ಪಿಂಗಳ ವಾದ ವರ್ಣದಿಂದ ಕೂಡಿದ್ದ ಕಣ್ಣುಗಳಿಂದ ತನ್ನನ್ನೇ ನಿರೀಕ್ಷಿಸುತ್ತಾ ಕುಳಿತಿದ್ದ ಶತ್ರುಸಂಹಾರಕನಾದ ಹನುಮಂತನನ್ನು ಭೀಮಸೇನನು ಸಂದರ್ಶಿಸಿದನು.

ಹಿಮಾಲಯಪರ್ವತಕ್ಕೆ ಸಮಾನವಾದ ಬೃಹದಾಕಾರದ ತನ್ನ ಶರೀರದಿಂದ ಸ್ವರ್ಗಕ್ಕೆ ಹೋಗುವ ದಾರಿಗೆ ತಡೆಮಾಡಿ ಹನುಮಂತನು ಕುಳಿತಿದ್ದನು. ಏಕಾಕಿಯಾಗಿ ಆ ಮಹಾರಣ್ಯದಲ್ಲಿ ಕುಳಿತಿದ್ದ ಹನುಮಂತನನ್ನು ದೀರ್ಘಬಾಹುವಾದ, ಮಹಾಬಲಶಾಲಿಯಾದ, ಭಯವೆಂಬುದನ್ನೇ ಅರಿಯದ ಭೀಮಸೇನನು ಸಮೀಪಿಸಿ ಸಿಡಿಲಿನಂತಹ ಘೋರನಿನಾದವನ್ನು ಮಾಡಿದನು.

ಅವನ ಆ ನಿನಾದವನ್ನು ಕೇಳಿ ಅಲ್ಲಿದ್ದ ಪ್ರಾಣಿಗಳೆಲ್ಲವೂ ಭಯಗೊಂಡುವು. ಆದರೆ ಹನುಮಂತನು ಮಾತ್ರ ಅವನು ಮಾಡಿದ ಘೋರನಿನಾದವನ್ನು ಸ್ವಲ್ಪವಾದರೂ ಲೆಕ್ಕಿಸದೇ ಮುಚ್ಚಿದ್ದ ತನ್ನೆರಡು ಕಣ್ಣುಗಳನ್ನು ಸ್ವಲ್ಪ ಮಾತ್ರ ತೆರೆದು ಓರೆಗಣ್ಣಿನಿಂದಲೇ ಭೀಮನನ್ನು ಕುತ್ಸಿತದೃಷ್ಟಿಯಿಂದ ನೋಡಿ ಮುಗುಳ್ನಗೆಯನ್ನು ನಕ್ಕು ಹೇಳಿದನು :

**ಕಿಮರ್ಥಂ ಸರುಜಸ್ತೇಽಹಂ ಸುಖಸುಪ್ತಃ ಪ್ರಬೋಧಿತಃ ।**
**ನನು ನಾಮ ತ್ವಯಾ ಕಾರ್ಯಾ ದಯಾ ಭೂತೇಷು ಜಾನತಾ ॥೮೭॥**

**ವಯಂ ಧರ್ಮಂ ನ ಜಾನೀಮಸ್ತಿರ್ಯಗ್ಯೋನಿಮುಪಾಶ್ರಿತಾಃ ।**
**ನರಾಸ್ತು ಬುದ್ಧಿಸಮ್ಪನ್ನಾ ದಯಾಂ ಕುರ್ವನ್ತಿ ಜನ್ತುಷು ॥೮೮॥**

**ಕ್ರೂರೇಷು ಕರ್ಮಸು ಕಥಂ ದೇಹವಾಕ್ಚಿತ್ತದೂಷಿಷು ।**
**ಧರ್ಮಘಾತಿಷು ಸಜ್ಜನ್ತೇ ಬುದ್ಧಿಮನ್ತೋ ಭವದ್ವಿಧಾಃ ॥೮೯॥**

**ನ ತ್ವಂ ಧರ್ಮಂ ವಿಜಾನಾಸಿ ಬುಧಾ ನೋಪಾಸಿತಾಸ್ತ್ವಯಾ ।**
**ಅಲ್ಪಬುದ್ಧಿತಯಾ ಬಾಲ್ಯಾದುತ್ಸಾದಯಸಿ ಯನ್ಮೃಗಾನ್ ॥೯೦॥**

"ಅಸ್ವಸ್ಥನಾದ ನಾನು ನನ್ನ ಪಾಡಿಗೆ ನಿದ್ದೆಮಾಡುತ್ತಿದ್ದೆನು. ನನ್ನನ್ನೇಕೆ ಎಚ್ಚರಗೊಳಿಸಿದೆ? ವಿವೇಚನಾಪರನಾದ ನೀನು ಪ್ರಾಣಿಗಳ ವಿಷಯದಲ್ಲಿ ದಯೆಯನ್ನು ತೋರಬೇಕಲ್ಲವೇ? ತಿರ್ಯಕ್ಪ್ರಾಣಿಗಳಾದ ನಮಗೆ ಧರ್ಮ-ದಯೆ ಇವುಗಳ ವಿಷಯವಾಗಿ ಏನೂ ತಿಳಿಯದು. ಬುದ್ಧಿಸಂಪನ್ನರಾದ ಮಾನವರು ಮಾತ್ರ ಪ್ರಾಣಿಗಳ ವಿಷಯದಲ್ಲಿ ದಯೆಯನ್ನು ತೋರುತ್ತಾರೆ ; ತೋರಲೂಬೇಕು. ಹೀಗಿರುವಾಗ ದೇಹ-ಮನಸ್ಸು-ಮಾತು–ಇವುಗಳನ್ನು ದೂಷಣಗೊಳಿಸುವ (ಕೆಡಿಸುವ) ಧರ್ಮಘಾತಿಯಾದ ಕ್ರೂರಕರ್ಮಗಳಲ್ಲಿ ನಿನ್ನಂತಹವನು ಪ್ರವರ್ತಿಸುವುದು ಯೋಗ್ಯವೇ? ಇದನ್ನು ನೋಡಿದರೆ ನಿನಗೆ ಧರ್ಮದ ಸ್ವರೂಪವೇ ತಿಳಿದಿಲ್ಲವೆಂಬುದೂ ವೃದ್ಧರನ್ನು ನೀನು ಸೇವಿಸಿಲ್ಲವೆಂಬುದೂ ಸ್ಪಷ್ಟವಾಗುತ್ತದೆ. ಆದುದರಿಂದಲೇ ನೀನು ಅಲ್ಪಬುದ್ಧಿಯಿಂದಲೂ, ಬಾಲ್ಯದಿಂದಲೂ-ಅಲ್ಪಬಲವುಳ್ಳ ಈ ಪ್ರಾಣಿಗಳೆಲ್ಲವನ್ನೂ ಧ್ವಂಸಮಾಡುತ್ತಿರುವೆ. ಅದು ಹಾಗಿರಲಿ; ನೀನಾರೆಂಬುದನ್ನಾದರೂ ಹೇಳು. ಮನುಷ್ಯರಹಿತವಾದ ಈ ಕಾಡಿಗೇಕೆ ಬಂದಿರುವೆ? ಮುಂದೆಲ್ಲಿಗೆ ಹೋಗ

ಬೇಕೆಂದು ಇಚ್ಛಿಸಿರುವೆ? ಬಹಳ ಶ್ರಮಪಟ್ಟು ಇಲ್ಲಿಯವರೆಗೆ ಬಂದಿರುವಂತೆ ಮುಂದೆಯೂ ಪ್ರಯಾಣಮಾಡುವ ಸಾಧ್ಯತೆಯಿಲ್ಲ.

ಇಲ್ಲಿಂದ ಮುಂದೆ ಪ್ರಯಾಣಮಾಡಲು ಈ ಪರ್ವತವು ಅಗಮ್ಯವಾಗಿದೆ. ದುರಾರೋಹವಾಗಿದೆ. ಆರೋಹಣಮಾಡಲು ಸಾಧ್ಯವಾಗದು. ಈ ಪರ್ವತವನ್ನು ಆರೋಹಣಮಾಡಲು ಸಿದ್ಧಗತಿಯನ್ನುಳಿದು ಬೇರೆಯ ಮಾರ್ಗವೇ ಇಲ್ಲ. ಇದು ದೇವಲೋಕದ ಮಾರ್ಗವಾಗಿರುವುದರಿಂದ ಮನುಷ್ಯರು ಈ ಮಾರ್ಗವಾಗಿ ಪ್ರಯಾಣಮಾಡುವ ಸಾಧ್ಯತೆಯಿಲ್ಲ. ಮಾನವರಿಗೆ ಈ ಮಾರ್ಗವು ಅಗಮ್ಯವಾದುದು. ವೀರಶ್ರೇಷ್ಠನೇ! ನಿನ್ನ ಮೇಲಿನ ಕರುಣೆಯಿಂದಾಗಿ ನಾನು ನಿನ್ನನ್ನು ಮುಂದೆ ಹೋಗದಂತೆ ನಿರೋಧಿಸುತ್ತಿದ್ದೇನೆ. ನನ್ನ ಮಾತನ್ನು ಕೇಳು. ಮುಂದೆ ಪ್ರಯಾಣಮಾಡಲು ನಿನ್ನಿಂದ ಖಂಡಿತ ವಾಗಿಯೂ ಸಾಧ್ಯವಾಗುವುದಿಲ್ಲ. ನನ್ನ ಮಾತಿನಲ್ಲಿ ವಿಶ್ವಾಸವನ್ನಿಡು.

ಮನುಜರ್ಷಭನೇ! ನಿನಗೆ ಸರ್ವಪ್ರಕಾರದಿಂದಲೂ ಸುಸ್ವಾಗತವನ್ನು ನೀಡುತ್ತೇನೆ. ಅತಿಥಿಯಾದ ನಿನಗೆ ನಾನು ಕೊಡಲಿರುವ ಅಮೃತಕಲ್ಪವಾದ ಕಂದ-ಮೂಲಗಳನ್ನೂ, ಫಲಗಳನ್ನೂ ಸ್ವೀಕರಿಸಿ ಉಪಭುಂಜಿಸಿ ಹಿಂದಿರುಗುವವನಾಗು. ನರಪುಂಗವನೇ! ನನ್ನ ಈ ಮಾತುಗಳನ್ನು ನೀನು ಅಂಗೀಕಾರಯೋಗ್ಯವೆಂದೂ, ಹಿತಕವೆಂದೂ ಪರಿಗಣಿಸು. ವ್ಯರ್ಥವಾಗಿ ಪ್ರಾಣಾಪಾಯಕ್ಕೀಡಾಗಬೇಡ."

೧೪೬ನೆಯ ಅಧ್ಯಾಯವು ಮುಗಿಯಿತು.

೧೪೭ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಹನುಮಂತ ಮತ್ತು ಭೀಮಸೇನರ ಸಂವಾದ

ಧೀಮಂತನಾದ ಕಪೀಶ್ವರನು ಹೇಳಿದ ಮಾತುಗಳನ್ನು ಕೇಳಿ ಶತ್ರುನಿಷೂದನನಾದ ಮಹಾಪರಾಕ್ರಮಿಯಾದ ಭೀಮಸೇನನು ವಾನರಶ್ರೇಷ್ಠ ನನ್ನು ಪ್ರಶ್ನಿಸಿದನು :

"ನೀನಾರು? ಯಾವ ಕಾರಣದಿಂದಾಗಿ ನೀನು ಈ ಕಪಿಯ ರೂಪವನ್ನು ತಳೆದಿರುವೆ? 'ನಾನಾರೆಂಬುದನ್ನು ಕೇಳಲು ನೀನಾರು?' ಎಂದೂ

ನೀನು ಪ್ರಶ್ನಿಸಬಹುದು? ನೀನು ಪ್ರಶ್ನಿಸುವ ಮೊದಲೇ ನಾನಾರೆಂಬುದನ್ನು ಹೇಳಿಬಿಡುತ್ತೇನೆ. ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರೆಂಬ ನಾಲ್ಕು ವರ್ಣ ಗಳಲ್ಲಿ ಬ್ರಾಹ್ಮಣರನ್ನು ಬಿಟ್ಟು ಎರಡನೆಯ ವರ್ಣವಾದ ಕ್ಷತ್ರಿಯವರ್ಣಕ್ಕೆ ಸೇರಿರುವ ನಾನು ನಿನ್ನನ್ನು ಪ್ರಶ್ನಿಸುತ್ತಿದ್ದೇನೆ. ಸೋಮವಂಶದಲ್ಲಿ ಕೌರವ ಕುಲದಲ್ಲಿ ಹುಟ್ಟಿದ್ದೇನೆ. ವಾಯುವಿನ ಅನುಗ್ರಹದಿಂದಾಗಿ ಕುಂತಿಯ ಗರ್ಭಾಂಬುಧಿಯಲ್ಲಿ ನಾನು ಜನಿಸಿರುವೆನು. ನಾನು ಪಾಂಡುರಾಜನ ಎರಡ ನೆಯ ಮಗನು. ನನ್ನನ್ನು ಭೀಮಸೇನನೆಂದು ಕರೆಯುತ್ತಾರೆ."

ಕುರುವೀರನ ಮಾತುಗಳನ್ನು ಕೇಳಿ ಹನುಮಂತನು ನಸುನಕ್ಕು ವಾಯುಪುತ್ರನಾದ ಭೀಮಸೇನನಿಗೆ ಹೇಳಿದನು :

"ಭೀಮಸೇನ! ನಾನೊಂದು ಕಪಿ. ಕಪಿಯ ರೂಪವನ್ನು ಧರಿಸಿರು ವವನಲ್ಲ. ನೀನು ಹೋಗಬೇಕೆಂದಿರುವ ದಾರಿಯಲ್ಲಿ ನಿನ್ನನ್ನು ಮಾತ್ರ ಖಂಡಿತವಾಗಿಯೂ ಬಿಡುವುದಿಲ್ಲ. ನೀನು ಬಂದ ದಾರಿಯನ್ನು ಹಿಡಿದು ಹೊರಟುಹೋಗು. ನನ್ನ ಮಾತನ್ನು ಕೇಳದೆ ಮುಂದೆ ಹೋದರೆ ಅಪಾಯಕ್ಕೆ ಗುರಿಯಾಗುವೆ. ನಿನಗೆ ಒಳ್ಳೆಯದನ್ನು ಮಾಡುವ ಆಶಯದಿಂದಲೇ ಹೇಳುತ್ತಿರುವೆನು."

"ನನಗೆ ಸಂಭವಿಸಬಹುದಾದ ಅಪಾಯ ಮತ್ತು ಅದರ ನಿವಾರಣೆಗೆ ಉಪಾಯ–ಈ ವಿಷಯವಾಗಿ ನಿನ್ನನ್ನು ಪ್ರಶ್ನಿಸುತ್ತಿಲ್ಲ. ವಾನರನೇ! ಹಾದಿ ಯನ್ನು ಬಿಡುವೆಯೋ ಇಲ್ಲವೋ? ಇಷ್ಟು ಮಾತ್ರ ಹೇಳು. ಮುಂದೇನಾಗು ವುದೆಂಬುದನ್ನು ನೀನು ಹೇಳುವ ಕಾರಣವಿಲ್ಲ. ಯಾವ ವಿಧವಾದ ಅಪಾಯ ವನ್ನೂ ಎದುರಿಸುವ ಸಾಮರ್ಥ್ಯದ ನನಗಿರುವುದು. ನನಗೆ ವೇಳೆಯಾಯಿತು. ನಿನ್ನೊಡನೆ ಮಾತನಾಡುತ್ತಾ ನಿಲ್ಲುವಷ್ಟು ಸಮಯವೂ ನನಗಿಲ್ಲ. ಅವಸರದ ಕಾರ್ಯವಿರುವುದು. ಬೇಗೇಳು, ಕಪಿಯೇ! ಸರಿದು ನಿಲ್ಲು. ಹಾದಿಯನ್ನು ಬಿಡು. ವೃಥಾ ನನ್ನಿಂದ ಪೆಟ್ಟು ತಿಂದು ಅನಂತರದಲ್ಲಿ ವ್ಯಥಿತನಾಗಬೇಡ."

"ನೀನು ನನಗೆ ಪೆಟ್ಟುಕೊಡುವ ಕಾರಣವೂ ಇಲ್ಲ. ಅದರಿಂದ ನಾನು ವ್ಯಥೆಪಡಬೇಕಾಗಿಯೂ ಇಲ್ಲ, ಭೀಮಸೇನ! ನನ್ನನ್ನು ನೋಡಿ ದರೇ ನಿನಗೆ ಅರ್ಥವಾಗುವುದಿಲ್ಲವೇ! ನಾನು ರೋಗದಿಂದ ನರಳುತ್ತಿದ್ದೇನೆ.

ಇಲ್ಲಿಂದೇಳಲೂ ಸಹ ನನ್ನಿಂದ ಸಾಧ್ಯವಿಲ್ಲ. ನೀನು ಈ ಮಾರ್ಗದಲ್ಲಿಯೇ ಮುಂದಕ್ಕೆ ಹೋಗಿಯೇ ತೀರಬೇಕೆನ್ನುವುದಾಗಿದ್ದರೆ ನನ್ನ ಮೇಲೆ ಹಾರಿ ಹೋಗಬಹುದು. ನನ್ನದೇನೂ ಅಭ್ಯಂತರವಿಲ್ಲ."



**ನಿರ್ಗುಣಃ ಪರಮಾತ್ಮಾ ತು ದೇಹಂ ವ್ಯಾಪ್ಯಾವತಿಷ್ಠತೇ ।**
**ತಮಹಂ ಜ್ಞಾನವಿಜ್ಞೇಯಂ ನಾವಮನ್ಯೇ ನ ಲಙ್ಘಯೇ ॥೮॥**

"ಕಪೀಶ್ವರನೇ!

ಹೇಯಗುಣರಹಿತನಾದ, ಸರ್ವಗುಣೋಪಪನ್ನನಾದ ಪರಮಾತ್ಮನು ಶರೀರವನ್ನು ವ್ಯಾಪಿಸಿ ಸಕಲಪ್ರಾಣಿಗಳ ಹೃದಯಾಂತರಾಳದಲ್ಲಿಯೂ ಸ್ಥಾನ

ಮಾಡಿಕೊಂಡು ಕುಳಿತಿರುವನು. ಕೇವಲ ಜ್ಞಾನದಿಂದಲೇ ಗೋಚರನಾಗ ತಕ್ಕ, ತರ್ಕಕ್ಕೆ ಅತೀತನಾದ ಪರಮಾತ್ಮನನ್ನು ನಾನು ಅವಮಾನಪಡಿಸ ಲಾರೆನು. ನಿನ್ನ ಮೇಲೆ ಹಾರುವುದರಿಂದ ನಾನು ನಿಜವಾಗಿ ಪರಮಾತ್ಮನ ಮೇಲೆಯೇ ಹಾರಿದಂತಾಗುತ್ತದೆ. ಈ ಒಂದು ಕಾರಣದಿಂದಾಗಿ ನಾನು ನಿನ್ನ ಮೇಲೆ ಹಾರಿಹೋಗಲು ಹಿಂಜರಿಯುತ್ತೇನೆ. ಒಂದು ವೇಳೆ ನಾನು ವೇದ-ವೇದಾಂಗಗಳನ್ನು ಅಭ್ಯಸಿಸದೇ, ವೇದ-ವೇದಾಂತಾಧ್ಯಯನದಿಂದಲೇ ಪ್ರಾಪ್ತ ವಾಗುವ **'ಸರ್ವಂ ಖಲ್ವಿದಂ ಬ್ರಹ್ಮ'– 'ಸರ್ವಂ ವಿಷ್ಣುಮಯಂ ಜಗತ್'** ಎಂಬ ನಿಶ್ಚಿತಜ್ಞಾನವನ್ನು ಪಡೆಯದವನಾಗಿದ್ದರೆ–ನಿನ್ನ ಮೇಲೆ ಮಾತ್ರವಲ್ಲ– ಮಹಾನುಭಾವನಾದ ಹನುಮಂತನು ಸಮುದ್ರವನ್ನು ಲಂಘನ ಮಾಡಿ ದಂತೆ–ಈ ಪರ್ವತದ ಮೇಲೂ ಹಾರಿಹೋಗುತ್ತಿದ್ದೆನು, ತಿಳಿಯಿತೇ?"

ಹನುಮಂತನು ಓರೆಗಣ್ಣಿನಿಂದೊಮ್ಮೆ ಭೀಮಸೇನನನ್ನು ನೋಡಿ ನಸು ನಕ್ಕು ಪ್ರಶ್ನಿಸಿದನು : "ನಿನಗೆ ಈ ಪರ್ವತದ ಮೇಲೂ ಹಾರಿಹೋಗುವ ಸಾಮರ್ಥ್ಯವಿರುವುದೇ? ಅದು ಸರಿ. ನೀನು 'ಹನುಮಂತನಂತೆ' 'ಹನು ಮಂತನು ಸಮುದ್ರವನ್ನು ಹಾರಿದಂತೆ' ಎಂದು ಏನೋ ಹೇಳಿದೆಯಲ್ಲ; ರಾಜಕುಮಾರ! ಆ ಹನುಮಂತನಾರು? ಎಲ್ಲಿದ್ದಾನೆ? ಅವನ ಪೂರ್ವೇತಿ ಹಾಸವೇನು? ನನ್ನ ಈ ಪ್ರಶ್ನೆಗಳಿಗೆ ಉತ್ತರವನ್ನು ಹೇಳಲಡ್ಡಿಯಿಲ್ಲದಿದ್ದರೆ ಹೇಳು."

**ಮಮ ಭ್ರಾತಾ ಗುಣಶ್ಲಾಘ್ಯೋ ಬುದ್ಧಿಸತ್ತ್ವಬಲಾನ್ವಿತಃ ।**
**ರಾಮಾಯಣೇಽತಿವಿಖ್ಯಾತಃಶ್ರೀಮಾನ್ವಾನರಪುಙ್ಗವಃ ॥೧೧॥**

**ರಾಮಪತ್ನಿಕೃತೇ ಯೇನ ಶತಯೋಜನವಿಸ್ತೃತಃ ।**
**ಸಾಗರಃ ಪ್ಲವಗೇನ್ದ್ರೇಣ ಕ್ರಮೇಣೈಕೇನ ಲಙ್ಘಿತಃ ॥೧೨॥**

**ಸ ಮೇ ಭ್ರಾತಾ ಮಹಾವೀರ್ಯಸ್ತುಲ್ಯೋಽಹಂ ತಸ್ಯ ತೇಜಸಾ ।**
**ಬಲೇ ಪರಾಕ್ರಮೇ ಯುದ್ಧೇ ಶಕ್ತೋಽಹಂ ತವ ನಿಗ್ರಹೇ ॥೧೩॥**

**ಉತ್ತಿಷ್ಠ ದೇಹಿ ಮೇ ಮಾರ್ಗಂ ಪಶ್ಯ ಮೇ ಚಾದ್ಯ ಪೌರುಷಮ್ ।**
**ಮಚ್ಛಾಸನಮಕುರ್ವಾಣಂ ತ್ವಾಂ ವಾ ನೇಷ್ಯೇ ಯಮಕ್ಷಯಮ್ ॥೧೪॥**

"ಕಪೀಶ್ವರನೇ! ಆ ಹನುಮಂತನು ನನ್ನಣ್ಣನು, ತಿಳಿಯಿತೇ? ಅವನು

ಮಹಾಪರಾಕ್ರಮಿಯು. ಬುದ್ಧಿ-ಸತ್ತ್ವ-ಬಲಗಳಿಂದ ಕೂಡಿದ್ದವನು. ಸುಪ್ರಸಿದ್ಧನಾದ ಆ ವಾನರಶ್ರೇಷ್ಠನು ರಾಮಾಯಣದಲ್ಲಿ ವಿಖ್ಯಾತನಾಗಿದ್ದಾನೆ. ಶ್ರೀರಾಮನ ಪತ್ನಿಯಾದ ಸೀತಾದೇವಿಯನ್ನು ಹುಡುಕುವ ಸಲುವಾಗಿ ಒಂದೇ ನೆಗೆತದಿಂದಲೇ ಶತಯೋಜನವಿಸ್ತೀರ್ಣವಾದ ಮಹೋದಧಿಯನ್ನು ದಾಟಿದನು. ಅಂತಹ ಅಮಿತಪರಾಕ್ರಮಿಯಾದ ಹನುಮಂತನ ತಮ್ಮನು ನಾನು. ವೀರ್ಯದಲ್ಲಿ, ತೇಜಸ್ಸಿನಲ್ಲಿ, ಶತ್ರುವಿನ ದರ್ಪವನ್ನು ಮುರಿಯುವುದರಲ್ಲಿ–ನಾನು ನನ್ನಣ್ಣನಿಗೆ ಸಮಾನನೆನಿಸಿದ್ದೇನೆ. ನಿನ್ನನ್ನೂ ನಾನು ನಿಗ್ರಹಿಸಬಲ್ಲೆನು. (ಆದರೆ ವೃದ್ಧನಾಗಿರುವುದರಿಂದಲೂ–ರೋಗಗ್ರಸ್ತನಂತೆ ಕಾಣುತ್ತಿರುವುದರಿಂದಲೂ ನಿನ್ನ ಮೇಲೆ ಕೈಮಾಡಲಾರೆನು.) ಅತ್ತ ಸರಿದು ಕುಳಿತುಕೋ ; ಹಾದಿಯನ್ನು ಬಿಡು. ಇಲ್ಲದಿದ್ದರೆ ನನ್ನ ಪರಾಕ್ರಮವೇನೆಂಬುದನ್ನು ಅರಿವು ಮಾಡಿಕೊಡುವೆನು. ನಾನು ಹೇಳಿದಂತೆ ನೀನು ಕೇಳದಿದ್ದರೆ, ನನಗೆ ಹಾದಿಯನ್ನು ಬಿಟ್ಟುಕೊಡದಿದ್ದರೆ–ನಿನ್ನನ್ನು ನಿಮಿಷಮಾತ್ರದಲ್ಲಿ ಯಮನ ಆತಿಥ್ಯವನ್ನು ಸ್ವೀಕರಿಸಲು ಕಳುಹಿಸಿಕೊಡುತ್ತೇನೆ.”

ಜನಮೇಜಯ! ಭೀಮಸೇನನ ಆ ಮಾತುಗಳನ್ನು ಕೇಳಿದ ಹನುಮಂತನು–ತನ್ನ ತಮ್ಮನು ಬಾಹುಬಲದಿಂದ ದರ್ಪಿತನಾಗಿರುವನೆಂದು ತಿಳಿದು, ಮನಸ್ಸಿನಲ್ಲಿ ಭೀಮಸೇನನ ಪರಾಕ್ರಮದ ವಿಷಯವಾಗಿ ತಾತ್ಸಾರವನ್ನು ತಾಳಿ ಹೇಳಿದನು :

“ರಾಜಕುಮಾರನೇ! ಪ್ರಸನ್ನನಾಗು, ಕುಪಿತನಾಗಬೇಡ. ನನಗೆ ಪ್ರಾಪ್ತವಾಗಿರುವ ವೃದ್ಧಾಪ್ಯದ ಕಾರಣದಿಂದ ನಾನು ಮೇಲೆದ್ದು ಹೋಗಲು ಖಂಡಿತವಾಗಿಯೂ ಅಸಮರ್ಥನಾಗಿದ್ದೇನೆ. ವೃದ್ಧನಾಗಿರುವ ನನ್ನ ಮೇಲೆ ಕರುಣೆಯನ್ನು ತೋರಿ ನಿನ್ನ ದಾರಿಗಡ್ಡವಾಗಿರುವ ಈ ಬಾಲವನ್ನು ಬದಿಗೊತ್ತಿ ಮುಂದೆ ಪ್ರಯಾಣಮಾಡು.”

ಹನುಮಂತನ ಆ ಮಾತನ್ನು ಕೇಳಿ, ಕಪೀಶ್ವರನು ನಿರ್ವೀರ್ಯನೂ, ಶಕ್ತಿರಹಿತನೂ ಆಗಿರುವನೆಂದೇ ಭೀಮಸೇನನು ಭಾವಿಸಿದನು. ಭುಜಬಲ-ಪರಾಕ್ರಮಗಳಿಂದ ಕೊಬ್ಬಿದ್ದ ಭೀಮಸೇನನೊಮ್ಮೆ ಯೋಚಿಸಿದನು :

‘ಸರಿದು ನಿಲ್ಲೆಂದರೆ ಬಾಲವನ್ನೆತ್ತಿಡೆಂದು ಹೇಳುತ್ತಿರುವನಲ್ಲ! ಈ

ದುರ್ಬಲಕಪಿಯ ಬಾಲವನ್ನೆತ್ತಿ ಗರ-ಗರನೆ ತಿರುಗಿಸಿ ನೆಲದ ಮೇಲಪ್ಪಳಿಸಿ ಇವನನ್ನು ಯಮಾಲಯಕ್ಕೆ ಕಳುಹಿಸಿಬಿಡಲೇ?' ಹೀಗೆ ಒಮ್ಮೆ ಯೋಚಿಸಿ ಮರುಕ್ಷಣದಲ್ಲಿಯೇ–'ವೃದ್ಧಕಪಿಯು ಪ್ರಾರ್ಥಿಸಿದಂತೆಯೇ ಎಡಗೈಯಿಂದ ಈ ಬಾಲವನ್ನೆತ್ತಿ ಬಿಸಾಡಬಾರದೇಕೆ?'–ಎಂದು ಯೋಚಿಸಿ ನಸುನಗುತ್ತಾ ಹನುಮಂತನ ಬಾಲವನ್ನು ಎಡಗೈಯಿಂದ ಎತ್ತಲು ಯತ್ನಿಸಿದನು. ಆದರೆ ಮಹಾಕಪಿಯ ಪುಚ್ಛವನ್ನು ಅಲುಗಾಡಿಸಲೂ ಭೀಮನ ಎಡಗೈಯಿಂದ ಸಾಧ್ಯವಾಗಲಿಲ್ಲ. ಇಂದ್ರನ ಧ್ವಜದಂತಿದ್ದ ಆ ಪುಚ್ಛವನ್ನು ಭೀಮನು ತನ್ನ ಎರಡೂ ಕೈಗಳಿಂದಲೂ ಎತ್ತಲು ಯತ್ನಿಸಿದನು. ಮುಕ್ಕರಿದು ಎತ್ತಲು ಹೋದರೂ ಹನುಮಂತನ ಬಾಲವನ್ನು ಭೀಮನಿಗೆ ಅಲ್ಲಾಡಿಸಲು ಕೂಡ ಸಾಧ್ಯವಾಗಲಿಲ್ಲ. ಭೀಮನ ಹುಬ್ಬುಗಳು ಮೇಲಕ್ಕೆದ್ದುವು. ಹಣ್ಣುಗಳು ತಿರುಗಿದುವು. ಬಲವನ್ನೆಲ್ಲಾ ಪ್ರಯೋಗಿಸಿ ಎತ್ತಲು ಹೋದಾಗ ಭೀಮನ ಹುಬ್ಬುಗಳು ಗಂಟಿಕ್ಕಿದ್ದುವು. ಶರೀರವೆಲ್ಲವೂ ಬೆವರಿನಿಂದ ತೋಯ್ದು ಹೋಯಿತು. ಇಷ್ಟಾದರೂ ಆ ಬಾಲವನ್ನು ಅಲುಗಾಡಿಸಲೂ ಭೀಮನಿಂದ ಸಾಧ್ಯವಾಗಲಿಲ್ಲ. ಬಾಲವನ್ನೆತ್ತಲು ಮಾಡಿದ ಪ್ರಯತ್ನಗಳೆಲ್ಲವೂ ವಿಫಲ ವಾದನಂತರ ಭೀಮಸೇನನು ಕಪೀಶ್ವರನ ಎದುರಿನಲ್ಲಿ ನಾಚಿಕೆಯಿಂದ ತಲೆಬಾಗಿ ನಿಂತನು. ಕಪೀಶ್ವರನಾದ ಹನುಮಂತನಿಗೆ ಪ್ರಣಾಮಮಾಡಿ ಬದ್ಧಾಂಜಲಿಯಾಗಿ ನಿಂತು ಆಂಜನೇಯನಿಗೆ ಹೇಳಿದನು :

"ಕಪಿಶಾರ್ದೂಲನೇ! ಪ್ರಸನ್ನನಾಗು. ನಾನು ಹೇಳಿದ ದರ್ಪಯುಕ್ತ ವಾದ ದುರುಕ್ತಿಗಳನ್ನು ಕ್ಷಮಿಸಿಬಿಡು. ನೀನೇನು ಸಿದ್ಧನೇ? ದೇವನೇ? ಗಂಧರ್ವನೇ? ಗುಹ್ಯಕನೇ?–ನೀನಾರೆಂಬುದನ್ನು ತಿಳಿಯಲು ನಾನು ಬಹಳ ಕುತೂಹಲಿಯಾಗಿದ್ದೇನೆ.

ಪ್ರಸಕ್ತಸಮಯದಲ್ಲಿ ಕಪಿಯ ರೂಪವನ್ನು ತಾಳಿರುವ ನೀನಾರೆಂಬು ದನ್ನೂ, ನಿನ್ನ ಸ್ವರೂಪವೇನೆಂಬುದನ್ನೂ ನನಗೆ ಹೇಳಬಹುದಾಗಿದ್ದರೆ–ಇದು ರಹಸ್ಯವಿಷಯವಲ್ಲದಿದ್ದರೆ ಮತ್ತು ನಾನದನ್ನು ಕೇಳಬಹುದಾಗಿದ್ದರೆ–ದಯ ಮಾಡಿ ಹೇಳು. ನಾನು ನಿನ್ನ ಶಿಷ್ಯನಾಗಿ ಕೇಳುತ್ತಿದ್ದೇನೆ. ಮಹಾನು ಭಾವನೇ! ನಾನು ನಿನಗೆ ಶರಣಾಗಿದ್ದೇನೆ."

ಭೀಮಸೇನನ ಮಾತುಗಳನ್ನು ಕೇಳಿ ಹನುಮಂತನು ಉತ್ತರಿಸಿದನು :

**ಯತ್ತೇ ಮಮ ಪರಿಜ್ಞಾನೇ ಕೌತೂಹಲಮರಿಂದಮ ।**
**ತತ್ಸರ್ವಮಖಿಲೇನ ತ್ವಂ ಶೃಣು ಪಾಣ್ಡವನನ್ದನ ॥೨೬॥**

**ಅಹಂ ಕೇಸರಿಣಃ ಕ್ಷೇತ್ರೇ ವಾಯುನಾ ಜಗದಾಯುಷಾ ।**
**ಜಾತಃಕಮಲಪತ್ರಾಕ್ಷ ಹನೂಮಾನ್ನಾಮ ವಾನರಃ ॥೨೭॥**

**ಸೂರ್ಯಪುತ್ರಂ ಚ ಸುಗ್ರೀವಂ ಶಕ್ರಪುತ್ರಂ ಚ ವಾಲಿನಮ್ ।**
**ಸರ್ವೇ ವಾನರರಾಜಾನಸ್ತಥಾ ವಾನರಯೂಥಪಾಃ ॥೨೮॥**

**ಉಪತಸ್ಥುರ್ಮಹಾವೀರ್ಯಾ ಮಮ ಚಾಮಿತ್ರಕರ್ಷಣ ।**
**ಸುಗ್ರೀವೇಣಾಭವತ್ಪ್ರೀತಿರನಿಲಸ್ಯಾಗ್ನಿನಾ ಯಥಾ ॥೨೯॥**

"ಶತ್ರುನಿಷೂದನನೇ! ಭೀಮಸೇನ! ನಿನಗೆ ನನ್ನ ಸಂಬಂಧವಾದ ಯಾವ ವಿಷಯಗಳನ್ನು ಕೇಳಿ ತಿಳಿಯಬೇಕೆಂದು ಕುತೂಹಲವಿದೆಯೋ–ಆ ಸಕಲವಿಷಯಗಳನ್ನೂ ವಿವರವಾಗಿ ತಿಳಿಸುತ್ತೇನೆ. ಸಾವಧಾನದಿಂದ ಕೇಳು. ಪ್ರಪಂಚಕ್ಕೆ ಪ್ರಾಣರೂಪನಾದ ವಾಯುದೇವನಿಂದ 'ಕೇಸರಿ'ಯ ಕ್ಷೇತ್ರದಲ್ಲಿ (ಅಂಜನೆಯಲ್ಲಿ) ಹುಟ್ಟಿದವನು ನಾನು. ನಾನು ದೇವನೂ ಅಲ್ಲ ; ಗಂಧರ್ವನೂ ಅಲ್ಲ. ಹನುಮಂತನೆಂಬ ಹೆಸರಿನ ವಾನರನು ನಾನಾಗಿದ್ದೇನೆ. ಎಲ್ಲ ಕಪಿನಾಯಕರೂ ಸೂರ್ಯನ ಮಗನಾದ ಸುಗ್ರೀವನನ್ನೂ ಇಂದ್ರನ ಮಗನಾದ ವಾಲಿಯನ್ನೂ ಸೇವಿಸುತ್ತಿದ್ದರು. ನಾನು ವಾನರರಾಜನಾದ ಸುಗ್ರೀವನಿಗೆ ಅತ್ಯಂತಪ್ರಿಯನಾಗಿದ್ದೆನು. ವಾಯುವಿಗೆ ಅಗ್ನಿಯೊಡನೆ ಮೈತ್ರಿಯಿರುವಂತೆ ನನಗೆ ಸುಗ್ರೀವನೊಡನೆ ಸ್ನೇಹವಿದ್ದಿತು.

(ಇಲ್ಲಿ ಹನುಮಂತನು ಭೀಮನಿಗೆ ಸಂಕ್ಷೇಪವಾಗಿ ರಾಮಾಯಣವನ್ನೇ ಹೇಳುತ್ತಾನೆ. ಇದು ಹನೂಮದ್ರಾಮಾಯಣವೆಂದು ಪ್ರಸಿದ್ಧಿಯಾಗಿದೆ. ಆದುದರಿಂದ ಮಹಾಭಾರತದಲ್ಲಿ ಉಕ್ತವಾಗಿರುವ ಈ ಹನೂಮದ್ರಾಮಾಯಣವನ್ನು ಯಥಾವತ್ತಾಗಿ ಕೊಡಲಾಗಿದೆ.)

ಹನುಮಂತನು ಹೇಳುತ್ತಾನೆ :

ನಿಕೃತಃ ಸ ತತೋ ಭ್ರಾತ್ರಾ ಕಸ್ಮಿಂಶ್ಚಿತ್ಕಾರಣಾನ್ತರೇ ।
ಋಷ್ಯಮೂಕೇ ಮಯಾ ಸಾರ್ಧಂ ಸುಗ್ರೀವೋ ನ್ಯವಸಚ್ಚಿರಮ್ ॥೩೦॥

ಅಥ ದಾಶರಥಿರ್ವೀರೋ ರಾಮೋ ನಾಮ ಮಹಾಬಲಃ ।
ವಿಷ್ಣುರ್ಮಾನುಷರೂಪೇಣ ಚಚಾರ ವಸುಧಾತಲಮ್ ॥೩೧॥

ಸ ಪಿತುಃ ಪ್ರಿಯಮನ್ವಿಚ್ಛನ್ಸಹಭಾರ್ಯಃ ಸಹಾನುಜಃ ।
ಸಧನುರ್ಧನ್ವಿನಾಂ ಶ್ರೇಷ್ಠೋ ದಣ್ಡಕಾರಣ್ಯಮಾಶ್ರಿತಃ ॥೩೨॥

ತಸ್ಯ ಭಾರ್ಯಾ ಜನಸ್ಥಾನಾಚ್ಛಲೇನಾಪಹೃತಾ ಬಲಾತ್ ।
ರಾಕ್ಷಸೇನ್ದ್ರೇಣ ಬಲಿನಾ ರಾವಣೇನ ದುರಾತ್ಮನಾ ॥೩೩॥

ಸುವರ್ಣರತ್ನಚಿತ್ರೇಣ ಮೃಗರೂಪೇಣ ರಕ್ಷಸಾ ।
ವಞ್ಚಯಿತ್ವಾ ನರವ್ಯಾಘ್ರಂ ಮಾರೀಚೇನ ತದಾನಘ ॥೩೪॥

ಯಾವುದೋ ಕಾರಣದಿಂದಾಗಿ ಸುಗ್ರೀವನು ತನ್ನ ಅಣ್ಣನಾದ ವಾಲಿಯಿಂದ ದೇಶಭ್ರಷ್ಟನಾಗಿ ಮಾಡಲ್ಪಟ್ಟನು. ಸುಗ್ರೀವನು ನನ್ನೊಡನೆ ಋಷ್ಯಮೂಕಪರ್ವತದಲ್ಲಿ ಬಹುಕಾಲ ವಾಸವಾಗಿದ್ದನು. ಅದೇ ಸಮಯದಲ್ಲಿ ಮಹಾವಿಷ್ಣುವು ರಾಮನೆಂಬ ಅಭಿಧಾನದಿಂದ ದಶರಥನ ಮಗನಾಗಿ ಭೂಮಿಯಲ್ಲಿ ಅವತರಿಸಿದನು. ಧನುರ್ಧಾರಿಗಳಲ್ಲಿ ಶ್ರೇಷ್ಠನಾದ, ಮಹಾನುಭಾವನಾದ ಶ್ರೀರಾಮನು ಪಿತೃವಾಕ್ಯಪರಿಪಾಲನೆಗಾಗಿ ತಮ್ಮನೊಡನೆಯೂ, ಪತ್ನಿಯೊಡನೆಯೂ ದಂಡಕಾರಣ್ಯದಲ್ಲಿ ವಾಸಮಾಡುತ್ತಿದ್ದನು. ಹೀಗೆಯೇ ಇರುತ್ತಿರಲಾಗಿ, ಮಹಾಬಲಶಾಲಿಯಾದ ರಾವಣನೆಂಬ ರಾಕ್ಷಸನು ರತ್ನಖಚಿತವಾದ ಕಾಂಚನಮಾಯಾಮೃಗದ ರೂಪವನ್ನು ತಾಳಿದ ಮಾರೀಚನ ಸಹಾಯದಿಂದ ರಾಮನನ್ನು ಮೋಸಗೊಳಿಸಿ, ಏಕಾಕಿನಿಯಾಗಿದ್ದ ಸೀತಾದೇವಿಯನ್ನು ಜನಸ್ಥಾನದಿಂದ ಅಪಹರಿಸಿದನು."

೧೪೭ನೆಯ ಅಧ್ಯಾಯವು ಮುಗಿಯಿತು.

೧೪೮ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಹನೂಮದ್ರಾಮಾಯಣ

ಹೃತದಾರಃ ಸಹ ಭ್ರಾತ್ರಾ ಪತ್ನೀಂ ಮಾರ್ಗನ್ಸ ರಾಘವಃ ।
ದೃಷ್ಟವಾಞ್ಶೈಲಶಿಖರೇ ಸುಗ್ರೀವಂ ವಾನರರ್ಷಭಮ್ ॥೧॥

ತೇನ ತಸ್ಯಾಭವತ್ಸಖ್ಯಂ ರಾಘವಸ್ಯ ಮಹಾತ್ಮನಃ ।
ಸ ಹತ್ವಾ ವಾಲಿನಂ ರಾಜ್ಯೇ ಸುಗ್ರೀವಮಭಿಷಿಕ್ತವಾನ್ ॥೨॥

ಸ ರಾಜ್ಯಂ ಪ್ರಾಪ್ಯ ಸುಗ್ರೀವಃ ಸೀತಾಯಾಃ ಪರಿಮಾರ್ಗಣೇ ।
ವಾನರಾನ್ಪ್ರೇಷಯಾಮಾಸ ಶತಶೋಽಥ ಸಹಸ್ರಶಃ ॥೩॥

ತತೋ ವಾನರಕೋಟೀಭಿಃ ಸಹಿತೋಽಹಂ ನರರ್ಷಭ ।
ಸೀತಾಂ ಮಾರ್ಗನ್ಮಹಾಬಾಹೋ ಪ್ರಯಾತೋ ದಕ್ಷಿಣಾಂ ದಿಶಮ್ ॥೪॥

ತತಃ ಪ್ರವೃತ್ತಿಃಸೀತಾಯಾ ಗೃಧ್ರೇಣ ಸುಮಹಾತ್ಮನಾ ।
ಸಮ್ಪಾತಿನಾ ಸಮಾಖ್ಯಾತಾ ರಾವಣಸ್ಯ ನಿವೇಶನೇ ॥೫॥

ತತೋಽಹಂ ಕಾರ್ಯಸಿದ್ಧ್ಯರ್ಥಂ ರಾಮಸ್ಯಕ್ಲಿಷ್ಟಕರ್ಮಣಃ ।
ಶತಯೋಜನವಿಸ್ತೀರ್ಣಮರ್ಣವಂ ಸಹಸಾಪ್ಲುತಃ ॥೬॥

ಅಹಂ ಸ್ವವೀರ್ಯಾದುತ್ತೀರ್ಯ ಸಾಗರಂ ಮಕರಾಲಯಮ್ ।
ಸುತಾಂ ಜನಕರಾಜಸ್ಯ ಸೀತಾಂ ಸುರಸುತೋಪಮಾಮ್ ॥೭॥

ದೃಷ್ಟವಾನ್ಭರತಶ್ರೇಷ್ಠ ರಾವಣಸ್ಯ ನಿವೇಶನೇ ।
ಸಮೇತ್ಯ ತಾಮಹಂ ದೇವೀಂ ವೈದೇಹೀಂ ರಾಘವಪ್ರಿಯಾಮ್ ॥೮॥

ದಗ್ಧ್ವಾ ಲಙ್ಕಾಮಶೇಷೇಣ ಸಾಟ್ಟಪ್ರಾಕಾರತೋರಣಾಮ್ ।
ಪ್ರತ್ಯಾಗತಶ್ಚಾಪಿ ಪುನರ್ನಾಮ ತತ್ರ ಪ್ರಕಾಶ್ಯ ವೈ ॥೯॥

ಮದ್ವಾಕ್ಯಂ ಚಾವಧಾರ್ಯಾಶು ರಾಮೋ ರಾಜೀವಲೋಚನಃ ।
ಸಬುದ್ಧಿಪೂರ್ವಂ ಸೈನ್ಯಸ್ಯ ಬದ್ಧ್ವಾ ಸೇತುಂ ಮಹೋದಧೌ ॥೧೦॥

ವೃತೋ ವಾನರಕೋಟೀಭಿಃ ಸಮುತ್ತೀರ್ಣೋ ಮಹಾರ್ಣವಮ್ ।
ತತೋ ರಾಮೇಣ ವೀರೇಣ ಹತ್ವಾ ತಾನ್ಸರ್ವರಾಕ್ಷಸಾನ್ ॥೧೧॥

**ರಣೇ ತು ರಾಕ್ಷಸಗಣಂ ರಾವಣಂ ಲೋಕರಾವಣಮ್ ।**
**ನಿಶಾಚರೇನ್ದ್ರಂ ಹತ್ವಾ ತು ಸಭ್ರಾತೃಸುತಬಾನ್ಧವಮ್ ॥೧೨॥**

**ರಾಜ್ಯೇಽಭಿಷಿಚ್ಯ ಲಙ್ಕಾಯಾಂ ರಾಕ್ಷಸೇನ್ದ್ರಂ ವಿಭೀಷಣಮ್ ।**
**ಧಾರ್ಮಿಕಂ ಭಕ್ತಿಮನ್ತಂ ಚ ಭಕ್ತಾನುಗತವತ್ಸಲಮ್ ॥೧೩॥**

**ತತಃ ಪ್ರತ್ಯಾಹೃತಾ ಭಾರ್ಯಾ ನಷ್ಟಾ ವೇದಶ್ರುತಿರ್ಯಥಾ ।**
**ತಯೈವ ಸಹಿತಃ ಸಾಧ್ವ್ಯಾ ಪತ್ನ್ಯಾ ರಾಮೋ ಮಹಾಯಶಾಃ ॥೧೪॥**

**ಗತ್ವಾ ತತೋಽತಿತ್ವರಿತಃ ಸ್ವಾಂ ಪುರೀಂ ರಘುನನ್ದನಃ ।**
**ಅಧ್ಯಾವಸತ್ತತೋಽಯೋಧ್ಯಾಮಯೋಧ್ಯಾಂ ದ್ವಿಷತಾಂ ಪ್ರಭುಃ ॥೧೫॥**

**ತತಃ ಪ್ರತಿಷ್ಠಿತೋ ರಾಜ್ಯೇ ರಾಮೋ ನೃಪತಿಸತ್ತಮಃ ।**
**ವರಂ ಮಯಾ ಯಾಚಿತೋಽಸೌ ರಾಮೋ ರಾಜೀವಲೋಚನಃ ॥೧೬॥**

**ಯಾವದ್ರಾಮ ಕಥೇಯಂ ತೇ ಭವೇಲ್ಲೋಕೇಷು ಶತ್ರುಹನ್ ।**
**ತಾವಜ್ಜೀವೇಯಮಿತ್ಯೇವಂ ತಥಾಸ್ತ್ವಿತಿ ಚ ಸೋಽಬ್ರವೀತ್ ॥೧೭॥**

**ಸೀತಾಪ್ರಸಾದಾಚ್ಚ ಸದಾ ಮಾಮಿಹಸ್ಥಮರಿನ್ದಮ ।**
**ಉಪತಿಷ್ಠನ್ತಿ ದಿವ್ಯಾ ಹಿ ಭೋಗಾ ಭೀಮ ಯಥೇಪ್ಸಿತಾಃ ॥೧೮॥**

**ದಶವರ್ಷಸಹಸ್ರಾಣಿ ದಶವರ್ಷಶತಾನಿ ಚ ।**
**ರಾಜ್ಯಂ ಕಾರಿತವಾನ್ರಾಮಃ ತತಃ ಸ್ವಭವನಂ ಗತಃ ॥೧೯॥**

**ತದಿಹಾಪ್ಸರಸಸ್ತಾತ ಗಂಧರ್ವಾಶ್ಚ ಸದಾನಘ ।**
**ತಸ್ಯ ವೀರಸ್ಯ ಚರಿತಂ ಗಾಯನ್ತೋ ರಮಯನ್ತಿ ಮಾಮ್ ॥೨೦॥**

"ಭೀಮಸೇನ! ದುರುಳನಾದ ರಾವಣನು ರಾಘವನ ಪತ್ನಿಯಾದ ಸೀತಾದೇವಿಯನ್ನು ಅಪಹರಿಸಿಕೊಂಡು ಹೊರಟುಹೋದನಂತರ ರಾಮನು ತನ್ನ ಅನುಜನಾದ ಲಕ್ಷ್ಮಣನೊಡನೆ ಸೀತಾನ್ವೇಷಣಮಾಡುತ್ತಾ ಬರುತ್ತಿರಲಾಗಿ–ಪರ್ವತದ ಶಿಖರದಲ್ಲಿದ್ದ ಸುಗ್ರೀವನನ್ನು ಕಂಡನು. ರಾಮನಿಗೂ–ಸುಗ್ರೀವನಿಗೂ ಸಖ್ಯವುಂಟಾಯಿತು. ಅನಂತರದಲ್ಲಿ ಶ್ರೀರಾಮನು ವಾಲಿಯನ್ನು ಸಂಹರಿಸಿ ಸುಗ್ರೀವನಿಗೆ ಪಟ್ಟಗಟ್ಟಿದನು. ಸುಗ್ರೀವನು ರಾಮನ ಸಖ್ಯದಿಂದ ರಾಜ್ಯಸಿಂಹಾಸನವನ್ನು ಪಡೆದನಂತರ ಸೀತಾನ್ವೇಷಣಕ್ಕಾಗಿ ಶತ

ಸಹಸ್ರಸಂಖ್ಯಾತರಾದ ವಾನರಶ್ರೇಷ್ಠರನ್ನು ಎಲ್ಲ ದಿಕ್ಕುಗಳಿಗೂ ಕಳುಹಿಸಿ ಕೊಟ್ಟನು. ನಾನು ಕೋಟಿಸಂಖ್ಯೆಯ ವಾನರರೊಡನೆ ಸೀತೆಯನ್ನು ಹುಡು ಕುತ್ತಾ ದಕ್ಷಿಣದಿಕ್ಕಿಗೆ ಹೋದೆನು. ನಾವು ದಕ್ಷಿಣದಿಕ್ಕಿನಲ್ಲಿ ಪ್ರಯಾಣಮಾಡು ತ್ತಿದ್ದಾಗ 'ಸಂಪಾತಿ' ಎಂಬ ಗೃಧ್ರರಾಜನು–ಸೀತಾದೇವಿಯು ರಾವಣನ ಅರ ಮನೆಯಲ್ಲಿರುವ ವಾರ್ತೆಯನ್ನು–ನಮಗೆ ತಿಳಿಸಿದನು. ಕಷ್ಟವಿಲ್ಲದೆ ಕಾರ್ಯ ವನ್ನು ಸಾಧಿಸುವ ಮಹಾನುಭಾವನಾದ ಶ್ರೀರಾಮನ ಕಾರ್ಯಸಿದ್ಧಿಗಾಗಿ ನಾನು ಒಡನೆಯೇ ನೂರು ಯೋಜನ ವಿಸ್ತೀರ್ಣದ ಸಮುದ್ರವನ್ನು ಹಾರಿದೆನು. ಸ್ವಬಲದಿಂದ ನಾನು ಸಾಗರವನ್ನು ದಾಟಿದವನಾಗಿ, ರಾವಣನ ಅರ ಮನೆಯಲ್ಲಿದ್ದ ಸೀತಾದೇವಿಯನ್ನು ಸಂದರ್ಶಿಸಿದೆನು. ಸೀತಾದೇವಿಗೆ ರಾಮನ ಸಂದೇಶವನ್ನು ತಿಳಿಸಿದನಂತರ ನಾನು ಪ್ರಾಕಾರಗಳಿಂದಲೂ, ದಿವ್ಯವಾದ ಸೌಧಗಳಿಂದಲೂ ಕೂಡಿದ್ದ ಲಂಕಾಪಟ್ಟಣವನ್ನು ಸಂಪೂರ್ಣವಾಗಿ ಸುಟ್ಟು ಹಾಕಿ, ಅಲ್ಲಿ ರಾಮನಾಮವನ್ನು ಘೋಷಿಸಿ ರಾಮನ ಬಳಿಗೆ ಹಿಂದಿರುಗಿದೆನು.

ಸೀತಾವೃತ್ತಾಂತವನ್ನು ನನ್ನಿಂದ ಕೇಳಿದನಂತರ ಶ್ರೀರಾಮನು ಮುಂದೇನು ಮಾಡಬೇಕೆಂಬುದನ್ನು ನಿಶ್ಚಯಿಸಿದವನಾಗಿ, ಸಮುದ್ರಕ್ಕೆ ಸೇತುವೆಯನ್ನು ನಿರ್ಮಿಸಿ, ಸಮುದ್ರವನ್ನು ದಾಟಿ ಲಕ್ಷೋಪಲಕ್ಷ ಕಪಿಸೈನ್ಯ ಸಮೇತನಾಗಿ ಲಂಕಾಪಟ್ಟಣವನ್ನು ಪ್ರವೇಶಿಸಿದನು. ಲಂಕಾಪಟ್ಟಣವನ್ನು ಪ್ರವೇಶಿಸಿ ಅನಂತರ ಶ್ರೀರಾಮನು ಸ್ವಭುಜಬಲ-ಪರಾಕ್ರಮಗಳಿಂದ ಲಕ್ಷೋಪ ಲಕ್ಷ ರಾಕ್ಷಸರನ್ನು ಸಂಹರಿಸಿ, ಕಟ್ಟಕಡೆಗೆ ಸಪರಿವಾರನಾದ ಲೋಕಕಂಟಕ ನಾದ ರಾವಣನನ್ನು ಸಂಹರಿಸಿ, ಧರ್ಮಾತ್ಮನಾದ ಸತ್ಯಸಂಧನಾದ ವಿಭೀಷಣ ನನ್ನು ಲಂಕಾರಾಜ್ಯಕ್ಕೆ ಅಧಿಪತಿಯನ್ನಾಗಿ ಮಾಡಿದನು. ನಷ್ಟವಾಗಿ ಹೋಗಿದ್ದ ವೇದವನ್ನು ಪುನಃ ಪಡೆಯುವಂತೆ–ಅಪಹೃತಳಾಗಿದ್ದ ಸೀತಾದೇವಿ ಯನ್ನು ಶ್ರೀರಾಮನು ಪಡೆದನು. ಶ್ರೀರಾಮನು ಸೀತಾ-ಲಕ್ಷ್ಮಣರೊಡನೆ ವನವಾಸವನ್ನು ಮುಗಿಸಿಕೊಂಡು ಅಯೋಧ್ಯೆಯನ್ನು ಸೇರಿ ಪಟ್ಟಾಭಿಷಿಕ್ತ ನಾದನು. ಕೋಸಲರಾಜ್ಯಕ್ಕೆ ಅಧಿಪತಿಯಾದನಂತರ ನಾನು ರಾಮನನ್ನು ಕುರಿತು 'ಶ್ರೀರಾಮನೇ! ನಿನ್ನ ಚರಿತೆಯು ಭೂಮಿಯಲ್ಲಿ ಎಲ್ಲಿಯವರೆಗೆ ಪ್ರಚಲಿತವಿರುವುದೋ–ಅಲ್ಲಿಯವರೆಗೂ ಚಿರಂಜೀವಿತ್ವವನ್ನು ದಯ ಪಾಲಿಸು'–ಎಂದು ಕೇಳಿಕೊಂಡೆನು. ದಯಾಮಯನಾದ ಶ್ರೀರಾಮನು

'ತಥಾಸ್ತು'–'ಹಾಗೆಯೇ ಆಗಲಿ' ಎಂದನು. ಶ್ರೀರಾಮನ ದಯೆಯಿಂದಲೂ ಮತ್ತು ಸೀತಾದೇವಿಯ ಅನುಗ್ರಹದಿಂದಲೂ ಇಲ್ಲಿ ನಾನು ಅಪೇಕ್ಷಿಸುವ ವಸ್ತುಗಳೆಲ್ಲವೂ ನನಗೆ ಸಿದ್ಧವಾಗುತ್ತವೆ. ಶ್ರೀರಾಮನು ಅಯೋಧ್ಯೆಯಲ್ಲಿ ಹನ್ನೊಂದು ಸಹಸ್ರವರ್ಷಗಳ ಪರ್ಯಂತವಾಗಿ ರಾಜ್ಯವಾಳುತ್ತಿದ್ದು ತನ್ನ ಪರಂಧಾಮವನ್ನೈದಿದನು.

ಶ್ರೀರಾಮನು ಸ್ವರ್ಗಾರೋಹಣಮಾಡಿದನಂತರ ನಾನಿಲ್ಲಿ ವಾಸ ಮಾಡುತ್ತಿದ್ದೇನೆ. ಗಂಧರ್ವಾಪ್ಸರೆಯರು ಶ್ರೀರಾಮನ ದಿವ್ಯಚರಿತೆಯನ್ನು ಇಲ್ಲಿ ನನ್ನ ಮುಂದೆ ಅನುದಿನವೂ ಹಾಡುತ್ತಾ ನನ್ನನ್ನು ಆನಂದ ಪಡಿಸುತ್ತಿದ್ದಾರೆ.

ಭೀಮಸೇನ! ಇದು ಶ್ರೀರಾಮನ ಮತ್ತು ನನ್ನ ಸೂಕ್ಷ್ಮಚರಿತ್ರೆಯಾಗಿರುತ್ತದೆ. ಈ ಸ್ಥಳವು ಮನುಷ್ಯರ ಪ್ರವೇಶಕ್ಕೆ ಯೋಗ್ಯವಾದುದಲ್ಲ. ನಿನ್ನನ್ನು ಯಾರೂ ಪರಾಜಯಗೊಳಿಸಬಾರದೆಂದೂ ಮತ್ತು ಯಾರೂ ನಿನಗೆ ಶಾಪಕೊಡಕೂಡದೆಂದೂ ನಿಶ್ಚಯಿಸಿ ಮುಂದೆ ಹೋಗದಂತೆ ನಿನ್ನನ್ನು ನಾನೇ ತಡೆದೆನು. ಇದು ದೇವತೆಗಳ ಸಂಚಾರಕ್ಕೆ ಮಾತ್ರವೇ ಯೋಗ್ಯವಾದ ಪ್ರದೇಶವಾಗಿರುತ್ತದೆ. ದೇವತೆಗಳು ಸ್ವರ್ಗಕ್ಕೆ ಹೋಗುವ ಮಾರ್ಗವು ಇದಾಗಿರುತ್ತದೆ. ಮನುಷ್ಯರು ಈ ಮಾರ್ಗದಲ್ಲಿ ಹೋಗಲಾರರು. ನೀನು ಹುಡುಕುತ್ತಿರುವ ಸೌಗಂಧಿಕಪುಷ್ಪಯುಕ್ತವಾದ ಸರೋವರವೂ ಇದೇ ದಿಕ್ಕಿನಲ್ಲಿರುವುದು."

ಗಳಲನೆಯ ಅಧ್ಯಾಯವು ಮುಗಿಯಿತು.

ಗಳ೯ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಹನುಮಂತನಿಂದ ಚತುರ್ಯುಗಗಳ ಸ್ವರೂಪನಿರೂಪಣೆ

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಮಹಾರಾಜ! ಹನುಮಂತನು ರಾಮನ ಸಂಕ್ಷಿಪ್ತಚರಿತೆಯನ್ನೂ ಮತ್ತು ತನ್ಮೂಲಕವಾಗಿ ತನ್ನ ಸಂಕ್ಷೇಪೇತಿಹಾಸವನ್ನೂ ಭೀಮನಿಗೆ ಹೇಳಿದ ನಂತರ ಪ್ರತಾಪಶಾಲಿಯಾದ, ಮಹಾಬಾಹುವಾದ ಭೀಮಸೇನನು ಆನಂದ ಭರಿತನಾಗಿ ಅಣ್ಣನಿಗೆ ನಮಸ್ಕರಿಸಿ ಹೇಳಿದನು :

"ಮಹಾನುಭಾವನೇ! ನನಗಿಂತಲೂ ಅದೃಷ್ಟಶಾಲಿಗಳು ಈ ಪೃಥ್ವಿಯಲ್ಲೇ ಬೇರೊಬ್ಬರಿಲ್ಲ. ಬಹಳ ದಿನಗಳಿಂದಲೂ ನೋಡಬೇಕೆಂದಿದ್ದ ನನ್ನ ಹಿರಿಯಣ್ಣನನ್ನು ನಾನಿಂದು ನೋಡಿ ಧನ್ಯನಾದೆನಲ್ಲವೇ? ಅಣ್ಣ! ನಿನ್ನಿಂದ ನಾನು ಅನುಗೃಹೀತನಾಗಿರುವೆನು. ನಿನ್ನ ಮಾತಿನಿಂದ ನನಗೆ ತೃಪ್ತಿಯುಂಟಾಗಿರುವುದು. ಅಗ್ರಜ! ನನಗೆ ಬಹಳ ದಿನಗಳಿಂದಲೂ ಒಂದು ಆಕಾಂಕ್ಷೆಯಿರುವುದು. ಆ ನನ್ನ ಆಸೆಯನ್ನು ನೀನಿಂದು ಪೂರೈಸಿಕೊಡುವೆಯೆಂಬ ಭರವಸೆಯಿಂದಿರುತ್ತೇನೆ. ಮೊಸಳೆ, ತಿಮಿ, ತಿಮಿಂಗಿಲಾದಿಗಳಿಗೆ ನಿವಾಸಸ್ಥಾನವಾದ ಮಹಾಸಮುದ್ರವನ್ನು ನೀನು ಹಾರಿದಾಗ ನಿನಗಿದ್ದ ಅಸಾಧಾರಣವಾದ ರೂಪವನ್ನು ನಾನು ನೋಡಬೇಕೆಂಬ ಒಂದು ಆಸೆಯು ನನಗೆ ಬಹಳ ದಿನಗಳಿಂದಲೂ ಇರುವುದು. ನೀನು ಆ ಮಹಾರೂಪವನ್ನು ನನಗಿಂದು ತೋರಿದಲ್ಲಿ ನಾನು ಸಂಪೂರ್ಣತೃಪ್ತಿಹೊಂದುವುದು ಮಾತ್ರವಲ್ಲದೇ– ನೀನೀಗ ಹೇಳಿದ ಮಾತುಗಳಲ್ಲಿ ನಂಬಿಕೆಯಿಡಲೂ ನನಗೆ ಸಾಧ್ಯವಾಗುವುದು."

ಜನಮೇಜಯ! ಭೀಮಸೇನನ ಮಾತುಗಳನ್ನು ಕೇಳಿ ಹನುಮಂತನು ಗಟ್ಟಿಯಾಗಿ ನಕ್ಕು ಉತ್ತರಿಸಿದನು :

"ಭೀಮಸೇನ! ಅಂದಿನ ನನ್ನ ಆ ರೂಪವನ್ನು ಇಂದು ನೀನಾಗಲೀ ಮತ್ತಾರಾಗಲೀ ನೋಡಲಾರರು. ಅಂದಿನ ಕಾಲವೇ ಬೇರೆ ; ಅಂದಿನ ಸನ್ನಿವೇಶಗಳೇ ಬೇರೆ. ಆ ಕಾಲವೂ–ಆ ಸನ್ನಿವೇಶಗಳೂ ಇಂದು ಸನ್ನಿಹಿತವಾಗುವುದಿಲ್ಲ. ಕೃತಯುಗದ ಸ್ಥಿತಿ, ಅಂದಿನ ಜನಾಂಗ, ಅಂದಿನ ಧರ್ಮ, ಅಂದಿನ ಸನ್ನಿವೇಶ–ಇವು ತ್ರೇತಾಯುಗದಲ್ಲಿರುವುದಿಲ್ಲ. ತ್ರೇತಾಯುಗದಲ್ಲಿದ್ದುದು ದ್ವಾಪರಯುಗದಲ್ಲಿರುವುದಿಲ್ಲ. ದ್ವಾಪರಯುಗದಲ್ಲಿದ್ದುದು ಕಲಿಯುಗದಲ್ಲಿರುವುದಿಲ್ಲ. ಪ್ರತಿಯೊಂದು ಯುಗದಲ್ಲಿಯೂ ಕಾಲ-ಧರ್ಮಗಳು ವ್ಯತ್ಯಾಸವಾಗುತ್ತಾ ಹೋಗುತ್ತವೆ. ಒಂದು ಯುಗದಿಂದ ಮತ್ತೊಂದು ಯುಗಕ್ಕೆ ಧರ್ಮವೂ ಕ್ಷಯಿಸುತ್ತಾ ಹೋಗುತ್ತದೆ. ಜನರೂ ಕುರೂಪಿಗಳಾಗುತ್ತಾರೆ. ಆದುದರಿಂದಲೇ ನಾನು ಚಿರಂಜೀವಿಯಾಗಿ ಈ ಎರಡು (ತ್ರೇತಾ-ದ್ವಾಪರ) ಯುಗಗಳಲ್ಲಿಯೂ ಇದ್ದರೂ–ಅಂದಿದ್ದ ಶರೀರವಾಗಲೀ, ಶರೀರಸಾಮರ್ಥ್ಯವಾಗಲೀ ಇಂದು ನನಗಿಲ್ಲ. ಯುಗಧರ್ಮಾನು

ಸಾರವಾಗಿ ಕ್ಷಯಿಸಿ ಹೋಗಿರುವುದು, ಭೂಮಿ, ನದಿಗಳು, ಪರ್ವತಗಳು, ಮರ-ಗಿಡ-ಬಳ್ಳಿಗಳು, ಪಾಷಾಣಗಳು, ಸಿದ್ಧ-ಚಾರಣರು, ದೇವತೆಗಳು, ದೇವರ್ಷಿಗಳು-ಎಲ್ಲರೂ ಯುಗಾನುರೂಪವಾಗಿ ಹುಟ್ಟುವರು. ಆದುದರಿಂದ-

**ತದಲಂ ಬತ ತದ್ರೂಪಂ ದ್ರಷ್ಟುಂ ಕುರುಕುಲೋದ್ವಹ ।**
**ಯುಗಂ ಸಮನುವರ್ತಾಮಿ ಕಾಲೋ ಹಿ ದುರತಿಕ್ರಮಃ ॥೯॥**

ಕುರುಕುಲೋದ್ವಹನೇ! ತ್ರೇತಾಯುಗದಲ್ಲಿ ನಾನು ಸಮುದ್ರವನ್ನು ಲಂಘನಮಾಡಿದಾಗ ತಳೆದಿದ್ದ ಆಕಾರವನ್ನು ನೀನಿಂದು ನೋಡಲು ಅಪೇಕ್ಷಿಸ ಬೇಡ. ಈ ಯುಗಕ್ಕೆ ಅನುರೂಪವಾದ ಶರೀರವನ್ನೇ ನಾನಿಂದು ಧರಿಸಿ ದ್ದೇನೆ.

ಭೀಮಸೇನ! ಕಾಲವನ್ನು ಅತಿಕ್ರಮಿಸಿ ನಡೆಯಲು ಯಾರಿಂದಲೂ ಸಾಧ್ಯವಿಲ್ಲ. ಕಾಲವನ್ನನುಸರಿಸಿಯೇ ಎಲ್ಲರೂ ವ್ಯವಹರಿಸಬೇಕು."

ಭೀಮನು ಪ್ರಶ್ನಿಸುತ್ತಾನೆ :

"ಆ ಯುಗಗಳ ಸ್ವರೂಪವೇನಣ್ಣ? ಅವುಗಳ ಪರಿಮಿತಿಯೆಷ್ಟು? ಆಯಾ ಯುಗಗಳ ಆಚಾರ-ವ್ಯವಹಾರಗಳೇನು? ಒಂದೊಂದು ಯುಗ ದಲ್ಲಿಯೂ ಧರ್ಮ-ಕಾಮಾರ್ಥಗಳ ಭಾವವು ಹೇಗಿರುತ್ತದೆ? ಶುಭಾಶುಭ ಕರ್ಮಗಳು ಹೇಗೆ ನಿರ್ಣಯಿಸಲ್ಪಡುತ್ತವೆ? ಒಂದೊಂದು ಯುಗದ ಜನರಿಗೂ ಇರುವ ಶಕ್ತಿ-ಸಾಮರ್ಥ್ಯಗಳ ಪರಿಮಿತಿಯೇನು? ಉತ್ಪತ್ತಿ-ವಿನಾಶಗಳು ಹೇಗೆ ನಡೆಯುತ್ತವೆ? ಇವೆಲ್ಲವನ್ನೂ ನಿನ್ನಿಂದ ಕೇಳಿ ತಿಳಿಯಬೇಕೆಂದಿರುವೆನು."

ಹನುಮಂತನು ಹೇಳುತಾನೆ :

**ಕೃತಂ ನಾಮ ಯುಗಂ ತಾತಾ ತತ್ರ ಧರ್ಮಃ ಸನಾತನಃ ।**
**ಕೃತಮೇವ ನ ಕರ್ತವ್ಯಂ ತಸ್ಮಿನ್ಕಾಲೇ ಯುಗೋತ್ತಮೇ ॥೧೧॥**

"ಮಗು! 'ಕೃತ' ಎಂದು ಮೊದಲನೆಯ ಯುಗದ ಹೆಸರು. ಅಧ್ಯಾತ್ಮಚಿಂತನೆಯೊಂದನ್ನುಳಿದು ಬೇರಾವ ಧರ್ಮವಾಗಲೀ, ಕಾರ್ಯ ವಾಗಲೀ ಆ ಯುಗದಲ್ಲಿರುವುದಿಲ್ಲ. ಬೇರೆ ಯಾವ ಕರ್ತವ್ಯವೂ ಆ ಯುಗ ದಲ್ಲಿ ಇಲ್ಲದೇ ಇರುವುದರಿಂದ ಆ ಯುಗಕ್ಕೆ ಕೃತಯುಗವೆಂದು ಹೆಸರು.

ಎಲ್ಲರೂ ಅಧ್ಯಾತ್ಮಚಿಂತನೆಯಲ್ಲಿಯೇ ಇರುತ್ತಾ ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುತ್ತಾರಾದ್ದರಿಂದ ಆ ಯುಗದಲ್ಲಿ ಮಾಡಬೇಕಾದ ಕಾರ್ಯವೇ ಬೇರಾವುದೂ ಇರುವುದಿಲ್ಲ. ಧರ್ಮವು ಪರಿಪೂರ್ಣವಾಗಿ ಆ ಯುಗದಲ್ಲಿ ಆವಿರ್ಭವಿಸಿರುತ್ತದೆ. ಜನರ ಶರೀರಗಳಲ್ಲಿಯೂ ಯಾವ ವಿಧವಾದ ನ್ಯೂನತೆಗಳೂ ಇರುವುದಿಲ್ಲ. ಕೃತಯುಗದ ಆದಿಯಲ್ಲಿ ಯುಗಧರ್ಮವು ಹೀಗಿದ್ದರೂ ಕಾಲವು ಕಳೆದಂತೆ ಮತ್ತು ಮುಂದಿನ ಯುಗವು ಸನ್ನಿಹಿತವಾದಂತೆ ಆ ಕೃತಯುಗದಲ್ಲಿಯೂ ಧರ್ಮವು ಕಡಿಮೆಯಾಗುತ್ತಿರುತ್ತದೆ.

ಕೃತಯುಗದ ಪ್ರಥಮಭಾಗದಲ್ಲಿ ದೇವ-ದಾನವರಾಗಲೀ, ಯಕ್ಷ-ರಾಕ್ಷಸ-ಕಿನ್ನರ-ಕಿಂಪುರುಷರಾಗಲೀ ಇರುವುದಿಲ್ಲ. ವೇದವರ್ಣಗಳೂ ಇರುವುದಿಲ್ಲ. ಕೊಳ್ಳುವ ಮತ್ತು ಮಾರುವ ಆವಶ್ಯಕತೆಯಿಲ್ಲ. ಮಾನವನು ತನ್ನ ಜೀವನಕ್ಕಾಗಿ ದುಡಿಮೆಯನ್ನು ಮಾಡಬೇಕಾದ ಇಚ್ಛಾಮಾತ್ರದಿಂದಲೇ ಅಪೇಕ್ಷಿಸಿದ ವಸ್ತುಗಳೆಲ್ಲವೂ ಉಪಸ್ಥಿತವಾಗುತ್ತವೆ. ಸಂನ್ಯಾಸವೊಂದೇ ಆ ಯುಗದ ಮುಖ್ಯಧರ್ಮವಾಗಿರುತ್ತದೆ.

ಕೃತಯುಗದ ಜನರಿಗೆ ಯಾವ ವಿಧವಾದ ಈತಿಬಾಧೆಗಳೂ ಇರುವುದಿಲ್ಲ. ಆಧಿ-ವ್ಯಾಧಿಗಳೂ ಇರುವುದಿಲ್ಲ. ಜನರಲ್ಲಿ ಪರಸ್ಪರ ಅಸೂಯೆಯಿರುವುದಿಲ್ಲ. ಯಾರೂ ಯಾವುದಕ್ಕೂ ಅಳುವುದಿಲ್ಲ. ಗರ್ವ ಮತ್ತು ಅಭಿಮಾನಗಳೆಂಬುದನ್ನೇ ಆ ಯುಗದ ಮಾನವರು ತಿಳಿಯರು. ಕಪಟವೆಂಬುದು ಅವರಿಗೆ ಗೊತ್ತಿಲ್ಲ. ಪರಸ್ಪರ ದ್ವೇಷ-ವೈರಗಳಿಲ್ಲ. ಯಾರೊಬ್ಬರಿಗಾದರೂ ಆಲಸ್ಯವಿಲ್ಲ. ಎಲ್ಲರೂ ಕ್ಷಮಾವಂತರಾಗಿರುತ್ತಾರೆ. ಯಾರೊಬ್ಬರಿಗೂ ಯಾವ ವಿಧವಾದ ಭಯವೂ ಇಲ್ಲ. ಯಾರೊಬ್ಬರೂ ಯಾವ ಕಾರಣದಿಂದಲೂ ಸಂತಾಪಪಡುವುದಿಲ್ಲ. ಈರ್ಷ್ಯಾ-ಮಾತ್ಸರ್ಯಗಳು ಆ ಯುಗದ ಜನರಿಗೆ ತಿಳಿಯದು.

ಜನರೆಲ್ಲರೂ ಬ್ರಹ್ಮಜ್ಞಾನಿಗಳಾಗಿ ಸರ್ವಕಾಲದಲ್ಲಿಯೂ ಬ್ರಹ್ಮಾನಂದದಲ್ಲಿ ಮಗ್ನರಾಗಿರುತ್ತಾರೆ. ಸರ್ವಭೂತಗಳಿಗೂ ಆತ್ಮಸ್ವರೂಪನಾದ ಶ್ರೀಮನ್ನಾರಾಯಣನು ಆ ಯುಗದಲ್ಲಿ ಶ್ವೇತವರ್ಣದಿಂದ ಕೂಡಿ ಪ್ರಕಾಶಿಸುತ್ತಾನೆ.

ಕೃತಯುಗದಲ್ಲಿ ನಾಲ್ಕು ವರ್ಣದವರ ಗುಣ-ಕ್ರಿಯೆಗಳೂ ನೈಜವಾಗಿರುತ್ತವೆ. ತಮ್ಮ-ತಮ್ಮ ವರ್ಣಕ್ಕೆ ಯೋಗ್ಯವಾದ ಕ್ರಿಯೆಗಳಲ್ಲಿಯೇ ಪ್ರತಿ

ಯೊಬ್ಬರೂ ನಿರತರಾಗಿರುತ್ತಾರೆ. ಆದರೆ ನಾಲ್ಕು ವರ್ಣದವರ ಸಂಕಲ್ಪ, ಕ್ರಿಯೆ, ಸಾಧನಗಳೂ ಬ್ರಹ್ಮಜ್ಞಾನದಲ್ಲಿಯೇ ಪರ್ಯವಸಾನವನ್ನು ಹೊಂದಿರು ತ್ತವೆ. ಅವರು ಕರ್ಮಮಾಡುವುದು ಕೇವಲ ಬ್ರಹ್ಮಸಾಕ್ಷಾತ್ಕಾರಕ್ಕಾಗಿ. ಬೇರಾವ ಸಂಕಲ್ಪಗಳಾಗಲೀ, ಕಾಮನೆಗಳಾಗಲೀ, ಅವರಿಗಿಲ್ಲ. ನಾಲ್ಕು ವರ್ಣದವರಿಗೂ ಧ್ಯಾನವೇ ಮುಖ್ಯಕರ್ಮವಾಗಿದ್ದಿತು. ಸಕಲಪ್ರಾಣಿಗಳ ಹೃದಯಕಮಲ ಗಳಲ್ಲಿಯೂ ದೀಪದಂತೆ ಪ್ರಜ್ವಲಿಸುವ ಪರಮಾತ್ಮನೇ ಎಲ್ಲ ವರ್ಣದವರ ಅಧಿಷ್ಠಾನಮೂರ್ತಿಯಾಗಿರುತ್ತಾನೆ.

'ಓಂ' ಕಾರವೊಂದೇ ಅವರ ಮುಖ್ಯಮಂತ್ರವಾಗಿದ್ದಿತು. ನಾಲ್ಕು ವರ್ಗದವರೂ ಬ್ರಹ್ಮನಿಷ್ಠರೇ ಆಗಿದ್ದರು. ಬ್ರಹ್ಮ-ಕ್ಷತ್ರ-ವೈಶ್ಯ-ಶೂದ್ರರೆಂಬ ಸ್ವಾಭಾವಿಕವಾದ ನಾಲ್ಕು ವರ್ಣಗಳಿದ್ದರೂ ಸಹ ಅವರೆಲ್ಲರೂ ಅನುಸರಿ ಸುತ್ತಿದ್ದುದು ಒಂದೇ ಉಪನಿಷದ್ಧರ್ಮ. ಅವರೆಲ್ಲರೂ ಆರಾಧಿಸುತ್ತಿದ್ದುದು ಜ್ಯೋತಿಸ್ವರೂಪನಾದ, ಸರ್ವರ ಹೃದಯಾಂತರಾಳದಲ್ಲಿಯೂ ಇರುವ ಪರ ಮಾತ್ಮನೊಬ್ಬನನ್ನೇ. ಅವರೆಲ್ಲರಿಗೂ ಹಿಂದೆ ಹೇಳಿದಂತೆ ಓಂಕಾರವೊಂದೇ ಮೂಲಮಂತ್ರವಾಗಿದ್ದಿತು. ಅವರಿಗೆ ಬ್ರಹ್ಮಸಾಕ್ಷಾತ್ಕಾರವೊಂದು ಹೊರತಾಗಿ ಬೇರಾವ ಕಾಮನೆಗಳೂ ಇರಲಿಲ್ಲ. ಈ ರೀತಿಯಲ್ಲಿ ಕೃತಯುಗದ ಜನರು ಸರ್ವದಾ ಜೀವನ್ಮುಕ್ತಿಯನ್ನು ಪಡೆಯುತ್ತಿದ್ದರು.

**ಆತ್ಮಯೋಗಸಮಾಯುಕ್ತೋ ಧರ್ಮೋಽಯಂ ಕೃತಲಕ್ಷಣಃ ।**
**ಕೃತೇ ಯುಗೇ ಚತುಷ್ಪಾದಶ್ಚಾತುರ್ವರ್ಣ್ಯಸ್ಯ ಶಾಶ್ವತಃ ॥೨೨॥**

ಆತ್ಮಯೋಗದಿಂದ ಕೂಡಿದ ಧರ್ಮವೇ ಕೃತಯುಗದ ಪ್ರಮುಖ ಲಕ್ಷಣ. ಕೃತಯುಗದಲ್ಲಿ ನಾಲ್ಕು ವರ್ಣದವರ ಧರ್ಮವು ನಾಲ್ಕು ಪಾದಗಳಿಂದಲೂ ಪರಿಪೂರ್ಣವಾಗಿದ್ದಿತು. (ಧರ್ಮದಲ್ಲಿ ನ್ಯೂನತೆಯೇ ಇರಲಿಲ್ಲ.) ಪ್ರವೃತ್ತಿ, ಪ್ರಕಾಶ, ಮೋಹ, ಅಥವಾ ಸತ್ತ್ವ-ರಜಸ್ತಮೋಗುಣಗಳಾವುವೂ ಆ ಯುಗದಲ್ಲಿರಲಿಲ್ಲ. ಭೀಮಸೇನ! ಕೇವಲ ಬ್ರಹ್ಮನಿಷ್ಠರಿಂದಲೇ ಸಮಾವೃತವಾಗಿದ್ದ ಪರಮೋತ್ಕೃಷ್ಟವಾದ ಯುಗವು ಕೃತಯುಗ.

ಮುಂದೆ ಯಜ್ಞಧರ್ಮಪ್ರವರ್ತಕವಾದ ತ್ರೇತಾಯುಗದ ಲಕ್ಷಣ

ಗಳನ್ನು ಹೇಳುತ್ತೇನೆ. ಕೇಳು, ಮಗು! ಆ ಯುಗದಲ್ಲಿ ಧರ್ಮವು ಕಾಲುಭಾಗ ಕ್ಷೀಣಿಸಿದ್ದಿತು. ಸರ್ವಾಂತರ್ಯಾಮಿಯಾದ ಮಹಾವಿಷ್ಣುವು ಕೆಂಪು ಬಣ್ಣದಿಂದ ಪ್ರಕಾಶಿಸುತ್ತಿದ್ದನು. ಜನರು ಸತ್ಯಸಂಧರಾಗಿದ್ದರು. ನಿತ್ಯ-ನೈಮಿತ್ತಿಕ ಕರ್ಮಾನುಷ್ಠಾನಗಳನ್ನು ತಪ್ಪದೇ ಮಾಡುತ್ತಿದ್ದರು. ಅನೇಕಾನೇಕ ಯಜ್ಞ-ಯಾಗಾದಿಗಳು ಆ ಯುಗದಲ್ಲಿ ಪ್ರಾದುರ್ಭೂತವಾದುವು. ಜನರು ಇಚ್ಛಾಪೂರ್ತಿಗಾಗಿ ಅನೇಕಾನೇಕ ಯಜ್ಞಗಳನ್ನೂ, ದಾನಗಳನ್ನೂ ಮಾಡುತ್ತಿದ್ದರು. (ಕೃತಯುಗದಲ್ಲಿದ್ದ ಬ್ರಹ್ಮನಿಷ್ಠರಿಗೆ ಅಪೇಕ್ಷಿಸಿದ ವಸ್ತುಗಳು ನೆನೆದೊಡನೆಯೇ ಸಿದ್ಧವಾಗುತ್ತಿದ್ದುವು. ಆದರೆ ಆ ಯುಗದ ಜನರಿಗೆ ಬ್ರಹ್ಮಸಾಕ್ಷಾತ್ಕಾರವೊಂದರ ಹೊರತಾಗಿ ಬೇರಾವ ವಸ್ತುವಿನ ಅಪೇಕ್ಷೆಯೂ ಇರಲಿಲ್ಲ. ತ್ರೇತಾಯುಗದಲ್ಲಿದ್ದ ಜನರಲ್ಲಿ ಬ್ರಹ್ಮನಿಷ್ಠೆಯು ಕಡಿಮೆಯಾಯಿತು. ಮನಸ್ಸಿನಲ್ಲಿ ಅನೇಕಾನೇಕ ಕಾಮನೆಗಳು ಹುಟ್ಟತೊಡಗಿದುವು. ಆ ಕಾಮನೆಗಳ ಪೂರಣಕ್ಕಾಗಿ ಜನರು ಯಜ್ಞ-ಯಾಗಾದಿಗಳನ್ನೂ, ದಾನಗಳನ್ನೂ ಮಾಡಲು ಉಪಕ್ರಮಿಸಿದರು. ಆ ಕ್ರಿಯೆಗಳಿಂದ ಅವರ ಕಾಮನೆಗಳು ಪೂರ್ಣ ವಾಗುತ್ತಿದ್ದುವು. ತ್ರೇತಾ ಯುಗದಲ್ಲಿದ್ದ ಜನರಾರೂ ಯಾವಾಗಲೂ ತಮ್ಮ ತಮ್ಮ ಧರ್ಮದಿಂದ ಚ್ಯುತರಾಗುತ್ತಿರಲಿಲ್ಲ. ನಿತ್ಯ-ನೈಮಿತ್ತಿಕಕರ್ಮಾನುಷ್ಠಾನಗಳನ್ನು ಮಾಡುತ್ತಾ, ಇಚ್ಛಾಪೂರ್ತಿಗಾಗಿ ಯಜ್ಞ-ಯಾಗಾದಿಗಳನ್ನು ಮಾಡುತ್ತಾ, ಸತ್ಯಸಂಧರಾಗಿಯೂ, ಜಿತೇಂದ್ರಿಯರಾಗಿಯೂ ಇರುತ್ತಿದ್ದರು. ಆ ಯುಗದ ಜನರು ಸತ್ತ್ವಗುಣಪ್ರಧಾನರು ತ್ರೇತಾಯುಗದ ಲಕ್ಷಣವು ಹೀಗಿದ್ದಿತು. ಭೀಮಸೇನ!

ಮೂರನೆಯ ಯುಗವಾದ ದ್ವಾಪರದಲ್ಲಿ ಧರ್ಮವು ಅರ್ಧಭಾಗ ಕ್ಷಯಿಸಿತು. ಸರ್ವಾಂತರ್ಯಾಮಿಯಾದ ನಾರಾಯಣನು ಹೊಂಬಣ್ಣದಿಂದ ಪ್ರಕಾಶಿಸತೊಡಗಿದನು. ಕೃತ-ತ್ರೇತಾಯುಗಗಳಲ್ಲಿ ವೇದವು ಏಕ ರೂಪದಲ್ಲಿತ್ತು. ದ್ವಾಪರಯುಗವು ಆರಂಭವಾಗುತ್ತಲೇ ವೇದವು ಋಗ್ಯ ಜುಸ್ಸಾಮಾಥರ್ವಣಗಳೆಂಬುದಾಗಿ ನಾಲ್ಕು ವಿಭಾಗಗಳಾಗಿ ವಿಂಗಡಿ ಸಲ್ಪಟ್ಟಿತು.

ಈ ದ್ವಾಪರಯುಗದಲ್ಲಿ ಪೂರ್ಣವೇದಾಧ್ಯಯನಮಾಡಲು ಜನರಿಗೆ

ಸಾಮರ್ಥ್ಯವಿಲ್ಲದಿದ್ದುದೇ ಈ ವಿಭಾಗಕ್ಕೆ ಕಾರಣ. ಈ ಯುಗದಲ್ಲಿಯೂ ಮತ್ತೆ ಕೆಲವರು ನಾಲ್ಕು ವೇದಗಳನ್ನೂ ಅಧ್ಯಯನಮಾಡುತ್ತಿದ್ದರು. ಮತ್ತೆ ಕೆಲವರು ಮೂರು ವೇದಗಳನ್ನೂ, ಮತ್ತೆ ಕೆಲವರು ಎರಡು ವೇದ ಗಳನ್ನೂ, ಅನೇಕರು ಒಂದೇ ವೇದವನ್ನೂ ಅಧ್ಯಯನಮಾಡುತ್ತಿದ್ದರು. ಋಕ್ಕುಗಳನ್ನೇ ತಿಳಿಯದವರೂ ದ್ವಾಪರಯುಗದಲ್ಲಿದ್ದರು. ವೇದಗಳು ನಾಲ್ಕು ವಿಭಾಗ ಗಳಾಗಿಲಾಗಿ ಕರ್ಮಗಳು ಅನೇಕರೀತಿಯಲ್ಲಿ ವಿಭಾಗಿಸಲ್ಪಟ್ಟುವು. ಜನರು ರಜೋಗುಣಯುಕ್ತರಾಗಿ ತಪಸ್ಸಿನಲ್ಲಿಯೂ, ದಾನಾದಿಗಳಲ್ಲಿಯೂ ಪ್ರವೃತ್ತ ರಾಗುತ್ತಿದ್ದರು. ಬ್ರಹ್ಮನಿಷ್ಠರ ಸಂಖ್ಯೆಯು ಬಹಳ ಕಡಿಮೆಯಾಗುತ್ತಾ ಬಂದಿತು. ಹಿಂದೆಯೇ ಹೇಳಿದಂತೆ ಮನುಷ್ಯರು ಸತ್ತ್ವಹೀನರಾದುದರಿಂದ ವೇದವನ್ನು ವಿಭಾಗಿಸಬೇಕಾಯಿತು. ಒಂದು ವೇದವನ್ನಾಗಲೀ, ಋಕ್ಕನ್ನಾಗಲೀ ಅಧ್ಯಯನ ಮಾಡದವರೂ ಅನೇಕರಿದ್ದರು. ಇದರಿಂದ ಜನರು ಜ್ಞಾನಶೂನ್ಯರಾದರು. ಜ್ಞಾನಶೂನ್ಯರಾಗಲಾಗಿ ಅವರಲ್ಲಿ ಸತ್ಯನಿಷ್ಠೆಯೂ ಕಡಿಮೆಯಾಯಿತು. ಸತ್ಯಭ್ರಷ್ಟರಾದ ಅವರನ್ನು ಆಧಿ- ವ್ಯಾಧಿಗಳೂ, ಆಪತ್ತುಗಳೂ ಆಕ್ರಮಿಸ ತೊಡಗಿದುವು. ಮನುಷ್ಯರಲ್ಲಿ ದುರಾಶೆಯು ಹೆಚ್ಚಾಯಿತು. ಆಧಿ-ವ್ಯಾಧಿಗಳ ನಿವಾರಣೆಗಾಗಿ ಮತ್ತು ತಮ್ಮ ದುರಾಶೆಯ ಪೂರಣಕ್ಕಾಗಿ ಮನುಷ್ಯರು ತಪಸ್ಸನ್ನೂ, ಯಜ್ಞ- ಯಾಗಾದಿಗಳನ್ನು ಮಾಡತೊಡಗಿದರು. ಕೆಲವರು ಪ್ರಾಪಂಚಿಕಸುಖ ಪ್ರಾಪ್ತಿಗಾಗಿಯೂ ಮತ್ತೆ ಕೆಲವರು ಸ್ವರ್ಗಸುಖ ಪ್ರಾಪ್ತಿಗಾಗಿಯೂ ಯಜ್ಞಗಳನ್ನು ಮಾಡತೊಡಗಿದರು. ಈ ರೀತಿಯಾಗಿ ದ್ವಾಪರಯುಗದಲ್ಲಿನ ಜನರು ಮುಂದೆ ರಜೋಗುಣಪ್ರಧಾನರಾಗಿ ಅಧರ್ಮ ದಲ್ಲಿ ಪ್ರವರ್ತಿಸಿ ನಾಶಹೊಂದುತ್ತಿದ್ದಾರೆ. ಭೀಮಸೇನ! ಕಲಿಯುಗದಲ್ಲಿ ಧರ್ಮವು ಒಂದು ಪಾದವು ಮಾತ್ರವಿರುತ್ತದೆ. ಆ ಯುಗದಲ್ಲಿ ಶ್ರೀಮನ್ನಾ ರಾಯಣನು ಕಪ್ಪುಬಣ್ಣದಿಂದ ಪ್ರಕಾಶಿಸುತ್ತಾನೆ. ಆ ಯುಗವು ತಮೋಗುಣ ಪ್ರಧಾನವಾದುದು. ವೇದಾಧ್ಯಾಯನ, ಸದಾಚಾರ, ಯಜ್ಞ-ಯಾಗಗಳು ಆ ಯುಗದಲ್ಲಿ ಕ್ಷಯಿಸಿಹೋಗುತ್ತವೆ. ಅತಿವೃಷ್ಟಿ-ಅನಾವೃಷ್ಟಿಗಳಿಂದಲೂ, ಕ್ಷಾಮದಿಂದಲೂ, ಇಲಿಗಳಿಂದಲೂ, ಕಪಟಿಗಳಿಂದಲೂ ಆಹಾರವನ್ನು ತಿನ್ನುವ ಪಕ್ಷಿಗಳಿಂದಲೂ ಮತ್ತು ಶತ್ರುಗಳಿಂದಲೂ ಜನರು ಪೀಡಿತರಾಗು

ತ್ತಾರೆ. ಅನೇಕಾನೇಕವ್ಯಾಧಿಗಳು ಜನರನ್ನು ಬಾಧಿಸುತ್ತವೆ. ಜನರು ಆಲಸ್ಯದಿಂದಿರುತ್ತಾರೆ. ಬಹಳ ಬೇಗ ಕ್ರೋಧಪರವಶರಾಗುತ್ತಾರೆ. ಜನರಲ್ಲಿ ಹಸಿವಿನ ಭಯವು ಹೆಚ್ಚುತ್ತದೆ. ಯುಗಗಳು ಕಳೆದುಹೋಗುತ್ತಿದ್ದಂತೆ ಧರ್ಮವೂ ಕ್ಷೀಣಿಸುತ್ತಿರುತ್ತದೆ. ಧರ್ಮವು ಕ್ಷೀಣಿಸಿದಂತೆ ಜನರ ನೈತಿಕವಾದ ಮಟ್ಟವೂ ಕಡಿಮೆಯಾಗುತ್ತಾ ಹೋಗುತ್ತದೆ. ನೈತಿಕಮಟ್ಟವು ಕಡಿಮೆ ಯಾದಂತೆ ಅದರ ಸ್ವಭಾವ-ಗುಣಗಳೂ ವ್ಯತ್ಯಾಸವಾಗುತ್ತವೆ. ಈ ಕಾರಣದಿಂದಾಗಿ ಜನರು ಮಾಡುವ ಕರ್ಮಾನುಷ್ಠಾನಗಳೂ ವಿರುದ್ಧವಾದ ಫಲಗಳನ್ನೇ ಕೊಡುತ್ತವೆ. ಅಂತಹ ಕಲಿಯುಗವು ಬಹುಬೇಗ ಆರಂಭವಾಗಲಿದೆ. ಯುಗ-ಯುಗಾಂತರಗಳಲ್ಲಿಯೂ ಜೀವಿಸುವ ಚಿರಂಜೀವಿಗಳಾದ ನಾವೂ ಆಯಾ ಯುಗಗಳಲ್ಲಾಗುವ ಬದಲಾವಣೆಗಳಿಗೆ ಹೊಂದಿಕೊಂಡಿರುತ್ತೇವೆ. ನನ್ನ ಹಿಂದಿನ ರೂಪವನ್ನು ನೋಡಲಿಚ್ಛಿಸಿರುವ ನಿನಗೆ ನಾನು ಒಂದು ಮಾತನ್ನು ಹೇಳಬಯಸುತ್ತೇನೆ. ನಿಷ್ಪ್ರಯೋಜಕವಾದ ವಿಷಯಗಳಲ್ಲಿ ನಿನ್ನಂತಹ ತಿಳಿದವನು ಏಕೆ ಪ್ರವರ್ತಿಸಬೇಕು? ಈಗ ನೀನು ನನ್ನ ಅಂದಿನ ರೂಪವನ್ನು ನೋಡುವುದರಿಂದ ಆಗುವ ಪ್ರಯೋಜನವಾದರೂ ಏನು? ಆದುದರಿಂದ ನಿನ್ನ ಈ ಆಕಾಂಕ್ಷೆಯನ್ನು ತೊರೆಯುವುದು ಯೋಗ್ಯ ವಾಗಿದೆ. ನಿನ್ನ ಅಪೇಕ್ಷೆಯಂತೆ ಕೃತ-ತ್ರೇತಾ-ದ್ವಾಪರ-ಕಲಿಯುಗಗಳ ಗುಣ-ಧರ್ಮ ಗಳನ್ನು ನಿನಗೆ ವಿವರವಾಗಿ ಹೇಳಿರುತ್ತೇನೆ. ನಿನಗೆ ಒಳ್ಳೆಯದಾಗಲಿ. ಹಿಂದಿರುಗುವರನಾಗು, ಭೀಮಸೇನ!"

೧೪೯ನೆಯ ಅಧ್ಯಾಯವು ಮುಗಿಯಿತು.

೧೫೦ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಹನುಮಂತನಿಂದ ಮಹಾರೂಪ ಪ್ರದರ್ಶನ: ಚಾತುರ್ವರ್ಣ್ಯಗಳ ಧರ್ಮ ಪ್ರತಿಪಾದನೆ

ಭೀಮಸೇನನು ಹೇಳುತ್ತಾನೆ :

"ಅಣ್ಣ! ನಿನ್ನ ಆ ಮಹಾರೂಪವನ್ನು ನೋಡದೇ ನಾನು ಖಂಡಿತ

ವಾಗಿಯೂ ಹಿಂದಿರುಗಲಾರೆನು. ನೀನು ನಿಶ್ಚಯವಾಗಿಯೂ ನನ್ನ ವಿಷಯ ದಲ್ಲಿ ಸುಪ್ರೀತನಾಗಿರುವುದಾದರೆ–ನನಗೆ ಆ ದಿವ್ಯರೂಪವನ್ನು ತೋರಿಸು."

ಜನಮೇಜಯ! ಪಾಂಡುಪುತ್ರನಾದ ಭೀಮನು ಹೇಳಿದ ಮಾತನ್ನು ಕೇಳಿ ಮಹಾಮಹಿಮನಾದ ಮಾರುತಿಯು ನಸುನಗುತ್ತಾ ಸಮುದ್ರಲಂಘನ



ಕಾಲದಲ್ಲಿ ತನಗಿದ್ದ ರೂಪವನ್ನು ಹೊಂದಿದನು. ತನ್ನ ತಮ್ಮನಾದ ಭೀಮ ನನ್ನು ತೃಪ್ತಿಪಡಿಸುವ ಸಲುವಾಗಿ ಆಂಜನೇಯನು ಹೊಂದಿದ್ದ ಆ ಮಹಾ ರೂಪವು ಅಗಾಧವಾಗಿದ್ದಿತು.

**ದೇಹಸ್ತಸ್ಯ ತತೋಽತೀವ ವರ್ಧತ್ಯಾಯಾಮವಿಸ್ತರೈಃ ।**
**ಸದ್ರುಮಂ ಕದಲೀಷಣ್ಣಂ ಛಾದಯನ್ನಮಿತದ್ಯುತಿಃ ॥೩॥**

ಗಿರೇಶ್ಚೋಚ್ಛ್ರಯಮಾಕ್ರಮ್ಯ ತಸ್ಥೌ ತತ್ರ ಚ ವಾನರಃ ।
ಸಮುಚ್ಛ್ರಿತಮಹಾಕಾಯೋ ದ್ವಿತೀಯ ಇವ ಪರ್ವತಃ ॥೪॥

ತಾಮ್ರೇಕ್ಷಣಸ್ತೀಕ್ಷ್ಣದಂಷ್ಟ್ರೋ ಭ್ರುಕುಟೀಕುಟಿಲಾನನಃ ।
ದೀರ್ಘಲಾಙ್ಗೂಲಮಾವಿಧ್ಯ ದಿಶೋ ವ್ಯಾಪ್ಯ ಸ್ಥಿತಃ ಕಪಿಃ ॥೫॥

ಅವನ ಶರೀರವು ಉದ್ದವಾಗಿಯೂ ವಿಶಾಲವಾಗಿಯೂ ಬೆಳೆಯಿತು. ಬಾಳೆಯ ಗಿಡಗಳಿಂದ ಕೂಡಿದ್ದ ಆ ವನವೇ ಮುಚ್ಚಿಹೋಯಿತು. ಪರ್ವತದಷ್ಟು ಎತ್ತರವಾಗಿ ಹನುಮಂತನು ಬೆಳೆದನು. ಮತ್ತೊಂದು ಪರ್ವತವು ನಿಂತಿರುವಂತೆಯೇ ಬೆಳೆದು ನಿಂತಿದ್ದ ಹನುಮಂತನ ಕಣ್ಣುಗಳು ಕೆಂಪಾಗಿದ್ದುವು. ಕೋರೆದಾಡೆಗಳು ಚೂಪಾಗಿದ್ದುವು. ಮುಖ-ಹುಬ್ಬುಗಳು ಗಂಟಿಕ್ಕಿದ್ದುವು. ದೀರ್ಘವಾಗಿದ್ದ ಬಾಲವನ್ನು ಪ್ರಸರಿಸುತ್ತಾ ದಿಕ್ಕುಗಳನ್ನೂ ವ್ಯಾಪಿಸಿ ನಿಂತನು. ಹನುಮಂತನ ಆ ಪರಿಯಾದ ಮಹಾರೂಪವನ್ನು ಕಂಡು ಕುರುಪುಂಗವನಾದ ಭೀಮಸೇನನು ಆಶ್ಚರ್ಯಚಕಿತನಾದನು. ಭೀಮಸೇನನ ಶರೀರದಲ್ಲಿದ್ದ ಕೂದಲುಗಳು ನಿಮಿರಿ ನಿಂತುವು. ಸೂರ್ಯನಿಗೆ ಸಮಾನವಾದ ತೇಜಸ್ಸಿನಿಂದಲೂ, ಸ್ವರ್ಣಪರ್ವತಕ್ಕೆ ಸಮಾನವಾದ ಶರೀರ ಕಾಂತಿಯಿಂದಲೂ ಆಕಾಶವನ್ನೇ ಬೆಳಗುತ್ತಿರುವನೋ–ಎಂಬಂತೆ ಕಾಣು ತ್ತಿರುವ ವರ್ಚಸ್ಸಿನಿಂದಲೂ ಕೂಡಿದ್ದ ಹನುಮಂತನನ್ನು ಹೆಚ್ಚುಕಾಲ ದಿಟ್ಟಿಸಿ ನೋಡಲಾರದೇ ಭೀಮಸೇನನು ತನ್ನ ಕಣ್ಣುಗಳನ್ನು ಮುಚ್ಚಿಕೊಂಡನು.

ಅದನ್ನು ಕಂಡು ಹನುಮಂತನು ನಸುನಗುತ್ತಾ ತಮ್ಮನನ್ನು ಕುರಿತು ಹೇಳಿದನು : "ಮಗು! ಭೀಮಸೇನ! ನನ್ನ ಈ ರೂಪವನ್ನು ಮಾತ್ರವೇ ನೀನು ನೋಡಲು ಸಮರ್ಥನಾಗಿರುವೆ. ನನ್ನ ಇಚ್ಛೆಯಿದ್ದಷ್ಟು ಮಹತ್ತಾಗಿ ಬೆಳೆಯಬಲ್ಲೆನು ಮತ್ತು ಅಣುರೂಪನಾಗುವ ಸಾಮರ್ಥ್ಯವೂ ನನಗಿರುವುದು. ಶತ್ರುಗಳ ಮಧ್ಯದಲ್ಲಿದ್ದಾಗ ನನ್ನ ಶರೀರವು ಸ್ವಶಕ್ತಿಯಿಂದಲೇ ಬೆಳೆಯುತ್ತಾ ಹೋಗುವುದು."

ಜನಮೇಜಯ! ಪರಮಾದ್ಭುತವಾದ, ಮಹಾಭಯಂಕರವಾದ, ವಿಂಧ್ಯಪರ್ವತಸದೃಶವಾದ ಹನುಮಂತನ ಶರೀರವನ್ನು ನೋಡಿ ವಾಯು

ಪುತ್ರನಾದ ಭೀಮಸೇನನು ಭ್ರಾಂತನಾದನು. ಪುಳಕಿತನಾದ ಪಾಂಡು ಪುತ್ರನು ಬದ್ಧಾಂಜಲಿಯಾಗಿ ನಿಂತು ಹೇಳಿದನು :

**ದೃಷ್ಟಂ ಪ್ರಮಾಣಂ ವಿಪುಲಂ ಶರೀರಸ್ಯಾಸ್ಯ ತೇ ವಿಭೋ ।**
**ಸಂಹರಸ್ವ ಮಹಾವೀರ್ಯ ಸ್ವಯಮಾತ್ಮಾನಮಾತ್ಮನಾ ॥೧೨॥**

**ನ ಹಿ ಶಕ್ನೋಮಿ ತ್ವಾಂ ದ್ರಷ್ಟುಂ ದಿವಾಕರಮಿವೋದಿತಮ್ ।**
**ಅಪ್ರಮೇಯಮನಾಧೃಷ್ಯಂ ಮೈನಾಕಮಿವ ಪರ್ವತಮ್ ॥೧೩॥**

**ವಿಸ್ಮಯಶ್ಚೈವ ಮೇ ವೀರ ಸುಮಹಾನ್ಮನಸೋಽದ್ಯ ವೈ ।**
**ಯದ್ರಾಮಸ್ತ್ವಯಿ ಪಾರ್ಶ್ವಸ್ಥೇ ಸ್ವಯಂ ರಾವಣಮಭ್ಯಗಾತ್ ॥೧೪॥**

**ತ್ವಮೇವ ಶಕ್ತಸ್ತಾಂ ಲಙ್ಕಾಂ ಸಯೋಧಾಂ ಸಹವಾಹನಾಮ್ ।**
**ಸ್ವಬಾಹುಬಲಮಾಶ್ರಿತ್ಯ ವಿನಾಶಯಿತುಮಞ್ಜಸಾ ॥೧೫॥**

**ನ ಹಿ ತೇ ಕಿಂಚಿದಪ್ರಾಪ್ಯಂ ಮಾರುತಾತ್ಮಜ ವಿದ್ಯತೇ ।**
**ತವ ನೈಕಸ್ಯ ಪರ್ಯಾಪ್ತೋ ರಾವಣಃ ಸಗಣೋ ಯುಧಿ ॥೧೬॥**

"ವಿಭುವೇ! ಸಮುದ್ರಲಂಘನಕಾಲದಲ್ಲಿ ನಿನಗಿದ್ದ ಮಹಾರೂಪವನ್ನು ನಿನ್ನ ದಯೆಯಿಂದಾಗಿ ನಾನಿಂದು ಸಂದರ್ಶಿಸಿದೆನು. ನಿನ್ನ ಮೊದಲಿನ ರೂಪವನ್ನೇ ತಾಳು. ಈ ಮಹಾರೂಪವನ್ನು ಉಪಸಂಹರಿಸು. ಉದಯಿಸಿದ ಸೂರ್ಯನಂತೆ–ದಿವ್ಯತೇಜಸ್ಸಿನಿಂದ ಪ್ರಕಾಶಮಾನವಾಗಿರುವ ನಿನ್ನ ಈ ದಿವ್ಯರೂಪವನ್ನು ನೋಡಲು ನಾನು ಅಸಮರ್ಥನಾಗಿದ್ದೇನೆ. ಈ ನಿನ್ನ ಆಕಾರವು ಪರಿಮಿತಿಯಿಲ್ಲದ್ದು. ನಿನ್ನೀ ಶರೀರವನ್ನು ಅತಿಕ್ರಮಿಸಿ ಹೋಗಲು ಯಾರಿಂದಲೂ ಸಾಧ್ಯವಿಲ್ಲ. ಈ ನಿನ್ನ ಶರೀರವು ಸಾಕ್ಷಾತ್ ಮೈನಾಕಪರ್ವತ ದಂತೆಯೇ ಇರುವುದು. ನಿನ್ನ ರೂಪವನ್ನು ನೋಡಿದನಂತರ ನನಗೆ ಅತ್ಯಂತ ವಿಸ್ಮಯವೂ ಉಂಟಾಗಿದೆ. ನಿನ್ನಂತಹ ಪರಾಕ್ರಮಿಯು ತನ್ನ ಬಳಿ ಇದ್ದೂ ರಾಮನು ರಾವಣನನ್ನು ಕೊಲ್ಲಲು ಲಂಕೆಗೆ ಏಕೆ ಹೋದನೆಂಬುದೇ ನನ್ನ ಆಶ್ಚರ್ಯಕ್ಕೆ ಕಾರಣ. ನಿನ್ನ ಭುಜಬಲ-ಪರಾಕ್ರಮಗಳಿಂದಲೇ ನೀನು ಚತುರಂಗಬಲಯುಕ್ತವಾದ ಲಂಕೆಯನ್ನು ರಾವಣನ ಸಹಿತವಾಗಿಯೇ ಧ್ವಂಸಮಾಡಲು ಸಮರ್ಥನಾಗಿದ್ದೆ. ಅಣ್ಣ! ನಿಶ್ಚಯವಾಗಿಯೂ ನೀನು

ಸಾಧಿಸಲಾರದ ಕಾರ್ಯವೇ ಪ್ರಪಂಚದಲ್ಲಿ ಯಾವುದೂ ಇರುವುದಿಲ್ಲ. ಪರಿವಾರಸಮೇತನಾದ ರಾವಣನೂ ಯುದ್ಧದಲ್ಲಿ ನಿನ್ನೊಬ್ಬನಿಗೆ ಸಾಲುವುದಿಲ್ಲ."

ಜನಮೇಜಯ! ಭೀಮಸೇನನ ಮಾತುಗಳನ್ನು ಕೇಳಿ ಕಪೀಶ್ವರನು ಭೀಮಸೇನನನ್ನು ಕುರಿತು ಸ್ನೇಹಯುಕ್ತವಾಗಿಯೂ, ಗಂಭೀರವಾಗಿಯೂ ಇದ್ದ ಈ ಮಾತುಗಳನ್ನು ಹೇಳಿದನು :

"ನೀನು ಹೇಳುವುದು ನಿಶ್ಚಯ, ಭೀಮಸೇನ! ರಾಕ್ಷಸರು ನನ್ನ ಬಾಹುಬಲಕ್ಕೆ ಸಾಟಿಯಾಗಲಾರರು. ರಾವಣನನ್ನೂ ಅವನ ಚತುರಂಗಬಲವನ್ನೂ ನನ್ನ ಈ ಬಾಹುಬಲದಿಂದಲೇ ಧ್ವಂಸಮಾಡಬಹುದಾಗಿದ್ದಿತು. ಆದರೆ :

**ಮಯಾ ತು ನಿಹತೇ ತಸ್ಮಿನ್ರಾವಣೇ ಲೋಕಕಣ್ಟಕೇ ।**
**ಕೀರ್ತಿರ್ನಶ್ಯೇದ್ರಾಘವಸ್ಯ ತತ ಏತದುಪೇಕ್ಷಿತಮ್ ॥೧೯॥**

ಲೋಕಕಂಟಕನಾದ, ರಾಕ್ಷಸಾಧಮನಾದ ರಾವಣನನ್ನು ನಾನೇ ಸಂಹಾರಮಾಡಿಬಿಟ್ಟರೆ-ರಾಘವನ ಕೀರ್ತಿಯು ನಶಿಸಿಹೋಗುವುದೆಂದು ಭಾವಿಸಿ ನಾನವನನ್ನು ಕೊಲ್ಲದೆಯೇ ಬಿಟ್ಟುಬಿಟ್ಟೆನು. ವೀರನಾದ ರಾಘವನು ಪರಿವಾರಸಹಿತನಾದ ಆ ರಾಕ್ಷಸಾಧಮನನ್ನು ಸಂಹರಿಸಿ ಅವನಿಂದ ಅಪಹೃತಳಾಗಿದ್ದ ಸೀತಾದೇವಿಯನ್ನು ಪುನಃ ಪಡೆದು ಅಯೋಧ್ಯೆಗೆ ಪ್ರಯಾಣಮಾಡಿ ತನ್ನ ಕೀರ್ತಿಯನ್ನು ಈ ಮಾನವಲೋಕದಲ್ಲಿ ಪ್ರತಿಷ್ಠಾಪಿಸಿದನು.

ಸಹೋದರನಿಗೆ ಪ್ರಿಯವಾದ ಮತ್ತು ಹಿತವಾದ ಕಾರ್ಯವನ್ನು ಮಾಡುವುದರಲ್ಲಿಯೇ ಹೆಚ್ಚಿನ ಆಸಕ್ತಿಯುಳ್ಳ ಪ್ರಾಜ್ಞನಾದ ಭೀಮಸೇನನೇ! ವಾಯುದೇವನಿಂದ ಸಂರಕ್ಷಿತನಾದ ನೀನು ವಿಘ್ನರಹಿತವಾದ ಕ್ಷೇಮಕರವಾದ ಈ ಮಾರ್ಗದಲ್ಲಿ ಪ್ರಯಾಣಮಾಡು. ಈ ಮಾರ್ಗವು ನಿನ್ನನ್ನು ಸೌಗಂಧಿಕಪುಷ್ಪವಿರುವ ಅರಣ್ಯಕ್ಕೆ ಒಯ್ಯುವುದು. ಇದೇ ಮಾರ್ಗದಲ್ಲಿ ನೀನು ಯಕ್ಷ-ರಾಕ್ಷಸರಿಂದ ಸಂರಕ್ಷಿತವಾದ ಕುಬೇರನ ಉದ್ಯಾನವನವನ್ನೂ ಕಾಣುವೆ.

**ನ ಚ ತೇ ತರಸಾ ಕಾರ್ಯಃ ಕುಸುಮಾಪಚಯಃ ಸ್ವಯಮ್ ।**
**ದೈವತಾನಿ ಹಿ ಮಾನ್ಯಾನಿ ಪುರುಷೇಣ ವಿಶೇಷತಃ ॥೨೩॥**

ನೀನು ಅಲ್ಲಿರುವ ಪುಷ್ಪಗಳನ್ನು ಆತುರದಿಂದ ಕೀಳಲು ಯತ್ನಿಸಬೇಡ. ಅಲ್ಲಿರುವವರ ಅನಾದರಣೆಯನ್ನೂ ಮಾಡಬೇಡ. ದೇವತೆಗಳು ಯಾವಾಗಲೂ ಪೂಜ್ಯರು. ಅದರಲ್ಲಿಯೂ ಮಾನವನು ದೇವತೆಗಳನ್ನು ವಿಶೇಷವಾಗಿ ಪೂಜಿಸಿ ಗೌರವಿಸಬೇಕು.

**ಬಲಿಹೋಮನಮಸ್ಕಾರೈರ್ಮನ್ತ್ರೈಶ್ಚ ಭರತರ್ಷಭ ।**
**ದೈವತಾನಿ ಪ್ರಸಾದಂ ಹಿ ಭಕ್ತ್ಯಾ ಕುರ್ವನ್ತಿ ಭಾರತ ॥೨೪॥**

ಬಲಿ-ಹೋಮ-ನಮಸ್ಕಾರಗಳಿಂದಲೂ, ಮಂತ್ರಜಪದಿಂದಲೂ ಭಕ್ತಿಯಿಂದ ಮಾಡಿದ ಪೂಜೆಯಿಂದಲೂ ದೇವತೆಗಳು ಪ್ರಸನ್ನರಾಗುತ್ತಾರೆ. ಆದುದರಿಂದ ನೀನು ಯಾವ ಕಾರ್ಯವನ್ನೇ ಆಗಲೀ–ಬಲವನ್ನೇ ಪ್ರಧಾನವನ್ನಾಗಿಟ್ಟುಕೊಂಡು ದುಡುಕಿ ಮಾಡಲು ಹೋಗಬೇಡ. ಸ್ವಧರ್ಮದಪಾಲನೆಯನ್ನು ಮಾಡು. ಸ್ವಧರ್ಮನಿರತನಾಗಿದ್ದು, ಅತ್ಯಂತಶ್ರೇಷ್ಠವಾದ ಧರ್ಮವು ಯಾವುದೆಂಬುದನ್ನು ತಿಳಿದು ಅದರಂತೆ ಅನುಷ್ಠಾನಮಾಡು.

**ನ ಹಿ ಧರ್ಮಮವಿಜ್ಞಾಯ ವೃದ್ಧಾನನುಪಸೇವ್ಯ ಚ ।**
**ಧರ್ಮಾರ್ಥೌ ವೇದಿತುಂ ಶಕ್ಯೌ ಬೃಹಸ್ಪತಿಸಮೈರಪಿ ॥೨೬॥**

ಬೃಹಸ್ಪತಿಗೆ ಸಮಾನರಾದವರೇ ಆಗಿದ್ದರೂ–ಧರ್ಮವೇನೆಂಬುದನ್ನು ತಿಳಿಯದೇ ವೃದ್ಧರ ಸೇವೆಮಾಡದೇ ಇರುವವರು–ಧರ್ಮಾರ್ಥಗಳೇನೆಂಬುದನ್ನೂ ಅವುಗಳ ಸ್ವರೂಪವನ್ನೂ ತಿಳಿಯಲಾರರು.

**ಅಧರ್ಮೋ ಯತ್ರ ಧರ್ಮಾಖ್ಯೋ ಧರ್ಮಶ್ಚಾಧರ್ಮಸಂಜ್ಞಿತಃ ।**
**ಸ ವಿಜ್ಞೇಯೋ ವಿಭಾಗೇನ ಯತ್ರ ಮುಹ್ಯನ್ತ್ಯಬುದ್ಧಯಃ ॥೨೭॥**

ಭೀಮಸೇನ! ಕೆಲವು ಸಂದರ್ಭಗಳಲ್ಲಿ ಅಧರ್ಮವು ಧರ್ಮವಾಗಿ ಕಾಣುತ್ತದೆ. ಧರ್ಮವು ಅಧರ್ಮವಾಗಿ ಗೋಚರಿಸುತ್ತದೆ. ಅಂತಹ ಸಂದರ್ಭಗಳಲ್ಲಿ ಧರ್ಮಾಧರ್ಮಗಳನ್ನು ನಿರ್ಣಯಮಾಡಲು ಬುದ್ಧಿವಂತರಲ್ಲದವರು ಭ್ರಾಂತರಾಗುತ್ತಾರೆ. ಕೂಲಂಕುಷವಾಗಿ ಪರಿಶೀಲಿಸಿ ಧರ್ಮಾಧರ್ಮಗಳನ್ನು ವಿವೇಚನೆಮಾಡಿ ತಿಳಿಯಬೇಕು.

**ಆಚಾರಸಮ್ಭವೋ ಧರ್ಮೋ ಧರ್ಮೇ ವೇದಾಃ ಪ್ರತಿಷ್ಠಿತಾಃ ।**
**ವೇದೈರ್ಯಜ್ಞಾಃ ಸಮುತ್ಪನ್ನಾ ಯಜ್ಞೈರ್ದೇವಾಃ ಪ್ರತಿಷ್ಠಿತಾಃ ॥೨೮॥**

ಶುದ್ಧವಾದ ಆಚಾರಗಳ ಅಥವಾ ಸಂಪ್ರದಾಯಗಳ ಅನುಸರಣೆಯಿಂದ ಧರ್ಮವು ಹುಟ್ಟುತ್ತದೆ ಅಥವಾ ಧರ್ಮವು ರಕ್ಷಿತವಾಗುತ್ತದೆ. ವೇದಗಳು ಧರ್ಮದಲ್ಲಿ ಪ್ರತಿಷ್ಠಿತವಾಗಿವೆ. ಧರ್ಮವೇ ವೇದ; ವೇದವೇ ಧರ್ಮ. ವೇದ ಗಳಿಂದ ಯಜ್ಞಗಳು ಪ್ರಾದುರ್ಭೂತವಾಗಿವೆ. ಯಜ್ಞಗಳಿಂದ ದೇವತೆಗಳು ಪ್ರತಿಷ್ಠಿತರಾಗಿದ್ದಾರೆ. ಯಜ್ಞ-ಯಾಗಾದಿಗಳನ್ನೇ ಅವಲಂಬಿಸಿ ದೇವತೆ ಗಳಿದ್ದಾರೆ.

**ವೇದಾಚಾರವಿಧಾನೋಕ್ತೈರ್ಯಜ್ಞೈರ್ಧಾರ್ಯನ್ತಿ ದೇವತಾಃ ।**
**ಬೃಹಸ್ಪತ್ಯುಶನಃಪ್ರೋಕ್ತೈರ್ನಯೈರ್ಧಾರ್ಯನ್ತಿಮಾನವಾಃ ॥೨೯॥**

ವೇದೋಕ್ತವಾದ ಆಚಾರ-ವಿಧಾನಗಳಿಂದ ಮಾಡಲ್ಪಡುವ ಯಜ್ಞ ಗಳಿಂದ ದೇವತೆಗಳು ಧಾರಿತರಾಗುತ್ತಾರೆ. ಬೃಹಸ್ಪತಿ ಮತ್ತು ಶುಕ್ರರು ಹೇಳಿರುವ ನೀತಿಯಿಂದ ಮಾನವರು ನಿಯಂತ್ರಿತರಾಗುತ್ತಾರೆ.

**ಪಣ್ಯಾಕರವಣಿಜ್ಯಾಭಿಃ ಕೃಷ್ಯಾ ಗೋಜಾವಿಪೋಷಣೈಃ ।**
**ವಿದ್ಯಯಾ ಧಾರ್ಯತೇ ಸರ್ವಂ ಧರ್ಮೈರೇತೈರ್ದ್ವಿಜಾತಿಭಿಃ ॥೩೦॥**

ದ್ರವ್ಯಸಂಪಾದನೆಗಾಗಿ ವ್ಯಾಪಾರ ಮಾಡುವುದು, ಕಪ್ಪ-ಕಾಣಿಕೆಗಳನ್ನು ಸಂಗ್ರಹಿಸಿ ರಾಜಭಂಡಾರಕ್ಕೆ ಒಪ್ಪಿಸುವುದು, ತೆರಿಗೆಗಳನ್ನು ವಸೂಲು ಮಾಡು ವುದು, ಕೃಷಿಮಾಡುವುದು ಮತ್ತು ಹಸುಗಳನ್ನೂ, ಆಡು-ಕುರಿಗಳನ್ನೂ ಸಾಕುವುದು ಮತ್ತು ವಿದ್ಯಾಭ್ಯಾಸ–ಈ ಸ್ವಧರ್ಮಾನುಕೂಲಗಳಾದ ವೃತ್ತಿಗಳ ಮೂಲಕ ದ್ವಿಜರಿಂದ ಈ ಜಗತ್ತು ರಕ್ಷಿಸಲ್ಪಡುತ್ತಿದೆ.

**ತ್ರಯೀ ವಾರ್ತಾ ದಣ್ಡನೀತಿಸ್ತಿಸ್ರೋ ವಿದ್ಯಾ ವಿಜಾನತಾಮ್ ।**
**ತಾಭಿಃ ಸಮ್ಯಕ್ಪ್ರಯುಕ್ತಾಭಿರ್ಲೋಕಯಾತ್ರಾ ವಿಧೀಯತೇ ॥೩೧॥**

ವೇದಾಭ್ಯಾಸವು ಬ್ರಾಹ್ಮಣರಿಗೂ, ಕೃಷಿ-ವ್ಯಾಪಾರಗಳು ವೈಶ್ಯರಿಗೂ, ರಾಜ್ಯಾಡಳಿತವು ಕ್ಷತ್ರಿಯರಿಗೂ ಉಕ್ತವಾಗಿದೆ. ವೇದಾಭ್ಯಾಸವನ್ನು ಹೇಗೆ ಮಾಡಬೇಕು? ಕೃಷಿಯನ್ನು ಹೇಗೆ ಮಾಡಬೇಕು? ವ್ಯಾಪಾರವನ್ನು ಹೇಗೆ ಮಾಡಬೇಕು? ಮತ್ತು ಎಷ್ಟು ಲಾಭವಿಟ್ಟು ವ್ಯಾಪಾರಮಾಡಬೇಕು?

ರಾಜ್ಯಾಡಳಿತವು ಹೇಗಿರಬೇಕು? ಎಷ್ಟು ಮಂತ್ರಿಗಳಿರಬೇಕು?–ಮುಂತಾದುವುಗಳನ್ನು ತಿಳಿಸಲು ಅನೇಕಧರ್ಮಶಾಸ್ತ್ರಗಳಿವೆ. ಧರ್ಮಶಾಸ್ತ್ರಗಳಿಗೆ ಅನುಸಾರವಾಗಿ ಈ ವೃತ್ತಿಗಳನ್ನು ನಡೆಸುತ್ತಾ ಹೋದರೆ ಪ್ರಪಂಚದಲ್ಲಿ ಯಾವ ವಿಧವಾದ ಕ್ಷಾಮ-ಡಾಮರಗಳಾಗಲೀ ರೋಗ-ರುಜಿನಗಳಾಗಲೀ ಇರುವುದಿಲ್ಲ.

**ಸಾ ಚೇದ್ಧರ್ಮಕೃತಾ ನ ಸ್ಯಾತ್ತ್ರಯೀಧರ್ಮಮೃತೇ ಭುವಿ ।**
**ದಣ್ಡನೀತಿಮೃತೇ ಚಾಪಿ ನಿರ್ಮರ್ಯಾದಮಿದಂ ಭವೇತ್ ॥೩೨॥**

ವೇದಧರ್ಮದ ಹೊರತಾಗಿ ಯಾವುದನ್ನು ಮಾಡಿದರೂ ಅದು ಧರ್ಮಮೂಲವಾದ ಕಾರ್ಯವಾಗುವುದಿಲ್ಲ. ದಂಡನೀತಿಯ ಹೊರತಾಗಿ (ದಂಡನೀತಿಯಿಲ್ಲದಿದ್ದರೆ) ಈ ಲೋಕದ ಜನರು ಲೋಕಮರ್ಯಾದೆಯನ್ನು ಮೀರಿ ವರ್ತಿಸುವರು.

**ವಾರ್ತಾಧರ್ಮೇ ಹ್ಯವರ್ತಿನ್ಯೋ ವಿನಶ್ಯೇಯುರಿಮಾಃ ಪ್ರಜಾಃ ।**
**ಸುಪ್ರವೃತ್ತೈಸ್ತ್ರಿಭಿರ್ಹ್ಯೇತೈರ್ಧರ್ಮಂ ಸೂಯನ್ತಿ ವೈ ಪ್ರಜಾಃ ॥೩೩॥**

ವಾರ್ತಾಧರ್ಮದಲ್ಲಿ (ಕೃಷಿ, ವಾಣಿಜ್ಯ ಮತ್ತು ಗೋರಕ್ಷಣೆಗಳಲ್ಲಿ) ಪ್ರವೃತ್ತರಾಗದಿರುವ ಪ್ರಜೆಗಳು ವಿನಾಶಹೊಂದುತ್ತಾರೆ. ಈ ಮೂರು ಧರ್ಮಗಳನ್ನೂ ಸುವ್ಯವಸ್ಥಿತವಾಗಿ ಅನುಸರಿಸುವ ಪ್ರಜೆಗಳು ಧರ್ಮದ ಉತ್ಪಾದಕರಾಗುತ್ತಾರೆ. ಅರ್ಥಾತ್ ಧಾರ್ಮಿಕರಾಗಿ ಬಾಳುತ್ತಾರೆ.

**ದ್ವಿಜಾತೀನಾಮೃತಂ ಧರ್ಮೋ ಹ್ಯೇಕಶ್ಚೈವೈಕಲಕ್ಷಣಃ ।**
**ಯಜ್ಞಾಧ್ಯಯನದಾನಾನಿ ತ್ರಯಃ ಸಾಧಾರಣಾಃ ಸ್ಮೃತಾಃ ॥೩೪॥**

ಸತ್ಯ ಅಥವಾ ಸತ್ಯಸ್ವರೂಪನಾದ ಪರಮಾತ್ಮನ ಸಾಕ್ಷಾತ್ಕಾರ–ಇದೇ ಬ್ರಾಹ್ಮಣರ ಮುಖ್ಯಧರ್ಮ. ಸತ್ಯವೊಂದೇ ಬ್ರಾಹ್ಮಣಧರ್ಮದ ಏಕೈಕ ಲಕ್ಷಣ. ಯಜ್ಞ, ಅಧ್ಯಯನ ಮತ್ತು ದಾನ–ಈ ಮೂರೂ ಬ್ರಾಹ್ಮಣ- ಕ್ಷತ್ರಿಯ-ವೈಶ್ಯರ ಸಾಧಾರಣಧರ್ಮಗಳೆಂದು ಹೇಳಲ್ಪಟ್ಟಿದೆ.

**ಯಾಜನಾಧ್ಯಾಪನಂ ವಿಪ್ರೇ ಧರ್ಮಶ್ಚೈವ ಪ್ರತಿಗ್ರಹಃ ।**
**ಪಾಲನಂ ಕ್ಷತ್ರಿಯಾಣಾಂ ವೈ ವೈಶ್ಯಧರ್ಮಶ್ಚ ಪೋಷಣಮ್ ॥೩೫॥**

ಯಾಗಮಾಡಿಸುವುದು, ವೇದವನ್ನು ಹೇಳಿಕೊಡುವುದು ಮತ್ತು ದಾನ

ವನ್ನು ಪ್ರತಿಗ್ರಹಿಸುವುದು-ಇವುಗಳು ಬ್ರಾಹ್ಮಣರ ಧರ್ಮಗಳಾಗಿವೆ. ರಾಜ್ಯವನ್ನು ಧರ್ಮದಿಂದ ಪರಿಪಾಲನೆಮಾಡುವುದು ಕ್ಷತ್ರಿಯರ ಧರ್ಮವಾಗಿದೆ. ಪಶುಪಾಲನೆ, ಕೃಷಿ–ಇವು ವೈಶ್ಯಧರ್ಮವಾಗಿವೆ.

**ಶುಶ್ರೂಷಾ ಚ ದ್ವಿಜಾತೀನಾಂ ಶೂದ್ರಾಣಾಂ ಧರ್ಮ ಉಚ್ಯತೇ ।**
**ಭೈಕ್ಷ್ಯಹೋಮವ್ರತೈರ್ಹೀನಾಸ್ತಥೈವ ಗುರುವಾಸಿತಾಃ ॥೩೬॥**

ದ್ವಿಜರ ಸೇವೆಮಾಡುವುದು ಶೂದ್ರರ ಧರ್ಮವಾಗಿದೆ. ಅವರಿಗೆ ಭಿಕ್ಷಾಟನೆ, ಹೋಮ, ವ್ರತಾದಿಗಳು ನಿಷಿದ್ಧವೆನಿಸಿವೆ. ಗುರುಗೃಹವಾಸ ಮತ್ತು ಶುಶ್ರೂಷೆಗಳೇ ಅವರಿಗೆ ಶ್ರೇಷ್ಠವಾದ ಧರ್ಮ, ಭೀಮಸೇನ! ಈ ಚತುರ್ವಣಗಳಲ್ಲಿ ನೀನು ಕ್ಷತ್ರಿಯವರ್ಣಜನಾದ್ದರಿಂದ ಕ್ಷಾತ್ರಧರ್ಮವನ್ನೇ ಅನುಸರಿಸಬೇಕಾದುದು ನಿನ್ನ ಕರ್ತವ್ಯ. ಕ್ಷಾತ್ರಧರ್ಮದಲ್ಲಿ ಅತಿ ಮುಖ್ಯವಾಗಿರುವುದು ರಾಷ್ಟ್ರಪರಿಪಾಲನಾಧರ್ಮ. ವಿನೀತನಾಗಿಯೂ ಜಿತೇಂದ್ರಿಯನಾಗಿಯೂ ಇದ್ದು ನೀನು ಆ ಪರಿಪಾಲನಾಧರ್ಮವನ್ನು ಅನುಷ್ಠಾನಮಾಡಬೇಕು.

**ವೃದ್ಧೈಃ ಸಮ್ಮನ್ತ್ರ್ಯ ಸದ್ಭಿಶ್ಚ ಬುದ್ಧಿಮದ್ಭಿಃ ಶ್ರುತಾನ್ವಿತೈಃ ।**
**ಆಸ್ಥಿತಃ ಶಾಸ್ತಿ ದಣ್ಡೇನ ವ್ಯಸನೀ ಪರಿಭೂಯತೇ ॥೩೮॥**

ಬುದ್ಧಿವಂತರಾದ, ಸತ್ಪುರುಷರಾದ, ನೀತಿಶಾಸ್ತ್ರವಿಶಾರದರಾದ ವೃದ್ಧ ಮಂತ್ರಿಗಳ ಸಲಹೆಗಳನ್ನು ಕಾಲ-ಕಾಲಕ್ಕೆ ಪಡೆಯುತ್ತಾ ದಂಡನೀತಿಯನ್ನು ಅನುಸರಿಸಿ ರಾಜನು ರಾಜ್ಯವನ್ನು ಶಾಸನ ಮಾಡಬೇಕು. ವ್ಯಸನಿಯಾದ (ದುರಭ್ಯಾಸಗಳಲ್ಲಿ ಆಸಕ್ತನಾದ) ರಾಜನು ಬಹಳಬೇಗ ವಿನಾಶವನ್ನು ಹೊಂದುತ್ತಾನೆ.

**ನಿಗ್ರಹಾನುಗ್ರಹೈಃ ಸಮ್ಯಗ್ಯದಾ ರಾಜಾ ಪ್ರವರ್ತತೇ ।**
**ತದಾ ಭವನ್ತಿ ಲೋಕಸ್ಯ ಮರ್ಯಾದಾಃ ಸುವ್ಯವಸ್ಥಿತಾಃ ॥೩೯॥**

ದುಷ್ಟಶಿಕ್ಷಣ, ಶಿಷ್ಟಪರಿಪಾಲನ–ಇವೇ ರಾಜನ ಮುಖ್ಯಧರ್ಮಗಳು. ದುಷ್ಟರನ್ನು ಶಿಕ್ಷಿಸುವುದರಲ್ಲಿ ಮತ್ತು ಶಿಷ್ಟರನ್ನು ಪರಿಪಾಲಿಸುವುದರಲ್ಲಿ ರಾಜನು ಸಮರ್ಥನಾದಾಗಲೇ ರಾಜ್ಯದಲ್ಲಿ ಸುಭಿಕ್ಷವುಂಟಾಗುವುದು. ಲೋಕವು ವ್ಯವಸ್ಥಿತವಾಗಿ ಮುಂದುವರಿಯುವುದು.

**ತಸ್ಮಾದ್ದೇಶೇ ಚ ದುರ್ಗೇ ಚ ಶತ್ರುಮಿತ್ರಬಲೇಷು ಚ ।**
**ನಿತ್ಯಂ ಚಾರೇಣ ಬೋದ್ಧವ್ಯಂ ಸ್ಥಾನಂ ವೃದ್ಧಿಃ ಕ್ಷಯಸ್ತಥಾ ॥೪೦॥**

ದುಷ್ಟರಾರು–ಶಿಷ್ಟರಾರು? ಎಂಬುದನ್ನೂ, ಶತ್ರುಗಳಾರು–ಮಿತ್ರರಾರು?–ಎಂಬುದನ್ನೂ ರಾಜನು ಅತಿಸೂಕ್ಷ್ಮವಾಗಿ ಪರಿಶೀಲಿಸಿ ಕಾರ್ಯ ಮಾಡಬೇಕು. ಅತಿಚತುರರಾದ ಗೂಢಚಾರರು ರಾಜ್ಯಾಂಗಕ್ಕೆ ಬಹುಮುಖ್ಯರಾಗಿರುತ್ತಾರೆ. ಅವರ ಮೂಲಕವಾಗಿ ಶತ್ರುಗಳಾರು? ಅವರ ಅಂತಃಪ್ರವೃತ್ತಿಯೇನು? ಅವರ ರಾಜ್ಯದ ಸ್ವಾಭಾವಿಕಲಕ್ಷಣಗಳೇನು? ಅವರಿಗೆ ಮಿತ್ರರಾರಿದ್ದಾರೆ? ಅವರಲ್ಲಿರುವ ಬಲಾಬಲಗಳೇನು? ಅವರ ದೇಶದಲ್ಲಿ ಆಯಕಟ್ಟಿನ ಜಾಗಗಳು ಎಲ್ಲೆಲ್ಲಿವೆ? ಅವರು ಇದ್ದಂತೆಯೇ ಇರುವರೆ? ಯಾವುದರಿಂದ ಅಭಿವೃದ್ಧಿಯನ್ನು ಹೊಂದುತ್ತಿದ್ದಾರೆ? ಮತ್ತು ಅವರಿಗೆ ಯಾವುದರಲ್ಲಿ ನ್ಯೂನತೆಯಿದೆ?–ಇವುಗಳೆಲ್ಲವನ್ನೂ ಗೂಢಚಾರರ ಮೂಲಕ ರಾಜನು ತಿಳಿದುಕೊಳ್ಳಬೇಕು.

**ರಾಜ್ಞಾಮುಪಾಯಶ್ಚಾರಶ್ಚ ಬುದ್ಧಿಮನ್ತ್ರಪರಾಕ್ರಮಾಃ ।**
**ನಿಗ್ರಹಪ್ರಗ್ರಹೌ ಚೈವ ದಾಕ್ಷ್ಯಂ ವೈ ಕಾರ್ಯಸಾಧನಮ್ ॥೪೧॥**

ರಾಜರಾದವರಿಗೆ ಕಾರ್ಯಸಾಧನೆಯ ಉಪಾಯಗಳು ನಾಲ್ಕು. ಸಾಮ-ದಾನ-ಭೇದ-ದಂಡಗಳೆಂಬುವೇ ಅವು. ಉತ್ತಮಗೂಢಚಾರ, ಸುಬುದ್ಧಿ, ಮಂತ್ರಾಲೋಚನೆ, ಪರಾಕ್ರಮ, ವಿಧ್ವಂಸನ, ಸಂಧಾನ, ಸಾಮರ್ಥ್ಯ, ಪಾರಿತೋಷಕಪ್ರದಾನ–ಇವುಗಳು ಕಾರ್ಯದ ಸಾಧಕಗಳು.

**ಸಾಮ್ನಾ ದಾನೇನ ಭೇದೇನ ದಣ್ಡೇನೋಪೇಕ್ಷಣೇನ ಚ ।**
**ಸಾಧನೀಯಾನಿ ಕರ್ಮಾಣಿ ಸಮಾಸವ್ಯಾಸಯೋಗತಃ ॥೪೨॥**

ಸಾಮ, ದಾನ, ಭೇದ, ದಂಡ ಮತ್ತು ಉದಾಸೀನತೆ–ಈ ಪಂಚೋಪಾಯಗಳಿಂದಲೂ ಕಾರ್ಯಗಳನ್ನು ಸಾಧಿಸಿಕೊಳ್ಳಬೇಕು. ಕಾರ್ಯಸಾಧನೆಗಾಗಿ ಈ ಉಪಾಯಗಳಲ್ಲಿ ಒಂದೊಂದನ್ನಾದರೂ ಉಪಯೋಗಿಸಬಹುದು. ಎರಡು-ಮೂರು ಉಪಾಯಗಳನ್ನು ಏಕಕಾಲದಲ್ಲಿ ಉಪಯೋಗಿಸಲೂ ಬಹುದು.

(ಸಾಮೋಪಾಯವನ್ನು ಪ್ರಯೋಗಿಸುವಾಗ, ಶತ್ರುವಿನೊಡನೆ ಒಳ್ಳೆಯ ಮಾತನ್ನು ಹೇಳುವಾಗ, ಅಥವಾ ಶಾಂತಿಗಾಗಿ ಸಂಧಾನನಡೆಸುತ್ತಿರುವಾಗ

ಭೇದೋಪಾಯವನ್ನು ಪ್ರಯೋಗಿಸಕೂಡದೆಂಬ ನಿಯಮವಿಲ್ಲ. ಸಾಮಾನ್ಯವಾಗಿ ಭೇದ-ದಂಡೋಪಾಯಗಳನ್ನು ಏಕಕಾಲದಲ್ಲಿ ಪ್ರಯೋಗಿಸಬೇಕಾಗಬಹುದು. ಸಾಮೋಪಾಯದಿಂದ ಶತ್ರುವು ತಾತ್ಕಾಲಿಕವಾಗಿ ಸುಮ್ಮನಿದ್ದರೆ 'ಶತ್ರುವು ಮಿತ್ರನಾಗಿ ಪರಿವರ್ತಿತನಾದನೆಂದು' ಖಂಡಿತವಾಗಿಯೂ ಭಾವಿಸಬಾರದು. ಶತ್ರುವು ತಾತ್ಕಾಲಿಕವಾಗಿ ತನ್ನಲ್ಲಿರಬಹುದಾದ ನ್ಯೂನತೆಯಿಂದ ಸಾಮೋಪಾಯಕ್ಕೆ ಮಣಿದಿರುವನೇ ಹೊರತು ಅವನು ಖಂಡಿತವಾಗಿಯೂ ಮಿತ್ರನಾಗಲಾರನು. ಅವನೂ ಸಮಯವನ್ನು ನಿರೀಕ್ಷಿಸುತ್ತಿರಬಹುದು.)

**ಮನ್ತ್ರಮೂಲಾ ನಯಾಃ ಸರ್ವೇ ಚಾರಾಶ್ಚ ಭರತರ್ಷಭ ।**
**ಸುಮನ್ತ್ರಿತೇನ ಯಾ ಸಿದ್ಧಿಸ್ತಾಂ ದ್ವಿಜೈಃ ಸಹ ಮನ್ತ್ರಯೇತ್ ॥೪೩॥**

ಪ್ರಜೆಗಳ ವಿಷಯದಲ್ಲಿ, ಶತ್ರುಗಳ ವಿಷಯದಲ್ಲಿ, ದೇಶದ ಅಧಿಕಾರಿಗಳ ವಿಷಯದಲ್ಲಿ–ರಾಜನು ಅನುಸರಿಸಬೇಕಾದ ನೀತಿಗೆ ಮಂತ್ರಾಲೋಚನೆಯೇ ಮೂಲಕಾರಣವಾಗಿರುತ್ತದೆ. ನೀತಿಶಾಸ್ತ್ರಜ್ಞರೊಡನೆ ಚೆನ್ನಾಗಿ ಸಮಾಲೋಚಿಸಿ ನೀತಿಯನ್ನು ನಿರೂಪಿಸಿಕೊಳ್ಳಬೇಕು. ಗುಪ್ತಚಾರರೂ ರಾಜತಂತ್ರಜ್ಞರಾಗಿರಬೇಕು. ಸರಿಯಾಗಿ ಮಂತ್ರಾಲೋಚನೆಯನ್ನು ಮಾಡುವುದರಿಂದ ಎಲ್ಲ ಕಾರ್ಯಗಳೂ ಸಿದ್ಧಿಸುತ್ತವೆ. ಅಂತಹ ಸಂದರ್ಭಗಳಲ್ಲಿ ನೀತಿಶಾಸ್ತ್ರವಿಶಾರದರಾದ ಬ್ರಾಹ್ಮಣರೊಡನೆ ಸಮಾಲೋಚನೆಮಾಡಿ ಕಾರ್ಯವನ್ನು ಸಾಧಿಸಿಕೊಳ್ಳಬೇಕು.

**ಸ್ತ್ರಿಯಾ ಮೂಢೇನ ಬಾಲೇನ ಲುಬ್ಧೇನ ಲಘುನಾಪಿ ವಾ ।**
**ನ ಮನ್ತ್ರಯೀತ ಗುಹ್ಯಾನಿ ಯೇಷು ಚೋನ್ಮಾದಲಕ್ಷಣಮ್ ॥೪೪॥**

ಹೆಂಗಸು, ಬುದ್ಧಿಹೀನನಾದ ಮನುಷ್ಯ, ಬಾಲಕ, ಜಿಪುಣ, ಕುತ್ಸಿತ ವಾದ ಬುದ್ಧಿಯುಳ್ಳವನು, ಉನ್ಮತ್ತನಾಗಿರುವವನು–ಇಂತಹವರೊಡನೆ ಖಂಡಿತವಾಗಿಯೂ ರಹಸ್ಯವಿಷಯಗಳನ್ನು ಸಮಾಲೋಚಿಸಬಾರದು.

**ಮನ್ತ್ರಯೇತ್ಸಹ ವಿದ್ವದ್ಭಿಃ ಶಕ್ತೈಃ ಕರ್ಮಾಣಿ ಕಾರಯೇತ್ ।**
**ಸ್ನಿಗ್ಧೈಶ್ಚ ನೀತಿವಿನ್ಯಾಸಾನ್ಮೂರ್ಖಾನ್ಸರ್ವತ್ರ ವರ್ಜಯೇತ್ ॥೪೫॥**

ವಿದ್ವಾಂಸರೊಡನೆ ಸಮಾಲೋಚನೆಯನ್ನು ಮಾಡಬೇಕು. ಸಮರ್ಥ

ರಾದ ಧರ್ಮನಿಷ್ಠರಾದ ಅಧಿಕಾರಿಗಳ ಮೂಲಕ ವಿದ್ವಾಂಸರೊಡನೆ ಮಾಡಿದ ಮಂತ್ರಾಲೋಚನೆಯನ್ನು ಕಾರ್ಯರೂಪಕ್ಕೆ ತರಬೇಕು. ರಾಜನು ತನಗೆ ಸಂಬಂಧಪಟ್ಟ ವಿಷಯಗಳನ್ನು ತನ್ನ ಆಪ್ತಮಿತ್ರರೊಡನೆ ಸಮಾಲೋಚಿಸಬೇಕು. ದೇಶದ ವ್ಯವಹಾರವನ್ನೇ ಆಗಲೀ, ತನ್ನ ವ್ಯವಹಾರವನ್ನೇ ಆಗಲೀ–ಮೂರ್ಖರಾದವರೊಡನೆ ಖಂಡಿತವಾಗಿಯೂ ಸಮಾಲೋಚಿಸಲೇ ಬಾರದು.

ಧಾರ್ಮಿಕಾನ್ಧರ್ಮಕಾರ್ಯೇಷು ಅರ್ಥಕಾರ್ಯೇಷು ಪಣ್ಡಿತಾನ್ ।
ಸ್ತ್ರೀಷು ಕ್ಲೀಬಾನ್ನಿಯುಞ್ಜೀತ ಕ್ರೂರಾನ್ ಕ್ರೂರೇಷು ಕರ್ಮಸು ॥೪೬॥

ಧರ್ಮಕಾರ್ಯಗಳಲ್ಲಿ ಧಾರ್ಮಿಕರಾದವರನ್ನೂ, ಧರ್ಮಶಾಸ್ತ್ರಜ್ಞರನ್ನೂ ನಿಯೋಜಿಸಬೇಕು. ಆರ್ಥಿಕವ್ಯವಸ್ಥೆಯಲ್ಲಿ ಅರ್ಥಶಾಸ್ತ್ರನಿಪುಣರಾದ ಪಂಡಿತರನ್ನೇ ನಿಯೋಜಿಸಬೇಕು. ಅಂತಃಪುರದಲ್ಲಿರುವ ಸ್ತ್ರೀಯರ ರಕ್ಷಣೆಗೆ ನಪುಂಸಕರನ್ನೇ ನಿಯೋಜಿಸಬೇಕು. ಕ್ರೂರಕರ್ಮಗಳನ್ನು ಮಾಡಲು ಕ್ರೂರಿಗಳನ್ನೇ ನಿಯೋಜಿಸಬೇಕು.

ಸ್ವೇಭ್ಯಶ್ಚೈವ ಪರೇಭ್ಯಶ್ಚ ಕಾರ್ಯಾಕಾರ್ಯಸಮುದ್ಭವಾ ।
ಬುದ್ಧಿಃ ಕರ್ಮಸು ವಿಜ್ಞೇಯಾ ರಿಪೂಣಾಂ ಚ ಬಲಾಬಲಮ್ ॥೪೭॥

ಚತುರನಾದ ರಾಜನು ಶತ್ರುಗಳು ಮಾಡುವ ಕಾರ್ಯ ಮತ್ತು ಅಕಾರ್ಯಗಳಿಂದಲೇ ಅವರ ಬುದ್ಧಿಯು ಏನಿರಬಹುದೆಂಬುದನ್ನು ಮನಗಾಣಬೇಕು. ಅವನ ಬಲಾಬಲಗಳನ್ನೂ-ನ್ಯೂನತೆಯನ್ನೂ ತನ್ನ ಕಡೆಯ ಗೂಢಚಾರರಿಂದ ತಿಳಿಯುವುದಲ್ಲದೇ ಶತ್ರುಪಕ್ಷದ ಗೂಢಚಾರರನ್ನೂ ಲೋಭದಿಂದ ತನ್ನ ಕಡೆಗೆ ಮಾಡಿಕೊಂಡು ವಿಷಯಗಳನ್ನು ತಿಳಿದುಕೊಳ್ಳಬೇಕು.

ಬುದ್ಧ್ಯಾ ಸ್ವಪ್ರತಿಪನ್ನೇಷು ಕುರ್ಯಾತ್ಸಾಧುಷ್ವನುಗ್ರಹಮ್ ।
ನಿಗ್ರಹಂ ಚಾಪ್ಯಶಿಷ್ಟೇಷು ನಿರ್ಮರ್ಯಾದೇಷು ಕಾರಯೇತ್ ॥೪೮॥

ಜೀವದ ಆಸೆಯಿಂದ ಶರಣಾಗತವಾಗಿ ಬಂದವರನ್ನೂ, ಸತ್ಪುರುಷರನ್ನೂ ಸರ್ವಪ್ರಯತ್ನದಿಂದಲೂ ರಕ್ಷಣೆಮಾಡಬೇಕು. ದೇಶದ ಕಟ್ಟುಪಾಡಿಗೆ ವಿರೋಧವಾಗಿ ವರ್ತಿಸುವವರನ್ನೂ, ದುಷ್ಟರನ್ನೂ, ಲೋಕಮರ್ಯಾದೆಯನ್ನು ಉಲ್ಲಂಘಿಸಿದವರನ್ನೂ–ಉಗ್ರವಾಗಿ ಶಿಕ್ಷಿಸಬೇಕು.

**ನಿಗ್ರಹೇ ಪ್ರಗ್ರಹೇ ಸಮ್ಯಗ್ಯದಾ ರಾಜಾ ಪ್ರವರ್ತತೇ ।**
**ತದಾ ಭವತಿ ಲೋಕಸ್ಯ ಮರ್ಯಾದಾ ಸುವ್ಯವಸ್ಥಿತಾ ॥೪೯॥**

ದುಷ್ಟಶಿಕ್ಷಣ-ಶಿಷ್ಟಪರಿಪಾಲನವೆಂಬುದು ಬಹುಮುಖ್ಯವಾದ ರಾಜ ಧರ್ಮ. ದೇಶದ ಕಟ್ಟುಪಾಡುಗಳಿಗೆ ಮತ್ತು ಲೋಕಮರ್ಯಾದೆಗೆ ವಿರೋಧ ವಾಗಿ ವರ್ತಿಸುವವರನ್ನು ಕ್ರೂರವಾಗಿ ಶಿಕ್ಷಿಸುವುದರಿಂದಲೂ, ಸತ್ಪುರುಷ ರನ್ನೂ-ಸತ್ಪ್ರಜೆಗಳನ್ನೂ ರಕ್ಷಿಸುವುದರಿಂದಲೂ ರಾಜನ ಗೌರವವು ಹೆಚ್ಚುತ್ತದೆ. ಮತ್ತು ಲೋಕಮರ್ಯಾದೆಯೂ ಸುವ್ಯವಸ್ಥಿತವಾಗಿ ನಡೆಯುತ್ತದೆ. (ಇವುಗಳ ವೈಪರೀತ್ಯದಿಂದ ದೇಶದಲ್ಲಿ ಅನಾಯಕತ್ವವುಂಟಾಗುತ್ತದೆ.)

ಭೀಮಸೇನ! ರಾಜಧರ್ಮವು ಅಥವಾ ರಾಜಧರ್ಮಾನುಸರಣೆಯು ಹೂವಿನ ಹಾಸಿಗೆಯಲ್ಲ. ಮುಳ್ಳಿನ ಹಾಸಿಗೆಯಂತೆ ಅತಿಘೋರವಾದುದು ಮತ್ತು ಸಾಧಿಸಲು ದುಃಸಾಧ್ಯವಾದುದು. ಇಂತಹ ರಾಜಧರ್ಮವನ್ನು ನಿನ್ನ ಅಪೇಕ್ಷೆಯಂತೆ ವಿವರವಾಗಿ ಹೇಳಿರುವೆನು. ನೀನು ಕ್ಷತ್ರಿಯನಾಗಿರುವುದ ರಿಂದ ನಿನ್ನ ವರ್ಣಕ್ಕೆ ಅನುಸಾರವಾದ ಕ್ಷತ್ರಿಯಧರ್ಮವನ್ನು ಅರ್ಥಾತ್ ರಾಜಧರ್ಮವನ್ನು ವಿನೀತನಾಗಿ, ಜಿತೇಂದ್ರಿಯನಾಗಿ ಪರಿಪಾಲಿಸು.

**ತಪೋಧರ್ಮದಮೇಜ್ಯಾಭಿರ್ವಿಪ್ರಾ ಯಾನ್ತಿ ಯಥಾ ದಿವಮ್ ।**
**ದಾನಾತಿಥ್ಯಕ್ರಿಯಾಧರ್ಮೈರ್ಯಾನ್ತಿ ವೈಶ್ಯಾಶ್ಚ ಸದ್ಗತಿಮ್ ॥೫೧॥**

**ಕ್ಷತ್ರಂ ಯಾತಿ ತಥಾ ಸ್ವರ್ಗಂ ಭುವಿ ನಿಗ್ರಹಪಾಲನೈಃ ।**
**ಸಮ್ಯಕ್ಪ್ರಣೀತದಣ್ಡಾ ಹಿ ಕಾಮದ್ವೇಷವಿವರ್ಜಿತಾಃ ।**
**ಅಲುಬ್ಧಾ ವಿಗತಕ್ರೋಧಾಃ ಸತಾಂ ಯಾನ್ತಿ ಸಲೋಕತಾಮ್ ॥೫೨॥**

ತಪಸ್ಸು, ಧರ್ಮಬೋಧೆ, ಶಮ-ದಮಾದಿಗಳು, ಯಜ್ಞ-ಯಾಗಾದಿ ಗಳು–ಇವುಗಳನ್ನು ಮಾಡಿ ಬ್ರಾಹ್ಮಣರು ಸದ್ಗತಿಯನ್ನು ಪಡೆಯುವಂತೆ–ದಾನ, ಅತಿಥಿಸತ್ಕಾರ, ಧರ್ಮಕಾರ್ಯ-ಇವುಗಳಿಂದ ವೈಶ್ಯರು ಸದ್ಗತಿಯನ್ನು ಪಡೆಯುವಂತೆ–ಕಾಮ-ದ್ವೇಷವಿರ್ಜಿತರಾದ, ಲೋಭಿಗಳಲ್ಲದ ಕ್ಷತ್ರಿಯರೂ ದುಷ್ಟಶಿಕ್ಷಣ-ಶಿಷ್ಟಪರಿಪಾಲನವನ್ನು ಮಾಡುವುದರಿಂದಲೇ ಸದ್ಗತಿಯನ್ನು ಪಡೆಯುತ್ತಾರೆ. ನ್ಯಾಯ-ಧರ್ಮಗಳನ್ನನುಸರಿಸಿ ದಂಡನೀತಿಯನ್ನು ಪ್ರಯೋಗಿಸುತ್ತಾ, ಕಾಮ-ದ್ವೇಷವಿವರ್ಜಿತರಾಗಿ, ಅಲುಬ್ಧರಾಗಿ, ಕೋಪ

ರಹಿತರಾಗಿ ಇರುವ ರಾಜರು ಕಾಲಾಂತರದಲ್ಲಿ ಸತ್ಪುರುಷರಿಗೆ ಲಭಿಸುವ ಉತ್ತಮಲೋಕಗಳನ್ನು ಪಡೆಯುತ್ತಾರೆ.

೧೫೦ ನೆಯ ಅಧ್ಯಾಯವು ಮುಗಿಯಿತು.

೧೫೧ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಹನುಮಂತನು ಭೀಮಸೇನನನ್ನು ಸಮಾಧಾನಪಡಿಸಿ ಅಂತರ್ಹಿತನಾದುದು

ಪಾರಿಕ್ಷಿತನೇ! ಸ್ವೇಚ್ಛೆಯಿಂದ ಮಹಾಕಾಯವನ್ನು ಹೊಂದಿದ್ದ ಆಂಜನೇಯನು ಭೀಮನಿಗೆ ರಾಜಧರ್ಮವನ್ನು ಉಪದೇಶಮಾಡಿದನಂತರ



ಹಿಂದಿನಂತೆಯೇ ನಿಜರೂಪವನ್ನು ತಾಳಿ ತನ್ನ ಸೋದರನಾದ ಭೀಮಸೇನ

ನನ್ನು ಪ್ರೇಮದಿಂದ ಗಾಢಾಲಿಂಗನೆಮಾಡಿಕೊಂಡನು. ಆಂಜನೇಯನು ಮಾಡಿದ ಆಲಿಂಗನೆಯೂ ಅತಿಮಹತ್ವದ್ದು, ಜನಮೇಜಯ! ಹನುಮಂತನು ಮಾಡಿದ ಗಾಢಾಲಿಂಗನೆಯಿಂದಾಗಿ ಭೀಮನ ಆಯಾಸವೆಲ್ಲವೂ ಕ್ಷಣಮಾತ್ರದಲ್ಲಿ ಪರಿಹಾರವಾಯಿತು. ದ್ವಿಗುಣಿತವಾದ ಬಲವು ಪ್ರಾಪ್ತ ವಾದಂತೆ ಭೀಮನಿಗೆ ಭಾಸವಾಯಿತು. ತನಗೆ ಸಮಾನರಾದ ಬಲಶಾಲಿಗಳು ಈ ಪೃಥ್ವಿಯಲ್ಲೇ ಬೇರೊಬ್ಬರಿರಲಾರರೆಂದು ಭೀಮನು ಭಾವಿಸಿದನು. ಹನುಮಂತನು ಭೀಮನನ್ನು ಗಾಢವಾಗಿ ಆಲಿಂಗಿಸಿಕೊಂಡು ಆನಂದಭರಿತ ನಾಗಿ ಆನಂದಾಶ್ರುಗಳನ್ನು ತಲೆಯ ಮೇಲೆ ಅಭಿಷೇಚಿಸುತ್ತಾ ಅವನ ನೆತ್ತಿ ಯನ್ನು ಆಘ್ರಾಣಿಸಿ ಹೇಳಿದನು :

“ವೀರಾಧಿವೀರನೇ! ನಿನ್ನ ನಿವಾಸಕ್ಕೆ ಹಿಂದಿರುಗು. ಪ್ರಸಂಗಾಂತರದಲ್ಲಿ ಯಾವಾಗಲಾದರೂ ನನ್ನನ್ನು ಸ್ಮರಿಸು. ನಾನು ಇಲ್ಲಿರುವುದನ್ನು ಮಾತ್ರ ಯಾರೊಬ್ಬರೊಡನೆಯೂ ಯಾವಾಗಲೂ ಹೇಳಬೇಡ. ಕುಬೇರನ ಮನೆಯಿಂದ ಹೊರಟ ದೇವ-ಗಂಧರ್ವಸ್ತ್ರೀಯರು ಇಲ್ಲಿಗೆ ಆಗಮಿಸುವ ಕಾಲವು ಸನ್ನಿಹಿತವಾಗಿದೆ. ಆದುದರಿಂದ ನೀನಿನ್ನು ಪ್ರಯಾಣಮಾಡುವವ ನಾಗು. ನಿನ್ನನ್ನು ನೋಡಿದ ನನ್ನ ಕಣ್ಣುಗಳಿಂದು ಸಾರ್ಥಕತೆಯನ್ನು ಹೊಂದಿದುವು. ನಿನ್ನ ಆಲಿಂಗನಾರೂಪವಾದ ಈ ಮಾನುಷಶರೀರಸ್ಪರ್ಶ ದಿಂದ ರಘುಕುಲಾವತಂಸನಾದ, ಸಾಕ್ಷಾತ್ ಮಹಾವಿಷ್ಣುವಾದ, ರಾಮಾಭಿ ದಾನದಿಂದ ಅವತರಿಸಿದ್ದ, ಜಗದಾನಂದಕಂದನಾದ, ಸೀತೆಯ ಮುಖ ಕಮಲಕ್ಕೆ ಮತ್ತು ರಾವಣನೆಂಬ ಕತ್ತಲೆಗೆ ಸೂರ್ಯಪ್ರಾಯನಾದ ಶ್ರೀರಾಮಚಂದ್ರನ ಆಲಿಂಗನಸೌಖ್ಯವು ಸ್ಮರಣೆಗೆ ಬರುತ್ತಿದೆ. ಆದುದರಿಂದ ನಮ್ಮಿಬ್ಬರ ಸಮಾಗಮವು ಫಲರಹಿತವಾಗಬಾರದು, ಭೀಮ! ನಾನು ನಿನ್ನ ಸಹೋದರನೆಂಬುದನ್ನು ಪುರಸ್ಕರಿಸಿ ಸೋದರಪ್ರೇಮಪುರಸ್ಸರವಾಗಿ ಯಾವುದಾದರೊಂದು ವರವನ್ನು ಕೇಳು. ನೀನು ಕೇಳುವ ವರವು ಯಾವು ದಾದರೂ ಆಗಬಹುದು.

**ಯದಿ ತಾವನ್ಮಯಾ ಕ್ಷುದ್ರಾ ಗತ್ವಾ ವಾರಣಸಾಹ್ವಯಮ್ ।**
**ಧಾರ್ತರಾಷ್ಟ್ರಾ ನಿಹನ್ತವ್ಯಾ ಯಾವದೇತತ್ಕರೋಮ್ಯಹಮ್ ॥೧೦॥**

**ಶಿಲಯಾ ನಗರಂ ವಾಪಿ ಮರ್ದಿತವ್ಯಂ ಮಯಾ ಯದಿ ।**
**ಬದ್ಧ್ವಾ ದುರ್ಯೋಧನಂ ಚಾದ್ಯ ಆನಯಾಮಿ ತವಾನ್ತಿಕಮ್ ।**
**ಯಾವದೇತತ್ಕರೋಮ್ಯದ್ಯ ಕಾಮಂ ತವ ಮಹಾಬಲ ॥೧೧॥**

ಮಹಾಬಲನೇ! ನಾನೀಗಲೇ ವಾರಣಾವತವೆಂಬ (ಹಸ್ತಿನಾವತಿ) ಹೆಸರಿನ ನಗರಿಗೆ ಹೋಗಿ ಕ್ಷುದ್ರರಾದ ಧೃತರಾಷ್ಟ್ರದ ಮಕ್ಕಳನ್ನು ಧ್ವಂಸ ಮಾಡಿಬಿಡಲೇ? ನೀನು ಈ ವರವನ್ನು ಅಪೇಕ್ಷಿಸಿದೆಯಾದರೆ ಕ್ಷಣಮಾತ್ರದಲ್ಲಿ ಈ ಕಾರ್ಯವನ್ನು ಮಾಡಿ ಮುಗಿಸುವೆನು. ಕಲ್ಲಿನ ಮಳೆಗರೆದು ಆ ದುಷ್ಟದುರ್ಯೋಧನನ ರಾಜಧಾನಿಯನ್ನು ಧ್ವಂಸಮಾಡೆಂದರೆ ಅದನ್ನಾದರೂ ಕ್ಷಣಮಾತ್ರದಲ್ಲಿ ಮಾಡುವೆನು. ಅಥವಾ ದುರ್ಯೋಧನನನ್ನೇ ಹಿಡಿದು ಕಟ್ಟಿ ನಿನ್ನ ಮುಂದೆ ತಂದುಹಾಕಬೇಕೆಂದರೆ ಹಾಗೂ ಮಾಡುವೆನು. ಭೀಮಸೇನ! ನಾನು ಸಾಧಿಸಲಾಗದ ಕಾರ್ಯವೇ ಇಲ್ಲ. ಸಂಕೋಚವಿಲ್ಲದೇ ಯಾವ ವರವನ್ನಾದರೂ ಕೇಳು."

ಜನಮೇಜಯ! ಹನುಮಂತನ ಮಾತುಗಳನ್ನು ಕೇಳಿ ಆನಂದಭರಿತ ನಾದ ಭೀಮಸೇನನು ಆಂಜನೇಯನಿಗೆ ಹೇಳಿದನು :

**ಕೃತಮೇವ ತ್ವಯಾ ಸರ್ವಂ ಮಮ ವಾನರಪುಙ್ಗವ ।**
**ಸ್ವಸ್ತಿ ತೇಽಸ್ತು ಮಹಾಬಾಹೋ ಕಾಮಯೇ ತ್ವಾಂ ಪ್ರಸೀದ ಮೇ ॥೧೩॥**

**ಸನಾಥಾಃ ಪಾಣ್ಡವಾಃ ಸರ್ವೇ ತ್ವಯಾ ನಾಥೇನ ವೀರ್ಯವನ್ ।**
**ತವೈವ ತೇಜಸಾ ಸರ್ವಾನ್ವಿಜೇಷ್ಯಾಮೋ ವಯಂ ಪರಾನ್ ॥೧೪॥**

"ಕಪಿಶ್ರೇಷ್ಠನೇ! ನೀನು ಹೇಳಿದುದೆಲ್ಲವೂ ಸಿದ್ಧವಾಯಿತೆಂದೇ ನಾನು ಭಾವಿಸಿದ್ದೇನೆ. ನಿನಗೆ ಮಂಗಳವಾಗಲಿ. ನೀನು ಯಾವುದನ್ನೂ ಕಾರ್ಯ ಗತಮಾಡಿಕೊಡಬೇಕಾಗಿಲ್ಲ. ನಿನ್ನ ದಿವ್ಯಾನುಗ್ರಹದಿಂದ ಎಲ್ಲ ಕಾರ್ಯವನ್ನೂ ನಾವೇ ಸಾಧಿಸುವೆವು. ನೀನು ಪ್ರಸನ್ನನಾಗಿ ಅನುಗ್ರಹಿಸು. ನಿನ್ನ ದಿವ್ಯಾನುಗ್ರಹವೆಂಬ ಒಂದೇ ವರವು ಸಾಕು. ನಿನ್ನನ್ನು ರಕ್ಷಕನನ್ನಾಗಿ ಪಡೆದ ಪಾಂಡವರಿಂದು ನಿಶ್ಚಯವಾಗಿಯೂ ಸನಾಥರಾದರು. ವೀರವರನೇ! ನಿನ್ನ ಅನುಗ್ರಹಮಾತ್ರದಿಂದಲೇ ನಾವು ಸಕಲಶತ್ರುಗಳನ್ನೂ ಪರಾಜಯ ಗೊಳಿಸುವೆವು."

“ಭೀಮಸೇನ! ನೀನು ವೀರರಿಗೆ ಉಚಿತವಾದ ಮಾತುಗಳನ್ನೇ ಆಡಿರುವೆ. ಭ್ರಾತೃವಾತ್ಸಲ್ಯದಿಂದಲೂ ಮತ್ತು ಇಂದಿನ ಸಮಾಗಮ ದಿಂದುಂಟಾದ ಉಲ್ಲಾಸದಿಂದಲೂ ನಾನು ನಿನಗೆ ಯುದ್ಧಸಮಯದಲ್ಲಿ ನೆರ ವಾಗುವೆನು. ಧನುರ್ಧಾರಿಗಳಾದ ಮತ್ತು ಖಡ್ಗಧಾರಿಗಳಾದ ಶತ್ರುಗಳ ಸಮೂಹದಲ್ಲಿ ನುಗ್ಗಿ ನೀನು ಸಿಂಹಗರ್ಜನೆಮಾಡಿದಾಗ ಶತ್ರುಸಮೂಹ ವನ್ನಾವರಿಸಿರುವಂತೆ ನಾನು ನಿನ್ನ ನಿನಾದದೊಡನೆ ಘೋರಗರ್ಜನೆಗಳನ್ನು ಮಾಡುತ್ತಾ ಶತ್ರುಗಳ ಹೃದಯಗಳಲ್ಲಿ ಭೀತಿಯನ್ನುಂಟುಮಾಡುವೆನು. ಅರ್ಜುನನ ರಥದ ಧ್ವಜದಲ್ಲಿ ಉಪಸ್ಥಿತನಾಗಿದ್ದು ಸಮಯಗಳಲ್ಲಿ ಘೋರ ಗರ್ಜನೆಗಳನ್ನೂ ಮಾಡುತ್ತಾ ಶತ್ರುಸೈನ್ಯದ ಬಲವನ್ನು ನನ್ನ ನಿನಾದಮಾತ್ರ ದಿಂದಲೇ ಉಡುಗಿಸುವೆನು. ಹೀಗೆ ಮಾಡುವುದರಿಂದ ಶತ್ರುಗಳ ವಿಧ್ವಂಸನ ಕಾರ್ಯವು ನಿನಗೆ ಬಹಳ ಸುಲಭವಾಗುವುದು.”

ಹನುಮಂತನು ಭೀಮಸೇನನಿಗೆ ಹೀಗೆ ಹೇಳಿ ಮತ್ತು ಮುಂದೆ ಹೋಗಬೇಕಾದ ಹಾದಿಯನ್ನು ತಿಳಿಸಿ ಅದೃಶ್ಯನಾದನು.

೧೫೧ನೆಯ ಅಧ್ಯಾಯವು ಮುಗಿಯಿತು.

೧೫೨ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಸೌಗಂಧಿಕವನಕ್ಕೆ ಭೀಮಸೇನನ ಪ್ರವೇಶ

ಜನಮೇಜಯ! ಆಂಜನೇಯನು ಅದೃಶ್ಯನಾದನಂತರ ಭೀಮನು ಆಂಜನೇಯನ ಬೃಹದಾಕಾರವನ್ನೂ, ಅವನ ಅಪ್ರತಿಮವಾದ ತೇಜಸ್ಸನ್ನೂ ಮತ್ತು ದಾಶರಥಿಯ ಮಹಿಮೆಯನ್ನೂ ಸ್ಮರಿಸಿಕೊಳ್ಳುತ್ತಾ ಸೌಗಂಧಿಕ ಪುಷ್ಪವಿರುವ ಸರೋವರದ ಮಾರ್ಗವನ್ನು ಹಿಡಿದು ಗಂದಮಾದನಪರ್ವತ ವನ್ನು ಹತ್ತಲಾರಂಭಿಸಿದನು. ಸೌಗಂಧಿಕವನವನ್ನು ಅರಿಸಿಕೊಂಡು ಹೋಗು ತ್ತಿದ್ದಾಗ ಭೀಮನು ಮಾರ್ಗದಲ್ಲಿ ಅನೇಕಸುಂದರವಾದ ಉದ್ಯಾನವನ ಗಳನ್ನೂ, ಪೊದೆಗಳನ್ನೂ, ನದಿಗಳನ್ನೂ, ವೃಕ್ಷಗಳಿಂದ ಆವೃತವಾಗಿದ್ದ ಸರೋವರಗಳನ್ನೂ, ಫಲ-ಪುಷ್ಪಭರಿತವಾಗಿದ್ದ ಅನೇಕಜಾತಿಯ ವೃಕ್ಷ ಗಳನ್ನೂ, ಕೆಸರಿನಿಂದ ಲಿಪ್ತವಾದ ಮೇಘಸದೃಶವಾಗಿದ್ದ ಮದಗಜಗಳ

ಸಮೂಹವನ್ನೂ ನೋಡಿದನು. ಹಾಗೆಯೇ ಮುಂದೆ ನಡೆದು ಹೋಗುತ್ತಾ ಶ್ರೀಮಂತನಾದ ಭೀಮಸೇನನು ಚಂಚಲವಾದ ಓರೆಗಣ್ಣುಗಳಿಂದ ಕೂಡಿದ್ದು, ಬಾಯಲ್ಲಿ ಹುಲ್ಲನ್ನು ಕಚ್ಚಿಕೊಂಡು ತನ್ನನ್ನೇ ನೋಡುತ್ತಾ ನಿಂತಿದ್ದ ಹೆಣ್ಣುಜಿಂಕೆಗಳಿಂದ ಕೂಡಿದ್ದ ಮತ್ತು ಸಾರಂಗಗಳ ಸಮೂಹವನ್ನೂ ನೋಡಿದನು. ಕಾಡೆಮ್ಮೆಗಳಿಂದಲೂ, ಕಾಡುಹಂದಿಗಳಿಂದಲೂ, ಸಿಂಹ-ಶಾರ್ದೂಲಗಳಿಂದಲೂ ನಿಬಿಡವಾಗಿದ್ದ ಆ ಪರ್ವತವನ್ನು ನಿರ್ಭೀತನಾಗಿದ್ದ ಭೀಮಸೇನನು ಸಾಹಸದಿಂದ ಹತ್ತುತ್ತಿದ್ದನು. ಕುಸುಮಗಳಿಂದಲೂ ಕೆಂಪಾದ ಚಿಗುರುಗಳಿಂದಲೂ ಕೂಡಿದ್ದ ವೃಕ್ಷಗಳು ಗಾಳಿಯಿಂದ ಕಂಪಿತ ವಾಗುತ್ತಿರುವುದನ್ನು ನೋಡಿದರೆ ಆ ವೃಕ್ಷಗಳು ಭೀಮನನ್ನೇನಾದರೂ ತಲೆ ಯಲ್ಲಾಡಿಸಿ ಸನ್ನೆಮಾಡಿ ಪ್ರಾರ್ಥಿಸುತ್ತಿವೆಯೋ—ಎಂಬಂತೆ ಕಾಣುತ್ತಿದ್ದಿತು. ಭೀಮನು ಪ್ರಯಾಣಮಾಡುತ್ತಿದ್ದ ಹಾದಿಯಲ್ಲಿ ಪರಿಶುದ್ಧವಾದ ಮತ್ತು ರುಚಿ ಕರವಾದ ನೀರಿನಿಂದ ಕೂಡಿದ್ದ ಅನೇಕಸರೋವರಗಳಿದ್ದುವು. ಆ ಸರೋ ವರಗಳಲ್ಲಿ ತಾವರೆಗಳ ಮೊಗ್ಗುಗಳಿದ್ದು ಅವುಗಳ ಮೇಲೆ ಮದಿಸಿದ ದುಂಬಿ ಗಳು ಝೇಂಕರಿಸುತ್ತಿದ್ದುದನ್ನು ನೋಡಿದರೆ ಆ ಸರೋವರಗಳು ಪದ್ಮಾಂಜಲಿ ಸಂಪುಟವನ್ನು ಮಾಡಿ ಭೀಮನನ್ನು ಸಮ್ಮಾನಿಸುತ್ತಿರುವಂತೆ—ಕಾಣುತ್ತಿದ್ದಿತು. ಅಂತಹ ಸರೋವರಗಳನ್ನೂ ದಾಟಿ ಭೀಮನು ಮುಂದೆ ಪ್ರಯಾಣ ಮಾಡಿದನು.

ಎಷ್ಟು ದಾರಿ ನಡೆದರೂ ಭೀಮನಿಗೆ ಆಯಾಸವೇ ಆಗಲಿಲ್ಲ. ಅದಕ್ಕೆ ಕಾರಣವೇನೆಂದರೆ—ಅವನು ಹೊರಡುವಾಗ ತನ್ನ ಜೊತೆಯಲ್ಲಿ ಬುತ್ತಿಯನ್ನು ಕಟ್ಟಿಕೊಂಡು ಹೊರಟಿದ್ದನು. ಆ ಬುತ್ತಿಯು ಮುಗಿದುಹೋಗುವ ಬುತ್ತಿ ಯಾಗಿರಲಿಲ್ಲ. ಆ ಬುತ್ತಿಗೆ ಆಕಾರವಿಲ್ಲದಿದ್ದರೂ ಅದು ಬಹುಸೂಕ್ಷ್ಮ ರೂಪದಲ್ಲಿ ಭೀಮನ ಕಿವಿಯಲ್ಲಿ ಸೇರಿ ಭೀಮಸೇನನಿಗೆ ಕ್ಷಣ-ಕ್ಷಣಕ್ಕೂ ನವಚೈತನ್ಯವನ್ನು ಉಂಟುಮಾಡುತ್ತಿದ್ದಿತು. ಅದಾವುದೆಂದರೆ **‘ದ್ರೌಪದೀವಾಕ್ಯಪಥೇಯಃ’**. ದ್ರೌಪದಿಯು ಹೇಳಿದ ವಾಕ್ಯವನ್ನೇ ಭೀಮನು ಪಾಥೇಯವನ್ನಾಗಿ (ಬುತ್ತಿಯನ್ನಾಗಿ) ತನ್ನೊಡನೆ ತೆಗೆದು ಕೊಂಡು ಹೋಗಿದ್ದನು. ಆ ವಾಕ್ಯವನ್ನು ನೆನೆದಂತೆಲ್ಲಾ ಭೀಮನ ಮನಸ್ಸು ಸೌಗಂಧಿಕಕುಸುಮಗಳನ್ನು ಹುಡುಕುವುದರಲ್ಲಿಯೇ ಕೇಂದ್ರೀ

ಕೃತವಾಗುತ್ತಿತ್ತು. ನೆಟ್ಟ ದೃಷ್ಟಿಯಿಂದ ಭೀಮನು ಗಂಧಮಾದನಪರ್ವತದ ತಪ್ಪಲಿನಲ್ಲಿ ಪ್ರಯಾಣಮಾಡಿದನು. ಸೂರ್ಯನಾಗಲೇ ನಡುನೆತ್ತಿಯನ್ನು ದಾಟಿದ್ದನು. ಆ ಸಮಯದಲ್ಲಿ ಭೀಮನು ಪ್ರಯಾಣಮಾಡುತ್ತಾ ಜಿಂಕೆಗಳಿಂದ ನಿಬಿಡವಾಗಿದ್ದ ಅರಣ್ಯವೊಂದರ ಮಧ್ಯದಲ್ಲಿ ಸ್ವರ್ಣಮಯವಾದ ಕಮಲಗಳಿಂದ ನಿಬಿಡವಾಗಿದ್ದ ಸರೋವರವನ್ನು ಸಂದರ್ಶಿಸಿದನು.

ಆ ಸರೋವರವು ಹಂಸ-ಕಾರಂಡವ-ಚಕ್ರವಾಕಪಕ್ಷಿಗಳಿಂದ ಪರಿಶೋಭಿಸುತ್ತಿದ್ದು–ಗಂಧಮಾದನಪರ್ವತಕ್ಕೆ ಹಾಕಿರುವ ಪದ್ಮಮಾಲೆಯೋ–ಎಂಬಂತೆ ವಿರಾಜಿಸುತ್ತಿದ್ದಿತು. ಅದೇ ಸರಸ್ಸಿನಲ್ಲಿಯೇ ಮಹಾಪರಾಕ್ರಮಿಯಾದ ಭೀಮಸೇನನು ನೇತ್ರಾನಂದಕರವಾಗಿದ್ದ, ಬಾಲಸೂರ್ಯನಂತೆ ಪ್ರಕಾಶಮಾನವಾಗಿದ್ದ, ಸೌಗಂಧಿಕಕುಸುಮಗಳ ಸಮೂಹವನ್ನು ಕಂಡು ತಾನು ಬಂದ ಕಾರ್ಯವಾಯಿತೆಂದು ಸಂತುಷ್ಟನಾದನಲ್ಲದೇ–ತನ್ನ ಮನಸ್ಸಿನಲ್ಲಿಯೇ ತನ್ನ ಪ್ರೇಯಸಿಯಾದ, ವನವಾಸದಿಂದ ಕಂಗೆಟ್ಟಿದ್ದ ದ್ರೌಪದಿಗೆ ಸೌಗಂಧಿಕಕುಸುಮಗಳ ದಿವ್ಯಮಾಲೆಯನ್ನು ಸಮರ್ಪಿಸಿದನು.

೧೫೨ನೆಯ ಅಧ್ಯಾಯವು ಮುಗಿಯಿತು.

೧೫೩ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಕ್ರೋಧವಶರೆಂಬ ರಾಕ್ಷಸರಿಂದ ನಿರೋಧ

ಹಿಂದೆ ಹೇಳಿದಂತೆ ಕೈಲಾಸಶಿಖರದ ಸಮೀಪದಲ್ಲಿದ್ದ, ರಾಕ್ಷಸರಿಂದ ಸಂರಕ್ಷಿತವಾಗಿದ್ದ, ನಯನಮನೋಹರವಾಗಿದ್ದ ಆ ಸರೋವರವನ್ನು ಭೀಮಸೇನನು ಸಮೀಪಿಸಿದನು.

ದಿವ್ಯವಾದ ಆ ಸರೋವರವು ಕುಬೇರನ ಅರಮನೆಯ ಸಮೀಪದಲ್ಲಿ ಬೆಟ್ಟದ ಮೇಲೆ ಹರಿದುಬರುವ ಝರಿಗಳಿಂದ ಪ್ರಾದುರ್ಭವಿಸಿದ್ದಿತು. ಅದು ನೋಡಲು ಬಹುರಮ್ಯವಾಗಿದ್ದಿತು. ಪರ್ವತದ ಛಾಯೆಯು ಆ ಸರೋವರದಲ್ಲಿ ಬಿದ್ದು ಹೆಚ್ಚಿನ ಕಾಂತಿಯನ್ನುಂಟುಮಾಡುತ್ತಿದ್ದಿತು. ಆ ಸರೋವರದ ಸುತ್ತಲೂ ಹಲವು ಮರ-ಗಿಡ-ಬಳ್ಳಿಗಳಿದ್ದುವು. ಆ ಸರೋವರದಲ್ಲಿ ಹಸಿರುಬಣ್ಣದ ಕಮಲಗಳಿದ್ದುವು. ಅದು ನಾನಾವಿಧವಾದ ಪಕ್ಷಿಗಳಿಂದ ಕೂಡಿದ್ದಿತು. ಅದರ ತೀರಪ್ರದೇಶವು ಬಹುರಮ್ಯವಾಗಿದ್ದಿತು. ಆ

ಸರೋವರದಲ್ಲಿ ಸ್ವಲ್ಪವಾದರೂ ಕೆಸರಿಲ್ಲದೇ ನೀರು ಬಹಳ ಸ್ವಚ್ಛವಾಗಿದ್ದಿತು. ಪರ್ವತದ ತಪ್ಪಲುಪ್ರದೇಶದಲ್ಲಿ ಸಣ್ಣ ಸಣ್ಣ ಪ್ರವಾಹಗಳಾಗಿ ಹರಿದುಬಂದು ಆ ಸ್ಥಳದಲ್ಲಿ ಸರೋವರವಾಗಿ ಪರಿವರ್ತನಗೊಂಡಿದ್ದ ಆ ಜಲಾಶಯವು ನಿಶ್ಚಯವಾಗಿಯೂ ಬಹುರಮ್ಯವಾಗಿದ್ದಿತು. ಲೋಕದಲ್ಲಿಯೇ ಅದೊಂದು ಅತಿವಿಚಿತ್ರವಾದ, ಶುಭಾವಹವಾದ, ಅದ್ಭುತವಾದ ಸರೋವರವೆಂದು ಪರಿಗಣಿತವಾಗಿದ್ದಿತು.

ಅನುಪಮವಾದ ಸೌಂದರ್ಯದಿಂದ ಕೂಡಿದ ಆ ದಿವ್ಯಸರೋವರದಲ್ಲಿ ಕುಂತೀಪುತ್ರನಾದ ಭೀಮಸೇನನು ಅಮೃತರೂಪವಾಗಿದ್ದ, ಶೀತಲವಾಗಿದ್ದ, ಮಂಗಳಕರವಾದ, ಬಹುಸ್ವಚ್ಛವಾಗಿದ್ದ ಸುತೀರ್ಥವನ್ನು ಕಂಡನು. ಒಡನೆಯೇ ಮನಃಪೂರ್ತಿಯಾಗಿ ನೀರನ್ನು ಕುಡಿದು ದಣಿವಾರಿಸಿಕೊಂಡನು.

ರಮ್ಯವಾದ ಮತ್ತು ದಿವ್ಯವಾದ ಆ ಸರೋವರವು ಸೌಗಂಧಿಕಪುಷ್ಪಗಳಿಂದಲೂ–ವೈಡೂರ್ಯದ ಕಾಂಡಗಳಿದ್ದ ಸ್ವರ್ಣಮಯವಾದ ಕಮಲಪುಷ್ಪಗಳಿಂದಲೂ ತುಂಬಿಹೋಗಿದ್ದಿತು. ಆ ಸರೋವರದಲ್ಲಿ ಹಂಸ-ಕಾರಂಡವ-ಚಕ್ರವಾಕಾದಿ ಪಕ್ಷಿಗಳ ಪರ್ಯಟನದಿಂದಾಗಿ ಸುವರ್ಣಮಯವಾದ ಕಮಲಗಳ ಮತ್ತು ಸೌಗಂಧಿಕಪುಷ್ಪಗಳ ಪರಾಗವು ಸರ್ವತ್ರ ವ್ಯಾಪಿಸಿತ್ತು.

ಜನಮೇಜಯ! ರಮ್ಯವಾದ ಆ ಸರೋವರವು ರಾಜಾಧಿರಾಜನಾದ ಕುಬೇರನ ಕ್ರೀಡಾಸರೋವರವಾಗಿದ್ದಿತು. ಆದುದರಿಂದ ದೇವತೆಗಳೂ ಮತ್ತು ಗಂಧರ್ವಾಪ್ಸರೆಯರೂ ಆ ಸರೋವರವನ್ನು ಬಹುವಾಗಿ ಗೌರವಿಸುತ್ತಿದ್ದರು.

ದೇವರ್ಷಿಗಳೂ, ಯಕ್ಷ-ಕಿನ್ನರ-ಕಿಂಪುರುಷ-ರಾಕ್ಷಸರೂ ಆ ಸರೋವರಕ್ಕೆ ಪದೇ-ಪದೇ ಬಂದು ಹೋಗುತ್ತಿದ್ದರು. ಸಾಕ್ಷಾತ್ ಕುಬೇರನೇ ಅದರ ರಕ್ಷಣೆಯ ಭಾರವನ್ನು ವಹಿಸಿದ್ದನು. ಅಂತಹ ಅತಿಸುಂದರವಾದ ಸರೋವರವನ್ನು ಕಂಡ ಭೀಮಸೇನನ ಆನಂದಕ್ಕೆ ಪಾರವೇ ಇರಲಿಲ್ಲ.

ಕುಬೇರನ ಆಜ್ಞಾನುಸಾರವಾಗಿ ಒಂದು ಲಕ್ಷ ಮಂದಿ ಕ್ರೋಧವಶರೆಂಬ ರಾಕ್ಷಸರು ಸಮವಸ್ತ್ರಗಳನ್ನು ಧರಿಸಿ ಆಯುಧಪಾಣಿಗಳಾಗಿ ಸರ್ವಕಾಲದಲ್ಲಿಯೂ ಆ ಸರೋವರವನ್ನು ಸಂರಕ್ಷಿಸುತ್ತಿದ್ದರು. ಭಯವೆಂಬ ಶಂಕೆಯಿಂದ ರಹಿತನಾದ, ಭೀಮಪರಾಕ್ರಮಿಯಾದ, ಅಜಿನಧಾರಿಯಾದ, ಕನಕಾಂಗದ-

ಕೇಯೂರಗಳನ್ನು ಧರಿಸಿದ್ದ, ಆಯುಧಪಾಣಿಯಾದ ಭೀಮಸೇನನು ನಿರ್ಭೀತನಾಗಿ ಸೌಗಂಧಿಕಪುಷ್ಪಗಳನ್ನು ಕಿತ್ತುಕೊಳ್ಳುವ ಸಲುವಾಗಿ ಮುನ್ನುಗ್ಗಿ ಹೋಗುತ್ತಿರುವುದನ್ನು ಕಂಡು ಚಕಿತರಾದ ಕ್ರೋಧವಶರು ಪರಸ್ಪರವಾಗಿ ಕೂಗಿಕೊಂಡರು :



"ಭೋಃ! ಪುರುಷಸಿಂಹನಾದ, ಆಯುಧಪಾಣಿಯಾದ, ಕೃಷ್ಣಾಜಿನ ಧಾರಿಯಾದ ಈ ಮನುಷ್ಯನು ಯಾವ ಕಾರ್ಯವನ್ನು ಮಾಡಲೋಸುಗ ಇಲ್ಲಿಗೆ ಆಗಮಿಸಿರುವನೆಂಬುದನ್ನು ಪ್ರಶ್ನಿಸಿರಿ."

ಹೀಗೆ ಪರಸ್ಪರ ಮಾತನಾಡಿಕೊಂಡು, ಎಲ್ಲರೂ ಒಟ್ಟಾಗಿ ಸೇರಿ

ಮಹಾತೇಜಸ್ವಿಯಾದ ವೃಕೋದರನ ಬಳಿಗೆ ಬಂದು ಅವನನ್ನು ಕುರಿತು ಕೇಳಿದರು :

"ಪುರುಷಶ್ರೇಷ್ಠನೇ! ನೀನಾರು? ಇಲ್ಲಿಗೇಕೆ ಬಂದೆ? ಎಲ್ಲವನ್ನೂ ವಿಶದವಾಗಿ ತಿಳಿಸುವುದು ಯೋಗ್ಯವಾಗಿದೆ. ನೀನು ನೋಡಲು ತಪಸ್ವಿಯಂತೆ ಕಾಣುತ್ತಿದ್ದರೂ ಆಯುಧಪಾಣಿಯಾಗಿರುವೆ. ಮಹಾಮತಿಯೇ! ನೀನಿಲ್ಲಿಗೆ ಬಂದ ಕಾರ್ಯವೇನೆಂಬುದನ್ನು ಮರೆಮಾಚದೇ ಹೇಳು."

೧೫೩ನೆಯ ಅಧ್ಯಾಯವು ಮುಗಿಯಿತು.

೧೫೪ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಕ್ರೋಧವಶರ ಪರಾಜಯ : ಭೀಮನಿಂದ ಸೌಗಂಧಿಕಪುಷ್ಪಗಳ ಸಂಗ್ರಹ

"ರಾಕ್ಷಸರೇ! ನಾನು ಪಾಂಡುರಾಜನ ಮಗನು. ಧರ್ಮಾತ್ಮನಾದ ಯುಧಿಷ್ಠಿರನ ತಮ್ಮನು. ನನ್ನನ್ನು 'ಭೀಮಸೇನ' ಎಂದು ಕರೆಯುತ್ತಾರೆ. ನಾನು ನನ್ನ ಸೋದರರೊಡನೆ ಇಲ್ಲಿಗೆ ಸ್ವಲ್ಪ ದೂರದಲ್ಲಿರುವ ವಿಶಾಲಾ ಎಂಬ ಬದರೀಕಾಶ್ರಮಕ್ಕೆ ಬಂದಿರುವೆನು. ನಾವಲ್ಲಿ ವಿಶ್ರಾಂತರಾಗಿ ಕುಳಿತಿರು ವಾಗ ಈ ಸ್ಥಳದಿಂದಲೇ ಗಾಳಿಯಿಂದ ಒಯ್ಯಲ್ಪಟ್ಟ ಸೌಗಂಧಿಕಕುಸುಮ ವೊಂದು ನನ್ನ ಪ್ರೇಯಸಿಯಾದ ದ್ರೌಪದಿಯ ಎದುರಿನಲ್ಲಿ ಬಿದ್ದಿತು. ಅವಳು ಆ ದೇವಕುಸುಮವನ್ನು ನೋಡಿ ಆನಂದಭರಿತಳಾಗಿ ಅಂತಹ ಪುಷ್ಪಗಳು ಇನ್ನೂಬೇಕೆಂದು ನನ್ನೊಡನೆ ಹೇಳಿದಳು. ನಿಷ್ಕಳಂಕಳಾದ ಧರ್ಮಪತ್ನಿಯ ಇಚ್ಛೆಯನ್ನು ಪೂರೈಸುವ ಸಲುವಾಗಿ ಈ ಪುಷ್ಪಗಳನ್ನೊಯ್ಯಲು ನಾನಿಲ್ಲಿಗೆ ಬಂದಿರುವೆನು."

"ಪುರುಶ್ರೇಷ್ಠನೇ! ಈ ಸ್ಥಳವು ಕುಬೇರನಿಗೆ ಬಹಳ ಪ್ರಿಯವಾದುದು ಮತ್ತು ಈ ಸರೋವರವು ಕುಬೇರನ ಕ್ರೀಡಾಸರೋವರವೂ ಆಗಿರುವುದು. ಮರಣಧರ್ಮಿಯಾದ ಮಾನವನು ಇಲ್ಲಿ ವಿಹರಿಸಲು ಸಾಧ್ಯವಿಲ್ಲ. ದೇವರ್ಷಿ ಗಳೂ, ಯಕ್ಷರೂ ಮತ್ತು ದೇವತೆಗಳೂ ಯಕ್ಷರಾಜನಾದ ಕುಬೇರನ ಅನು ಮತಿಯನ್ನು ಪಡೆದೇ ಇಲ್ಲಿ ವಿಹರಿಸುತ್ತಾರೆ ಮತ್ತು ಇದರ ತೀರ್ಥವನ್ನು ಪ್ರಾಶನಮಾಡುತ್ತಾರೆ. ಗಂಧರ್ವಾಪ್ಸರೆಯರೂ ಕುಬೇರನ ಅನುಮತಿಯನ್ನು ಪಡೆದು ಇಲ್ಲಿ ವಿಹರಿಸುತ್ತಾರೆ.

ಯಾವನಾದರೂ ಕೆಟ್ಟ ಸ್ವಭಾವವುಳ್ಳವನ್ನು ಅವಿನಯದಿಂದ ಧನೇಶ್ವರನಾದ ಕುಬೇರನನ್ನು ಲೆಕ್ಕಿಸದೇ ಈ ಸರೋವರದಲ್ಲಿ ವಿಹರಿಸಲು ಪ್ರಯತ್ನಿಸಿದ್ದೇ ಆದರೆ ಅಂತಹವನು ಖಂಡಿತವಾಗಿಯೂ ವಿನಾಶಹೊಂದುತ್ತಾನೆ. ನೀನೂ ನಮ್ಮ ರಾಜನಾದ ಕುಬೇರನ ಅನುಮತಿಯನ್ನು ಪಡೆದೇ ಸೌಗಂಧಿಕ ಪುಷ್ಪಗಳನ್ನು ತೆಗೆದುಕೊಳ್ಳುವುದು ಯುಕ್ತವಾಗಿದೆ ಮತ್ತು ಧರ್ಮವಾಗಿದೆ. ನೀನು ನಮ್ಮ ರಾಜನ ಅನುಮತಿಯನ್ನು ಪಡೆಯದೇ ಕೇವಲ ಬಲಾತ್ಕಾರದಿಂದಲೇ ಹೂವುಗಳನ್ನು ಅಪಹರಿಸಲು ಯತ್ನಿಸಿದಲ್ಲಿ ಒಂದೇ ಒಂದು ಹೂವನ್ನೂ ನೋಡಲು ನಿನಗೆ ಸಾಧ್ಯವಾಗುವುದಿಲ್ಲ."

"ರಾಕ್ಷಸರೇ! ನೀವು ಹೇಳಿದುದೆಲ್ಲವನ್ನೂ ನಾನು ಅರ್ಥಮಾಡಿಕೊಂಡೆನು. ಮೊದಲನೆಯದಾಗಿ : ಅನುಮತಿಯನ್ನು ಕೇಳಲು ನಿಮ್ಮ ರಾಜನು ಇಲ್ಲಿದ್ದಾನೆಯೇ? ಒಂದು ವೇಳೆ ಅವನು ಇಲ್ಲಿಗೆ ಆಗಮಿಸಿದರೂ ಹೂಗಳನ್ನು ದಯಪಾಲಿಸುವಂತೆ ನಾನವನನ್ನು ಬೇಡಲೂ ಹೋಗುವುದಿಲ್ಲ.

**ನ ಹಿ ಯಾಚನ್ತಿ ರಾಜಾನ ಏಷ ಧರ್ಮಃ ಸನಾತನಃ ।**
**ನ ಚಾಹಂ ಹಾತುಮಿಚ್ಛಾಮಿ ಕ್ಷಾತ್ರಧರ್ಮಂ ಕಥಂಚನ ॥೧೦॥**

ರಾಜರು ಯಾವಾಗಲೂ ಯಾರನ್ನೂ ಯಾವುದಕ್ಕಾಗಿಯೂ ಬೇಡುವುದಿಲ್ಲ. ಇದು ಸನಾತನಧರ್ಮ. ನಾನೂ ಯಾವ ಕಾರಣಕ್ಕಾದರೂ ಕ್ಷಾತ್ರಧರ್ಮವನ್ನು ಪರಿತ್ಯಜಿಸುವ ಇಚ್ಛೆಯುಳ್ಳವನಾಗಿಲ್ಲ.

ಎರಡನೆಯದಾಗಿ: ಈ ಸರೋವರವು ಕುಬೇರನ ಅರಮನೆಯಲ್ಲಿರುವುದೇ? ಅವನೇನಾದರೂ ಈ ಸರೋವರವನ್ನು ಕಟ್ಟಿಸಿರುವನೇ? ಪರ್ವತದ ಮೇಲೆ ಹರಿದು ಬರುವ ಝರಿಗಳು ಇಲ್ಲಿ ನಿಂತು ಇದು ಸರೋ ವರವಾಗಿ ಪರಿವರ್ತನಗೊಂಡಿರುವುದು. ಆದುದರಿಂದ :

**ತುಲ್ಯಾ ಹಿ ಸರ್ವಭೂತಾನಾಮಿಯಂ ವೈಶ್ರವಣಸ್ಯ ಚ ।**
**ಏವಂ ಗತೇಷು ದ್ರವ್ಯೇಷು ಕಃ ಕಂ ಯಾಚಿತುಮರ್ಹತಿ ॥೧೨॥**

ಸರ್ವಪ್ರಾಣಿಗಳಿಗೂ ಈ ಸರೋವರದ ಮೇಲೆ ಅಧಿಕಾರವಿದೆ. ಅಂತೆಯೇ ಕುಬೇರನೂ ಈ ಸರೋವರವನ್ನು ಉಪಯೋಗಿಸಿಕೊಳ್ಳಬಹುದು. ಅವನಿಗೆ ಈ ಸರೋವರದ ಮೇಲೆ ವಿಶೇಷಾಧಿಕಾರವಿರಲು ಯಾವ

ಕಾರಣವೂ ಇರಲಾರದು. ಹೀಗಿರುವಾಗ ಸರ್ವರ ವಿಹಾರಕ್ಕೂ ಪ್ರಕೃತಿಯಿಂದ ದತ್ತವಾಗಿ ರುವ ಈ ಸರೋವರದಲ್ಲಿರುವ ಹೂಗಳನ್ನು ಪಡೆಯಲು ಯಾರ ಅನು ಮತಿಯು ತಾನೇ ಬೇಕಾಗಿರುವುದು? ಇಂತಹ ದ್ರವ್ಯಗಳ ವಿಷಯದಲ್ಲಿ ಯಾರು ಯಾರನ್ನು ತಾನೇ ಕೇಳಬೇಕಾಗಿದೆ?"

ಜನಮೇಜಯ! ಮಹಾಬಲಶಾಲಿಯಾದ ಭೀಮಸೇನನು ರಾಕ್ಷಸರಿಗೆ ಹೀಗೆ ಹೇಳಿ ಸರೋವರದೊಳಕ್ಕೆ ಧುಮುಕಿದನು. ಭೀಮಸೇನನು ತಮ್ಮ



ಮಾತನ್ನು ನಿರ್ಲಕ್ಷಿಸಿ ಸರೋವರದೊಳಕ್ಕೆ ಧುಮುಕಿದುದನ್ನು ಕಂಡು ಕೋಪಾವಿಷ್ಟರಾದ ರಾಕ್ಷಸರು ಸುತ್ತಲೂ ನಿಂತು ನಾನಾವಿಧವಾಗಿ ಹೆದರಿಸ ತೊಡಗಿದರು. "ಹೀಗೆಂದೂ ಮಾಡಬೇಡ! ಒಡನೆಯೇ ಮೇಲೆ ಹತ್ತಿ ಬರ

ದಿದ್ದರೆ ನಿನ್ನ ಗತಿಯು ಏನಾಗುವುದೋ ತಿಳಿಯದು''–ಎಂದೂ ಎಚ್ಚರಿಸಿ ದರು. ಅವರೇನೇ ಹೇಳಿದರೂ ಎಷ್ಟೇ ಕೂಗಿಕೊಂಡರೂ ಲಕ್ಷಿಸದೇ ಭೀಮನು ನಿರ್ಭೀತಿಯಿಂದ ಸರೋವರದಲ್ಲಿ ಇಳಿದನು.

ರಾಕ್ಷಸರೂ ಕಾಳಗಕ್ಕೆ ಸಿದ್ಧರಾದರು. ಕತ್ತಿಗಳನ್ನು ಒರೆಗಳಿಂದ ಸೆಳೆದು ಹಲ್ಲುಗಳನ್ನು ಕಟಕಟನೆ ಕಡಿದರು. ಕಣ್ಣುಗಳನ್ನರಳಿಸಿ ಭೀಮಸೇನನನ್ನು ದುರ-ದುರನೆ ನೋಡಿದರು.

''ಅವನನ್ನೀಗಲೇ ಹಿಡಿದು ತನ್ನಿರಿ! ಕಟ್ಟಿಹಾಕಿರಿ! ಕತ್ತರಿಸಿರಿ! ಕತ್ತರಿಸಿ ಪಾಕಮಾಡಿ ತಿಂದುಹಾಕೋಣ''–ಎಂದು ಮುಂತಾಗಿ ರಣಘೋಷಣೆ ಗಳನ್ನು ಮಾಡುತ್ತಾ ಮುನ್ನುಗ್ಗಿದರು. ಒಡನೆಯೇ ವೇಗಶಾಲಿಯಾದ ಭೀಮ ಸೇನನು ಬಹುಭಾರವಾಗಿದ್ದ, ಯಮನ ದಂಡಕ್ಕೆ ಸಮಾನವಾಗಿದ್ದ, ಚಿನ್ನದ ಕಟ್ಟುಗಳುಳ್ಳ ತನ್ನ ಗದೆಯನ್ನು ತಿರುಗಿಸುತ್ತಾ ಹೇಳಿದನು : ''ಕ್ಷಣಕಾಲ ಅಲ್ಲಿಯೇ ನಿಲ್ಲಿರಿ. ನಿಮ್ಮೆಲ್ಲರನ್ನೂ ಒಂದೇ ಪ್ರಹಾರದಿಂದ ಉರುಳಿಸಿಬಿಡು ತ್ತೇನೆ''–ಎಂದು ಹೇಳಿ ನೀರಿನಿಂದ ಹೊರಬಂದನು.

ಒಡನೆಯೇ ಉಗ್ರರಾದ ಕ್ರೋಧವಶರು ತಮ್ಮಲ್ಲಿದ್ದ ತೋಮರ ಗಳನ್ನೂ, ತ್ರಿಶೂಲಗಳನ್ನೂ, ಕೊಡಲಿಗಳನ್ನೂ ಪ್ರಯೋಗಿಸಿ ಭೀಮನನ್ನು ಸಂಹರಿಸಲು ನಿಶ್ಚಯಿಸಿದವರಾಗಿ ಅವನನ್ನು ಸುತ್ತುವರಿದು ನಿಂತರು.

ಆದರೆ ಮಹಾಬಲಶಾಲಿಯಾದ, ವಾಯುವಿನಿಂದ ಕುಂತಿಯಲ್ಲಿ ಉತ್ಪನ್ನನಾದ, ಶೂರನಾದ, ತೇಜಸ್ವಿಯಾದ, ಶತ್ರುಗಳ ವಿಧ್ವಂಸಕರನಾದ, ಧರ್ಮಪರನಾದ, ಸತ್ಯನಿಷ್ಠನಾದ, ಶತ್ರುಗಳಿಂದ ಪರಾಜಯಗೊಳಿಸಲಾಗದ ಭೀಮಸೇನನನ್ನು ಆ ರಾಕ್ಷಸರು ಏನು ತಾನೇ ಮಾಡಿಯಾರು? ಏಕಕಾಲ ದಲ್ಲಿ ಅವರೆಲ್ಲರನ್ನೂ ಎದುರಿಸಿ ನಿಂತು ತನ್ನ ಗದಾಪ್ರಹಾರದಿಂದ ಕ್ರೋಧ ವಶರು ತನ್ನ ಸುತ್ತಲೂ ಕಟ್ಟಿದ್ದ ಕೋಟೆಯನ್ನು ಕ್ಷಣಮಾತ್ರದಲ್ಲಿ ಭೇದಿಸಿ ನೂರಾರು ರಾಕ್ಷಸರನ್ನು ಹೊಡೆದುಹಾಕಿದನು.

ಅವನ ಬಾಹುಬಲವನ್ನೂ, ಗದಾಪ್ರಹಾರಚಾತುರ್ಯವನ್ನೂ ನೋಡಿ ಅವನೆದುರಿಗೆ ನಿಲ್ಲಲಾರದೇ ಉಳಿದ ರಾಕ್ಷಸರು ದಿಕ್ಕೆಟ್ಟು ಓಡಿದರು. ಅವರಲ್ಲ ನೇಕರಿಗೆ ತೋಳುಗಳು ಮುರಿದುಹೋಗಿದ್ದುವು. ಮತ್ತೆ ಕೆಲವರಿಗೆ ತೊಡೆ

ಗಳು ಮುರಿದು ತೆವಳಿಕೊಂಡೇ ಹೋಗಿ ತಪ್ಪಿಸಿಕೊಂಡರು. ರಾಕ್ಷಸರೆಲ್ಲರೂ ಸಮರಭೂಮಿಯನ್ನು ತೊರೆದರಾಗಿ ಪ್ರಾಣವನ್ನು ಉಳಿಸಿಕೊಳ್ಳಲು ಕೈಲಾಸಶಿಖರವನ್ನೇರಿದರು.

ಜನಮೇಜಯ! ಹಿಂದೆ ಇಂದ್ರನು ದೈತ್ಯರ ಮತ್ತು ದಾನವಸೈನ್ಯವನ್ನು ವಿನಾಶಮಾಡಿದಂತೆ–ಭೀಮಸೇನನು ಕುಬೇರನ ಸೈನಿಕರನ್ನು ವಿಧ್ವಂಸಮಾಡಿ ಸೌಗಂಧಿಕಪುಷ್ಪಗಳನ್ನು ಕೀಳಲು ಸರೋವರಕ್ಕೆ ಪುನಃ ಧುಮುಕಿದನು.



ಅಮೃತಸಮಾನವಾಗಿದ್ದ ಆ ಸರೋವರದ ನೀರನ್ನು ಕುಡಿದೊಡನೆಯೇ ರಾಕ್ಷಸರೊಡನೆ ಮಾಡಿದ ಯುದ್ಧದಿಂದ ಉಂಟಾಗಿದ್ದ ಆಯಾಸವೆಲ್ಲವೂ ಕ್ಷಣ

ಮಾತ್ರದಲ್ಲಿ ಪರಿಹಾರವಾಯಿತು. ನೀರುಕುಡಿದು ದಣಿವಾರಿಸಿಕೊಂಡನಂತರ ಸುಗಂಧಯುಕ್ತವಾಗಿದ್ದ ಸೌಗಂಧಿಕಪುಷ್ಪಗಳನ್ನು ಕೀಳಲು ಮೊದಲು ಮಾಡಿದನು.

ಇತ್ತಲಾಗಿ ಭೀಮಸೇನನಿಂದ ಪೆಟ್ಟು ತಿಂದ ಕ್ರೋಧವಶರು ತಮ್ಮ ರಾಜನಾದ ಕುಬೇರನ ಬಳಿಗೆ ಹೋಗಿ ಭೀಮನು ಸೌಗಂಧಿಕಪುಷ್ಪಗಳ ಅಪಹರಣಕ್ಕಾಗಿ ಬಂದಿರುವುದನ್ನೂ, ಅವನನ್ನು ತಡೆಯಲು ಹೋಗಿ ತಮಗುಂಟಾದ ದುಃಸ್ಥಿತಿಯನ್ನೂ ಮತ್ತು ಅವನ ಅತುಲಪರಾಕ್ರಮವನ್ನೂ ಕುಬೇರನಿಗೆ ವಿಶದವಾಗಿ ನಿವೇದಿಸಿದರು. ತನ್ನ ಕಿಂಕರರ ಮಾತುಗಳನ್ನು ಕೇಳಿ ಕುಬೇರನು ನಸುನಗುತ್ತಾ ಹೇಳಿದನು : "ಕೃಷ್ಣೆಗೋಸ್ಕರ ಭೀಮನು ತನಗೆ ಬೇಕಾದಷ್ಟು ಹೂಗಳನ್ನು ಕಿತ್ತುಕೊಳ್ಳಲಿ. ಈ ವಿಷಯವು ನನಗೆ ಈ ಮೊದಲೇ ತಿಳಿದಿದ್ದಿತು."

ರಾಜನು ಹೇಳಿದ ಮಾತನ್ನು ಕೇಳಿ ಕ್ರೋಧವಶರು ಆಶ್ಚರ್ಯಭರಿತ ರಾಗಿ ತಮ್ಮ ಕೋಪವನ್ನು ದೂರೀಕರಿಸಿ ಸರೋವರದ ಬಳಿಗೆ ಬಂದು ಸರೋವರದಲ್ಲಿ ಜಲಕ್ರೀಡೆಯಾಡುತ್ತಾ ಆನಂದತುಂದಿಲನಾಗಿದ್ದ ಕುರುಕುಲಾವತಂಸನಾದ ಭೀಮಸೇನನನ್ನು ಕಂಡರು.

೧೫೪ನೆಯ ಅಧ್ಯಾಯವು ಮುಗಿಯಿತು.

೧೫೫ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಭಯಂಕರವಾದ ಉತ್ಪಾತಗಳನ್ನು ನೋಡಿ ಯುಧಿಷ್ಠಿರಾದಿಗಳ ಚಿಂತೆ : ಸೌಗಂಧಿಕವನಕ್ಕೆ ಆಗಮನ

ಜನಮೇಜಯ! ಭೀಮನು ಆ ಸರೋವರದಲ್ಲಿದ್ದ ಬಹಳ ಅಪರೂಪವಾದ ನಾನಾವರ್ಣಗಳ ಸೌಗಂಧಿಕಪುಷ್ಪಗಳನ್ನು ಯಥೇಚ್ಛವಾಗಿ ಸಂಗ್ರಹಿಸುವುದರಲ್ಲಿ ನಿರತನಾಗಿದ್ದನು.

ಅತ್ತಲಾಗಿ ಯುಧಿಷ್ಠಿರಾದಿಗಳಿದ್ದ ಪ್ರದೇಶದಲ್ಲಿ ಕಲ್ಲುಗಳನ್ನು ಸೆಳೆಯುವಂತಹ ಚಂಡಮಾರುತವು ಜೋರಾಗಿ ಬೀಸತೊಡಗಿತು. ಯುದ್ಧಸೂಚಕವಾದ ಚಿಹ್ನೆಗಳು ಕಂಡುಬಂದುವು. ಘೋರಧ್ವನಿಮಾಡುತ್ತಾ ಉಲ್ಕೆಗಳು ಕೆಳಗೆ ಬೀಳುತ್ತಿದ್ದುವು. ಸುತ್ತಲೂ ಕತ್ತಲೆಯು ಕವಿಯಿತು. ಸೂರ್ಯನು ಪ್ರಕಾಶ

ರಹಿತನಾದನು. ಭೀಮನು ಕ್ರೋಧವಶರೊಡನೆ ಕಾಳಗಮಾಡುತ್ತಿದ್ದಾಗ ಮಾಡಿದ ಗರ್ಜನೆಯು ಆಕಾಶದಲ್ಲಿ ಪ್ರತಿಧ್ವನಿತವಾಯಿತು. ಭೂಮಿಯು ನಡುಗತೊಡಗಿತು. ಧೂಳಿನ ಮಳೆಗರೆಯಿತು. ದಿಗಂತದವರೆಗೂ ಕೆಂಪು ಬಣ್ಣವು ವ್ಯಾಪಿಸಿತು. ಪಶು-ಪಕ್ಷಿಗಳು ವಿಕಾರಧ್ವನಿಯಿಂದ ಕಠೋರವಾಗಿ ಅರಚುತ್ತಿದ್ದುವು. ಎಲ್ಲ ವಸ್ತುಗಳೂ ಕತ್ತಲಿನಿಂದ ಮುಚ್ಚಿಹೋದುವು. ಯಾವುದನ್ನೂ ಗುರುತಿಸುವ ಸಾಧ್ಯತೆಯಿರಲಿಲ್ಲ. ಅಷ್ಟೇ ಅಲ್ಲದೇ ಇನ್ನೂ ಅನೇಕ ಅಶುಭಸೂಚಕಗಳಾದ ಉತ್ಪಾತಗಳೂ ಕಂಡುಬಂದುವು. ಅತ್ಯಾಶ್ಚರ್ಯಕರವಾದ ಅಂತಹ ವಾತಾವರಣವನ್ನು ಕಂಡು ವಾಗ್ಮಿಗಳಲ್ಲಿ ಶ್ರೇಷ್ಠನೆನಿಸಿದ ಧರ್ಮರಾಜನು ತನ್ನ ಸುತ್ತಲೂ ಇದ್ದವರನ್ನು ಪ್ರಶ್ನಿಸಿದನು: 'ಈಗ ನಮ್ಮ ಮೇಲೆ ಆಕ್ರಮಣ ನಡೆಸುವರರು ಯಾರಿದ್ದಾರೆ?' ತಮ್ಮಂದಿರನ್ನು ನಿರ್ದೇಶಿಸಿ ಹೇಳಿದನು: "ಯುದ್ಧಪ್ರಿಯರಾದ ಪಾಂಡುಪುತ್ರರೇ! ನೀವೀಗಲೇ ಯುದ್ಧ ಸನ್ನದ್ಧರಾಗಿರಿ. ನಿಮಗೆ ಮಂಗಳವಾಗಲಿ. ನಿಮ್ಮ ಬಲವನ್ನು ಪ್ರದರ್ಶಿಸುವ ಕಾಲವು ಸನ್ನಿಹಿತವಾಗಿರುವುದೆಂದು ನಾನಿಂದು ಇಲ್ಲಿ ಕಾಣುತ್ತಿರುವ ಈ ಮಹೋತ್ಪಾತಗಳಿಂದಾಗಿ ಊಹಿಸಿದ್ದೇನೆ"-ಎಂದು ಹೇಳಿ ಧರ್ಮರಾಜನು ಎದ್ದುನಿಂತು ಸುತ್ತಲೂ ನೋಡಿದನು. ಭೀಮ-ನಕುಲ-ಸಹದೇವರು ತನ್ನ ಸಮೀಪದಲ್ಲಿಯೇ ಇದ್ದಾರೆಂದು ಯುಧಿಷ್ಠಿರನು ಭಾವಿಸಿದ್ದನು. ಆದರೆ ಭೀಮನು ಮಾತ್ರ ಅಲ್ಲಿರಲಿಲ್ಲ. ಭೀಮನೆಲ್ಲೆಂದು ನಕುಲ-ಸಹದೇವರನ್ನು ಪ್ರಶ್ನಿಸಿದನು. ಅವರು ಭೀಮಸೇನನ ವಿಷಯವು ತಮಗೆ ತಿಳಿಯದೆಂದು ಹೇಳಲಾಗಿ ಯುಧಿಷ್ಠಿರನು ಪಾಂಚಾಲಿಯನ್ನು ಪ್ರಶ್ನಿಸಿದನು.

"ಪಾಂಚಾಲಿ! ಭೀಮನೆಲ್ಲಿ? ಯಾವುದಾದರೂ ಸಾಹಸಕಾರ್ಯವನ್ನು ಸಾಧಿಸಲು ಹೋಗಿರುವನೇ? ಅಥವಾ ಸಾಹಸಪ್ರಿಯನಾದ ಅವನು ಸಾಹಸ ಕಾರ್ಯವನ್ನು ಮಾಡಿ ಕೃತಕೃತ್ಯನಾಗಿ ಬಂದಿರುವನೇ? ಅವನಿಲ್ಲಿ ಇಲ್ಲದಿರುವುದನ್ನು ನೋಡಿದರೆ ಮತ್ತು ಇಂದಿನ ಅಶುಭವಾತಾವರಣವನ್ನು ನೋಡಿದರೆ ಅವನೆಲ್ಲಿಯೋ ಯುದ್ಧದಲ್ಲಿ ತೊಡಗಿರಬಹುದೆಂದು ನಾನು ಭಾವಿಸುತ್ತೇನೆ."

ಯುಧಿಷ್ಠಿರನ ಮಾತನ್ನು ಕೇಳಿ ಪ್ರಿಯಪತ್ನಿಯಾದ ಚಾರುಹಾಸಿನಿ ಯಾದ ದ್ರೌಪದಿಯು ಯುಧಿಷ್ಠಿರನ ಮನಸ್ಸಿನಲ್ಲಿದ್ದ ಭಯವನ್ನು ಹೋಗ ಲಾಡಿಸುವ ಸಲುವಾಗಿ ಹೇಳಿದಳು :

"ಮಹಾರಾಜ! ನಾನು ನಿನಗರ್ಪಿಸಿದ ಸೌಗಂಧಿಕಪುಷ್ಪವು ನನ್ನ ಸಮೀಪಕ್ಕೆ ಗಾಳಿಯಲ್ಲಿ ಹಾರಾಡುತ್ತಾ ಬಂದು ಬಿದ್ದಿತು. ಸುಂದರವಾಗಿಯೂ ಸುಗಂಧಯುಕ್ತವಾಗಿಯೂ ಇದ್ದ ಆ ದೇವಕುಸುಮವನ್ನು ಕಂಡು ನಾನು



ಮೋಹಿತಳಾದೆನು. ಆ ಪುಷ್ಪವನ್ನು ಮೊದಲು ಭೀಮಸೇನನಿಗೆ ತೋರಿಸಿ 'ಅಂತಹುದೇ ಹೂಗಳು ನನಗೆ ಇನ್ನೂ ಬೇಕಾಗಿವೆ. ಅದರ ಮಾಲೆಯನ್ನು ಕಟ್ಟಿ ಮುಡಿದುಕೊಳ್ಳಬೇಕೆಂಬ ಆಸೆಯುಂಟಾಗಿದೆ. ಸಾಧ್ಯವಾದಷ್ಟು ಬೇಗ ಹೋಗಿ ತಂದುಕೊಡು' ಎಂದು ಕೇಳಿಕೊಂಡೆನು. ನನ್ನ ಆಸೆಯನ್ನು ಪೂರ್ಣ ಮಾಡುವ ಸಲುವಾಗಿ ಅವನು ಈಶಾನ್ಯದಿಕ್ಕಿನ ಕಡೆಗೆ ಪ್ರಯಾಣಮಾಡಿರಬಹುದು."

ದ್ರೌಪದಿಯ ಮಾತುಗಳನ್ನು ಕೇಳಿ ಧರ್ಮರಾಜನು ನಕುಲ-ಸಹದೇವರನ್ನು ಕುರಿತು–"ವೃಕೋದರನು ಹೋಗಿರುವ ಮಾರ್ಗವನ್ನೇ ಅನುಸರಿಸಿ ನಾವೂ ಪ್ರಯಾಣಮಾಡೋಣ. ಈ ರಾಕ್ಷಸರು (ಘಟೋತ್ಕಚನ ಕಿಂಕರರು) ಬಳಲಿರುವ ಮತ್ತು ಅಶಕ್ತರಾಗಿರುವ ಬ್ರಾಹ್ಮಣರನ್ನು ಎತ್ತಿಕೊಳ್ಳಲಿ" ಎಂದು ಹೇಳಿ ಅನಂತರ ಘಟೋತ್ಕಚನಿಗೆ ಹೇಳಿದನು :

"ಘಟೋತ್ಕಚ! ದೇವತೆಗಳಿಗೆ ಸಮಾನನಾಗಿರುವ ನೀನು ನಿನ್ನ ತಾಯಿಯಾದ ದ್ರೌಪದಿಯನ್ನು ಎತ್ತಿಕೊಂಡು ಪ್ರಯಾಣಮಾಡು. ಭೀಮಸೇನನು ಬಹಳ ದೂರ ಹೊರಟುಹೋಗಿರುವನೆಂದು ನಾನು ಊಹಿಸುತ್ತೇನೆ. ಏಕೆಂದರೆ : ಅವನು ವಾಯುವಿಗೆ ಸಮಾನವಾದ ವೇಗದಿಂದ ಪ್ರಯಾಣ ಮಾಡಬಲ್ಲನು. ಗರುಡನಂತೆ ಆಕಾಶದಲ್ಲಿಯೂ ಹಾರಿಹೋಗುವ ಸಾಮರ್ಥ್ಯವೂ ಕೆಳಕ್ಕೆ ನೆಗೆಯುವ ಶಕ್ತಿಯೂ ಅವನಿಗಿರುವುದು. ಹೀಗಿದ್ದರೂ ಅವನು ಇಷ್ಟು ಹೊತ್ತಾದರೂ ಹಿಂದಿರುಗದಿರುವುದನ್ನು ನೋಡಿದರೆ ಅವನು ಸೌಗಂಧಿಕ ಕುಸುಮವನ್ನರಸಿಕೊಂಡು ಬಹಳ ದೂರದವರೆಗೆ ಪ್ರಯಾಣ ಮಾಡಿರಬೇಕು. ನಾನೀಗ ನಿಮ್ಮ ಪ್ರಭಾವದಿಂದ ಭೀಮಸೇನನನ್ನು ಹಿಂಬಾಲಿಸಿ ಹೋಗಿ ಅವನನ್ನು ಬಹುಶೀಘ್ರವಾಗಿ ನೋಡಬೇಕಾಗಿದೆ. ಸ್ವಲ್ಪ ಸಾವಕಾಶವಾದರೂ ಅವನು ಬ್ರಹ್ಮಜ್ಞಾನಿಗಳಾದ ಸಿದ್ಧಪುರುಷರಿಗೆ ಅಪರಾಧ ಮಾಡಬಹುದೆಂಬ ಭಯವು ನನಗುಂಟಾಗಿರುವುದು."

ಯುಧಿಷ್ಠಿರನ ಮಾತುಗಳನ್ನು ಕೇಳಿ ಘಟೋತ್ಕಚನೇ ಮೊದಲಾದ ರಾಕ್ಷಸರು ಹಾಗೆಯೇ ಆಗಲೆಂದು ಹೇಳಿ ಒಬ್ಬೊಬ್ಬರು ಒಬ್ಬೊಬ್ಬರನ್ನು ಎತ್ತಿಕೊಂಡು ಪ್ರಯಾಣಹೊರಟರು. ಆ ರಾಕ್ಷಸರಿಗೆ ಸೌಗಂಧಿಕಪುಷ್ಪವಿರುವ ಕುಬೇರನ ಸರೋವರವು ಇರುವ ಸ್ಥಳವೂ ತಿಳಿದಿತ್ತು. ಕ್ಷಣಮಾತ್ರದಲ್ಲಿ ಆ ರಾಕ್ಷಸರು, ಪಾಂಡವರನ್ನೂ–ಲೋಮಶರೇ ಮೊದಲಾದ ಬ್ರಾಹ್ಮಣರನ್ನೂ ಮರ-ಗಿಡ-ಬಳ್ಳಿಗಳಿಂದ ಆವೃತವಾಗಿದ್ದ, ರಮ್ಯವಾಗಿದ್ದ ಸೌಗಂಧಿಕಪುಷ್ಪ ಗಳಿದ್ದ ಸರೋವರದ ಸಮೀಪದಲ್ಲಿ ಇಳಿಸಿದರು.

ಆ ಸರೋವರದ ದಂಡೆಯ ಮೇಲೆ ಭೀಮಸೇನನು ಉಗ್ರಾವತಾರವನ್ನು ತಾಳಿ, ಹಲ್ಲುಕಡಿಯುತ್ತಾ ಕೆಂಗಣ್ಣನಾಗಿ, ಗದೆಯನ್ನೆತ್ತಿ ಯಮಧರ್ಮನೋ

ಪಾದಿಯಲ್ಲಿ ನಿಂತಿರುವುದನ್ನೂ, ಅವನ ಸುತ್ತಲೂ ನೂರಾರು ಮಂದಿ ರಾಕ್ಷಸರು ಗತಪ್ರಾಣರಾಗಿ ಬಿದ್ದಿರುವುದನ್ನೂ ಕಂಡು ಯುಧಿಷ್ಠಿರನ್ನು ಓಡಿಹೋಗಿ ಭೀಮನನ್ನು ಬಾಚಿತಬ್ಬಿಕೊಂಡು ಸಮಾಧಾನಗೊಳಿಸುತ್ತಾ ಹೇಳಿದನು : "ಕೌಂತೇಯನೇ! ಎಂತಹ ಅಕಾರ್ಯವನ್ನು ಮಾಡಿಬಿಟ್ಟೆ! ನಿನಗೆ ಮಂಗಳವಾಗಲಿ. ನನಗೆ ಪ್ರಿಯವಾದ ಕಾರ್ಯವನ್ನು ಮಾಡುವ ಇಚ್ಛೆಯು ನಿನಗಿದ್ದರೆ ಇಂತಹ ಸಾಹಸಕಾರ್ಯವನ್ನೆಂದಿಗೂ ಮಾಡಲು ಹೋಗಬೇಡ. ದೇವತೆಗಳಿಗೆಂದಿಗೂ ಅಪಚಾರಮಾಡಬಾರದು, ಭೀಮಸೇನ!"

ಯುಧಿಷ್ಠಿರನು ಹೀಗೆ ಹೇಳಿ ಭೀಮಸೇನನನ್ನು ಸಮಾಧಾನಗೊಳಿಸಿದನು. ಅನಂತರ ದೇವಸಮಾನರಾದ ಅವರೆಲ್ಲರೂ ಆ ಸರೋವರದಲ್ಲಿ ಸ್ನಾನಮಾಡಿ ಅದರ ತೀರ್ಥವನ್ನೂ ಪ್ರಾಶನಮಾಡಿ ದಣಿವಾರಿಸಿಕೊಂಡರು.

ಆ ಸಮಯಕ್ಕೆ ಸರಿಯಾಗಿ ಸರೋವರವನ್ನು ಕಾಯುತ್ತಿದ್ದ ಮತ್ತು ಭೀಮನಿಂದ ಪೆಟ್ಟುತಿಂದಿದ್ದ ಕೆಲವರು ದೊಡ್ಡ-ದೊಡ್ಡ ಬಂಡೆಗಳನ್ನೆತ್ತಿಕೊಂಡು ಭೀಮನ ಮೇಲೆ ಬೀಳಲು ಗರ್ಜನೆಮಾಡುತ್ತಾ ಬಂದರು. ಮಹಾತ್ಮರಾದ ಯುಧಿಷ್ಠಿರನನ್ನೂ, ನಕುಲ-ಸಹದೇವರನ್ನೂ, ಲೋಮಶರನ್ನೂ ಮತ್ತು ಬ್ರಾಹ್ಮಣರನ್ನೂ ನೋಡಿ ಅವರ ಕೋಪವು ಉಪಶಮನವಾಯಿತು. ತಂದಿದ್ದ ಬಂಡೆಗಳನ್ನು ದೂರಕ್ಕೆಸೆದು ಎಲ್ಲ ರಾಕ್ಷಸರೂ ಕೈಜೋಡಿಸಿ ಯುಧಿಷ್ಠಿರನ ಮುಂದೆ ನಿಂತರು. ಯುಧಿಷ್ಠಿರನು ಎಲ್ಲರನ್ನೂ ಪ್ರಿಯೋಕ್ತಿಗಳಿಂದ ಸಮಾಧಾನಗೊಳಿಸಿದನು. ಯುಧಿಷ್ಠಿರಾದಿಗಳು ಸರೋವರಕ್ಕೆ ಆಗಮಿಸಿರುವುದು ಕುಬೇರನಿಗೂ ತಿಳಿಯಿತು. ಅವನ ಅನುಮತಿಯನ್ನು ಪಡೆದು ಯುಧಿಷ್ಠಿರಾದಿಗಳು ಗಂಧಮಾದನಪರ್ವತದ ತಪ್ಪಲಿನಲ್ಲಿದ್ದ ಆ ಸರೋವರದ ಸಮೀಪದಲ್ಲಿ ಅರ್ಜುನನ ಆಗಮನವನ್ನು ನಿರೀಕ್ಷಿಸುತ್ತಾ ಸ್ವಲ್ಪಕಾಲದವರೆಗೆ ತಂಗಿದ್ದರು."

೧೫೫ನೆಯ ಅಧ್ಯಾಯವು ಮುಗಿಯಿತು.

## ಅಶರೀರವಾಣಿಯ ಆದೇಶದಂತೆ ಪಾಂಡವರು ಪುನಃ ನರ-ನಾರಾಯಣರ ಆಶ್ರಮಕ್ಕೇ ಹಿಂದಿರುಗಿದುದು

ಪಾರಿಕ್ಷಿತ! ಯುಧಿಷ್ಠಿರನು ಒಂದು ದಿನ ಬ್ರಾಹ್ಮಣರನ್ನು ಉದ್ದೇಶಿಸಿ ಹೇಳಿದನು :

"ಪುಣ್ಯಕರಗಳಾದ, ಮಂಗಳಕರಗಳಾದ ಅನೇಕಾನೇಕ ತೀರ್ಥಗಳನ್ನು ಸಂದರ್ಶಿಸಿದೆವು. ಮನಸ್ಸಿಗೆ ಆಹ್ಲಾದಕರಗಳಾದ ಅನೇಕ ಅರಣ್ಯಗಳನ್ನೂ ಒಂದಾದ ಮೇಲೆ ಮತ್ತೊಂದರಂತೆ ಅನುಕ್ರಮವಾಗಿ ಸಂದರ್ಶಿಸಿದೆವು. ಅವು ಗಳೆಲ್ಲವೂ ಹಿಂದೆ ದೇವತೆಗಳಿಂದಲೂ, ದೇವರ್ಷಿಗಳಿಂದಲೂ, ಬ್ರಾಹ್ಮಣ ರಿಂದಲೂ ಸೇವಿಸಲ್ಪಟ್ಟಿದ್ದು ಬಹಳ ಪವಿತ್ರವಾದ ಕ್ಷೇತ್ರಗಳೆಂದು ಹೇಳಲ್ಪಟ್ಟಿವೆ. ಅನೇಕವಾದ ಆಶ್ರಮಗಳನ್ನು ಸಂದರ್ಶಿಸಿ ಅಲ್ಲಿದ್ದ ಋಷಿ-ಮಹರ್ಷಿಗಳಿಂದ ಉಪದೇಶಗಳನ್ನೂ ಪಡೆದೆವು. ಅನೇಕತೀರ್ಥಗಳಲ್ಲಿ ಪುಷ್ಪಗಳಿಂದಲೂ, ಕಂದಮೂಲ-ಫಲಾದಿಗಳಿಂದಲೂ ದೇವತೆಗಳಿಗೆ ಅರ್ಚನೆ ಯನ್ನೂ, ಪಿತೃ ಗಳಿಗೆ ತರ್ಪಣಾದಿಗಳನ್ನೂ ಸಲ್ಲಿಸಿದೆವು. ಅನೇಕಪರ್ವತ ಗಳನ್ನು ಹತ್ತಿ ಅಲ್ಲಿಯೂ ಸಹ ದೇವ-ಪಿತೃಗಳಿಗೆ ಯಥಾಯೋಗ್ಯವಾದ ಪೂಜೆಯನ್ನು ಸಲ್ಲಿಸಿದೆವು. ನಾನಾತೀರ್ಥಗಳನ್ನೂ ಸಮುದ್ರಗಳನ್ನೂ ಸಂದರ್ಶಿಸಿ ಅಲ್ಲಿ ಸ್ನಾನ ಮಾಡಿದೆವು. ಬ್ರಾಹ್ಮಣರೊಡನೆ ಇಲಾ, ಸರಸ್ವತೀ, ಸಿಂಧು, ಯಮುನಾ ಮತ್ತು ನರ್ಮದಾ-ಮುಂತಾದ ಅನೇಕಮಹಾನದಿಗಳಲ್ಲಿ ಸಂಕಲ್ಪಪೂರ್ವಕವಾಗಿ ಸ್ನಾನಮಾಡಿದೆವು. ಗಂಗಾದ್ವಾರಕ್ಕೆ ಪ್ರಯಾಣಮಾಡಿ ನಾನಾಜಾತಿಯ ಪಕ್ಷಿ ಗಳಿಂದ ಕೂಡಿರುವ ಹಿಮವತ್ಪರ್ವತವನ್ನೂ ಸಂದರ್ಶಿಸಿದೆವು. ನರ-ನಾರಾಯಣಾಶ್ರಮವಿರುವ ಪವಿತ್ರತಮವಾದ ಬದರಿಕಾಶ್ರಮವನ್ನೂ ಸಂದರ್ಶಿಸಿದೆವು. ಕಟ್ಟಕಡೆಗೆ ಸಿದ್ಧ-ಚಾರಣರಿಂದ ಸೇವ್ಯಮಾನವಾದ ದಿವ್ಯವಾದ ಸೌಗಂಧಿಕಪುಷ್ಪವಿರುವ ಈ ಸರಸ್ಸನ್ನೂ ಸಂದರ್ಶಿಸಿದ್ದಾಯಿತು. ಬ್ರಾಹ್ಮಣೋತ್ತಮರೇ! ಲೋಮಶರ ನಿರ್ದೇಶಾನುಸಾರವಾಗಿ ಈ ಪೃಥ್ವಿಯಲ್ಲಿರುವ ಪ್ರತಿಯೊಂದು ತೀರ್ಥವನ್ನೂ, ಆಶ್ರಮವನ್ನೂ, ನದಿ ಯನ್ನೂ, ಸಮುದ್ರವನ್ನೂ, ಪರ್ವತವನ್ನೂ ಸಂದರ್ಶಿಸಿದ್ದಾಯಿತು. ಆದರೆ

ಭೀಮಸೇನ! ಸಿದ್ಧರ ವಾಸಸ್ಥಾನವಾಗಿರುವ ಕುಬೇರನ ಲೋಕಕ್ಕೆ ಹೋಗಬೇಕೆಂಬ ಆಶಯವು ನನಗುಂಟಾಗಿರುವುದು. ಅಲ್ಲಿಗೆ ಪ್ರಯಾಣಮಾಡುವುದು ಹೇಗೆಂಬುದನ್ನು ಯೋಚಿಸಿ ಹೇಳುವೆಯಾ?"

ಯುಧಿಷ್ಠಿರನು ಭೀಮನೊಡನೆ ಹೀಗೆ ಹೇಳಿದೊಡನೆಯೇ ಅಶರೀರ ವಾಣಿಯು ಅವನ ಪ್ರಶ್ನೆಗೆ ಉತ್ತರಿಸಿತು :

**ನ ಶಕ್ಯೋ ದುರ್ಗಮೋ ಗನ್ತುಮಿತೋ ವೈಶ್ರವಣಾಶ್ರಮಾತ್ ।**
**ಅನೇನೈವ ಪಥಾ ರಾಜನ್ಪ್ರತಿಗಚ್ಛ ಯಥಾಗತಮ್ ॥೧೪॥**

**ನರನಾರಾಯಣಸ್ಥಾನಂ ಬದರೀತ್ಯಭಿವಿಶ್ರುತಮ್ ।**
**ತಸ್ಮಾದ್ಯಾಸ್ಯಸಿ ಕೌನ್ತೇಯ ಸಿದ್ಧಚಾರಣಸೇವಿತಮ್ ॥೧೫॥**

**ಬಹುಪುಷ್ಪಫಲಂ ರಮ್ಯಮಾಶ್ರಮಂ ವೃಷಪರ್ವಣಃ ।**
**ಅತಿಕ್ರಮ್ಯ ಚ ತಂ ಪಾರ್ಥ ತ್ವಾರ್ಷ್ಟಿಷೇಣಾಶ್ರಮೇ ವಸೇಃ ।**
**ತತೋ ದ್ರಕ್ಷ್ಯಸಿ ಕೌನ್ತೇಯ ನಿವೇಶಂ ಧನದಸ್ಯ ಚ ॥೧೬॥**

"ಯುಧಿಷ್ಠಿರ! ಕುಬೇರನ ಈ ಪ್ರದೇಶದಿಂದ ಮುಂದೆ ಹೋಗಲು ಸಾಧ್ಯವಿಲ್ಲ. ಮಾರ್ಗವು ಅತ್ಯಂತದುರ್ಗಮವಾಗಿದೆ. ನೀನು ನರ-ನಾರಾಯಣರ ಸ್ಥಾನವಾದ ಬದರಿಕಾಶ್ರಮಕ್ಕೇ ಪುನಃ ಪ್ರಯಾಣಮಾಡಬೇಕು. ಅಲ್ಲಿಂದ ಹೊರಟು ಫಲ-ಪುಷ್ಪಭರಿತವಾದ ವೃಷಪರ್ವನ ಆಶ್ರಮಕ್ಕೆ ಪ್ರಯಾಣಮಾಡಬೇಕು. ವೃಷಪರ್ವನ ಪುಣ್ಯಾಶ್ರಮವನ್ನೂ ದಾಟಿ ಮುಂದೆ ಪ್ರಯಾಣಮಾಡಿದರೆ ನಿಮಗೆ ಆರ್ಷ್ಟಿಷೇಣನೆಂಬ ಮಹರ್ಷಿಯ ಆಶ್ರಮವು ಸಿಕ್ಕುವುದು. ಆ ಆಶ್ರಮವನ್ನು ನೀನು ದಾಟಿದನಂತರ ಕುಬೇರನ ವೈಭವಪೂರ್ಣವಾದ ಭವನವನ್ನು ಕಾಣುವೆ."

ಆ ಸಮಯಕ್ಕೆ ಸರಿಯಾಗಿ ಅತಿಸಂತೋಷದಾಯಕವಾದ, ಸುಗಂಧಯುಕ್ತವಾದ ಮಂದಮಾರುತವು ಬೀಸತೊಡಗಿತು. ಅವರು ಉಪವಿಷ್ಟರಾಗಿದ್ದ ಸ್ಥಳದಲ್ಲಿ ಪುಷ್ಪವೃಷ್ಟಿಯೂ ಆಯಿತು. ಆಕಾಶದ ಕಡೆಯಿಂದ ಬಂದ ಆ ಅಶರೀರವಾಣಿಯನ್ನು ಕೇಳಿ ಎಲ್ಲರೂ ಆಶ್ಚರ್ಯಭರಿತರಾದರು. ಪರಮಾದ್ಭುತವಾದ ಆ ವಿಚಿತ್ರವಾಣಿಯನ್ನು ಕೇಳಿದ ಧೌಮ್ಯರು ಯುಧಿಷ್ಠಿರನಿಗೆ ಹೇಳಿದರು :

“ಯುಧಿಷ್ಠಿರ! ಈ ಅಶರೀರವಾಣಿಗೆ ನಾವು ಯಾವ ಪ್ರತ್ಯುತ್ತರವನ್ನೂ ಕೊಡುವ ಸಾಧ್ಯತೆಯಿಲ್ಲ. ಅದನ್ನು ಮೀರಿ ನಡೆಯುವಂತೆಯೂ ಇಲ್ಲ. ಆದುದರಿಂದ ಅದರ ನಿರ್ದೇಶನದಂತೆಯೇ ನಾವು ಬದರಿಕಾಶ್ರಮಕ್ಕೆ ಹಿಂದಿರುಗುವುದೇ ಯುಕ್ತವಾಗಿದೆ.”

ಪುರೋಹಿತರು ಹೇಳಿದುದಕ್ಕೆ ಯುಧಿಷ್ಠಿರನು ‘ಹಾಗೆಯೇ ಆಗಲಿ’ ಎಂದನು. ಘಟೋತ್ಕಚನ ಕಿಂಕರರ ಸಹಾಯದಿಂದ ಕ್ಷಣಮಾತ್ರದಲ್ಲಿ ಯುಧಿಷ್ಠಿರನೂ ಅವನ ಪರಿವಾರದವರೂ ಪುನಃ ಬದರಿಕಾಶ್ರಮಕ್ಕೆ ಆಗಮಿಸಿದರು. ಆ ಪುಣ್ಯಾಶ್ರಮದಲ್ಲಿಯೇ ಯುಧಿಷ್ಠಿರನು ತನ್ನ ಅನುಜರಿಂದಲೂ, ಪತ್ನಿಯಿಂದಲೂ, ಬ್ರಾಹ್ಮಣರಿಂದಲೂ ಕೂಡಿದವನಾಗಿ ಸುಖದಿಂದ ಕಾಲಕಳೆಯುತ್ತಿದ್ದನು.

೧೫೬ನೆಯ ಅಧ್ಯಾಯವು ಮುಗಿಯಿತು.

೧೫೭ನೆಯ ಅಧ್ಯಾಯ ಜಟಾಸುವಧಪರ್ವ

## ಜಟಾಸುರನಿಂದ ದ್ರೌಪದೀ-ಯುಧಿಷ್ಠಿರ-ನಕುಲ-ಸಹದೇವರ ಅಪಹರಣ : ಭೀಮನಿಂದ ಜಟಾಸುರವಧೆ

ಜನಮೇಜಯ! ನಾನು ಹಿಂದೆ ಹೇಳಿದಂತೆ ಅರ್ಜುನನನ್ನು ಕಾಣುವ ಆಕಾಂಕ್ಷೆಯಿಂದ ಯುಧಿಷ್ಠಿರಾದಿಗಳು ಬ್ರಾಹ್ಮಣರೊಡನೆ ಬದರಿಕಾಶ್ರಮದಲ್ಲಿ ಸುಖದಿಂದ ಕಾಲಕಳೆಯುತ್ತಿದ್ದರು. ಅವರಿಗೆ ಯಾವ ವಿಧವಾದ ಭಯವೂ ಇರಲಿಲ್ಲ. ಅವರ ಮುಂದಿನ ಪ್ರಯಾಣವೂ ಸಹ ಎಲ್ಲಿಗೆ? ಯಾವಾಗ? ಎಂಬುದು ನಿರ್ಧಾರವಾಗದೇ ಇದ್ದುದರಿಂದ ಯುಧಿಷ್ಠಿರನ ಅನುಮತಿಯನ್ನು ಪಡೆದು ಘಟೋತ್ಕಚಾದಿ ರಾಕ್ಷಸರೂ ಹೊರಟುಹೋದರು. ಆದರೆ ಆಪತ್ತು ಯಾವಾಗ-ಎಲ್ಲಿ ಬರುವುದೆಂಬುದನ್ನು ಕಂಡವರಾರು? ಆಶ್ರಮದ ಸಮೀಪದಲ್ಲಿ ಭೀಮನಿಲ್ಲದಿದ್ದಾಗ ರಾಕ್ಷಸನೊಬ್ಬನು ಯುಧಿಷ್ಠಿರ-ನಕುಲ-ಸಹದೇವರನ್ನೂ, ಕೃಷ್ಣೆಯನ್ನೂ ಎತ್ತಿಕೊಂಡು ಓಡಲಾರಂಭಿಸಿದನು.

ಕೃಷ್ಣೆಯನ್ನು ಅಪಹರಿಸಿಕೊಂಡು ಹೋಗಬೇಕೆಂಬ ದುರ್ಬುದ್ಧಿಯು ಅವನಿಗೆ ಬಹಳ ದಿವಸಗಳಿಂದಲೂ ಇದ್ದಿತು. ಆದಕಾರಣ ತನ್ನ ಕಾರ್ಯ

ವನ್ನು ಸಾಧಿಸಿಕೊಳ್ಳಲು ಬ್ರಾಹ್ಮಣವೇಷವನ್ನು ಧರಿಸಿದವನಾಗಿ 'ತಾನು ಉತ್ತಮವಂಶದಲ್ಲಿ ಹುಟ್ಟಿ ಚತುರ್ವೇದಗಳನ್ನೂ ಅಧ್ಯಯನಮಾಡಿರುವೆನೆಂದೂ, ನೀತಿಶಾಸ್ತ್ರದಲ್ಲಿ ಬೃಹಸ್ಪತಿಗೆ ಸಮಾನನೆಂದೂ, ಸಕಲಶಾಸ್ತ್ರಪಂಡಿತನೆಂದೂ'–ಸೋಗುಹಾಕಿಕೊಂಡು ಅನೇಕದಿನಗಳಿಂದ ಪಾಂಡವರ ಜೊತೆಯಲ್ಲಿಯೇ ಇದ್ದುಬಿಟ್ಟಿದ್ದನು. ಅವನ ಉದ್ದೇಶವು ಎರಡು ರೀತಿಯದಾಗಿತ್ತು. ಪಾಂಡವರ ಆಯುಧಗಳೆಲ್ಲವನ್ನೂ ಅಪಹರಿಸುವುದು ಮತ್ತು ಸಮಯವನ್ನು ಕಾದು ದ್ರೌಪದಿಯನ್ನು ಎತ್ತಿಕೊಂಡು ಹೋಗುವುದು. ಧನುರ್ಬಾಣಗಳನ್ನೂ ಮತ್ತು ಕತ್ತಿ-ಗುರಾಣಿಗಳನ್ನೂ ಅಪಹರಿಸಿಬಿಟ್ಟರೆ ಪಾಂಡವರು ತನ್ನ ಮೇಲೆ ಯುದ್ಧಮಾಡಲು ಬರಲಾರರೆಂಬ ಭ್ರಾಂತಿಯು ಆ ರಾಕ್ಷಸನಿಗಿದ್ದಿತು. ಅವನ ಹೆಸರು ಜಟಾಸುರ. ಬ್ರಾಹ್ಮಣವೇಷದಲ್ಲಿದ್ದ ಆ ರಾಕ್ಷಸನನ್ನು ಯುಧಿಷ್ಠಿರನು ನಿಜವಾದ ಬ್ರಾಹ್ಮಣನೆಂದೇ ಭಾವಿಸಿ ಸತ್ಕರಿಸುತ್ತಿದ್ದನು. ಬೂದಿಮುಚ್ಚಿದ ಕೆಂಡದ ನಿಜವಾದ ಸ್ವರೂಪವು ತಿಳಿಯದಂತೆ ಆ ಪಾಪಿಯು ನೈಜಸ್ವರೂಪವು ಯುಧಿಷ್ಠಿರನಿಗೆ ತಿಳಿಯಲಿಲ್ಲ.

ಜನಮೇಜಯ! ರಾಕ್ಷಸನು ಉದ್ದೇಶಿಸಿದ್ದಂತೆ ಒಂದು ದಿನ ಆ ಆಶ್ರಮದಲ್ಲಿ ಯುಧಿಷ್ಠಿರ-ನಕುಲ-ಸಹದೇವ-ದ್ರೌಪದಿಯರ ಹೊರತಾಗಿ ಮತ್ತಾರೂ ಇರಲಿಲ್ಲ. ಭೀಮನು ಬೇಟೆಯಾಡಲೂ ಹೋಗಿದ್ದನು. ಘಟೋತ್ಕಚಾದಿ ರಾಕ್ಷಸರೂ ಹೊರಟುಹೋಗಿದ್ದರು. ಋಷಿ-ಮಹರ್ಷಿಗಳೂ ಮತ್ತು ಬ್ರಾಹ್ಮಣರೂ ಲೋಮಶರೊಡನೆ ಹೂಗಳನ್ನು ತರುವುದಕ್ಕೆ ಮತ್ತು ಸ್ನಾನಕ್ಕೆ ಹೋಗಿದ್ದರು. ಇದಕ್ಕಿಂತಲೂ ಉತ್ತಮಸನ್ನಿವೇಶವು ತನಗೆ ಸಿಕ್ಕಲಾರದೆಂದು ರಾಕ್ಷಸನು ಯೋಚಿಸಿದನು.

"ದ್ರೌಪದಿಯೊಬ್ಬಳೇ ಸಿಗುವ ಸಂಭವವು ಬಹಳ ಕಡಿಮೆ. ದ್ರೌಪದಿಯೊಬ್ಬಳನ್ನೇ ನಾನೀಗ ಎತ್ತಿಕೊಂಡು ಹೋದರೆ ಯುಧಿಷ್ಠಿರ-ನಕುಲ-ಸಹದೇವರು ಎಷ್ಟೇ ದುರ್ಬಲರಾಗಿದ್ದರೂ ತಡೆಮಾಡಲು ಬರುವರು. ಇವರೊಡನೆ ಕಾಳಗಕ್ಕೆ ನಿಂತರೆ ವೇಳೆಯು ಕಳೆದು ಭೀಮಸೇನನೂ ಬಂದುಬಿಡಬಹುದು. ಆದುದರಿಂದ ಈ ನಾಲ್ವರನ್ನೂ ಇಲ್ಲಿಂದ ಈಗಲೇ ಎತ್ತಿಕೊಂಡು ಹೊರಟು ಹೋಗುವುದೇ ಕಾರ್ಯಸಾಧನೆಗೆ ಉತ್ತಮವಾದ ಮಾರ್ಗ." ಹೀಗೆಂದು

ದುರುಳನಾದ ಜಟಾಸುರನು ನಿಶ್ಚಯಿಸಿ, ಬ್ರಾಹ್ಮಣವೇಷವನ್ನು ತೊರೆದು ಬೃಹದಾಕಾರವನ್ನೂ–ಭಯಂಕರವಾದ ರೂಪವನ್ನೂ ತಾಳಿದವನಾಗಿ ಪಾಂಡವರ ಆಯುಧಗಳೆಲ್ಲವನ್ನೂ ಒಂದು ಹಿಡಿಯಲ್ಲಿಯೂ ದ್ರೌಪದಿಯನ್ನು ಪಾಂಡವರನ್ನು ಮತ್ತೊಂದು ಕೈಯಿಂದಲೂ ಎತ್ತಿಕೊಂಡು ಓಡಲಾರಂಭಿಸಿದನು.



ಬಲಿಷ್ಠನಾದ ಸಹದೇವನು ಬಹುವಾಗಿ ಯತ್ನಿಸಿ ರಾಕ್ಷಸನ ಹಿಡಿತದಿಂದ ಬಿಡಿಸಿಕೊಂಡನಲ್ಲದೇ–ಉಪಾಯಾಂತರದಿಂದ ಒರೆಯಿಂದ ಕಳಚಿಬಂದಿದ್ದ ಕೌಶಿಕವೆಂಬ ತನ್ನ ಕತ್ತಿಯನ್ನೂ ರಾಕ್ಷಸನ ಕೈಯಿಂದ ಹಾರಿಸಿಕೊಂಡು, ಪರ್ವತೋಪಮವಾಗಿದ್ದ ರಾಕ್ಷಸನ ಶರೀರದಿಂದ ಕೆಳಕ್ಕೆ ಧುಮುಕಿ ಬೇಟೆ

ಯಾಡಲು ಹೋಗಿದ್ದ ಭೀಮನ ಕಡೆಗೆ ಓಡಿಹೋಗುತ್ತಾ ಭೀಮಸೇನನನ್ನು ಗಟ್ಟಿಯಾಗಿ ಕೂಗಿದನು.

ಜಟಾಸುರನು ಉಳಿದ ಮೂವರನ್ನೇ ಎತ್ತಿಕೊಂಡು ಮುಂದೆ ಸಾಗಿ ದನು. ರಾಕ್ಷಸನ ಹಿಡಿತಕ್ಕೆ ಸಿಕ್ಕಿದರೂ ಧರ್ಮಾತ್ಮನಾದ ಯುಧಿಷ್ಠಿರನು ಉದ್ವಿಗ್ನನಾಗದೇ ರಾಕ್ಷಸನಿಗೆ ಹೇಳಿದನು :

"ರಾಕ್ಷಸಾಧಮನೇ! ನೀನು ಅವಿವೇಕದಿಂದ ಮಾಡಿದ ಈ ದುಷ್ಕಾರ್ಯವು ನಿನ್ನನ್ನು ಧರ್ಮಹೀನನ್ನಾಗಿ ಮಾಡಿಬಿಟ್ಟಿತು. ಇದು ನಿನಗೆ ತಿಳಿಯದೇ ಹೋಯಿತೇ?

**ಯೇಽನ್ಯೇ ಕ್ವಚಿನ್ಮನುಷ್ಯೇಷು ತಿರ್ಯಗ್ಯೋನಿಗತಾಶ್ಚ ಯೇ ।**
**ಧರ್ಮಂ ತೇ ಸಮವೇಕ್ಷನ್ತೇ ರಕ್ಷಾಂಸಿ ಚ ವಿಶೇಷತಃ ॥೧೩॥**

ಮನುಷ್ಯರಾಗಲೀ, ಪಶು-ಪಕ್ಷಿಗಳಾಗಲೀ–ಧರ್ಮವನ್ನೇ ಅನುಸರಿಸಿ ನಡೆಯುತ್ತಾರೆ. ಅದರಲ್ಲಿಯೂ ರಾಕ್ಷಸರು ಧರ್ಮವಿಹಿತವಲ್ಲದ ಕಾರ್ಯವನ್ನೆಂದಿಗೂ ಮಾಡುವುದಿಲ್ಲ. ಅವರು ಧರ್ಮಾಚರಣೆಯಲ್ಲಿ ವಿಶೇಷವಾದ ಶ್ರದ್ಧೆಯುಳ್ಳವರು.

**ಧರ್ಮಸ್ಯ ರಾಕ್ಷಸಾ ಮೂಲಂ ಧರ್ಮಂ ತೇ ವಿದುರುತ್ತಮಮ್ ।**
**ಏತತ್ಪರೀಕ್ಷ್ಯ ಸರ್ವಂ ತ್ವಂ ಸಮೀಪೇ ಸ್ಥಾತುಮರ್ಹಸಿ ॥೧೪॥**

ಧರ್ಮಕ್ಕೆ ರಾಕ್ಷಸರೇ ಮೂಲಭೂತರು. ರಾಕ್ಷಸರು ಧರ್ಮವನ್ನೂ, ಧರ್ಮರಹಸ್ಯವನ್ನೂ ತಿಳಿದವರಾಗಿರುತ್ತಾರೆ. ಇವೆಲ್ಲವನ್ನೂ ವಿವೇಚಿಸಿ ನೀನು ಧರ್ಮಿಷ್ಠನಾಗಿಯೇ ಉಳಿಯಬೇಕಾಗಿದ್ದಿತು.

**ದೇವಾಶ್ಚ ಋಷಯಃ ಸಿದ್ಧಾಃ ಪಿತರಶ್ಚಾಪಿ ರಾಕ್ಷಸ ।**
**ಗನ್ಧರ್ವೋರಗರಕ್ಷಾಂಸಿ ವಯಾಂಸಿ ಪಶವಸ್ತಥಾ ॥೧೫॥**

**ತಿರ್ಯಗ್ಯೋನಿಗತಾಶ್ಚೈವ ಅಪಿ ಕೀಟಪಿಪೀಲಿಕಾಃ ।**
**ಮನುಷ್ಯಾನುಪಜೀವನ್ತಿ ತತಸ್ತ್ವಮಪಿ ಜೀವಸಿ ॥೧೬॥**

ಮೂಢಾತ್ಮನೇ! ಮಾನವರು ಸಕಲರಿಗೂ ಅನ್ನದಾತರು. ದೇವತೆ

ಗಳಾಗಲೀ, ಪಿತೃಗಳಾಗಲೀ-ಮಾನವರು ಕಾಲ-ಕಾಲಕ್ಕೆ ಕೊಡುವ ಹವ್ಯ-ಕವ್ಯಾದಿಗಳಿಂದಲೇ ಪೋಷಿತರಾಗುತ್ತಾರೆ. ಸಿದ್ಧರು, ಋಷಿಗಳು, ಗಂಧರ್ವರು, ನಾಗ-ರಾಕ್ಷಸರು, ಪಶು-ಪ್ರಾಣಿಗಳು ಮತ್ತು ತಿರ್ಯಗ್ಯೋನಿಗಳಲ್ಲಿ ಹುಟ್ಟಿರುವ ಹುಳುಗಳು, ಇರುವೆಗಳು, ಸೊಳ್ಳೆಗಳೇ ಆದಿಯಾಗಿ ಸಮಸ್ತ ಜೀವಿಗಳೂ ಮನುಷ್ಯರನ್ನೇ ಆಶ್ರಯಿಸಿಕೊಂಡಿವೆ. ನೀನೂ ಕೂಡಾ ಮಾನವರನ್ನೇ ಆಶ್ರಯಿಸಿ ಜೀವಿಸಿರುವೆ.

ಸಮೃದ್ಧ್ಯಾ ಹ್ಯಸ್ಯ ಲೋಕಸ್ಯ ಲೋಕೋ ಯುಷ್ಮಾಕಮೃಧ್ಯತಿ ।
ಇಮಂ ಚ ಲೋಕಂ ಶೋಚನ್ತಮನುಶೋಚನ್ತಿ ದೇವತಾಃ ॥೧೭॥

ಮಾನವರ ಜೀವನವು ಉತ್ತಮವಾದರೆ ನಿಮ್ಮ ಜೀವನವೂ ಉತ್ತಮಗೊಳ್ಳುವುದು. ಮನುಷ್ಯಲೋಕಕ್ಕೆ ವಿಪತ್ತುಂಟಾದರೆ ದೇವತೆಗಳೂ ಪರಿತಾಪಪಡಬೇಕಾಗುತ್ತದೆ.

ಪೂಜ್ಯಮಾನಾಶ್ಚ ವರ್ಧನ್ತೇ ಹವ್ಯಕವ್ಯೈರ್ಯಥಾವಿಧಿ ।
ವಯಂ ರಾಷ್ಟ್ರಸ್ಯ ಗೋಪ್ತಾರೋ ರಕ್ಷಿತಾರಶ್ಚ ರಾಕ್ಷಸ ॥೧೮॥

ಮನುಷ್ಯರು ಮಾಡುವ ಹವ್ಯ-ಕವ್ಯಾದಿಗಳಿಂದಲೂ, ಪೂಜೆಗಳಿಂದಲೂ ದೇವತೆಗಳು ವೃದ್ಧಿಹೊಂದುತ್ತಾರೆ. ಇದು ಪ್ರಕೃತಿಯ ಸಾಧಾರಣಧರ್ಮ, ರಾಕ್ಷಸನೇ! ನಾವು ರಾಷ್ಟ್ರದ ರಕ್ಷಕರೂ, ಸಂವರ್ಧಕರೂ ಆಗಿರುತ್ತೇವೆ.

ರಾಷ್ಟ್ರಸ್ಯಾರಕ್ಷ್ಯಮಾಣಸ್ಯ ಕುತೋ ಭೂತಿಃ ಕುತಃ ಸುಖಮ್ ।
ನ ಚ ರಾಜಾವಮನ್ತವ್ಯೋ ರಕ್ಷಸಾ ಜಾತ್ವನಾಗಸಿ ॥೧೯॥

ರಾಷ್ಟ್ರಕ್ಕೆ ರಕ್ಷಣೆಯೇ ಇಲ್ಲದಿದ್ದರೆ ಸುಖ-ಸಮೃದ್ಧಿಗಳು ಹೇಗೆ ತಾನೇ ಪ್ರಾಪ್ತವಾಗುವುವು? ತಪ್ಪುಮಾಡದಿರುವಾಗ ರಾಜನನ್ನು ಧರ್ಮಿಷ್ಠನಾದ ರಾಕ್ಷಸನೆಂದಿಗೂ ಅವಮಾನಿಸಲಾಗದು. ನರಭಕ್ಷಕನೇ! ನಾವು ಇದುವರೆಗೂ ನಿನ್ನ ವಿಷಯದಲ್ಲಿ ಸ್ವಲ್ಪವಾದರೂ ಅಪರಾಧವನ್ನು ಮಾಡಿರುವುದಿಲ್ಲ. ನಮ್ಮ ಶಕ್ತಿಮೀರಿ ದೇವತೆಗಳಿಗೆ ಬಲಿಹರಣಾದಿಗಳನ್ನಿತ್ತು, ಅತಿಥಿಗಳನ್ನು ಯಥಾಯೋಗ್ಯವಾಗಿ ಸತ್ಕರಿಸಿ, ಅನಂತರ ಉಳಿಯುವ ಅನ್ನವನ್ನು (ವಿಘಸವನ್ನು) ತಿನ್ನುತ್ತಾ ನಾವು ಜೀವಿಸುತ್ತಿದ್ದೇವೆ. ನಮ್ಮ ಹಿರಿಯರಿಗೂ ಮತ್ತು ಬ್ರಾಹ್ಮಣರಿಗೂ ನಾವು ಯಾವಾಗಲೂ ವಿಧೇಯರಾಗಿರುತ್ತೇವೆ.

**ದ್ರೋಗ್ಧವ್ಯಂ ನ ಚ ಮಿತ್ರೇಷು ನ ವಿಶ್ವಸ್ತೇಷು ಕರ್ಹಿಚಿತ್ ॥೨೧॥**

ಮಿತ್ರರಿಗೆ ಮತ್ತು ನಂಬಿದವರಿಗೆ ಎಂದಿಗೂ ದ್ರೋಹವನ್ನು ಮಾಡಬಾರದು. ಆಶ್ರಯವನ್ನು ಪಡೆದು, ಅನ್ನವನ್ನು ತಿಂದ ಮನೆಗೆ ದ್ರೋಹವನ್ನೆಸಗಬಾರದು. ಇದು ಸನಾತನಧರ್ಮ. ನೀನು ನಮ್ಮಲ್ಲಿ ಆಶ್ರಿತನಾಗಿದ್ದೆ. ನಮ್ಮಿಂದ ಗೌರವಿಸಲ್ಪಟ್ಟಿದ್ದೆ. ನಮ್ಮ ಆತಿಥ್ಯವನ್ನು ಪಡೆದು ಸುಖದಿಂದ ಕಾಲಕಳೆದೆ. ನಮ್ಮ ಆಶ್ರಯವನ್ನೇ ಪಡೆದಿದ್ದು, ನಮ್ಮ ಅನ್ನವನ್ನೇ ತಿನ್ನುತ್ತಿದ್ದ ನೀನಿಂದು ದ್ರೋಹಬುದ್ಧಿಯಿಂದ ನಮ್ಮನ್ನು ಎತ್ತಿಕೊಂಡು ಹೋಗುತ್ತಿರುವೆಯಲ್ಲ? ನೀನು ಪ್ರಜ್ಞಾಹೀನನಾಗಿರಬೇಕು. ರಾಕ್ಷಸಾಧಮನೇ! ನೀನು ಆಚಾರಹೀನನಾಗಿರುವೆ. ನಿನಗೆ ಇಷ್ಟೊಂದು ವಯಸ್ಸಾಗಿರುವುದೂ ವ್ಯರ್ಥವೇ ಸರಿ. ನಿನ್ನ ಬುದ್ಧಿಯೂ ನಿಷ್ಪ್ರಯೋಜಕವಾದುದು. ಈ ಕಾರಣದಿಂದಲೇ ನೀನಿಂದು ಯಮಾಲಯವನ್ನೂ ಸೇರಲಿರುವೆ. ಯಾವ ವಿಧವಾದ ಮಹಾಸಾಧನೆಯನ್ನೂ ಮಾಡದೆ ವ್ಯರ್ಥವಾಗಿ ಸಾಯುವ ಕಾಲವೀಗ ನಿನಗೆ ಸನ್ನಿಹಿತವಾಗಿರುವುದು. ನೀನಿಂದು ಸರ್ವಧರ್ಮವಿವರ್ಜಿತನಾಗಿ ದುಷ್ಟಬುದ್ಧಿಯನ್ನು ಹೊಂದಿರುವೆ. ದ್ರೌಪದಿಯನ್ನು ಎತ್ತಿಕೊಂಡು ಹೋಗಬೇಕೆಂಬ ಆಸೆಯಿದ್ದರೆ ಈಗಲೂ ನಮ್ಮ ಆಯುಧಗಳನ್ನು ನಮಗೆ ಕೊಟ್ಟು, ಯುದ್ಧಕ್ಕೆ ಸಿದ್ಧನಾಗಿ, ನಮ್ಮನ್ನು ಪರಾಜಯಗೊಳಿಸಿ ಎತ್ತಿಕೊಂಡು ಹೋಗು. ಇದರಿಂದ ನಿನಗೆ ಮಹಾಪರಾಕ್ರಮಿಯೆಂಬ ಕೀರ್ತಿಯಾದರೂ ಉಳಿಯುವುದು. ಹಾಗೆ ಮಾಡದೇ ಅಜ್ಞಾನದಿಂದ ನೀನು ದ್ರೌಪದಿಯನ್ನು ಎತ್ತಿಕೊಂಡು ಹೋಗಲು ಯತ್ನಿಸಿದೆಯಾದರೆ ನೀನು ಧರ್ಮಬಾಹಿರನಾಗುವುದು ಮಾತ್ರವಲ್ಲದೇ–ನಿನ್ನ ದುಷ್ಕೀರ್ತಿಯೂ ಪ್ರಪಂಚದಲ್ಲಿ ಹರಡುವುದು. ನಿನ್ನ ಸಂಕಲ್ಪವೂ ಫಲಿತವಾಗಲಾರದು.

**ಏತಾಮದ್ಯ ಪರಾಮೃಶ್ಯ ಸ್ತ್ರಿಯಂ ರಾಕ್ಷಸ ಮಾನುಷೀಮ್ ।**
**ವಿಷಮೇತತ್ಸಮಾಲೋಡ್ಯ ಕುಮ್ಭೇನ ಪ್ರಾಶಿತಂ ತ್ವಯಾ ॥೨೬॥**

ಸ್ವಲ್ಪವೂ ವಿವೇಚಿಸದೇ ಈ ಮಾನುಷಸ್ತ್ರೀಯನ್ನು ನೀನು ಎತ್ತಿಕೊಂಡು ಹೊರಟಿರುವುದು-ಮೂರ್ಖನಾದವನೊಬ್ಬನು ವಿಷವಿಟ್ಟಿರುವ ಭಾಂಡವನ್ನು ಚೆನ್ನಾಗಿ ಕಲಕಿ ಪರಿಣಾಮವೇನಾಗುವುದೆಂಬುದನ್ನೂ ಯೋಚಿಸದೇ ಗಟ-

ಗಟನೆ ಕುಡಿದಂತೆಯೇ ಆಗಿದೆ. ವಿಷವನ್ನು ಕುಡಿದವನಿಗೆ ಉಂಟಾಗಬಹುದಾದ ಪರಿಣಾಮವೇ ನಿನಗೂ ಉಂಟಾಗುವುದರಲ್ಲಿ ಸ್ವಲ್ಪವಾದರೂ ಸಂಶಯವಿಲ್ಲ."

**ತತೋ ಯುಧಿಷ್ಠಿರಸ್ತಸ್ಯ ಗುರುಕಃ ಸಮಪದ್ಯತ ॥೨೭॥**

ಯುಧಿಷ್ಠಿರನು ರಾಕ್ಷಸನಿಗೆ ಹೀಗೆ ಹೇಳಿ ಯೋಗಶಕ್ತಿಯಿಂದ ಭಾರವಾದನು. ಯುಧಿಷ್ಠಿರನು ಹೆಚ್ಚಿನ ಭಾರವನ್ನು ಬಿಟ್ಟೊಡನೆಯೇ ರಾಕ್ಷಸನಿಗೆ ಹಿಂದಿನಂತೆ ವೇಗವಾಗಿ ನಡೆಯಲು ಸಾಧ್ಯವಾಗಲಿಲ್ಲ. ಅವರೆಲ್ಲರನ್ನೂ ಎತ್ತಿಕೊಂಡು ಹೆಜ್ಜೆಯಿಡುವುದೇ ಬಹಳ ಕಷ್ಟವಾಗಿ ಕಂಡಿತು. ಅವನು ಕರ್ತವ್ಯ ಮೂಢನಾದನು. ಅವನಿಗೆ ಏನುಮಾಡಬೇಕೆಂಬುದೇ ತೋರಲಿಲ್ಲ. ತನ್ನ ಯೋಗಶಕ್ತಿಯಿಂದ ರಾಕ್ಷಸನ ನಡಿಗೆಯು ಮಂದವಾದುದನ್ನು ಕಂಡು ಯುಧಿಷ್ಠಿರನು ನಕುಲ-ದ್ರೌಪದಿಯರನ್ನು ಕುರಿತು ಹೇಳಿದನು :

"ನೀವು ಈ ರಾಕ್ಷಸನ ವಿಷಯವಾಗಿ ಸ್ವಲ್ಪವೂ ಭಯಪಡಬೇಕಾಗಿಲ್ಲ. ನಾನಿವನ ಗತಿಯನ್ನು ತಡೆದಿರುತ್ತೇನೆ. ಮಹಾಬಾಹುವಾದ ವಾಯುಪುತ್ರ ನಾದ ಭೀಮಸೇನನು ಹೆಚ್ಚು ದೂರ ಹೋಗಿರಲಾರನು. ಇಲ್ಲಿಯೇ ಸಮೀಪದಲ್ಲಿರಬಹುದು. ಅವನು ಬಂದ ಕ್ಷಣದಲ್ಲಿಯೇ ಪರಿಭ್ರಮಿಸುತ್ತಿರುವ ಈ ರಾಕ್ಷಸನ ಪ್ರಾಣಪಕ್ಷಿಯೂ ಹಾರಿಹೋಗುವುದು."

ಆ ವೇಳೆಗೆ ಭೀಮನನ್ನು ಕೂಗುತ್ತಿದ್ದ ಸಹದೇವರು ರಾಕ್ಷಸನಿಗೆ ಎದುರಾಗಿ ಬಂದು ಅವನನ್ನು ದುರ-ದುರನೆ ನೋಡುತ್ತಾ ಯುಧಿಷ್ಠಿರನಿಗೆ ಹೇಳಿದನು:

"ಅಣ್ಣಾ! ಶತ್ರುವಿನೊಡನೆ ಯುದ್ಧಮಾಡಿ ಶತ್ರುವನ್ನು ಯುದ್ಧದಲ್ಲಿ ಪರಾಜಯಗೊಳಿಸುವುದು ಅಥವಾ ಯುದ್ಧದಲ್ಲಿ ಮಡಿಯುವುದು–ಕ್ಷತ್ರಿಯ ಧರ್ಮ. ಈ ಧರ್ಮಕ್ಕಿಂತಲೂ ಮಿಗಿಲಾದ ಧರ್ಮವು ಕ್ಷತ್ರಿಯನಾದವನಿಗೆ ಯಾವುದು ತಾನೇ ಇದೆ? ಆದುದರಿಂದ ನಾವಿಂದು ಈ ರಾಕ್ಷಸನೊಡನೆ ಯುದ್ಧಸನ್ನದ್ಧರಾಗೋಣ. ದುರಾತ್ಮನಾದ ಇವನಿಗೆ ಧರ್ಮೋಪದೇಶವನ್ನು ಮಾಡುವುದರಿಂದ ಯಾವ ಪ್ರಯೋಜನವೂ ಇಲ್ಲ. ಯುದ್ಧದಲ್ಲಿ ಇವನಾದರೂ ನಮ್ಮೆಲ್ಲರನ್ನೂ ಯಮಲೋಕಕ್ಕೆ ಕಳುಹಿಸಲಿ ; ಅಥವಾ ನಾವಾದರೂ

ಇವನನ್ನು ಯಮಲೋಕಕ್ಕೆ ಕಳುಹಿಸೋಣ. ಇವನೊಡನೆ ಯುದ್ಧಮಾಡಲು ಇದು ಸಕಾಲವಾಗಿದೆ ಮತ್ತು ಈ ಸ್ಥಳವೂ ಯುದ್ಧಮಾಡಲು ಯೋಗ್ಯವಾಗಿದೆ. ಕ್ಷತ್ರಿಯರಾದ ನಮಗೆ ನಮ್ಮ ಪರಾಕ್ರಮವನ್ನು ತೋರಿಸುವ ಕಾಲವು ಸನ್ನಿಹಿತವಾಗಿದೆಯೆಂದು ಭಾವಿಸುತ್ತೇನೆ. ಇಂದು ನಾವು ಇವನೊಡನೆ ಯುದ್ಧಮಾಡಿ ಇವನನ್ನು ಪರಾಜಯಗೊಳಿಸಿದರೂ ನಮಗೆ ಕೀರ್ತಿಯು ಲಭಿಸಿ ಕಡೆಯಲ್ಲಿ ಉತ್ತಮಲೋಕಗಳ ಪ್ರಾಪ್ತಿಯೂ ಆಗುತ್ತದೆ. ಒಂದು ವೇಳೆ ಇವನೇ ನಮ್ಮೆಲ್ಲರನ್ನೂ ಯುದ್ಧದಲ್ಲಿ ಸಂಹರಿಸಿದರೂ ನಮಗೆ ಉತ್ತಮಲೋಕಗಳು ಈಗಲೇ ಪ್ರಾಪ್ತವಾಗುತ್ತವೆ. ಆದುದರಿಂದ ನಾವಿಂದು ನಮಗುಂಟಾಗಬಹುದಾದ ಜಯಾಪಜಯಗಳ ವಿಷಯವಾಗಿ ಯೋಚಿಸ ಬೇಕಾದ ಕಾರಣವಿಲ್ಲ. ಆದರೆ ಈ ರಾಕ್ಷಸನೊಡನೆ ಯುದ್ಧಮಾಡುವಾಗ ಕಾಲವನ್ನು ಮಾತ್ರ ವಿವೇಚಿಸಬೇಕಾಗುವುದು. ಇವನೊಡನೆ ಯುದ್ಧ ಮಾಡಲು ಇದು ಸಕಾಲವಾಗಿದೆಯೆಂದು ನಾನು ನಿರ್ಧರಿಸಿದ್ದೇನೆ. ಏಕೆಂದರೆ : ಸೂರ್ಯನು ಮುಳುಗಿದನೆಂದರೆ ರಾಕ್ಷಸರ ಬಲವು ಇಮ್ಮಡಿಯಾಗುವುದು. ಆದುದರಿಂದ ಸೂರ್ಯನು ಮುಳುಗುವುದರೊಳಗಾಗಿ ಇವನನ್ನು ಕಡೆ ಗಾಣಿಸಲೇಬೇಕು. ಹಾಗೆ ಮಾಡದೇ ಅಸ್ತಮಾನಪರ್ಯಂತವೂ ಇವನು ಉಳಿ ದಿದ್ದೇ ಆದರೆ 'ನಾನೊಬ್ಬ ಕ್ಷತ್ರಿಯ' ಎಂದು ನಾನು ಮತ್ತೊಮ್ಮೆ ಹೇಳಿ ಕೊಳ್ಳುವ ಅವಕಾಶವು ನನಗೆ ಸಿಕ್ಕುವುದಿಲ್ಲ. (ಇವನನ್ನು ಸೂರ್ಯಸ್ತಕ್ಕೆ ಮುಂಚೆ ಕೊಲ್ಲದಿದ್ದರೆ ನಾನು ಕ್ಷತ್ರಿಯನೆಂದು ಮತ್ತೆ ಹೇಳಿಕೊಳ್ಳುವ ಸಂಭ ವವೇ ಬರುವುದಿಲ್ಲ.)" ಸಹದೇವನು ಧರ್ಮರಾಜನಿಗೆ ಹೀಗೆ ಹೇಳಿ ಬಳಿಕ ಕೋಪಾವಿಷ್ಟನಾಗಿ ರಾಕ್ಷಸನನ್ನು ಕುರಿತು ಹೇಳಿದನು : "ಎಲೈ ರಾಕ್ಷಸ! ನಿಲ್ಲು! ನಾನು ಪಾಂಡುಪುತ್ರನಾದ ಸಹದೇವನು. ನಿನ್ನನ್ನು ಮುಂದೆ ಒಂದು ಹೆಜ್ಜೆಯಷ್ಟು ದೂರವೂ ಬಿಡಲು ನಾನು ಸಿದ್ಧನಾಗಿಲ್ಲ. ನೀನು ನನ್ನೊಡನೆ ಯುದ್ಧಮಾಡಿ ನನ್ನನ್ನು ಸಂಹರಿಸಿದ ನಂತರವೇ ದ್ರೌಪದಿಯನ್ನು ಕರೆದೊಯ್ಯಲು ಸಾಧ್ಯವಾಗುವುದು ಅಥವಾ ನನ್ನಿಂದ ಸಂಹರಿಸಲ್ಪಟ್ಟವನಾಗಿ ಈ ನಿನ್ನ ದುಷ್ಟದೇಹವನ್ನಾದರೂ ತೊರೆಯುವೆ."

ಸಹದೇವನು ರಾಕ್ಷಸನಿಗೆ ಹೀಗೆ ಹೇಳುತ್ತಿರುವ ಸಮಯಕ್ಕೆ ಸರಿ ಯಾಗಿ–ವಜ್ರಾಯುಧವನ್ನು ಧರಿಸಿದ ಇಂದ್ರನಂತೆ–ಭೀಮಸೇನನು ಗದಾ

ಪಾಣಿಯಾಗಿ ರಾಕ್ಷಸನ ಮುಂದೆ ಬಂದು ನಿಂತನು. ಯುಧಿಷ್ಠಿರ-ನಕುಲ-ದ್ರೌಪದಿಯರು ರಾಕ್ಷಸನ ಹೆಗಲಿನ ಮೇಲಿರುವುದನ್ನೂ, ಸಹದೇವನು ರಾಕ್ಷಸ ನಿಗೆದುರಾಗಿ ನೆಲದಮೇಲೆ ನಿಂತು ಗರ್ಜನೆಮಾಡುತ್ತರುವುದನ್ನೂ ಭೀಮ ಸೇನನು ನೋಡಿದನು. ದೈವಬಲವನ್ನು ಕಳೆದುಕೊಂಡವನೋ—ಎಂಬಂತೆ, ಅದೃಷ್ಟಹೀನನಾದ ರಾಕ್ಷಸನು ಬುದ್ಧಿಹೀನನಾಗಿ ಮುಂದೇನು ಮಾಡಬೇಕೆಂದು ತೋರದೇ ಅಲ್ಲಿಯೇ ಸುತ್ತಾಡುತ್ತಿದ್ದನು.

ತನ್ನ ಸಹೋದರರನ್ನೂ, ದ್ರೌಪದಿಯನ್ನೂ ರಾಕ್ಷಸನು ಎತ್ತಿಕೊಂಡಿರು ವುದನ್ನು ಕಂಡು ಭೀಮಸೇನನು ಕೋಪಾವಿಷ್ಟನಾಗಿ ಕಟ-ಕಟನೆ ಹಲ್ಲುಗಳನ್ನು ಕಡಿಯುತ್ತಾ ರಾಕ್ಷಸನಿಗೆ ಹೇಳಿದನು : "ರಾಕ್ಷಸಾಧಮನೇ! ಬ್ರಾಹ್ಮಣವೇಷ ಧಾರಿಯಾಗಿದ್ದ ನೀನು ನಮ್ಮ ಆಯುಧಗಳನ್ನು ಪದೇ-ಪದೇ ಪರೀಕ್ಷಿಸುತ್ತಿ ದ್ದಾಗಲೇ ನಿನ್ನ ಮನೋಗತವಾದ ದುಷ್ಟಸಂಕಲ್ಪವೇನಿರಬಹುದೆಂಬುದನ್ನು ನಾನು ಊಹಿಸಿದ್ದೆನು. ಆದರೆ ನಿನ್ನ ವಿಷಯದಲ್ಲಿಯೂ ನಿನಗಿರುವ ಬಲದ ವಿಷಯದಲ್ಲಿಯೂ ನನಗೆ ತಾತ್ಸಾರವಿದ್ದಿತಾದ್ದರಿಂದ ಆಗಲೇ ನಾನು ನಿನ್ನನ್ನು ಸಂಹರಿಸಲು ಇಚ್ಛಿಸಲಿಲ್ಲ. ಮೇಲಾಗಿ ನೀನು ಬ್ರಾಹ್ಮಣವೇಷವನ್ನು ಧರಿಸಿದ್ದುದೂ ನಿನ್ನನ್ನು ಸಂಹರಿಸದಿರಲು ಒಂದು ಕಾರಣವಾಗಿದ್ದಿತು. ನಿನ್ನ ಮನದಲ್ಲಿ ದುಸ್ಸಕಂಲ್ಪವಿದ್ದಿತೇ ಹೊರತು ನೀನು ಬಾಯಲ್ಲಿ ದುಷ್ಟವಾದ ಮಾತುಗಳನ್ನಾಡುತ್ತಿರಲಿಲ್ಲ. ನೀನು ನಮ್ಮನ್ನು ಚತುರೋಕ್ತಿಗಳಿಂದ ಸಂತಸಗೊಳಿಸುತ್ತಿದ್ದೆ. ನೀನು ಆ ಸಮಯದಲ್ಲಿ ನಮಗೆ ಯಾವುದೊಂದು ತೊಂದರೆಯನ್ನೂ ಮಾಡುತ್ತಿರಲಿಲ್ಲ. ಎಲ್ಲಕ್ಕಿಂತಲೂ ಮಿಗಿಲಾಗಿ ನೀನು ನಮ್ಮ ಅತಿಥಿಯಾಗಿದ್ದೆ. ನಿರಪರಾಧಿಯಾಗಿದ್ದ, ಬ್ರಾಹ್ಮಣವೇಷಧಾರಿಯಾಗಿದ್ದ ನಿನ್ನನ್ನು ಆ ಸಮಯದಲ್ಲಿ ಸಂಹರಿಸುವುದು ಹೇಗೆ ತಾನೇ ನ್ಯಾಯ ವಾದೀತು? ಬ್ರಾಹ್ಮಣವೇಷಧಾರಿಯಾಗಿದ್ದವನು ರಾಕ್ಷಸನಾಗಿದ್ದರೂ ಬ್ರಾಹ್ಮಣರೂಪವನ್ನು ಧರಿಸಿರುವ ಸಮಯದಲ್ಲಿ ಅವನನ್ನು ಸಂಹರಿಸ ಬಾರದು. ವಿವೇಕಶೂನ್ಯನಾಗಿ ಅಂತಹವನನ್ನು ಸಂಹರಿಸಿದ್ದೇ ಆದರೆ ನರಕ ಪ್ರಾಪ್ತಿಯಾಗುವುದೆಂದು ಹಿರಿಯರು ಹೇಳಿದ್ದಾರೆ. ಅಂದು ಕಾಲವು ಅಪಕ್ವ ವಾಗಿದ್ದಿತು. ಆದರೆ ಇಂದು ನಿನ್ನ ಅವಸಾನಕಾಲವು ಪ್ರಾಪ್ತವಾಗಿರು ವುದು ನಿಶ್ಚಯ. ರಾಕ್ಷಸನೇ! ವಿಧಿವಿಲಾಸವು ಅಪ್ರಮೇಯವಾದುದು.

ಮಹಾಶ್ಚರ್ಯಕರವಾದುದು. ವಿಧಿನಿಯಮದಂತೆ ಜೀವಿಗಳ ಬುದ್ಧಿಯು ವಿಪರ್ಯಾಸಗೊಳ್ಳುತ್ತಿರುತ್ತದೆ. ಇಂದು ವಿಧಿಯು ನಿನ್ನ ಅವಸಾನವನ್ನು ನಿರ್ಧರಿಸಿರುವುದರಿಂದಲೇ ದ್ರೌಪದಿಯನ್ನೆತ್ತಿಕೊಂಡು ಹೋಗಬೇಕೆಂಬ ದುರಾಶಯವನ್ನು ನಿನ್ನ ಮನದಲ್ಲಿ ಮೂಡಿಸಿ ನಿನ್ನಿಂದ ಈ ಅಕಾರ್ಯವನ್ನು ಮಾಡಿಸಿದೆ.

**ಬಡಿಶೋಽಯಂ ತ್ವಯಾ ಗ್ರಸ್ತಃ ಕಾಲಸೂತ್ರೇಣ ಲಮ್ಬಿತಃ ।**
**ಮತ್ಸ್ಯೋಽಮ್ಭಸೀವ ಸ್ಯೂತಾಸ್ಯಃ ಕಥಮದ್ಯ ಭವಿಷ್ಯಸಿ ॥೪೫॥**

ಬೆಸ್ತರವನು ಗಾಳಕ್ಕೆ ಹುಳುವೊಂದನ್ನು ಚುಚ್ಚಿ ನೀರಿಗೆ ಬಿಟ್ಟು ಮೀನನ್ನು ಹಿಡಿಯುವಂತೆ–ವಿಧಿಯು ದ್ರೌಪದಿಯೆಂಬ ಹುಳುವನ್ನು ಮುಂದೆ ಚಾಚಿ ನಿನ್ನ ಪ್ರಾಣವೆಂಬ ಮತ್ಸ್ಯವನ್ನು ಸೆಳೆದುಕೊಳ್ಳಲು ನಿರ್ಧರಿಸಿಬಿಟ್ಟಿದೆ. ರಾಕ್ಷಸಾಧಮನೇ! ಗಾಳಕ್ಕೆ ಸಿಕ್ಕಿಹಾಕಿಕೊಂಡ ಮೀನಿಗೆ ಗಾಳದಿಂದ ಬಿಡಿಸಿಕೊಂಡು ಹೋಗುವ ಸಾಧ್ಯತೆಯಿರುವುದೇ? ಅಂತೆಯೇ ದುರ್ವಿಧಿಯ ಗಾಳಕ್ಕೆ ಸಿಲುಕಿರುವ ನೀನು ಖಂಡಿತವಾಗಿಯೂ ಬಿಡಿಸಿಕೊಂಡು ಹೋಗಲಾರೆ. ನೀನೀಗ ನಿನ್ನ ಮನಸ್ಸಂಕಲ್ಪಿತವಾದ ಯಾವ ಸ್ಥಾನಕ್ಕೆ ಹೋಗಿ, 'ದ್ರೌಪದಿಯೊಡನೆ ಸುಖವಾಗಿದ್ದುಬಿಡುವೆನು' ಎಂದು ಯಾವ ಹಗಲುಗನಸನ್ನು ಕಾಣುತ್ತಿರುವೆಯೋ–ಆ ಸ್ಥಳಕ್ಕೆ ಹೋಗುವುದಿಲ್ಲ. ಬಕ-ಹಿಡಂಬರು ಎಲ್ಲಿಗೆ ಹೋದರೋ–ಆ ಸ್ಥಳಕ್ಕೆ ನೀನೂ ಹೋಗಬೇಕಾಗಿದೆ. ನಿನ್ನನ್ನೂ ಅಲ್ಲಿಗೇ ಕಳುಹಿಸಿಕೊಡುತ್ತೇನೆ."

ಜನಮೇಜಯ! ಭೀಮಸೇನನ ಭಯೋತ್ಪಾದಕವಾದ ಮಾತನ್ನು ಕೇಳಿ ಜಟಾಸುರನು ಭೀತನಾಗಿ ಧರ್ಮಜ-ನಕುಲ-ದ್ರೌಪದಿಯರನ್ನು ಕೆಳಗಿಳಿಸಿ ವಿಧಿಯಿಂದ ಪ್ರೇರಿತನಾದನೋ ಎಂಬಂತೆ–ಭೀಮನೊಡನೆ ಯುದ್ಧ ಮಾಡಲು ಸನ್ನದ್ಧನಾದನು. ಕುಪಿತನಾದ ರಾಕ್ಷಸನ ತುಟಿಗಳು ಅದುರುತ್ತಿದ್ದುವು. ಕಟ-ಕಟನೆ ಹಲ್ಲುಗಳನ್ನು ಕಡಿಯುತ್ತಾ ಭೀಮನನ್ನು ಕುರಿತು ಹೇಳಿದನು : "ಮೂಢಾತ್ಮನೇ! ನೀನು ನನಗೆ ಯಾವ ವಿಧವಾದ ಉಪದೇಶವನ್ನೂ ಮಾಡಬೇಕಾಗಿಲ್ಲ. ನಿನ್ನನ್ನು ಕಂಡು ನಾನು ಭ್ರಾಂತನಾಗಿಯೂ ಇಲ್ಲ. ನೀನು ಬರಲೆಂದೇ ನಾನು ಕಾಲವಿಳಂಬವನ್ನು ಮಾಡಿದೆನು. ನೀನು

ಯಾವ ಯಾವ ರಾಕ್ಷಸರನ್ನು ಕೊಂದಿರುವೆಯೆಂಬ ವಿಷಯವನ್ನೂ ನಾನು ಕೇಳಿರುವೆನು. ಅವರಿಗೆಲ್ಲರಿಗೂ ಇಂದು ನಿನ್ನ ರುಧಿರದಿಂದ ತರ್ಪಣವನ್ನು ಕೊಡಲೆಂದೇ ನಾನಿದುವರೆಗೂ ನಿನಗಾಗಿ ಕಾದಿರುವೆನು. ತಿಳಿಯಿತೇ?"

ರಾಕ್ಷಸನ ಮಾತುಗಳನ್ನು ಕೇಳಿದ ಕೂಡಲೇ ಭೀಮನ ಕೋಪವು ಇಮ್ಮಡಿಸಿತು. ಪ್ರಳಯಕಾಲದ ಯಮನಂತೆಯೇ ವಿಜೃಂಭಿಸಿದನು. ಅವುಡುಗಳನ್ನು ಕಚ್ಚುತ್ತಾ ಬಾರಿ-ಬಾರಿಗೂ ಗರ್ಜನೆಮಾಡುತ್ತಾ ರಭಸದಿಂದ ಭೀಮಸೇನನು ರಾಕ್ಷಸನ ಮೇಲೆ ಬೀಳಲು ಸಿದ್ಧನಾಗಿ ತನ್ನೆರಡು ಕೈಗಳಿಂದಲೂ ತನ್ನ ತೋಳುಗಳೆರಡನ್ನೂ ಅಪ್ಪಳಿಸಿದನು. ಭೀಮನು ಯುದ್ಧಸನ್ನದ್ಧನಾಗಿ ನಿಂತಿರುವುದನ್ನು ಕಂಡು ರಾಕ್ಷಸನೂ ಕೋಪಾವಿಷ್ಟನಾಗಿ ಹಲ್ಲುಗಳನ್ನು ಕಡಿಯುತ್ತಾ ಅವುಡನ್ನು ಕಚ್ಚುತ್ತಾ–ಬಲಿಚಕ್ರವರ್ತಿಯು ಇಂದ್ರನ ಮೇಲೆ ಬಿದ್ದಂತೆ–ಭೀಮನ ಮೇಲೆ ಬಿದ್ದನು. ಭೀಮ-ಜಟಾಸುರರ ದ್ವಂದ್ವಯುದ್ಧವು ಪ್ರಾರಂಭವಾಯಿತು. ಆ ಸಮಯಕ್ಕೆ ಸರಿಯಾಗಿ ಮಾದ್ರಿಯ ಮಕ್ಕಳಾದ ನಕುಲ-ಸಹದೇವರು ಕೋಪಾವಿಷ್ಟರಾಗಿ ಅಣ್ಣನಿಗೆ ನೆರವೀಯಲು ಧಾವಿಸಿ ಬಂದರು. ನಕುಲ-ಸಹದೇವರು ಮುಂದೆ ಬರು ತ್ತಿರುವುದನ್ನು ಕಂಡು ಭೀಮಸೇನನು ಅವರನ್ನು ಅಲ್ಲಿಯೇ ನಿಲ್ಲುವಂತೆ ಸನ್ನೆಮಾಡಿ ನಸುನಗುತ್ತಾ ಹೇಳಿದನು : "ಸಹೋದರರೇ! ನೀವು ನನ್ನಿ ನೆರವಿಗೆ ಬರಬೇಕಾದ ಅವಶ್ಯಕತೆಯಿಲ್ಲ. ಈ ರಾಕ್ಷಸನು ನನಗೆ ಯಾವುದರಲ್ಲಿಯೂ ಸಮಾನನಲ್ಲ. ನನ್ನ ಮೇಲೆ, ನನ್ನ ಸಹೋದರರ ಮೇಲೆ, ಧರ್ಮದ ಮೇಲೆ, ನಾನು ಗಳಿಸಿರುವ ಪುಣ್ಯದ ಮೇಲೆ ಆಣೆಯಿಟ್ಟು ಹೇಳುತ್ತೇನೆ. ನಾನಿವನನ್ನು ಖಂಡಿತವಾಗಿಯೂ ಸಂಹರಿಸುತ್ತೇನೆ. ನೀವು ನಮ್ಮಿಬ್ಬರ ದ್ವಂದ್ವಯುದ್ಧವನ್ನು ನೋಡುತ್ತಾ ನಿಲ್ಲಿರಿ. ಭ್ರಾತರಾಗ ಬೇಡಿರಿ." ಭೀಮನು ನಕುಲ-ಸಹದೇವರಿಗೂ, ಧರ್ಮರಾಜನಿಗೂ ಹೀಗೆ ಹೇಳಿ, ಘೋರನಿನಾದವನ್ನು ಮಾಡಿದನು. ಭೀಮ-ರಾಕ್ಷಸರ ದ್ವಂದ್ವಯುದ್ಧವು ರಭಸದಿಂದ ಪ್ರಾರಂಭವಾಯಿತು. ಇಬ್ಬರೂ ಬಾಹುಪಾಶಗಳಿಂದ ಪರಸ್ಪರವಾಗಿ ಬಿಗಿದುಕೊಂಡರು. ದೇವತೆಗಳಿಗೂ ಮತ್ತು ದಾನವರಿಗೂ ಹಿಂದೆ ನಡೆದ ಯುದ್ಧದಂತೆಯೇ ಕುಪಿತರಾದ ಭೀಮ-ರಾಕ್ಷಸರ ಯುದ್ಧವು ನಡೆಯಿತು.

ಬಾಹುಪಾಶಗಳಿಂದ ಪರಸ್ಪರ ಬಿಗಿದು, ಒಬ್ಬರು ಮತ್ತೊಬ್ಬರನ್ನು ಅಪ್ಪಳಿಸಿದ ನಂತರ, ಇಬ್ಬರೂ ಹತ್ತಿರದಲ್ಲಿದ್ದ ವೃಕ್ಷಗಳನ್ನು ಕಿತ್ತು ಬಡಿದಾಡಿದರು. ಅವರ ರಣಗರ್ಜನೆಯ ಮೇಘನಾದವನ್ನು ಅನುಕರಿಸುತ್ತಿದ್ದಿತು.

ಇಬ್ಬರೂ ಮಲ್ಲಯುದ್ಧದಲ್ಲಿ ನಿಪುಣರಾಗಿದ್ದರು. ಒಬ್ಬರು ಮತ್ತೊಬ್ಬರನ್ನು ಕೊಲ್ಲಲು ನಿರ್ಧರಿಸಿ ಹತ್ತಿರದಲ್ಲಿದ್ದ ನೂರಾರು ಮರಗಳನ್ನೂ ತೊಡೆಗಳಿಂದು ಮುರಿದು ರಭಸದಿಂದ ಒಬ್ಬರು ಮತ್ತೊಬ್ಬರ ಮೇಲೆ ಪ್ರಯೋಗಿಸಿದರು. ಅವರು ಮಾಡುತ್ತಿದ್ದ ವೃಕ್ಷಯುದ್ಧವು ಆ ಪ್ರದೇಶದಲ್ಲಿದ್ದ ವೃಕ್ಷಗಳ ವಿನಾಶಕ್ಕೇ ಕಾರಣವಾಯಿತು. ಹೆಣ್ಣಿಗಾಗಿ ವೃಕ್ಷಗಳಿಂದಲೇ ಕಾದಾಡಿದ ವಾಲಿ-ಸುಗ್ರೀವರ ಯುದ್ಧವನ್ನು ಭೀಮ-ರಾಕ್ಷಸರ ಆ ವೃಕ್ಷಯುದ್ಧವು ಸ್ಮರಣೆಗೆ ತರುವುದಾಗಿತ್ತು. ವೃಕ್ಷಯುದ್ಧವೆಂದರೆ : ಮಹಾವೃಕ್ಷಗಳನ್ನು ಕಿತ್ತು ಆ ವೃಕ್ಷವು ನಾರಿನ ರೂಪಕ್ಕೆ ಬರುವವರೆಗೂ ಒಬ್ಬರು ಮತ್ತೊಬ್ಬರ ಮೇಲೆ ಅಪ್ಪಳಿಸಿ ಅದರಲ್ಲಿ ಸತ್ತ್ವವಿಲ್ಲವೆಂದು ತಿಳಿದ ಮೇಲೆ ಮತ್ತೊಂದು ವೃಕ್ಷವನ್ನು ಕಿತ್ತುತಂದು ಬಡಿದಾಡುತ್ತಿದ್ದರು.

ಜನಮೇಜಯ! ಸ್ವಲ್ಪ ಹೊತ್ತಿನಲ್ಲಿಯೇ ಆ ಪ್ರದೇಶದಲ್ಲಿದ್ದ ವೃಕ್ಷಗಳೆಲ್ಲವೂ ವಿನಾಶಹೊಂದಿದುವು. ಮರಗಳ ದೊಡ್ಡರಾಶಿಯೇ ಅಲ್ಲಿ ಬಿದ್ದಿತು. ಅದರಿಂದಾಗಿ ವೃಕ್ಷಯುದ್ಧವು ನಿಂತಿತು. ಪರ್ವತದ ಮೇಲಿದ್ದ ಬಂಡೆಗಳನ್ನೇ ಎತ್ತಿಕೊಂಡು ಬಡಿದಾಡಲು ಪ್ರಾರಂಭಿಸಿದರು. ಅವರ ಶಿಲಾವರ್ಷಯುದ್ಧವನ್ನು ನೋಡಿದರೆ ಎರಡು ಪರ್ವತಗಳು ಕಾರ್ಮುಗಿಲನ್ನು ಹಿಡಿದು ಯುದ್ಧ ಮಾಡುತ್ತಿರುವಂತೆ ಕಾಣುತ್ತಿದ್ದಿತು. ಅಷ್ಟು ಯುದ್ಧಮಾಡಿದರೂ ಯಾರೊಬ್ಬರೂ ಆಯಾಸಗೊಂಡಂತೆ ಕಾಣುತ್ತಿರಲಿಲ್ಲ. ಬೃಹದಾಕಾರವಾಗಿಯೂ, ತುದಿಯಲ್ಲಿ ಚೂಪಾಗಿಯೂ ಇದ್ದ, ವಜ್ರಾಯುಧಕ್ಕೆ ಸಮಾನವಾಗಿದ್ದ ಕಲ್ಲುಬಂಡೆಗಳನ್ನಾರಿಸಿ ಒಬ್ಬರು ಮತ್ತೊಬ್ಬರ ಮೇಲೆ ರಭಸದಿಂದ ಅಪ್ಪಳಿಸುತ್ತಿದ್ದರು. ಅಂತಹ ಬಂಡೆಗಳೂ ವಜ್ರಸಮಾನವಾಗಿದ್ದ ಅವರ ಶರೀರದ ಮೇಲೆ ಬಿದ್ದು ಚೂರು ಚೂರಾಗುತ್ತಿದ್ದುವು. ಬಂಡೆಗಳ ಯುದ್ಧವು ಮುಗಿದ ನಂತರ ಮದಿಸಿದ ಆನೆಗಳು ಸೆಣಸಾಡುವಂತೆ–ಸೊಂಡಿಲಿಗೆ ಸಮಾನವಾಗಿದ್ದ ತಮ್ಮ ಬಾಹುಗಳಿಂದ ಒಬ್ಬರನ್ನೊಬ್ಬರು ತಬ್ಬಿಕೊಂಡು ಸೆಣೆಸಾಡತೊಡಗಿದರು. ಅನಂತರದಲ್ಲಿ ಮುಷ್ಟಿಯುದ್ಧವು ಪ್ರಾರಂಭವಾಯಿತು. ಮುಷ್ಟಿಯುದ್ಧಕಾಲ

ದಲ್ಲಿ ಅವರು ಹಲ್ಲುಗಳಿಂದ ಮಾಡುತ್ತಿದ್ದ ಕಟ-ಕಟಾಶಬ್ದವು ನಾಲ್ಕು ದಿಕ್ಕುಗಳಲ್ಲಿಯೂ ಪ್ರತಿಧ್ವನಿಸುತ್ತಿದ್ದಿತು. ಕಟ್ಟಕಡೆಗೆ ಭೀಮಸೇನನು ಐದು ಹೆಡೆಗಳ ಸರ್ಪದಂತಿದ್ದ, ಐದು ಬೆರಳುಗಳಿಂದ ಕೂಡಿರುವ ತನ್ನ ಕೈಯಿಂದ ಮುಷ್ಟಿಯನ್ನು ಮಾಡಿ ರಾಕ್ಷಸನ ಕತ್ತಿನ ಮೇಲೆ ರಭಸದಿಂದ ಪ್ರಹರಿಸಿದನು.



ವಜ್ರಾಯುಧಕ್ಕೆ ಸಮಾನವಾಗಿದ್ದ ಭೀಮನ ಆ ಮುಷ್ಟಿಪ್ರಹಾರವು ಕತ್ತಿನ ಮೇಲೆ ಬಿದ್ದೊಡನೆಯೇ ರಾಕ್ಷಸನು ಕಂಗೆಟ್ಟು ಹೋದನು. ಮೂರ್ಛೆ ಹೊಂದಿ ಕೆಳಗೆ ಬೀಳಲಿದ್ದ ರಾಕ್ಷಸನನ್ನು ಭೀಮಸೇನನು ತನ್ನ ಎರಡು ಕೈಗಳಿಂದಲೂ ಹಿಡಿದೆತ್ತಿ ನಾಲ್ಕಾರು ಬಾರಿ ಗರ-ಗರನೆ ತಿರುಗಿಸಿ ಭೂಮಿಯ

ಮೇಲೆ ರಭಸದಿಂದ ಅಪ್ಪಳಿಸಿಬಿಟ್ಟನು. ರಾಕ್ಷಸನ ಶರೀರದಲ್ಲಿದ್ದ ಮೂಳೆಗಳೆಲ್ಲವೂ ನುಚ್ಚುನೂರಾದುವು. ಅಷ್ಟರಿಂದಲೂ ತೃಪ್ತನಾಗದೇ ಭೀಮಸೇನನು ಆ ರಾಕ್ಷಸನ ಶಿರಸ್ಸನ್ನು ಕಿತ್ತುಬಿಟ್ಟನು. ಆ ರಾಕ್ಷಸನ ಮುಖದಲ್ಲಿದ್ದ ಕಣ್ಣುಗಳು ತೆರೆದಿದ್ದುವು. ಅವುಡುಕಚ್ಚಿದಂತೆಯೇ ಅವನ ಮುಖವಿದ್ದಿತು. ಆ ಸ್ಥಿತಿಯಲ್ಲಿದ್ದ ಅವನ ಶಿರಸ್ಸನ್ನು ನೋಡಿದರೆ ಮರದಿಂದ ಬಿದ್ದ ಹಣ್ಣಿನಂತೆಯೇ ಕಾಣುತ್ತಿದ್ದಿತು.

ಈ ರೀತಿಯಲ್ಲಿ ಭೀಮಸೇನನು ಮಹಾಪರಾಕ್ರಮಿಯಾದ ಜಟಾಸುರನನ್ನು ಕೊಂದು ಯುಧಿಷ್ಠಿರನ ಬಳಿಗೆ ಹೋಗಿ ಅವನಿಗೆ ನಮಸ್ಕರಿಸಿ ಬದ್ಧಾಂಜಲಿಯಾಗಿ ನಿಂತನು. ಸಪ್ತಮರುತ್ತುಗಳು ಇಂದ್ರನನ್ನು ಹೊಗಳುವಂತೆ ಯುಧಿಷ್ಠಿರನ ಬಳಿಯಲ್ಲಿದ್ದ ಬ್ರಾಹ್ಮಣರು ಭೀಮಸೇನನನ್ನು ಬಹುವಾಗಿ ಹೊಗಳಿದರು.

೧೫೭ನೆಯ ಅಧ್ಯಾಯವು ಮುಗಿಯಿತು.

೧೫೮ನೆಯ ಅಧ್ಯಾಯ ಯಕ್ಷಯುದ್ಧಪರ್ವ

## ಪಾಂಡವರು ನರ-ನಾರಾಯಣಾಶ್ರಮದಿಂದ ವೃಷಪರ್ವನ ಆಶ್ರಮಕ್ಕೆ ಹೋಗಿ, ಮುಂದೆ ರಾಜರ್ಷಿಯಾದ ಆರ್ಷ್ಟಿಷೇಣನ ಆಶ್ರಮಕ್ಕೆ ತೆರಳಿದುದು

ಜನಮೇಜಯ! ಜಟಾಸುರನ ವಧೆಯಾದನಂತರ ಯುಧಿಷ್ಠಿರನು ತನ್ನ ಅನುಜರಿಂದಲೂ ಮತ್ತು ದ್ರೌಪದಿಯಿಂದಲೂ ಕೂಡಿದವನಾಗಿ ನರ-ನಾರಾಯಣಾಶ್ರಮಕ್ಕೆ ಹಿಂದಿರುಗಿದನು. ಅಲ್ಲಿಯೇ ಸ್ವಲ್ಪದಿನಗಳವರೆಗೆ ತಂಗಿದ್ದು ಒಂದಾನೊಂದು ದಿನ ಯುಧಿಷ್ಠಿರನು ಅರ್ಜುನನನ್ನು ಸ್ಮರಿಸಿದವನಾಗಿ ತನ್ನ ಅನುಜರನ್ನೂ, ದ್ರೌಪದಿಯನ್ನೂ ಹತ್ತಿರದಲ್ಲಿ ಕುಳ್ಳಿರಿಸಿಕೊಂಡು ಅವರೊಡನೆ ಹೇಳಿದನು : "ಈ ನಾಲ್ಕು ವರ್ಷಗಳು ಇಲ್ಲಿರುವ ಸುಂದರವಾದ ಅರಣ್ಯಗಳಲ್ಲಿ ಸುತ್ತಾಡುತ್ತಾ ಸುಖವಾಗಿ ಕಾಲಕಳೆದುಬಿಟ್ಟೆವು. ಅರ್ಜುನನು ತಾನು ಪ್ರಯಾಣಹೊರಟ ದಿನದಿಂದ ಐದನೆಯ ವರ್ಷಕ್ಕೆ ಸರಿಯಾಗಿ ಶ್ವೇತಪರ್ವತಕ್ಕೆ ಬರುವುದಾಗಿ ನನ್ನೊಡನೆ ಹೇಳಿದ್ದನು. ಆ ಪರ್ವ

ತವು ಎಲ್ಲ ಪರ್ವತಗಳಿಗಿಂತಲೂ ಶ್ರೇಷ್ಠವಾದುದು. ಆ ಪರ್ವತದಲ್ಲಿ ಫಲ-ಪುಷ್ಪಭರಿತವಾದ ಮರಗಳಿವೆ. ಆ ವೃಕ್ಷಗಳಲ್ಲಿ ಮದಿಸಿದ ಕೋಗಿಲೆಗಳು ನಿನಾದಮಾಡುತ್ತಿರುತ್ತವೆ. ದುಂಬಿಗಳು ಝೇಂಕಾರ ಮಾಡುತ್ತಾ ಮಧುರಸವನ್ನು ಹೀರುತ್ತಿರುತ್ತವೆ. ನವಿಲುಗಳೂ ಮತ್ತು ಚಾತಕಪಕ್ಷಿಗಳೂ ಆ ಶ್ವೇತ ಪರ್ವತದಲ್ಲಿ ಸರ್ವಕಾಲದಲ್ಲಿಯೂ ನಲಿದಾಡುತ್ತಿರುತ್ತವೆ. ವ್ಯಾಘ್ರ-ವರಾಹ-ಮಹಿಷ-ಗವಯ-ಮೃಗ-ಶ್ವಾಪದ-ವ್ಯಾಲ-ರುರು ಮುಂತಾದ ಪ್ರಾಣಿಗಳೂ ಅಲ್ಲಿ ಸ್ವೇಚ್ಛೆಯಿಂದ ಸಂಚರಿಸುತ್ತಿರುತ್ತವೆ. ಸಹಸ್ರದಳಕಮಲಗಳೂ, ಶತದಳ ಕುಶೇಯಗಳೂ, ಉತ್ಪಲಗಳೂ ಮತ್ತು ಅರಳಿರುವ ನೀಲೋತ್ಪಲಗಳೂ ಆ ಪರ್ವತದ ಸರೋವರದಲ್ಲಿ ಯಥೇಚ್ಛವಾಗಿವೆ.

ಆ ಪರ್ವತವು ಪುಣ್ಯಪ್ರದವಾಗಿಯೂ, ಪವಿತ್ರವಾಗಿಯೂ ಇದ್ದು ಅದನ್ನು ಸಂದರ್ಶಿಸಲು ದೇವಾಸುರರು ಪದೇ ಪದೇ ಬರುತ್ತಿರುತ್ತಾರೆ. ನಾವೂ ಸಹ ಅರ್ಜುನನನ್ನು ನೋಡಲು ಕುತೂಹಲಿಗಳಾಗಿರುವುದರಿಂದ ಇಲ್ಲಿ ಇನ್ನು ಹೆಚ್ಚು ಕಾಲಕಳೆಯದೇ ಶ್ವೇತಪರ್ವತಕ್ಕೆ ಹೊರಟುಹೋಗಲು ನಾನು ನಿಶ್ಚಯಿಸಿರುವೆನು. ಅಮಿತಪರಾಕ್ರಮಿಯಾದ ಪಾರ್ಥನು ನಮ್ಮನ್ನಗಲಿ ಹೋಗುವಾಗ 'ನಾನು ಧನುರ್ವಿದ್ಯೆಯನ್ನು ಸಾಂಗೋಪಾಂಗವಾಗಿ ಅಧ್ಯಯನ ಮಾಡಲು ಐದು ವರ್ಷಗಳ ಪರ್ಯಂತವಾಗಿ ನಿಮ್ಮನ್ನಗಲಿ ಹೋಗುತ್ತೇನೆ. ಐದನೆಯ ವರ್ಷವಾದನಂತರ ನಿಮ್ಮನ್ನು ಶ್ವೇತಪರ್ವತದಲ್ಲಿ ಸಂದರ್ಶಿಸುತ್ತೇನೆ' ಎಂದು ಹೇಳಿದ್ದನು.

ಅರ್ಜುನನು ತನ್ನ ಮಾತಿನಂತೆ ಧನುರ್ವೇದದಲ್ಲಿ ಪ್ರಾವೀಣ್ಯವನ್ನು ಪಡೆದು, ಆರನೆಯ ವರ್ಷ ಶ್ವೇತಪರ್ವತಕ್ಕೆ ಬರುವುದು ನಿಶ್ಚಯ. ದೇವಲೋಕಕ್ಕೆ ಸಮಾನವೆನಿಸಿರುವ ಶ್ವೇತಪರ್ವತಕ್ಕೆ ನಾವೂ ಪ್ರಯಾಣಮಾಡಿ ಧನುರ್ವಿದ್ಯಾಪಾರಂಗತನಾಗಿ ಬರುವ ಗಾಂಡೀವಿಯನ್ನು ಸಂಧಿಸೋಣ."

ಯುಧಿಷ್ಠಿರನು ಅನುಜರೊಡನೆಯೂ, ದ್ರೌಪದಿಯೊಡನೆಯೂ ಹೀಗೆ ಹೇಳಿ, ಅನಂತರ ಬ್ರಾಹ್ಮಣರನ್ನು ಕರೆಯಿಸಿ ಅವರಿಗೂ ಆ ವಾರ್ತೆಯನ್ನು ತಿಳಿಸಿದನು. ಹತ್ತಿರದಲ್ಲಿಯೇ ಇದ್ದ ಪರ್ಣಾಶ್ರಮಗಳಿಗೆ ಹೋಗಿ ಅಲ್ಲಿದ್ದ ಋಷಿ-ಮಹರ್ಷಿಗಳಿಗೂ ಸಮಾಚಾರವನ್ನು ತಿಳಿಸಿ ಅವರ ಅನುಮತಿಯನ್ನೂ

ಪ್ರಾರ್ಥಿಸಿದನು. ತಪಸ್ವಿಗಳು ತಮ್ಮ ಅನುಮತಿಯನ್ನು ನೀಡುತ್ತಾ ಯುಧಿಷ್ಠಿರನೊಡನೆ ಹೇಳಿದರು :

**ಸುಖೋದರ್ಕಮಿಮಂ ಕ್ಲೇಶಮಚಿರಾದ್ಭರತರ್ಷಭ ।**
**ಕ್ಷತ್ರಧರ್ಮೇಣ ಧರ್ಮಜ್ಞ ತೀರ್ತ್ವಾ ಗಾಂ ಪಾಲಯಿಷ್ಯಸಿ ॥೧೨॥**

"ಮಹಾರಾಜ! ನಿನಗೆ ಮಂಗಳವಾಗಲಿ. ನಿನಗೆ ಸುಖೋದಯವಾಗಲಿದೆ. ಈ ಕ್ಲೇಶವು ಶಾಶ್ವತವಾಗಿರುವುದಿಲ್ಲ. ಬಹಳಬೇಗ ಪರಿಹಾರವಾಗುವುದು. ಧರ್ಮಜ್ಞನೇ! ಕ್ಷಾತ್ರಧರ್ಮದಿಂದಲೇ ಇದ್ದು ಈ ಭೂಮಿಯನ್ನು ಪುನಃ ಪಡೆದು ಪರಿಪಾಲನೆಮಾಡುವೆ. ನಿನ್ನೀ ಕಷ್ಟವು ಸುಖದಲ್ಲಿ ಪರ್ಯವಸಾನವನ್ನು ಹೊಂದುವುದು. ನಿಶ್ಚಿಂತನಾಗಿ ಪ್ರಯಾಣಮಾಡು."

ಋಷಿ-ಮಹರ್ಷಿಗಳಿಂದ ಆಶೀರ್ವಚನಗಳನ್ನು ಪಡೆದು ಯುಧಿಷ್ಠಿರನು ತನ್ನ ಅನುಜರೊಡನೆಯೂ, ದ್ರೌಪದಿಯೊಡನೆಯೂ, ಬ್ರಾಹ್ಮಣರೊಡನೆಯೂ ಕೂಡಿ ಘಟೋತ್ಕಚನ ಪರಿವಾರದವರಿಂದ ಅನುಸೃತನಾಗಿ ಶ್ವೇತ ಪರ್ವತಾಭಿಮುಖವಾಗಿ ಪ್ರಯಾಣಹೊರಟನು. ಮಹಾತೇಜಸ್ವಿಯಾದ, ವ್ರತನಿಷ್ಠನಾದ ಯುಧಿಷ್ಠಿರನು ಸ್ವಲ್ಪದೂರ ಕಾಲ್ನಡಿಗೆಯಲ್ಲಿಯೇ ಪ್ರಯಾಣ ಮಾಡುತ್ತಿದ್ದನು. ದುರ್ಗಮವೆನಿಸಿದ ಪ್ರದೇಶಗಳಲ್ಲಿ ಘಟೋತ್ಕಚನ ಕಿಂಕರರು ಅವನನ್ನು ಎತ್ತಿಕೊಂಡು ಹೋಗುತ್ತಿದ್ದರು. ಈ ರೀತಿಯಲ್ಲಿ ಯುಧಿಷ್ಠಿರನು ಹಾದಿಯಲ್ಲಿ ಉಂಟಾದ ಅನೇಕಾನೇಕಕ್ಲೇಶಗಳನ್ನು ನಿವಾರಣೆ ಮಾಡಿಕೊಂಡು ಸಿಂಹ-ವ್ಯಾಘ್ರಗಳಿಂದಲೂ ಮತ್ತು ಆನೆಗಳಿಂದಲೂ ನಿಬಿಡವಾಗಿದ್ದ ಉತ್ತರದಿಕ್ಕಿನ ಕಡೆಗೆ ಪ್ರಯಾಣಮಾಡಿದನು. ಪ್ರಯಾಣಮಾಡುತ್ತಿದ್ದಾಗ ಕೈಲಾಸ-ಮೈನಾಕ-ಗಂಧಮಾದನ ಮತ್ತು ಶ್ವೇತಪರ್ವತಗಳು ಕಾಣುತ್ತಿದ್ದುವು. ಪರ್ವತದ ಮೇಲ್ಭಾಗದಲ್ಲಿ ಅನೇಕಾನೇಕ ಮಂಗಳಕರವಾದ ನದಿಗಳು ಹರಿಯುತ್ತಿದ್ದುವು. ಅಂತಹ ದುರ್ಗಮಪ್ರದೇಶಗಳಲ್ಲಿ ಹದಿನೇಳು ದಿನಗಳ ಪರ್ಯಂತವಾಗಿ ಪ್ರಯಾಣಮಾಡಿದ ನಂತರ ಯುಧಿಷ್ಠಿರನು ಪರಿವಾರ ಸಮೇತನಾಗಿ ಪುಣ್ಯಪ್ರದವಾದ ಹಿಮವತ್ಪರ್ವತವನ್ನು ತಲುಪಿದನು.

ಗಂಧಮಾದನಪರ್ವತಕ್ಕೆ ಅನತಿದೂರದಲ್ಲಿ ಮತ್ತು ಹಿಮವತ್ಪರ್ವತದ ತಪ್ಪಲಿನಲ್ಲಿ ಯುಧಿಷ್ಠಿರನು ವೃಷಪರ್ವಮಹರ್ಷಿಯ ದಿವ್ಯಾಶ್ರಮವನ್ನು

ಕಂಡನು. ಆ ಪುಣ್ಯಾಶ್ರಮವು ಫಲ-ಪುಷ್ಪಭರಿತವಾಗಿದ್ದ ಮರ-ಗಿಡ-ಬಳ್ಳಿಗಳಿಂದ ಸಮಾವೃತವಾಗಿದ್ದಿತು. ರಾಜರ್ಷಿಯಾದ, ಧರ್ಮಾತ್ಮನಾದ ವೃಷಪರ್ವನ ಆಶ್ರಮಕ್ಕೆ ಪಾಂಡವರು ಹೋಗಿ ಸಂದರ್ಶಿಸಿ ಸಾಷ್ಟಾಂಗ ಪ್ರಣಾಮ ಮಾಡಿದರು. ಮಹರ್ಷಿಯ ದಿವ್ಯದರ್ಶನಮಾತ್ರದಿಂದಲೇ ಅವರೆಲ್ಲರ ಆಯಾಸವೆಲ್ಲವೂ ಪರಿಹಾರವಾಯಿತು. ರಾಜರ್ಷಿಯಾದ ವೃಷಪರ್ವನು ತನ್ನ ಮಕ್ಕಳನ್ನು ಆದರಿಸುವಂತೆಯೇ ಪಾಂಡವರನ್ನೂ ಆದರದಿಂದ ಸ್ವಾಗತಿಸಿದನು.



ವೃಷಪರ್ವನಿಂದ ಸತ್ಕೃತರಾದ ಪಾಂಡವರು ಆ ಆಶ್ರಮಲ್ಲಿಯೇ ಏಳು ರಾತ್ರಿಗಳವರೆಗೆ ತಂಗಿದ್ದರು. ಎಂಟನೆಯ ದಿವಸ ವಿಖ್ಯಾತನಾದ ವೃಷಪರ್ವನ ಅನುಮತಿಯನ್ನು ಪಡೆದು ಪ್ರಯಾಣಹೊರಡಲು ಸಿದ್ಧರಾದರು. ಹೊರಡುವ

ಮೊದಲು ಯುಧಿಷ್ಠಿರನು ತನ್ನೊಡನೆ ಬಂದಿದ್ದ, ವೃಷಪರ್ವನಿಂದ ಬಂಧುಗಳೋಪಾದಿಯಲ್ಲಿ ಸತ್ಕೃತರಾದ ಬ್ರಾಹ್ಮಣರನ್ನು ವೃಷಪರ್ವನಿಗೆ ಪರಿಚಯ ಮಾಡಿಕೊಟ್ಟನು. ತನ್ನಲ್ಲಿದ್ದ ಕೆಲವು ವಸ್ತ್ರಾಭರಣಗಳನ್ನೂ ವೃಷಪರ್ವನಲ್ಲಿಯೇ ಬಿಟ್ಟು ಯುಧಿಷ್ಠಿರನು ಪ್ರಯಾಣಹೊರಟನು. ವಿದ್ವಾಂಸನಾದ, ಕುಶಲನಾದ, ಸರ್ವಧರ್ಮವನ್ನೂ ತಿಳಿದಿದ್ದ ವೃಷಪರ್ವನು ಯುಧಿಷ್ಠಿರನು ಪ್ರಯಾಣಹೊರಟ ಕಾಲದಲ್ಲಿ ತನ್ನ ಮಕ್ಕಳಿಗೆ ತಿಳಿವಳಿಕೆ ಹೇಳುವಂತೆ ಯಥೋಚಿತವಾದ ಹಿತವಚನಗಳನ್ನು ಯುಧಿಷ್ಠಿರನಿಗೆ ಹೇಳಿ ಕಳುಹಿಸಿ ಕೊಟ್ಟನು. ವೃಷಪರ್ವನ ಅನುಮತಿಯನ್ನು ಪಡೆದು ಅವನ ನಿರ್ದೇಶನದಂತೆ ಪಾಂಡವರು ಉತ್ತರದಿಕ್ಕಿಗೆ ಪ್ರಯಾಣಹೊರಟರು. ಸಂಪ್ರದಾಯದಂತೆ ವೃಷಪರ್ವನೂ ಸ್ವಲ್ಪ ದೂರದವರೆಗೆ ಪಾಂಡವರನ್ನು ಹಿಂಬಾಲಿಸಿ ಹೋದನು. ಮುಂದೆ ಉಂಟಾಗಬಹುದಾದ ಅನಿಷ್ಟಗಳಿಂದ ಪಾಂಡವರನ್ನು ಪಾರು ಮಾಡುವ ವಿಧಾನವನ್ನು ಅಲ್ಲಿದ್ದ ಬ್ರಾಹ್ಮಣರಿಗೆ ತಿಳಿಸಿ, ಪಾಂಡವರನ್ನೂ ಆಶೀರ್ವದಿಸಿ, ಪ್ರಯಾಣದ ಹಾದಿಯನ್ನು ನಿರ್ದೇಶಿಸಿ ತನ್ನ ಆಶ್ರಮಕ್ಕೆ ವೃಷಪರ್ವನು ಹಿಂದಿರುಗಿದನು.

ಸತ್ಯಪರಾಕ್ರಮನಾದ ಯುಧಿಷ್ಠಿರನು ತನ್ನ ಅನುಜರಿಂದೊಡಗೂಡಿ ಕಾಲ್ನಡಿಗೆಯಲ್ಲಿಯೇ ನಾನಾವಿಧವಾದ ಪ್ರಾಣಿಗಳಿಗೆ ನಿವಾಸಸ್ಥಾನವಾಗಿದ್ದ ಪರ್ವತದ ಮಾರ್ಗದಲ್ಲಿ ನಡೆದುಹೋಗುತ್ತಿದ್ದನು. ಮಾರ್ಗದಲ್ಲಿ ಸಿಕ್ಕುತ್ತಿದ್ದ ಲತಾಕುಂಜಗಳಲ್ಲಿಯೂ ಮತ್ತು ಗುಹೆಗಳಲ್ಲಿಯೂ ಸ್ವಲ್ಪಕಾಲ ವಿಶ್ರಮಿಸಿಕೊಂಡು ನಾಲ್ಕನೆಯ ದಿನ ಪಾಂಡವರು ಮಹಾಮೇಘಸದೃಶವಾಗಿದ್ದ, ಅನೇಕಾನೇಕಪ್ರವಾಹಗಳಿಂದ ಕೂಡಿದ್ದ, ರತ್ನ-ಸುವರ್ಣ-ರಜತಮಯವಾದ ಬಂಡೆಗಳಿದ ವ್ಯಾಪ್ತವಾಗಿದ್ದ, ಶುಭಪ್ರದವಾದ ಶ್ವೇತಪರ್ವತವನ್ನು ಸೇರಿದರು. ವೃಷಪರ್ವನು ನಿರ್ದೇಶಿಸಿದ ಮಾರ್ಗದಲ್ಲಿಯೇ ಪಾಂಡವರು ನಡೆದುಹೋಗಿ ಹಾದಿಯಲ್ಲಿ ಸಿಕ್ಕಿದ ಅನೇಕಾನೇಕ ಪರ್ವತಗಳನ್ನು ಒಂದಾದಮೇಲೊಂದರಂತೆ ಸಂದರ್ಶಿಸುತ್ತಾ ಪ್ರಯಾಣಮಾಡಿದರು. ಪರ್ವತವನ್ನು ಹತ್ತಿಹೋದಂತೆಲ್ಲಾ ಅಲ್ಲಿದ್ದ ಕಣಿವೆಗಳು ಬಹಳ ದುರ್ಗಮವಾಗಿ ಕಾಣುತ್ತಿದ್ದುವು. ಅಂತಹ ದುರ್ಗಮವಾದ ಕಣಿವೆಗಳನ್ನೂ ಪಾಂಡವರು ನಿರಾಯಾಸವಾಗಿಯೇ ದಾಟಿ ಹೋದರು.

ಧೌಮ್ಯ, ದ್ರೌಪದೀ, ಪಾಂಡವರೂ ಮತ್ತು ಲೋಮಶರೂ ಮತ್ತು ಬ್ರಾಹ್ಮಣರೂ ಗುಂಪಾಗಿಯೇ ಪ್ರಯಾಣಮಾಡುತ್ತಿದ್ದರು. ಪ್ರಯಾಣಕಾಲದಲ್ಲಿ ಯಾರೊಬ್ಬರು ಆಯಾಸಗೊಳ್ಳಲಿಲ್ಲ ಮತ್ತು ಹಿಂದುಳಿಯಲಿಲ್ಲ. ಮಹಾಭಾಗರಾದ ಪಾಂಡವರು ಪ್ರಯಾಣಮಾಡುತ್ತಾ ಮೃಗ-ಪಕ್ಷಿಗಳಿಂದ ಆವೃತವಾಗಿದ್ದ, ನಾನಾವಿಧವಾದ ಮರ-ಗಿಡ-ಬಳ್ಳಿಗಳಿಂದಲೂ ಅನೇಕಾನೇಕ ಪದ್ಮಸರೋವರಗಳಿಂದಲೂ ಕೂಡಿದ್ದ ಮಾಲ್ಯವಂತವೆಂಬ ಪರ್ವತವನ್ನು ಸೇರಿದರು. ಮಾಲ್ಯವತ್ಪರ್ವತದ ಸೊಬಗನ್ನು ನೋಡಿಕೊಂಡು ಮುಂದೆ ಪ್ರಯಾಣಮಾಡಿ, ಕಿಂಪುರುಷರ ನಿವಾಸಸ್ಥಾನವಾದ ಗಂಧಮಾದನಪರ್ವತವನ್ನು ಸೇರಿದರು. ಗಂಧಮಾದನಪರ್ವತವು ಸಿದ್ಧ-ಚಾರಣರಿಂದಲೂ, ವಿದ್ಯಾಧರ-ಕಿನ್ನರಿಯರಿಂದಲೂ ಸಂಸೇವ್ಯಮಾನವಾಗಿದ್ದಿತು. ಆ ಪರ್ವತದ ಕಾನನದಲ್ಲಿ ಅನೇಕಾನೇಕ ಕಾಡಾನೆಗಳೂ, ಸಿಂಹ-ಶಾರ್ದೂಲಗಳೂ ಇದ್ದುವು. ಶರಭಮೃಗಗಳು ಮಾಡುತ್ತಿದ್ದ ಗರ್ಜನೆಯ ನಾಲ್ಕು ದಿಕ್ಕುಗಳಲ್ಲಿಯೂ ಪ್ರತಿಧ್ವನಿಸುತ್ತಿದ್ದಿತು. ನಂದನವನಸದೃಶವಾದ ಗಂಧಮಾದನಪರ್ವತದಲ್ಲಿದ್ದ ವನವನ್ನು ಪಾಂಡವರು ಪ್ರವೇಶಿಸಿದರು.

ಆ ವನದ ಸುಂದರದೃಶ್ಯಗಳು ಮನಸ್ಸಿಗೂ ಮತ್ತು ಹೃದಯಕ್ಕೂ ಆಪ್ಯಾಯಮಾನವಾಗಿದ್ದುವು. ಸುಂದರವಾದ ಅನೇಕಲತಾಕುಂಜಗಳಿದ್ದುದರಿಂದ ಆ ಅರಣ್ಯವು ವಾಸಕ್ಕೂ ಯೋಗ್ಯವಾಗಿದ್ದಿತು. ದ್ರೌಪದಿಯೊಡನೆಯೂ ಮಹಾತ್ಮರಾದ ಬ್ರಾಹ್ಮಣರೊಡನೆಯೂ ಪ್ರಯಾಣಮಾಡುತ್ತಿದ್ದ ಪಾಂಡವರು ಸುಂದರದೃಶ್ಯಗಳ ದರ್ಶನದಿಂದ ಆನಂದವನ್ನು ಅನುಭವಿಸುತ್ತಿದ್ದರಲ್ಲದೇ ಸುಮಧುರವಾದ ಪಕ್ಷಿಗಳ ನಿನಾದಗಳ ಶ್ರವಣದಿಂದಲೂ ಆನಂದಪಡುತ್ತಿದ್ದರು. ಆ ಅರಣ್ಯದಲ್ಲಿ ಪಕ್ಷಿಗಳು ಮಾಡುತ್ತಿದ್ದ ಕಲರವವು ಪ್ರೀತಿಜನಕವಾಗಿಯೂ, ಸುಮಧುರವಾಗಿಯೂ, ಮನಸ್ಸನ್ನು ಆಕರ್ಷಿಸುವುದಾಗಿಯೂ ಇದ್ದಿತು. ಸರ್ವರ್ತುಗಳಲ್ಲಿಯೂ ಫಲ-ಪುಷ್ಪಭರಿತವಾಗಿರುವ ಅನೇಕವೃಕ್ಷಗಳು ಆ ಅರಣ್ಯದಲ್ಲಿದ್ದುವು. ಪಾಂಡವರು ನಡೆದುಹೋಗುತ್ತಿದ್ದ ಹಾದಿಯಲ್ಲಿ ಅನೇಕವೃಕ್ಷಗಳ ರೆಂಬೆಗಳು ಹಣ್ಣುಗಳ ಭಾರದಿಂದ ಬಗ್ಗಿಹೋಗಿದ್ದುವು. ಮಾವು, ಹಲಸು, ತೆಂಗು, ತಿಂದುಕ, ಮುಂಜಾತಕ, ಮಾದಲ, ಅಂಜೂರ, ದಾಳಿಂಬೆ, ಸೀಬೆ, ಖರ್ಜೂರ, ದ್ರಾಕ್ಷಿ, ಹುಣಸೆ,

ನಿಂಬೆ, ಬೇವು, ಬಿಲ್ವ, ಕಪಿತ್ಥ(ಬೇಲ), ನೇರಳೆ, ಪಾರಾವತ, ಕಾಶ್ಮರೀ, ಬದರೀ, ಪ್ಲಕ್ಷ, ಉದುಂಬರ (ಅತ್ತಿ), ಆಲ, ಅಶ್ವತ್ಥ, ಕ್ಷೀರಿಕ, ಭಲ್ಲಾತಕ, ಆಮಲಕ (ನೆಲ್ಲಿ), ಹರೀತಕ, ಬಿಭೀತಕ, ಇಂಗುದ, ತಿಂದುಕ, ಕರಮರ್ದ–ಇವೇ ಮುಂತಾದ ನಾನಾಜಾತಿಯ ಅಮೃತಸದೃಶಫಲಭರಿತವಾದ ಮರ-ಗಿಡಗಳು ಆ ಅರಣ್ಯದಲ್ಲಿದ್ದುವು. ಫಲವೃಕ್ಷಗಳಂತೆಯೇ ಪುಷ್ಪಭರಿತವಾದ ಚಂಪಕ, ಅಶೋಕ, ಪುನ್ನಾಗ, ಕೇದಗೆ, ವಕುಲ, ಸಪ್ತಪರ್ಣ, ಕರ್ಣಿಕಾರ, ಪಾಟಲ, ಕುಟಜ, ಮಂದಾರ, ಇಂದೀವರ, ಪಾರಿಜಾತ, ಕೋವಿದಾರ, ದೇವ ದಾರು, ಶಾಲ, ತಾಲ, ತಮಾಲ, ಪಿಪ್ಪಲ, ಹಿಂಗುಕ, ಶಾಲ್ಮಲೀ, ಕಿಂಶುಕ, ಶಿಂಶುಪ, ಸರಲ–ಮುಂತಾದ ಸಾವಿರಾರು ಜಾತಿಯ ಪುಷ್ಪವೃಕ್ಷಗಳೂ, ಲತೆ ಗಳೂ ಇದ್ದುವು. ಆ ಕಾನನದಲ್ಲಿದ್ದ ಪಕ್ಷಿಗಳ ಸಂಖ್ಯೆಯೂ ಅಗಣಿತ ವಾಗಿದ್ದಿತು. ಚಕೋರ, ಶತಪತ್ರ, ಭೃಂಗರಾಜ, ಗಿಣಿ, ಕೋಕಿಲ, ಕಲವಿಂಕ (ಗುಬ್ಬಚ್ಚಿ), ಹಾರೀತ, ಜೀವಜೀವಕ, ಪ್ರಿಯಕ, ಚಾತಕ–ಇವೇ ಮುಂತಾದ ನಾನಾಜಾತಿಯ ಪಕ್ಷಿಗಳಿದ್ದುವು. ಅವೆಲ್ಲವೂ ಮಾಡುತ್ತಿದ್ದ ನಿನಾದಗಳು ಕಿವಿಗಳಿಗೆ ಬಹಳ ಇಂಪಾಗಿದ್ದುವು; ಸುಮಧುರವಾಗಿದ್ದುವು.

ಜನಮೇಜಯ! ಗಂಧಮಾದನಪರ್ವತದ ಆ ವನದಲ್ಲಿದ್ದ ಸರಸ್ಸು ಗಳೂ ಜಲಚರಪ್ರಾಣಿಗಳಿಂದ ಕೂಡಿ ಬಹುರಮ್ಯವಾಗಿದ್ದುವು. ಕುಮುದ, ಪುಂಡರೀಕ, ಕೋಕನದ, ಉತ್ಪಲ, ಕಹ್ಲಾರ, ಕಮಲ–ಇವೇ ಮೊದಲಾದ ಹೂವಿನ ಬಳ್ಳಿಗಳಿಂದ ಆ ಸರೋವರಗಳು ತುಂಬಿದ್ದುವು. ಕಾದಂಬ, ಚಕ್ರವಾಕ, ಕುರರ, ಜಲಕುಕ್ಕುಟ, ಕಾರಂಡವ, ಪ್ಲವ, ಹಂಸ, ಬಕ, ಮದ್ಗು ಮುಂತಾದ ಜಲಚರಪಕ್ಷಿಗಳು ಕಮಲಪುಷ್ಪಗಳ ಮಕರಂದವನ್ನು ಪಾನ ಮಾಡಿ ಮದಿಸಿ ಹರ್ಷದಿಂದ ಸಂಚರಿಸುತ್ತಿದ್ದುವು.

ಆ ಸರೋವರಗಳಲ್ಲಿದ್ದ ಪುಷ್ಪಗಳ ಮಕರಂದವನ್ನು ಸವಿದು ಮದಿಸಿದ ದುಂಬಿಗಳು ಝೇಂಕಾರನಿನಾದಗಳನ್ನು ಮಾಡುತ್ತಿದ್ದುವಲ್ಲದೇ–ಪದ್ಮಪುಷ್ಪ ಗಳ ಪರಾಗದಿಂದ ಆಚ್ಛಾದಿತವಾಗಿದ್ದ ದುಂಬಿಗಳು ಕೆಂಪಾಗಿಯೂ ಕಾಣುತ್ತಿ ದ್ದುವು. ಅಂತಹ ಸುಂದರವಾದ ಅನೇಕಾನೇಕದೃಶ್ಯಗಳನ್ನು ನೋಡುತ್ತಾ ಪಾಂಡವರು ಪ್ರಯಾಣಮಾಡುತ್ತಿದ್ದರು. ಒಂದೆಡೆಯಲ್ಲಿ ಅವರು ನವಿಲುಗಳ

ಸಮೂಹಗಳನ್ನು ಕಂಡರು. ಕೆಲವು ಗಂಡುನವಿಲುಗಳು ಹೆಣ್ಣುನವಿಲು ಗಳೊಡನೆ ಸೇರಿ ಗುಡುಗಿನ ಶಬ್ದವನ್ನು ಕೇಳಿ ಆನಂದದಿಂದ ಗರಿಗಳನ್ನು ಪ್ರಸ ರಿಸಿಕೊಂಡು ಹೃದಯಂಗಮವಾಗಿ ನಿನಾದಮಾಡುತ್ತಾ ನೃತ್ಯವಾಡುತ್ತಿದ್ದುವು. ಮತ್ತೆ ಕೆಲವು ನವಿಲುಗಳು ಬಳ್ಳಿಗಳಿಂದ ಕೂಡಿದ್ದ ಕುಟಜವೃಕ್ಷಗಳ ಮೇಲೆ ನಿಂತು ಆಟವಾಡುತ್ತಿದ್ದುವು. ಮತ್ತೆ ಕೆಲವು ನವಿಲುಗಳು ಮರದ ರೆಂಬೆಗಳ ಮೇಲೆಯೇ ಜಾಗರವಾಡುತ್ತಿದ್ದುವು. ಅದನ್ನು ನೋಡಿದರೆ ವೃಕ್ಷಕ್ಕೆ ಕಿರೀಟ ವಿಟ್ಟಂತೆ ಕಾಣುತ್ತಿದ್ದಿತು. ವೃಕ್ಷಗಳ ಮಧ್ಯದಲ್ಲಿ ಸಣ್ಣ-ಸಣ್ಣ ಸರೋವರ ಗಳಿದ್ದುವು. ಅವುಗಳಲ್ಲಿ ಸಿಂಧುವಾರಗಳೆಂಬ ನೀಳವಾದ ಕಮಲಲತೆಗಳಿ ದ್ದುವು. ಅವನ್ನು ನೋಡಿದರೆ ಮನ್ಮಥನ ಶೂಲಾಯುಧಗಳೋಪಾದಿಯಲ್ಲಿ ಕಾಣುತ್ತಿದ್ದುವು. ಪರ್ವತಶಿಖರಗಳಲ್ಲಿ ಕರ್ಣಿಕಾರವೃಕ್ಷಗಳಿದ್ದು ಅವುಗಳ ಕುಸುಮಗಳು ಹೊಂಬಣ್ಣದಿಂದ ಪ್ರಕಾಶಿಸುತ್ತಿದ್ದುವು ಮತ್ತು ಆ ಪುಷ್ಪಗಳು ದುಂಡಾಗಿದ್ದು ಪರ್ವತದ ಕರ್ಣಕುಂಡಲಗಳೋಪಾದಿಯಲ್ಲಿ ಪ್ರಕಾಶಿಸು ತ್ತಿದ್ದುವು.

ಮಾರ್ಗದಲ್ಲಿ ನಡೆದುಹೋಗುತ್ತಾ ಪಾಂಡವರು ಪುಷ್ಪಭರಿತವಾಗಿದ್ದ ಕುರವಕವೃಕ್ಷಗಳನ್ನು ಕಂಡರು. ಅವುಗಳಲ್ಲಿದ್ದ ಪುಷ್ಪಗಳನ್ನು ಕಾಮಬಾಣಗಳಿಗೆ ಹೋಲಿಸಬಹುದಾಗಿದ್ದಿತು. ಆ ಪುಷ್ಪಗಳ ಸೊಬಗನ್ನು ಎಷ್ಟು ನೋಡಿದರೂ ತೃಪ್ತಿಯೇ ಉಂಟಾಗುತ್ತಿರಲಿಲ್ಲ. ಆ ಅರಣ್ಯದಲ್ಲಿದ್ದ ತಿಲಕ ವೃಕ್ಷಗಳು ಅರಣ್ಯಕ್ಕೆ ತಿಲಕಪ್ರಾಯವಾಗಿ ಕಾಣುತ್ತಿದ್ದುವು. ಆಗ ತಾನೇ ಚಿಗುರಿ ಹೂವಾಗಿದ್ದ ಮಾವಿನ ಮರಗಳನ್ನು ಪಾಂಡವರು ಹಾದಿಯಲ್ಲಿ ವೀಕ್ಷಿಸಿದರು. ಆ ವೃಕ್ಷಗಳಲ್ಲಿ ಪುಷ್ಪರಸವನ್ನು ಹೀರುತ್ತಾ ಅನೇಕದುಂಬಿಗಳು ಝೇಂಕಾರಮಾಡುತ್ತಿದ್ದುವು. ಆ ವೃಕ್ಷಗಳೆಲ್ಲವೂ ನಯನಮನೋಹರವಾಗಿದ್ದು ಮನ್ಮಥನ ಬಾಣರೂಪವಾಗಿದ್ದುವು. ಇನ್ನೂ ಅನೇಕವೃಕ್ಷಗಳು ಹೂವಿನಿಂದ ಕೂಡಿ ಕಂಗೊಳಿಸುತ್ತಿದ್ದುವು. ಕೆಲವು ಕೆಂಪುಬಣ್ಣದ ಹೂಗಳಿಂದಲೂ, ಮತ್ತೆ ಕೆಲವು ಹೊಂಬಣ್ಣದ ಹೂಗಳಿಂದಲೂ, ಶೋಭಿಸುತ್ತಿದ್ದುವು. ಕೆಲವು ಹೂಗಳು ಹಚ್ಚಹಸುರಾಗಿಯೂ, ಮತ್ತೆ ಕೆಲವು ಬೆಳದಿಂಗಳಿನಂತೆ ಬಿಳುಪಾಗಿಯೂ ಕಂಗೊಳಿಸುತ್ತಿದ್ದುವು.

ಎತ್ತರವಾಗಿ ಬೆಳೆದಿದ್ದ ಸಾಲ-ತಮಾಲ-ಪಾಟಲ-ಬಕುಳವೃಕ್ಷಗಳು

ಪುಷ್ಪಭರಿತವಾಗಿದ್ದು ಪರ್ವತಕ್ಕೆ ಹಾಕಿರುವ ಪುಷ್ಪಮಾಲಿಕೆಗಳೋಪಾದಿಯಲ್ಲಿ ಕಂಗೊಳಿಸುತ್ತಿದ್ದುವು.

ಜನಮೇಜಯ! ಸ್ಫಟಿಕಶಿಲೆಯಷ್ಟು ಸ್ವಚ್ಛವಾಗಿದ್ದ ನೀರುಳ್ಳ ಸರೋವರಗಳನ್ನೂ–ಅವುಗಳಲ್ಲಿದ್ದ ನಯನಮನೋಹರವಾದ ಬಿಳಿಯ ರೆಕ್ಕೆಗಳುಳ್ಳ ಕಲಹಂಸ, ಕೊಕ್ಕರೆ ಮುಂತಾದ ಪಕ್ಷಿಗಳನ್ನೂ-ಕಮಲ-ಕುಶೇಶಯಗಳನ್ನೂ ನೋಡುತ್ತಾ ನೀರನ್ನು ಕುಡಿದು ಮತ್ತು ಸರೋವರಗಳಲ್ಲಿ ಮಿಂದು ದಣಿವಾರಿಸಿಕೊಳ್ಳುತ್ತಾ ಪಾಂಡವರು ಮುಂದೆ ಮುಂದೆ ಪ್ರಯಾಣಮಾಡುತ್ತಿದ್ದರು. ಆ ವನದ ಸೊಬಗನ್ನು ನೋಡುತ್ತಿದ್ದ ಪಾಂಡವರು ಭ್ರಾಂತರಾಗಿ ತೆರೆದ ಕಣ್ಣುಗಳನ್ನು ಮುಚ್ಚುತ್ತಲೇ ಇರಲಿಲ್ಲ. ಅವರಿಗೆ ಎಲ್ಲವೂ ಅತ್ಯಾಶ್ಚರ್ಯಕರವಾಗಿ ಕಂಡಿತು. ಕಮಲ-ಕಹ್ಲಾರ-ಉತ್ಪಲ-ಪುಂಡರೀಕ ಪುಷ್ಪಗಳ ಮೇಲೆ ಬೀಸಿದ ಸುಗಂಧಮಯವಾದ ಮಂದಮಾರುತವು ಪಾಂಡ ವರ ಮೇಲೆ ಬೀಸಿ ಅವರಿಗೆ ಮತ್ತಷ್ಟು ಆನಂದವನ್ನುಂಟುಮಾಡಿತು. ಯುಧಿಷ್ಠಿರನು ಆನಂದಭರಿತನಾಗಿ ಭೀಮನೊಡನೆ ಹೇಳಿದನು :

“ಭೀಮಸೇನ! ನಿಶ್ಚಯವಾಗಿಯೂ ಈ ಗಂಧಮಾದನಪರ್ವತದ ವನವು ಎಷ್ಟು ಸೊಬಗಿನಿಂದ ಕೂಡಿದೆ? ಈ ಕಾನನವು ದೇವಲೋಕದ ವೃಕ್ಷಗಳಿಂದ ತುಂಬಿಹೋಗಿರುವುದು. ಎಲ್ಲ ವೃಕ್ಷಗಳೂ, ಗಿಡ-ಬಳ್ಳಿಗಳೂ ಫಲ-ಪುಷ್ಪಭರಿತವಾಗಿವೆ. ಮುಳ್ಳಿನ ಗಿಡಗಳಿಲ್ಲ. ಫಲ-ಪುಷ್ಪಗಳಿಲ್ಲದ ಒಂದು ಮರವನ್ನಾಗಲೀ, ಒಂದು ಗಿಡವನ್ನಾಗಲೀ, ಒಂದು ಬಳ್ಳಿಯನ್ನಾಗಲೀ, ನಾನು ಕಾಣಲೇ ಇಲ್ಲ. ನಾನಾವಿಧವಾದ, ನಾನಾಜಾತಿಗಳ, ನಾನಾವರ್ಣಗಳ ಮರ-ಗಿಡ-ಬಳ್ಳಿಗಳಿವೆ ; ಎಲ್ಲವೂ ಫಲ-ಪುಷ್ಪಭರಿತವಾಗಿವೆ ; ಈ ಮರಗಳು, ಚಿಗುರೆಲೆಗಳನ್ನು ತಿಂದು ಸುಮಧುರವಾಗಿ ಧ್ವನಿಮಾಡುವ ಗಂಡು ಕೋಗಿಲೆಗಳಿಂದ ನಿಬಿಡವಾಗಿದ್ದು-ಪ್ರೇಕ್ಷಕರಿಗೆ ನೇತ್ರಾನಂದವನ್ನೂ, ಕರ್ಣಾನಂದವನ್ನೂ ಏಕಕಾಲದಲ್ಲಿ ಉಂಟುಮಾಡುತ್ತಿವೆ. ಈ ಕಾನನದಲ್ಲಿ ಮುಳುಗಿಡಗಳಾಗಲೀ, ಮುಳ್ಳುಮರಗಳಾಗಲೀ, ಮುಳ್ಳುಬಳ್ಳಿಗಳಾಗಲೀ ಇರುವುದಿಲ್ಲ. ಭೀಮ! ಈ ಗಂಧಮಾದನಪರ್ವತದ ತಪ್ಪಲುಪ್ರದೇಶವು ರುಚಿಯಾದ ಹಣ್ಣಿನ ಮರಗಳಿಂದಲೂ, ಸುಗಂಧಮಯವಾದ ವೃಕ್ಷಗಳಿಂದಲೂ, ತುಂಬಿಹೋಗಿರುವುದು. ಇಲ್ಲಿರುವ ಈ ಸರೋವರವನ್ನಾದರೂ ನೋಡು, ಭೀಮ

ಸೇನ! ಅರಳಿದ ಕಮಲಗಳಿಂದ ಈ ಸರೋವರವು ತುಂಬಿಹೋಗಿರುವುದು. ದುಂಬಿಗಳು ಇವುಗಳ ಮಧುರವಾದ ಮಧುರಸವನ್ನು ಕುಡಿದು ಮದಿಸಿರುವುವು. ಈ ಸಮಯದಲ್ಲಿಯೇ ಸರೋವರವನ್ನು ಆನೆಗಳು ಕಲಕುತ್ತಿವೆ.”

ಆನಂದಪರವಶನಾದ ಯುಧಿಷ್ಠಿರನು ಮುಂದೆ ಮತ್ತೊಂದು ಸರೋವರವನ್ನು ನೋಡಿ ಪುನಃ ಭೀಮನಿಗೆ ಹೇಳಿದನು :

“ಈ ಸರೋವರವನ್ನು ನೋಡು, ಭೀಮಸೇನ! ಇದರಲ್ಲಿರುವ ಕಮಲಪುಷ್ಪಗಳು ಮಾಲೆಯಾಕಾರದಲ್ಲಿದ್ದು ಮೂರ್ತಿಮತ್ತಾಗಿರುವ ಲಕ್ಷ್ಮಿಗೆ ಹಾಕಿರುವ ಹಾರದೋಪಾದಿಯಲ್ಲಿ ಕಾಣಿಸುತ್ತಿರುವುದು. ನಿಶ್ಚಯವಾಗಿಯೂ ಈ ವನಲಕ್ಷ್ಮಿಯು ಅನೇಕಾನೇಕ ಸುಗಂಧಮಯವಾದ ಪುಷ್ಪಗಳಿಂದ ಅಲಂಕೃತಳಾಗಿರುವಳು ಅತ್ತಕಡೆ ನೋಡು, ಭೀಮ! ಆ ಪ್ರದೇಶಗಳಲ್ಲಿಯೇ ದೇವತೆಗಳು ವಿಹರಿಸುತ್ತಾರೆ. ನಾವಿಲ್ಲಿ ಬಂದು ಧನ್ಯರಾದೆವು. ಅಲ್ಲಿ ಕಾಣುತ್ತಿರುವ ಫಲ-ಪುಷ್ಪಭರಿತವಾದ ವೃಕ್ಷವನ್ನು ನೋಡು. ಆ ವೃಕ್ಷದ ಸುತ್ತಲೂ ಪುಷ್ಪಭರಿತವಾದ ಬಳ್ಳಿಯು ಸುತ್ತಿಕೊಂಡು ವೃಕ್ಷದ ಸೊಬಗನ್ನು ಇಮ್ಮಡಿಗೊಳಿಸಿದೆ. ಅಲ್ಲಿ ಕಾಣುತ್ತಿರುವ ತಪ್ಪಲು ಪ್ರದೇಶದಲ್ಲಿ ಹೆಣ್ಣುನವಿಲುಗಳೊಡನೆ ಗಂಡುನವಿಲುಗಳು ಕೂಡಿಕೊಂಡು ತಾಳ-ಲಯಬದ್ಧವಾಗಿ ಜಾಗರವಾಡುತ್ತಾ ಕೇಕೆಹಾಕುತ್ತಿರುವುದನ್ನು ಕಂಡೆಯಾ? ಚಕೋರಗಳೂ, ಶತಪತ್ರಗಳೂ (ಮರಕುಟಕ), ಮದಿಸಿದ ಕೋಗಿಲೆಗಳೂ ಮತ್ತು ಗಿಣಿಗಳೂ ಪುಷ್ಪಭರಿತವಾದ ವೃಕ್ಷಗಳ ಮೇಲೆ ಬಂದು ಕುಳಿತುಕೊಳ್ಳುತ್ತಿವೆ. ಕೆಂಪು, ಎಣೆಗೆಂಪು ಮತ್ತು ಹಳದೀಬಣ್ಣದ ಈ ಪಕ್ಷಿಗಳು ಒಂದನ್ನೊಂದು ನೋಡುತ್ತಿವೆ. ಪರ್ವತದ ಝರಿಗಳಲ್ಲಿಯೂ ಹಳದೀ ಮತ್ತು ಕೆಂಪುಬಣ್ಣದಿಂದ ಕೂಡಿದ ಚಿಲುಮೆಗಳ ಪ್ರದೇಶದಲ್ಲಿಯೂ ಕುಳಿತು ಈ ಸಾರಸಪಕ್ಷಿಗಳು ಸರ್ವಪ್ರಾಣಿಗಳಿಗೂ ಆನಂದವಾಗುವಂತೆ ಮಧುರವಾಗಿ ಕೂಗುತ್ತಿವೆ. ಭೃಂಗರಾಜಪಕ್ಷಿಗಳೂ, ಚಕ್ರವಾಕಪಕ್ಷಿಗಳೂ, ಕಂಕಪಕ್ಷಿಗಳೂ ಸುಮಧುರವಾಗಿ ಧ್ವನಿಮಾಡುತ್ತಿವೆ. ಪದ್ಮವರ್ಣದಿಂದ ಕೂಡಿರುವ, ನಾಲ್ಕು ದಂತಗಳುಳ್ಳ ಮದಗಜಗಳು ಹೆಣ್ಣಾನೆಗಳಿಂದೊಡಗೂಡಿ ವೈಡೂರ್ಯವರ್ಣದಿಂದ ಕೂಡಿರುವ ಈ ಸರೋವರವನ್ನು ಕ್ಷೋಭೆ

ಗೊಳಿಸುತ್ತಿವೆ. ಹಲವು ತಾಲದ ಮರಗಳಷ್ಟು ಎತ್ತರವಾಗಿರುವ ನೀರಿನ ಧಾರೆಗಳು ಪರ್ವತದ ಶಿಖರಗಳ ಝರಿಗಳಿಂದ ಬೀಳುತ್ತಿರುವುದನ್ನು ನೋಡು, ಭೀಮಸೇನ! ಚಿತ್ರ-ವಿಚಿತ್ರವಾದ, ಅನೇಕ ಬಣ್ಣಗಳಿಂದ ಕೂಡಿರುವ ಧಾತುಗಳು ಈ ಪರ್ವತಕ್ಕೆ ಮತ್ತಷ್ಟು ಸೊಬಗನ್ನುಂಟುಮಾಡಿವೆ. ಕೆಲವು ಖನಿಜಗಳು ಲೋಹಿತವರ್ಣದಿಂದಲೂ, ಕೆಲವು ಬಿಳಿಯ ಮೋಡದ ಬಣ್ಣದಿಂದಲೂ, ಮತ್ತೆ ಕೆಲವು ಸೂರ್ಯನಿಗೆ ಸಮನಾದ ಪ್ರಭೆಯಿಂದಲೂ ಕಂಗೊಳಿಸುತ್ತಿವೆ.

ಪಾರ್ಥ! ವೃಷಪರ್ವನು ಹೇಳಿದಂತೆಯೇ ಗಂಧರ್ವ-ಕಿಂಪುರುಷರು ತಮ್ಮ ಪ್ರೇಯಸಿಯರೊಡನೆ ವಿಹರಿಸಲು ಈ ಪರ್ವತಶಿಖರಕ್ಕೆ ಬರುವುದನ್ನು ನಾವು ಕಾಣಬಹುದಾಗಿದೆ. ಅಲ್ಲವರು ಹಾಡುತ್ತಿರುವ ತಾಳ-ಲಯಬದ್ಧವಾದ ಗೀತೆಗಳೂ, ಸರ್ವಪ್ರಾಣಿಗಳಿಗೂ ಕರ್ಣಾನಂದದಾಯಕವಾದ ಸಾಮ ಗಾನವೂ ಕೇಳಿಬರುತ್ತಿದೆ. ಅತ್ತಕಡೆಯಲ್ಲಿ ಹರಿಯುತ್ತಿರುವ ಮಹಾಪುಣ್ಯವತಿ ಯಾದ, ಮಂಗಳದಾಯಕಳಾದ, ದೇವನದಿಯಾದ ಮಹಾಗಂಗಾನದಿಯನ್ನು ನೋಡು, ಭೀಮ! ಈ ನದಿಯು ಅನೇಕ ರಾಜಹಂಸಗಳಿಂದ ಪರಿಶೋಭಿ ಸುತ್ತಿದ್ದು ಕಿನ್ನರರಿಂದಲೂ ಋಷಿ-ಮಹರ್ಷಿಗಳಿಂದಲೂ ಸಂಸೇವ್ಯ ಮಾನವಾಗಿದೆ.

ಪಾರ್ಥ! ಈ ಪರ್ವತದಲ್ಲಿ ನಾನಾವಿಧವಾದ ಖನಿಜಗಳಿವೆ ; ಸುಂದರ ವಾದ ಚಿಲುಮೆಗಳಿವೆ. ಇದರ ತಪ್ಪಲಿನಲ್ಲಿ ಸುಂದರವಾದ ಅರಣ್ಯಗಳಿವೆ. ಹಾವುಗಳೂ ಅಸಂಖ್ಯಾತವಾಗಿದ್ದು ಒಂದು ಹೆಡೆಯಿಂದ ನೂರು ಹೆಡೆಗಳ ವರೆಗೂ ಹೆಡೆಗಳನ್ನು ಹೊಂದಿರುವ ಸರ್ಪಗಳೂ ಇಲ್ಲಿ ವಾಸಮಾಡುತ್ತಿವೆ. ಕಿನ್ನರ-ಗಂಧರ್ವಾಪ್ಸರೆಯರೂ ಈ ಪರ್ವತಕ್ಕೆ ವಿಹರಿಸಲು ಬರುತ್ತಿರುತ್ತಾರೆ. ಇಂತಹ ಅನುಪಮವಾದ ಸೌಂದರ್ಯದಿಂದ ಕೂಡಿರುವ ಈ ಶೈಲವರವನ್ನು ಸಂದರ್ಶಿಸಿ ನಾನು ಅಮಿತಾನಂದವನ್ನು ಹೊಂದಿದ್ದೇನೆ ಮತ್ತು ಇಲ್ಲಿಗೆ ಬಂದು ಧನ್ಯನಾದೆನೆಂದೂ ಭಾವಿಸಿದ್ದೇನೆ."

ಯುಧಿಷ್ಠಿರನ ಮಾತುಗಳನ್ನು ಕೇಳಿ ಭೀಮನೂ ತನ್ನ ಆನಂದವನ್ನು ವ್ಯಕ್ತಪಡಿಸಿದನು.

ಜನಮೇಜಯ! ನಿಶ್ಚಯವಾಗಿಯೂ ಪಾಂಡವರು ಆ ಪರ್ವತ

ವನ್ನೂ, ಅಲ್ಲಿದ್ದ ವನವನ್ನೂ, ಅದರ ಸೌಂದರ್ಯವನ್ನೂ ಕಂಡು ಆನಂದ ಭರಿತರಾದರು. ನೋಡುತ್ತಿದ್ದಂತೆಲ್ಲಾ ಮತ್ತೂ ನೋಡಬೇಕೆಂಬ ಅಭಿಲಾಷೆಯು ಅವರಿಗುಂಟಾಗುತ್ತಿದ್ದಿತೇ ಹೊರತು ತೃಪ್ತಿಯೇ ಉಂಟಾಗುತ್ತಿರಲಿಲ್ಲ. ವನದ ಸೊಬಗನ್ನು ನೋಡುತ್ತಾ ಮುಂದೆ ಪ್ರಯಾಣಮಾಡಿದ ಪಾಂಡವರು ಅರ್ಷ್ಟಿಷೇಣರೆಂಬ ಮಹರ್ಷಿಗಳ ದಿವ್ಯಾಶ್ರಮವನ್ನು ಕಂಡರು. ಆ ದಿವ್ಯಾಶ್ರಮವು ಫಲ-ಪುಷ್ಪಭರಿತವಾದ ವೃಕ್ಷಗಳಿಂದ ಪರಿವೃತವಾಗಿದ್ದಿತು. ಆಶ್ರಮವನ್ನು ಪ್ರವೇಶಿಸಿ ಪಾಂಡವರು ಸರ್ವಧರ್ಮಪಾರಂಗತರಾಗಿದ್ದ ಸತತವಾದ ತಪಸ್ಸಿನಿಂದ ಬಹುಕೃಶರಾಗಿದ್ದ ಆರ್ಷ್ಟಿಷೇಣಮಹರ್ಷಿಗಳನ್ನು ಸಂದರ್ಶಿಸಿದರು.

೧೫೮ನೆಯ ಅಧ್ಯಾಯವು ಮುಗಿಯಿತು.

೧೫೯ನೆಯ ಅಧ್ಯಾಯ (ಯಕ್ಷಯುದ್ಧಪರ್ವ (ಮುಂದುವರಿದಿದೆ.)

## ಯುಧಿಷ್ಠಿರನಿಗೆ ಪ್ರಶ್ನೆಗಳ ರೂಪದಲ್ಲಿ ಆರ್ಷ್ಟಿಷೇಣರ ಉಪದೇಶ

ಜನಮೇಜಯ! ಅನವರತವಾದ ಘೋರತಪಸ್ಸಿನಿಂದ ಪಾಪಗಳೆಲ್ಲವನ್ನೂ ಕಳೆದುಕೊಂಡಿದ್ದ ಆರ್ಷ್ಟಿಷೇಣರ ಆಶ್ರಮವನ್ನು ಪಾಂಡವರು ಪ್ರವೇಶಿದನಂತರ ಯುಧಿಷ್ಠರನು ಅಭಿವಾದನಪೂರ್ವಕವಾಗಿ ಮಹರ್ಷಿ ಗಳಿಗೆ ನಮಸ್ಕರಿಸಿದನು. ಅನಂತರದಲ್ಲಿ ಕೃಷ್ಣೆ, ಭೀಮ-ನಕುಲ-ಸಹದೇವರೂ ಮಹರ್ಷಿಗಳಿಗೆ ನಮಸ್ಕರಿಸಿ ಅವರ ಸಮೀಪದಲ್ಲಿ ನಿಂತುಕೊಂಡರು.

ಧೌಮ್ಯ-ಲೋಮಶರೂ ಮಹರ್ಷಿಗಳನ್ನು ಯಥಾಯೋಗ್ಯವಾಗಿ ಪುರಸ್ಕರಿಸಿದರು. ಮಹಾತಪಸ್ವಿಗಳಾದ ಆರ್ಷ್ಟಿಷೇಣರು ಅಂತಶ್ಚಕ್ಷುವಿನಿಂದ ಬಂದಿರುವರಾರೆಂಬುದನ್ನೂ ಮತ್ತು ಅವರು ಅಲ್ಲಿಗೆ ಆಗಮಿಸಿರುವ ಕಾರಣವನ್ನೂ ಮೊದಲೇ ತಿಳಿದವರಾಗಿ ಎಲ್ಲರನ್ನೂ ಸುಖಾಸನಗಳಲ್ಲಿ ಕುಳ್ಳಿರಿಸಿ, ಯಥೋಚಿತವಾಗಿ ಸತ್ಕರಿಸಿದನಂತರ ಧರ್ಮರಾಜನನ್ನು ಪ್ರಶ್ನಿಸಿದರು.

**ನಾನೃತೇ ಕುರುಷೇ ಭಾವಂ ಕಚ್ಚಿದ್ಧರ್ಮೇ ಪ್ರವರ್ತಸೇ ।**
**ಮಾತಾಪಿತ್ರೋಶ್ಚ ತೇ ವೃತ್ತಿಃ ಕಚ್ಚಿತ್ಪಾರ್ಥ ನ ಸೀದತಿ ॥೬॥**

"ಧರ್ಮಜ! ಅನೃತವನ್ನು ಹೇಳುವುದರಲ್ಲಿ ತಾತ್ಕಾಲಿಕವಾದ ಪ್ರಯೋಜನವೆಷ್ಟೇ ಇದ್ದರೂ-ಸತ್ಯವನ್ನು ಹೇಳುವುದರಿಂದ, ಸತ್ಯಮಾರ್ಗದಲ್ಲಿ ನಡೆಯುವುದರಿಂದ ಎಷ್ಟೇ ಕಷ್ಟಗಳನ್ನು ಎದುರಿಸಬೇಕಾಗಿ ಬಂದರೂ–ನಿನ್ನ ಮನಸ್ಸು ಅಸತ್ಯದ ಕಡೆಗೆ ಒಲಿಯುವುದಿಲ್ಲ ತಾನೇ? ನೀನು ಧರ್ಮವನ್ನೇ



ಪ್ರಧಾನವನ್ನಾಗಿಟ್ಟುಕೊಂಡು ಕಾರ್ಯವನ್ನು ನಿರ್ವಹಿಸುತ್ತಿರುವೆಯಲ್ಲವೇ? ತಂದೆ-ತಾಯಿಗಳ ಯೋಗ-ಕ್ಷೇಮಗಳಿಗೆ ವಿಶೇಷಗಮನವನ್ನು ಕೊಡುತ್ತಿರುವೆಯಲ್ಲವೇ?

**ಕಚ್ಚಿತ್ತೇ ಗುರವಃ ಸರ್ವೇ ವೃದ್ಧಾ ವೈದ್ಯಾಶ್ಚ ಪೂಜಿತಾಃ ।**
**ಕಚ್ಚಿನ್ನ ಕುರುಷೇ ಭಾವಂ ಪಾರ್ಥ ಪಾಪೇಷು ಕರ್ಮಸು ॥೭॥**

ನಿನಗಿಂತಲೂ ಹಿರಿಯರನ್ನೂ, ವೃದ್ಧರನ್ನೂ, ವೇದವಿದರನ್ನೂ ಯಥಾ ಯೋಗ್ಯವಾಗಿ ಪುರಸ್ಕರಿಸುತ್ತಿರುವೆಯಲ್ಲವೇ? ಪಾರ್ಥ! ನಿನ್ನ ಮನಸ್ಸು ಯಾವ ಕಾಲಕ್ಕೂ ಪಾಪಕಾರ್ಯಗಳಲ್ಲಿ ಪ್ರವೃತ್ತವಾಗುವುದಿಲ್ಲವಷ್ಟೇ?

**ಸುಕೃತಂ ಪ್ರತಿಕರ್ತುಂ ಚ ಕಚ್ಚಿದ್ಧಾತುಂ ಚ ದುಷ್ಕೃತಮ್ ।**
**ಯಥಾನ್ಯಾಯಂ ಕುರುಶ್ರೇಷ್ಠ ಜಾನಾಸಿ ನ ವಿಕತ್ಥಸೇ ॥೮॥**

ಕುರುಕುಲಪ್ರದೀಪನೇ! ಸತ್ಕಾರ್ಯಪ್ರವರ್ತಕನಾಗಿ ದುಷ್ಕಾರ್ಯ ಗಳಿಂದ ವಿಮುಖನಾಗಿರುವೆಯಲ್ಲವೇ? ಒಳ್ಳೆಯ ಕೆಲಸಮಾಡಿದವನನ್ನು ಪುರಸ್ಕರಿಸಿ ಕೆಟ್ಟಕೆಲಸ ಮಾಡಿದವನನ್ನು ದೂರಮಾಡುತ್ತಿರುವೆಯಲ್ಲವೇ? ವಿಷಯಗಳೆಲ್ಲವನ್ನೂ ತಿಳಿದಿರುವೆನೆಂದು ಆತ್ಮಶ್ಲಾಘನೆಯನ್ನು ಮಾಡಿಕೊಳು ತ್ತಿಲ್ಲ ತಾನೇ?

**ಯಥಾರ್ಹಂ ಮಾನಿತಾಃ ಕಚ್ಚಿತ್ತ್ವಯಾ ನನ್ದನ್ತಿ ಸಾಧವಃ ।**
**ವನೇಷ್ವಪಿ ವಸನ್ಕಚ್ಚಿದ್ಧರ್ಮಮೇವಾನುವರ್ತಸೇ ॥೯॥**

ಸತ್ಪುರುಷರನ್ನು ಯಥಾಯೋಗ್ಯವಾಗಿ ಸತ್ಕರಿಸಿ ಅವರಿಗೆ ಸಂತೋಷ ವಾಗುವ ರೀತಿಯಲ್ಲಿ ನಡೆದುಕೊಳ್ಳುತ್ತಿರುವೆಯಲ್ಲವೇ? ಅರಣ್ಯವಾಸವನ್ನು ಅನುಭವಿಸುತ್ತಿದ್ದರೂ ಧರ್ಮಮಾರ್ಗವನ್ನು ಅನುಸರಿಸುತ್ತಿರುವೆಯಲ್ಲವೇ?

**ಕಚ್ಚಿದ್ಧೌಮ್ಯಸ್ತ್ವದಾಚಾರೈರ್ನ ಪಾರ್ಥ ಪರಿತಪ್ಯತೇ ।**
**ದಾನಧರ್ಮತಪಃಶೌಚೈರಾರ್ಜವೇನ ತಿತಿಕ್ಷಯಾ ॥೧೦॥**

**ಪಿತೃಪೈತಾಮಹಂ ವೃತ್ತಂ ಕಚ್ಚಿತ್ಪಾರ್ಥಾನುವರ್ತಸೇ ।**
**ಕಚ್ಚಿದ್ರಾಜರ್ಷಿಯಾತೇನ ಪಥಾ ಗಚ್ಛಸಿ ಪಾಣ್ಡವ ॥೧೧॥**

ಪುರೋಹಿತರಾದ ಧೌಮ್ಯರು ಪರಿತಪಿಸುವಂತೆ ನೀನು ನಡೆದುಕೊಳ್ಳು ತ್ತಿಲ್ಲ ತಾನೇ? ದಾನ, ಧರ್ಮ, ತಪಸ್ಸು ಶೌಚ, ಸರಳತೆ, ವಿಧೇಯತೆ ಮತ್ತು ಕ್ಷಮೆ–ಇವುಗಳಲ್ಲಿ ನಿನ್ನ ಪಿತೃ-ಪಿತಾಮಹರು ನಡೆದುಕೊಳ್ಳುತ್ತಿದ್ದಂತೆ ನಡೆದುಕೊಳ್ಳುತ್ತಿರುವೆಯಲ್ಲವೇ? ರಾಜರ್ಷಿಗಳು ಅನುಸರಿಸುತ್ತಿದ್ದ ಮಾರ್ಗ ವನ್ನೇ ನೀನೂ ಅನುಸರಿಸುತ್ತಿರುವೆಯಲ್ಲವೇ?

**ಸ್ವೇ ಸ್ವೇ ಕಿಲ ಕುಲೇ ಜಾತೇ ಪುತ್ರೇ ನಪ್ತರಿ ವಾ ಪುನಃ ।**
**ಪಿತರಃ ಪಿತೃಲೋಕಸ್ಥಾಃ ಶೋಚನ್ತಿ ಚ ಹಸನ್ತಿ ಚ ॥೧೨॥**
**ಕಿಂ ತಸ್ಯ ದುಷ್ಕೃತೇಽಸ್ಮಾಭಿಃ ಸಮ್ಪ್ರಾಪ್ತವ್ಯಂ ಭವಿಷ್ಯತಿ ।**
**ಕಿಂ ಚಾಸ್ಯ ಸುಕೃತೇಽಸ್ಮಾಭಿಃ ಪ್ರಾಪ್ತವ್ಯಮಿತಿ ಶೋಭನಮ್ ॥೧೩॥**

ಪಿತೃಲೋಕದಲ್ಲಿರುವ ಪಿತೃದೇವತೆಗಳು ತಮ್ಮ ವಂಶದಲ್ಲಿ ಯಾವೊಬ್ಬ ಮಗನಾಗಲೀ, ಮೊಮ್ಮಗನಾಗಲೀ ಹುಟ್ಟಿದರೆ ನಗುತ್ತಾರೆ ಮತ್ತು ಅಳುತ್ತಾರೆ. ಅಂತಹ ಮಗುವು ತಮ್ಮ ವಂಶದಲ್ಲಿ ಹುಟ್ಟಿ ಅದರ ದುಷ್ಕಾರ್ಯದಿಂದ ಪ್ರಾಪ್ತವಾಗುವ ಪಾಪಫಲದಲ್ಲಿ ತಾವು ಪಾಲುಗೊಳ್ಳಬೇಕಾಗುವುದೇ? ಅಥವಾ ಅದು ಮಾಡುವ ಸತ್ಕಾರ್ಯದಿಂದ ಪ್ರಾಪ್ತವಾಗುವ ಸತ್ಫಲವು ತಮಗೂ ಲಭಿಸುವುದೇ?–ಎಂದು ಎರಡು ವಿಧವಾಗಿಯೂ ಅವರು ಯೋಚಿಸುತ್ತಿರುತ್ತಾರೆ. (ತಮ್ಮ ವಂಶೀಯನು ಈ ಲೋಕದಲ್ಲಿ ಮಾಡುವ ಸತ್ಕಾರ್ಯಗಳ ಅಥವಾ ದುಷ್ಕಾರ್ಯಗಳ ಫಲವನ್ನು ಪಿತೃಲೋಕಗತರಾದ ಪಿತೃ-ಪಿತಾಮಹರು ಅನುಭವಿಸುತ್ತಾರೆ. ಆದುದರಿಂದ ಪಿತೃದೇವತೆಗಳ ತೃಪ್ತಿಗಾಗಿ ಮತ್ತು ಅವರ ಉದ್ಧಾರಕ್ಕಾಗಿ ಮಾನವನು ಸತ್ಕರ್ಮನಿರತನಾಗಿರಬೇಕು.

**ಪಿತಾ ಮಾತಾ ತಥೈವಾಗ್ನಿರ್ಗುರುರಾತ್ಮಾ ಚ ಪಞ್ಚಮಃ ।**
**ಯಸ್ಯೈತೇ ಪೂಜಿತಾಃ ಪಾರ್ಥ ತಸ್ಯ ಲೋಕಾವುಭೌ ಜಿತೌ ॥೧೪॥**

ಯುಧಿಷ್ಠಿರ! ತಂದೆ, ತಾಯಿ, ಗುರು, ಅಗ್ನಿ ಮತ್ತು ಆತ್ಮಸ್ವರೂಪನಾಗಿರುವ ಪರಮಾತ್ಮ–ಈ ಐವರನ್ನೂ ಯಾರು ಅನನ್ಯಭಕ್ತಿಯಿಂದ ಪೂಜಿಸಿ ಗೌರವಿಸುತ್ತಾರೆಯೋ-ಅವರು ಇಹ-ಪರಗಳೆರಡರಲ್ಲಿಯೂ ಸುಖಿಗಳಾಗಿರುತ್ತಾರೆ."

ಜನಮೇಜಯ! ಮಹರ್ಷಿಗಳ ಉಪದೇಶರೂಪವಾದ ಮಾತುಗಳನ್ನು ಸಾವಧಾನದಿಂದ ಕೇಳಿದ ಯುಧಿಷ್ಠಿರನು ಆರ್ಷ್ಟಿಷೇಣರಿಗೆ ವಿನಯಪೂರ್ವಕವಾಗಿ ಉತ್ತರವನ್ನಿತ್ತನು :

"ಮಹರ್ಷಿಗಳೇ! ತಾವು ಹೇಳಿದಂತೆ ರಾಜಧರ್ಮವು ಅನುಸರಿಸಲ್ಪಡಬೇಕು. ರಾಜಧರ್ಮವೇನೆಂಬುದನ್ನು ಬಹಳ ಸ್ಪಷ್ಟವಾಗಿ ಹೇಳಿರುವಿರಿ. ನಾನೂ ಯಥಾಶಕ್ತಿ ವಿಧಿವತ್ತಾಗಿ ಈ ಸನಾತನಧರ್ಮವನ್ನು ಅನುಸರಣೆ ಮಾಡುತ್ತಿದ್ದೇನೆ."

ಮಹರ್ಷಿಗಳು ಹೇಳುತ್ತಾರೆ :

“ಯುಧಿಷ್ಠಿರ! ವಾಯುಭಕ್ಷರಾದ, ನೀರನ್ನು ಮಾತ್ರವೇ ಕುಡಿದು ಜೀವಿಸುತ್ತಿರುವ ಋಷಿ-ಮಹರ್ಷಿಗಳು ಪರ್ವದಿನಗಳಲ್ಲಿ ಆಕಾಶಮಾರ್ಗ ದಿಂದ ಹಾರಿಬಂದು ಈ ಪರ್ವತಶಿಖರಕ್ಕೆ ಆಗಮಿಸುತ್ತಾರೆ. ಈ ಪರ್ವತದ ಶಿಖರಗಳಲ್ಲಿ ಕಿಂಪುರುಷರೂ ತಮ್ಮ ಪತ್ನಿಯರೊಡನೆ ವಿಹರಿಸುತ್ತಿರುತ್ತಾರೆ.

ಗಂಧರ್ವ-ನಾಗಾಪ್ಸರೆಯರು ಬಿಳಿಯ ಪೀತಾಂಬರಗಳನ್ನು ಧರಿಸಿ ವಿಹಾರಕ್ಕಾಗಿ ಇಲ್ಲಿಗೆ ಬರುತ್ತಾರೆ. ದಿವ್ಯಮಾಲೆಗಳನ್ನು ಧರಿಸಿರುವ ವಿದ್ಯಾ ಧರರನ್ನೂ ನೀನು ಈ ಪರ್ವತದ ಶಿಖರಗಳಲ್ಲಿ ಕಾಣಬಹುದಾಗಿದೆ. ನಾಗ-ಸುಪರ್ಣೋರಗಾಧಿದೇವತೆಗಳೂ ಇಲ್ಲಿಗೆ ಪದೇ ಪದೇ ಆಗಮಿಸುವರು. ಪರ್ವದಿನಗಳಲ್ಲಿ ಈ ಪರ್ವತಶಿಖರಗಳಲ್ಲಿ ಭೇರೀ-ಪಣವ-ಶಂಖ-ಮೃದಂಗಾದಿ ವಾದ್ಯಗಳ ಧ್ವನಿಗಳು ಕೇಳಿಬರುತ್ತವೆ.

ನೀವು ನನ್ನ ಆಶ್ರಮದಲ್ಲಿ ಇದ್ದುಕೊಂಡೇ ಈ ಇಂಪಾದ ಗೀತಗಳನ್ನು ಕೇಳುವಿರಿ. ನೀವು ಅಲ್ಲಿಗೆ ಹೋಗಬೇಕಾದ ಆವಶ್ಯಕತೆಯೇ ಇಲ್ಲ. ಅದೂ ಅಲ್ಲದೇ ನೀವು ಪರ್ವತಶಿಖರಕ್ಕೆ ಹೋಗಲು ಇಚ್ಛಿಸಲೂಕೂಡದು.

ಏಕೆಂದರೆ: ಈ ಪ್ರದೇಶದಿಂದ ಮುಂದೆ ಪ್ರಯಾಣಮಾಡುವ ಸಾಧ್ಯ ತೆಯೇ ಇಲ್ಲ. ಈ ಪರ್ವತಶಿಖರಗಳು ದೇವ-ಗಂಧರ್ವ-ಕಿನ್ನರ-ಕಿಂಪುರುಷ ರಿಗೆ ಮಾತ್ರ ವಿಹಾರಯೋಗ್ಯವಾಗಿವೆ. ಅಲ್ಲಿಗೆ ಮನುಷ್ಯರಾರೂ ಹೋಗ ಲಾರರು. ಇಲ್ಲಿ ಮಾನವರು ಸ್ವಲ್ಪ ಅಪರಾಧಮಾಡಿದರೂ ಸರ್ವಪ್ರಾಣಿಗಳೂ ಅವರನ್ನು ದ್ವೇಷಿಸುತ್ತವೆ. ರಾಕ್ಷಸರು ಅಂತಹ ಮನುಷ್ಯರನ್ನು ಕಠಿನವಾಗಿ ಶಿಕ್ಷಿಸುತ್ತಾರೆ. ಈ ಶಿಖರಗಳನ್ನು ದಾಟಿದ ನಂತರ ಕೈಲಾಸಶಿಖರವು ಸಿಕ್ಕುತ್ತದೆ. ಅಲ್ಲಿಗೆ ಹೋಗಲು ಪರಮಸಿದ್ಧರಿಗೆ ಮತ್ತು ದೇವರ್ಷಿಗಳಿಗೆ ಮಾತ್ರವೇ ಸಾಧ್ಯವಾಗುವುದು. ಸಿದ್ಧರೂ ಅನೇಕಸಹಸ್ರವರ್ಷಗಳ ಕಾಲ ತಪಸ್ಸುಮಾಡಿ ರುತ್ತಾರೆ. ಅನಂತರವೇ ಅವರಿಗೆ ಆ ದಿವ್ಯಮಾರ್ಗವು ಗೋಚರವಾಗುವುದು. ಚಪಲಚಿತ್ತನಾಗಿ ಯಾವನಾದರೂ ಇಲ್ಲಿಂದ ಮುಂದಕ್ಕೆ ಪ್ರಯಾಣಮಾಡಲು ಯತ್ನಿಸಿದ್ದೇ ಆದರೆ–ಅಂತಹವನನ್ನು ರಾಕ್ಷಸರು ಶೂಲಾಯುಧದಿಂದ ಕೊಂದು ಹಾಕುತ್ತಾರೆ. ಪರ್ವದಿನಗಳಲ್ಲಿ ನರವಾಹನನಾದ ಕುಬೇರನು ದಿವ್ಯಾ

ಲಂಕಾರಭೂಷಿತನಾಗಿ ಅಪ್ಸರೆಯರೊಡನೆ ಈ ಪರ್ವತಶಿಖರದಲ್ಲಿ ಕಾಣಿಸಿಕೊಳ್ಳುತ್ತಾನೆ. ಈ ಶಿಖರಕ್ಕೆ ಆಗಮಿಸಿ ಉಪವಿಷ್ಟನಾಗಿರುವ ಯಕ್ಷ-ರಾಕ್ಷಸರ ಅಧಿಪತಿಯಾದ ಕುಬೇರನನ್ನು ಸರ್ವಪ್ರಾಣಿಗಳೂ ಉದಯಿಸಿದ ಸೂರ್ಯನನ್ನು ನೋಡುವಂತೆ ಆನಂದದಿಂದ ಸಂದರ್ಶಿಸುತ್ತವೆ. ನಾನು ಹಿಂದೆಯೇ ಹೇಳಿದಂತೆ ಈ ಶಿಖರವು ದೇವತೆಗಳ, ದಾನವರ, ಸಿದ್ಧರ ಮತ್ತು ಕುಬೇರನ ಕ್ರೀಡೋದ್ಯಾನವಾಗಿದೆ. ಪರ್ವಕಾಲಗಳಲ್ಲಿ ಈ ಪರ್ವತಶಿಖರದಲ್ಲಿ ಉಪಸ್ಥಿತನಾಗುವ ಕುಬೇರನನ್ನು ತುಂಬುರುವು ತನ್ನ ಗಾಯನದಿಂದಲೂ ಸಾಮಗಾನದಿಂದಲೂ ಆನಂದಗೊಳಿಸುತ್ತಾನೆ. ಆ ದಿವ್ಯಗಾನವು ಈ ಗಂಧಮಾದನ ಪರ್ವತದ ಸುತ್ತಲೂ ಪ್ರತಿಧ್ವನಿತವಾಗುತ್ತದೆ. ಮಗು, ಯುಧಿಷ್ಠಿರ! ಪರ್ವಕಾಲಗಳಲ್ಲಿ ಇಲ್ಲಿರುವ ಸಕಲಪ್ರಾಣಿಗಳೂ ಆ ದಿವ್ಯಗಾನವನ್ನು ಕೇಳುತ್ತವೆ ಮತ್ತು ಕುಬೇರ, ಗಂಧರ್ವರು ಮತ್ತು ಅಪ್ಸರೆಯರು ಆಗಮಿಸುವ ಅದ್ಭುತ ವಾದ ಸುಂದರದೃಶ್ಯವನ್ನು ಸಂದರ್ಶಿಸುತ್ತವೆ.

ಪಾಂಡವರೇ! ನೀವೆಲ್ಲರೂ ಯಾವ ವಿಧವಾದ ಸಂಕುಚಿತಭಾವನೆಯೂ ಇಲ್ಲದವರಾಗಿ ಅರ್ಜುನನು ಇಲ್ಲಿಗೆ ಆಗಮಿಸುವವರೆಗೂ ನಮ್ಮ ಆಶ್ರಮದಲ್ಲಿ ಸಿಕ್ಕುವ ಋಷಿಯೋಗ್ಯವಾದ ಹಣ್ಣು-ಹಂಪಲುಗಳನ್ನೂ, ಗೆಡ್ಡೆ-ಗೆಣಸುಗಳನ್ನೂ ಉಪಭುಂಜಿಸುತ್ತಾ ಕಾಲಕಳೆಯಿರಿ. ಇಲ್ಲಿ ಯಾವ ವಿಧವಾದ ಚಪಲತೆಯೂ ಇರಲಾರದು. ಈ ಸ್ಥಳದಲ್ಲಿ ಸ್ವಲ್ಪವಾದರೂ ಅಪರಾಧವನ್ನೆಸಗಬಾರದು. ಇಲ್ಲಿ ನೀವು ನಿಮ್ಮ ಮನಸ್ಸಿಗೆ ಆಹ್ಲಾದವಾಗುವಂತೆ ವಿಹರಿಸುತ್ತಾ ಶ್ರದ್ಧೆಯಿದ್ದಷ್ಟು ಕರ್ಮಾನುಷ್ಠಾನಮಾಡುತ್ತಾ ಇದ್ದು ಅರ್ಜುನನು ಬಂದನಂತರ ನಿಮ್ಮ ಇಚ್ಛೆಯಿದ್ದೆಡೆಗೆ ಪ್ರಯಾಣಮಾಡಬಹುದು. ನೀವು ನಿಮ್ಮ ಶಸ್ತ್ರಬಲದಿಂದಲೇ ಪುನಃ ಈ ಭೂಮಿಯನ್ನು ಜಯಿಸಿ ಇದನ್ನು ಆಳುವಿರಿ. ಇದರಲ್ಲಿ ಸಂಶಯಪಡುವ ಕಾರಣವಿಲ್ಲ."

ಹೀಗೆ ಹೇಳಿ ಮಹರ್ಷಿಗಳು ವಿರಮಿಸಿದರು. ಪಾಂಡವರೂ ಮಹರ್ಷಿಗಳಿಗೆ ನಮಸ್ಕರಿಸಿ ತಮ್ಮ ತಮ್ಮ ಕಾರ್ಯಗಳಿಗೆ ತೆರಳಿದರು."

೧೫೯ನೆಯ ಅಧ್ಯಾಯವು ಮುಗಿಯಿತು.

## ಆರ್ಷ್ಟಿಷೇಣರ ಆಶ್ರಮದಲ್ಲಿ ಪಾಂಡವರ ನಿವಾಸ : ದ್ರೌಪದಿಯ ಅನುರೋಧದಂತೆ ಭೀಮನು ಪರ್ವತದ ಶಿಖರಕ್ಕೆ ಹೋದುದು : ಯಕ್ಷ-ರಾಕ್ಷಸರೊಡನೆ ಯುದ್ಧ: ಭೀಮನಿಂದ ಮಣಿಮಂತನ ಸಂಹಾರ

ಜನಮೇಜಯ ವೈಶಂಪಾಯನಮಹರ್ಷಿಗಳನ್ನು ಪ್ರಶ್ನಿಸುತ್ತಾನೆ :

"ಮಹರ್ಷಿಗಳೇ! ಮಹಾತ್ಮರಾದ ಪಾಂಡುವಿನ ಮಕ್ಕಳಾದ ನನ್ನ ತಾತಂದಿರು ಆ ಗಂಧಮಾದನಪರ್ವತದಲ್ಲಿ ಎಷ್ಟು ದಿನಗಳ ಪರ್ಯಂತವಾಗಿ ಹೇಗೆ ಕಾಲ ಕಳೆಯುತ್ತಿದ್ದರು? ಲೋಕವೀರರಾದ ಪಾಂಡವರು ಆ ಗಂಧ ಮಾದನಪರ್ವತದಲ್ಲಿ ಯಾವ ವಿಧವಾದ ಆಹಾರವನ್ನು ಉಪಭುಂಜಿಸು ತ್ತಿದ್ದರು? ಮಹಾನುಭಾವರೇ! ಈ ವಿಷಯಗಳೆಲ್ಲವನ್ನೂ ವಿಸ್ತಾರವಾಗಿ ಕೇಳುವ ಆಶಯವಿರುವುದು. ಭೀಮಸೇನನ ಬಲಾತಿಶಯವನ್ನು ಮತ್ತೂ ಕೇಳಬೇಕೆಂಬ ಆಶಯವಿರುವುದು. ಮಹಾಪರಾಕ್ರಮಿಯಾದ ಭೀಮಸೇನನು ಆ ಪರ್ವತದಲ್ಲಿ ಏನು ಮಾಡುತ್ತಿದ್ದನು? ಅವನ ನಿತ್ಯಚರ್ಯೆಯೇನಾಗಿ ದ್ದಿತು? ಅವನು ಪುನಃ ಯಕ್ಷ-ರಾಕ್ಷಸರೊಡನೆ ಯುದ್ಧಕ್ಕೆ ಹೋಗಲಿಲ್ಲ ತಾನೇ? ಪರ್ವತಶಿಖರದಲ್ಲಿ ನಮ್ಮ ತಾತಂದಿರು ಕುಬೇರನನ್ನು ಸಂದರ್ಶಿ ಸಿದರೆ? ಆರ್ಷ್ಟಿಷೇಣರು ಹೇಳಿದಂತೆ ಪಾಂಡವರು ಅಲ್ಲಿದ್ದ ಕಾಲದಲ್ಲಿ ವೈಶ್ರವ ಣನು ಶಿಖರಕ್ಕೆ ಬಂದಿದ್ದನೆ? ತಪೋಧನರೇ! ಈ ಎಲ್ಲ ವಿಷಯಗಳನ್ನೂ ವಿವರವಾಗಿ ನಿಮ್ಮಿಂದ ಕೇಳಿ ತಿಳಿದುಕೊಳ್ಳಬೇಕೆಂದಿರುವೆನು. ನಿಶ್ಚಯ ವಾಗಿಯೂ ಇಷ್ಟು ದಿನಗಳೂ ನಾನು ನಮ್ಮ ತಾತಂದಿರು ಮಾಡಿದ ಅದ್ಭುತ ಕಾರ್ಯಗಳನ್ನು ಕೇಳಿದರೂ ನನಗೆ ತೃಪ್ತಿಯೇ ಉಂಟಾಗಿಲ್ಲ. ಪುನಃ ಪುನಃ ಕೇಳಬೇಕೆನಿಸುತ್ತದೆ. ದಯಮಾಡಿ ಹೇಳಿರಿ."

"ಜನಮೇಜಯ! ನಿನಗೆ ಮಹಾತ್ಮರಾದ ಪಾಂಡವರ ಸುಚರಿತ್ರೆಯನ್ನು ಕೇಳುವ ಆಕಾಂಕ್ಷೆಯಿರುವಂತೆಯೇ ನನಗೂ ಹೇಳುವ ಆಕಾಂಕ್ಷೆಯೂ ಇರು ವುದು. ಎಲ್ಲವನ್ನೂ ವಿಸ್ತಾರವಾಗಿಯೂ ಹೇಳುವೆನು, ಕೇಳು. ಅಮಿತ ತೇಜಸ್ವಿ ಗಳಾದ ಆರ್ಷ್ಟಿಷೇಣಮಹರ್ಷಿಗಳು ಮಾಡಿದ ಹಿತೋಪದೇಶಾನುಸಾರ

ವಾಗಿಯೇ ಭರತಕುಲಾವತಂಸರಾದ ಪಾಂಡವರು ಗಂಧಮಾದನಪರ್ವತದಲ್ಲಿ ನಡೆದುಕೊಳ್ಳುತ್ತಿದ್ದರು. ಅವರು ಸಾಮಾನ್ಯವಾಗಿ ಋಷಿಗಳು ಉಪಭುಂಜಿಸುತ್ತಿದ್ದ ಗೆಡ್ಡೆ-ಗೆಣಸುಗಳನ್ನೂ, ಹಣ್ಣುಗಳನ್ನೂ ಉಪಭುಂಜಿಸುತ್ತಿದ್ದರು. ವಿಷಲೇಪನವಿಲ್ಲದ ಬಾಣಗಳಿಂದ ಕೊಲ್ಲಲ್ಪಟ್ಟ ಜಿಂಕೆಯ ಮಾಂಸವನ್ನೂ ಮತ್ತು ಪರ್ವತದಲ್ಲಿ ಸಿಕ್ಕುವ ನಾನಾವಿಧವಾದ ಜೇನುತುಪ್ಪವನ್ನೂ ಆಹಾರಕ್ಕಾಗಿ ಉಪಯೋಗಿಸುತ್ತಿದ್ದರು. ಲೋಮಶರಿಂದ ಅನೇಕಾನೇಕ ಕಥೆಗಳನ್ನು ಶ್ರವಣಮಾಡುತ್ತಾ ಪಾಂಡವರು ವನವಾಸದ ಐದನೆಯ ವರ್ಷ ವನ್ನು ಆ ಪರ್ವತದಲ್ಲಿ ಕಳೆದರು. ಜೊತೆಯಲ್ಲಿ ಬಂದಿದ್ದ ಘಟೋತ್ಕಚನು–ಪುನಃ ನೆನೆದೊಡನೆಯೇ ಬರುವೆನೆಂದು ಪಾಂಡವರಿಗೆ ಹೇಳಿ–ತನ್ನ ಅನುಚರರಾದ ರಾಕ್ಷಸರೊಡನೆ ಹೊರಟುಹೋಗಿದ್ದನು. ಪಾಂಡವರು ಅತ್ಯಾಶ್ಚರ್ಯಕರವಾದ ದೃಶ್ಯಗಳನ್ನು ಅನುದಿನವೂ ವೀಕ್ಷಿಸುತ್ತಾ ಆರ್ಷ್ಟಿಷೇಣರ ಆಶ್ರಮದಲ್ಲಿ ಸುಖವಾಗಿ ಕಾಲಕಳೆಯುತ್ತಿದ್ದರು. ಶುದ್ಧಾತ್ಮರಾದ, ಜಿತೇಂದ್ರಿಯರಾದ, ಮಹಾನುಭಾವರಾದ ಮುನಿಗಳೂ ಮತ್ತು ಚಾರಣರೂ ಪಾಂಡವರನ್ನು ನೋಡುವ ಸಲುವಾಗಿ ಆರ್ಷ್ಟಿಷೇಣರ ಆಶ್ರಮಕ್ಕೆ ಬರುತ್ತಿದ್ದರು. ಅವರೆಲ್ಲರನ್ನೂ ಯುಧಿಷ್ಠಿರನು ಆದರದಿಂದ ಬರಮಾಡಿಕೊಂಡು ಅನೇಕಧರ್ಮವಿಷಯಗಳನ್ನು ಕುರಿತು ಅವರೊಡನೆ ಮಾತನಾಡುತ್ತಿದ್ದನು. ಹೀಗೆಯೇ ಇರುತ್ತಿರಲಾಗಿ, ಒಂದಾನೊಂದು ದಿನ ಗರುಡನು ವೇಗವಾಗಿ ಬಂದು ಜಲಾಶಯದಲ್ಲಿ ವಾಸಮಾಡಿಕೊಂಡಿದ್ದ ಮಹಾಸರ್ಪವೊಂದನ್ನು ಎತ್ತಿಕೊಂಡು ಹೊರಟುಹೋದನು.

ಗರುಡನು ಸರ್ಪವನ್ನು ಎತ್ತಿಕೊಂಡು ಹೋದ ರಭಸಕ್ಕೆ ಆ ಪರ್ವತವೇ ನಡುಗಿತು. ಮರಗಳು ಬುಡಮೇಲಾದುವು. ಪಾಂಡವರೂ ಮತ್ತು ಗಂಧಮಾದನಪರ್ವತದಲ್ಲಿದ್ದ ಸಕಲಪ್ರಾಣಿಗಳೂ ಆ ಅದ್ಭುತವನ್ನು ವೀಕ್ಷಿಸಿದರು. ಪರ್ವತಶಿಖರವು ಪ್ರಕಂಪಿಸಲಾಗಿ, ಮಾರುತನು ಶಿಖರದ ಮೇಲಿದ್ದ ಪುಷ್ಪಗುಚ್ಛಗಳನ್ನು ತಂದು ಆರ್ಷ್ಟಿಷೇಣರ ಆಶ್ರಮದಲ್ಲಿ ಹಾಕಿದನು. (ಪುಷ್ಪಗಳು ಗಾಳಿಗೆ ಹಾರಿಬಂದು ಆರ್ಷ್ಟಿಷೇಣರ ಆಶ್ರಮದಲ್ಲಿ ಬಿದ್ದುವು.) ಐದು ಬಣ್ಣಗಳಿಂದ ಕೂಡಿದ್ದು, ನಯನಮನೋಹರವಾಗಿಯೂ-ಸುಗಂಧ ಯುಕ್ತವಾಗಿಯೂ ಇದ್ದ ಆ ದಿವ್ಯಪುಷ್ಪಗುಚ್ಛಗಳನ್ನು ಪಾಂಡವರೂ

ಮತ್ತು ಪರಿವಾರದವರೂ ನೋಡಿದರು. ಆ ಕುಸುಮಗಳನ್ನು ದ್ರೌಪದಿಯೂ ನೋಡಿ ಪರ್ವತದ ತಪ್ಪಲಿನಲ್ಲಿ ಏಕಾಕಿಯಾಗಿ ಕುಳಿತಿದ್ದ ಭೀಮಸೇನನನ್ನು ಸಂಧಿಸಿ ನಸುನಗುತ್ತಾ ಹೇಳಿದಳು :



"ಮಹಾಬಾಹುವೇ! ಗರುಡನು ಸರ್ಪವನ್ನು ಎತ್ತಿಕೊಂಡು ರಭಸ ದಿಂದ ಹಾರಿಹೋದಾಗ ಉತ್ಪನ್ನವಾದ ಗಾಳಿಯು ಐದು ಬಣ್ಣಗಳಿಂದ ಕೂಡಿದ ಹೂಗೊಂಚಲುಗಳನ್ನು ಪರ್ವತಶಿಖರದಿಂದ ತಂದು ಸರ್ವಪ್ರಾಣಿಗಳ ಸಮಕ್ಷಮದಲ್ಲಿಯೇ ಅಶ್ವರಥಾನದಿಯೊಳಗೆ ಹಾಕಿತು. ಈ ದಿವ್ಯಕುಸುಮಗುಚ್ಛಗಳು ಐದು ಬಣ್ಣಗಳಿಂದ ಕೂಡಿದ್ದು ನಯನಮನೋಹರವಾಗಿಯೂ,

ಸುಗಂಧಯುಕ್ತವಾಗಿಯೂ ಇವೆ. ಸತ್ಯಸಂಧನಾದ, ನಿನ್ನ ಅನುಜನಾದ, ಅಜೇಯನಾದ ಅರ್ಜುನನು ಖಾಂಡವದಾಹಸಮಯದಲ್ಲಿ ಇಂದ್ರಾದಿ ದೇವ-ಯಕ್ಷ-ಗಂಧರ್ವ-ರಾಕ್ಷಸರೆಲ್ಲರನ್ನೂ ಪರಾಜಯಗೊಳಿಸಿ ಅದರ ಫಲ ವಾಗಿ ಗಾಂಡೀವವೆಂಬ ದಿವ್ಯಧನುಸ್ಸನ್ನು ಪಡೆದನು. ನೀನಾದರೂ ಸಾಮಾನ್ಯ ನಲ್ಲ. ನೀನೂ ಸಹ ಮಹಾಶೂರನಾಗಿರುವೆ. ನಿನ್ನ ಭುಜಗಳ ಬಲವು ಅಮಿತ ವಾದುದು. ಇಂದ್ರನಿಗೆ ಸಮಾನವಾದ ಪರಾಕ್ರಮವೇ ನಿನಗೂ ಇರುವುದು. ದೇವಕುಸುಮಗಳ ಗುಚ್ಛಗಳಿಂದ ಈ ಪರ್ವತಶಿಖರವು ಅಲಂಕೃತವಾಗಿರು ವುದು. ಅದನ್ನು ನೋಡಲು ಹೋದರೆ ರಾಕ್ಷಸರು ತಡೆಮಾಡುವರು. ನಿನ್ನ ಭುಜಬಲ-ಪರಾಕ್ರಮಗಳಿಂದ ಆ ರಾಕ್ಷಸರು ಪರಾಜಿತರಾಗಿ ಶಿಖರವನ್ನು ಬಿಟ್ಟು ದಿಕ್ಕಾಪಾಲಾಗಿ ಓಡಿಹೋಗುವಂತೆ ಮಾಡು. ಅನಂತರದಲ್ಲಿ ಚಿತ್ರ-ವಿಚಿತ್ರವಾದ ದಿವ್ಯಕುಸುಮಗಳನ್ನು ಧರಿಸಿರುವ ಈ ಪರ್ವತಶಿಖರವನ್ನು ನಿನ್ನ ಸುಹೃದರು ನಿರ್ಭಯವಾಗಿ ಹತ್ತಿಹೋಗಿ ನೋಡಲಿ. ಈ ಆಶಯವು ನನಗೆ ಬಹಳ ದಿನಗಳಿಂದಲೂ ಇರುವುದು. ನಿನ್ನಿಂದ ರಕ್ಷಿತಳಾದ ನಾನು ದಿವ್ಯ ಕುಸುಮಗಳಿಂದ ಅಲಂಕೃತವಾಗಿರುವ ಈ ಪರ್ವತವನ್ನು ನೋಡಲೇ ಬೇಕು. ಈ ನನ್ನ ಆಶಯವನ್ನು ಪೂರೈಸಿಕೊಡುವೆಯಾ?"

ದ್ರೌಪದಿಯ ಮಾತುಗಳನ್ನು ಕೇಳಿ ಭೀಮಸೇನನು ತನ್ನ ಪ್ರೇಯಸಿಯು ತನ್ನನ್ನು ಅಪಹಾಸ್ಯಮಾಡುತ್ತಿರುವಳೆಂದು ಭಾವಿಸಿದನು. ಸಾಧುವಾದ ಹೋರಿಯು ಚಾವಟಿಯ ಏಟನ್ನು ಸಹಿಸದಂತೆ–ದ್ರೌಪದಿಯ ವಾಕ್ಪ್ರಹಾರ ವನ್ನು ಭೀಮನು ಸಹಿಸಿಕೊಳ್ಳಲಿಲ್ಲ. ಸಿಂಹದ ಅಥವಾ ಎತ್ತಿನ ನಡಿಗೆಯಂತೆ ನಡಿಗೆಯುಳ್ಳ, ಶ್ರೀಮಂತನಾದ, ಉದಾರನಾದ, ಚಿನ್ನದ ಬಣ್ಣದ ಶರೀರ ಕಾಂತಿಯಿಂದ ಕೂಡಿದ್ದ, ಮಹಾವೀರನಾದ, ಬಲಶಾಲಿಯಾದ, ಲೋಹಿತಾಕ್ಷ ನಾದ, ವಿಶಾಲವಾದ ವಕ್ಷಸ್ಥಳದಿಂದ ಕೂಡಿದ್ದ, ಮದಿಸಿದ ಆನೆಯ ಬಲವನ್ನು ಹೊಂದಿದ್ದ, ಸಿಂಹದ ಹಲ್ಲುಗಳಂತೆ ಬಲಿಷ್ಠವಾದ ದಂತಗಳಿಂದ ಕೂಡಿದ್ದ, ದಪ್ಪನಾದ ಕುತ್ತಿಗೆಯಿಂದ ಕೂಡಿದ್ದ, ಸಾಲವೃಕ್ಷದಂತೆ ಎತ್ತರವಾದ ಶರೀರ ದಿಂದ ಕೂಡಿದ್ದ, ಮಹಾತ್ಮನಾದ, ಸರ್ವಾಂಗಸುಂದರನಾದ, ಕಂಬುಕಂಠನಾದ, ಮಹಾಭುಜನಾದ ಭೀಮಸೇನನು–ಸ್ವರ್ಣಮಯವಾದ, ಧನುಸ್ಸನ್ನೂ–ಚಿನ್ನದ ಹಿಡಿಯುಳ್ಳ ಕತ್ತಿಯನ್ನೂ ಹಿಡಿದು, ಆನೆಯಂತೆ

ಮತ್ತು ಸಿಂಹದಂತೆ ದರ್ಪದಿಂದ ಕೂಡಿ, ನಿರ್ಭೀತನಾಗಿ ಸ್ವಲ್ಪವೂ ಭ್ರಾಂತ ನಾಗದೇ ಪರ್ವತದ ಶಿಖರದ ಕಡೆಗೆ ಧಾವಿಸಿದನು.

ಧನುರ್ಬಾಣ-ಖಡ್ಗಪಾಣಿಯಾಗಿ ಸಿಂಹದಂತೆ ಅಥವಾ ಮದಿಸಿದ ಆನೆ ಯಂತೆ–ನಡೆದುಹೋಗುತ್ತಿದ್ದ ಭೀಮನನ್ನು ಸಕಲಪ್ರಾಣಿಗಳೂ ನೋಡಿ ದುವು. ಅವನಿಗೆ ಭಯವಾಗಲೀ, ಭ್ರಾಂತಿಯಾಗಲೀ ಇರಲಿಲ್ಲ. ದ್ರೌಪದಿಗೆ ಸಂತೋಷವನ್ನುಂಟುಮಾಡಲು ಧನುರ್ಬಾಣ-ಖಡ್ಗಗಳ ಜೊತೆಗೆ ಗದೆ ಯನ್ನೂ ಹೆಗಲಮೇಲಿಟ್ಟುಕೊಂಡು ಪರ್ವತಶಿಖರದ ಕಡೆಗೆ ಧಾವಿಸಿದನು. ಶ್ರಮವಾಗಲೀ, ಭಯವಾಗಲೀ, ನಿರುತ್ಸಾಹವಾಗಲೀ, ಮಾತ್ಸರ್ಯ ವಾಗಲೀ–ವಾಯುಪುತ್ರನಾದ ಭೀಮಸೇನನ ಹತ್ತಿರದಲ್ಲಿಯೂ ಸುಳಿಯುತ್ತಿರಲಿಲ್ಲ. ಭೀಮಸೇನನು ಮುಂದೆ ಮುಂದೆ ಪ್ರಯಾಣಮಾಡಿದಂತೆ ಹಾದಿಯು ಬಹಳ ಕಿರಿದಾಗಿಯೂ, ಕಡಿದಾಗಿಯೂ ಇದ್ದಿತು. ತಾಲ-ತಮಾಲ ವೃಕ್ಷಗಳಷ್ಟು ಎತ್ತರವಾಗಿದ್ದ ಪರ್ವತಶಿಖರವನ್ನು ಸಾಹಸಿಯಾದ ಭೀಮಸೇನನು ಹತ್ತಿದನು. ಅವನ ಸಾಹಸವನ್ನು ನೋಡಿ ಕಿನ್ನರ-ನಾಗ-ಗಂಧರ್ವ-ರಾಕ್ಷಸರೂ ಮತ್ತು ದೇವರ್ಷಿಗಳೂ ಆಶ್ಚರ್ಯಭರಿತರಾದರು. ಶಿಖರವನ್ನು ಹತ್ತಿದ ಬಳಿಕ ವೀರನಾದ ವಾಯುಪುತ್ರನು ಕುಬೇರನ ದಿವ್ಯವಾದ ಅರಮನೆಯನ್ನು ಕಂಡನು. ಕುಬೇರನ ಅರಮನೆಯ ಸೊಬಗು ವರ್ಣಿಸಲಸದಳವಾಗಿತ್ತು. ಅದು ಸ್ವರ್ಣಮಯವಾಗಿಯೂ ಮತ್ತು ಸ್ಫಟಿಕಶಿಲೆಗಳಿಂದಲೇ ಸುತ್ತಲೂ ಕಟ್ಟಲ್ಪಟ್ಟಿದ್ದ ಉಪಸೌಧಗಳಿಂದ ಅಲಂಕೃತ ವಾಗಿಯೂ ಇದ್ದಿತು. ಅರ ಮನೆಯ ಸುತ್ತಲೂ ಸುವರ್ಣಮಯವಾದ ಪ್ರಾಕಾರವಿದ್ದು ಸ್ವರ್ಣಮಯವಾದ ಅದರ ಗೋಡೆಗಳು ವಜ್ರ-ವೈಡೂರ್ಯ ಗಳಿಂದ ಅಲಂಕೃತವಾಗಿದ್ದುವು. ಪ್ರಾಕಾರದೊಳಗೆ ದಿವ್ಯವಾದ ಉದ್ಯಾನವನವಿದ್ದಿತು.

ಆ ಅರಮನೆಯ ಶಿಖರವು ಪರ್ವತಕ್ಕಿಂತಲೂ ಎತ್ತರವಾಗಿದ್ದಿತು. ಮಹಾದ್ವಾರವು ತಳಿರು-ತೋರಣಗಳಿಂದ ಅಲಂಕೃತವಾಗಿದ್ದಿತು. ಅರ ಮನೆಯ ಮೇಲೆ ಪತಾಕೆಯು ಹಾರಾಡುತ್ತಿದ್ದಿತು. ಅರಮನೆಯ ಸುತ್ತಲೂ ವಿಲಾಸಿನೀಸ್ತ್ರೀಯರು ಕುಬೇರನ ಗುಣಗಾನಮಾಡುತ್ತಾ ನೃತ್ಯಮಾಡುತ್ತಿ ದ್ದರು. ಅಂತಹ ಅತಿಸುಂದರವಾದ ಕುಬೇರನ ಅರಮನೆಯನ್ನೂ ಮತ್ತು

ಪಟ್ಟಣವನ್ನೂ, ಧನುಸ್ಸನ್ನೇ ಊರೆಯಾಗಿಟ್ಟುಕೊಂಡು ನಿಂತಿದ್ದ ಭೀಮಸೇನನು–ಕ್ಷಣಕಾಲ ಎವೆಯಿಕ್ಕದೇ ಭ್ರಾಂತನಾಗಿ ವೀಕ್ಷಿಸುತ್ತಿದ್ದನು. ಅಲ್ಲಿರುವ ಸಕಲಪ್ರಾಣಿಗಳಿಗೂ ಆನಂದವನ್ನುಂಟುಮಾಡುತ್ತಾ ಮಂದಮಾರುತನು ಗಂಧಮಾದನಪರ್ವತದಿಂದ ಪರಿಮಳವನ್ನು ಒಯ್ದು ತಂದು ಸುಖಕರವಾಗಿ ಬೀಸುತ್ತಿದ್ದನು. ಅರಮನೆಯ ಉದ್ಯಾನವನದಲ್ಲಿ ಚಿತ್ರ-ವಿಚಿತ್ರವಾದ, ನಾನಾ ವರ್ಣಗಳ ಹೂಗಳ ಗೊಂಚಲುಗಳಿಂದ ಕೂಡಿದ್ದ ನಯನಮನೋಹರವಾದ ಅನೇಕವೃಕ್ಷಗಳಿದ್ದುವು. ಅರಮನೆಯ ಸುತ್ತಲೂ ವಜ್ರ-ವೈಡೂರ್ಯಗಳು ರಾಶಿ-ರಾಶಿಯಾಗಿ ಬಿದ್ದಿದ್ದುವು. ಆ ಪ್ರದೇಶವೆಲ್ಲವೂ ವಿಚಿತ್ರವಾದ ದಿವ್ಯ ಮಾಲೆಗಳಿಂದ ಅಲಂಕೃತವಾಗಿದ್ದುವು. ಭೀಮನು ಅಂತಹ ದಿವ್ಯವಾದ, ಅದ್ಭುತವಾದ ಕುಬೇರನ ಅರಮನೆಯನ್ನು ಭ್ರಾಂತನಾಗಿ ನೋಡಿದನು. ಭೀಮಸೇನನಿಗೆ ತನ್ನ ಶರೀರದ ಮೇಲೆಯೂ ಎಚ್ಚರವಿರಲಿಲ್ಲ. ಗದಾ-ಖಡ್ಗ-ಧನುಷ್ಪಾಣಿಯಾಗಿ ಪರ್ವತದೋಪಾದಿಯಲ್ಲಿ ಅಚಲನಾಗಿ ಕುಬೇರನ ಅರಮನೆಯ ಸೊಬಗನ್ನು ನೋಡುತ್ತಲೇ ನಿಂತುಬಿಟ್ಟಿದ್ದನು.

ಸ್ವಲ್ಪಹೊತ್ತು ಕಳೆದಮೇಲೆ ತಾನೇಕೆ ಅಲ್ಲಿಗೆ ಬಂದಿರುವೆನೆಂಬ ಅರಿವು ಭೀಮನಿಗುಂಟಾಯಿತು. ಕುಬೇರನ ಅರಮನೆಯ ವೈಭವವನ್ನು ತಾನು ಮಾತ್ರವೇ ನೋಡಿದರೆ ಸಾಲದು ; ಎಲ್ಲರೂ ನೋಡಬೇಕು. ಅದಕ್ಕಿರುವ ಅಡಚಣೆಯನ್ನು ದೂರಮಾಡಬೇಕಾದುದು ಭೀಮಸೇನನ ಕರ್ತವ್ಯವಾಗಿದ್ದಿತು. ಚಾವಟಿಗೆ ಸಮಾನವಾದ ದ್ರೌಪದಿಯ ಮಾತಿನ ಸರಣಿಯು ಸ್ಮರಣೆಗೆ ಬಂದೊಡನೆಯೇ ಭೀಮಸೇನನು ಚಕಿತನಾಗಿ ತನ್ನ ಕೈಯ್ಯಲ್ಲಿದ್ದ ಶಂಖವನ್ನು ಗಟ್ಟಿಯಾಗಿ ಊದಿದನು. ಶಂಖಧ್ವನಿಯನ್ನು ಕೇಳುತ್ತಲೇ ಅರಮನೆಯನ್ನು ರಕ್ಷಿಸುತ್ತಿದ್ದ ಯಕ್ಷ-ರಾಕ್ಷಸರಿಗೆ ರೋಮಾಂಚನವಾಯಿತು. ಭೀಮನು ಶಂಕವನ್ನೂದಿ ಅನಂತರದಲ್ಲಿ ಮಾಡಿದ ಧನುಷ್ಟೇಂಕಾರವು ಸುತ್ತಲೂ ಇದ್ದ ಸಕಲ ಪ್ರಾಣಿಗಳನ್ನೂ ವಿಮೋಹಗೊಳಿಸಿತು. ಧನುಷ್ಟೇಂಕಾರದಿಂದಲೂ, ಶಂಖನಿನಾದದಿಂದಲೂ ರೋಮಾಂಚಿತರಾದ ಯಕ್ಷ-ರಾಕ್ಷಸ-ಗಂಧರ್ವರು ಶಬ್ದವನ್ನೇ ಅನುಸರಿಸಿ ಭೀಮಸೇನನ ಬಳಿಗೆ ಬಹಳ ವೇಗದಿಂದ ಆಗಮಿಸಿದರು.

ಅವರೆಲ್ಲರೂ ಗದಾ, ಪರಿಘ, ನಿಸ್ತ್ರಿಂಶ, ಶೂಲ, ಶಕ್ತಿ–ಮುಂತಾದ ಆಯುಧಗಳ ಸಮೇತರಾಗಿಯೇ ಬಂದಿದ್ದರು. ಯಕ್ಷ-ರಾಕ್ಷಸ-ಗಂಧರ್ವರಿಗೂ ಮತ್ತು ಭೀಮನಿಗೂ ಘೋರಯುದ್ಧವು ಪ್ರಾರಂಭವಾಯಿತು. ಯಕ್ಷ-ರಾಕ್ಷಸರು ಶೂಲಾದ್ಯಾ ಯುಧಗಳನ್ನು ಭೀಮನ ಮೇಲೆ ಪ್ರಯೋಗಿಸಿದರು. ಧನುರ್ವಿದ್ಯೆಯಲ್ಲಿ ಮಹಾ ಚತುರನಾದ ಭೀಮಸೇನನು ಭಲ್ಲಗಳೆಂಬ ಬಾಣಗಳ ಪ್ರಯೋಗದಿಂದ ಸಾವಿರಾರು ಯಕ್ಷ-ರಾಕ್ಷಸರು ಪ್ರಯೋಗಿಸಿದ್ದ ಶೂಲಾದ್ಯಾಯುಧಗಳನ್ನೂ ಕತ್ತರಿಸಿ ಬಿಟ್ಟನು. ಮಾಯಾವಿಗಳಾದ ರಾಕ್ಷಸರು ಮತ್ತು ಯಕ್ಷರು ಅಂತರಿಕ್ಷದಲ್ಲಿಯೂ ಮತ್ತು ಶಿಖರದ ಮೇಲೆಯೂ ನಿಂತು ಭೀಮನನ್ನು ಆಕ್ರಮಿಸಿದರು.

ಮಹಾಪರಾಕ್ರಮಿಯಾದ ಭೀಮಸೇನನು ತನ್ನ ಬಾಣಪ್ರಯೋಗ ನೈಪುಣ್ಯದಿಂದ ಅಂತರಿಕ್ಷದಲ್ಲಿದ್ದವರನ್ನೂ ಮತ್ತು ಶಿಖರದ ಮೇಲಿದ್ದವರನ್ನೂ ಏಕಕಾಲದಲ್ಲಿ ಘಾಸಿಪಡಿಸಿದನು. ಗದಾ-ಪರಿಘ-ಅಸಿಪಾಣಿಗಳಾದ ರಾಕ್ಷಸರ ಶರೀರಗಳಿಂದ ಹೊರಟ ರಕ್ತಧಾರೆಗಳು ಮಳೆಯಂತೆ ಭೀಮಸೇನನ ಮೇಲೆ ಸುರಿಯುತ್ತಿದ್ದುವು. ಎಲ್ಲ ಕಡೆಗಳಲ್ಲೂ ರಾಕ್ಷಸರ ಶರೀರಗಳಿಂದ ರಕ್ತವು ಧಾರಾಕಾರವಾಗಿ ಹರಿಯುತ್ತಿದ್ದಿತು. ಭೀಮಸೇನನು ಏಕಕಾಲದಲ್ಲಿ ಶತ್ರು ಗಳ ಆಯುಧಗಳೆಲ್ಲವನ್ನೂ ಕತ್ತರಿಸಿ ಪುನಃ ಅನೇಕಬಾಣಗಳನ್ನು ಒಂದೇ ಬಾರಿಗೆ ಪ್ರಯೋಗಿಸಿ ಯಕ್ಷ-ರಾಕ್ಷಸರ ತಲೆಗಳನ್ನೂ ಶರೀರಗಳನ್ನೂ ಘಾಸಿ ಪಡಿಸುತ್ತಿದ್ದನು. ಸೂರ್ಯನನ್ನು ಮೋಡಗಳು ಆವರಿಸುವಂತೆ– ಭೀಮನ ಸುತ್ತಲೂ ಸಾವಿರಾರು ಮಂದಿ ಯಕ್ಷ-ರಾಕ್ಷಸರು ಸುತ್ತುವರಿದು ನಿಂತರು. ಸೂರ್ಯನು ತನ್ನ ಕಿರಣಗಳನ್ನು ಏಕಕಾಲದಲ್ಲಿ ಸರ್ವತ್ರ ಪ್ರಸರಿಸುವಂತೆ–ಭೀಮನು ತನ್ನ ಬಾಣಗಳನ್ನು ಸರ್ವತ್ರ ಪ್ರಸರಿಸಿದನು. ಯಕ್ಷ-ರಾಕ್ಷಸರು ಬಾಣಗಳ ಆಘಾತವನ್ನು ಸಹಿಸಲಾರದೇ ಚೀತ್ಕರಿಸುತ್ತಿದ್ದರು. ಘೋರನಿನಾದಗಳನ್ನು ಮಾಡುತ್ತಾ ಈಟಿಗಳನ್ನೂ ತ್ರಿಶೂಲಗಳನ್ನೂ ಗರ-ಗರನೆ ತಿರುಗಿಸಿ ಪ್ರಯೋಗಿಸುತ್ತಾ ಪುನಃ ಭೀಮನನ್ನು ಆಕ್ರಮಿಸುತ್ತಿದ್ದರು. ಬಹುಕುಪಿತನಾದ ಭೀಮಸೇನನು ಪ್ರತಿಯೊಬ್ಬರ ಅಂಗಾಂಗಗಳಲ್ಲಿಯೂ ನಿಶಿತವಾದ ಬಾಣಗಳನ್ನು ನೆಟ್ಟು ಅವರು ಕಿರಿಚಿಕೊಳ್ಳುವಂತೆ ಮಾಡಿದನು. ಯಾತನೆಯನ್ನು ತಾಳಲಾರದೇ ಚೀತ್ಕಾರಮಾಡುತ್ತಿದ್ದ ರಾಕ್ಷಸರು ಭೀಮನ ಅನುಸ್ಯೂತವಾದ ಪ್ರಹಾರವನ್ನು ಸಹಿಸಲಾರದೇ ತಮ್ಮ ಆಯುಧಗಳೆಲ್ಲ

ವನ್ನೂ ವಿಸರ್ಜಿಸಿ ದಕ್ಷಿಣದಿಕ್ಕಿನ ಕಡೆಗೆ ಪಲಾಯನಮಾಡತೊಡಗಿದನು. ಗದೆಯನ್ನೂ ಶೂಲಾಯುಧವನ್ನೂ ಹಿಡಿದಿದ್ದ, ವಿಶಾಲವಕ್ಷನಾದ, ಮಹಾಭುಜನಾದ, ಕುಬೇರನ ಮಿತ್ರನಾದ ಮಣಿಮಂತನೆಂಬ ರಾಕ್ಷಸನು ಆ ವೇಳೆಗೆ ಸರಿಯಾಗಿ ಅಲ್ಲಿಗೆ ಆಗಮಿಸಿದನು.

ಮಣಿಮಂತನು ತನ್ನ ಅಧಿಕಾರವನ್ನೂ ಮತ್ತು ಪೌರುಷವನ್ನೂ ತೋರಿಸಿಕೊಳ್ಳುತ್ತಾ ಯುದ್ಧದಿಂದ ಪರಾಙ್ಮುಖರಾಗುತ್ತಿದ್ದ ಯಕ್ಷ-ರಾಕ್ಷಸರನ್ನು ನೋಡಿ ತಿರಸ್ಕಾರಪೂರ್ವಕವಾಗಿ ನಗುತ್ತಾ ಅವರನ್ನು ಪ್ರಶ್ನಿಸಿದನು : "ನೀವುಗಳೀಗ ಕುಬೇರನ ಅರಮನೆಗೆ ಹೋಗಿ ಅವನ ಮುಂದೆ ನಿಂತು–'ಸಾವಿರಾರು ಮಂದಿ ಯೋಧರೂ ಒಬ್ಬ ಮಾನವನನ್ನೇ ಎದುರಿಸಲಾಗಲಿಲ್ಲ'–ಎಂದು ಹೇಗೆ ತಾನೇ ಹೇಳುವಿರಿ? ಯಾವ ಮುಖದಿಂದ ಹೇಳುವಿರಿ? ಹಾಗೆ ಹೇಳಲು ನಿಮಗೆ ನಾಚಿಕೆಯಾಗುವುದಿಲ್ಲವೇ?"–ಹೀಗೆ ಹೇಳಿ ಅವರನ್ನು ಮೂದಲಿಸಿ, ಶಕ್ತಿ-ಶೂಲ-ಗದಾಪಾಣಿಯಾಗಿ ರಭಸದಿಂದ ಭೀಮನ ಮೇಲೆ ಬೀಳಲು ಬಂದನು. ಮದಿಸಿದ ಆನೆಯಂತೆ ತನ್ನ ಮೇಲೆ ರಭಸದಿಂದ ಬೀಳಲು ಬರುತ್ತಿದ್ದ ರಾಕ್ಷಸನ ಮೇಲೆ ಭೀಮಸೇನನು ವತ್ಸದಂತವೆಂಬ ಹೆಸರಿನ ಮೂರು ಬಾಣಗಳನ್ನು ಪ್ರಯೋಗಿಸಿ ಅವನ ರಭಸವನ್ನು ತಡೆದನು. ಅದರಿಂದ ಅತಿಕ್ರುದ್ಧನಾದ ಮಣಿಮಂತನು ತನ್ನಲ್ಲಿದ್ದ ಗದೆಯನ್ನೇ ಗರ-ಗರನೆ ತಿರುಗಿಸಿ ಭೀಮನ ಮೇಲೆ ಪ್ರಯೋಗಿಸಿದನು. ಭೀಮಸೇನನು ಬಹುರಭಸದಿಂದ ಮಿಂಚಿನೋಪಾದಿಯಲ್ಲಿ ಬರುತ್ತಿದ್ದ ಗದೆಗೆ ಗುರಿಯಿಟ್ಟು ನೂರಾರು ನಿಶಿತವಾದ ಬಾಣಗಳನ್ನು ಪ್ರಯೋಗಿಸಿದನು. ಆದರೂ ಆ ಬಾಣಗಳು ಗದೆಯ ವೇಗವನ್ನು ಕುಂಠಿತಗೊಳಿಸಲು ಸಮರ್ಥವಾಗಲಿಲ್ಲ. ಅದನ್ನರಿತ ಭೀಮಸೇನನು ತನಗಿದ್ದ ಗದಾಯುದ್ಧಪ್ರಾವೀಣ್ಯದಿಂದ ಮಣಿಮಂತನ ಗದೆಯ ಗುರಿಯನ್ನು ವ್ಯರ್ಥಗೊಳಿಸಿಬಿಟ್ಟನು.

ತಾನು ಪ್ರಯೋಗಿಸಿದ ಗದೆಯು ವ್ಯರ್ಥವಾಗಿ ಹೋಯಿತೆಂದು ತಿಳಿದೊಡನೆಯೇ ರಾಕ್ಷಸನು–ಮಹಾಘೋರವಾಗಿದ್ದ, ಚಿನ್ನದ ಹಿಡಿಯಿಂದ ಕೂಡಿದ್ದ, ಉಕ್ಕಿನಿಂದ ಮಾಡಲ್ಪಟ್ಟಿದ್ದ ಶಕ್ತ್ಯಾಯುಧವನ್ನು ಅಭಿಮಂತ್ರಿಸಿ

ಪ್ರಯೋಗಿಸಿದನು. ಆ ಶಕ್ತ್ಯಾಯುಧವು ಅಗ್ನಿಜ್ವಾಲೆಗಳಿಂದ ಕೂಡಿ ಘೋರ ನಿನಾದಮಾಡುತ್ತಾ ಬಂದು ಭೀಮನ ಬಲತೋಳಿನಲ್ಲಿ ಹೊಕ್ಕು ನೆಲದ ಮೇಲೆ ಬಿದ್ದಿತು. ಆ ಪ್ರಹಾರವು ಭೀಮನಿಗೆ ಬಹಳ ಯಾತನೆಯನ್ನುಂಟು ಮಾಡಿತು. ಅದರಿಂದ ಅತಿಕ್ರುದ್ಧನಾದ ಭೀಮಸೇನನು ಕಟ-ಕಟನೆ ಹಲ್ಲು ಗಳನ್ನು ಕಡಿಯುತ್ತಾ ಚಿನ್ನದ ಹಿಡಿಯಿಂದ ಕೂಡಿದ್ದ, ಶತ್ರುಗಳನ್ನು ಪರಾ ಜಯಗೊಳಿಸುವ ಸಾಮರ್ಥ್ಯದಿಂದ ಕೂಡಿದ್ದ ಗದೆಯನ್ನು ಕೈಗೆ ತೆಗೆದು ಕೊಂಡು ಗರ-ಗರನೆ ತಿರುಗಿಸಿ ಗಟ್ಟಿಯಾಗಿ ಅಬ್ಬರಿಸುತ್ತಾ ಮಣಿಮಂತನ



ಮೇಲೆ ರಭಸದಿಂದ ಪ್ರಯೋಗಿಸಿದನು. ಒಡನೆಯೇ ಮಣಿಮಂತನು ಪ್ರಜ್ವಲಿಸುತ್ತಿದ್ದ ಮತ್ತು ಬಹುದೊಡ್ಡದಾಗಿದ್ದ ಶೂಲಾಯುಧವನ್ನು ತೆಗೆದು

ಕೊಂಡು ಬಹುರಭಸದಿಂದ ಭೀಮನ ಮೇಲೆ ಪ್ರಯೋಗಿಸಿ ಘೋರ ಗರ್ಜನೆಯನ್ನು ಮಾಡಿದನು. ಭೀಮನು ಪ್ರಯೋಗಿಸಿದ್ದ ಗದೆಯು ತನ್ನೆದುರಾಗಿ ಬಂದ ಶೂಲಾಯಧವನು ವ್ಯರ್ಥಗೊಳಿಸಿತು. ಗದಾಯುದ್ಧದಲ್ಲಿ ಅತಿನಿಪುಣ ನಾದ ಭೀಮಸೇನನು ಗದೆಯನ್ನು ಕೈಯಲ್ಲಿ ಹಿಡಿದು-ಗರುಡನು ಸರ್ಪವನ್ನು ಕೊಲ್ಲಲು ಅದರ ಬಳಿಗೆ ರಭಸದಿಂದ ನುಗ್ಗಿ ಹೋಗುವಂತೆ-ರಾಕ್ಷಸನ ಸಮೀಪಕ್ಕೆ ರಭಸದಿಂದ ನುಗ್ಗಿದನು.

ಹಾಗೆಯೇ ಯುದ್ಧಮಾಡುತ್ತಿದ್ದ ಭೀಮನು ಮರುಕ್ಷಣದಲ್ಲಿ ಆಕಾಶಕ್ಕೆ ಹಾರಿ ಅಲ್ಲಿಂದಲೇ ಗದೆಯನ್ನು ಗರ-ಗರನೆ ತಿರುಗಿಸಿ ರಭಸದಿಂದ ರಾಕ್ಷಸನ ತಲೆಗೆ ಗುರಿಯಿಟ್ಟು ಪ್ರಯೋಗಿಸಿ ಸಿಂಹನಾದಮಾಡಿದನು. ಇಂದ್ರನು ಪ್ರಯೋಗಿಸಿದ ವಜ್ರಾಯುಧದಂತೆ–ಭೀಮನ ಮಹಾಗದೆಯು ಸುಂಟರಗಾಳಿಯಂತೆ ಬಂದು ರಾಕ್ಷಸನ ತಲೆಯನ್ನು ಅಪ್ಪಳಿಸಿ ಅವನನ್ನು ಕೊಂದು ಭೂಮಿಗೆ ಕೆಡವಿತು. ಪರ್ವತದ ಶಿಖರದ ಮೇಲಿದ್ದ ಸಕಲಪ್ರಾಣಿಗಳೂ–ಸಿಂಹವೊಂದು ಎತ್ತನ್ನು ಕೊಂದುಹಾಕುವಂತೆ–ಭೀಮಸೇನನು ಮಣಿಮಂತ ನನ್ನು ಸಂಹರಿಸಿದುದನ್ನು ಕಂಡು ಆಶ್ಚರ್ಯಗೊಂಡುವು. ಅಳಿದುಳಿದ ರಾಕ್ಷ ಸರು ತಮ್ಮ ನಾಯಕನು ಹತನಾದುದನ್ನು ಕಂಡು ಭಯಪಟ್ಟು ಚೀರುತ್ತಾ ಪೂರ್ವದಿಕ್ಕಿನ ಕಡೆಗೆ ಪಲಾಯನಮಾಡಿದರು.

೧೬೦ನೆಯ ಅಧ್ಯಾಯವು ಮುಗಿಯಿತು.

೧೬೧ನೆಯ ಅಧ್ಯಾಯ ಯಕ್ಷಯುದ್ಧಪರ್ವ (ಮುಂದುವರಿದಿದೆ.)

## ಗಂಧಮಾದನಪರ್ವತಕ್ಕೆ ಕುಬೇರನ ಆಗಮನ ಮತ್ತು ಯುಧಿಷ್ಠಿರನೊಡನೆ ಸಮಾಗಮ

ಜನಮೇಜಯ! ಮಣಿಮಂತ-ಭೀಮಸೇನರು ದ್ವಂದ್ವಯುದ್ಧಮಾಡುತ್ತಿದ್ದಾಗ ಮಾಡಿದ ವೀರಗರ್ಜನೆಗಳು ಶ್ವೇತಪರ್ವತದ ಎಲ್ಲ ಗುಹೆಗಳಲ್ಲಿಯೂ ಪ್ರತಿಧ್ವನಿಸಿದುವು. ಆ ಸಿಂಹನಾದಗಳನ್ನು ಕೇಳಿ ಧರ್ಮಜ-ನಕುಲ-ಸಹದೇವ-ದ್ರೌಪದಿಯರೂ, ಧೌಮ್ಯರೇ ಮೊದಲಾದ ಬ್ರಾಹ್ಮಣರೂ ಚಕಿತರಾದರಲ್ಲದೇ ಭೀಮನು ತಮ್ಮ ಸಮೀಪದಲ್ಲಿಲ್ಲದಿರುವುದನ್ನು ನೋಡಿ ಭ್ರಾಂತರೂ

ಆದರು. ದ್ರೌಪದಿಯನ್ನು ಆರ್ಷ್ಟಿಷೇಣರ ಆಶ್ರಮದಲ್ಲಿಯೇ ಬಿಟ್ಟು ಅವಳ ರಕ್ಷಣಾಭಾರವನ್ನು ಮಹರ್ಷಿಗಳಿಗೊಪ್ಪಿಸಿ ಪಾಂಡವರು ಆಯುಧಪಾಣಿಗಳಾಗಿ



ಪರ್ವತಾರೋಹಣಮಾಡಿದರು. ಮಹಾರಥರಾದ ಪಾಂಡವರು ಪರ್ವತ ಶಿಖರವನ್ನು ಸೇರಿ ಅಲ್ಲಿ ಭೀಮನಿಂದ ಹತರಾಗಿ ಬಿದ್ದಿದ್ದ ಮಹಾಕಾಯರಾದ ಅನೇಕಾನೇಕ ರಾಕ್ಷಸರನ್ನು ಕಂಡರು. ರಾಕ್ಷಸರನ್ನು ಸಂಹಾರಮಾಡಿದನಂತರ ದಿವ್ಯತೇಜಸ್ಸಿನಿಂದ ಬೆಳಗುತ್ತಾ, ಇಂದ್ರನೋಪಾದಿಯಲ್ಲಿ ದಿಟ್ಟತನದಿಂದ ಧನುರ್ಬಾಣಗಳನ್ನೂ, ಖಡ್ಗ-ಗದೆಗಳನ್ನೂ ಹಿಡಿದುನಿಂತಿದ್ದ ಮಹಾಪರಾಕ್ರಮಿಯಾದ ತಮ್ಮ ಸೋದರನಾದ ಭೀಮಸೇನನನ್ನು ಕಂಡು ಸಂತೋಷಭರಿತರಾದ ಮೂವರು ಪಾಂಡವರೂ ಭೀಮನನ್ನು ಬಿಗಿದಪ್ಪಿದರು. ಅನಂತರದಲ್ಲಿ

ಭೀಮನಿಂದೊಡಗೂಡಿ ಪಾಂಡವರೆಲ್ಲರೂ ಆ ಪರ್ವತದ ದಿವ್ಯಶಿಖರದ ಮೇಲೆ ಕುಳಿತುಕೊಂಡರು. ದೇವತೆಗಳಲ್ಲಿ ಶ್ರೇಷ್ಠರೆನಿಸಿದ ಲೋಕಪಾಲರಿಂದ ಸ್ವರ್ಗಲೋಕವು ಶೋಭಾಯಮಾನವಾಗಿ ಕಾಣುವಂತೆ–ಆ ಶ್ವೇತಪರ್ವತದ ಶಿಖರವು ಆ ನಾಲ್ಕು ಮಂದಿ ಪಾಂಡುನಂದನರಿಂದ ಕೂಡಿ ಬಹಳ ಶೋಭಾಯಮಾನವಾಗಿ ಕಾಣುತ್ತಿದ್ದಿತು. ಯುಧಿಷ್ಠಿರನು ತನ್ನೆದುರಿನಲ್ಲಿ ಕಾಣುತ್ತಿದ್ದ ನಯನಮನೋಹರವಾದ ಕುಬೇರನ ಅರಮನೆಯನ್ನು ನೋಡಿದನು. ಅಂತೆಯೇ ಸತ್ತುಬಿದ್ದಿದ್ದ ಯಕ್ಷ-ರಾಕ್ಷಸರನ್ನೂ ನೋಡಿ ಭೀಮಸೇನನನ್ನು ಕುರಿತು ಹೇಳಿದನು :

**ಸಾಹಸಾದ್ಯದಿ ವಾ ಮೋಹಾದ್ಭೀಮ ಪಾಪಮಿದಂ ಕೃತಮ್ ।**
**ನೈತತ್ತೇ ಸದೃಶಂ ವೀರ ಮುನೇರಿವ ಮೃಷಾ ವಧಃ ॥೧೦॥**

**ರಾಜದ್ವಿಷ್ಟಂ ನ ಕರ್ತವ್ಯಮಿತಿ ಧರ್ಮವಿದೋ ವಿದುಃ ।**
**ತ್ರಿದಶಾನಾಮಿದಂ ದ್ವಿಷ್ಟಂ ಭೀಮಸೇನ ತ್ವಯಾ ಕೃತಮ್ ॥೧೧॥**

"ಭೀಮಸೇನ! ನೀನು ಮೋಹವಶನಾಗಿಯೂ ಅಥವಾ ದುಡುಕಿ ವಿಚಾರಮಾಡದೆಯೇ ಈ ಪಾಪಕಾರ್ಯವನ್ನು ಮಾಡಿಬಿಟ್ಟಿರುವೆ. ಋಷಿ ಸದೃಶವಾದ ಜೀವನವನ್ನು ನಡೆಸುತ್ತಿರುವ ನಿನಗೆ ನಿಷ್ಕಾರಣವಾದ ವಧ್ಯ ಕ್ರಿಯೆಯು ಖಂಡಿತವಾಗಿಯೂ ಯೋಗ್ಯವಾದುದಲ್ಲ. ರಾಜನಿಗೆ ಅಪ್ರಿಯ ವಾದ ಕಾರ್ಯವನ್ನು ಮಾಡಕೂಡದೆಂದು ಧರ್ಮಸೂಕ್ಷ್ಮವನ್ನು ತಿಳಿದವರು ಹೇಳುತ್ತಾರೆ.

ಭೀಮಸೇನ! ಈ ಪ್ರದೇಶಕ್ಕೆ ರಾಜನಾದ ಕುಬೇರನೊಡನೆ ದ್ವೇಷಕ್ಕೆ ಕಾರಣವಾದ ದೇವತೆಗಳಿಗೂ ಅಪ್ರಿಯವಾದ ಕಾರ್ಯವನ್ನು ಮಾಡಿರುವೆ. (ನಿನ್ನೀ ಕಾರ್ಯದಿಂದ ನಾನು ಅಸಂತುಷ್ಟನಾಗಿರುವುದಲ್ಲದೇ ದೇವತೆಗಳೂ ಅಸಂತುಷ್ಟರಾಗಿರುತ್ತಾರೆ.)

**ಅರ್ಥಧರ್ಮಾವನಾದೃತ್ಯ ಯಃ ಪಾಪೇ ಕುರುತೇ ಮನಃ ।**
**ಕರ್ಮಣಾಂ ಪಾರ್ಥ ಪಾಪಾನಾಂ ಸ ಫಲಂ ವಿನ್ದತೇ ಧ್ರುವಮ್ ।**
**ಪುನರೇವಂ ನ ಕರ್ತವ್ಯಂ ಮಮ ಚೇದಿಚ್ಛಸಿ ಪ್ರಿಯಮ್ ॥೧೨॥**

ಯಾವ ಕಾರ್ಯವನ್ನು ಮಾಡಬೇಕಾದರೂ-ಧರ್ಮಮೂಲವಾಗಿಯೂ

ಅರ್ಥಮೂಲವಾಗಿಯೂ ಮಾಡಬೇಕು. ಮಾಡುವ ಕಾರ್ಯವು ಧರ್ಮ ಮೂಲವೂ ಆಗಿರದೇ ನಿಷ್ಪ್ರಯೋಜಕವೂ ಆಗಿದ್ದು ಪಾಪಹೇತುವಾದ ಕಾರ್ಯ ವಾಗಿದ್ದರೆ–ಅಂತಹ ಕಾರ್ಯಕ್ಕೆ ಅನುರೂಪವಾದ ದುಷ್ಫಲವನ್ನು ಪಾಪ ಮಾಡಿದವನು ಅನುಭವಿಸಿಯೇ ತೀರುತ್ತಾನೆ. ನಾನು ಪುನಃ ಪುನಃ ಈ ಮಾತನ್ನು ನಿನಗೆ ಹೇಳುತ್ತಲೇ ಇದ್ದೇನೆ. ನನಗೆ ಪ್ರಿಯವನ್ನುಂಟುಮಾಡುವ ಆಶಯವು ನಿನಗಿರುವುದಾದರೆ–ನೀನು ಇನ್ನು ಮುಂದೆ ಈ ವಿಧವಾದ ಕಾರ್ಯವನ್ನೆಂದಿಗೂ ಮಾಡಬೇಡ.”

ಜನಮೇಜಯ! ಅರ್ಥತತ್ತ್ವವಿಭಾಗಜ್ಞನಾದ, ಧರ್ಮಾತ್ಮನಾದ ಯುಧಿಷ್ಠಿರನು ಅನುಜನಾದ ಭೀಮಸೇನನಿಗೆ ಹೀಗೆ ಹೇಳಿ ಧರ್ಮಾರ್ಥಗಳ ವಿಷಯವಾಗಿಯೇ ಯೋಚನೆಮಾಡುತ್ತಾ ಮೌನಿಯಾಗಿ ಕುಳಿತನು.

ಅತ್ತಲಾಗಿ ಅಳಿದುಳಿದ ಯಕ್ಷ-ರಾಕ್ಷಸರು ಗುಂಪು-ಗುಂಪಾಗಿ ಕುಬೇರನ ಅರಮನೆಗೆ ಓಡೋಡಿಬಂದು ಆರ್ತನಾದಗಳನ್ನು ಮಾಡಿದರು. ಭೀಮಸೇನನ ರೌದ್ರರೂಪವನ್ನು ಯಕ್ಷ-ರಾಕ್ಷಸಯೋಧರು ನೆನೆದು ನಡುಗುತ್ತಿದ್ದರು. ಭಯದಿಂದ ಅವರ ಕೈಗಳಲ್ಲಿದದ ಆಯುಧಗಳೆಲ್ಲವೂ ಬಿದ್ದು ಹೋಗಿದ್ದುವು. ಅವರ ಶರೀರಗಳೆಲ್ಲವೂ ರಕ್ತಮಯುವಾಗಿದ್ದುವು. ಯಾರೊಬ್ಬರಿಗೂ ಶಿರಸ್ತ್ರಾಣಗಳೇ ಇರಲಿಲ್ಲ. ತಲೆಗೂದಲುಗಳು ಕೆದರಿಹೋಗಿದ್ದುವು. ಅಂತಹ ದಾರುಣಸ್ಥಿತಿಯಲ್ಲಿದ್ದ ಯೋಧರು ತಮ್ಮ ರಾಜನಾದ ಕುಬೇರನೊಡನೆ ಹೇಳಿದರು :

“ಮಹಾರಾಜ! ಗದಾ-ಪರಿಘ-ನಿಸ್ತ್ರಿಂಶ-ತೋಮರಪಾಣಿಗಳಾದ ಅನೇ ಕಾನೇಕ ಯಕ್ಷ-ರಾಕ್ಷಸಯೋಧರು ಹತರಾಗಿಹೋದರು. ಒಬ್ಬನೇ ಒಬ್ಬ ಮಾನವನಿಂದ ಅವರೆಲ್ಲರೂ ಹತರಾದರು. ಒಬ್ಬನೇ ಒಬ್ಬ ಮಾನವನು ಯುದ್ಧದಲ್ಲಿ ಕ್ರೋಧವಶರ ಸಮೂಹವೆಲ್ಲವನ್ನೂ ನಿರ್ಮೂಲಮಾಡಿ ಬಿಟ್ಟನು. ಅನೇಕಾನೇಕ ಯಕ್ಷ-ರಾಕ್ಷಸನಾಯಕರೂ ಅಸುಗಳನ್ನು ನೀಗಿದರು.

ಮಾನವರಿಗೆ ದುಷ್ಪ್ರಾಪ್ಯವಾಗಿದ್ದ ಈ ದಿವ್ಯಶಿಖರಕ್ಕೆ ಮಾನವಶ್ರೇಷ್ಠ ನೊಬ್ಬನು ಯಾರೊಬ್ಬರನ್ನೂ ಲೆಕ್ಕಿಸದೇ ಬಂದುದು ಮಾತ್ರವಲ್ಲದೇ-ಅವನಿ ಗೆದುರಾಗಿ ಯುದ್ಧಕ್ಕೆ ನಿಂತ ಎಲ್ಲರನ್ನೂ ಸಂಹರಿಸಿಬಿಟ್ಟನು. ಮಹಾರಾಜ!

ಎಲ್ಲಕ್ಕಿಂತಲೂ ಮಿಗಿಲಾಗಿ ನಿನ್ನ ಪ್ರಿಯಮಿತ್ರನಾದ ಮಣಿಮಂತನೂ ಆ ನರ ಪುಂಗವನೊಡನೆ ಮಾಡಿದ ಯುದ್ಧದಲ್ಲಿ ಸತ್ತುಹೋದನು. ನಾವು ಉಪಾಯಾಂತರದಿಂದ ತಪ್ಪಿಸಿಕೊಂಡು ನಿನಿಗೆ ಈ ವಿಷಯವನ್ನು ವಿಜ್ಞಾಪಿಸುವ ಸಲುವಾಗಿ ಬಂದಿರುತ್ತೇವೆ. ನಿನಗೆ ಯುಕ್ತವೆನಿಸಿದುದನ್ನು ಮಾಡಬಹುದಾಗಿದೆ, ಪ್ರಭೋ!"



ಜನಮೇಜಯ! ತನ್ನ ಯೋಧರು ಹೇಳಿದ ಮಾತುಗಳನ್ನು ಕೇಳಿ ಯಕ್ಷ-ರಾಕ್ಷಸರ ಅಧಿಪತಿಯಾದ ಕುಬೇರನಿಗೆ ಕೋಪವು ಉಕ್ಕೇರಿಬಂದಿತು. ಕಣ್ಣುಗಳು ಕೆಂಪಾದುವು. "ಮೊದಲು ಮಾಡಿದ ಅಪರಾಧವನ್ನೇನೋ

ಕ್ಷಮಿಸಿಬಿಟ್ಟೆನು. ಎರಡನೆಯ ಬಾರಿಯೂ ಆ ನರಪುಂಗವನು ಹೀಗೆ ಮಾಡಿದ ನೇಕೆ?”–ಹೀಗೆಂದು ಯೋಚಿಸಿ ತನ್ನ ದಿವ್ಯರಥಕ್ಕೆ ಕುದುರೆಗಳನ್ನು ಕಟ್ಟಿ ಸಜ್ಜುಗೊಳಿಸುವಂತೆ ಸೇವಕರಿಗೆ ಆಜ್ಞೆಮಾಡಿದನು. ಕುಬೇರನು ಆಜ್ಞೆಮಾಡಿ ದೊಡನೆಯೇ–ಜಲಸಹಿತವಾದ ಕಾರ್ಮುಗಿಲಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ, ಪರ್ವತಶಿಖರದಂತೆ ಎತ್ತರವಾಗಿದ್ದ ಕುಬೇರನ ರಥಕ್ಕೆ ಸ್ವರ್ಣ ಮಯವಾದ ಮಾಲೆಗಳನ್ನು ಧರಿಸಿದ್ದ, ಸರ್ವಲಕ್ಷಣಯುಕ್ತವಾಗಿದ್ದ, ತೇಜಸ್ಸಿ ನಿಂದಲೂ–ಬಲದಿಂದಲೂ ಕೂಡಿದ್ದ, ನಾನಾವಿಧವಾದ ರತ್ನಗಳಿಂದ ಅಲಂಕೃತವಾಗಿದ್ದ, ಹತ್ತು ವಿಧವಾದ ಶುಭವಾದ ಸುಳಿಗಳಿಂದ ಕೂಡಿದ್ದ ದಿವ್ಯಾಶ್ವಗಳನ್ನು ಕಟ್ಟಿದರು. ರಥಕ್ಕೆ ಕಟ್ಟಿದ್ದ ಆ ಕುದುರೆಗಳು ಪರಸ್ಪರವಾಗಿ ಅವಲೋಕಿಸುತ್ತಾ ವಿಜಯಸೂಚಕವಾದ ಹೇಷಾರವಗಳನ್ನು ಮಾಡಿದುವು. ಅಂತಹ ದಿವ್ಯಾಶ್ವಗಳಿಂದ ಯುಕ್ತವಾದ ರಥವನ್ನು ರಾಜರಾಜನಾದ ಕುಬೇ ರನು ಹತ್ತಿ ಕುಳಿತು ವಿಜಯಯಾತ್ರೆಗೆ ಹೊರಟನು. ಮಹಾದ್ಯುತಿಮಂತನಾದ ಕುಬೇರನನ್ನು ಗಂಧರ್ವರು ದಿವ್ಯಗಾಯನದಿಂದ ಸ್ತೋತ್ರಮಾಡಿದರು. ರಕ್ತಾಕ್ಷರಾದ, ಸ್ವರ್ಣಮಯಮಾಲೆಗಳಿಂದ ಭೂಷಿತರಾದ, ಹೊಂಬಣ್ಣದಿಂದ ಪ್ರಕಾಶಿಸುತ್ತಿದ್ದ, ಮಹಾಕಾಯರಾಗಿಯೂ–ಮಹಾಬಲರಾಗಿಯೂ ಇದ್ದ ಸಾವಿರಾರು ಯಕ್ಷ-ರಾಕ್ಷಸಯೋಧರು ಖಡ್ಗ-ನಿಸ್ತ್ರಿಂಶಧಾರಿಗಳಾಗಿ ಕುಬೇರನ ರಥವನ್ನನುಸರಿಸಿ ಆಕಾಶಮಾರ್ಗದಲ್ಲಿ ನಡೆದರು. ಮಹಾವೇಗಗತಿಯುಳ್ಳ ಆ ಕುದುರೆಗಳು ಬಹುಶೀಘ್ರವಾಗಿ ಆಕಾಶಮಾರ್ಗದಲ್ಲಿ ಹಾರುತ್ತಾ ಆಕಾಶವನ್ನು ಕ್ಷಣಮಾತ್ರದಲ್ಲಿ ಆಕ್ರಮಣಮಾಡಿಬಿಟ್ಟುವೋ–ಎಂಬಂತೆ ಗಂಧಮಾದನಪರ್ವ ತಕ್ಕೆ ಬಂದುವು. ಕುದುರೆಗಳ ಸಮೂಹವನ್ನೂ, ಕುದುರೆಗಳಿಂದ ಕಟ್ಟಲ್ಪಟ್ಟಿದ್ದ ದಿವ್ಯರಥಗಳನ್ನೂ, ಯಕ್ಷ-ರಾಕ್ಷಸರಿಂದ ಪರಿವೃತನಾಗಿ ಬಂದಿರುವ ದಿವ್ಯಾ ಲಂಕಾರಭೂಷಿತನಾಗಿದ್ದ ಕುಬೇರನನ್ನೂ ಕಂಡು ಪಾಂಡವರು ರೋಮಾಂಚಿತ ರಾದರು. ಮಹಾಸತ್ತ್ವರಾದ, ಮಹಾರಥರಾದ, ಧನುರ್ಬಾಣ-ನಿಸ್ತ್ರಿಂಶಗಳನ್ನು ಧರಿಸಿದ್ದ, ದೇವಸಮಾನರಾಗಿದ್ದ ಪಾಂಡುಪುತ್ರರನ್ನು ನೋಡಿ ಕುಬೇರನೂ ಸಂತಸಗೊಂಡನು. ಮುಂದೆ ಅವರಿಂದ ದೇವತೆಗಳಿಗೆ ಆಗಬೇಕಾಗಿರುವ ಕಾರ್ಯವನ್ನು ನೆನೆದು ಕುಬೇರನು ಅವರ ವಿಷಯದಲ್ಲಿ ಪ್ರಸನ್ನನಾದನು. ಭೀಮನು ತನ್ನ ಪ್ರಿಯಮಿತ್ರನಾದ ಮಣಿಮಂತನನ್ನು ಕೊಂದದ್ದರಿಂದ

ಉದ್ಭೂತವಾಗಿದ್ದ ಕೋಪದ ಲೇಶಾಂಶವೂ ಅವನ ಹೃದಯದಲ್ಲುಳಿಯಲಿಲ್ಲ. ಕುಬೇರನ ರಥವು ಗಂಧಮಾದನಪರ್ವತಶಿಖರದ ಮೇಲೆ ಇಳಿದೊಡನೆಯೇ ಪಕ್ಷಿಗಳು ಹಾರಿಬಂದಂತೆ ಸಾವಿರಾರು ಯಕ್ಷ-ರಾಕ್ಷಸರು ಆಕಾಶ ಮಾರ್ಗದಿಂದ ಹಾರಿಬಂದು ಕುಬೇರನನ್ನು ಸುತ್ತುವರಿದು ಪರ್ವತಶಿಖರದ ಮೇಲೆ ಉಪಸ್ಥಿತರಾದರು. ಮುಖದಲ್ಲಿ ಕೋಪಾವೇಶವಿಲ್ಲದೇ ಮುಗುಳ್ನಗೆಯಿಂದ ಪಾಂಡವರನ್ನೇ ವೀಕ್ಷಿಸುತ್ತಿದ್ದ ತಮ್ಮ ಸ್ವಾಮಿಯಾದ ಕುಬೇರನನ್ನು ನೋಡಿ ಯಕ್ಷ-ಗಂಧರ್ವರು ನಿರುದ್ವಿಗ್ನರಾದರು. ಪಾಂಡವರನ್ನು ನೋಡಿದುದರಿಂದ ಭೀತಿಯಾಗಲೀ-ಯುದ್ಧಮಾಡಬೇಕೆಂಬ ಉದ್ವೇಗವಾಗಲೀ ಅವರಿಗೆ ಉಂಟಾಗಲಿಲ್ಲ. ಮಹಾತ್ಮರಾದ. ಮಹಾರಥರಾದ ಧರ್ಮರಾಜ-ನಕುಲ-ಸಹದೇವರು ತಾವು ಕುಬೇರನಿಗೆ ಅಪರಾಧವನ್ನೆಸಗಿರುವೆವೆಂದು ಭಾವಿಸಿದವರಾಗಿ ಅವನಿಗೆ ನಮಸ್ಕರಿಸಿ ಬದ್ಧಾಂಜಲಿಗಳಾಗಿ ನಿಂತರು.

ಉತ್ತಮೋತ್ತಮವಾದ, ವಿಶ್ವಕರ್ಮನಿರ್ಮಿತವಾದ, ಕಾಂತಿಯುಕ್ತವಾದ, ವೈಚಿತ್ರ್ಯದ ಪರಾಕಾಷ್ಠೆಯಿಂದ ಕೂಡಿದ್ದ ಪುಷ್ಪಕವೆಂಬ ವಿಮಾನದಲ್ಲಿ ಕುಬೇರನು ಕುಳಿತನು. ಮಹಾಕಾಯರಾದ, ಶಂಕುಕರ್ಣರಾದ ಮಹಾವೇಗರಾದ ಸಾವಿರಾರು ಮಂದಿ ಯಕ್ಷ-ರಾಕ್ಷಸರೂ, ನೂರಾರು ಮಂದಿ ಗಂಧರ್ವಾಪ್ಸರೆಯರೂ–ಸ್ವರ್ಗಲೋಕದಲ್ಲಿ ಇಂದ್ರನನ್ನು ಸುತ್ತುವರಿದು ದೇವತೆಗಳು ಕುಳಿತುಕೊಳ್ಳುವಂತೆ–ಪುಷ್ಪಕವಿಮಾನಾರೂಢನಾಗಿದ್ದ ಕುಬೇರನನ್ನು ಸುತ್ತುವರಿದು ಕುಳಿತರು. ಮಂಗಳಕರವಾದ ಸ್ವರ್ಣಮಾಲೆಯನ್ನು ಕತ್ತಿನಲ್ಲಿ ಧರಿಸಿ ಧನುರ್ಬಾಣ-ಪಾಶ-ಖಡ್ಗ-ಗದೆಗಳನ್ನು ಕೈಗಳಲ್ಲಿ ಹಿಡಿದಿದ್ದ ಭೀಮಸೇನನು ಕುಬೇರನನ್ನು ಎವೆಯಿಕ್ಕದೇ ನೋಡುತ್ತಿದ್ದನು.

ಭೀಮನು ಕುಬೇರನ ವಿಷಯದಲ್ಲಿ ಅಪರಾಧಮಾಡಿದುದರಿಂದ ತಾವೆಲ್ಲರೂ ಅಪರಾಧಿಗಳಾದೆವೆಂದು ಭಾವಿಸಿ ಯುಧಿಷ್ಠಿರ-ನಕುಲ-ಸಹದೇವರು ಕೈಜೋಡಿಸಿ ಕುಬೇರನ ಮುಂದೆ ನಿಂತಿದ್ದರಲ್ಲವೇ! ಆದರೆ ಭೀಮಸೇನನಿಗೆ ಮಾತ್ರ ತಾನು ಮಾಡಿರುವುದು ತಪ್ಪಾಯಿತೆಂಬ ಭಾವನೆಯಾಗಲೀ, ಯಕ್ಷ-ರಾಕ್ಷಸರನ್ನು ಸಂಹರಿಸಿದುದು ಅಕಾರ್ಯವೆಂಬ ಭಾವನೆಯಾಗಲೀ-ಕುಬೇರನ ಸಮ್ಮುಖದಲ್ಲಿಯೂ ಉಂಟಾಗಲಿಲ್ಲ. ಕುಬೇರನನ್ನೂ ಅವನ ಅಪಾರಸೈನ್ಯ

ವನ್ನೂ ಕಂಡು ಪಾಂಡವಮಧ್ಯಮನು ಭಯಪಡಲೂ ಇಲ್ಲ. ನಿರ್ಭೀತನಾಗಿ ಕುಬೇರನನ್ನು ಎವೆಯಿಕ್ಕದೇ ನೋಡುತ್ತಲೇ ನಿಂತಿದ್ದನು.

ಯುದ್ಧಕ್ಕೆ ಸನ್ನದ್ಧನಾಗಿರುವಂತೆಯೇ ಹರಿತವಾದ ಶಸ್ತ್ರಾಸ್ತ್ರಗಳನ್ನು ಧರಿಸಿದ್ದ ಭೀಮಸೇನನನ್ನು ನೋಡಿ ಕುಬೇರನು ವಿನೀತನಾಗಿ ನಿಂತಿದ್ದ ಧರ್ಮರಾಜನಿಗೆ ಹೇಳಿದನು :

"ಧರ್ಮರಾಜ! ನೀನು ಯಾವಾಗಲೂ ಸಕಲಪ್ರಾಣಿಗಳ ಹಿತಚಿಂತನೆಯಲ್ಲಿಯೇ ನಿರತನಾಗಿರುವೆಯೆಂಬ ವಿಷಯವು ಎಲ್ಲರಿಗೂ ತಿಳಿದಿರುವುದು. ಆದುದರಿಂದಲೇ ನೀನು ನಿನ್ನ ಅನುಜರೊಡನೆ ಈ ರಮ್ಯವಾದ ಶಿಖರದಲ್ಲಿ ಯಾವ ಭಯವೂ ಇಲ್ಲದೇ ಇರಬಹುದಾಗಿದೆ.

**ನ ಚ ಮನ್ಯುಸ್ತ್ವಯಾ ಕಾರ್ಯೋ ಭೀಮಸೇನಸ್ಯ ಪಾಣ್ಡವ ।**
**ಕಾಲೇನೈತೇ ಹತಾಃ ಪೂರ್ವಂ ನಿಮಿತ್ತಮನುಜಸ್ತವ ॥೪೪॥**

**ವ್ರೀಡಾ ಚಾತ್ರ ನ ಕರ್ತವ್ಯಾ ಸಾಹಸಂ ಯದಿದಂ ಕೃತಮ್ ।**
**ದೃಷ್ಟಶ್ಚಾಪಿ ಸುರೈಃ ಪೂರ್ವಂ ವಿನಾಶೋ ಯಕ್ಷರಕ್ಷಸಾಮ್ ॥೪೫॥**

**ನ ಭೀಮಸೇನೇ ಕೋಪೋ ಮೇ ಪ್ರೀತೋಽಸ್ಮಿ ಭರತರ್ಷಭ ।**
**ಕರ್ಮಣಾ ಭೀಮಸೇನಸ್ಯ ಮಮ ತುಷ್ಟಿರಭೂತ್ಪುರಾ ॥೪೬॥**

ನಿನ್ನ ಇಚ್ಛೆಗೆ ವಿರುದ್ಧವಾಗಿ ವರ್ತಿಸಿರುವ ಈ ಭೀಮನ ವಿಷಯದಲ್ಲಿಯೂ ನೀನು ಕೋಪಿಸಿಕೊಳ್ಳುವ ಕಾರಣವಿಲ್ಲ. ವಿಧಿಯ ನಿಯಮಾನುಸಾರವಾಗಿ ಈ ಯಕ್ಷ-ರಾಕ್ಷಸರು ಹತರಾಗಿಯೇ ಇದ್ದರು. ಭೀಮಸೇನನು ವಿಧಿಯ ಕೈಗೊಂಬೆಯಾಗಿ ಇವರ ಪ್ರಾಣಾಪಹಾರಕ್ಕೆ ನಿಮಿತ್ತಮಾತ್ರನಾಗಿ ವರ್ತಿಸಿರುತ್ತಾನೆ. ಭೀಮಸೇನನು ದುರಾಕ್ರಮಣವನ್ನು ನಡೆಸಿರುವುದಕ್ಕೂ ನೀನು ನಾಚಿಕೆಪಡಬೇಕಾಗಿಲ್ಲ. ಯಕ್ಷ-ರಾಕ್ಷಸರ ಈ ವಧೆಯು ನರಪುಂಗವನೊಬ್ಬನಿಂದ ನಡೆಯುವುದೆಂಬ ವಿಷಯವು ದೇವತೆಗಳಿಗೆ ಹಿಂದೆಯೇ ತಿಳಿದಿತ್ತು. ಆದುದರಿಂದಲೇ ನಾನು ಭೀಮಸೇನನ ಮೇಲೆ–ಇವನು ನನ್ನ ಸೈನಿಕರ ಮೇಲೆ ಎರಡು ಬಾರಿ ಆಕ್ರಮಣವನ್ನು ನಡೆಸಿದರೂ–ಕೋಪಗೊಳ್ಳುವುದಂತಿರಲಿ ; ಇವನ ವಿಷಯದಲ್ಲಿ ಸುಪ್ರೀತನಾಗಿಯೇ ಇರುವೆನು. ಇವನು ದುರಾಕ್ರಮಣ ನಡೆಸಿ ಯಕ್ಷ-ರಾಕ್ಷಸರನ್ನು ಕೊಂದನೆಂಬ ವಾರ್ತೆಯನ್ನು ದೂತರ ಮೂಲಕ ನಾನು ಕೇಳಿದಾಗಲೂ ಅಂತರಂಗದಲ್ಲಿ ಸಂತೋಷಪಟ್ಟೆನು."

ಜನಮೇಜಯ! ಕುಬೇರನು ಯುಧಿಷ್ಠಿರನಿಗೆ ಹೀಗೆ ಹೇಳಿ ಭೀಮಸೇನನ ಕಡೆಗೆ ತಿರುಗಿ ಅವನನ್ನು ಕುರಿತು ಹೇಳಿದನು :

"ಮಗು! ನೀನು ಮಾಡಿರುವ ಈ ದುರಾಕ್ರಮಣವನ್ನು ನಾನೆಂದಿಗೂ ಪರಿಗಣಿಸತಕ್ಕವನಲ್ಲ. ನಿನ್ನ ಪ್ರೇಯಸಿಯಾದ ಕೃಷ್ಣೆಯನ್ನು ಸುಪ್ರೀತಳನ್ನಾಗಿ ಮಾಡಲು ನೀನು ದೇವತೆಗಳನ್ನೂ ಮತ್ತು ನನ್ನನ್ನೂ ಲೆಕ್ಕಿಸದೇ ನಿನ್ನ ಭುಜಬಲದಿಂದ ಈ ಯಕ್ಷ-ರಾಕ್ಷಸರನ್ನು ಸಂಹರಿಸಿ ಸಾಹಸಕಾರ್ಯವನ್ನೇ ಮಾಡಿರುವೆ. ಈ ನಿನ್ನ ಸಾಹಸಕಾರ್ಯದಿಂದ ನಾನು ನಿಶ್ಚಯವಾಗಿಯೂ ಸುಪ್ರೀತನಾಗಿರುವೆನು. ಈ ನಿನ್ನ ಸಾಹಸಕಾರ್ಯದಿಂದಾಗಿ ನಾನು ಮಹರ್ಷಿಗಳ ಮಹಾಶಾಪದಿಂದ ವಿಮೋಚಿತನಾದೆನು. ನಾನು ಮಾಡಿದ ಒಂದು ಅಪರಾಧಕ್ಕಾಗಿ ಮಹಾತ್ಮರಾದ ಅಗಸ್ತ್ಯಮಹರ್ಷಿಗಳು ಕುಪಿತರಾಗಿ ನನ್ನನ್ನು ಶಪಿಸಿಬಿಟ್ಟಿದ್ದರು. ಆ ಶಾಪದ ದುಷ್ಫಲವು ನೀನು ಮಾಡಿದ ಈ ಸಾಹಸಕಾರ್ಯದಿಂದಾಗಿ ಪರಿಹೃತವಾಯಿತು. ಈ ವಿಧವಾಗಿ ನನಗೆ ಕ್ಲೇಶವು ಸಂಭವಿಸುವುದೆಂಬ ವಿಷಯವು ಮೊದಲೇ ನಿರ್ದಿಷ್ಟವಾಗಿದ್ದಿತು. ಆದುದರಿಂದ ಈ ವಿಷಯದಲ್ಲಿ ನಿನ್ನ ಅಪರಾಧವೇನೂ ಇರುವುದಿಲ್ಲ."

ಅತ್ಯಾಶ್ಚರ್ಯಕರವಾದ ಕುಬೇರನ ಮಾತುಗಳನ್ನು ಕೇಳಿ ಯುಧಿ ಷ್ಠಿರನು ಉತ್ಸುಕತೆಯಿಂದ ಕುಬೇರನನ್ನು ಪ್ರಶ್ನಿಸಿದನು :

"ದೇವದೇವನೇ! ಅಗಸ್ತ್ಯಮಹರ್ಷಿಗಳು ನೀನು ಮಾಡಿದ ಯಾವ ಅಪರಾಧಕ್ಕಾಗಿ ಶಾಪಕೊಟ್ಟರು? ಅಂತಹ ಪ್ರಸಂಗವು ಎಲ್ಲಿ–ಯಾವಾಗ–ಏತಕ್ಕಾಗಿ ನಡೆಯಿತೆಂಬುದನ್ನು ಕೇಳಿ ತಿಳಿದುಕೊಳ್ಳಲು ಕುತೂಹಲಿಯಾಗಿದ್ದೇನೆ. ನಿನಗೆ ಶಾಪಕೊಡಬೇಕಾದರೆ ಮಹರ್ಷಿಗಳಿಗೆ ನಿನ್ನಿಂದ ಮಹತ್ತರವಾದ ಅಪಚಾರವಾಗಿರಲೇಬೇಕು. ಕುಪಿತರಾದ ಅಗಸ್ತ್ಯಮಹರ್ಷಿಗಳು ನಿನ್ನನ್ನೂ, ನಿನ್ನ ಸೇವಕರನ್ನೂ, ಸೈನಿಕರನ್ನೂ ತಮ್ಮ ಕೋಪಾಗ್ನಿಯಿಂದ ದಹಿಸದೇ ಇದ್ದುದು ನನಗೆ ಬಹಳ ಆಶ್ಚರ್ಯವೆನಿಸಿದೆ. ಧನೇಶ್ವರ! ದಯ ಮಾಡಿ ಎಲ್ಲ ವಿಷಯಗಳನ್ನೂ ವಿವರವಾಗಿ ಹೇಳು."

"ಯುಧಿಷ್ಠಿರ! ನಿನ್ನ ಆಶಯದಂತೆ ಹಿಂದೆ ನಡೆದುದೆಲ್ಲವನ್ನೂ ವಿಶದವಾಗಿಯೇ ಹೇಳುವೆನು ಕೇಳು :

ಹಿಂದೆ ಕುಶವತೀ ಎಂಬ ಸ್ಥಳದಲ್ಲಿ ದೇವಸಭೆಯು ನಡೆಯಿತು. ಆ ಸಭೆಗೆ ನನಗೂ ಆಹ್ವಾನವಿದ್ದಿತು. ಮುನ್ನೂರು ಮಹಾಪದ್ಮ ಸಂಖ್ಯಾತರಾದ ಯಕ್ಷ-ರಾಕ್ಷಸರ ಸೈನ್ಯದೊಡನೆ ನಾನು ಕುಶವತಿಗೆ ಪ್ರಯಾಣಮಾಡುತ್ತಿದ್ದೆನು. ನನ್ನ ಸೈನಿಕರೆಲ್ಲರೂ ಘೋರರೂಪಿಗಳಾಗಿದ್ದು ನಾನಾವಿಧವಾದ ಆಯುಧ ಗಳನ್ನು ಧರಿಸಿದ್ದರು. ಕುಶವತಿಗೆ ಹೋಗುತ್ತಿದ್ದ ಮಾರ್ಗದಲ್ಲಿ ಫಲ-ಪುಷ್ಪಭರಿತವಾಗಿದ್ದ ಮರ-ಗಿಡ-ಬಳ್ಳಿಗಳಿಂದಲೂ, ನಾನಾವಿಧವಾದ ಪಕ್ಷಿ ಗಳಿಂದಲೂ ಆವೃತವಾಗಿದ್ದ ನಯನಮನೋಹರವಾಗಿದ್ದ ಅಗಸ್ತ್ಯರ ದಿವ್ಯಾಶ್ರಮವು ಯಮುನಾನದಿಯ ತೀರದಲ್ಲಿದ್ದಿತು. ಅಗಸ್ತ್ಯಮಹರ್ಷಿ ಗಳು ಉಗ್ರವಾದ ತಪಸ್ಸಿನಲ್ಲಿ ಉಪಸ್ಥಿತರಾಗಿದ್ದರು. ತೋಳುಗಳೆರಡನ್ನೂ ಮೇಲೆತ್ತಿ ಸೂರ್ಯಾಭಿಮುಖವಾಗಿ ಕುಳಿತಿದ್ದ ಅವರು ತೇಜಸ್ಸಿನ ರಾಶಿಯಂತೆಯೂ, ಸಾಕ್ಷಾತ್ ಯಜ್ಞೇಶ್ವರನಂತೆಯೂ ಪ್ರಕಾಶಿಸುತ್ತಿದ್ದರು. ನನ್ನ ಪ್ರಿಯಸಖನಾದ, ರಾಕ್ಷಸಸೈನ್ಯಕ್ಕೆ ನಾಯಕನಾದ, ಶ್ರೀಮಂತನಾದ ಮಣಿಮಂತನೂ ನನ್ನ ಜೊತೆಯಲ್ಲೇ ಇದ್ದನು. ಆಕಾಶ ಮಾರ್ಗದಲ್ಲಿ ಪ್ರಯಾಣಮಾಡುತ್ತಿದ್ದ ನಾವು ಆಶ್ರಮಭೂಮಿಯ ಸಮೀಪಕ್ಕೆ ಬರುವ ವೇಳೆಗೆ ಸರಿಯಾಗಿ, ನನ್ನ ಮಿತ್ರನಾದ ಮಣಿಮಂತನು–ಮೂರ್ಖತನದಿಂದಲೋ, ಅಥವಾ ವಿಧಿಯ ಪ್ರೇರಣೆಯಿಂದಲೋ–'ಭೂಮಿಯ ಮೇಲೆ ಯಾರಿದ್ದಾರೆ? ಯಾರ ಆಶ್ರಮವಿದೆ?"–ಎಂಬುದಾವುದನ್ನೂ ವಿವೇಚಿಸದೇ ಥೂತ್ಕರಿಸಿದನು. ('ಥೂ' ಶಬ್ದದೊಡನೆ ಎಂಜಲನ್ನು ಉಗುಳಿದನು.) ಆ ಎಂಜಲು ದುರದೃಷ್ಟವಶಾತ್ ಮಹರ್ಷಿಗಳ ತಲೆಯ ಮೇಲಕ್ಕೆ ಸರಿಯಾಗಿ ಬಿದ್ದಿತು. ಒಡನೆಯೇ ಮಹರ್ಷಿಗಳು ಕುಪಿತರಾದರು. ನಾಲ್ಕು ದಿಕ್ಕುಗಳೂ ಮಹರ್ಷಿಗಳ ಕೋಪಾಗ್ನಿಗೆ ಸಿಕ್ಕಿ ಸುಟ್ಟುಹೋಗುವುವೋ–ಎಂಬ ಗಾಬರಿಯುಂಟಾಯಿತು. ಕೋಪಾವಿಷ್ಟರಾದ ಮಹರ್ಷಿಗಳು ನನ್ನನ್ನು ಸಂಬೋಧಿಸಿ ಹೀಗೆಂದು ಹೇಳಿದರು :

**ಮಾಮವಜ್ಞಾಯ ದುಷ್ಟಾತ್ಮಾ ಯಸ್ಮಾದೇಷ ಸಖಾ ತವ ।**
**ಧರ್ಷಣಾಂ ಕೃತವಾನೇತಾಂ ಪಶ್ಯತಸ್ತೇ ಧನೇಶ್ವರ ॥೬೦॥**

**ತಸ್ಮಾತ್ಸಹೈಭಿಃ ಸೈನ್ಯೈಸ್ತೇ ವಧಂ ಪ್ರಾಪ್ಸ್ಯತಿ ಮಾನುಷಾತ್ ।**

ತ್ವಂ ಚಾಪ್ಯೇಭಿರ್ಹತೈಃ ಸೈನ್ಯೈಃ ಕ್ಲೇಶಂ ಪ್ರಾಪ್ಯೇಹ ದುರ್ಮತಿಃ ।
ತಮೇವ ಮಾನುಷಂ ದೃಷ್ಟ್ವಾ ಕಿಲ್ಬಿಷಾದ್ವಿಪ್ರಮೋಕ್ಷ್ಯಸೇ ॥೬೧॥

ಸೈನ್ಯಾನಾಂ ತು ತವೈತೇಷಾಂ ಪುತ್ರಪೌತ್ರಬಲಾನ್ವಿತಮ್ ।
ನ ಶಾಪಂ ಪ್ರಾಪ್ಸ್ಯತೇ ಘೋರಂ ತತ್ತವಾಜ್ಞಾಂ ಕರಿಷ್ಯತಿ ॥೬೨॥

"ನೀನು ನೋಡುತ್ತಿರುವಂತೆಯೇ ನಿನ್ನ ಪ್ರಿಯಸಖನಾದ ಈ ರಾಕ್ಷಸಾಧಮನು ನಾನಿಲ್ಲಿ ತಪಶ್ಚರ್ಯೆಯನ್ನು ಮಾಡುತ್ತಿರುವೆನೆಂಬುದನ್ನೂ ನಿರ್ಲಕ್ಷಿಸಿ ನನ್ನ ತಲೆಯ ಮೇಲೆ ಉಗುಳಿದ್ದಾನೆ. ಭೂಲೋಕದಲ್ಲಿರುವ ಮಾನವರ ವಿಷಯದಲ್ಲಿ ಇವನಿಷ್ಟು ನಿರ್ಲಕ್ಷ್ಯವಾಗಿರುವನಲ್ಲವೇ? ಇವನೂ ಮತ್ತು ಇವನ ಅಪಾರಸೈನ್ಯವೂ ಮಾನವನೊಬ್ಬನಿಂದಲೇ ವಿನಾಶಹೊಂದುವುದು ನಿಶ್ಚಯ. ಸೈನ್ಯವಿನಾಶದ ಕ್ಲೇಶವನ್ನು ನೀನೂ ಒಂದಲ್ಲ ; ಎರಡು ಬಾರಿ ಅನುಭವಿಸಿಯೇ ತೀರಬೇಕು. ನಿನ್ನ ಪ್ರಿಯಸಖನನ್ನೂ, ಅಪಾರ ಸೈನ್ಯವನ್ನೂ ಕಳೆದುಕೊಂಡನಂತರ ನಿನ್ನ ಪ್ರಿಯಸಖನ ವಿಧ್ವಂಸಕನಾದ ನರಪುಂಗವನನ್ನು ಸಂದರ್ಶಿಸಿದ ದಿನ ನೀನು ಈ ನನ್ನ ಶಾಪದಿಂದ ವಿಮುಕ್ತಿಯನ್ನು ಹೊಂದುವೆ. ಈ ನನ್ನ ಶಾಪವು ಇಲ್ಲಿ ನಿನ್ನೊಡನೆ ಆಗಮಿಸಿರುವ ಮಣಿಮಂತನಿಗೂ ಮತ್ತು ಮುನ್ನೂರು ಮಹಾಪದ್ಮಸಂಖ್ಯಾತರಾದ ಸೈನಿಕರಿಗೂ ಅನ್ವಯಿಸುವುದೇ ಹೊರತು ಇವರ ಮಕ್ಕಳು ಮತ್ತು ಮೊಮ್ಮಕ್ಕಳಿಗೆ ಅನ್ವಯಿಸುವುದಿಲ್ಲ. ಅವರೆಲ್ಲರೂ ನಿನ್ನ ಆಜ್ಞೆಯನ್ನು ಪರಿಪಾಲಿಸುತ್ತಾ ದುರ್ಜಯರಾಗಿಯೇ ಇರುತ್ತಾರೆ."

ಯುಧಿಷ್ಠಿರ! ಮಹರ್ಷಿಗಳು ಹೀಗೆ ಶಾಪಕೊಟ್ಟು ಮುಂದೆ ಪ್ರಯಾಣ ಮಾಡಲು ನಮಗೆ ಅನುಮತಿಯನ್ನಿತ್ತರು. ಆ ಶಾಪಾನುಸಾರವಾಗಿಯೇ ಭೀಮನಿಂದ ನನ್ನನ್ನೂ, ದೇವತೆಗಳನ್ನೂ ನಿರ್ಲಕ್ಷಿಸಿ ನನ್ನ ಅಪಾರಸೈನ್ಯವನ್ನೂ, ನನ್ನ ಮಿತ್ರನನ್ನೂ ಧ್ವಂಸಮಾಡಿರುವನು. ಮಹರ್ಷಿಗಳ ದಿವ್ಯವಾಣಿಯಂತೆ ನಾನಿಂದ ಈ ನರಪುಂಗವನನ್ನು ಸಂದರ್ಶಿಸಿ ಆ ಘೋರಶಾಪದಿಂದ ವಿಮುಕ್ತನಾಗಿದ್ದೇನೆ."

೧೬೧ನೆಯ ಅಧ್ಯಾಯವು ಮುಗಿಯಿತು.

೧೬೨ನೆಯ ಅಧ್ಯಾಯ ಯಕ್ಷಯುದ್ಧಪರ್ವ (ಮುಂದುವರಿದಿದೆ.)

## ಯುಧಿಷ್ಠಿರನಿಗೆ ಕುಬೇರನ ಹಿತೋಪದೇಶ

ಜನಮೇಜಯ! ಕುಬೇರನು ಮುಂದುವರಿಸುತ್ತಾ ಹೇಳಿದನು :

**ಯುಧಿಷ್ಠಿರ ಧೃತಿರ್ದಾಕ್ಷ್ಯಂ ದೇಶಕಾಲಪರಾಕ್ರಮಾಃ ।**
**ಲೋಕತನ್ತ್ರ ವಿಧಾನಾನಾಮೇಷ ಪಞ್ಚವಿಧೋ ವಿಧಿಃ ॥೧॥**

"ಯುಧಿಷ್ಠಿರ! ಧೈರ್ಯ, ಸಾಮರ್ಥ್ಯ, ದೇಶ, ಕಾಲ, ಪರಾಕ್ರಮ–ಈ ಐದು ವಿಧಾನಗಳು ಲೌಕಿಕಕಾರ್ಯಸಿದ್ಧಿಗೆ ಮೂಲಭೂತವಾಗಿವೆ. (ಕಷ್ಟವು ಪ್ರಾಪ್ತವಾದಾಗ ಧೈರ್ಯಗೆಡದಿರುವುದು ಧೃತಿ. ಕಷ್ಟನಿವಾರಣೆಗಾಗಿ ಸತತವಾಗಿ ಪ್ರಯತ್ನಿಸುವುದು ದಾಕ್ಷ್ಯ. ಶತ್ರುಗಳನ್ನು ದಮನಮಾಡಲು ಬೇಕಾದುದು ಪರಾಕ್ರಮ. ದೇಶ-ಕಾಲಗಳನ್ನು ಪರಿಶೀಲಿಸಿ ಪರಾಕ್ರಮವನ್ನು ತೋರಿಸಬೇಕು. ದೇಶ-ಕಾಲಗಳನ್ನು ವಿವೇಚಿಸದೆ ಪರಾಕ್ರಮವನ್ನು ತೋರಹೋದರೆ ಅಭ್ಯುದಯಕ್ಕೆ ಬದಲಾಗಿ ಪರಾಭವವಾಗುವ ಸಂಭವವೂ ಉಂಟು.)

ಕೃತಯುಗದಲ್ಲಿ ಜನರು ಸ್ಥಿರಮನಸ್ಕರಾಗಿಯೂ, ಚತುರರಾಗಿಯೂ, ಕರ್ಮಾನುಷ್ಠಾನತತ್ಪರರಾಗಿಯೂ, ದೇಶ-ಕಾಲಗಳನ್ನು ಪರಿಶೀಲಿಸಿ ಪರಾಕ್ರಮವನ್ನು ತೋರುವ ವಿಧಾನವನ್ನು ತಿಳಿದವರಾಗಿಯೂ ಇದ್ದರು. ಆದುದರಿಂದ ಅವರು ಯಾವ ಕಾರ್ಯವನ್ನೇ ಮಾಡಲು ಹೋದರೂ ಪರಾಭವವೆಂಬುದನ್ನೇ ಕಾಣದವರಾಗಿದ್ದರು.

**ಧೃತಿಮಾನ್ದೇಶಕಾಲಜ್ಞಃ ಸರ್ವಧರ್ಮವಿಧಾನವಿತ್ ।**
**ಕ್ಷತ್ರಿಯಃ ಕ್ಷತ್ರಿಯಶ್ರೇಷ್ಠ ಪ್ರಶಾಸ್ತಿ ಪೃಥಿವೀಂ ಚಿರಮ್ ॥೩॥**

ಕ್ಷತ್ರಿಯಶ್ರೇಷ್ಠನೇ! ಸ್ಥಿರಮನಸ್ಕನಾಗಿಯೂ, ದೇಶ-ಕಾಲಗಳನ್ನು ವಿವೇಚನೆಮಾಡತಕ್ಕವನಾಗಿಯೂ, ಸರ್ವಧರ್ಮಗಳ ವಿಧಾನಗಳನ್ನು ತಿಳಿದವನಾಗಿಯೂ ಇರತಕ್ಕ ಕ್ಷತ್ರಿಯನು ಭೂಮಿಯನ್ನು ನಿರಾಪದವಾಗಿ ಬಹಳ ಕಾಲ ಆಳಲು ಸಮರ್ಥನಾಗುತ್ತಾನೆ.

**ಯ ಏವಂ ವರ್ತತೇ ಪಾರ್ಥ ಪುರುಷಃ ಸರ್ವಕರ್ಮಸು ।**
**ಸ ಲೋಕೇ ಲಭತೇ ವೀರ ಯಶಃ ಪ್ರೇತ್ಯ ಚ ಸದ್ಗತಿಮ್ ॥೪॥**

ಯಾವ ಕ್ಷತ್ರಿಯನು ಸರ್ವಕಾಲಗಳಲ್ಲಿಯೂ ಕಾಲ-ದೇಶಗಳನ್ನು ವಿವೇಚಿಸಿ ಕರ್ಮಪ್ರವೃತ್ತನಾಗುವನೋ–ಅವನು ಇಹದಲ್ಲಿ ಕೀರ್ತಿಮಂತನಾಗುವುದಲ್ಲದೇ–ಅವಸಾನಾನಂತರದಲ್ಲಿ ಸದ್ಗತಿಯನ್ನೂ ಪಡೆಯುವನು.

**ದೇಶಕಾಲಾನ್ತರಪ್ರೇಪ್ಸುಃ ಕೃತ್ವಾ ಶಕ್ರಃ ಪರಾಕ್ರಮಮ್ ।**
**ಸಮ್ಪ್ರಾಪ್ತಸ್ತ್ರಿದಿವೇ ರಾಜ್ಯಂ ವೃತ್ರಹಾ ವಸುಭಿಃ ಸಹ ॥೫॥**

ವಸುಗಳಿಂದ ಸಮೇತನಾದ ಇಂದ್ರನು–ದೇಶ-ಕಾಲಗಳನ್ನು ವಿವೇಚಿಸಿಯೇ ವೃತ್ರಾಸುರನ ಮೇಲೆ ಪರಾಕ್ರಮವನ್ನು ತೋರಿ ಅವನನ್ನು ಸಂಹರಿಸಿ ಸ್ವರ್ಗಕ್ಕೆ ಅಧಿಪತಿಯಾದನು.

**ಯಸ್ತು ಕೇವಲಸಂರಮ್ಭಾತ್ಪ್ರಪಾತಂ ನ ನಿರೀಕ್ಷತೇ ।**
**ಪಾಪಾತ್ಮಾ ಪಾಪಬುದ್ಧಿರ್ಯಃ ಪಾಪಮೇವಾನುವರ್ತತೇ ।**
**ಕರ್ಮಣಾಮವಿಭಾಗಜ್ಞಃ ಪ್ರೇತ್ಯ ಚೇಹ ವಿನಶ್ಯತಿ ॥೬॥**

ಯಾವನು ಕೋಪಿಷ್ಟನಾಗಿ ತನ್ನ ಅವನತಿಯನ್ನು ನಿರೀಕ್ಷಿಸುವುದಿಲ್ಲವೋ, ಯಾವನು ಪಾಪಾತ್ಮನೂ ಪಾಪಬುದ್ಧಿಯುಳ್ಳವನೂ ಆಗಿ ಯಾವಾಗಲೂ ಪಾಪಕಾರ್ಯಗಳಲ್ಲಿಯೇ ಪ್ರವೃತ್ತನಾಗುವನೋ–ಅಂತಹವನಿಗೆ ದೇಶ-ಕಾಲಗಳ (ಯಾವ ಕಾರ್ಯವನ್ನು ಯಾವಾಗ ಹೇಗೆ ಮಾಡಬೇಕೆಂಬ) ವಿವೇಚನೆಯು ಸ್ವಲ್ಪವಾದರೂ ಇರುವುದಿಲ್ಲ. ಅವನು ಇಹ-ಪರಗಳಲ್ಲಿ ಕೇಡಿಗೆ ಗುರಿಯಾಗುತ್ತಾನೆ.

**ಅಕಾಲಜ್ಞಃ ಸುದುರ್ಮೇಧಾಃ ಕಾರ್ಯಾಣಾಮವಿಶೇಷವಿತ್ ।**
**ವೃಥಾಚಾರಸಮಾರಮ್ಭಃ ಪ್ರೇತ್ಯ ಚೇಹ ವಿನಶ್ಯತಿ ॥೭॥**

ಯಾವ ಕಾರ್ಯವನ್ನು ಯಾವ ಕಾಲದಲ್ಲಿ ಮಾಡಬೇಕೆಂಬ ವಿವೇಚನೆಯಿಲ್ಲದವನು ಇಹ-ಪರಗಳೆರಡರಲ್ಲಿಯೂ ದುಃಖಕ್ಕೆ ಗುರಿಯಾಗುತ್ತಾನೆ. ದೇಶ-ಕಾಲಗಳ ವಿವೇಚನೆಯಿಲ್ಲದೇ, ಕರ್ಮದ ಸ್ವರೂಪವನ್ನು ಸಂಪೂರ್ಣವಾಗಿ ತಿಳಿಯದೇ ಕಾರ್ಯವನ್ನು ಪ್ರಾರಂಭಿಸುವ ದುರ್ಮತಿಗೆ ಇಹ-ಪರಗಳೆರಡರಲ್ಲಿಯೂ ಸುಖವು ಲಭಿಸುವುದಿಲ್ಲ. ಅವನ ಕಾರ್ಯವು ವ್ಯರ್ಥವಾಗುತ್ತದೆ.

**ಸಾಹಸೇ ವರ್ತಮಾನಾನಾಂ ನಿಕೃತೀನಾಂ ದುರಾತ್ಮನಾಮ್ ।**
**ಸರ್ವಸಾಮರ್ಥ್ಯಲಿಪ್ಸೂನಾಂ ಪಾಪೋ ಭವತಿ ನಿಶ್ಚಯಃ ॥೮॥**

ಕೇವಲ ಸಾಹಸವನ್ನೇ ಅವಲಂಬಿಸಿರುವವರ, ವಂಚಕರ, ದುರಾತ್ಮರ ಮತ್ತು ಸರ್ವಸಾಮರ್ಥ್ಯವನ್ನೂ ಪಡೆಯಬೇಕೆಂಬ ದುರಾಶೆಯುಳ್ಳವರ ನಿಶ್ಚಯವು ಪಾಪಭೂಯಿಷ್ಠವಾಗಿರುತ್ತದೆ.

**ಅಧರ್ಮಜ್ಞೋಽವಲಿಪ್ತಶ್ಚ ಬಾಲಬುದ್ಧಿರಮರ್ಷಣಃ ।**
**ನಿರ್ಭಯೋ ಭೀಮಸೇನೋಽಯಂ ತಂ ಶಾಧಿ ಪುರುಷರ್ಷಭ ॥೯॥**

ಯುಧಿಷ್ಠಿರ! ನಿನ್ನ ತಮ್ಮನಾದ ಈ ಭೀಮಸೇನನು ಧರ್ಮಜ್ಞನಲ್ಲ. ಗರ್ವಿಷ್ಠನು. ಬಾಲಬುದ್ಧಿಯುಳ್ಳವನು (ಚಂಚಲಚಿತ್ತನು.) ಸಹನೆಯಿಲ್ಲದವನು. ಭಯರಹಿತನು. ಇವನನ್ನು ನೀನು ಸ್ವಲ್ಪ ತಡೆಹಿಡಿಯಬೇಕಾಗಿದೆ. ನೀನು ಪುನಃ ಆರ್ಷ್ಟಿಷೇಣರ ಆಶ್ರಮಕ್ಕೆ ಹೋಗಿ ಶೋಕ-ಭಯರಹಿತನಾಗಿ ಕೃಷ್ಣಪಕ್ಷಪೂರ್ತಿಯಾಗಿ ಅಲ್ಲಿಯೇ ವಾಸಮಾಡು. ಅಲಕಾಪುರೀವಾಸಿಗಳಾದ ಯಕ್ಷ-ಗಂಧರ್ವ-ಕಿನ್ನರ-ಕಿಂಪುರುಷರೇ ಮೊದಲಾಗಿ ಎಲ್ಲರೂ ನನ್ನ ಆಜ್ಞಾನುಸಾರವಾಗಿ ಬ್ರಾಹ್ಮಣರಿಂದ ಕೂಡಿರುವ ನಿನ್ನನ್ನು ಸರ್ವದಾ ರಕ್ಷಿಸುತ್ತಿರುತ್ತಾರೆ.

**ಸಾಹಸಾದನುಸಮ್ಪ್ರಾಪ್ತಃ ಪ್ರತಿಬುಧ್ಯ ವೃಕೋದರಃ ।**
**ವಾರ್ಯತಾಂ ಸಾಧ್ವಯಂ ರಾಜಂಸ್ತ್ವಯಾ ಧರ್ಮಭೃತಾಂ ವರ ॥**

ಧರ್ಮಾತ್ಮರಲ್ಲಿ ಶ್ರೇಷ್ಠವಾದ ಧರ್ಮರಾಜನೇ! ನಾನು ಹಿಂದೆಯೇ ಹೇಳಿದಂತೆ ಭೀಮನು ಕಾಲ-ದೇಶಗಳನ್ನು ವಿವೇಚಿಸದೇ ಸಾಹಸವನ್ನೇ ಅವಲಂಬಿಸಿ ಇಲ್ಲಿಗೆ ಬಂದಿರುತ್ತಾನೆ. ಇವನನ್ನು ನೀನು ಮುಂದೆ ಹೀಗೆ ಮಾಡದಂತೆ ತಡೆಹಿಡಿಯಲೇಬೇಕು. ಇನ್ನು ಮುಂದೆ ಈ ವನದಲ್ಲಿ ಸಂಚರಿಸುವವರೆಲ್ಲರೂ (ಯಕ್ಷ-ರಾಕ್ಷಸರು) ನಿನ್ನ ಯೋಗ-ಕ್ಷೇಮವನ್ನು ನೋಡಿಕೊಳ್ಳುತ್ತಾರೆ. ನೀನು ಹೇಳಿದುದನ್ನು ಮಾಡುತ್ತಾರೆ. ನಿನ್ನ ಸಮೀಪದಲ್ಲಿಯೇ ಯಾವಾಗಲೂ ಇರುತ್ತಾರೆ. ಅನ್ನ-ಪಾನಾದಿಗಳಿಗೂ ನೀನು ಶ್ರಮವಹಿಸಬೇಕಾಗಿಲ್ಲ. ನನ್ನ ಈ ಸೇವಕರು ನಿನಗೆ ಬೇಕು-ಬೇಕಾದ, ಶುಚಿ-ರುಚಿಯಾದ ಆಹಾರಪದಾರ್ಥಗಳನ್ನು ನಿನ್ನ ಸಮೀಪಕ್ಕೆ

ನೀನು ಅಪೇಕ್ಷಿಸಿದಾಗ ತಂದುಕೊಡುತ್ತಾರೆ. ನಿಮ್ಮನ್ನು ಸಂರಕ್ಷಿಸುವುದು ನನ್ನ ಕರ್ತವ್ಯವೂ ಆಗಿರುತ್ತದೆ. ಏಕೆಂದರೆ :

**ಯಥಾ ಜಿಷ್ಣುರ್ಮಹೇನ್ದ್ರಸ್ಯ ಯಥಾ ವಾಯೋರ್ವೃಕೋದರಃ ।**
**ಧರ್ಮಸ್ಯ ತ್ವಂ ಯಥಾ ತಾತ ಯೋಗೋತ್ಪನ್ನೋ ನಿಜಃ ಸುತಃ ॥**

**ಆತ್ಮಜಾವಾತ್ಮಸಮ್ಪನ್ನೌ ಯಮೌ ಚೋಭೌ ಯಥಾಶ್ವಿನೋಃ ।**
**ರಕ್ಷ್ಯಾಸ್ತದ್ವನ್ಮಮಾಪೀಹ ಯೂಯಂ ಸರ್ವೇ ಯುಧಿಷ್ಠಿರ ॥೧೭॥**

ಯುಧಿಷ್ಠಿರ! ನೀವೆಲ್ಲರೂ ದೇವತೆಗಳಿಂದಲೇ ಉತ್ಪನ್ನರಾಗಿರುವಿರಿ. ಈ ಕಾರಣದಿಂದ ಹೇಗೆ ಇಂದ್ರನಿಗೆ ಜಿಷ್ಣುವೂ, ವಾಯುವಿಗೆ ಭೀಮನೂ, ಯಮಧರ್ಮನಿಗೆ ಯೋಗಶಕ್ತಿಯಿಂದ ಹುಟ್ಟಿರುವ ನೀನೂ, ಅಶ್ವಿನೀದೇವತೆಗಳಿಗೆ ಈ ಯಮಳರೂ ರಕ್ಷ್ಯರಾಗಿರುತ್ತೀರೋ–ಹಾಗೆಯೇ ನನಗೂ ನೀವೆಲ್ಲರೂ ರಕ್ಷ್ಯರೇ ಆಗಿರುತ್ತೀರಿ.

**ಅರ್ಥತತ್ತ್ವವಿಧಾನಜ್ಞಃ ಸರ್ವಧರ್ಮವಿಧಾನವಿತ್ ।**
**ಭೀಮಸೇನಾದವರಜಃ ಫಾಲ್ಗುನಃ ಕುಶಲೀ ದಿವಿ ॥೧೮॥**

**ಯಾಃ ಕಾಶ್ಚನ ಮತಾ ಲೋಕೇ ಸ್ವರ್ಗ್ಯಾಃ ಪರಮಸಮ್ಪದಃ ।**
**ಜನ್ಮಪ್ರಭೃತಿ ತಾಃ ಸರ್ವಾಃ ಸ್ಥಿತಾಸ್ತಾತ ಧನಂಜಯೇ ॥೧೯॥**

**ದಮೋ ದಾನಂ ಬಲಂ ಬುದ್ಧಿರ್ಹ್ರೀರ್ಧೃತಿಸ್ತೇಜ ಉತ್ತಮಮ್ ।**
**ಏತಾನ್ಯಪಿ ಮಹಾಸತ್ತ್ವೇ ಸ್ಥಿತಾನ್ಯಮಿತತೇಜಸಿ ॥೨೦॥**

**ನ ಮೋಹಾತ್ಕುರುತೇ ಜಿಷ್ಣುಃ ಕರ್ಮ ಪಾಣ್ಡವ ಗರ್ಹಿತಮ್ ।**
**ನ ಪಾರ್ಥಸ್ಯ ಮೃಷೋಕ್ತಾನಿ ಕಥಯನ್ತಿ ನರಾ ನೃಷು ॥೨೧॥**

**ಸ ದೇವಪಿತೃಗನ್ಧರ್ವೈಃ ಕುರೂಣಾಂ ಕೀರ್ತಿವರ್ಧನಃ ।**
**ಮಾನಿತಃ ಕುರುತೇಽಸ್ತ್ರಾಣಿ ಶಕ್ರಸದ್ಮನಿ ಭಾರತ ॥೨೨॥**

**ಯೋಽಸೌ ಸರ್ವಾನ್ಮಹೀಪಾಲಾನ್ಧರ್ಮೇಣ ವಶಮಾನಯತ್ ।**
**ಸ ಶಾನ್ತನುರ್ಮಹಾತೇಜಾಃ ಪಿತುಸ್ತವ ಪಿತಾಮಹಃ ॥೨೩॥**

**ಪ್ರೀಯತೇ ಪಾರ್ಥ ಪಾರ್ಥೇನ ದಿವಿ ಗಾಣ್ಡೀವಧನ್ವನಾ ।**
**ಸಮ್ಯಕ್ಚಾಸೌ ಮಹಾವೀರ್ಯಃ ಕುಲಧುರ್ಯೇಣ ಪಾರ್ಥಿವಃ ॥೨೪॥**

ಯುಧಿಷ್ಠಿರ! ಅರ್ಥತತ್ತ್ವವಿಧಾನಗಳನ್ನು ತಿಳಿದಿರುವ, ಸಕಲಧರ್ಮ ಗಳ ರಹಸ್ಯಗಳನ್ನೂ ತಿಳಿದಿರುವ, ಭೀಮಸೇನನ ನಂತರ ಹುಟ್ಟಿರುವ ಅರ್ಜುನನು ಸ್ವರ್ಗದಲ್ಲಿ ಸುಖಿಯಾಗಿರುತ್ತಾನೆ. ಅವಸಾನಾನಂತರದಲ್ಲಿಯೂ ಸ್ವರ್ಗಕ್ಕೆ ಹೋಗಲು ಮಾನವನು ಬಹಳ ಪುಣ್ಯಶಾಲಿಯಾಗಿರಬೇಕು. ಕ್ರೋಧಾಭಿಮಾನಗಳನ್ನು ತೊರೆದಿರಬೇಕು. ಸಕಲಸದ್ಗುಣ ಪರಿಪೂರ್ಣ ನಾಗಿರಬೇಕು. ಸಶರೀರಸ್ವರ್ಗವು ಎಂತಹ ಬಹುಪುಣ್ಯಶಾಲಿಯಾದ ಮಾನವ ನಿಗೂ ದುರ್ಲಭವಾದುದು. ಆದರೆ ಪಾರ್ಥನು ಸಶರೀರನಾಗಿಯೇ ಸ್ವರ್ಗಕ್ಕೆ ಹೋಗಿಬರುವ ಸಾಮರ್ಥ್ಯವನ್ನು ಪಡೆದಿರುತ್ತಾನೆ. ಜನ್ಮಪ್ರಭೃತಿ ಅವನು ನಿರ್ದೋಷಿಯಾಗಿರುವುದೂ, ಸದ್ಗುಣಗಳಿಗೆ ಸಮುದ್ರಪ್ರಾಯನಾಗಿರುವುದೂ ಇದಕ್ಕೆ ಮುಖ್ಯಕಾರಣಗಳಾಗಿವೆ. ಯುಧಿಷ್ಠಿರ! ಪಾರ್ಥನು ಜಿತೇಂದ್ರಿಯನು, ದಾನೀ, ಬಲಶಾಲಿಯು, ಬುದ್ಧಿವಂತನು, ಧೃತಿಮಂತನು, ಮಹಾತೇಜಸ್ವಿಯು. ಅವನ ಬುದ್ಧಿಯು ಯಾವ ಕಾರಣದಿಂದಲೂ ಯಾವಾಗಲೂ ಚಂಚಲವಾಗುವುದಿಲ್ಲ. ಇವಿಷ್ಟು ಗುಣಗಳೂ ಮಹಾಸತ್ತ್ವನಾದ ಅರ್ಜುನನಲ್ಲಿ ನೆಲೆಸಿವೆ. ಪಾರ್ಥನು ಯಾವಾಗಲೂ ಮೋಹದಿಂದಾಗಲೀ, ಗರ್ವದಿಂದಾಗಲೀ–ನಿಂದ್ಯವಾದ ಕಾರ್ಯವನ್ನು ಮಾಡಿರುವುದಿಲ್ಲ. ಅವನು ಹುಟ್ಟಿದ ಮೊದಲ್ಗೊಂಡು ಒಂದು ಸುಳ್ಳನ್ನಾದರೂ ಆಡಿರುವನೆಂದು ಹೇಳುವ ಮಾನವರು ಈ ಪ್ರಪಂಚದಲ್ಲಿಲ್ಲ. ಸುಳ್ಳು ಹೇಳುವುದೆಂಬು ಅವನಿಗೆ ತಿಳಿಯದ ವಿಷಯವಾಗಿದೆ. ಕುರುವಂಶೀಯರ ಕೀರ್ತಿವರ್ಧಕನಾದ ಪಾರ್ಥನು ಸ್ವರ್ಗದಲ್ಲಿರುವ ದೇವ-ಪಿತೃ-ಗಂಧರ್ವರಿಂದ ಮಾನಿತನಾಗಿ ಇಂದ್ರನ ಅರಮನೆಯಲ್ಲಿ ದಿವ್ಯಾಸ್ತ್ರಗಳ ಅಭ್ಯಾಸವನ್ನು ಮಾಡುತ್ತಿದ್ದಾನೆ. ಯಾವನು ಈ ಪ್ರಪಂಚದ ರಾಜರೆಲ್ಲರೊಡನೆಯೂ ಧರ್ಮಯುದ್ಧಮಾಡಿ ಅವರೆಲ್ಲರನ್ನೂ ತನ್ನ ಸಾಮಂತರನ್ನಾಗಿ ಮಾಡಿಕೊಂಡು, ಧರ್ಮದಿಂದ ಅನೇಕ ಸಹಸ್ರವರ್ಷಗಳ ಪರ್ಯಂತವಾಗಿ ಈ ಅಖಂಡಭೂಮಂಡಲವನ್ನೂ ಆಳಿದನೋ–ಆ ನಿಮ್ಮ ತಂದೆಯ ಪಿತಾಮಹನಾದ ಶಾಂತನುಚಕ್ರವರ್ತಿಯು ನಿನ್ನ ಅನುಜನಾದ ಅರ್ಜುನನ ಗುಣಾತಿಶಯಗಳನ್ನೂ ಅವನ ವಿಧೇಯತೆ ಯನ್ನೂ ಕಂಡು ಅವನ ವಿಷಯದಲ್ಲಿ ಸುಪ್ರೀತನಾಗಿರುತ್ತಾನೆ.

ಯಾವಾತನು ಯಮುನಾನದಿಯ ತೀರದಲ್ಲಿ ಏಳು ಬಾರಿ ಅಶ್ವಮೇಧ ಯಾಗಗಳನ್ನು ಮಾಡಿ ದೇವ-ಪಿತೃ-ಬ್ರಾಹ್ಮಣರನ್ನು ತೃಪ್ತಿಪಡಿಸಿದನೋ ಅಂತಹ ರಾಜಾಧಿರಾಜನಾದ, ಸ್ವರ್ಗವಿಜೇತೃವಾದ, ಇಂದ್ರಲೋಕದಲ್ಲಿರುವ, ನಿನ್ನ ಪ್ರಪಿತಾಮಹನಾದ ಶಾಂತನುಚಕ್ರವರ್ತಿಯು ನಿನ್ನ ಯೋಗ-ಕ್ಷೇಮಗಳನ್ನು ವಿಚಾರಿಸುವಂತೆ ಹೇಳಿರುವನು, ಯುಧಿಷ್ಠಿರ!"

ಜನಮೇಜಯ! ಕುಬೇರನು ಹೇಳಿದ ಮಾತುಗಳನ್ನು ಕೇಳಿ ಪಾಂಡವರು ಹರ್ಷಿತರಾದರು. ರಣೋತ್ಸಾಹದಿಂದ ನಿಂತಿದ್ದ ಭೀಮಸೇನನು ಕುಬೇರನ ಮಾತುಗಳನ್ನು ಕೇಳಿ ನಾಚಿಕೊಂಡನೋ ಎಂಬಂತೆ ತನ್ನ ಗದಾ-ಶಕ್ತ್ಯಾಯುಧ-ಖಡ್ಗ-ಧನುರ್ಬಾಣಗಳನ್ನು ಉಪಸಂಹರಿಸಿ (ಬದಿಗಿಟ್ಟು) ಕುಬೇರನಿಗೆ ದೀರ್ಘದಂಡನಮಸ್ಕಾರವನ್ನು ಮಾಡಿದನು. ಧನಾಧ್ಯಕ್ಷನಾದ ಕುಬೇರನು ಶರಣಾಗತನಾದ ಭೀಮಸೇನನಿಗೆ ಹೇಳಿದನು :

"ಭೀಮಸೇನ! ನಿನ್ನ ಪೌರುಷದಿಂದ ಶತ್ರುಗಳ ಮಾನಾಪಹರಣ ಮಾಡು. ನಿನ್ನ ಸುಹೃದರಿಗೆ ಸಂತೋಷವನ್ನುಂಟುಮಾಡುವವನಾಗು"– ಎಂದು ಭೀಮನಿಗೆ ಹೇಳಿ ಪಾಂಡುಪುತ್ರರೆಲ್ಲರನ್ನೂ ಸಂಬೋಧಿಸಿ ಕುಬೇರನು ಪುನಃ ಹೇಳಿದನು :

"ಶತ್ರುಗಳಿಗೆ ತಾಪವನ್ನುಂಟುಮಾಡುವ ಭುಜಬಲದಿಂದ ಕೂಡಿರುವ ಪಾಂಡುನಂದನರೇ! ನೀವು ರಮಣೀಯವಾದ ಈ ಹಿಮವತ್ಪರ್ವತದ ಶಿಖರದಲ್ಲಿರುವ ದಿವ್ಯಾಶ್ರಮಗಳಲ್ಲಿ ಸುಖದಿಂದ ವಾಸಮಾಡಬಹುದು. ಯಕ್ಷರಾಗಲೀ-ರಾಕ್ಷಸರಾಗಲೀ ಇನ್ನು ಮುಂದೆ ಮನುಷ್ಯಮಾತ್ರರೆಂದು ನಿಮ್ಮನ್ನು ಅಪಹಾಸ್ಯಮಾಡಲಾರರು. ನನ್ನ ಆಜ್ಞೆಯಂತೆ ನಿಮಗೆ ಬೇಕಾದುದನ್ನು ಒದಗಿಸಿಕೊಡುತ್ತಾರೆ. ಗುಡಾಕೇಶನು ದಿವ್ಯಾಸ್ತ್ರಗಳಲ್ಲಿ ನಿಷ್ಣಾತನಾಗಿ ಇಂದ್ರನಿಂದಲೇ ಅನುಗೃಹೀತನಾಗಿ ಕಳುಹಲ್ಪಟ್ಟು ಬಹುಬೇಗ ನಿಮ್ಮನ್ನು ಬಂದು ಸೇರುತ್ತಾನೆ."

ಜನಮೇಜಯ! ಕುಬೇರನು ಉತ್ತಮಕರ್ಮಾನುಷ್ಠಾನಪರನಾದ ಯುಧಿಷ್ಠಿರನಿಗೆ ಹೀಗೆ ಆಜ್ಞಾಪಿಸಿ ಶ್ವೇತಪರ್ವತಕ್ಕೆ ತೆರಳಿದನು. ಸರ್ವಾಲಂಕಾರಭೂಷಿತರಾಗಿದ್ದ ಯಕ್ಷ-ರಾಕ್ಷಸರು ದಿವ್ಯಾಶ್ಚರ್ಯಗಳನ್ನು ಕಟ್ಟಿದ್ದ ರತ್ನ

ಖಚಿತವಾದ ದಿವ್ಯರಥಗಳಲ್ಲಿ ಕುಳಿತು ಆಕಾಶಮಾರ್ಗದ ಮೂಲಕವಾಗಿ ಕುಬೇರನನ್ನು ಅನುಸರಿಸಿ ತೆರಳಿದರು. ಆ ರಥವಾಜಿಗಳ ನಿನಾದವು–ಗುಂಪು ಗುಂಪಾಗಿ ಪಕ್ಷಿಗಳು ಹಾರಿಹೋಗುತ್ತಿರುವಾಗ ಉಂಟಾಗುವ ಶಬ್ದವನ್ನು ಅನುಕರಿಸುತ್ತಿದ್ದಿತು. ಮೋಡಗಳನ್ನು ಎಳೆದುಕೊಂಡು ಹೋಗುತ್ತಿರುವಂತೆಯೂ, ವಾಯುವನ್ನು ಕಬಳಿಸುವಂತೆಯೂ ಕುಬೇರನ ಆ ರಥಾಶ್ವಗಳು ಅಮಿತವೇಗದಿಂದ ವೈಶ್ರವಣನ ಪಟ್ಟಣಕ್ಕೆ ತೆರಳಿದುವು.

ಸತ್ತುಬಿದ್ದಿದ್ದ ಸಾವಿರಾರು ಮಂದಿ ಕ್ರೋಧವಶರ ಶರೀರಗಳು ಕುಬೇ ರನ ಆಜ್ಞಾನುಸಾರವಾಗಿ ಶಿಖರದಿಂದ ಕೆಳಕ್ಕೆ ಎಳೆದುಹಾಕಲ್ಪಟ್ಟುವು.

ಜನಮೇಜಯ! ಕ್ರೋಧವಶರ ಆಯುಷ್ಯವೇ ಅಷ್ಟೆಂದು ಧೀಮಂತರಾದ ಮಹರ್ಷಿ ಅಗಸ್ತ್ಯರು ನಿರ್ಧರಿಸಿದ್ದರಬಹುದು. ಅವರ ಶಾಸನಾನುಸಾರವಾಗಿ ಆ ಯಕ್ಷ-ರಾಕ್ಷಸರು ಭೀಮನೊಡನೆ ಯುದ್ಧಮಾಡಿ ಹತರಾದರು. ಅಲ್ಲಿಗೆ ಅಗಸ್ತ್ಯರ ಶಾಪದ ಅಂತ್ಯವೂ ಆಯಿತು. ಮಹಾತ್ಮರಾದ ಪಾಂಡವರೂ ಸರ್ವಯಕ್ಷ-ರಾಕ್ಷಸರಿಂದಲೂ ಗೌರವಿಸಲ್ಪಟ್ಟವರಾಗಿ ಹಿಮಾಲಯದ ದಿವ್ಯಾಶ್ರಮಗಳಲ್ಲಿ ಆ ರಾತ್ರಿಯನ್ನು ಯಾವ ವಿಧವಾದ ಭಯವೂ ಇಲ್ಲದೆ ಸುಖವಾಗಿ ಕಳೆದರು.

೧೬೨ನೆಯ ಅಧ್ಯಾಯವು ಮುಗಿಯಿತು.

೧೬೩ನೆಯ ಅಧ್ಯಾಯ ಯಕ್ಷಯುದ್ಧಪರ್ವ (ಮುಂದುವರಿದಿದೆ.)

## ಧೌಮ್ಯರು ಯುಧಿಷ್ಠಿರನಿಗೆ ಮೇರುಪರ್ವತದ ಶಿಖರದ ಮೇಲಿರುವ ಬ್ರಹ್ಮ-ವಿಷ್ಣು ಮೊದಲಾದವರ ಸ್ಥಾನಗಳನ್ನು ತೋರಿಸಿದುದು : ಸೂರ್ಯ-ಚಂದ್ರರ ಗತಿ ಮತ್ತು ಪ್ರಭಾವಗಳನ್ನು ತಿಳಿಸಿದುದು

ಜನಮೇಜಯ! ಮಾರನೆಯ ದಿನ ಸೂರ್ಯೋದಯವಾದನಂತರ ಪುರೋಹಿತರಾದ ಧೌಮ್ಯರು ತಮ್ಮ ಪ್ರಾತರಾಹ್ನಿಕಾದಿಗಳನ್ನು ಮುಗಿಸಿಕೊಂಡವರಾಗಿ ಆರ್ಷ್ಟಿಷೇಣಮಹರ್ಷಿಗಳೊಡನೆ ಪಾಂಡವರು ತಂಗಿದ್ದ ಸ್ಥಳಕ್ಕೆ ಆಗಮಿಸಿದರು. ಧೌಮ್ಯರು ಆಗಮಿಸಿದೊಡನೆಯೇ ಪಾಂಡವರೆದ್ದು ಧೌಮ್ಯರಿಗೂ, ಆರ್ಷ್ಟಿಷೇಣರಿಗೂ ಮತ್ತು ಅಲ್ಲಿದ್ದ ಬ್ರಾಹ್ಮಣೋತ್ತಮರಿಗೂ

ಅಭಿವಾದನಪೂರ್ವಕವಾಗಿ ನಮಸ್ಕಾರಮಾಡಿ ಯಥೋಚಿತವಾಗಿ ಸತ್ಕರಿಸಿದರು. ಅನಂತರದಲ್ಲಿ ಧೌಮ್ಯರು ಯುಧಿಷ್ಠಿರನ ಬಲಗೈಯ್ಯನ್ನು ಹಿಡಿದು ಪೂರ್ವದಿಕ್ಕನ್ನು ತೋರಿಸುತ್ತಾ ಅವನೊಡನೆ ಹೇಳಿದರು :

**ಅಸೌ ಸಾಗರಪರ್ಯನ್ತಾಂ ಭೂಮಿಮಾವೃತ್ಯ ತಿಷ್ಠತಿ ।**
**ಶೈಲರಾಜೋ ಮಹಾರಾಜ ಮನ್ದರೋಽತಿವಿರಾಜತೇ ॥೪॥**

**ಇನ್ದ್ರವೈಶ್ರವಣಾವೇತಾಂ ದಿಶಂ ಪಾಣ್ಡವ ರಕ್ಷತಃ ।**
**ಪರ್ವತೈಶ್ಚ ವನಾನ್ತೈಶ್ಚ ಕಾನನೈಶ್ಚೈವ ಶೋಭಿತಾಮ್ ॥೫॥**

**ಏತದಾಹುರ್ಮಹೇನ್ದ್ರಸ್ಯ ರಾಜ್ಞೋ ವೈಶ್ರವಣಸ್ಯ ಚ ।**
**ಋಷಯಃ ಸರ್ವಧರ್ಮಜ್ಞಾಃ ಸದ್ಮ ತಾತ ಮನೀಷಿಣಃ ॥೬॥**

**ಅತಶ್ಚೋದ್ಯನ್ತಮಾದಿತ್ಯಮುಪತಿಷ್ಠನ್ತಿ ವೈ ಪ್ರಜಾಃ ।**
**ಋಷಯಶ್ಚಾಪಿ ಧರ್ಮಜ್ಞಾಃ ಸಿದ್ಧಾಃ ಸಾಧ್ಯಾಶ್ಚ ದೇವತಾಃ ॥೭॥**

"ಯುಧಿಷ್ಠಿರ! ಪೂರ್ವದಿಕ್ಕಿನಲ್ಲಿ ಕಾಣುತ್ತಿರುವ ಶ್ರೇಷ್ಠವಾದ ಈ ಮಂದರಪರ್ವತವು ಈ ಭೂಪ್ರದೇಶವನ್ನು ಆವರಿಸಿ ಸಮುದ್ರಪರ್ಯಂತವಾಗಿ ಹರಡಿ ವಿರಾಜಿಸುತ್ತಿರುವುದು. ಪರ್ವತಗಳಿಂದಲೂ, ಕಾನನಗಳಿಂದಲೂ, ವನಗಳಿಂದಲೂ ಪರಿಶೋಭಿಸುತ್ತಿರುವ ಈ ದಿಕ್ಕನ್ನು ಇಂದ್ರ-ವೈಶ್ರವಣರು ರಕ್ಷಣೆಮಾಡುತ್ತಾರೆ. ಸರ್ವಧರ್ಮಗಳನ್ನೂ ತಿಳಿದಿರುವ ಮನೀಷಿಗಳಾದ ಮಹರ್ಷಿಗಳು ಈ ಪ್ರದೇಶವನ್ನು ಮಹೇಂದ್ರನ ಮತ್ತು ವೈಶ್ರವಣನ ವಾಸಸ್ಥಾನವೆಂದು ಹೇಳುತ್ತಾರೆ. ಧರ್ಮಜ್ಞರಾದ ಋಷಿಗಳೂ, ಸಿದ್ಧರೂ, ಸಾಧ್ಯರೂ, ದೇವತೆಗಳೂ ಮತ್ತು ಭೂಲೋಕದ ಪ್ರಜೆಗಳೂ ಪೂರ್ವದಿಕ್ಕಿನಲ್ಲಿ ಉದಯಿಸುವ ಸೂರ್ಯನನ್ನು ಅರ್ಘ್ಯಪ್ರದಾನಾದಿಗಳಿಂದ ಉಪಾಸನೆಮಾಡುತ್ತಾರೆ."

ದಕ್ಷಿಣದಿಕ್ಕನ್ನು ನಿರ್ದೇಶಿಸಿ ಧೌಮ್ಯರು ಹೇಳುತ್ತಾರೆ :

**ಯಮಸ್ತು ರಾಜಾ ಧರ್ಮಜ್ಞಃ ಸರ್ವಪ್ರಾಣಭೃತಾಂ ಪ್ರಭುಃ ।**
**ಪ್ರೇತಸತ್ತ್ವಗತಿಂ ಹ್ಯೇನಾಂ ದಕ್ಷಿಣಾಮಾಶ್ರಿತೋ ದಿಶಮ್ ॥೮॥**

**ಏತತ್ಸಂಯಮನಂ ಪುಣ್ಯಮತೀವಾದ್ಭುತದರ್ಶನಮ್ ।**
**ಪ್ರೇತರಾಜಸ್ಯ ಭವನಮೃದ್ಧ್ಯಾ ಪರಮಯಾ ಯುತಮ್ ॥೯॥**

"ಧರ್ಮಜ್ಞನಾದ, ಸರ್ವಪ್ರಾಣಿಗಳಿಗೂ ಪ್ರಭುವಾದ ಯಮರಾಜನು ಸತ್ತುಹೋದ ಪ್ರಾಣಿಗಳು ಪ್ರೇತರೂಪಗಳನ್ನು ಧರಿಸಿ ಹೋಗಿ ಸೇರುವ ದಕ್ಷಿಣದಿಕ್ಕನ್ನು ಆಶ್ರಯಿಸಿರುತ್ತಾನೆ. ಇಲ್ಲಿ ಪರಮಾದ್ಭುತವಾಗಿ ಕಾಣುತ್ತಿರುವ, ಸಕಲಸಂಪತ್ಸಮೃದ್ಧಿಗಳಿಂದಲೂ ಕೂಡಿರುವ ಪುಣ್ಯತಮವಾದ ಸಂಯಮನ ವೆಂಬ ಹೆಸರಿನ ಭವನವೇ ಯಮಧರ್ಮದ ಅರಮನೆಯಾಗಿದೆ."

(ಪಶ್ಚಿಮದಿಕ್ಕನ್ನು ತೋರಿಸುತ್ತಾ ಧೌಮ್ಯರು ಹೇಳುತ್ತಾರೆ : )

**ಯಂ ಪ್ರಾಪ್ಯ ಸವಿತಾ ರಾಜನ್ಸತ್ಯೇನ ಪ್ರತಿತಿಷ್ಠತಿ ।**
**ಅಸ್ತಂ ಪರ್ವತರಾಜಾನಮೇತಮಾಹುರ್ಮನೀಷಿಣಃ ॥೧೦॥**

**ಏತಂ ಪರ್ವತರಾಜಾನಂ ಸಮುದ್ರಂ ಚ ಮಹೋದಧಿಮ್ ।**
**ಆವಸನ್ವರುಣೋ ರಾಜಾ ಭೂತಾನಿ ಪರಿರಕ್ಷತಿ ॥೧೧॥**

"ಇತ್ತ ನೋಡು, ಯುಧಿಷ್ಠಿರ! ಪಶ್ಚಿಮದಿಕ್ಕಿನಲ್ಲಿ ಕಾಣುತ್ತಿರುವ ಈ ಪರ್ವತಕ್ಕೆ ಅಸ್ತಾಚಲವೆಂದು ಹೆಸರು. ಸೂರ್ಯನು ಪೂರ್ವದಿಕ್ಕಿನಲ್ಲಿ ಉದಯಿಸಿ ಸಾಯಂಕಾಲವಾಗುತ್ತಲೇ ಈ ಅಸ್ತಾಚಲಕ್ಕೆ ಬಂದು ಪ್ರತಿಷ್ಠಿತ ನಾಗುತ್ತಾನೆ. ಈ ಪರ್ವತದಲ್ಲಿ ಸೂರ್ಯನು ಅಸ್ತನಾಗುವುದರಿಂದಲೇ ಮನೀಷಿಗಳು ಈ ಪರ್ವತವನ್ನು ಅಸ್ತಾಚಲವೆಂದೇ ಕರೆದಿದ್ದಾರೆ. ಮಹೋ ದಧಿಯೆಂಬ ಸಮುದ್ರದಲ್ಲಿ ಉಪಸ್ಥಿತನಾಗಿರುವ ವರುಣದೇವನು ಈ ಅಸ್ತಾ ಚಲವನ್ನೂ ಮತ್ತು ಸಕಲಪ್ರಾಣಿಗಳನ್ನೂ ರಕ್ಷಿಸುತ್ತಿರುತ್ತಾನೆ." (ಉತ್ತರ ದಿಕ್ಕಿಗೆ ತಿರುಗಿ ಆ ದಿಕ್ಕನ್ನು ನಿರ್ದೇಶಿಸುತ್ತಾ ಧೌಮ್ಯರು ಯುಧಿಷ್ಠಿರನಿಗೆ ಹೇಳುತ್ತಾರೆ :)

**ಉದೀಚೀಂ ದೀಪಯನ್ನೇಷ ದಿಶಂ ತಿಷ್ಠತಿ ವೀರ್ಯವಾನ್ ।**
**ಮಹಾಮೇರುರ್ಮಹಾಭಾಗ ಶಿವೋ ಬ್ರಹ್ಮವಿದಾಂ ಗತಿಃ ॥೧೨॥**

**ಯಸ್ಮಿನ್ಬ್ರಹ್ಮ ಸದಶ್ಚೈವ ಭೂತಾತ್ಮಾ ಚಾವತಿಷ್ಠತೇ ।**
**ಪ್ರಜಾಪತಿಃ ಸೃಜನ್ಸರ್ವಂ ಯತ್ಕಿಂಚಿಜ್ಜಗಮಾಗಮಮ್ ॥೧೩॥**

ಯಾನಾಹುರ್ಬ್ರಹ್ಮಣಃ ಪುತ್ರಾನ್ಮಾನಸಾನ್ದಕ್ಷಸಪ್ತಮಾನ್ ।
ತೇಷಾಮಪಿ ಮಹಾಮೇರುಃ ಶಿವಂ ಸ್ಥಾನಮನಾಮಯಮ್ ॥೧೪॥

ಅತ್ರೈವ ಪ್ರತಿತಿಷ್ಠನ್ತಿ ಪುನರೇವೋದಯನ್ತಿ ಚ ।
ಸಪ್ತ ದೇವರ್ಷಯಸ್ತಾತ ವಸಿಷ್ಠಪ್ರಮುಖಾಃ ಸದಾ ॥೧೫॥

ದೇಶಂ ವಿರಜಸಂ ಪಶ್ಯ ಮೇರೋಃ ಶಿಖರಮುತ್ತಮಮ್ ।
ಯತ್ರಾತ್ಮತೃಪ್ತೈರಧ್ಯಾಸ್ತೇ ದೇವೈಃ ಸಹ ಪಿತಾಮಹಃ ॥೧೬॥

"ಮಹಾಭಾಗನೇ! ಇಲ್ಲಿ ಕಾಣುತ್ತಿರುವ ಈ ಮಹಾಮೇರುಪರ್ವತವು ತನ್ನ ಪ್ರಭೆಯಿಂದ ಈ ಉತ್ತರದಿಕ್ಕನ್ನೇ ಪ್ರಕಾಶಗೊಳಿಸುತ್ತಿದೆ. ಈ ಪರ್ವತವು ಮಂಗಳಕರವಾದುದು. ಬ್ರಹ್ಮವಿದರಾದ ಮಹಾತ್ಮರಿಗೆ ಈ ಪರ್ವತವು ಆಶ್ರಯಸ್ಥಾನವಾಗಿದೆ. ಈ ಪರ್ವತದಲ್ಲಿಯೇ ಬ್ರಹ್ಮಸಭೆಯು ಸೇರುವುದು. ಸಂಪೂರ್ಣಬ್ರಹ್ಮಾಂಡಪಿಂಡಾಭಿಮಾನಿದೇವತೆಯಾದ, ಸಕಲಚರಾಚರ ಪ್ರಾಣಿಗಳ ಆತ್ಮಸ್ವರೂಪನಾದ ಬ್ರಹ್ಮನು ಸಕಲಸ್ಥಾವರ-ಜಂಗಮಗಳನ್ನೂ ಸೃಷ್ಟಿ ಮಾಡುತ್ತಾ ಇಲ್ಲಿಯೇ ಇರುತ್ತಾನೆ. ದಕ್ಷನೇ ಮೊದಲಾದ ಏಳು ಮಂದಿ ಬ್ರಹ್ಮಮಾನಸಪುತ್ರರಿಗೂ ಮಂಗಳಕರವಾದ, ಆಧಿ-ವ್ಯಾಧಿರಹಿತವಾದ ಈ ಮೇರುಪರ್ವತವೇ ವಾಸಸ್ಥಾನವಾಗಿರುವುದು. ವಸಿಷ್ಠಪ್ರಮುಖರಾದ ಏಳು ಮಂದಿ ಸಪ್ತರ್ಷಿಗಳೂ ಈ ಪರ್ವತದಲ್ಲಿಯೇ ಅಸ್ತರಾಗಿ ಪುನಃ ಇಲ್ಲಿಂದಲೇ ಉದಯಿಸುತ್ತಾರೆ. ಧೂಳಿನಿಂದ ರಹಿತವಾದ, ಉತ್ತಮೋತ್ತಮವಾದ ಈ ಮಹಾಮೇರುವಿನ ಶಿಖರವನ್ನು ನೋಡು, ಯುಧಿಷ್ಠಿರ! ಇಲ್ಲಿ ಬ್ರಹ್ಮನು ದೇವತೆಗಳಿಂದಲೂ ಆತ್ಮತೃಪ್ತರಿಂದಲೂ ಕೂಡಿ ಆತ್ಮೋಪಾಸನೆಯನ್ನು ಮಾಡುತ್ತಾ ಕುಳಿತಿದ್ದಾನೆ.

ಯಮಾಹುಃ ಸರ್ವಭೂತಾನಾಂ ಪ್ರಕೃತೇಃ ಪ್ರಕೃತಿಂ ಧ್ರುವಮ್ ।
ಅನಾದಿನಿಧನಂ ದೇವಂ ಪ್ರಭುಂ ನಾರಾಯಣಂ ಪರಮ್ ॥೧೭॥

ಬ್ರಹ್ಮಣಃ ಸದನಾತ್ತಸ್ಯ ಪರಂ ಸ್ಥಾನಂ ಪ್ರಕಾಶತೇ ।
ದೇವಾ ಅಪಿ ನ ಪಶ್ಯನ್ತಿ ಸರ್ವತೇಜೋಮಯಂ ಶುಭಮ್ ॥೧೮॥

ಅತ್ಯರ್ಕಾನಲದೀಪ್ತಂ ತತ್ ಸ್ಥಾನಂ ವಿಷ್ಣೋರ್ಮಹಾತ್ಮನಃ ।
ಸ್ವಯೈವ ಪ್ರಭಯಾ ರಾಜನ್ದುಷ್ಪ್ರೇಕ್ಷ್ಯಂ ದೇವದಾನವೈಃ ॥೧೯॥

ಪ್ರಾಚ್ಯಾಂ ನಾರಾಯಣಸ್ಥಾನಂ ಮೇರಾವತಿವಿರಾಜತೇ ।
ಯತ್ರ ಭೂತೇಶ್ವರಸ್ತಾತ ಸರ್ವಪ್ರಕೃತಿರಾತ್ಮಭೂಃ ॥೨೦॥

ಭಾಸಯನ್ಸರ್ವಭೂತಾನಿ ಸುಶ್ರಿಯಾಭಿವಿರಾಜತೇ ।
ನಾತ್ರ ಬ್ರಹ್ಮರ್ಷಯಸ್ತಾತ ಕುತ ಏವ ಮಹರ್ಷಯಃ ॥೨೧॥

ಪ್ರಾಪ್ನುವನ್ತಿ ಗತಿಂ ಹ್ಯೇತಾಂ ಯತೀನಾಂ ಭಾವಿತಾತ್ಮನಾಮ್ ।
ನ ತಂ ಜ್ಯೋತೀಂಷಿ ಸರ್ವಾಣಿ ಪ್ರಾಪ್ಯ ಭಾಸನ್ತಿ ಪಾಣ್ಡವ ॥೨೨॥

ಸ್ವಯಂ ಪ್ರಭುರಚಿನ್ತ್ಯಾತ್ಮಾ ತತ್ರ ಹ್ಯತಿವಿರಾಜತೇ ।
ಯತಯಸ್ತತ್ರ ಗಚ್ಛನ್ತಿ ಭಕ್ತ್ಯಾ ನಾರಾಯಣಂ ಹರಿಮ್ ॥೨೩॥

ಪರೇಣ ತಪಸಾ ಯುಕ್ತಾ ಭಾವಿತಾಃ ಕರ್ಮಭಿಃ ಶುಭೈಃ ।
ಯೋಗಸಿದ್ಧಾ ಮಹಾತ್ಮಾನಸ್ತಮೋಮೋಹವಿವರ್ಜಿತಾಃ ॥೨೪॥

ತತ್ರ ಗತ್ವಾ ಪುನರ್ನೇಮಂ ಲೋಕಮಾಯಾನ್ತಿ ಭಾರತ ।
ಸ್ವಯಮ್ಭುವಂ ಮಹಾತ್ಮಾನಂ ದೇವದೇವಂ ಸನಾತನಮ್ ॥೨೫॥

ಸ್ಥಾನಮೇತನ್ಮಹಾಭಾಗ ಧ್ರುವಮಕ್ಷರಮವ್ಯಯಮ್ ।
ಈಶ್ವರಸ್ಯ ಸದಾ ಹ್ಯೇತತ್ಪ್ರಣಮಾತ್ರ ಯುಧಿಷ್ಠಿರ ॥೨೬॥

"ಯುಧಿಷ್ಠಿರ! ಯಾವನನ್ನು ಸಕಲರೂ ತ್ರಿಗುಣಾತ್ಮಿಕೆಯಾದ ಪ್ರಕೃತಿಗೂ, ಸರ್ವಭೂತಗಳಿಗೂ ಮೂಲಕಾರಣನೆಂದು ಹೇಳುವರೋ ಮತ್ತು ಯಾವನನ್ನು ಆದಿ-ಮಧ್ಯಾಂತರಹಿತನೆಂದೂ, ಪ್ರಭುವೆಂದೂ, ಪರಮಶ್ರೇಷ್ಠನಾದವನೆಂದೂ, ನಾರಾಯಣನೆಂದೂ ಹೇಳುವರೋ–ಅಂತಹ ಪರಾತ್ಪರನಾದ ಶ್ರೀಮನ್ನಾರಾಯಣನ ಸನ್ನಿಧಾನವು ಬ್ರಹ್ಮನ ಸದನಕ್ಕಿಂತಲೂ ಉಚ್ಚಸ್ಥಾನದಲ್ಲಿ ವಿರಾಜಮಾನವಾಗಿದೆ. ತೇಜೋಮಯನಾದ, ಶುಭದಾಯಕನಾದ ಆ ಮಹಾನುಭಾವನ ಸ್ವರೂಪವನ್ನು ತಿಳಿಯಲು ಅಥವಾ ಅವನನ್ನು ಸಂದರ್ಶಿಸಲು ದೇವತೆಗಳು ಕೂಡ ಅಸಮರ್ಥರು. ಮಹಾತ್ಮನಾದ ಮಹಾವಿಷ್ಣುವಿನ ಮಹಾಸನ್ನಿಧಾನವು ಸೂರ್ಯಾಗ್ನಿ ಪ್ರಭೆಯನ್ನೂ ಮೀರಿಸುವ ಜಾಜ್ವಲ್ಯಮಾನವಾದ ಮಹಾಪ್ರಭೆಯಿಂದ ಕೂಡಿದುದಾಗಿ, ದೇವ-ದಾನವರಿಂದಲೂ ನೋಡಲು ದುಸ್ಸಾಧ್ಯವಾಗಿರು

ವುದು. ಸಕಲಭೂತೇಶ್ವರನಾದ, ಸಕಲಪ್ರಕೃತಿಗಳ ಆತ್ಮಗಳಲ್ಲಿಯೂ ಉಪಸ್ಥಿತನಾಗಿರುವ ಶ್ರೀಮನ್ನಾರಾಯಣನ ಮಹಾಸನ್ನಿಧಾನವು ಮೇರು ಪರ್ವತದ ಪೂರ್ವದಿಗ್ಭಾಗದಲ್ಲಿ (ಚತುರ್ಮುಖಬ್ರಹ್ಮನ ಸ್ಥಾನಕ್ಕಿಂತಲೂ ಮೇಲೆ) ವಿರಾಜಮಾನವಾಗಿದೆ. ಆ ಮಹಾಸನ್ನಿಧಾನವು ಸರ್ವಭೂತಗಳ ಮೇಲೂ ತನ್ನ ದಿವ್ಯಪ್ರಭೆಯನ್ನು ಬೀರುತ್ತಾ ದಿವ್ಯಕಾಂತಿಯಿಂದ ವಿರಾಜಮಾನವಾಗಿ ಇಲ್ಲಿ ಉಪಸ್ಥಿತವಾಗಿರುವುದು. ಯತಿಗಳಿಂದ ಮಾತ್ರವೇ ನೋಡಲು ಸಾಧ್ಯವಾಗುವ ಪರಮಪದಕ್ಕೊಯ್ಯುವ ಈ ಮಾರ್ಗದಲ್ಲಿ ಬ್ರಹ್ಮರ್ಷಿಗಳೇ ಹೋಗಲಾರರೆಂದ ಮೇಲೆ ಮಹರ್ಷಿಗಳ ವಿಷಯವನ್ನು ಹೇಳಬೇಕಾಗಿಯೇ ಇಲ್ಲ. ಮಹಾವಿಷ್ಣುವಿನ ಮಹಾಸನ್ನಿಧಾನಕ್ಕೆ ಯತಿಗಳು ಮಾತ್ರವೇ ಹೋಗಬಲ್ಲರು. ಸೂರ್ಯನ ಮುಂದೆ ದೀಪವು ಪ್ರಕಾಶಿಸ ಲಾರದು. ಸ್ವಯಂಪ್ರಕಾಶನಾದ ನಾರಾಯಣನ ಮುಂದೆ ಯಾವ ತೇಜಸ್ಸೂ ಪ್ರಕಾಶಿಸುವುದಿಲ್ಲ. ಸ್ವಯಂಪ್ರಭುವಾಗಿರುವ, ಅಚಿಂತ್ಯಾತ್ಮನಾಗಿರುವ ಮಹಾ ವಿಷ್ಣುವು ಮೇರುಪರ್ವತದ ಪೂರ್ವದಿಕ್ಕಿನಲ್ಲಿ ಮಹಾಪ್ರಭೆಯಿಂದ ಪ್ರಕಾಶಿ ಸುತ್ತಿರುತ್ತಾನೆ. ಶ್ರೇಷ್ಠವಾದ ತಪಸ್ಸನ್ನುಮಾಡಿ ಅದರ ಫಲವನ್ನು ಪಡೆದಿರುವ, ಶುಭಕರ್ಮಗಳನ್ನು ಮಾಡಿ ಪವಿತ್ರಾತ್ಮರಾಗಿರುವ, ಯೋಗಸಿದ್ಧರಾದ, ಮಹಾತ್ಮರಾದ, ಕೋಪ-ಮೋಹವಿವರ್ಜಿತರಾದ, ಭಗವದ್ಭಕ್ತಿಯುಕ್ತರಾದ ಯತಿಗಳು ಮಾತ್ರವೇ ಅಪಾರವಾದ ಭಕ್ತಿಯಿಂದ ಕೂಡಿದವರಾಗಿ ಶ್ರೀಮನ್ನಾ ರಾಯಣನ ಪರಮಪದವನ್ನು ಸೇರುತ್ತಾರೆ. ಸ್ವಯಂಪ್ರಭುವಾದ, ಮಹಾತ್ಮ ನಾದ, ದೇವದೇವನಾದ, ಸನಾತನನಾದ ಮಹಾವಿಷ್ಣುವನ್ನು ಆಶ್ರಯಿಸಿ ಶಾಶ್ವತವಾದ, ಕ್ಷಯರಹಿತವಾದ, ಅವ್ಯಯವಾದ ಈ ಪರಮಪದವನ್ನು ಸೇರಿ ದವರಿಗೆ ಪುನರ್ಜನ್ಮವಿಲ್ಲ. ಇಂತಹ ಸರ್ವೇಶ್ವರನ ಸ್ಥಾನವಾಗಿರುವ ಪರಮ ಪದಕ್ಕೆ ನಮಸ್ಕರಿಸು, ಧರ್ಮಜ!

**ಏನಂ ತ್ವಹರಹರ್ಮೇರುಂ ಸೂರ್ಯಾಚನ್ದ್ರಮಸೌ ಧ್ರುವಮ್ ।**
**ಪ್ರದಕ್ಷಿಣಮುಪಾವೃತ್ಯ ಕುರುತಃ ಕುರುನನ್ದನ ॥೨೭॥**

**ಜ್ಯೋತೀಂಷಿ ಚಾಪ್ಯಶೇಷೇಣ ಸರ್ವಾಣ್ಯನಘ ಸರ್ವತಃ ।**
**ಪರಿಯಾನ್ತಿ ಮಹಾರಾಜ ಗಿರಿರಾಜಂ ಪ್ರದಕ್ಷಿಣಮ್ ॥೨೮॥**

ಇಂತಹ ಪರಮಪದವನ್ನು ಹೊಂದಿರುವ ಈ ಮೇರುಪರ್ವತವನ್ನು ಸೂರ್ಯ-ಚಂದ್ರರು ಅನುದಿನವೂ ತಿರುಗುತ್ತಾ ಪ್ರದಕ್ಷಿಣೆಮಾಡುತ್ತಿರುತ್ತಾರೆ. ಇತರ ನಕ್ಷತ್ರ-ಗ್ರಹಗಳೂ ತಮ-ತಮಗೆ ನಿರ್ದಿಷ್ಟವಾಗಿರುವ ಮಾರ್ಗಗಳನ್ನನುಸರಿಸಿ ಈ ಮೇರುಪರ್ವತವನ್ನು ಪ್ರದಕ್ಷಿಣೆಮಾಡುತ್ತಿರುತ್ತವೆ.

**ಏಷಂ ಜ್ಯೋತೀಂಷಿ ಸರ್ವಾಣಿ ಪ್ರಕರ್ಷನ್ಭಗವಾನಪಿ ।**
**ಕುರುತೇ ವಿತಮಸ್ಕರ್ಮಾ ಆದಿತ್ಯೋಽಭಿಪ್ರದಕ್ಷಿಣಮ್ ॥೨೯॥**

ಪರಮಪೂಜ್ಯನಾದ ಸೂರ್ಯದೇವನು ತನ್ನ ಕಿರಣಗಳಿಂದ ಕತ್ತಲೆಯನ್ನು ಹೋಗಲಾಡಿಸುವುದೇ ಅಲ್ಲದೆ ಇತರ ನಕ್ಷತ್ರ-ಗ್ರಹ-ತಾರೆಗಳ ಬೆಳಕನ್ನೂ ತನ್ನ ಅತ್ಯದ್ಭುತವಾದ ತೇಜಸ್ಸಿನಿಂದ ನಿಯಂತ್ರಿಸುತ್ತಾ ಈ ಮೇರುಪರ್ವತವನ್ನು ಸುತ್ತುತ್ತಿರುತ್ತಾನೆ.

**ಅಸ್ತಂ ಪ್ರಾಪ್ಯ ತತಃ ಸಂಧ್ಯಾಮತಿಕ್ರಮ್ಯ ದಿವಾಕರಃ ।**
**ಉದೀಚೀಂ ಭಜತೇ ಕಾಷ್ಠಾಂ ದಿಶಮೇಷ ವಿಭಾವಸುಃ ॥೩೦॥**

**ಸ ಮೇರುಮನುವೃತ್ತಃ ಸನ್ಪುನರ್ಗಚ್ಛತಿ ಪಾಣ್ಡವ ।**
**ಪ್ರಾಙ್ಮುಖಃ ಸವಿತಾ ದೇವಃ ಸರ್ವಭೂತಹಿತೇ ರತಃ ॥೩೧॥**

ಸಂಧ್ಯಾಕಾಲವಾಗುತ್ತಲೇ ಅಸ್ತಾಚಲದಲ್ಲಿ ಅಸ್ತಂಗತನಾಗುವ ವಿಭಾವಸುವು ಮೇರುಪರ್ವತವನ್ನನುಸರಿಸಿ ಉತ್ತರದಿಕ್ಕಿಗೆ ಹೋಗುತ್ತಾನೆ. ಸರ್ವಭೂತಗಳಿಗೂ ಹಿತಕರನಾದ ಸೂರ್ಯನು ಪುನಃ ಮೇರುಪರ್ವತವನ್ನೇ ಅನುಸರಿಸಿ, ಸುತ್ತುತ್ತಾ ಪೂರ್ವದಿಕ್ಕಿನಲ್ಲಿ ಉದಯಿಸಿ ಪ್ರಪಂಚಕ್ಕೆ ಬೆಳಕನ್ನು ನೀಡುತ್ತಾನೆ. (ಮೇರುಪರ್ವತವನ್ನು ಸುತ್ತುತ್ತಿರುವ ಕಾಲದಲ್ಲಿ ಯಾವ ಸ್ಥಳಕ್ಕೆ ಬಂದಾಗ ಸೂರ್ಯನು ಕಾಣುವುದಿಲ್ಲವೋ ಆ ಸ್ಥಳಕ್ಕೆ ಅಸ್ತಾಚಲವೆಂದು ಹೆಸರು. ಈ ಪ್ರಪಂಚಕ್ಕೆ ಸೂರ್ಯನು ಕಾಣದಿದ್ದರೂ ಅವನು ಮೇರು ಪರ್ವತದ ಸುತ್ತಲೂ ಸುತ್ತುತ್ತಲೇ ಇರುತ್ತಾನೆ. ಮೇರುಪರ್ವತವನ್ನನುಸರಿಸಿ ಉತ್ತರಕ್ಕೆ ಹೋಗುವಾಗ ಸೂರ್ಯನು ಪ್ರಪಂಚದ ಕೆಲವು ಭಾಗಗಳಲ್ಲಿ ಕಾಣಿಸುವುದಿಲ್ಲ. ಆಗ ರಾತ್ರಿಯಾಗಿರುತ್ತದೆ. ಮತ್ತೆ ಕೆಲವು ಭಾಗಗಳಲ್ಲಿ ಅವನು ಉದಯಿಸಿ ಪ್ರಜ್ವಲಿಸುತ್ತಿರುತ್ತಾನೆ. ಮೇರುಪರ್ವತವನ್ನು ಪ್ರದಕ್ಷಿಣೆ

ಮಾಡುತ್ತಾ ಪುನಃ ಪೂರ್ವದಿಕ್ಕಿಗೆ ತಿರುಗಿದಾಗ ಕತ್ತಲಾಗಿರುವ ವಿಭಾಗವಾದ ಪೂರ್ವದಿಕ್ಕಿನಲ್ಲಿ ಸೂರ್ಯನು ಉದಯಿಸಿದಂತಾಗುತ್ತದೆ.)

**ಸ ಮಾಸಾನ್ವಿಭಜನ್ಕಾಲೇ ಬಹುಧಾ ಪರ್ವಸಂಧಿಷು ।**
**ತಥೈವ ಭಗವಾನ್ಸೋಮೋ ನಕ್ಷತ್ರೈಃ ಸಹ ಗಚ್ಛತಿ ॥೩೨॥**

ಅದೇ ರೀತಿಯಲ್ಲಿ ಚಂದ್ರನು ಕೂಡ ನಕ್ಷತ್ರಗಳ ಸಂಗಡ ಮೇರು ಪರ್ವತವನ್ನು ಸುತ್ತುತ್ತಾ ಪರ್ವಸಂಧಿಕಾಲಗಳಲ್ಲಿ ಚೈತ್ರಾದಿ ಮಾಸವಿಭಾಗ ಗಳನ್ನು ಮಾಡುತ್ತಾ ಸಂಚರಿಸುತ್ತಿರುವನು.

**ಏವಮೇತಂ ತ್ವತಿಕ್ರಮ್ಯ ಮಹಾಮೇರುಮತನ್ದ್ರಿತಃ ।**
**ಭಾವಯನ್ಸರ್ವಭೂತಾನಿ ಪುನರ್ಗಚ್ಛತಿ ಮನ್ದರಮ್ ॥೩೩॥**

ಚಂದ್ರನು ಒಂದೇ ನಿಯತವಾದ ಮಾರ್ಗವನ್ನು ಹಿಡಿದು ಪ್ರಪಂಚದ ಪ್ರಾಣಿಗಳನ್ನು ಪೋಷಣೆಮಾಡುತ್ತಾ ನಿಯತಕಾಲದಲ್ಲಿ ಮೇರುಪರ್ವತವನ್ನು ಅತಿಕ್ರಮಿಸಿ ಮಂದರಪರ್ವತಕ್ಕೆ ಹೋಗುತ್ತಾನೆ. ಮಂದರಪರ್ವತದಿಂದ ಪುನಃ ನಿಯತಕಾಲದಲ್ಲಿ ಹೊರಟು ಮೇರುಪರ್ವತವನ್ನು ಸೇರುತ್ತಾನೆ.

**ತಥಾ ತಮಿಸ್ರಹಾ ದೇವೋ ಮಯೂಖೈರ್ಭಾವಯಞ್ಜಗತ್ ।**
**ಮಾರ್ಗಮೇತದಸಮ್ಬಾಧಮಾದಿತ್ಯಃ ಪರಿವರ್ತತೇ ॥೩೪॥**

ಅದೇ ರೀತಿಯಲ್ಲಿ ಕತ್ತಲೆಯನ್ನು ಹೋಗಲಾಡಿಸುವ ದೇವದೇವನಾದ ಸೂರ್ಯನು ತನ್ನ ಕಿರಣಗಳಿಂದ ಪ್ರಪಂಚದ ಪ್ರಾಣಿಗಳನ್ನು ಸಂರಕ್ಷಣೆ ಮಾಡುತ್ತಾ ವಿಶಾಲವಾದ ಈ ಮಾರ್ಗದಲ್ಲಿಯೇ ನಿರಂತರವೂ ಸಂಚರಿಸು ತ್ತಿರುತ್ತಾನೆ.

(ಚಂದ್ರ-ಸೂರ್ಯ-ಗ್ರಹ-ತಾರೆಗಳ ಸುವ್ಯವಸ್ಥಿತವಾದ ಚಲನೆ ಯಿಂದಲೇ ಪ್ರಪಂಚದಲ್ಲಿರುವ ಸಕಲಪ್ರಾಣಿಗಳೂ ಜೀವಿಸಲು ಸಾಧ್ಯವಾಗಿದೆ.)

**ಸಿಸೃಕ್ಷುಃ ಶಿಶಿರಾಣ್ಯೇವ ದಕ್ಷಿಣಾಂ ಭಜತೇ ದಿಶಮ್ ।**
**ತತಃ ಸರ್ವಾಣಿ ಭೂತಾನಿ ಕಾಲೋಽಭ್ಯಾರ್ಚ್ಛತಿ ಶೈಶಿರಃ ॥೩೫॥**

ಸೂರ್ಯಭಗವಂತನು ಶೀತಲವಾತಾವರಣವನ್ನು ಸೃಷ್ಟಿಮಾಡುವ ಉದ್ದೇಶದಿಂದಲೇ ದಕ್ಷಿಣದಿಕ್ಕಿನ ಆಶ್ರಯವನ್ನು ಪಡೆಯುತ್ತಾನೆ. ಆ

ಸಮಯದಲ್ಲಿ ಸಕಲಪ್ರಾಣಿಗಳೂ ಶೀತಲವಾತಾವರಣವನ್ನು ಅನುಭವಿಸುತ್ತವೆ. ಆ ಕಾಲವನ್ನು ಶಿಶಿರಋತುವೆಂದು ಕರೆಯುತ್ತಾರೆ.

**ಸ್ಥಾವರಾಣಾಂ ಚ ಭೂತಾನಾಂ ಜಙ್ಗಮಾನಾಂ ಚ ತೇಜಸಾ ।**
**ತೇಜಾಂಸಿ ಸಮುಪಾದತ್ತೇ ನಿವೃತ್ತಃ ಸ ವಿಭಾವಸುಃ ॥೩೬॥**

ದಕ್ಷಿಣದಿಕ್ಕಿನಿಂದ ಪ್ರತಿನಿವೃತ್ತನಾದ ಸೂರ್ಯನು ತನ್ನ ಅತಿತೀಕ್ಷ್ಣವಾದ ಕಿರಣಗಳಿಂದ ಪ್ರಪಂಚದಲ್ಲಿರುವ ಸ್ಥಾವರ-ಜಂಗಮಗಳಿಂದ ತೇಜಸ್ಸನ್ನು ಹೀರಿಕೊಳ್ಳುತ್ತಾನೆ. ಆ ಕಾಲವನ್ನು ಗ್ರೀಷ್ಮರ್ತುವೆಂದು ಕರೆಯುತ್ತಾರೆ.

**ತತಃ ಸ್ವೇದಕ್ಲಮೌ ತನ್ದ್ರೀ ಗ್ಲಾನಿಶ್ಚ ಭಜತೇ ನರಾನ್ ।**
**ಪ್ರಾಣಿಭಿಃ ಸತತಂ ಸ್ವಪ್ನೋ ಹ್ಯಭೀಕ್ಷ್ಣಂ ಚ ನಿಷೇವ್ಯತೇ ॥೩೭॥**

**ಏವಮೇತದನಿರ್ದೇಶ್ಯಂ ಮಾರ್ಗಮಾವೃತ್ಯ ಭಾನುಮಾನ್ ।**
**ಪುನಃ ಸೃಜತಿ ವರ್ಷಾಣಿ ಭಗವಾನ್ಭಾವಯನ್ಪ್ರಜಾಃ ॥೩೮॥**

ಆ ಕಾಲದಲ್ಲಿ ಜನರು ಬೆವರಿನಿಂದ ತೋಯ್ದುಹೋಗುತ್ತಾರೆ. ಆಯಾಸಪಡುತ್ತಾರೆ. ಯಾವಾಗಲೂ ತೂಕಡಿಸುತ್ತಿರುತ್ತಾರೆ. ಪ್ರಪಂಚಕ್ಕೆ ತ್ರಾಸದಾಯಕವಾದ ಮಾರ್ಗದಲ್ಲಿ ಮೇರುಪರ್ವತವನ್ನನುಸರಿಸಿ ಸ್ವಲ್ಪ ದೂರ ಪ್ರಯಾಣಮಾಡಿ ಅನಂತರದಲ್ಲಿ ಪ್ರಪಂಚಕ್ಕೆಲ್ಲಾ ಹಿತವುಂಟಾಗುವ ರೀತಿಯಲ್ಲಿ ಸೂರ್ಯನು ಮಳೆಗರೆಯುತ್ತಾನೆ.

**ವೃಷ್ಟಿಮಾರುತಸಂತಾಪೈಃ ಸುಖೈಃ ಸ್ಥಾವರಜಙ್ಗಮಾನ್ ।**
**ವರ್ಧಯನ್ಸುಮಹಾತೇಜಾಃ ಪುನಃ ಪ್ರತಿನಿವರ್ತತೇ ॥೩೯॥**

ಯಥೇಚ್ಛವಾಗಿ ಮಳೆಯನ್ನೂ, ಗಾಳಿಯನ್ನೂ, ತಾಪವನ್ನೂ ವೃದ್ಧಿಪಡಿಸುವುದರ ಮೂಲಕ ಪ್ರಪಂಚದ ಜನರ ಸುಖವನ್ನು ವೃದ್ಧಿಪಡಿಸುತ್ತಾ ಸೂರ್ಯನು ತನ್ನ ನಿಯಮಿತಮಾರ್ಗದಲ್ಲಿ ಮುಂದುವರಿಯುತ್ತಾನೆ.

**ಏವಮೇಷ ಚರನ್ಪಾರ್ಥ ಕಾಲಚಕ್ರಮತನ್ದ್ರಿತಃ ।**
**ಪ್ರಕರ್ಷನ್ಸರ್ವಭೂತಾನಿ ಸವಿತಾ ಪರಿವರ್ತತೇ ॥೪೦॥**

ಯುಧಿಷ್ಠಿರ! ಇದೇ ರೀತಿಯಲ್ಲಿ ಸ್ವಲ್ಪವಾದರೂ ಅಲಸಿಕೆಯಿಲ್ಲದೇ

ಸರ್ವಪ್ರಾಣಿಗಳನ್ನೂ ಆಕರ್ಷಿಸುತ್ತಾ ಮತ್ತು ತನ್ನ ತೇಜಸ್ಸಿನಿಂದ ಸರ್ವ ಪ್ರಾಣಿಗಳನ್ನೂ ಪೋಷಿಸುತ್ತಾ ಸೂರ್ಯನು ಕಾಲಚಕ್ರವನ್ನನುಸರಿಸಿ ಮೇಲೆ ಹೇಳಿದ ರೀತಿಯಲ್ಲಿ ಸುತ್ತುತ್ತಿರುತ್ತಾನೆ.

**ಸಂತತಾ ಗತಿರೇತಸ್ಯ ನೃಪ ತಿಷ್ಠತಿ ಪಾಣ್ಡವ ।**
**ಆದಾಯೈವ ತು ಭೂತಾನಾಂ ತೇಜೋ ವಿಸೃಜತೇ ಪುನಃ ॥೪೧॥**

**ವಿಭಜನ್ಸರ್ವಭೂತಾನಾಮಾಯುಃ ಕರ್ಮ ಚ ಭಾರತ ।**
**ಅಹೋರಾತ್ರಂ ಕಲಾಃ ಕಾಷ್ಠಾಃ ಸೃಜತ್ಯೇಷ ಸದಾ ವಿಭುಃ ॥೪೨॥**

ಸೂರ್ಯನು ಯಾವಾಗಲೂ ಸಂಚರಿಸುತ್ತಲೇ ಇರುತ್ತಾನೆ. ಅವನಿಗೆ ಬಿಡುವೆಂಬುದೇ ಇಲ್ಲ. ಒಮ್ಮೆಯಾದರೂ ಅವನು ವಿಶ್ರಮಿಸಿಕೊಳ್ಳುವುದಿಲ್ಲ. ಪ್ರಪಂಚದಲ್ಲಿರುವ ಸಕಲಚರಾಚರಪ್ರಾಣಿಗಳ ತೇಜಸ್ಸನ್ನು ಅಪಹರಿಸು ವವನೂ, ಪುನಃ ಪ್ರಾಣಿಗಳಿಗೆ ತೇಜಸ್ಸನ್ನು ಕೊಡತಕ್ಕವನೂ ಸೂರ್ಯನೇ. ಪ್ರಪಂಚದ ಸಕಲಪ್ರಾಣಿಗಳ ಆಯುಷ್ಯವನ್ನೂ ಮತ್ತು ಕರ್ಮಗಳನ್ನೂ ವಿಭಾಗಮಾಡತಕ್ಕವನ್ನೂ ಸೂರ್ಯನೇ ಆಗಿರುತ್ತಾನೆ. ಹಗಲು, ರಾತ್ರಿ, ಮುಹೂರ್ತ, ಕಲೆ, ಕಾಷ್ಠಾ, ಕ್ಷಣ, ಪರ್ವ–ಇವುಗಳನ್ನು ಅನುಸ್ಯೂತವಾಗಿ ಸೃಷ್ಟಿಮಾಡುತ್ತಾ ಸೂರ್ಯದೇವನು ಈ ಪ್ರಪಂಚವನ್ನು ರಕ್ಷಣೆಮಾಡುತ್ತಿರು ತ್ತಾನೆ." ಹೀಗೆಂದು ಧೌಮ್ಯರು ಧರ್ಮಜನಿಗೆ ಸೂರ್ಯ-ಚಂದ್ರರ ಗತಿ ಯನ್ನೂ, ಪ್ರಭಾವವನ್ನೂ ಮತ್ತು ಪರಮಪದದ ರಹಸ್ಯವಿಷಯವನ್ನೂ ಹೇಳಿದರು. ಜನಮೇಜಯ! ಧೌಮ್ಯರ ಮಾತುಗಳನ್ನು ಕೇಳಿ ಯುಧಿಷ್ಠಿರನು ಆನಂದಭರಿತನಾದನು."

೧೬೩ನೆಯ ಅಧ್ಯಾಯವು ಮುಗಿಯಿತು.

೧೬೪ನೆಯ ಅಧ್ಯಾಯ ಯಕ್ಷಯುದ್ಧಪರ್ವ (ಮುಂದುವರಿದಿದೆ.)

## ಪಾಂಡವರಿಗೆ ಅರ್ಜುನನ ವಿಷಯದಲ್ಲಿ ಕಾತರ : ದೇವಲೋಕದಿಂದ ಅರ್ಜುನನ ಪ್ರಯಾಣ

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಗಂಧಮಾದನಪರ್ವತದಲ್ಲಿ ಕುಬೇರನ ಅನುಜ್ಞೆ

ಯನ್ನು ಪಡೆದು ವಾಸಮಾಡುತ್ತಿದ್ದ, ಮಹಾತ್ಮರಾದ ಸದ್ವೃತ್ತಿಯಿಂದ ಕಾಲಕಳೆಯುತ್ತಿದ್ದ, ಅರ್ಜುನನ ಆಗಮನದಲ್ಲಿಯೇ ಉತ್ಸುಕರಾಗಿದ್ದ ಪಾಂಡವರಿಗೆ ರಮಣೀಯವಾದ ಆ ಪರ್ವತಶಿಖರವನ್ನೂ ಮತ್ತು ಸೊಬಗನ್ನೂ ನೋಡಿ ಅಮಿತಾನಂದವುಂಟಾಯಿತು. ವೀರ್ಯವಂತರಾದ, ಸತ್ಸಂಕಲ್ಪರಾದ ತೇಜಸ್ವಿಗಳಾದ, ಸತ್ಯಪ್ರತಿಜ್ಞರಾದ ಮತ್ತು ಸ್ಥಿರಮನಸ್ಕರಾದ ಪಾಂಡವರನ್ನು ಸಂದರ್ಶಿಸಲು ಅನುದಿನವೂ ಗಂಧರ್ವರೂ–ಮಹರ್ಷಿಗಳೂ ಬಂದು ಹೋಗುತ್ತಿದ್ದರು.

ಮರುದ್ಗಣಗಳು ಸ್ವರ್ಗಕ್ಕೆ ಹೋಗಿ ಸಂತೋಷಿಸುವಂತೆ–ಪಾಂಡವರು ಫಲ-ಪುಷ್ಪಭರಿತವಾಗಿದ್ದ, ವೃಕ್ಷ-ಲತೆಗಳಿಂದ ಅಲಂಕೃತವಾಗಿದ್ದ ಆ ಗಂಧಮಾದನಪರ್ವತವನ್ನು ಸೇರಿ ಆನಂದಪರವಶರಾದರು. ಶೋಭಾಯಮಾನವಾಗಿದ್ದ ಆ ಪರ್ವತದ ವನಪ್ರದೇಶದಲ್ಲಿ ಪುಷ್ಪಲತೆಗಳ ಮಧ್ಯದಲ್ಲಿ ನವಿಲು-ಹಂಸಗಳು ಇಂಪಾಗಿ ನಿನಾದಮಾಡುತ್ತಿದ್ದುವು. ಸುಂದರವಾದ ಪರ್ವತದ ಶಿಖರಗಳಲ್ಲಿ ಮತ್ತು ತಪ್ಪಲುಗಳಲ್ಲಿ ಪಾಂಡವರು ಸಂಚರಿಸುತ್ತಿದ್ದಾಗ ಪಕ್ಷಿಗಳ ಆ ನಿನಾದವನ್ನು ಕೇಳಿ ಸಂತೋಷಭರಿತರಾಗುತ್ತಿದ್ದರು. ಗಂಧಮಾದನ ಪರ್ವತದಲ್ಲಿ ಸಾಕ್ಷಾತ್ ಕುಬೇರನಿಂದಲೇ ವಿಹಾರಾರ್ಥವಾಗಿ ನಿರ್ಮಿತವಾಗಿದ್ದ ಅನೇಕಸರೋವರಗಳಿದ್ದುವು. ಆ ಸರೋವರಗಳ ಸುತ್ತಲೂ ಲತಾ-ವೃಕ್ಷಗಳಿದ್ದು ಸುಗಂಧಯುಕ್ತವಾದ ಪುಷ್ಪಗುಚ್ಛಗಳಿಂದ ಕೂಡಿದ್ದುವಲ್ಲದೇ- ಸರೋವರಗಳಲ್ಲಿ ಪದ್ಮ-ತಾಮರಸ-ಕುಶೇಶಯಗಳ ಬಳ್ಳಿಗಳಿದ್ದು, ಅವುಗಳ ನಡುವೆ ಕಾದಂಬ-ಕಾರಂಡವ-ರಾಜಹಂಸಗಳು ಕರ್ಣಾನಂದಕರವಾಗಿ ಧ್ವನಿ ಮಾಡುತ್ತಾ ವಿಹರಿಸುತ್ತಿದ್ದುವು. ಅಂತಹ ದೃಶ್ಯವನ್ನು ಕಂಡ ಪಾಂಡುನಂದ ನರ ಆನಂದಕ್ಕೆ ಪಾರವೇ ಇರಲಿಲ್ಲ.

ಕುಬೇರನು ವಿಹರಿಸುವ ಪ್ರದೇಶಗಳು ಚಿತ್ರ-ವಿಚಿತ್ರವಾದ ಸುಗಂಧಯುಕ್ತವಾದ ಮಾಲೆಗಳಿಂದಲೂ, ವಜ್ರ-ವೈಡೂರ್ಯಗಳಿಂದಲೂ ಅಲಂಕರಿಸಲ್ಪಟ್ಟಿದ್ದು ಕುಬೇರನ ಮನಸ್ಸನ್ನೂ ಆಕರ್ಷಿಸುವಷ್ಟು ನಯನಮನೋಹರವಾಗಿದ್ದುವು.

ಚಿತ್ರ-ವಿಚಿತ್ರವಾಗಿದ್ದ, ಸುಗಂಧಯುಕ್ತವಾಗಿದ್ದ ಪುಷ್ಪಗಳ ಜೊಂಪೆ

ಗಳಿಂದ ಕೂಡಿದ್ದ ವೃಕ್ಷಗಳಿಂದಲೂ, ಕಪ್ಪಾದ ಮೋಡಗಳಿಂದಲೂ ಆವೃತವಾಗಿದ್ದ ಆ ಪರ್ವತಶಿಖರದ ಸೊಬಗೆಷ್ಟೆಂಬುದನ್ನು ನಿರ್ಧರಿಸಲು ಸತತವಾಗಿ ಪರ್ವತಶಿಖರಗಳಲ್ಲೇ ಸಂಚರಿಸುತ್ತಿದ್ದ ಋಷಿಪ್ರಾಯರಾಗಿದ್ದ ಪಾಂಡುನಂದನರಿಗೂ ಅಸಾಧ್ಯವೆನಿಸಿತು. ಹೆಜ್ಜೆ-ಹೆಜ್ಜೆಗೂ ಸುಂದರವಾದ ಚಿಲುಮೆಗಳೂ, ಸರೋವರಗಳೂ, ಸುಗಂಧಯುಕ್ತವಾದ ಹೂಗಳಿಂದ ಕೂಡಿದ್ದ ಪುಷ್ಪಲತೆಗಳೂ ಇದ್ದುದರಿಂದ ಪಾಂಡವರಿಗೆ ಆ ಸೊಬಗಿನ ಪರಿಮಿತಿಯನ್ನು ತಿಳಿ ಯಲು ಸಾಧ್ಯವಾಗಲಿಲ್ಲ.

ಜನಮೇಜಯ! ಆ ಪರ್ವತದಲ್ಲಿ ಮತ್ತೊಂದು ವಿಶೇಷವೂ ಇತ್ತು. ಅದು ಸ್ವಯಂಪ್ರಭೆಯಿಂದ ಕೂಡಿದ್ದುದರಿಂದಲೂ–ಅನೇಕಾನೇಕ ಪ್ರಕಾಶಮಾನವಾದ ಜ್ಯೋತಿರ್ಲತೆಗಳಿಂದ ಆವೃತವಾಗಿದ್ದುದರಿಂದಲೂ ಹಗಲು-ರಾತ್ರಿಗಳ ವ್ಯತ್ಯಾಸವೇ ಅಲ್ಲಿ ಕಾಣುತ್ತಿರಲಿಲ್ಲ. ಯಾವಾಗಲೂ ಬೆಳಕಾಗಿಯೇ ಇರುತ್ತಿದ್ದಿತು.

ಮಹಾತೇಜಸ್ವಿಯಾದ ಯಾವ ಸೂರ್ಯನು–ರಾತ್ರಿಯ ವೇಳೆಯಲ್ಲಿ 'ಆದಿತ್ಯೋ ವಾ ಅಸ್ತಯನ್ನಗ್ನಿಮನುಪ್ರವಿಶತಿ' ಎಂಬ ಶ್ರುತ್ಯನುಸಾರವಾಗಿ ಅಗ್ನಿಯಲ್ಲಿ ಪ್ರವೇಶಿಸಿ–ಪ್ರಪಂಚದ ಸ್ಥಾವರ-ಜಂಗಮಗಳನ್ನು ಸಂರಕ್ಷಿಸುವನೋ-ಆ ಸೂರ್ಯದೇವನ ಉದಯಿಸುವ ಮತ್ತು ಅಸ್ತಮಿಸುವ ಅತ್ಯದ್ಭುತವಾದ, ಹೃದಯಂಗಮವಾದ ದೃಶ್ಯವನ್ನು ಪಾಂಡವರು ಗಂಧಮಾದನಪರ್ವತದ ಶಿಖರದ ಮೇಲೆ ನಿಂತು ಅನುದಿನವೂ ನೋಡುತ್ತಿದ್ದರು.

ನಯನಮನೋಹರವಾದ ಅರುಣೋದಯ ಮತ್ತು ಸಂಜೆಗತ್ತಲುಗಳನ್ನೂ, ಹಿಂದೆ ಹೇಳಿದಂತೆ ಸೂರ್ಯನು ತನ್ನ ಕಿರಣಗಳಿಂದ ದಶದಿಕ್ಕುಗಳನ್ನೂ ಅನುಕ್ರಮವಾಗಿ ಪ್ರಕಾಶಗೊಳಿಸುವುದನ್ನೂ ಅನುದಿನವೂ ನೋಡಿ ಆನಂದಿಸುತ್ತಿದ್ದ ಪಾಂಡವರು ಶುಚೀಭೂತರಾಗಿ, ವೇದಾಧ್ಯಯನಮಾಡುತ್ತಾ, ನಿತ್ಯ-ನೈಮಿತ್ತಿಕಕರ್ಮಾನುಷ್ಠಾನಗಳನ್ನು ಮಾಡುತ್ತಾ, ಸತ್ಯವ್ರತರಾಗಿದ್ದುಕೊಂಡು ಸತ್ಯವ್ರತನಾದ ಅರ್ಜುನನ ಆಗಮನವನ್ನೇ ಎದುರುನೋಡುತ್ತಿದ್ದರು.

ಇಹೈವ ಹರ್ಷೋಽಸ್ತು ಸಮಾಗತಾನಾಂ ।
ಕ್ಷಿಪ್ರಂ ಕೃತಾಸ್ತ್ರೇಣ ಧನಂಜಯೇನ ॥೧೦॥

"ಇಲ್ಲಿಗೆ ಆಗಮಿಸಿರುವ ನಮಗೆ-ಧನುರ್ವೇದದಲ್ಲಿ ಪ್ರಾವೀಣ್ಯವನ್ನು ಪಡೆದು ಆಗಮಿಸುವ ಧನಂಜಯನೊಡನೆ ಸಮಾಗಮವುಂಟಾಗಲಿ. ಈ ಪ್ರದೇಶದಲ್ಲಿಯೇ ಬೇಗನೆ ಅರ್ಜುನನ ಸಮಾಗಮವನ್ನು ಹೊಂದಿದ ನಮಗೆ ಹೆಚ್ಚಿನ ಸಂತೋಷವುಂಟಾಗಲಿ"-ಎಂಬುದೇ ಅವರ ಅನುದಿನದ ಹಾರೈಕೆ ಯಾಗಿದ್ದಿತು. ಅರ್ಜುನನ ಆಗಮನದಲ್ಲಿಯೇ ದೃಢಬದ್ಧಮನಸ್ಸುಳ್ಳವರಾಗಿದ್ದ ಪಾಂಡವರು ದಿವ್ಯವಾದ ಗಂಧಮಾದನಪರ್ವತದಲ್ಲಿ ತಪೋಯೋಗ ನಿರತರಾಗಿದ್ದರು. ದಿನಗಳು ಕಳೆದಂತೆಲ್ಲಾ ಅವರಿಗೆ ಅರ್ಜುನನ ಮೇಲಿನ ಹಂಬಲವು ಹೆಚ್ಚಿತು. ನಯನಮನೋಹರವಾಗಿ ಕಾಣುತ್ತಿದ್ದ ಪರ್ವತದ ವನ ಪ್ರದೇಶಗಳು ಅವರಿಗೆ ಹೆಚ್ಚುಕಾಲ ಆನಂದವನ್ನು ಉಂಟುಮಾಡಲಿಲ್ಲ. ಲತಾಕುಂಜಗಳಲ್ಲಿಯೂ, ಸರೋವರಗಳಲ್ಲಿಯೂ, ಪರ್ವತಶಿಖರದಲ್ಲಿಯೂ ಅವರು ಅರ್ಜುನನ ಆಕೃತಿಯನ್ನು ಕಾಣುತ್ತಿದ್ದರೇ ಹೊರತು ಬೇರಾವುದೂ ಅವರಿಗೆ ಕಾಣುತ್ತಿರಲಿಲ್ಲ. ಅರ್ಜುನನ ಧ್ಯಾನದಲ್ಲಿ ಒಂದೊಂದು ರಾತ್ರಿಯನ್ನೂ ಒಂದೊಂದು ಹಗಲನ್ನೂ ಒಂದೊಂದು ವರ್ಷದಂತೆ ಧರ್ಮಾದಿಗಳು ಕಳೆಯುತ್ತಿದ್ದರು.

ಯಾವ ದಿನ ಕಿರೀಟಿಯು ಪುರೋಹಿತರಾದ ಧೌಮ್ಯರ ಅನುಮತಿ ಯನ್ನು ಪಡೆದು ಜಟಾಧಾರಿಯಾಗಿ ಮಹಾಸ್ತ್ರಗಳನ್ನು ಪಡೆಯಲು ಸ್ವರ್ಗ ಲೋಕಕ್ಕೆ ಹೊರಟುಹೋದನೋ-ಅಂದಿನಿಂದಲೂ ಪಾಂಡವರಿಗೆ ಸಂತೋಷ ವೆಂಬುದೇ ಇರಲಿಲ್ಲ. ಮದಿಸಿದ ಆನೆಯಂತೆ ನಡಿಗೆಯುಳ್ಳ ಜಿಷ್ಣುವು ಯುಧಿಷ್ಠಿರನ ನಿರ್ದೇಶನದಂತೆ ಕಾಮ್ಯಕವನದಿಂದ ಎಂದು ಹೊರಟು ಹೋದನೋ-ಅಂದಿನಿಂದಲೂ ಧರ್ಮ-ಭೀಮ-ನಕುಲ-ಸಹದೇವ- ದ್ರೌಪದಿ ಯರಿಗೆ ಮನಸ್ಸಿನಲ್ಲಿ ನೆಮ್ಮದಿಯೆಂಬುದೇ ಇರಲಿಲ್ಲ. ಗಂಧಮಾದನಪರ್ವತ ದಲ್ಲಿದ್ದ ಉದ್ಯಾನವನದ ಸೊಬಗನ್ನು ನೋಡಿ ಅವರು ಕ್ಷಣಕಾಲ ಸಂತೋಷ ದಿಂದಿರುತ್ತಿದ್ದರೂ-ಮರುಕ್ಷಣದಲ್ಲಿಯೇ ಅರ್ಜುನನನ್ನು ನೆನೆದು ಯೋಚನಾ ಮಗ್ನರಾಗಿ ದೀರ್ಘವಾಗಿ ನಿಟ್ಟುಸಿರುಗಳನ್ನು ಬಿಡುತ್ತಿದ್ದರು. ಕುಬೇರನ ಆಜ್ಞೆಯಂತೆ ಅವರಿಗೆ ಬೇಕಾದ ವಸ್ತುಗಳೆಲ್ಲವನ್ನೂ ಯಕ್ಷ-ರಾಕ್ಷಸರು ತಂದು

ಕೊಡುತ್ತಿದ್ದರೂ ಅವರು ಸುಖಿಗಳಾಗಿರಲಿಲ್ಲ. ಇಂದ್ರಲೋಕಕ್ಕೆ ಮಹಾಸ್ತ್ರಗಳ ಅಧ್ಯಯನಕ್ಕಾಗಿ ಹೋಗಿರುವ ಜಿಷ್ಣುವು ಬೇಗನೆ ಬಂದುಬಿಡುವನೆಂಬ ಉತ್ಸುಕತೆಯ ನಿರೀಕ್ಷೆಯಿಂದಲೇ ಮೂವತ್ತು ದಿನಗಳನ್ನು ಪಾಂಡವರು ಕಳೆದರು.

ಅರ್ಜುನನು ಐದು ವರ್ಷಗಳ ಪರ್ಯಂತವಾಗಿ ಇಂದ್ರನ ಅರಮನೆಯಲ್ಲಿಯೇ ಇದ್ದು ಇಂದ್ರನಿಂದ ಸಕಲವಾದ ದಿವ್ಯಾಸ್ತ್ರಗಳನ್ನೂ ಅಧ್ಯಯನ ಮಾಡಿದನು. ಇಂದ್ರನ ಅನುಗ್ರಹದಿಂದ ಅರ್ಜುನನು ಆಗ್ನೇಯ, ವಾರುಣ, ಸೌಮ್ಯ, ವಾಯವ್ಯ, ವೈಷ್ಣವ, ಐಂದ್ರ, ಪಾಶುಪತ, ಬ್ರಾಹ್ಮ, ಪ್ರಜಾಪತಿಯ ಸಂಬಂಧವಾದ ಪಾರಮೇಷ್ಠ್ಯ–ಮುಂತಾದ ದಿವ್ಯಾಸ್ತ್ರಗಳನ್ನು ಪಡೆದನು. ಇವುಗಳಲ್ಲದೇ ಯಮನ ಸಂಬಂಧವಾದ ದಂಡಾಯುಧ, ಧಾತೃ ಸಂಬಂಧವಾದ ಅಸ್ತ್ರ, ಸವಿತೃಸಂಬಂಧವಾದ ದಿವ್ಯಾಸ್ತ್ರ, ತ್ವಷ್ಟೃಸಂಬಂಧವಾದ ಮಹಾಸ್ತ್ರ ಮತ್ತು ವೈಶ್ರವಣನ ಸಂಬಂಧವಾದ ಅಸ್ತ್ರ-ಇವುಗಳೆಲ್ಲವನ್ನೂ ಆಯಾ ದೇವತೆಗಳ ಅನುಗ್ರಹದಿಂದಲೇ ಪಡೆದು, ಇಂದ್ರನಿಗೆ ಪ್ರದಕ್ಷಿಣೆ-ನಮಸ್ಕಾರಗಳನ್ನು ಮಾಡಿ ಅವನ ಅನುಮತಿಯನ್ನು ಪಡೆದು ಸಂತೋಷಭರಿತನಾಗಿ ಯುಧಿಷ್ಠಿರಾದಿಗಳಿದ್ದ ಗಂಧಮಾದನಪರ್ವತಕ್ಕೆ ಬಂದನು.

ನೂರ ಅರುವತ್ನಾಲ್ಕನೆಯ ಅಧ್ಯಾಯವು ಮುಗಿಯಿತು.

೧೬೫ನೆಯ ಅಧ್ಯಾಯ ನಿವಾತಕವಚಯುದ್ಧಪರ್ವ

## **ಅರ್ಜುನನ ಆಗಮನ**: ಗಂಧಮಾದನಪರ್ವತದಲ್ಲಿ ಸಹೋದರರೊಡನೆ ಸಮಾಗಮ

ಜನಮೇಜಯ! ಒಂದು ದಿನ ಯುಧಿಷ್ಠಿರಾದಿಗಳು ಅರ್ಜುನನ ಗುಣಾತಿಶಯಗಳನ್ನು ಪರಸ್ಪರವಾಗಿ ಮಾತನಾಡಿಕೊಳ್ಳುತ್ತಾ ಗಂಧಮಾದನಪರ್ವತದ ಶಿಖರದ ಮೇಲೆ ಕುಳಿತಿದ್ದರು. ಆಕಾಶದಲ್ಲಿ ದಿವ್ಯಪ್ರಭೆಯಿಂದ ಕೂಡಿದ ವಸ್ತುವೊಂದು ಕಾಣಿಸಿಕೊಂಡಿತು. ಚಕಿತರಾದ ಪಾಂಡವರು ಮೇಲೆದ್ದು ನೋಡುವುದರೊಳಗಾಗಿ ಮಿಂಚಿನ ಪ್ರಭೆಯಿಂದ ಕೂಡಿದ್ದ, ಉತ್ತಮವಾದ ಕುದುರೆಗಳನ್ನು ಕಟ್ಟಿದ್ದ, ಮಾತಲಿಯು ಸಾರಥಿಯಾಗಿ ನಡೆಸುತ್ತಿದ್ದ ಆಕಾಶ

ವನ್ನೆಲ್ಲಾ ತನ್ನ ಕಾಂತಿಯಿಂದ ಬೆಳಗುತ್ತಿದ್ದ, ಯಜ್ಞೇಶ್ವರನ ಜ್ವಾಲೆಯಿಂತೆ ಪ್ರಕಾಶಮಾನವಾಗಿದ್ದ, ಮೋಡದೊಳಗಿರುವ ಬಾಲಚುಕ್ಕಿಯಂತೆ ಕಾಣುತ್ತಿದ್ದ ದಿವ್ಯ ರಥವು ಪಾಂಡವರ ಎದುರಿನಲ್ಲಿ ಬಂದು ನಿಂತಿತು. ರಥವು ನಿಂತೊಡನೆಯೇ ಇಂದ್ರನಿಗೆ ಸಮಾನವಾದ ಪ್ರಭಾವದಿಂದ ಕೂಡಿದ್ದ, ದಿವ್ಯಮಾಲೆಗಳಿಂದಲೂ, ದಿವ್ಯಾಭರಣಗಳಿಂದಲೂ ಅಲಂಕೃತನಾಗಿದ್ದ, ಮಂದಹಾಸಪೂರ್ಣವಾದ ಮುಖ ಕಾಂತಿಯಿಂದ ಕೂಡಿದ್ದ ಅರ್ಜುನನು ಕೆಳಗಿಳಿದನು. ದಿವ್ಯವಾದ ಕಿರೀಟವನ್ನೂ ರತ್ನಮಾಲೆಗಳನ್ನೂ ಧರಿಸಿದ್ದ ಕಿರೀಟಿಯು ರಥದಿಂದಿಳಿದು ಪಾಂಡವರ



ಸಮೀಪಕ್ಕೆ ಬಂದು, ಮೊದಲು ಪುರೋಹಿತರಾದ ಧೌಮ್ಯರಿಗೆ ಅಭಿವಾದನ ಪೂರ್ವಕವಾಗಿ ನಮಸ್ಕರಿಸಿ, ಅನಂತರದಲ್ಲಿ ಅಜಾತಶತ್ರುವಿನ ಪಾದಕಮಲ

ಗಳಿಗೆರಗಿದನು. ಧರ್ಮಜನು ಆನಂದಾಶ್ರುಗಳಿಂದ ಅರ್ಜುನನನ್ನು ಅಭಿಷೇಚಿಸುತ್ತಾ ತನ್ನೆರಡು ಬಾಹುಲತೆಗಳಿಂದಲೂ ಅರ್ಜುನನನ್ನು ಮೇಲೆತ್ತಿ ಬಿಗಿದಪ್ಪಿ, ನೆತ್ತಿಯನ್ನು ಆಘ್ರಾಣಿಸಿದನು. ಆನಂದಾಧಿಕ್ಯದಿಂದ ಧರ್ಮಜನ ಬಾಯಿಂದ ಮಾತುಗಳೇ ಹೊರಡಲಿಲ್ಲ. ಅನಂತರ ಅರ್ಜುನನು ಭೀಮನಿಗೆ ನಮಸ್ಕರಿಸಿ, ತನಗೆ ನಮಸ್ಕರಿಸಿದ ನಕುಲ-ಸಹದೇವರನ್ನು ಅಕ್ಕರೆಯಿಂದ ಆಲಿಂಗಿಸಿದನು. ಸ್ವಲ್ಪದೂರದಲ್ಲಿ ಆನಂದಾಶ್ರುಗಳನ್ನು ಸುರಿಸುತ್ತಾ ಅರ್ಜುನ ನನ್ನೇ ಎವೆಯಿಕ್ಕದೇ ನೋಡುತ್ತಿದ್ದ ದ್ರೌಪದಿಯ ಬಳಿಗೆ ಅರ್ಜುನನು ಹೋಗಿ ಅವಳ ಗಲ್ಲವನ್ನು ನೇವರಿಸಿ ಪ್ರೇಮಪೂರ್ವಕವಾದ ನೋಟದಿಂದಲೇ ಅವಳನ್ನು ಸಂತೋಷಗೊಳಿಸಿ ಪುನಃ ಧರ್ಮಜನ ಬಳಿಗೆ ಬಂದು ವಿನೀತನಾಗಿ ನಿಂತನು. ಅರ್ಜುನನನ್ನು ಕಂಡ ಧರ್ಮಾದಿಗಳ ಆನಂದಕ್ಕೆ ಪಾರವೇ ಇರಲಿಲ್ಲ. ಅರ್ಜುನನೂ ತನ್ನ ಸಹೋದರರೊಡನೆ ಸೇರುವಿಕೆಯಿಂದ ಸ್ವರ್ಗದಲ್ಲಿ ಅನುಭವಿಸಿದ ದಿವ್ಯಸುಖಕ್ಕಿಂತಲೂ ಹೆಚ್ಚಾದ ಆನಂದವನ್ನೇ ಪಡೆದನು. ಪರಸ್ಪರವಾಗಿ ಯಥೋಚಿತವಾದ ಕುಶಲಪ್ರಶ್ನೆಗಳಾದ ನಂತರ ಪಾಂಡವರೆಲ್ಲರೂ ಕೂಡಿ ದಿವ್ಯರಥದ ಬಳಿಗೆ ಹೋದರು.

ನಮುಚಿಸೂದನನಾದ ದೇವೇಂದ್ರನು ಆ ದಿವ್ಯರಥದಲ್ಲಿಯೇ ಕುಳಿತು ದಿತಿಯ ಸುತರಾದ ದೈತ್ಯರ ಏಳು ವಿಭಾಗಗಳ ಸೈನ್ಯಗಳನ್ನೂ ನಿರ್ಮೂಲ ಮಾಡಿದ್ದನು. ಆ ರಥದಲ್ಲಿ ಕುಳಿತು ಯುದ್ಧಕ್ಕೆ ಹೊರಟವರಿಗೆ ಪರಾಜಯವೆಂಬುದೇ ಇರಲಿಲ್ಲ. ಅಂತಹ ದಿವ್ಯರಥಕ್ಕೆ ಅತಿಬಲರಾದ ಪಾಂಡವರು ಪ್ರದಕ್ಷಿಣ-ನಮಸ್ಕಾರವನ್ನು ಮಾಡಿದರು. ಅನಂತರದಲ್ಲಿ ರಥದ ಚಾಲಕನಾದ, ಇಂದ್ರನ ಸಾರಥಿಯಾದ ಮಾತಲಿಯನ್ನು ಆಶ್ರಮಕ್ಕೆ ಕರೆದೊಯ್ದು ಇಂದ್ರನನ್ನು ಸತ್ಕರಿಸುವಂತೆಯೇ ಅರ್ಘ್ಯ-ಪಾದ್ಯಾದಿಗಳಿಂದ ಸತ್ಕರಿಸಿ ಗೌರವಿಸಿದರು. ಧರ್ಮಾತ್ಮನಾದ ಯುಧಿಷ್ಠಿರನು ಮಾತಲಿಯೊಡನೆ ದೇವತೆಗಳ ಯೋಗ-ಕ್ಷೇಮಗಳ ವಿಷಯವಾಗಿ ಪ್ರಶ್ನಿಸಿದನು. ಮಾತಲಿಯೂ ಸಹ ಯಥೋಚಿತವಾಗಿ ಉತ್ತರಿಸಿದನಂತರ-ತಂದೆಯಾದವನು ತನ್ನ ಮಕ್ಕಳಿಗೆ ಬುದ್ಧಿವಾದವನ್ನು ಹೇಳುವಂತೆ-ಪಾಂಡವರಿಗೆ ಎರಡು ಹಿತವಚನಗಳನ್ನು ಹೇಳಿ ಧರ್ಮಜನ ಅನುಮತಿಯನ್ನು ಪಡೆದು ಅನುಪಮವಾದ ಕಾಂತಿಯಿಂದ ಕೂಡಿದ್ದ ದಿವ್ಯ ರಥದಲ್ಲಿ ಕುಳಿತು ತ್ರಿದಿವೇಶ್ವರನಾದ ಇಂದ್ರನ ಬಳಿಗೆ ಹೊರಟುಹೋದನು.

ಇಂದ್ರನ ಸಾರಥಿಯಾದ ಮಾತಲಿಯು ಸ್ವರ್ಗಲೋಕಕ್ಕೆ ಹೊರಟು ಹೋದನಂತರ ನರದೇವವರ್ಯನಾದ, ಇಂದ್ರನ ಮಗನಾದ, ಇಂದ್ರನ ಶತ್ರುಗಳ ವಿಧ್ವಂಸಕನಾದ, ಮಹಾತ್ಮನಾದ, ದ್ರೌಪದಿಗೆ ಅತ್ಯಂತಪ್ರಿಯನಾದ ಅರ್ಜುನನು ಇಂದ್ರನಿಂದ ಪಾರಿತೋಷಕವಾಗಿ ಕೊಡಲ್ಪಟ್ಟಿದ್ದ, ಅನರ್ಘವಾದ, ಹೆಚ್ಚು ಅಂದವಾಗಿದ್ದ, ಸೂರ್ಯನ ಕಾಂತಿಗೆ ಅನುರೂಪವಾದ ದಿವ್ಯ ಕಾಂತಿಯಿಂದ ಕೂಡಿದ್ದ ದಿವ್ಯಾಭಾರಣಗಳನ್ನು ಪ್ರೇಯಸಿಯಾದ, ಸುತಸೋಮನ ತಾಯಿಯಾದ ದ್ರೌಪದಿಗೆ ತೊಡಿಸಿದನು. ಆನಂದಭರಿತಳಾದ ದ್ರೌಪದಿಯೂ ಐದು ವರ್ಷಗಳ ನಂತರ ಸ್ವರ್ಗದಿಂದ ಆಗಮಿಸಿದ ತನ್ನ ಪತಿಯನ್ನು ಆದರಪೂರ್ವಕವಾಗಿ ಸತ್ಕರಿಸಿದಳು.

ಅರ್ಜುನನ ಐದು ವರ್ಷಗಳ ಪ್ರವಾಸದ ಪುಣ್ಯಕಥೆಯನ್ನು ಕೇಳಬೇಕೆಂಬ ಆಶಯವು ಧರ್ಮರಾಜನೇ ಮೊದಲಾಗಿ ಎಲ್ಲರಿಗೂ ಇದ್ದಿತು. ಅಂತೆಯೇ ಅರ್ಜುನನಿಗೂ ತಾನು ದಿವ್ಯಾಸ್ತ್ರಗಳನ್ನು ಅಭ್ಯಸಿಸಿದ ರೀತಿಯನ್ನು ಸೋದರರಿಗೆ ಹೇಳಬೇಕೆಂಬ ಉತ್ಸುಕತೆಯಿದ್ದಿತು. ಸೂರ್ಯಾಗ್ನಿಗಳ ತೇಜಸ್ಸನ್ನು ಅನುಕರಿಸುವ ತೇಜಸ್ಸಿನಿಂದ ಕೂಡಿದ್ದ ಪಾಂಡವರ ಮಧ್ಯದಲ್ಲಿ ಕುಳಿತು ಐಂದ್ರ-ವಾಯವ್ಯಾಸ್ತ್ರಗಳನ್ನು ಪಡೆದ ರೀತಿಯನ್ನೂ, ಶಿವನಿಂದ ಪಾಶುಪತವನ್ನು ಪಡೆದ ಬಗೆಯನ್ನೂ ಮತ್ತು ತನ್ನ ಶೀಲ ಮತ್ತು ಏಕಾಗ್ರತೆಗಳಿಗೆ ದೇವತೆಗಳೂ ಮತ್ತು ಇಂದ್ರನೂ ಮೆಚ್ಚಿ ಅನುಗ್ರಹಿಸಿದ ವಿಷಯವನ್ನೂ ಸಂಕ್ಷೇಪವಾಗಿ ತಿಳಿಸಿ, ವಿಶುದ್ಧಕರ್ಮನಾದ ಕಿರೀಟಿಯು ಅಂದು ರಾತ್ರಿ ಮಾದ್ರೀಸುತರಾದ ನಕುಲ-ಸಹದೇವರ ಜೊತೆಯಲ್ಲಿ ಸುಖವಾಗಿ ನಿದ್ರಿಸಿದನು."

೧೬೫ನೆಯ ಅಧ್ಯಾಯವು ಮುಗಿಯಿತು.

೧೬೬ನೆಯ ಅಧ್ಯಾಯ ನಿವಾತಕವಚಯುದ್ಧಪರ್ವ (ಮುಂದುವರಿದಿದೆ.)

## ಗಂಧಮಾದನಪರ್ವತಕ್ಕೆ ಇಂದ್ರನು ಬಂದು ಯುಧಿಷ್ಠಿರನನ್ನು ಸಮಾಧಾನಪಡಿಸಿದುದು

ಜನಮೇಜಯ! ನಕುಲ-ಸಹದೇವರ ಜೊತೆಯಲ್ಲಿ ಮಲಗಿದ್ದು ಆ ರಾತ್ರಿಯನ್ನು ಸುಖದಿಂದ ಕಳೆದ ಧನಂಜಯನು ಪ್ರಾತಃಕಾಲವಾಗುತ್ತಲೇ

ಸ್ನಾನ-ಸಂಧ್ಯಾದಿಗಳನ್ನು ಮುಗಿಸಿಕೊಂಡವನಾಗಿ ಸಹೋದರರಿಂದೊಡ ಗೂಡಿ ಯುಧಿಷ್ಠಿರನ ಬಳಿಗೆ ಹೋಗಿ ಅವನನ್ನು ಅಭಿವಾದನಪೂರ್ವಕವಾಗಿ ನಮಸ್ಕರಿಸಿದನು. ಅವನನ್ನನುಸರಿಸಿ ಭೀಮ-ನಕುಲ-ಸಹದೇವರೂ ಯುಧಿಷ್ಠಿರನಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಿದರು. ಯುಧಿಷ್ಠಿರನು ಅನುಜರ ನೆತ್ತಿಯನ್ನು ಪ್ರೇಮಪೂರ್ವಕವಾಗಿ ಆಘ್ರಾಣಿಸಿ ಆಶೀರ್ವದಿಸಿ ಅವರುಗಳನ್ನು ತನ್ನ ಬಳಿಯಲ್ಲಿಯೇ ಕುಳಿತುಕೊಳ್ಳುವಂತೆ ಹೇಳಿದನು. ಧೌಮ್ಯ ಮತ್ತು ಲೋಮಶರು ಬ್ರಾಹ್ಮಣರೊಡನೆ ಯುಧಿಷ್ಠಿರನ ಮತ್ತೊಂದು ಪಾರ್ಶ್ವದಲ್ಲಿ ಕುಳಿತರು. ಆ ಸಮಯಕ್ಕೆ ಸರಿಯಾಗಿ ಆಕಾಶದಲ್ಲಿ ದೇವತೆಗಳು ವೀಣಾ-ಮೃದಂಗ-ಭೇರೀ-ತಾಳಗಳನ್ನು ಕರ್ಣಾನಂದಕರವಾಗಿ ಬಾರಿಸುತ್ತಿದ್ದುದು ಪಾಂಡವರಿಗೆ ಕೇಳಿಸಿತು. ಅನೇಕ ಗಂಧರ್ವಪ್ರಮುಖರು ಇಂದ್ರನ ಗುಣಗಾನವನ್ನು ಇಂಪಾದ ಧ್ವನಿಯಲ್ಲಿ ಗಾಯನಮಾಡುತ್ತಿದ್ದರು. ಸುಮಧುರವಾದ ಗಾಯನದ ಜೊತೆಯಲ್ಲಿಯೇ ರಥಗಳಿಗೆ ಕಟ್ಟಿದ್ದ ಗಂಟೆಗಳ ಕಿಣಿಕಿಣಿನಿನಾದಗಳೂ, ರಥಚಕ್ರಗಳ ಶಬ್ದವೂ ಕೇಳಿಬಂದುವು. ಅರಣ್ಯದಲ್ಲಿರುವ ಮೃಗ-ಪಕ್ಷಿಗಳೆಲ್ಲವೂ ಏಕಕಾಲದಲ್ಲಿ ಕೂಗಿಕೊಂಡರೆ ಯಾವ ಶಬ್ದವುಂಟಾಗುವುದೋ ಅದೇ ಶಬ್ದವು ಅಂತರಿಕ್ಷದಲ್ಲಿ ಕೇಳಿಬರುತ್ತಿದ್ದಿತು. ಪಾಂಡವರು ಚಕಿತರಾಗಿ ಆಕಾಶದ ಕಡೆಗೆ ಎವೆಯಿಕ್ಕದೇ ನೋಡುತ್ತಿದ್ದರು. ಸೂರ್ಯನಿಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ ದಿವ್ಯವಿಮಾನಗಳಲ್ಲಿ ಕುಳಿತು ಗಂಧರ್ವಾಪ್ಸರೆಯರು ದೇವಪತಿಯಾದ ಪುರಂದರನನ್ನನುಸರಿಸಿ ತಮ್ಮ ಕಡೆಗೇ ಬರುತ್ತಿದ್ದುದು ಪಾಂಡವರಿಗೆ ಗೋಚರವಾಯಿತು. ಉತ್ತಮೋತ್ತಮವಾದ ಕುದುರೆಗಳಿಂದ ಯುಕ್ತವಾಗಿದ್ದ, ಚಿನ್ನದ ಹೊದ್ದಿಕೆಯಿಂದ ಸಮಲಂಕೃತವಾಗಿದ್ದ, ಗುಡುಗಿನ ಶಬ್ದದಂತೆ ಧ್ವನಿಮಾಡುತ್ತಿದ್ದ ದಿವ್ಯರಥದಲ್ಲಿ ಕುಳಿತು ತನ್ನ ದಿವ್ಯವಾದ ಕಾಂತಿಯಿಂದ ದಿಗಂತವನ್ನೂ ಬೆಳಗುತ್ತಿದ್ದ ಪುರಂದರನು ಪಾಂಡವರಿದ್ದ ಗಂಧಮಾದನಪರ್ವತಕ್ಕೆ ಬಂದು ರಥದಿಂದಿಳಿದನು.

ದೇವತೆಗಳಿಂದಲೂ ಗಂಧರ್ವಾಪ್ಸರೆಯರಿಂದಲೂ ಅನುಸೃತನಾದ ಇಂದ್ರನು ರಥದಿಂದಿಳಿದೊಡನೆಯೇ ಯುಧಿಷ್ಠಿರನು ಅನುಜರೊಡನೆ ಬ್ರಾಹ್ಮಣಪುರಸ್ಸರನಾಗಿ ಇಂದ್ರನ ಬಳಿಗೆ ಹೋಗಿ, ಅವನನ್ನು ಆದರಪೂರ್ವಕವಾಗಿ ಸ್ವಾಗತಿಸಿ, ತನ್ನ ಕುಟೀರಕ್ಕೆ ಕರೆದೊಯ್ದು ಉತ್ತಮಾಸನದಲ್ಲಿ ಕುಳ್ಳಿರಿಸಿ

ಅರ್ಘ್ಯ-ಪಾದ್ಯಾದಿಗಳಿಂದ ಯಥೋಚಿತವಾಗಿ-ಯಥಾಶಾಸ್ತ್ರವಾಗಿ ಪುರೋಹಿತರಾದ ಧೌಮ್ಯರ ನಿರ್ದೇಶಾನುಸಾರ ಸತ್ಕರಿಸಿದನು. ಪುರಂದರನಿಗೆ ಪರಮಪ್ರಿಯನಾದ, ಪ್ರಿಯಪುತ್ರನಾದ, ಮಹಾತೇಜಸ್ವಿಯಾದ ಅರ್ಜುನನು ದಾಸಭಾವದಿಂದ ಇಂದ್ರನಿಗೆ ನಮಸ್ಕರಿಸಿ ವಿನೀತನಾಗಿ ಇಂದ್ರನ ಸಮೀಪದಲ್ಲಿ ತಲೆಬಾಗಿ ನಿಂತನು.



ಜನಮೇಜಯ! ಧನುರ್ವಿದ್ಯೆಯಲ್ಲಿಯೂ ಮತ್ತು ಸಮಸ್ತದಿವ್ಯಾಸ್ತ್ರಗಳಲ್ಲಿಯೂ ಪ್ರಾವೀಣ್ಯವನ್ನು ಪಡೆದಿದ್ದರೂ ಧನಂಜಯನಿಗೆ ಲೇಶಮಾತ್ರವೂ ಅಹಂಕಾರವಿರಲಿಲ್ಲ. ಕೇವಲ ಸೇವಕನಂತೆ ತನ್ನ ತಂದೆಯಾದ ಇಂದ್ರನ

ಮುಂದೆ ತಲೆಬಾಗಿ ಅರ್ಜುನನು ನಿಂತಿದ್ದನು. ಅರ್ಜುನನ ವಿನಯಾತಿಶಯವನ್ನು ಕಂಡು ಯುಧಿಷ್ಠಿರನ ಹೃದಯವು ಆನಂದದಿಂದ ಉಬ್ಬಿಹೋಯಿತು. ಆನಂದದ ಉದ್ವೇಗವನ್ನು ತಡೆಯಲಾರದೆ ಪುರಂದರನ ಸಮಕ್ಷಮದಲ್ಲಿಯೇ ಯುಧಿಷ್ಠಿರನು ಅರ್ಜುನನನ್ನು ಬಾಚಿ ತಬ್ಬಿಕೊಂಡು ನೆತ್ತಿಯನ್ನು ಆಘ್ರಾಣಿಸಿ ಅವನ ತಲೆಯ ಮೇಲೆ ಆನಂದಬಾಷ್ಪಗಳ ಅಭಿಷೇಕವನ್ನೇ ಮಾಡಿಬಿಟ್ಟನು.

ಪಾಂಡವರಿಂದ ಪುರಸ್ಕೃತನಾದ ಇಂದ್ರನು ಪರಮಪ್ರೀತನಾಗಿ ಯುಧಿಷ್ಠಿರನನ್ನು ಕುರಿತು ಈ ಮಾತುಗಳನ್ನು ಹೇಳಿದನು :

**ತ್ವಮಿಮಾಂ ಪೃಥಿವೀಂ ರಾಜನ್ಪ್ರಶಾಸಿಷ್ಯಸಿ ಪಾಣ್ಡವ ।**
**ಸ್ವಸ್ತಿ ಪ್ರಾಪ್ನುಹಿ ಕೌನ್ತೇಯ ಕಾಮ್ಯಕಂ ಪುನರಾಶ್ರಮಮ್ ॥೧೩॥**

"ಯುಧಿಷ್ಠಿರ! ನೀನು ಈ ಭೂಮಿಯನ್ನು ಪುನಃ ಅನುಶಾಸನ ಮಾಡುವೆ. ಇದರಲ್ಲಾವ ಸಂಶಯವೂ ಇಲ್ಲ. ನಿನಗೆ ಮಂಗಳವುಂಟಾಗಲಿ. ಪುನಃ ನೀನು ಕಾಮ್ಯಕವನಕ್ಕೆ ಅನುಜರೊಡನೆ ಪ್ರಯಾಣಮಾಡು.

**ಅಸ್ತ್ರಾಣಿ ಲಬ್ಧಾನಿ ಚ ಪಾಣ್ಡವೇನ**
**ಸರ್ವಾಣಿ ಮತ್ತಃ ಪ್ರಯತೇನ ರಾಜನ್ ।**
**ಕೃತಪ್ರಿಯಶ್ಚಾಸ್ಮಿ ಧನಂಜಯೇನ**
**ಜೇತುಂ ನ ಶಕ್ಯಸ್ತ್ರಿಭಿರೇಷ ಲೋಕೈಃ ॥೧೪॥**

ನಿಖಿಲವಾದ ದಿವ್ಯಾಸ್ತ್ರಗಳೂ ಈ ಧನಂಜಯನಿಗೆ ಉಪಲಬ್ಧವಾಗಿವೆ. ಇವನ ಸದ್ಗುಣಗಳನ್ನೂ, ವಿನಯವನ್ನೂ ನೋಡಿ ಸುಪ್ರೀತನಾದ ನಾನು ಇವನಿಗೆ ಎಲ್ಲ ಅಸ್ತ್ರಗಳನ್ನೂ ಅನುಗ್ರಹಿಸಿದ್ದೇನೆ. ಇವನು ನನಗೆ ಪ್ರಿಯಕರವಾದ ಕಾರ್ಯವನ್ನೂ ಮಾಡಿಕೊಟ್ಟಿದ್ದಾನೆ. ನಿಶ್ಚಯವಾಗಿ ಹೇಳುವುದಾದರೆ ಈ ತ್ರಿಭುವನಗಳಲ್ಲಿಯೂ ಯಾರೊಬ್ಬರೂ ಧನಂಜಯನನ್ನು ಎದುರಿಸಿ ನಿಂತು ಯುದ್ಧಮಾಡಿ ಇವನನ್ನು ಪರಾಜಯಗೊಳಿಸಲಾರರು ಮತ್ತು ಮೂರು ಲೋಕಗಳಲ್ಲಿರುವ ವೀರರೆಲ್ಲರೂ ಒಟ್ಟಾಗಿ ಬಂದು ಯುದ್ಧಮಾಡಿದರೂ ಸಹ ಮಹಾವೀರನಾದ ಈ ಧನಂಜಯನನ್ನು ಪರಾಭವಗೊಳಿಸುವ ಸಾಧ್ಯತೆಯಿಲ್ಲ. ನೀನಿನ್ನು ನಿಶ್ಚಿಂತನಾಗಿರಬಹುದು, ಯುಧಿಷ್ಠಿರ!"

ಸಹಸ್ರಾಕ್ಷನು ಯುಧಿಷ್ಠಿರನಿಗೆ ಹೀಗೆ ಹೇಳಿ ತನ್ನ ಪ್ರಿಯಪುತ್ರನಾದ ಅರ್ಜುನನ ನೆತ್ತಿಯನ್ನು ಮತ್ತೊಮ್ಮೆ ಪ್ರೇಮಪೂರ್ವಕವಾಗಿ ಆಘ್ರಾಣಿಸಿ, ದೇವತೆಗಳಿಂದ ಅನುಸೃತನಾಗಿ ಯುಧಿಷ್ಠಿರಾದಿಗಳು ಸ್ತೋತ್ರಮಾಡುತ್ತಿದ್ದಂತೆಯೇ ಸ್ವರ್ಗಲೋಕಕ್ಕೆ ಹೊರಟುಹೋದನು.

**ಧನೇಶ್ವರಗೃಹಸ್ಥಾನಾಂ ಪಾಣ್ಡವಾನಾಂ ಸಮಾಗಮಮ್ ।**
**ಶಕ್ರೇಣ ಯ ಇದಂ ವಿದ್ವಾನಧೀಯೀತ ಸಮಾಹಿತಃ ॥೧೬॥**

**ಸಂವತ್ಸರಂ ಬ್ರಹ್ಮಚಾರೀ ನಿಯತಃ ಸಂಶಿತವ್ರತಃ ।**
**ಸ ಜೀವೇದ್ಧಿ ನಿರಾಬಾಧಃ ಸ ಸುಖೀ ಶರದಾಂ ಶತಮ್ ॥೧೭॥**

ಕುಬೇರನ ಸ್ಥಾನವಾಗಿರುವ ಗಂಧಮಾದನಪರ್ವತದ ವರ್ಣನೆ, ಅಲ್ಲಿಗೆ ಪಾಂಡವರ ಆಗಮನ, ಪಾಂಡವ-ಕುಬೇರರ ಸಮಾಗಮ ಮತ್ತು ಅದೇ ಸ್ಥಳದಲ್ಲಿ ನಡೆದ ಪಾಂಡವರ-ಪುರಂದರರ ಸಮಾಗಮ—ಈ ಎಲ್ಲ ಸುಚರಿತೆಗಳನ್ನೂ ಯಾವ ವಿದ್ವಾಸರು ಬ್ರಹ್ಮಚರ್ಯವ್ರತದಿಂದಿದ್ದು ಏಕಾಗ್ರಚಿತರಾಗಿ ಓದುತ್ತಾರೆಯೋ ಮತ್ತು ಏಕಾಗ್ರತೆಯಿಂದ ಕೇಳುತ್ತಾರೆಯೋ—ಅಂತಹವರು ನೂರು ಸಂವತ್ಸರಗಳ ಪರ್ಯಂತವಾಗಿ ಯಾವ ಆಧಿ-ವ್ಯಾಧಿಗಳೂ ಇಲ್ಲದೇ ಸುಖದಿಂದ ಜೀವಿಸಿರುತ್ತಾರೆ. ಅಂತಹ ಮಹತ್ತ್ವಪೂರ್ಣವಾದ ಆಖ್ಯಾನವಿದು, ಮಹಾರಾಜ!

೧೬೬ನೆಯ ಅಧ್ಯಾಯವು ಮುಗಿಯಿತು.

೧೬೭ನೆಯ ಅಧ್ಯಾಯ ನಿವಾತಕವಚಯುದ್ಧಪರ್ವ (ಮುಂದುವರಿದಿದೆ.)

## ಅರ್ಜುನನು ತನ್ನ ತಪಶ್ಚರ್ಯಾವಿಧಾನವನ್ನೂ, ಶಿವನೊಡನೆ ನಡೆದ ಯುದ್ಧವನ್ನೂ, ಪಾಶುಪತಾಸ್ತ್ರಪ್ರಾಪ್ತಿಯನ್ನೂ ಯುಧಿಷ್ಠಿರಾದಿಗಳಿಗೆ ಹೇಳಿದುದು

ಜನಮೇಜಯ! ಇಂದ್ರನು ಸ್ವರ್ಗಲೋಕಕ್ಕೆ ಪರಿವಾರಸಮೇತನಾಗಿ ಹೊರಟುಹೋದನಂತರ ಅರ್ಜುನನು ಭೀಮಾದಿ ಸಹೋದರರೊಡನೆಯೂ, ದ್ರೌಪದಿಯೊಡನೆಯೂ ಕೂಡಿದವನಾಗಿ ಧರ್ಮಪುತ್ರನಿಗೆ ಅಭಿವಾದನ ಮಾಡಿದನು. ನಮಸ್ಕರಿಸಿದ ಪಾರ್ಥನನ್ನು ಮೇಲೆತ್ತಿ ಬಿಗಿದಪ್ಪಿ ಅವನ ನೆತ್ತಿಯನ್ನು

ಆಘ್ರಾಣಿಸಿದ ಧರ್ಮಜನು ಆನಂದಾತಿರೇಕದಿಂದ ಕೂಡಿದವನಾಗಿ ಗದ್ಗದ ಧ್ವನಿಯಿಂದ ಅರ್ಜುನನನ್ನು ಪ್ರಶ್ನಿಸಿದನು :

"ಮಗು! ಅರ್ಜುನ! ನೀನು ಈ ಐದು ವರ್ಷಗಳನ್ನು ಸ್ವರ್ಗದಲ್ಲಿ ಹೇಗೆ ಕಳೆದೆ? ಮಹಾಸ್ತ್ರಗಳನ್ನು ಹೇಗೆ ಸಂಪಾದಿಸಿದೆ? ಇಂದ್ರನು ನಿನ್ನ ವಿಷಯದಲ್ಲಿ ಹೇಗೆ ಸುಪ್ರೀತನಾದನು? ಮಗು! ನೀನು ಸಕಲದಿವ್ಯಾಸ್ತ್ರಗಳನ್ನೂ ಸಂಪೂರ್ಣವಾಗಿ ತಿಳಿದಿರುವೆಯಲ್ಲವೇ? ಅವುಗಳ ಆದಾನ, ಸಂಧಾನ, ಪ್ರಯೋಗ ಮತ್ತು ಉಪಸಂಹಾರಗಳಲ್ಲಿ ಸಂಪೂರ್ಣವಾದ ಪರಿಶ್ರಮವನ್ನು ಪಡೆದಿರುವೆಯಲ್ಲವೇ? ನಿನ್ನ ವಿಷಯದಲ್ಲಿ ಪರಮಪ್ರೀತರಾಗಿ ರುದ್ರೇಂದ್ರರು ದಿವ್ಯಾಯುಧಗಳನ್ನು ಅನುಗ್ರಹಿಸಿರುವರಲ್ಲವೇ? ಪಿನಾಕ ಪಾಣಿಯಾದ, ಭಗವಂತನಾದ ಶಂಭೂವನ್ನೂ-ತ್ರಿದಶೇಶ್ವರನನ್ನೂ ನೀನು ಹೇಗೆ ಆರಾಧಿಸಿದೆ? ಯಾವ ವಿಧವಾದ ಆರಾಧನೆಯಿಂದ ಆ ಮಹಾನು ಭಾವರು ನಿನಗೆ ಪ್ರತ್ಯಕ್ಷರಾಗಿ ಈ ಮಹಾಸ್ತ್ರಗಳನ್ನು ಅನುಗ್ರಹಿಸಿದರು? ಮೇಲಾಗಿ ಶತಕ್ರತುವು ನನ್ನ ಸಮಕ್ಷದಲ್ಲಿಯೇ ನಿನ್ನನ್ನು ಕುರಿತು 'ಕೃತ ಪ್ರಿಯಶ್ಚಾಸ್ಮಿ ಧನಂಜಯೇನ' 'ಧನಂಜಯನಿಂದ ನನಗೆ ಅತ್ಯಂತಪ್ರಿಯವಾದ ಕಾರ್ಯವೊಂದು ಮಾಡಲ್ಪಟ್ಟಿತು' ಎಂದು ಹೇಳಿದನಲ್ಲ! ನೀನವನಿಗೆ ಯಾವ ಪ್ರಿಯವಾದ ಕಾರ್ಯವನ್ನು ಮಾಡಿಕೊಟ್ಟಿರುವೆ?–ಈ ವಿಷಯಗಳೆಲ್ಲವನ್ನೂ ನಾನು ವಿಶದವಾಗಿ ನಿನ್ನಿಂದ ಕೇಳಿ ತಿಳಿದುಕೊಳ್ಳಬೇಕೆಂಬ ಆಶಯದಿಂದಿರುತ್ತೇನೆ. ನನ್ನಂತೆಯೇ ನಿನ್ನ ಈ ಸಹೋದರರೂ ಮತ್ತು ದ್ರೌಪದಿಯೂ ಈ ವಿಷಯಗಳನ್ನು ನಿನ್ನಿಂದ ಕೇಳಲು ಬಹಳ ಉತ್ಸುಕರಾಗಿದ್ದಾರೆ. ನೀನು ಮಹಾದೇವನನ್ನು ಹೇಗೆ ತೃಪ್ತಿಗೊಳಿಸಿದೆ? ವಜ್ರಪಾಣಿಯಾದ ಇಂದ್ರನಿಗೆ ಮಾಡಿಕೊಟ್ಟ ಪ್ರಿಯವಾದ ಕಾರ್ಯವೇನು? ಇವುಗಳೆಲ್ಲವನ್ನೂ ಸವಿಸ್ತರವಾಗಿ ಹೇಳು, ಅರ್ಜುನ!"

"ಮಹಾರಾಜ! ನಾನು ಯಾವ ರೀತಿಯಲ್ಲಿ ಶತಕ್ರತುವನ್ನೂ ಮತ್ತು ಭಗವಂತನಾದ ಶಂಕನನ್ನೂ ಸಂದರ್ಶಿಸಿದೆನೆಂಬುದನ್ನು ಹೇಳುವೆನು, ಕೇಳು :

ನಿನ್ನಿಂದ ನಿರ್ದೇಶಿತವಾದ ನಾನು, ಪ್ರಯಾಣಹೊರಟ ಕಾಲದಲ್ಲಿ ನಿನ್ನಿಂದ ಉಪದಿಷ್ಟವಾದ ಮಂತ್ರವಿದ್ಯೆಯನ್ನು ಯಥೋಕ್ತವಾಗಿ, ಯಥಾ

ವಿಧಿಯಾಗಿ ಪುನಶ್ಚರಣೆಮಾಡಿ ತಪಶ್ಚರಣೆಮಾಡಲು ಕಾಮ್ಯಕವನದಿಂದ ಹೊರಟು ಭೃಗುತುಂಗವೆಂಬ ಕ್ಷೇತ್ರಕ್ಕೆ ಹೋದೆನು. ಭೃಗುತುಂಗಕ್ಷೇತ್ರದಲ್ಲಿ ಉಪವಾಸದಿಂದ ಒಂದು ರಾತ್ರಿಯನ್ನು ಕಳೆದು ಬೆಳಗಾಗುತ್ತಲೇ ಸ್ನಾನ-ಸಂಧ್ಯಾದಿಗಳನ್ನು ಯಥಾವಿಧಿಯಾಗಿ ಮುಗಿಸಿದ ನಾನು ಒಬ್ಬ ಬ್ರಾಹ್ಮಣನನ್ನು ಸಂದರ್ಶಿಸಿದೆನು. ಆ ಬ್ರಾಹ್ಮಣನು ನನ್ನನ್ನು ಕಂಡು 'ಕುಂತೀಪುತ್ರನೇ! ನೀನೆಲ್ಲಿಗೆ ಹೋಗಲಿರುವೆ?' ಎಂದು ಪ್ರಶ್ನಿಸಿದನು. ಆ ಬ್ರಾಹ್ಮಣನೊಡನೆ ನಾನು ನಮ್ಮ ಹಿಂದಿನ ಚರಿತ್ರೆಯನ್ನೂ ಮತ್ತು ಯಾತ್ರೆ ಹೊರಟಿರುವ ಉದ್ದೇಶವನ್ನೂ ಯಥಾವತ್ತಾಗಿ ಹೇಳಿದೆನು.

ನಾನು ಎಲ್ಲ ವಿಷಯಗಳನ್ನೂ ಹೇಳಿದನಂತರ ಆ ಬ್ರಾಹ್ಮಣನು ನನ್ನ ವಿಷಯದಲ್ಲಿ ಸುಪ್ರೀತನಾದನು ಮತ್ತು ನನ್ನನ್ನು ಬಹುವಾಗಿ ಶ್ಲಾಘನೆ ಮಾಡಿದನು.

ಅಣ್ಣ! ಆ ಬ್ರಾಹ್ಮಣನು ನನ್ನ ವಿಷಯದಲ್ಲಿ ಸುಪ್ರೀತನಾಗಿ ನನ್ನನ್ನು ಕುರಿತು ಹೇಳಿದನು : 'ಭಾರತನೇ! ತಪಶ್ಚರಣೆಮಾಡು. ಅದರ ಫಲವಾಗಿ ನೀನು ಬಹುಕ್ಷಿಪ್ರದಲ್ಲಿಯೇ ಪುರಂದರನನ್ನು ಸಂದರ್ಶಿಸುವೆ."

ಬ್ರಾಹ್ಮಣೋತ್ತಮನ ನಿರ್ದೇಶಾನುಸಾರವಾಗಿ ನಾನು ಹಿಮವತ್ಪರ್ವತದ ತಪ್ಪಲಿಗೆ ಹೋಗಿ ತಪಶ್ಚರಣೆಮಾಡಲು ಉಪಕ್ರಮಿಸಿದೆನು. ಮೊದಲನೆಯ ತಿಂಗಳು ಕಂದ-ಮೂಲ-ಫಲಗಳನ್ನು ತಿನ್ನುತ್ತಿದ್ದೆನು. ಎರಡನೆಯ ತಿಂಗಳು ಕೇವಲ ಜಲಪ್ರಾಶನ ಮಾಡಿಕೊಂಡಿದ್ದು ತಪಶ್ಚರಣೆ ಮಾಡುತ್ತಿದ್ದೆನು. ಮೂರನೆಯ ತಿಂಗಳು ನಿರಾಹಾರನಾಗಿ ನೀರನ್ನೂ ತೆಗೆದುಕೊಳ್ಳದೇ ತಪಶ್ಚರಣೆಮಾಡಿದೆನು. ನಾಲ್ಕನೆಯ ತಿಂಗಳು ಎಲ್ಲಿಯೂ ಚಲಿಸದೇ, ಒಂದೆಡೆಯಲ್ಲಿಯೇ ನಿಂತು ಕೈಗಳೆರಡನ್ನೂ ಮೇಲೆತ್ತಿ ತಪಶ್ಚರಣೆ ಮಾಡಿದೆನು. ನಿರಾಹಾರನಾಗಿ ನೀರನ್ನೂ ಪ್ರಾಶನಮಾಡದೇ ಘೋರತಪಸ್ಸಿನಲ್ಲಿ ನಾನು ನಿರತನಾಗಿದ್ದರೂ ನನಗೆ ಆಯಾಸವೆಂಬುದೇ ಉಂಟಾಗಲಿಲ್ಲವಣ್ಣ! ಇದು ನನಗೆ ಬಹಳ ಆಶ್ಚರ್ಯವೆನಿಸಿತು.

ನಾಲ್ಕು ತಿಂಗಳು ಕಳೆದು ಐದನೆಯ ತಿಂಗಳಿನ ಮೊದಲನೆಯ ದಿನ ಹಂದಿಯ ರೂಪದಲ್ಲಿದ್ದ ಒಂದು ಪ್ರಾಣಿಯು ನನ್ನ ಸಮೀಪಕ್ಕೆ ಬಂದಿತು.

ತನ್ನ ಮೂತಿಯಿಂದ ಭೂಮಿಯನ್ನು ಕೀಳುತ್ತಾ ಕಾಲುಗಳಿಂದ ನೆಲವನ್ನು ಬಗಿಯುತ್ತಾ, ತನ್ನ ಹೊಟ್ಟೆಯಿಂದ ನೆಲವನ್ನು ಗುಡಿಸುತ್ತಾ, ಮತ್ತೊಮ್ಮೆ 'ಗುರ್-ಗುರ್' ಶಬ್ದಮಾಡುತ್ತಾ ಅತ್ತಿತ್ತ ಆ ಹಂದಿಯು ಓಡಾಡುತ್ತಿದ್ದಿತು. ಆ ಹಂದಿಯನ್ನು ಅನುಸರಿಸಿ ಕಿರಾತವೇಷವನ್ನು ಧರಿಸಿದ್ದ ಮಹಾಪುರುಷ ನೊಬ್ಬನು ಅನೇಕಸ್ತ್ರೀಯರಿಂದೊಡಗೂಡಿ ನಾನಿದ್ದ ಸ್ಥಳಕ್ಕೇ ಆಗಮಿಸಿದನು. ಆ ಕಿರಾತನು ಕೈಯಲ್ಲಿ ಧನುರ್ಬಾಣಗಳನ್ನೂ ಮತ್ತು ಖಡ್ಗ-ತ್ರಿಶೂಲಗಳನ್ನೂ ಹಿಡಿದಿದ್ದನು. ಅವನು ಬರುವ ವೇಳೆಗೆ ಸರಿಯಾಗಿ, ನಾನು ತಪಶ್ಚರಣೆಗೆ ಕುಳಿತಿದ್ದ ಸ್ಥಳದಲ್ಲಿ ಭಯಂಕರವಾಗಿ ಗರ್ಜನೆಮಾಡುತ್ತಾ ರೋಮಾಂಚವ ನ್ನುಂಟುಮಾಡುವಂತಿದ್ದ ಹಂದಿಗೆ ಗುರಿಯಿಟ್ಟು ಬಾಣಪ್ರಯೋಗಮಾಡಿದೆನು. ಆ ಕಿರಾತನೂ ಅದೇ ಸಮಯದಲ್ಲಿ ಅದೇ ಹಂದಿಗೆ ಗುರಿಯಿಟ್ಟು ನನ್ನ ಮನ ಸ್ಸನ್ನು ಕಂಪನಗೊಳಿಸುವಂತೆ ಬಾಣವನ್ನು ಪ್ರಯೋಗಿಸಿದನು. ಯಾರು ಪ್ರಯೋಗಿಸಿದ ಬಾಣವು ಹಂದಿಗೆ ಮೊದಲು ಚುಚ್ಚಿತೆಂದು ಆ ಸಮಯದಲ್ಲಿ ಹೇಳುವ ಸಾಧ್ಯತೆಯಿರಲಿಲ್ಲ. ನಾನು ಬಾಣಪ್ರಯೋಗಮಾಡಿದುದನ್ನು ಕಂಡ ಕಿರಾತನು ಕುಪಿತನಾಗಿ ಹೇಳಿದನು ; 'ನಿನಗೆ ಬೇಟೆಯಾಡುವಾಗ ಅನುಸರಿಸ ಬೇಕಾದ ಧರ್ಮವೇನೆಂಬುದೇ ತಿಳಿಯದೇ? ನನ್ನಿಂದ ಪ್ರಹರಿಸಲ್ಪಟ್ಟ ಈ ಹಂದಿಗೆ ಗುರಿಯಿಟ್ಟು ನೀನೇಕೆ ಬಾಣಪ್ರಯೋಗವನ್ನು ಮಾಡಿದೆ? ನಿನ್ನ ದುರಭಿಮಾನವೇ ನೀನು ಮೃಗಯಾಧರ್ಮವನ್ನು ಅತಿಕ್ರಮಿಸಿ ನಡೆಯಲು ಕಾರಣವಾಗಿರಬಹುದು. ನಿನ್ನ ದರ್ಪವನ್ನು ನನ್ನ ಈ ತೀಕ್ಷ್ಣವಾದ ಬಾಣ ಗಳಿಂದ ಈಗಲೇ ಮುರಿಯುವೆನು. ಸಿದ್ಧನಾಗು!'

ಹೀಗೆ ಹೇಳಿ ಆ ಕಿರಾತನು–ಇಂದ್ರನು ಮೋಡಗಳ ರಾಶಿಯಿಂದ ಪರ್ವತವನ್ನು ಮುಚ್ಚಿಬಿಡುವಂತೆ–ನನ್ನ ಮೇಲೆ ಬಾಣಗಳ ಮಳೆಗರೆದು ನನ್ನನ್ನು ಆ ಬಾಣಗಳ ಸಮೂಹದಿಂದ ಮುಚ್ಚಿಬಿಟ್ಟನು. ಮರುಕ್ಷಣದಲ್ಲಿಯೇ ನಾನೂ ಸಹ ನನ್ನ ನಿಶಿತವಾದ ಬಾಣಗಳ ಜಾಲದಿಂದ ಕಿರಾತನನ್ನು ಘಾಸಿಪಡಿಸಿದೆನು. ಅಷ್ಟಕ್ಕೇ ನಾನು ಸುಮ್ಮನಾಗಲಿಲ್ಲ. ಪ್ರಜ್ವಲಿಸುವ ಮುಖದಿಂದ ಕೂಡಿದ್ದ ಮಹಾಸ್ತ್ರಗಳನ್ನು ಧನುಸ್ಸಿನಲ್ಲಿ ಆರೋಪಿಸಿ, ಮಂತ್ರಪುನಶ್ಚರಣೆಮಾಡಿ– ಇಂದ್ರನು ವಜ್ರಾಯುಧದಿಂದ ಪರ್ವತಗಳನ್ನು ಪ್ರಹರಿಸುವಂತೆ–ನನ್ನೆದುರಿ ನಲ್ಲಿದ್ದ ಮಹಾಕಾಯನಾದ, ಪರ್ವತೋಪಮನಾದ ಕಿರಾತನ ಮೇಲೆ ಪ್ರಯೋ

ಗಿಸಿದೆನು. ಆದರೆ, ಧರ್ಮಜ! ನನ್ನ ತೀಕ್ಷ್ಣವಾದ ಬಾಣಪ್ರಯೋಗದಿಂದ ಕಿರಾತನ ಮೇಲೆ ಯಾವ ಪರಿಣಾಮವೂ ಉಂಟಾಗಲಿಲ್ಲ. ನಾನು ಬಾಣ ಪ್ರಯೋಗವನ್ನು ಮಾಡಿದೊಡನೆಯೇ ಆ ಮಹಾಪುರುಷನ ಶರೀರದಿಂದ ನೂರಾರು ಸಾವಿರಾರು ಕಿರಾತರು ಹುಟ್ಟಿದರು. ಅವರೆಲ್ಲರೂ ಅವನಿಗೆ ಸದೃಶ ರಾಗಿಯೇ ಇದ್ದರು. ಅದರಿಂದ ನಾನೇನೂ ಭೀತನಾಗಲಿಲ್ಲ. ಸಾವಿರಾರು ಮಂದಿ ಕಿರಾತರಿಗೂ ಗುರಿಯಿಟ್ಟು ಏಕಕಾಲದಲ್ಲಿ ಬಾಣಗಳನ್ನು ಪ್ರಯೋಗಿಸಿ ದೆನು. ಮರುಕ್ಷಣದಲ್ಲಿಯೇ ಅಸಂಖ್ಯಾತವಾದ ಆ ಕಿರಾತರೂಪಗಳೂ ಮಹಾ ಕಿರಾತನಲ್ಲಿ ಐಕ್ಯವಾಗಿ ಹೋದುವು. ಆಗಲೂ ನಾನು ಧೃತಿಗೆಡದೇ ಮಹಾ ಕಿರಾತನ ಮೇಲೆ ಬಹುತೀಕ್ಷ್ಣವಾದ ಬಾಣಗಳನ್ನು ಪ್ರಯೋಗಮಾಡಿದೆನು.

ಮರುಕ್ಷಣದಲ್ಲಿಯೇ ಆ ಮಹಾತ್ಮನ ಶರೀರವು ಬಹುಸೂಕ್ಷ್ಮರೂಪ ವಾಗಿಯೂ, ತಲೆಯು ಬೃಹದಾಕಾರವಾಗಿಯೂ ಪರಿವರ್ತಿತವಾಯಿತು. ಆಗಲೂ ನಾನು ತಲೆಗೆ ಗುರಿಯಿಟ್ಟು ಅನೇಕಬಾಣಗಳನ್ನು ಪ್ರಯೋಗಿಸಿ ದೆನು. ಪುನಃ ಅವನ ತಲೆಯು ಸೂಕ್ಷ್ಮರೂಪವನ್ನು ಹೊಂದಿತು. ಶರೀರವು ಮಾತ್ರ ಪರ್ವತೋಪಮವಾಗಿ ಬೆಳೆಯಿತು. ಆಗಲೂ ನಾನು ಬಾಣಪ್ರಯೋಗ ಮಾಡಲಾಗಿ ಮಹಾಕಿರಾತನು ನನ್ನ ಪೂರ್ವರೂಪವನ್ನು ಧರಿಸಿ ನನ್ನ ಮೇಲೆ ಬಾಣಗಳ ಮಳೆಯನ್ನೇ ಸುರಿಸಿಬಿಟ್ಟನು. ನಾನು ಸಾಧಾರಣವಾದ ಬಾಣ ಗಳಿಂದ ಅವನನ್ನು ಜಯಿಸಲು ಸಾಧ್ಯವಿಲ್ಲವೆಂದು ಮನಗಂಡು ವಾಯವ್ಯಾಸ್ತ್ರವನ್ನು ಧನುಸ್ಸಿಗೆ ಯೋಜಿಸಿ ಮಂತ್ರಪುನಶ್ಚರಣೆಮಾಡಿ ಪ್ರಯೋಗಿಸಿದೆನು. ಆ ಮಹಾಸ್ತ್ರವೂ ಆ ಮಹಾಕಿರಾತನ ಸಮೀಪಕ್ಕೆ ಹೋಗದಿದ್ದುದನ್ನು ಕಂಡು ನನಗೆ ಬಹಳ ಆಶ್ಚರ್ಯವಾಯಿತು. ವಾಯವ್ಯಾಸ್ತ್ರದ ಪರಾಭವವನ್ನು ನಾನದುವರೆಗೂ ಕಂಡವನೇ ಅಲ್ಲ. ನಾನು ನನ್ನ ಶಕ್ತಿಯೆಲ್ಲವನ್ನೂ ಕೇಂದ್ರೀಕರಿಸಿ ಸಾವಿರಾರು ಬಾಣಗಳನ್ನು ಕಿರಾತನ ಮೇಲೆ ಪುನಃ ಪ್ರಯೋಗಿಸಿದೆನು. ಸ್ಥೂಣಾಕರ್ಣ, ವಾರುಣ, ಶರವರ್ಷ, ಶಲಭ, ಅಶ್ಮವರ್ಷ-ಮುಂತಾದ ಮಹಾಸ್ತ್ರಗಳೆಲ್ಲವನ್ನೂ ಆ ಮಹಾಕಿರಾತನ ಮೇಲೆ ನಾನು ಅನುಸ್ಯೂತನಾಗಿ ಪ್ರಯೋಗಿಸಿದೆನು. ಕಿರಾತನು ಬಾಣಪ್ರಯೋಗಮಾಡಿ ನಾನು ಪ್ರಯೋಗಿಸಿದ ಮಹಾಸ್ತ್ರಗಳನ್ನು ತಡೆಯುತ್ತಿರಲಿಲ್ಲ. ಸ್ಥಾಣುವಿನಂತೆ ನಿಂತಿದ್ದ ನಾನು ನಿರಂತರವಾಗಿ

ಪ್ರಯೋಗಿಸುತ್ತಿದ್ದ ಅಸ್ತ್ರಗಳೆಲ್ಲವನ್ನೂ ನುಂಗಿ ಹಾಕುತ್ತಿದ್ದನು. ನನ್ನಲ್ಲಿ ಬೇರಾವ ಅಸ್ತ್ರಗಳಾಗಲೀ, ಬಾಣಗಳಾಗಲೀ ಉಳಿಯಲಿಲ್ಲ. ಅತ್ಯಂತ ಸಂದಿಗ್ಧಸ್ಥಿತಿಯಲ್ಲಿ ಮಾತ್ರ ಪ್ರಯೋಗಿಸಬೇಕಾಗಿದ್ದ ಬ್ರಹ್ಮಾಸ್ತ್ರವು ಮಾತ್ರವೇ ಉಳಿದಿತ್ತು. ಬೇರೆ ಮಾರ್ಗವಿಲ್ಲದೇ ಬ್ರಹ್ಮಾಸ್ತ್ರವನ್ನೇ ಬತ್ತಳಿಕೆಯಿಂದ ತೆಗೆದು ಮಂತ್ರಪುನಶ್ಚರಣೆ ಮಾಡಿ ಆ ಮಹಾಕಿರಾತನ ಮೇಲೆ ಪ್ರಯೋಗಿಸಿದೆನು. ನಾನು ಪ್ರಯೋಗಿಸಿದ ಬ್ರಹ್ಮಾಸ್ತ್ರದಿಂದ ಜಾಜ್ವಲ್ಯಮಾನವಾಗಿ ಪ್ರಕಾಶಿಸುತ್ತಿದ್ದ ಅಸಂಖ್ಯಾತಬಾಣಗಳು ಹೊರಟು ಮಹಾಕಿರಾತನನ್ನು ಆವರಿಸಿದುವು. ಅವುಗಳೆಲ್ಲವನ್ನೂ ಅವನು ನುಂಗಿ ಹಾಕಲು ಅವನ ಶರೀರವು ಬಹಳ ದೊಡ್ಡದಾಗಿ ಬೆಳೆಯಿತು. ನಾನು ಪ್ರಯೋಗಿಸಿದ ಬ್ರಹ್ಮಾಸ್ತ್ರದಿಂದ ಸಕಲಚರಾಚರಪ್ರಾಣಿಗಳೂ ನಡುಗಿದುವು. ನಾಲ್ಕು ದಿಕ್ಕುಗಳೂ ಪ್ರಕಾಶಿತವಾದುವು. ಧರ್ಮಜ! ಆ ಬ್ರಹ್ಮಾಸ್ತ್ರವೂ ಮಹಾಕಿರಾತನನ್ನು ಘಾಸಿಪಡಿಸಲು ಅಸಮರ್ಥವಾಯಿತು. ಆ ಮಹಾಸ್ತ್ರ ವನ್ನೂ ಆ ಕಿರಾತನು ಕಬಳಿಸಿಬಿಟ್ಟನು. ಅಜೇಯವಾದ, ಅನುಪಮವಾದ, ಪರಾಜಯವೆಂಬುದನ್ನೇ ಕಾಣದ ಬ್ರಹ್ಮಾಸ್ತ್ರವೂ ನಿಷ್ಪ್ರಯೋಜಕ ವಾಗಲಾಗಿ, ಮುಂದೇನು ಮಾಡಬೇಕೆಂಬುದೇ ತಿಳಿಯದೇ ನಾನು ಭೀತ ನಾದೆನು. ನನ್ನ ಕೇಯಲ್ಲಿದ್ದುದು ಧನುಸ್ಸು ಮತ್ತು ಬತ್ತಳಿಕೆಗಳು ಮಾತ್ರ. ಮಹಾಸ್ತ್ರಗಳೆಲ್ಲವೂ ಹೊರಟುಹೋಗಿ ಬತ್ತಳಿಕೆಗಳು ಮಾತ್ರವೇ ಉಳಿದಿದ್ದುವು. ದಿವ್ಯಧನುಸ್ಸನ್ನೂ ಮತ್ತು ಬತ್ತಳಿಕೆಗಳನ್ನೇ ದಿವ್ಯಾಯುಧಗಳನ್ನಾಗಿ ಮಾಡಿಕೊಂಡು ರಭಸದಿಂದ ಆ ಕಿರಾತನ ತಲೆಗೆ ಗುರಿಯಿಟ್ಟು ಹೊಡೆದೆನು. ಗಟ-ಗಟನೆ ನೀರು ಕುಡಿಯುವ ರೀತಿಯಲ್ಲಿ ಆ ಮಹಾಧನುಸ್ಸನ್ನೂ ಮತ್ತು ಬತ್ತಳಿಕೆಗಳನ್ನೂ ಆ ಮಹಾಕಿರಾತನು ನಿರಾಯಾಸವಾಗಿ ನುಂಗಿಹಾಕಿದನು.

ಧರ್ಮಜ! ನನ್ನಲ್ಲಿದ್ದ ಆಯುಧಗಳೆಲ್ಲವೂ ಮುಗಿದುಹೋದನಂತರ ನನಗೂ ಕಿರಾತನಿಗೂ ಮಲ್ಲಯುದ್ಧರು ಪ್ರಾರಂಭವಾಯಿತು. ನಾವಿಬ್ಬರೂ ಮುಷ್ಟಿಯುದ್ಧವನ್ನು ಮಾಡತೊಡಗಿದೆವು. ಒಬ್ಬರನ್ನೊಬ್ಬರು ಬಿಗಿಯಾದ ಮುಷ್ಟಿಗಳಿಂದ ಪರಸ್ಪರ ಗುದ್ದಾಡಿದೆವು. ಮುಷ್ಟಿಯುದ್ಧದಲ್ಲಿಯೂ ನಾನು

ಆ ಕಿರಾತನನ್ನು ಗೆಲ್ಲಲಾಗಲಿಲ್ಲ. ಅವನನ್ನು ಗೆಲ್ಲುವ ಬದಲು ನಾನೇ ಅವ ನಿಂದ ಬಲವಾಗಿ ಪೆಟ್ಟುತಿಂದು ಮೂರ್ಛಿತನಾಗಿ ಕೆಳಗುರುಳಿದೆನು. ನಾನು ಮೂರ್ಛಿತಿಳಿದು ಮೇಲೇಳುತ್ತಿದ್ದಾಗ ಆ ಮಹಾಪುರುಷನು ಪಕ್ಕಪಕನೆ ನಗುತ್ತಾ ತನ್ನ ಪರಿವಾರದೊಡನೆಯೂ ಸ್ತ್ರೀಯರೊಡನೆಯೂ ಅದೃಶ್ಯನಾಗಿ ಹೋದನು. ಕನಸಿನಂತೆ ನಡೆದುಹೋದ ಆ ವಿಚಿತ್ರವನ್ನು ನೆನೆಯುತ್ತಾ ನಾನು ಕಣ್ಣುಗಳನ್ನುಜ್ಜಿಕೊಂಡು ಮೇಲೇಳುತ್ತಿದ್ದತಂ ಆ ಮಹಾನುಭಾವನು ಅಧ್ಭುತವಾದ ವಸ್ತ್ರವನ್ನು ಧರಿಸಿದವನಾಗಿ ದಿವ್ಯವಾದ ರೂಪವನ್ನು ಧರಿಸಿ, ನನ್ನ ಮುಂದೆ ಸಪರಿವಾರನಾಗಿ ಉಪಸ್ಥಿತನಾದನು. ಕಿರಾತರೂಪವನ್ನು ತೊರೆದು ದಿವ್ಯಮಂಗಳ ಸ್ವರೂಪವನ್ನು ಧರಿಸಿ, ಪಾರ್ವತೀಸಮೇತನಾಗಿ ನನ್ನ ಮುಂದೆ ನಿಂತಿದ್ದವನೇ ನನ್ನ ತಪಸ್ಸಿಗೆ ವಿಷಯೀಭೂತನಾಗಿದ್ದ ಪರಾತ್ಪರನಾದ ಪರಮಶಿವನು. ಧರ್ಮಜ! ವೃಷಭಧ್ವಜನಾಗಿದ್ದ ಪರಶಿವನು ಅನೇಕ ಸರ್ಪಗಳನ್ನು ಆಭರಣರೂಪವಾಗಿ ಕತ್ತಿನಲ್ಲಿ ಧರಿಸಿದ್ದನು. ಕೈಯಲ್ಲಿ ಪಿನಾಕ ವೆಂಬ ಅಮೋಘವಾದ ಧನುಸ್ಸಿದ್ದಿತು. ಯಾವ ರೂಪವನ್ನಾದರೂ ಧರಿಸಲು ಪರರವನು ಸಮರ್ಥನಲ್ಲವೇ! ಇನ್ನೂ ಯುದ್ಧಮಾಡಬೇಕೆಂಬ ಉದ್ವೇಗ ದಲ್ಲಿಯೇ ಇದ್ದ ನನ್ನ ಬಳಿಗೆ ಪರಾತ್ಪರನಾದ, ಪರಂಧಾಮನಾದ, ತ್ರಿಶೂಲ ಪಾಣಿಯಾದ ಪರಮೇಶ್ವರನು ಬಂದು ಹೇಳಿದನು :

'ಕೌಂತೇಯನೇ! ನಿನ್ನ ವಿಷಯದಲ್ಲಿ ನಾನು ಸಂತುಷ್ಟನಾಗಿರುವೆನು. ನಿನಗಾಗಿ ನಾನು ಮಾಡಬೇಕಾಗಿರುವ ಕಾರ್ಯವನ್ನು ನಿಸ್ಸಂಕೋಚವಾಗಿ ಹೇಳು' ( ಹೀಗೆ ಹೇಳಿ ನನ್ನ ಅಕ್ಷಯತೂಣೀರಗಳನ್ನೂ, ಧನುಸ್ಸನ್ನೂ ನನ್ನ ಕೈಗೆ ಕೊಟ್ಟು ಪನಃ ಹೇಳಿದನು : )

**ತುಷ್ಟೋऽಸ್ಮಿ ತವ ಕೌನ್ತೇಯ ಬ್ರೂಹಿ ಕಿಂ ಕರವಾಣಿ ತೇ ।**
**ಯತ್ತೇ ಮನೋಗತಂ ವೀರ ತದ್ಬ್ರೂಹಿ ವಿತರಾಮ್ಯಹಮ್ ।**
**ಅಮರತ್ವಮಪಾಹಾಯ ಬ್ರೂಹಿ ಯತ್ತೇ ಮನೋಗತಮ್ ॥೪೭॥**

'ನಾನು ಸಂತುಷ್ಟನಾಗಿದ್ದೇನೆ. ವೀರನೇ! ನೀನು ಯಾವ ವರವನ್ನಾ ದರೂ ಕೇಳು. ಕೊಡಲು ಸಿದ್ಧನಾಗಿರುವೆನು. ನಾನು ನಿನ್ನ ವಿಷಯದಲ್ಲಿ ಸುಪ್ರೀತನಾಗಿರವೆನು. ನಿನ್ನ ಹೃದಯದಲ್ಲಿರುವ ಆಶಯವನ್ನು ಮರೆ

ಮಾಚದೇ ಹೇಳು. ಅಮರತ್ವವೊಂದನ್ನು ಬಿಟ್ಟು ಯಾವ ವರವನ್ನಾದರೂ ಕೇಳು. ಒಡನೆಯೇ ಅನುಗ್ರಹಿಸುವೆನು, ಅರ್ಜುನ!'

ಅಣ್ಣ! ಪರಮೇಶ್ವರನು ಆ ಸಮಯದಲ್ಲಿ ತ್ರೈಲೋಕ್ಯಾಧಿಪತ್ಯವನ್ನೇ ಕೊಡುವ ಅಭಿಪ್ರಾಯವನ್ನು ತೋರಿದರೂ-ನನ್ನ ಮನಸ್ಸು ಮುಖ್ಯವಾಗಿ ಅಸ್ತ್ರಗಳ ಸಂಗ್ರಹದಲ್ಲಿಯೇ ಇದ್ದಿತಾದ್ದರಿಂದ ನಾನು ಮತ್ತಾವ ವರವನ್ನೂ ಕೇಳದೇ ಮನಃಪೂರ್ವಕವಾಗಿ ನಮಸ್ಕರಿಸಿ ಕೈಜೋಡಿಸಿ ಸ್ವಾಮಿಯನ್ನು ಕುರಿತು ಹೀಗೆಂದೆನು :

**ಭಗವನ್ಮೇ ಪ್ರಸನ್ನಶ್ಚೇದೀಪ್ಸಿತೋಽಯಂ ವರೋ ಮಮ ।**
**ಅಸ್ತ್ರಾಣೀಚ್ಛಾಮ್ಯಹಂ ಜ್ಞಾತುಂ ಯಾನಿ ದೇವೇಷು ಕಾನಿಚಿತ್ ॥**

'ದೇವದೇವನೇ! ನೀನು ನಿಶ್ಚಯವಾಗಿಯೂ ನನ್ನ ವಿಷಯದಲ್ಲಿ ಸುಪ್ರೀತನಾಗಿರುವೆಯಾದರೆ–ನಾನು ಒಂದು ವರವನ್ನು ಮಾತ್ರ ನಿನ್ನಿಂದ ಪಡೆಯಲಿಚ್ಛಿಸಿದ್ದೇನೆ. ಅದೇನೆಂದರೆ : ನಾನು ದೇವತೆಗಳಲ್ಲಿರುವ ಮಹಾಸ್ತ್ರಗಳೆಲ್ಲವನ್ನೂ ಪಡೆಯುವ ಆಶಯದಿಂದಿರುತ್ತೇನೆ. ದಯಮಾಡಿ ಅನುಗ್ರಹಿಸು.'

ನನ್ನ ಈ ಪ್ರಾರ್ಥನೆಯನ್ನು ಕೇಳಿ ಪರಮೇಶ್ವರನು ನಸುನಗುತ್ತಾ ಹೇಳಿದನು : 'ಕೊಡುತ್ತೇನೆ. ಪಾರ್ಥ! ನೀನು ಅಪೇಕ್ಷಿಸಿರುವ ಈ ವರವನ್ನು ನಾನು ಅನುಗ್ರಹಿಸುತ್ತೇನೆ. ನನ್ನದೇ ಆದ ರೌದ್ರಾಸ್ತ್ರವೂ ನಿನ್ನನ್ನು ಬಂದು ಸೇರುತ್ತದೆ.' ಹೀಗೆಂದು ಹೇಳಿ ಪರಮಕಾರುಣಿಕನಾದ ರುದ್ರದೇವನು ಅದ್ಭುತವಾದ ಪಾಶುಪತಾಸ್ತ್ರವನ್ನು ನನಗೆ ಅನುಗ್ರಹಿಸಿಕೊಟ್ಟನು. ಆ ಮಹಾಸ್ತ್ರದ ಪ್ರಯೋಗನಿಬಂಧನೆಗಳನ್ನು ತಿಳಿಯಹೇಳುತ್ತಾ ಪರಶಿವನು ನನ್ನೊಡನೆ ಹೀಗೆಂದು ಹೇಳಿದನು :

**ನ ಪ್ರಯೋಜ್ಯಂ ಭವೇದೇತನ್ಮಾನುಷೇಷು ಕಥಞ್ಚನ ।**
**ಜಗದ್ವಿನಿರ್ದಹೇದೇವಮಲ್ಪತೇಜಸಿ ಪಾತಿತಮ್ ॥೫೨॥**

**ಪೀಡ್ಯಮಾನೇನ ಬಲವತ್ಪ್ರಯೋಜ್ಯಂ ಸ್ಯಾದ್ಧನಂಜಯ ।**
**ಅಸ್ತ್ರಾಣಾಂ ಪ್ರತಿಘಾತೇ ಚ ಸರ್ವಥೈವ ಪ್ರಯೋಜಯೇತ್ ॥೫೩॥**

'ಮಗು, ಪಾರ್ಥ! ಈ ಮಹಾಸ್ತ್ರವನ್ನು ಮಾನವರ ಮೇಲೆ ಪ್ರಯೋಗಿಸಲೇಬಾರದು. ಅಲ್ಪವೀರ್ಯವುಳ್ಳ ಸಾಧಾರಣಯೋಧನೊಬ್ಬನ ಮೇಲೆ ಈ ಮಹಾಸ್ತ್ರವನ್ನು ಪ್ರಯೋಗಿಸಿದ್ದೇ ಆದರೆ ಈ ಮಹಾಸ್ತ್ರವು ಪ್ರಪಂಚವನ್ನೇ ದಹಿಸಿಬಿಡುತ್ತದೆ. ಶತ್ರುವಿನೊಡನೆ ಯುದ್ಧಮಾಡುವ ಸಮಯದಲ್ಲಿ ಬಹು ಕ್ಲಿಷ್ಟಸಮಯವು ಒದಗಿದಾಗ ಮಾತ್ರವೇ ನೀನು ಈ ಮಹಾಸ್ತ್ರವನ್ನು ಪ್ರಯೋಗಿಸಬಹುದಾಗಿದೆ. ಮಹಾಪರಾಕ್ರಮಿಯಾದ ಶತ್ರುವೊಬ್ಬನ ಮೇಲೆ ನೀನು ಆತ್ಮರಕ್ಷಣೆಗಾಗಿ ಈ ಮಹಾಸ್ತ್ರವನ್ನು ಕಟ್ಟಕಡೆಯದಾಗಿ ಪ್ರಯೋಗಿಸಬಹುದು. ಈ ಪಾಶುಪತವೆಂಬ ಮಹಾಸ್ತ್ರಕ್ಕೆ ಪರಾಜಯ ವೆಂಬುದೇ ಇಲ್ಲ, ಅರ್ಜುನ!'

ಪರಮೇಶ್ವರನು ಹೀಗೆ ಹೇಳಿ ಪಾಶುಪತಾಸ್ತ್ರವನ್ನು ಅನುಗ್ರಹಿಸುತ್ತಿದ್ದಂತೆಯೇ–ಅಪ್ರತಿಹತವಾದ, ಸರ್ವಾಸ್ತ್ರಗಳನ್ನೂ ಪ್ರತಿಬಂಧಿಸಲು ಸಮರ್ಥವಾದ, ಮಹಾಪರಾಕ್ರಮವುಳ್ಳ, ಶತ್ರುಗಳನ್ನು ವಿಧ್ವಂಸಮಾಡಲು ಸಮರ್ಥವಾದ, ಶತ್ರುಗಳ ಅಪಾರಸೈನ್ಯವನ್ನೂ ಕ್ಷಣಮಾತ್ರದಲ್ಲಿ ಧ್ವಂಸ ಮಾಡುವ ಸಾಮರ್ಥ್ಯವುಳ್ಳ, ದುರಾಸದರಾದ ಸುರ-ದಾನವ-ರಾಕ್ಷಸರಿಂದಲೂ ಎದುರಿಸಲು ದುಸ್ಸಾಧ್ಯವಾದ ಪಾಶುಪತಾಸ್ತ್ರದ ಅಧಿದೇವತೆಯು ಮೂರ್ತಿಮತ್ತಾಗಿ ಬಂದು ನನ್ನ ಪಕ್ಕದಲ್ಲೇ ನಿಂತಿತು. ಶಿವನ ಅನುಜ್ಞೆಯನ್ನು ಪಡೆದ ನಾನು ಅಲ್ಲಿಯೇ ಕುಳಿತೆನು. ಆ ದೇವತೆಯು ನನ್ನನ್ನು ಅನುಗ್ರಹಿಸಿ ಅದೃಶ್ಯವಾಯಿತು. ನಾನು ನೋಡುತ್ತಿರುವಂತೆಯೇ ಪರಿವಾರಸಮೇತನಾದ ಪರಮೇಶ್ವರನೂ ಅದೃಶ್ಯನಾದನು."

೧೬೭ನೆಯ ಅಧ್ಯಾಯವು ಮುಗಿಯಿತು.

ೞ೬೮ನೆಯ ಅಧ್ಯಾಯ ನಿವಾತಕವಚಯುದ್ಧಪರ್ವ (ಮುಂದುವರಿದಿದೆ.)

## ದೇವಲೋಕದಲ್ಲಿ ಅರ್ಜುನನ ಅಸ್ತ್ರವಿದ್ಯಾಭ್ಯಾಸ : ನಿವಾತಕವಚರೊಡನೆ ಯುದ್ಧಕ್ಕೆ ಹೊರಡಲು ಸಿದ್ಧತೆ

"ಅಣ್ಣ! ದೇವದೇವನಾದ ತ್ರ್ಯಂಬಕನಿಂದ ಅನುಗೃಹೀತನಾದ ನಾನು ಸಂತೋಷಭರಿತನಾಗಿ ಅಲ್ಲಿಯೇ ಆ ರಾತ್ರಿಯನ್ನು ಕಳೆದೆನು. ಬೆಳಗಾಗುತ್ತಲೇ

ನನ್ನ ನಿತ್ಯಕರ್ಮಗಳನ್ನು ಮುಗಿಸಿ ಕುಳಿತಿರುವಾಗ ನಾನು ಹಿಂದೆ ಸಂದರ್ಶಿಸಿದ್ದ ಬ್ರಾಹ್ಮಣನೇ ಪುನಃ ನನ್ನ ಸಮೀಪಕ್ಕೆ ಆಗಮಿಸಿದನು. ಆ ಬ್ರಾಹ್ಮಣನೊಡನೆ ನಾನು–ಕಿರಾತರೂಪಿಯಾದ ಪರಮೇಶ್ವರನ ಆಗಮನ, ಅವನೊಡನೆ ನಾನು ಮಾಡಿದ ಯುದ್ಧ, ಅಕ್ಷಯತೂಣೀರಗಳನ್ನೂ–ಧನುಸ್ಸನ್ನೂ ಕಳೆದುಕೊಂಡುದು, ಮಲ್ಲಯುದ್ಧ, ಮೂರ್ಛೆ, ಮಹಾಪಾಶುಪತಾಸ್ತ್ರದ ಪ್ರಾಪ್ತಿ–ಈ ವಿಷಯಗಳೆಲ್ಲವನ್ನೂ ವಿವರವಾಗಿ ಹೇಳಿದೆನು. ನಾನು ಹೇಳಿದುದೆಲ್ಲವನ್ನೂ ಕೇಳಿದನಂತರ ಬ್ರಾಹ್ಮಣನು ತನ್ನ ಸಂತೋಷವನ್ನು ವ್ಯಕ್ತಪಡಿಸುತ್ತಾ ನನ್ನೊಡನೆ ಹೇಳಿದನು : 'ಪಾರ್ಥ! ಯಾರಿಂದಲೂ ಸಂದರ್ಶಿಸಲಾಗದ ಪರಮೇಶ್ವರನನ್ನು ನೀನು ಸಂದರ್ಶಿಸಿರುವೆಯಾದ್ದರಿಂದ ನಿನಗೆ ಇನ್ನೂ ಮಹತ್ತರವಾದ ಫಲವು ಪ್ರಾಪ್ತವಾಗುವುದು. ವೈವಸ್ವತನೇ (ಯಮ) ಮೊದಲಾದ ಲೋಕಪಾಲರೂ, ಯಕ್ಷ-ಗಂಧರ್ವರಿಂದ ಕೂಡಿದ ಇಂದ್ರನೂ ನಿನಗೆ ದರ್ಶನವನ್ನೀಯುವರು. ಇಂದ್ರನು ನಿನಗೆ ಅನೇಕಾನೇಕ ಮಹಾಸ್ತ್ರಗಳನ್ನೂ ಅನುಗ್ರಹಿಸುವನು.'

ಹೀಗೆಂದು ಹೇಳಿ ನನ್ನನ್ನು ಬಾಚಿ ತಬ್ಬಿಕೊಂಡು ನನ್ನ ನೆತ್ತಿಯನ್ನು ಆಘ್ರಾಣಿಸಿ, ಆನಂದಬಾಷ್ಪಗಳನ್ನು ಸುರಿಸಿ ಸೂರ್ಯನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ಆ ಬ್ರಾಹ್ಮಣನು ಹೊರಟುಹೋದನು.

ಧರ್ಮಜ! ಅಂದಿನ ಸಾಯಂಕಾಲದಲ್ಲಿಯೇ ಅಖಂಡಭೂಮಂಡಲಕ್ಕೂ ನವಚೇತನವನ್ನು ಕೊಡಲು ಯತ್ನಿಸುತ್ತಿರುವನೋ–ಎಂಬಂತೆ ಮಂದಮಾರುತನು ಮಂದವಾಗಿ ಬೀಸುತ್ತಿದ್ದನು. ಅನುಪಮವಾದ ಆ ವಾತಾವರಣದಿಂದಾಗಿ ನನ್ನ ಸಮೀಪದಲ್ಲಿದ್ದ ವನಸುಮಗಳು ಘಮ-ಘಮಿಸುವ ಸುವಾಸನೆಯನ್ನು ಸುತ್ತಲೂ ಪ್ರಸರಿಸುತ್ತಿದ್ದುವು.

ಗಗನದ ಕಡೆಯಿಂದ ಇಂದ್ರನನ್ನು ಹೊಗಳುವ ಸುಮಧುರಗಾನವು ಕೇಳಿಬರುತ್ತಿದ್ದಿತು. ಮಹೇಂದ್ರನ ಮುಂದೆ ಬರುತ್ತಿದ್ದ ಸಾವಿರಾರು ಮಂದಿ ಗಂಧರ್ವಾಪ್ಸರೆಯರು ಮಹೇಂದ್ರನ ಗುಣಗಳನ್ನು ಸುಮಧುರವಾದ ಗೀತಗಳಿಂದ ವೀಣಾ-ಮೃದಂಗಾದಿ ವಾದ್ಯಧ್ವನಿಗಳೊಡನೆ ಸೇರಿಸಿ ಹಾಡುತ್ತಿದ್ದರು. ಇಂದ್ರನ ಅನುಚರರಾದ ಸಪ್ತಮರುತರೂ ದೇವಯಾನಗಳಲ್ಲಿ ಕುಳಿತು ಅಲ್ಲಿಗೆ

ಆಗಮಿಸಿದರು. ನಯನಮನೋಹರವಾಗಿ ಅಲಂಕರಿಸಲ್ಪಟ್ಟಿದ್ದ ಕುದುರೆಗಳಿಂದ ಯುಕ್ತವಾಗಿದ್ದ ದಿವ್ಯರಥದಲ್ಲಿ ಶಚೀಸಮೇತನಾಗಿ ಕುಳಿತಿದ್ದ ಇಂದ್ರನು ನನ್ನೆಡೆಗೆ ಆಗಮಿಸಿದನು. ಆ ಸಮಯಕ್ಕೆ ಸರಿಯಾಗಿ ನರವಾಹನ ನಾದ ಕುಬೇರನೂ ನನಗೆ ದರ್ಶನವನ್ನಿತ್ತನು. ಅಂತೆಯೇ ದಕ್ಷಿಣದಿಕ್ಕಿನಲ್ಲಿ ಉಪಸ್ಥಿತನಾಗಿದ್ದ ಯಮನನ್ನೂ, ಪಶ್ಚಿಮದಿಕ್ಕಿನಲ್ಲಿ ಉಪಸ್ಥಿತನಾಗಿದ್ದ ವರುಣನನ್ನೂ ನಾನು ಸಂದರ್ಶಿಸಿದೆನು.

ಯಮ-ಕುಬೇರ-ವರುಣೇಂದ್ರರು ನನ್ನನ್ನು ಸವಿಮಾತುಗಳಿಂದ ಸಂತೈಸುತ್ತಾ ಹೇಳಿದರು :

'ಸವ್ಯಸಾಚಿಯೇ! ನಿನ್ನನ್ನು ಅನುಗ್ರಹಿಸುವ ಸಲುವಾಗಿಯೇ ಆಗಮಿಸಿರುವ ದಿಕ್ಪಾಲಕರಾದ ನಮ್ಮನ್ನು ನೋಡು. ದೇವಕಾರ್ಯದ ಸಿದ್ಧಿಗಾಗಿ ಮಹಾನುಭಾವನಾದ ಶಂಕರನು ನಿನಗೆ ಪ್ರತ್ಯಕ್ಷನಾಗಿ ದಿವ್ಯಾಸ್ತ್ರವನ್ನು ಅನುಗ್ರಹಿಸಿದ್ದಾನೆ. ನಾವೂ ಅದೇ ಕಾರಣದಿಂದಲೇ ನಮ್ಮಲ್ಲಿರುವ ದಿವ್ಯಾಸ್ತ್ರಗಳನ್ನು ಕೊಡಲು ಬಂದಿರುತ್ತೇವೆ, ಸ್ವೀಕರಿಸು.'

ಅಣ್ಣ! ದಿಕ್ಪಾಲಕರ ಆ ಮಾತುಗಳನ್ನು ಕೇಳಿ ನಾನು ವಿನಮ್ರವಾಗಿ ಅವರೆಲ್ಲರಿಗೂ ನಮಸ್ಕರಿಸಿ ಅವರು ಅನುಗ್ರಹಿಸಿದ ದಿವ್ಯಾಸ್ತ್ರಗಳನ್ನು ಭಕ್ತಿಯಿಂದ ಸ್ವೀಕರಿಸಿದೆನು. ನಾನು ಅವರಿಂದ ಮಹಾಸ್ತ್ರಗಳನ್ನು ಸ್ವೀಕರಿಸಿದ ನಂತರ ದಿಕ್ಪಾಲಕರು ಪುನಃ ನನ್ನನ್ನು ಹರಿಸಿದರು. ಈ ರೀತಿಯಲ್ಲಿ ನಾನು ಅವರೆಲ್ಲರ ಅನುಗ್ರಹಕ್ಕೂ ಪಾತ್ರನಾದೆನು, ಯುಧಿಷ್ಠಿರ!

ಅನಂತರದಲ್ಲಿ ಯಮ-ವರುಣ-ಕುಬೇರರು ಅದೃಶ್ಯರಾದರು. ಇಂದ್ರನೂ ತನ್ನ ದಿವ್ಯರಥವನ್ನು ಹತ್ತಿ ಕುಳಿತು ನನ್ನೊಡನೆ ಹೇಳಿದನು :

'ಅರ್ಜುನ! ನೀನು ಸ್ವರ್ಗಲೋಕಕ್ಕೆ ಬರಬೇಕು. ನೀನು ಇಲ್ಲಿಗೆ ಬರುವ ಮೊದಲೇ ನೀನು ಬರುವೆಯೆಂಬ ವಿಷಯವನ್ನು ನಾನು ತಿಳಿದಿದ್ದೆನು. (ನಿನ್ನ ಆಗಮನವು ನನಗೆ ಮೊದಲೇ ತಿಳಿದಿದ್ದಿತು.) ಆದುದರಿಂದಲೇ ನಾನು ದಿಕ್ಪಾಲಕರುಗಳೊಡನೆ ನಿನಗೆ ದರ್ಶನವನ್ನೀಯಲು ಇಲ್ಲಿಗೆ ಬಂದೆನು. ಈ ಹಿಂದೆ ನೀನು ಅನೇಕಾನೇಕ ದಿವ್ಯತೀರ್ಥಗಳಲ್ಲಿ ಮಿಂದಿರುವೆ. ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿರುವೆ ಮತ್ತು ಘೋರವಾದ ತಪಶ್ಚರಣೆಯನ್ನೂ ಮಾಡಿ

ರುವೆ. ಈ ಕಾರಣಗಳಿಂದ ನೀನು ಸ್ವರ್ಗಲೋಕಕ್ಕೆ ಸಶರೀರನಾಗಿಯೇ ಆಗಮಿಸಲು ಯೋಗ್ಯನಾಗಿರುವೆ. ಇನ್ನೂ ಸ್ವಲ್ಪದಿನಗಳ ಕಾಲ ನೀನು ಕಠಿನವಾದ ತಪಶ್ಚರಣೆಯನ್ನು ಮಾಡಬೇಕಾಗಬಹುದು. ಅದಕ್ಕಾಗಿ ನೀನು ಅವಶ್ಯವಾಗಿ ಸ್ವರ್ಗಕ್ಕೆ ಆಗಮಿಸಬೇಕು.

ನನ್ನ ಆಜ್ಞಾನುಸಾರವಾಗಿ ಮಾತಲಿಯು ನಿನ್ನನ್ನು ಸ್ವರ್ಗಕ್ಕೆ ಕರೆದುಕೊಂಡು ಹೋಗಲು ಬರುವನು. ಉಗ್ರತಪಸ್ಸನ್ನು ಮಾಡುತ್ತಿದ್ದ ನೀನು ಯಾರೆಂಬುದು ದೇವತೆಗಳಿಗೂ ಮಹರ್ಷಿಗಳಿಗೂ ತಿಳಿದಿರುವುದು, ಪಾರ್ಥ!'

ಶಕ್ರನು ಹೀಗೆ ಹೇಳಲು ಅವನೊಡನೆ ನಾನು ವಿನಮ್ರನಾಗಿ ಹೇಳಿದೆನ :

'ದೇವದೇವನೇ! ನನ್ನ ವಿಷಯದಲ್ಲಿ ನೀನು ಸುಪ್ರೀತನಾಗು. ಅಸ್ತ್ರವಿದ್ಯೆಯನ್ನು ಕಲಿಸಲು ನೀನೇ ನನಗೆ ಆಚಾರ್ಯನಾಗಬೇಕೆಂದು ಕೇಳಿಕೊಳ್ಳುತ್ತೇನೆ.'

ಅದಕ್ಕುತ್ತರವಾಗಿ ಇಂದ್ರನು ಹೇಳಿದನು :

'ಪಾರ್ಥ! ನೀನು ಮಹಾಸ್ತ್ರಗಳನ್ನು ಪಡೆದುಕೊಳ್ಳುವುದರಿಂದ ಕ್ರೂರಕರ್ಮಿಯಾಗುವೆ. ಯಾವ ಕಾಮನೆಗಾಗಿ ಅಸ್ತ್ರಗಳನ್ನು ಪಡೆಯಲು ಇಚ್ಛಿಸಿರುವೆಯೋ-ಆ ಕಾಮನೆಯನ್ನು ನನ್ನಿಂದ ಪಡೆದುಕೊ. (ಅಸ್ತ್ರಗಳಿಲ್ಲದೆಯೇ ನಿನ್ನ ಕಾಮನೆಗಳು ಪೂರ್ಣವಾಗುವಂತೆ ನಾನು ವರವನ್ನು ಕೊಡುತ್ತೇನೆ.)'

ಇಂದ್ರನ ಮನಸ್ಸಿನಲ್ಲಿದ್ದ ಸಂಶಯವನ್ನು ನಿವಾರಣೆಮಾಡುತ್ತಾ ನಾನು ಇಂದ್ರನಿಗೆ ಹೇಳಿದೆನು–'ಮಹೇಂದ್ರನೇ! ನಾನು ಪಡೆಯುವ ಮಹಾಸ್ತ್ರಗಳನ್ನು ಸಾಮಾನ್ಯಮಾನವರ ಮೇಲೆಂದಿಗೂ ಪ್ರಯೋಗಿಸುವುದಿಲ್ಲ. ಸಾಧಾರಣವಾದ ನನ್ನ ಇತರ ಅಸ್ತ್ರಗಳೆಲ್ಲವೂ ಮುಗಿದನಂತರವೇ ಶತ್ರುವಿನ ವಿಧ್ವಂಸನಕ್ಕಾಗಿ ಈ ಮಹಾಸ್ತ್ರಗಳನ್ನು ಪ್ರಯೋಗಿಸುವೆನು. ಈ ಮಹಾಸ್ತ್ರಗಳ ಪ್ರಾಪ್ತಿಯಿಂದ ನಾನೆಂದಿಗೂ ಕ್ರೂರಕರ್ಮಿಯಾಗುವುದಿಲ್ಲ, ದೇವೇಂದ್ರನೇ! ಆದುದರಿಂದ ನೀನು ನನಗೆ ದಿವ್ಯಾಸ್ತ್ರಗಳನ್ನು ಅನುಗ್ರಹಿಸು. ಮಹಾನು ಭಾವನೇ! ಈ ಮಹಾಸ್ತ್ರಗಳನ್ನು ಪಡೆದ ನಾನು ವೀರರಿಗೆ ಉಚಿತವಾದ ಪುಣ್ಯಲೋಕಗಳನ್ನು ಪಡೆಯಲು ಸಮರ್ಥನಾಗುವೆನು.'

ನನ್ನ ಮಾತುಗಳನ್ನು ಕೇಳಿ ಸಂತುಷ್ಟನಾದ ಇಂದ್ರನು ನನ್ನೊಡನೆ ಹೇಳಿದನು :

‘ಪಾರ್ಥ! ನಿನ್ನನ್ನು ಪರೀಕ್ಷಿಸುವ ಸಲುವಾಗಿಯೇ ಈ ಪ್ರಶ್ನೆಯನ್ನು ಕೇಳಿದೆನು. ನನ್ನ ಅನುಗ್ರಹದಿಂದಲೇ ಹುಟ್ಟಿ ನನ್ನ ಪ್ರತಿಕೃತಿಯಂತೆಯೇ ಇರುವ ನಿನಗೆ ಈ ಮಾತುಗಳು ಸಾಧುವಾಗಿವೆ. ಯೋಗ್ಯವಾದ ಮಾತುಗಳನ್ನೇ ಹೇಳಿರುವೆ. ಕೌಂತೇಯನೇ! ನೀನು ನನ್ನ ಲೋಕಕ್ಕೆ ಆಗಮಿಸಿದ ನಂತರ ವಾಯ್ವಗ್ನಿ-ವಸುಗಳೂ, ವರುಣ-ಮರುತ್ತುಗಳೂ ತಮ-ತಮಗೆ ಸಂಬಂಧಿಸಿದ ವಾಯವ್ಯ-ಆಗ್ನೇಯ-ವಾರುಣ-ವಾಸವ-ಮಾರುತಾಸ್ತ್ರಗಳನ್ನೂ ಕೊಡುವರು. ಅಲ್ಲದೇ ನೀನು ಸಾಧ್ಯ-ಪೈತಾಮಹಾಸ್ತ್ರಗಳನ್ನೂ, ಗಂಧರ್ವ-ಉರಗ-ರಾಕ್ಷಸ-ವೈಷ್ಣವ-ನೈರ್‌ಋತಾಸ್ತ್ರಗಳನ್ನೂ ಮತ್ತು ನನ್ನಲ್ಲಿರುವ ಇತರ ದಿವ್ಯಾಸ್ತ್ರಗಳನ್ನೂ ಪಡೆಯಬಹುದಾಗಿದೆ. ಆದುದರಿಂದ ನೀನು ಈ ಕೂಡಲೇ ಮಾತಲಿಯು ತರಲಿರುವ ದಿವ್ಯರಥದಲ್ಲಿ ಕುಳಿತು ಸ್ವರ್ಗಕ್ಕೆ ಆಗಮಿಸು.’

ಹೀಗೆ ಹೇಳಿ ಮಹೇಂದ್ರನು ಅಂತರ್ಹಿತನಾದನು.

ಅಣ್ಣ! ಇಂದ್ರನು ಹೇಳಿದಂತೆ ಲೋಕಪಾಲರೆಲ್ಲರೂ ಹೊರಟುಹೋದ ಸ್ವಲ್ಪಕಾಲಾನಂತರ ಒಳ್ಳೆಯ ಕುದುರೆಗಳನ್ನು ಕಟ್ಟಿದ್ದ, ದಿವ್ಯವಾಗಿದ್ದ, ಪರಮಾದ್ಭುತವಾಗಿದ್ದ, ಇಂದ್ರನ ಸಾರಥಿಯಾಗಿದ್ದ ಮಾತಲಿಯಿಂದ ನಿಯಂತ್ರಿತವಾಗಿದ್ದ ರಥವನ್ನು ನಾನು ಕಂಡೆನು. ರಥದಿಂದ ಹೊರಬಂದ ಮಾತಲಿಯು ನನ್ನನ್ನು ಕುರಿತು ಹೇಳಿದನು :

‘ಮಹಾದ್ಯುತಿಮಂತನಾದ ಅರ್ಜುನನೇ! ದೇವತೆಗಳಿಗೆ ಅಧಿಪತಿಯಾದ ಇಂದ್ರನು ನಿನ್ನನ್ನು ನೋಡಲು ಬಹಳ ತವಕದಿಂದಿದ್ದಾನೆ. ನೀನು ದಿವ್ಯಾಸ್ತ್ರಗಳಲ್ಲಿ ಪೂರ್ಣಪರಿಶ್ರಮವನ್ನು ಪಡೆದನಂತರ ಮುಂದಿನ ಕಾರ್ಯದಲ್ಲಿ ಪ್ರವೃತ್ತನಾಗಬೇಕಾಗಿದೆ. ಬಹುಪುಣ್ಯಕರ್ಮಗಳಿಂದ ಪ್ರಾಪ್ತವಾಗಬಹುದಾದ ಲೋಕಗಳನ್ನು ನನ್ನೊಡನೆ ಬಂದು ಸಂದರ್ಶಿಸು. ಸಶರೀರನಾಗಿಯೇ ಸ್ವರ್ಗಾರೋಹಣಮಾಡು. ಸಹಸ್ರಾಕ್ಷನಾದ ಶಚೀಪತಿಯು ನಿನ್ನನ್ನು ಕಾಣಲು ಅತಿಕುತೂಹಲಿಯಾಗಿದ್ದಾನೆ.’

ಅಣ್ಣ! ಮಾತಲಿಯ ಮಾತನ್ನು ಕೇಳಿ ನಾನು ಪರ್ವತರಾಜನಾದ

ಹಿಮವಂತನನ್ನು ನಮಸ್ಕರಿಸಿ ಅವನ ಅನುಮತಿಯನ್ನು ಪಡೆದು ಪ್ರದಕ್ಷಿಣೆ ಮಾಡಿ ಆ ದಿವ್ಯರಥವನ್ನು ಹತ್ತಿ ಕುಳಿತೆನು.

ಅಶ್ವಪರೀಕ್ಷೆಯಲ್ಲಿ ಬಹುನಿಪುಣನಾದ, ಸಾರಥ್ಯದಲ್ಲಿ ಅತಿಕುಶಲನಾದ ಮಾತಲಿಯು ವಾಯುವೇಗ-ಮನೋವೇಗಗಳನ್ನೂ ಮೀರಿಸುವ ಕುದುರೆಗಳ ಬೆನ್ನಮೇಲೆ ಕೈಯಿಟ್ಟೊಡನೆಯೇ ಕುದುರೆಗಳು ಪಕ್ಷಿಗಳೋಪಾದಿಯಲ್ಲಿ ಆಕಾಶಮಾರ್ಗದಲ್ಲಿ ಹಾರತೊಡಗಿದುವು. ರಥವು ಅಷ್ಟೊಂದು ರಭಸದಿಂದ ಹೋಗುತ್ತಿದ್ದರೂ ನಾನು ಸ್ವಲ್ಪವಾದರೂ ಚಲಿಸದೇ ರಥದಲ್ಲಿ ಕುಳಿತಿದ್ದೆನು. ಸ್ಥಿರನಾಗಿ ಕುಳಿತಿದ್ದ ನನ್ನ ಮುಖವನ್ನು ಮಾತಲಿಯು ನೋಡಿದನು. ಮಾತಲಿಗೆ ಆಶ್ಚರ್ಯವಾಯಿತು. ತನ್ನ ಆಶ್ಚರ್ಯವನ್ನು ಮುಖಭಾವದಿಂದಲೇ ವ್ಯಕ್ತಪಡಿಸುತ್ತಾ ಮಾತಲಿಯು ಹೇಳಿದನು–'ಅರ್ಜುನ! ರಥವು ಇಷ್ಟೊಂದು ವೇಗವಾಗಿ ಹೋಗುತ್ತಿದ್ದರೂ ನೀನು ಸ್ವಲ್ಪವಾದರೂ ಅಲ್ಲಾಡದೇ ಸ್ಥಾಣುವಿನಂತೆ ಕುಳಿತಿರುವುದನ್ನು ನೋಡಿದರೆ ಈ ದೃಶ್ಯವು ನನಗೆ ಅತ್ಯದ್ಭುತವಾಗಿ, ಅತ್ಯಾಶ್ಚರ್ಯವಾಗಿ ಕಾಣುತ್ತಿದೆ. ಈ ದಿವ್ಯಾಶ್ವಗಳು ಮೊದಲನೆಯ ಬಾರಿ ಬಹುವೇಗದಿಂದ ರಥವನ್ನೆಳೆಯುವ ಸಮಯದಲ್ಲಿ ದೇವರಾಜನೇ ಈ ರಥದಲ್ಲಿ ಕುಳಿತಿದ್ದರೂ ಕ್ಷಣಕಾಲ ವಿಚಲಿತನಾಗದೇ ಇರಲಾರನು. ಆದರೆ ಇಂದು ಈ ರಥವು ಇಷ್ಟು ವೇಗವಾಗಿ ಹೋಗುತ್ತಿದ್ದರೂ ನೀನು ಪರ್ವತದಂತೆ ಅಚಲನಾಗಿ ಈ ರಥದಲ್ಲಿ ಉಪಸ್ಥಿತನಾಗಿರುವೆ. ಆದ್ದರಿಂದ ನಿನಗಿರುವ ಪರಾಕ್ರಮವು ಮಹೇಂದ್ರನಿಗಿರುವ ಪರಾಕ್ರಮಕ್ಕಿಂತಲೂ ಮಿಗಿಲಾದುದೆಂದೇ ಭಾವಿಸುತ್ತೇನೆ.'

ಅಣ್ಣ! ಮಾತಲಿಯು ಹೀಗೆ ಹೇಳುತ್ತಾ ರಥವನ್ನು ಆಕಾಶಮಾರ್ಗದಲ್ಲಿ ನಡೆಸಿಕೊಂಡು ಹೋಗುತ್ತಿದ್ದಾಗ ಮಾರ್ಗದಲ್ಲಿದ್ದ ಅನೇಕದೇವಗೃಹಗಳನ್ನೂ, ಅರಮನೆಗಳನ್ನೂ ನನಗೆ ತೋರಿಸಿದನು. ಅನಂತರ ಆಕಾಶದಲ್ಲಿ ಅಡ್ಡಲಾಗಿ ಹೋಗುತ್ತಿದ್ದ ರಥವು ಊರ್ಧ್ವಮುಖವಾಗಿ ಹತ್ತಲಾರಂಭಿಸಿತು. ಮಾರ್ಗದಲ್ಲಿದ್ದ ದೇವರ್ಷಿಗಳೂ ಮತ್ತು ದೇವತೆಗಳು ಇಂದ್ರನ ಆ ರಥವನ್ನು ಪೂಜಿಸಿ ಗೌರವಿಸುತ್ತಿದ್ದರು. ದೇವರ್ಷಿಗಳು ವಾಸಿಸುತ್ತಿದ್ದ ಅನೇಕಪುಣ್ಯಲೋಕಗಳನ್ನೂ ನಾನು ಸಂದರ್ಶಿಸಿದೆನು. ಮಹಾಪ್ರಭೆಯಿಂದ ಕೂಡಿದ್ದ

ಅನೇಕಗಂಧರ್ವಾಪ್ಸರೆಯನ್ನೂ ನಾನು ಮಾರ್ಗದಲ್ಲಿ ಸಂದರ್ಶಿಸಿದೆನು. ಮುಂದೆ ಹೋಗುತ್ತಿದ್ದಾಗ ಇಂದ್ರನ ಸಾರಥಿಯಾದ ಮಾತಲಿಯು ನನಗೆ ನೇತ್ರಾನಂದಕರವಾದ ನಂದನವನವನ್ನೂ, ಇತರ ದೇವವನಗಳನ್ನೂ ಮತ್ತು ಉಪವನಗಳನ್ನೂ ತೋರಿಸಿದನು. ಇನ್ನೂ ಮುಂದೆ ಪ್ರಯಾಣಮಾಡಿದ ನಂತರ ವಜ್ರ-ವೈಡೂರ್ಯಗಳಿಂದಲೇ ರಚಿತವಾದ ಅನೇಕದಿವ್ಯಭವನ ಗಳಿಂದ ಕೂಡಿದ್ದ, ಮಂಗಳಕರವಾದ, ಇಂದ್ರನ ಪಟ್ಟಣವಾದ ಅಮರಾವತಿ ಯನ್ನು ಕಂಡೆನು. ಅಲ್ಲಿಯ ವೃಕ್ಷಗಳು ವಿಚಿತ್ರತರವಾಗಿದ್ದುವು. ಯಾವ ವೃಕ್ಷದ ಬಳಿಗೆ ಹೋಗಿ ಯಾವುದೇ ಫಲವನ್ನು ಕೇಳಿದರೂ ಕ್ಷಣಮಾತ್ರದಲ್ಲಿ ಆ ಫಲವು ಆ ವೃಕ್ಷದಲ್ಲಿ ಸಿಕ್ಕುತ್ತಿದ್ದಿತು. ಅಲ್ಲಿ ಸೂರ್ಯನೂ ಹೆಚ್ಚು ಶಾಖವನ್ನುಂಟು ಮಾಡುತ್ತಿರಲಿಲ್ಲ. ಹೆಚ್ಚು ಉಷ್ಣವಾಗಲೀ, ಹೆಚ್ಚಿನ ಆಯಾಸವಾಗಲೀ ಅಲ್ಲಿ ಯಾರೊಬ್ಬರಿಗೂ ಉಂಟಾಗುತ್ತಿರಲಿಲ್ಲ. ಅಲ್ಲಿ ಧೂಳಿನಿಂದ ತೊಂದರೆ ಯಿರಲಿಲ್ಲ. ಅಲ್ಲಿರುವವರಿಗೆ ಮುಪ್ಪಿನ ಬಾಧೆಯಿರಲಿಲ್ಲ. ಶೋಕ-ದೈನ್ಯ-ದೌರ್ಬಲ್ಯಗಳಾವುವೂ ಕಾಣುತ್ತಿರಲಿಲ್ಲ. ಅವರು ಸರ್ವಕಾಲದಲ್ಲಿಯೂ ತೇಜಃಪುಂಜಯುಕ್ತರಾಗಿಯೇ ಇರುತ್ತಿದ್ದರು. ಅಲ್ಲಿದ್ದ ದೇವತೆಗಳಿಗೆ ಕ್ರೋಧ ವಾಗಲೀ, ಲೋಭವಾಗಲೀ, ಅಸೂಯೆಯಾಗಲೀ–ಇರಲಿಲ್ಲ. ಇಂದ್ರಲೋಕ ದಲ್ಲಿ ಸಕಲರೂ ನಿತ್ಯತುಷ್ಟರಾಗಿದ್ದರು.

ದೇವತೆಗಳ ಮನೆಗಳಲ್ಲಿದ್ದ ಪ್ರಾಣಿಗಳೂ ಸಂತುಷ್ಟವಾಗಿದ್ದುವು. ಅಲ್ಲಿದ್ದ ವೃಕ್ಷಗಳು ಸರ್ವಕಾಲದಲ್ಲಿಯೂ ಫಲ-ಪುಷ್ಪಭರಿತವಾಗಿರುತ್ತಿದ್ದುವು. ಯಾವಾಗಲೂ ಹಸಿರೆಲೆಗಳಿಂದ ಕೂಡಿರುತ್ತಿದ್ದುವು. ಅಮರಾವತಿಯಲ್ಲಿ ಅನೇಕಾನೇಕ ದಿವ್ಯಸರೋವರಗಳಿದ್ದುವು. ಅವುಗಳಲ್ಲಿ ಘಮ-ಘಮಿಸುವ ಸೌಗಂಧಿಪುಷ್ಪಗಳೂ, ಕಮಲಗಳೂ ಕಂಗೊಳಿಸುತ್ತಿದ್ದುವು. ಗಾಳಿಯು ಶೀತಲವಾಗಿದ್ದು ಸುಗಂಧಯುಕ್ತವಾಗಿಯೂ, ಶುಚಿಯಾಗಿಯೂ, ಉತ್ತೇಜಕ ವಾಗಿಯೂ ಇದ್ದಿತು. ಬೀದಿಗಳು ರತ್ನಖಚಿತವಾಗಿದ್ದು ಪುಷ್ಪಗಳಿಂದ ಅಲಂಕೃತವಾಗಿದ್ದುವು. ಇಂಪಾಗಿ ಧ್ವನಿಮಾಡುತ್ತಿದ್ದ ಅನೇಕಾನೇಕ ಮೃಗ-ಪಕ್ಷಿಗಳೂ ಅಮರಾವತಿಯಲ್ಲಿದ್ದುವು. ನಾನು ರಥದಲ್ಲಿ ಕುಳಿತು ಪ್ರಯಾಣಮಾಡುತ್ತಿದ್ದಾಗ ವಸುಗಳನ್ನೂ, ರುದ್ರರನ್ನೂ, ಸಾಧ್ಯರನ್ನೂ,

ಮರತ್ತುಗಳನ್ನೂ, ಆದಿತ್ಯರನ್ನೂ ಮತ್ತು ಅಶ್ವನೀದೇವತೆಗಳನ್ನೂ ಸಂದರ್ಶಿಸಿ ಅವರೆಲ್ಲರಿಗೂ ಸಾಷ್ಟಾಂಗಪ್ರಣಾಮಮಾಡಿ ಅವರನ್ನು ಯಥೋಚಿತವಾಗಿ ಸತ್ಕರಿಸಿದೆನು. ಅವರು ನನ್ನನ್ನು ವೀರ್ಯವಂತನಾಗೆಂದೂ, ಯಶೋವಂತನಾಗೆಂದೂ, ತೇಜಸ್ವಿಯಾಗೆಂದೂ, ಬಲಶಾಲಿಯಾಗೆಂದೂ, ಸಕಲಾಸ್ತ್ರಗಳಲ್ಲಿಯೂ ಪಾರಂಗತನಾಗೆಂದೂ, ಯುದ್ಧದಲ್ಲಿ ವಿಜಯಿಯಾಗೆಂದೂ– ಹರಸಿದರು.

ಅವರೆಲ್ಲರ ಆಶೀರ್ವಚನಗಳನ್ನು ಪಡೆದು ಮುಂದೆ ಪ್ರಯಾಣಮಾಡಿ ಮಾತಲಿಯ ಆದೇಶದಂತೆ ರಥದಿಂದಿಳಿದ ಗಂಧರ್ವಾಪ್ಸರೆಯರಿಂದ ಸಂಪೂಜ್ಯವಾದ ಇಂದ್ರನ ಅರಮನೆಯನ್ನು ಪ್ರವೇಶಿಸಿ, ದೇವಾಧಿಪತಿಯಾದ ದೇವೇಂದ್ರನ ಮುಂದೆ ಎರಡು ಕೈಗಳನ್ನೂ ಜೋಡಿಸಿ ನಿಂತುಕೊಂಡೆನು. ವರವನ್ನು ಕೊಡುವವರಲ್ಲಿ ಶ್ರೇಷ್ಠನಾದ ದೇವೇಂದ್ರನು ನನ್ನನ್ನು ಕಂಡು ಆನಂದಭರಿತನಾಗಿ ತನ್ನ ಸಮೀಪಕ್ಕೆ ಬರುವಂತೆ ನನಗೆ ಸಂಜ್ಞೆಯನ್ನು ಮಾಡಿದನು. ಇಂದ್ರನ ನಿರ್ದೇಶನದಂತೆ ನಾನು ಇಂದ್ರನ ಸಿಂಹಾಸನದ ಸಮೀಪಕ್ಕೆ ಹೋದೆನು. ಉದಾರಿಯಾದ ಇಂದ್ರನು ತಾನು ಕುಳಿತಿದ್ದ ದಿವ್ಯಾಸನದಲ್ಲಿ ಅರ್ಧಭಾಗವನ್ನು ತೆರವುಮಾಡಿ ಅಲ್ಲಿ ನನ್ನನ್ನು ಕುಳ್ಳಿರಿಸಿಕೊಂಡು ಪರಮಾದರದಿಂದ ನನ್ನ ಮೈದಡವಿದನು.

ಅಣ್ಣ! ಇಂದ್ರನು ತನ್ನ ಸಿಂಹಾಸನದಲ್ಲಿ ನನ್ನನ್ನು ಕುಳ್ಳಿರಿಸಿಕೊಂಡರೂ ನನ್ನ ಮನಸ್ಸು ಸೌಖ್ಯದಿಂದಿರಲಿಲ್ಲ. ಇಂದ್ರನ ಸಿಂಹಾಸನದಲ್ಲಿ ಕುಳಿತು ಸುಖವನ್ನು ಅನುಭವಿಸಲಿಲ್ಲ. ನನ್ನ ಮನಸ್ಸು ಅಸ್ತ್ರವಿದ್ಯೆಯನ್ನು ಕಲಿಯುವ ಕಾತರತೆಯಿಂದ ಕೂಡಿದ್ದಿತು. ಅಸ್ತ್ರವಿದ್ಯೆಯನ್ನು ಕಲಿಯುವ ಸಲುವಾಗಿಯೇ ನಾನು ಉದಾರಿಗಳಾದ ದೇವತೆಗಳೊಡನೆ ಸ್ವರ್ಗದಲ್ಲಿ ವಾಸವಾಗಿದ್ದೆನು. ವಿಶ್ವಾವಸುವಿನ ಮಗನಾದ ಚಿತ್ರಸೇನನು ನನಗೆ ಸ್ವರ್ಗದಲ್ಲಿ ಆಪ್ತಮಿತ್ರನಾಗಿದ್ದನು. ಧರ್ಮಜ! ಅವನು ನನಗೆ ಅಖಂಡವಾದ ಗಂಧರ್ವವಿದ್ಯೆಯನ್ನೂ ಕಲಿಸಿಕೊಟ್ಟನು. ನಾನು ಇಂದ್ರನ ಅರಮನೆಯಲ್ಲಿ ಅಸ್ತ್ರವಿದ್ಯೆಯನ್ನೂ, ಗಂಧರ್ವವಿದ್ಯೆಯನ್ನೂ ಅಭ್ಯಸಿಸುತ್ತಿದ್ದಾಗ ಬಹುಸುಖವಾಗಿ ಕಾಲ ಕಳೆದೆನು. ನನ್ನನ್ನು ದೇವತೆಗಳು ಬಹುವಾಗಿ ಗೌರವಿಸಿ ಸತ್ಕರಿಸುತ್ತಿದ್ದರು. ದೇವಗಾಯನವನ್ನೂ, ಗಂಧರ್ವರು

ನುಡಿಸುತ್ತಿದ್ದ ವೀಣಾ-ಮೃದಂಗಾದಿಗಳ ಮಧುರನಿನಾದವನ್ನು ಅನು ದಿನವೂ ಕೇಳುತ್ತಿದ್ದೆನು. ನಾಟ್ಯ-ನೃತ್ಯ-ನೃತ್ತಗಳಲ್ಲಿ ಪ್ರವೀಣರಾದ ಅಪ್ಸರೆಯರು ಮಾಡುತ್ತಿದ್ದ ನಯನಮನೋಹರವಾದ ನಾಟ್ಯ-ನೃತ್ತಗಳನ್ನು ಇಂದ್ರನೊಡನೆ ಕುಳಿತು ಅನುದಿನವೂ ನೋಡುತ್ತಿದ್ದೆನು. ಅಂತಹ ಸ್ವರ್ಗ ಸುಖವನ್ನು ನಾನು ಅನುಭವಿಸುತ್ತಿದ್ದರೂ ನಾನಲ್ಲಿಗೆ ಹೋದ ಉದ್ದೇಶ ವನ್ನು ಕ್ಷಣಕಾಲವೂ ಮರೆಯಲಿಲ್ಲ. ಒಂದು ದಿನವನ್ನೂ ಪೋಲುಮಾಡದೇ ಅಸ್ತ್ರವಿದ್ಯೆಯನ್ನು ಅಭ್ಯಸಿಸುತ್ತಿದ್ದೆನು. ನನ್ನ ಮನಸ್ಸೆಲ್ಲವೂ ವಿದ್ಯೆಯನ್ನು ಕಲಿಯುವುದರಲ್ಲಿಯೇ ಕೇಂದ್ರೀಕೃತವಾಗಿದ್ದಿತು. ಉತ್ತಮೋತ್ತವಾದ ಮಹಾಸ್ತ್ರಗಳನ್ನು ಸಂಗ್ರಹಿಸುವುದೇ ನನ್ನ ಮುಖ್ಯೋದ್ದೇಶವಾಗಿದ್ದಿತು. ಅಸ್ತ್ರವಿದ್ಯಾಭ್ಯಾಸದಲ್ಲಿ ನನಗಿದ್ದ ಏಕಾಗ್ರತೆಯನ್ನು ಕಂಡು ಸಹಸ್ರಾಕ್ಷನೂ ಸಂತುಷ್ಟನಾದನು. ನಾನು ಈ ರೀತಿಯಲ್ಲಿ ನನ್ನ ಕಾಲವನ್ನು ಕಳೆಯು ತ್ತಿದ್ದೆನು. ಧರ್ಮಜ!

ನನ್ನ ವಿದ್ಯಾಭ್ಯಾಸವು ಪೂರೈಸಿತು. ಅಮೋಘಾಸ್ತ್ರಗಳೆಲ್ಲವನ್ನೂ ಪಡೆದೆನೆಂಬ ಆತ್ಮವಿಶ್ವಾಸವೂ ನನಗುಂಟಾಯಿತು. ಅನಂತರ ಒಂದು ದಿನ ಹರಿವಾಹನನಾದ ಇಂದ್ರನು ನನ್ನ ತಲೆಯನ್ನು ತನ್ನ ಕೈಗಳಿಂದ ಸವರುತ್ತಾ ಹೀಗೆಂದು ಹೇಳಿದನು : 'ಮಗು! ಅರ್ಜುನ! ನಿನ್ನನ್ನೀಗ ದೇವತೆಗಳೂ ಜಯಿಸಲಾರರು. ಹೀಗಿರುವಾಗ ಮರ್ತ್ಯಲೋಕದಲ್ಲಿ ವಾಸಿಸುವ, ಅಸ್ತ್ರಗಳ ಸ್ವರೂಪವೇನೆಂಬುದನ್ನೇ ತಿಳಿಯದ ಯೋಧರು ನಿನ್ನನ್ನು ಹೇಗೆ ತಾನೇ ಎದುರಿಸಿ ನಿಲ್ಲುವರು? ನೀನು ಅಪ್ರಮೇಯನೂ, ಅಪ್ರಧೃಷ್ಯನೂ ಆಗಿರುವೆ ಯಲ್ಲದೇ–ಯುದ್ಧದಲ್ಲಿಯೂ ಅಪ್ರತಿಮನೆನಿಸುವೆ.

ಅಣ್ಣ! ಹೀಗೆ ಹೇಳುತ್ತಿರುವಾಗ ಹರ್ಷಾತಿರೇಕದಿಂದ ಇಂದ್ರನು ರೋಮಾಂಚಿತನಾಗುತ್ತಿದ್ದನು. ಆನಂದಭರಿತನಾದ ಇಂದ್ರನು ಪುನಃ ಹೇಳಿದನು:

'ವೀರವರನೇ! ಅಸ್ತ್ರಯದ್ಧದಲ್ಲಿ ನಿನಗೆ ಸಮನಾದವನು ತ್ರಿಭುವನ ದಲ್ಲಿಯೇ ಯಾರೂ ಇರುವುದಿಲ್ಲ. ಈ ಮಹಾಸ್ತ್ರಗಳನ್ನು ಪಡೆದಿರುವ ನೀನು ಯಾವಾಗಲೂ ಪ್ರಮತ್ತನಾಗಕೂಡದು. ಅಸ್ತ್ರಗಳನ್ನು ದಕ್ಷತೆ

ಯಿಂದಲೂ, ಚಾತುರ್ಯದಿಂದಲೂ ಪ್ರಯೋಗಿಸಬೇಕು. ಸತ್ಯವಾದಿಯೂ, ಜಿತೇಂದ್ರಿಯನೂ ಆಗಿರಬೇಕು. ಅರ್ಜುನ! ನೀನು ಬ್ರಾಹ್ಮಣರ ರಕ್ಷಕನೂ, ಅಸ್ತ್ರವಿದನೂ ಮತ್ತು ಶೂರನೂ ಆಗಿರುವೆ. ನಿನಗೆ ಹದಿನೈದು ಮಹಾಸ್ತ್ರಗಳು ಉಪಲಬ್ಧವಾಗಿವೆ. ಪ್ರಯೋಗ, ಉಪಸಂಹಾರ, ಆವೃತ್ತಿ, ನಿರ್ದೋಷ ಪ್ರಾಣಿಯ ವಧೆಯಾದಾಗ ಮಾಡಬೇಕಾದ ಅಸ್ತ್ರವಿದ್ಯಾಪ್ರಾಯಶ್ಚಿತ್ತ, ಶತ್ರುವಿನ ಅಸ್ತ್ರದಿಂದ ಪರಾಭವವು ಸಂಭವಿಸಿದಾಗ ತನ್ನ ಅಸ್ತ್ರವನ್ನು ಶಕ್ತಿಶಾಲಿಯನ್ನಾಗಿ ಮಾಡಬೇಕಾದ ಪ್ರತಿಘಾತ–ಈ ಐದು ವಿಧಾನಗಳೂ ನಿನಗೆ ತಿಳಿದಿವೆ. ಅಸ್ತ್ರವಿದ್ಯೆಯನ್ನು ನನ್ನಿಂದ ಆಮೂಲಾಗ್ರವಾಗಿ ತಿಳಿದಿರುವ ನಿನಗೆ ಗುರುದಕ್ಷಿಣೆಯನ್ನು ಕೊಡುವ ಕಾಲವು ಇಂದು ಸನ್ನಿಹಿತವಾಗಿದೆ. ನಾನು ಕೇಳಲಿರುವ ಗುರುದಕ್ಷಿಣೆಯನ್ನು ಕೊಡಲು ನೀನು ವಾಗ್ದಾನಮಾಡುವುದಾದರೆ ಮಾತ್ರ ನೀನು ಗುರುದಕ್ಷಿಣಾರೂಪವಾಗಿ ಮಾಡ ಬೇಕಾಗಿರುವ ಕಾರ್ಯವನ್ನು ನಿನಗೆ ಹೇಳುತ್ತೇನೆ.’

ಅದಕ್ಕುತ್ತರವಾಗಿ ನಾನು ಹೇಳಿದೆನು : ‘ಮಹೇಂದ್ರನೇ! ನೀನು ಹೇಳುವ ಕಾರ್ಯವನ್ನು ನಾನು ಮಾಡುವ ಸಾಧ್ಯತೆಯಿದ್ದರೆ ಕಾರ್ಯವು ಮುಗಿದೇ ಹೋಯಿತೆಂದು ನೀನು ಭಾವಿಸಬಹುದು.’

ನನ್ನೀ ಮಾತುಗಳನ್ನು ಕೇಳಿ ಇಂದ್ರನು ನಸುನಗುತ್ತಾ ಹೇಳಿದನು :

‘ಅರ್ಜುನ! ನಿನಗೆ ಶಕ್ಯವಾಗದಿರುವ ಕಾರ್ಯವು ಮೂರು ಲೋಕ ಗಳಲ್ಲಿಯೂ ಯಾವುದೂ ಇಲ್ಲ. ನೀನು ಅಂತಹ ಪರಾಕ್ರಮಿಯಾಗಿರುವೆ. ನನ್ನ ಶತ್ರುಗಳಾದ ನಿವಾತಕವಚರೆಂಬ ರಾಕ್ಷಸರು ದುರ್ಗಮವಾದ ಸಮುದ್ರ ಗರ್ಭದಲ್ಲಿ ಅಡಗಿದ್ದಾರೆ. ಅವರ ಸಂಖ್ಯೆಯು ಮೂರು ಕೋಟಿ. ಅವರೆಲ್ಲರೂ ಒಂದೇ ವಿಧವಾದ ರೂಪವನ್ನು ಧರಿಸಿರುತ್ತಾರೆ. ಅವರ ಪರಾಕ್ರಮ ಮತ್ತು ತೇಜಸ್ಸುಗಳೂ ಏಕರೂಪವಾಗಿವೆ. ನೀನವರನ್ನು ನಿನ್ನ ಭುಜಬಲ-ಪರಾ ಕ್ರಮಗಳಿಂದ ಧ್ವಂಸಮಾಡಬೇಕು. ಇದೇ ನಾನು ನಿನ್ನಿಂದ ಅಪೇಕ್ಷಿಸುವ ಗುರುದಕ್ಷಿಣೆ, ಅರ್ಜುನ!’

ಅಣ್ಣ! ದೇವೇಂದ್ರನು ಹೀಗೆಂದು ಹೇಳಿ ಮಹಾಪ್ರಭೆಯಿಂದ ಕೂಡಿದ್ದ, ನವಿಲಿನಂತೆ ರೋಮಗಳುಳ್ಳ ಉತ್ತಮವಾದ ಕುದುರೆಗಳನ್ನು ಕಟ್ಟಿದ್ದ,

ಮಾತಲಿಯಿಂದ ಚಾಲಿತವಾದ ದಿವ್ಯರಥವನ್ನು ನನಗೆ ಕೊಟ್ಟನು. ನಾನೀಗ ಧರಿಸಿರುವ ಕಿರೀಟವನ್ನೇ ಇಂದ್ರನು ಆ ಸಮಯದಲ್ಲಿ ತನ್ನೆರಡು ಕೈಗಳಿಂದಲೂ ಎತ್ತಿ ನನ್ನ ತಲೆಯಮೇಲಿಟ್ಟನು. ನನ್ನ ಶರೀರವನ್ನು ಕನಕಾಂಗದ-ಕೇಯೂರಗಳಿಂದಲೂ, ನವರತ್ನಖಚಿತವಾದ ಮಾಲೆಗಳಿಂದಲೂ ತಾನು ಸಿಂಗರಿಸಿಕೊಂಡಿದ್ದಂತೆಯೇ ಸಿಂಗರಿಸಿದನು. ಅಭೇದ್ಯವಾದ ಕವಚವನ್ನು ನನಗೆ ತೊಡಿಸಿದನು. ಉತ್ತಮೋತ್ತಮವಾದ ಮತ್ತು ಎಷ್ಟು ಸೆಳೆದರೂ ಹರಿದುಹೋಗದಿರುವ ಶಿಂಜಿನಿಯನ್ನೂ ಸಹ ಇಂದ್ರನು ನನ್ನ ಗಾಂಡೀವಧನುಸ್ಸಿಗೆ ಕಟ್ಟಿದನು. ಇಂದ್ರನಿಂದಲೇ ಸಮಲಂಕೃತನಾದ ನಾನು–ಹಿಂದೆ ಇಂದ್ರನು ವಿರೋಚನನನ ಮಗನಾದ ಬಲಯ ಮೇಲೆ ದಂಡಯಾತ್ರೆಗಾಗಿ ಹೊರಟಂತೆ–ಅದೇ ರಥದಲ್ಲಿ ಕುಳಿತು ನಿವಾತಕವಚರ ಮೇಲೆ ದಂಡಯಾತ್ರೆಗಾಗಿ ಹೊರಟೆನು. ರಥದ ನಿನಾದವನ್ನು ಕೇಳಿದ ದೇವತೆಗಳು ಇಂದ್ರರಥವು ಬರುತ್ತಿರುವುದೆಂದೂ, ರಥದಲ್ಲಿ ಇಂದ್ರನೇ ಕುಳಿತಿರುವನೆಂದೂ ಭ್ರಮಿಸಿ ರಥದ ಬಳಿಗೆ ಧಾವಿಸಿ ಬಂದರು. ಹತ್ತಿರಕ್ಕೆ ಬಂದನಂತರ ರಥದಲ್ಲಿ ಕುಳಿತಿರುವವನು ನಾನೆಂದು ತಿಳಿದ ಮೇಲೆ ನನ್ನನ್ನು 'ಅರ್ಜುನ! ಯಾವ ಕಾರ್ಯಕ್ಕೆ ಹೊರಟಿರುವೆ?' ಎಂದು ಪ್ರಶ್ನಿಸಿದನು :

ನಾನವರೊಡನೆ ಇಂದ್ರನ ನಿರ್ದೇಶವನ್ನು ಹೇಳಿದೆನಲ್ಲದೇ–'ಮಹಾಭಾಗರಾದ, ನಿಷ್ಕಳಂಕರಾದ ನೀವು ನನಗೆ ಸ್ವಸ್ತಿವಾಚನವನ್ನು ಮಾಡಬೇಕೆಂದೂ'–ನಾನವರನ್ನು ಕೇಳಿಕೊಂಡೆನು.

ಪುರಂದರನನ್ನು ಸವಿಮಾತುಗಳಿಂದ ಸಂತುಷ್ಟಿಗೊಳಿಸುವಂತೆಯೇ ಅವರೆಲ್ಲರೂ ನನ್ನನ್ನೂ ಸವಿಮಾತುಗಳಿಂದ ಪ್ರೋತ್ಸಾಹಿಸುತ್ತಾ ಹೇಳಿದರು :

'ಅರ್ಜುನ! ನೀನು ಮಹಾಪರಾಕ್ರಮಿಯು. ನೀನು ಕುಳಿತಿರುವ ಈ ಪುರಂದರ ರಥವು ಪರಾಜಯವೆಂಬುದನ್ನೇ ತಿಳಿಯದ ಅದ್ಭುತಚಾರಿತ್ರ್ಯವುಳ್ಳ ದಿವ್ಯರಥವಾಗಿದೆ. ಈ ರಥದಲ್ಲಿಯೇ ಕುಳಿತು ಹಿಂದೆ ಇಂದ್ರನು–ಶಂಬರ, ನಮುಚಿ, ಬಲ, ವೃತ್ರ, ಪ್ರಹ್ಲಾದ, ನರಕ–ಮುಂತಾದ ಅನೇಕ ರಾಕ್ಷಸರನ್ನು ಪರಾಜಯಗೊಳಿಸಿರುವನು. ಕೋಟ್ಯನುಕೋಟಿ ದೈತ್ಯರನ್ನೂ ದೇವೇಂದ್ರನು ಇದೇ ರಥದಲ್ಲಿ ಕುಳಿತು ಯುದ್ಧಮಾಡಿ ಧ್ವಂಸಮಾಡಿರು

ವನು. ಆದುದರಿಂದ ಆ ದಿವ್ಯರಥದಲ್ಲಿ ಕುಳಿತಿರುವ ನೀನೂ ಸಹ ಇಂದ್ರ ನಂತೆಯೇ ಯುದ್ಧದಲ್ಲಿ ನಿವಾತಕವಚರನ್ನು ಪರಾಜಯಗೊಳಿಸುವುದರಲ್ಲಿ ಸ್ವಲ್ಪವಾದರೂ ಸಂಶಯವಿಲ್ಲ. ನಾವೂ ಸಹ ನಿನ್ನ ವಿಜಯಕ್ಕಾಗಿ ಈ ಶಂಕ ವನ್ನು ನಿನಗೆ ಪಾರಿತೋಷಕವನ್ನಾಗಿ ಕೊಡುತ್ತೇವೆ. ಈ ಶಂಖವು ದಾನವರ ಮರ್ದನಕ್ಕೆ ಸಹಕಾರಿಯಾಗುವುದು. ಇದನ್ನು ಜೊತೆಯಲ್ಲಿ ತೆಗೆದುಕೊಂಡು ಹೋಗಿದ್ದ ದೇವೇಂದ್ರನು ಸರ್ವತ್ರ ವಿಜಯವನ್ನು ಗಳಿಸಿದನು."

ಅಣ್ಣ! ದೇವತೆಗಳು ಹೀಗೆ ಹೇಳಿ ಈ ಶಂಖವನ್ನು ನನಗೆ ಪಾರಿ ತೋಷಕರೂಪವಾಗಿ ಕೊಟ್ಟರು. ದೇವತೆಗಳಿಂದ ಕೊಡಲ್ಪಟ್ಟ, ಸಮುದ್ರದಲ್ಲಿ ಹುಟ್ಟಿದ ದೇವದತ್ತವೆಂಬ ಈ ಶಂಖವನ್ನು ಸರ್ವತ್ರ ವಿಜಯಗಳಿಸುವ ಸಲುವಾಗಿಯೇ ನಾನು ಕೃತಜ್ಞತೆಯಿಂದ ಸ್ವೀಕರಿಸಿದೆನು.

ದೇವತೆಗಳು ನನ್ನನ್ನು ನಾನಾವಿಧವಾದ ಸ್ತೋತ್ರಮಾಡುತ್ತಿದ್ದಂತೆಯೇ ಶಂಖ-ಧನುಷ್ಪಾಣಿಯಾದ ಕವಚಧಾರಿಯಾದ ನಾನು ಅತಿಭಯಂಕರವಾದ ರಾಕ್ಷಸರ ನಿವಾಸಸ್ಥಾನಕ್ಕೆ ಅವರೊಡನೆ ಯುದ್ಧಮಾಡುವ ಆಶಯದಿಂದ ತೆರಳಿದೆನು."

೧೬೮ನೆಯ ಅಧ್ಯಾಯವು ಮುಗಿಯಿತು.

೧೬೯ನೆಯ ಅಧ್ಯಾಯ ನಿವಾತಕವಚಯುದ್ಧಪರ್ವ (ಮುಂದುವರಿದಿದೆ.)

## ಅರ್ಜುನ ಮತ್ತು ನಿವಾತಕವಚರ ಮಹಾಯುದ್ಧ

"ಅಣ್ಣ! ನಾನು ರಥದಲ್ಲಿ ಕುಳಿತು ಸಮುದ್ರದ ಕಡೆಗೆ ಪ್ರಯಾಣ ಮಾಡುತ್ತಿದ್ದಾಗ ದಾರಿಯುದ್ದಕ್ಕೂ ಋಷಿ-ಮಹರ್ಷಿಗಳು ನಾನಾವಿಧವಾಗಿ ಸ್ತೋತ್ರಮಾಡುತ್ತಾ ನನ್ನನ್ನು ಉತ್ಸಾಹಗೊಳಿಸುತ್ತಿದ್ದರು. ಬಹಳ ದೂರ ಪ್ರಯಾಣಮಾಡಿದನಂತರ ನದಿಗಳಿಗೆ ಒಡೆಯನಾದ, ಭಯಂಕರವಾಗಿ ಘೋರ್ಗರೆಯುತ್ತಿದ್ದ, ವ್ಯಯರಹಿತನಾದ ಸಮುದ್ರರಾಜನನ್ನು ಕಂಡೆನು. ನೊರೆ ಯಿಂದ ಕೂಡಿದ ಅಲೆಗಳು ಚಲಿಸುತ್ತಿರುವ ಪರ್ವತಗಳೋ ಎಂಬಂತೆ ಸತತ ವಾಗಿ ಮೇಲೆದ್ದು ಬರುತ್ತಿದ್ದುವು. ಆಕಾಶದಲ್ಲಿ ಸಂಚರಿಸುವ ವಿಮಾನಗಳಂತೆ ರತ್ನಪೂರ್ಣವಾದ ಸಾವಿರಾರು ನಾವೆಗಳು ಸಮುದ್ರದಲ್ಲಿ ಸಂಚರಿಸುತ್ತಾ ಶೋಭಿ ಸುತ್ತಿದ್ದುವು. ಸಮುದ್ರದ ಮಧ್ಯದಲ್ಲಿ ತಿಮಿ-ತಿಮಿಂಗಿಲಗಳೂ, ಮೊಸಳೆ

ಗಳೂ, ಆಮೆಗಳೂ ಸಮುದ್ರದಲ್ಲಿ ಮುಳುಗಿರುವ ಬಂಡೆಗಳೋಪಾದಿಯಲ್ಲಿ ಕಾಣುತ್ತಿದ್ದುವು. ಸಮುದ್ರದೊಳಗಡೆಯಲ್ಲಿದ್ದ ಶ್ವೇತವರ್ಣದ ಶಂಖಗಳು–ಆಕಾಶದಲ್ಲಿ ತೆಳುಮೋಡಗಳಿಂದ ಮಸುಕಾಗಿ ಕಾಣುವ ನಕ್ಷತ್ರಗಳಂತೆ ವಿರಾಜಿಸುತ್ತಿದ್ದುವು. ಮುತ್ತು-ರತ್ನಗಳು ರಾಶಿ-ರಾಶಿಯಾಗಿ ಆ ಸಮುದ್ರದಲ್ಲಿ ತೇಲಾಡುತ್ತಿದ್ದುವು. ಸಮುದ್ರದ ಮೇಲಿನ ವಾಯುವಿನ ವೇಗವು ದುರ್ಭರವಾಗಿ ಪರ್ವತೋಪಮವಾದ ಅಲೆಗಳಿಂದ ಕೂಡಿದ್ದಿತು. ಭೋರ್ಗರೆಯುತ್ತಿದ್ದ ಜಲನಿಧಿಯನ್ನು ನೋಡಿದನಂತರ ನಾನು ದೈತ್ಯರಿಂದ ತುಂಬಿಹೋಗಿದ್ದ ಸಮುದ್ರದ ಮಧ್ಯಭಾಗದಲ್ಲಿದ್ದ ರಾಕ್ಷಸನಗರಿಯನ್ನು ಸಮುದ್ರದ ದಡದಲ್ಲಿಯೇ ನಿಂತು ನೋಡಿದೆನು.

ರಥವನ್ನು ನಡೆಸುವುದರಲ್ಲಿ ಬಹುನಿಷ್ಣಾತನಾದ ಮಾತಲಿಯು ರಥಚಕ್ರಗಳ ಶಬ್ದದಿಂದ ರಾಕ್ಷಸಪುರಿಯನ್ನೇ ನಡುಗಿಸುತ್ತಾ ಸಮುದ್ರದೊಳಕ್ಕೂ ರಥವನ್ನು ನಡೆಸಿಕೊಂಡು ಹೋದನು. ರಥಚಕ್ರಗಳ ಸಪ್ಪಳವು ಗುಡುಗಿನ ಶಬ್ದವನ್ನು ಅನುಕರಿಸುತ್ತಿದ್ದಿತು. ರಥದ ಆ ಸಪ್ಪಳವನ್ನು ಹಿಂದೆ ಅನೇಕ ಬಾರಿ ಆ ರಾಕ್ಷಸರು ಕೇಳಿದ್ದರಾದ್ದರಿಂದ ರಥದಲ್ಲಿ ಕುಳಿತು ಬಂದಿರುವವನು ಇಂದ್ರನೆಂದೇ ಭಾವಿಸಿ ಉದ್ವಿಗ್ನರಾದರು. ಎಲ್ಲ ರಾಕ್ಷಸರೂ ಸಂಭ್ರಾಂತಿಹೊಂದಿದ ಮನಸ್ಸುಳ್ಳವರಾಗಿ ಶರ, ಚಾಪ, ಕತ್ತಿ, ಶೂಲ, ಪರಶು, ಗದೆ, ಮುಸಲಮುಂತಾದ ಆಯುಧಗಳನ್ನು ಹಿಡಿದು ಯುದ್ಧಸನ್ನದ್ಧರಾದರು. ಪಟ್ಟಣದ ರಕ್ಷಣೆಗೆ ಸಿದ್ಧತೆಯನ್ನು ಮಾಡಿ ಪಟ್ಟಣದ ಹೆಬ್ಬಾಗಿಲನ್ನ ಮುಚ್ಚಿಬಿಟ್ಟರು. ಅವರು ಹೆಬ್ಬಾಗಿಲನ್ನು ಮುಚ್ಚಿದೊಡನೆಯೇ ಯಾವೊಬ್ಬನೂ ನಮಗೆ ಕಾಣಿಸುತ್ತಿರಲಿಲ್ಲ. ಒಡನೆಯೇ ನಾನು ದೇವದತ್ತಶಂಖವನ್ನು ಕೈಗೆ ತೆಗೆದುಕೊಂಡು ಊದತೊಡಗಿದೆನು. ನಾನು ಮಾಡಿದ ಆ ಶಂಖನಿನಾದವು ನಾಲ್ಕುದಿಕ್ಕುಗಳಲ್ಲಿಯೂ ಪ್ರತಿಧ್ವನಿತವಾಯಿತು. ಆ ಘೋರನಿನಾದವನ್ನು ಕೇಳಿ ಎಲ್ಲ ಪ್ರಾಣಿಗಳೂ ನಡುಗಿಹೋದುವು. ವೀರನೊಬ್ಬನು ಶಂಖನಿನಾದದ ಮೂಲಕ ವೀರಗರ್ಜನೆಮಾಡಿ ಯುದ್ಧಕ್ಕೆ ಆಹ್ವಾನವನ್ನೀಯುತ್ತಿರುವಾಗ ಮಹಾಪರಾಕ್ರಮಿಗಳೆನಿಸಿದ ನಿವಾತಕವಚರಿಗೆ ಕೋಟೆಯೊಳಗೆ ಕುಳಿತಿರಲು ಸಾಧ್ಯವಾದೀತೇ? ಪದೇ-ಪದೇ ನಾನು ಮಾಡುತ್ತಿದ್ದ ಶಂಖನಾದದಿಂದ ಉದ್ವೇಜಿತರಾದ ನಿವಾತಕವಚರು ಸಾಲಂಕೃತರಾಗಿ ನಾನಾವಿಧವಾದ ಶಿರಸ್ತ್ರಾಣಗಳನ್ನು ಧರಿಸಿ-ಕಬ್ಬಿಣದ

ಮಹಾಶೂಲ, ಗದೆ, ಮುಸಲ, ಪಟ್ಟಿಶ, ಕರವಾಲ, ರಥಚಕ್ರ, ಶತಘ್ನೀ, ಭುಶುಂಡಿ, ಖಡ್ಗ–ಮುಂತಾದ ವಿಚಿತ್ರವಾದ ಆಯುಧಗಳನ್ನು ಹಿಡಿದು ಸಾವಿರಾರು ಸಂಖ್ಯೆಯಲ್ಲಿ ನನಗೆ ಅಭಿಮುಖರಾಗಿ ಬಂದುನಿಂತರು.

ಸಾರಥಿಶ್ರೇಷ್ಠನಾದ ಮಾತಲಿಯು ಬಹಳ ಹೊತ್ತು ಪರ್ಯಾಲೋಚಿಸಿ ರಥವನ್ನು ಸಮತಟ್ಟಾದ ಸ್ಥಳಕ್ಕೆ ಬಹಳ ಬೇಗ ಕೊಂಡೊಯ್ದನು. ರಥವು ಬಹುವೇಗವಾಗಿ ಚಲಿಸುತ್ತಿದ್ದುದರಿಂದ 'ನಾನೆಲ್ಲಿಗೆ ಹೋಗುತ್ತಿರುವೆನು ಅಥವಾ ಮಾತಲಿಯು ನನ್ನನ್ನು ಎಲ್ಲಿಗೆ ಕರೆದೊಯ್ಯುತ್ತಿರುವನು?" ಎಂಬ ಅರಿವೇ ನನಗುಂಟಾಗಲಿಲ್ಲ.

ಆ ಸಮಯಕ್ಕೆ ಸರಿಯಾಗಿ ಯುದ್ಧಸನ್ನದ್ಧರಾಗಿದ್ದ ನಿವಾತಕವಚರು ಏಕಕಾಲದಲ್ಲಿ ವಿಕಾರಸ್ವರರೂಪಗಳಾದ ರಣಭೇರಿಗಳನ್ನು ಬಾರಿಸಿದರು. ಆ ಘೋರನಿನಾದದಿಂದಾಗಿ ಸಮುದ್ರದಲ್ಲಿದ್ದ ಪರ್ವತೋಪಮವಾದ ಲಕ್ಷಾಂತರ ಮೀನು-ಮೊಸಳೆ-ತಿಮಿಂಗಿಲಗಳು ಪ್ರಾಣತೊರೆದು ಸಮುದ್ರದ ಮೇಲೆ ತೇಲಾಡಿದುವು.

ಅಣ್ಣ! ಮರುಕ್ಷಣದಲ್ಲಿಯೇ ಸಾವಿರಾರು ಮಂದಿ ನಿವಾತಕವಚರು ಬಾಣಗಳನ್ನು ಪ್ರಯೋಗಿಸುತ್ತಾ ಮಹಾವೇಗದಿಂದ ನನ್ನ ಮೇಲೆ ನುಗ್ಗಿದರು. ನನಗೂ ನಿವಾತಕವಚರಿಗೂ ಘೋರಯುದ್ಧವು ಪ್ರಾರಂಭವಾಯಿತು. ನಿವಾತಕವಚರಿಗೆ ಮೃತ್ಯುರೂಪವಾದ ಆ ಮಹಾಸಮರವನ್ನು ನೋಡಲು ದೇವರ್ಷಿಗಳೂ, ಮಹರ್ಷಿಗಳೂ, ಬ್ರಹ್ಮರ್ಷಿಗಳೂ, ಸಿದ್ಧರೂ ಆಗಮಿಸಿದ್ದರು. ತಾರಕಾಸುರನ ಸಂಹಾರಕಾಲದಲ್ಲಿ ಇಂದ್ರನನ್ನು ಸ್ತೋತ್ರ-ಮಾಡಿದಂತೆ-ಆಗಲೂ-ಋಷಿ-ಮಹರ್ಷಿಗಳು ಶುಭಕರವಾದ, ಉತ್ಸಾಹಯುಕ್ತವಾದ ಶುಭಾಶಿಷಗಳಿಂದ ನನ್ನನ್ನು ಉತ್ತೇಜನಗೊಳಿಸಿದರು."

ಗ೬೯ನೆಯ ಅಧ್ಯಾಯವು ಮುಗಿಯಿತು.

೧೭೦ನೆಯ ಅಧ್ಯಾಯ ನಿವಾತಕವಚಯುದ್ಧಪರ್ವ (ಮುಂದುವರಿದಿದೆ.)

## ಅರ್ಜುನ–ನಿವಾತಕವಚರ ಯುದ್ಧ

ಅರ್ಜುನನು ಧರ್ಮಜನಿಗೆ ಹೇಳುತ್ತಾನೆ :

"ಅಣ್ಣ! ಸಾವಿರಾರು ಮಂದಿ ನಿವಾತಕವಚರು ಆಯುಧಪಾಣಿಗಳಾಗಿ

ಏಕಕಾಲದಲ್ಲಿ ನನ್ನ ಮೇಲೆ ನುಗ್ಗಿ ಬಂದು, ನನ್ನ ರಥದ ಗತಿಯನ್ನು ತಡೆದು, ಘೋರಗರ್ಜನೆಗಳನ್ನು ಮಾಡುತ್ತಾ ನನ್ನ ಮೇಲೆ ಸಾವಿರಾರು ಬಾಣಗಳ ಮಳೆಗರೆದರು. ಮತ್ತೆ ಕೆಲವರು ತಮ್ಮ ಕೈಯಲ್ಲಿದ್ದ ಭರ್ಜಿಗಳನ್ನೂ ಈಟಿ ಗಳನ್ನೂ ನನ್ನ ಕಡೆಗೆ ಗುರಿಯಿಟ್ಟು ಹೊಡೆದರು. ಮತ್ತೆ ಕೆಲವರು ತಮ್ಮ ಕೈಯಲ್ಲಿದ್ದ ಗದೆಗಳನ್ನೂ, ಕೊಡಲಿಗಳನ್ನೂ ಗರ-ಗರನೆ ತಿರುಗಿಸಿ ನನ್ನ ಕಡೆಗೆ ರಭಸದಿಂದ ಪ್ರಯೋಗಿಸಿದರು. ಅವರು ಪ್ರಯೋಗಿಸಿದ ಸಾವಿರಾರು ಆಯುಧವಿಶೇಷಗಳು ನನ್ನ ರಥದ ಮೇಲೆ ಬಿದ್ದುವು. ಮತ್ತೆ ಕೆಲವು ನಿವಾತ ಕವಚಯೋಧರು ಚೂಪಾದ ಬಾಣಗಳನ್ನು ಧನುಸ್ಸಿನ ಹೆದೆಗೇರಿಸಿ ನನ್ನ ಕಡೆಗೆ ರಭಸದಿಂದ ನುಗ್ಗಿಬಂದರು. ನನ್ನೆದುರಿನಲ್ಲಿದ್ದ ಪ್ರತಿಯೊಬ್ಬನ ಮೇಲೂ ಗಾಂಡೀವಧನುಸ್ಸಿನಿಂದ ಹತ್ತು-ಹತ್ತು ಬಾಣಗಳನ್ನು ಪ್ರಯೋಗಿ ಸಿದೆನು. ಶಿಲೆಯಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ನನ್ನ ಬಾಣಗಳನ್ನು ವಿರೋಧಿಗಳನ್ನು ಬಹುದೂರದವರೆಗೂ ತಳ್ಳಿಹಾಕಲು ಸಮರ್ಥವಾದುವು. ನನ್ನ ಬಾಣ ಪ್ರಹಾರದಿಂದ ಆ ರಾಕ್ಷಸರು ಬಹಳ ದೂರ ಹೋಗಿಬಿದ್ದರು. ಅನಂತರದಲ್ಲಿ ಮಾತಲಿಯಿಂದ ಪ್ರೇರಿತವಾದ ಕುದುರೆಗಳು ಅನೇಕರೀತಿಯ ಗಮನವೈಚಿತ್ರ್ಯಗಳನ್ನು ಪ್ರದರ್ಶಿಸುತ್ತಾ ವಾಯುವೇಗದಿಂದ ಮುನ್ನಡೆಯು ತ್ತಿದ್ದುವು. ಅದರಿಂದಲೂ ರಾಕ್ಷಸರು ಭ್ರಾಂತರಾದರು. ಅನೇಕದೈತ್ಯರು ಕುದುರೆಗಳ ಕಾಲ್ತುಳಿತಕ್ಕೆ ಸಿಕ್ಕಿ ಧ್ವಸ್ತರಾದರು. ಇಂದ್ರನ ಆ ದಿವ್ಯರಥಕ್ಕೆ ಹತ್ತು ಸಾವಿರ ಕುದುರೆಗಳನ್ನು ಕಟ್ಟಲಾಗಿತ್ತು. ಮಾತಲಿಯ ಚಾತುರ್ಯದ ಸಾರಥ್ಯ ದಿಂದಾಗಿ ನಾಲ್ಕಾರು ಕುದುರೆಗಳನ್ನು ಮಾತ್ರವೇ ಆ ಇಂದ್ರರಥಕ್ಕೆ ಕಟ್ಟಿರಬಹು ದೆಂಬ ಭ್ರಾಂತಿಯನ್ನು ಪ್ರೇಕ್ಷಕರಿಗೆ ಉಂಟುಮಾಡುತ್ತಿದ್ದಿತು. ಕುದುರೆಗಳ ಪಾದಪ್ರಹಾರಗಳಿಂದಲೂ, ರಥದ ಚಕ್ರಗಳ ಅಡಿಯಲ್ಲಿ ಸಿಕ್ಕಿಬೀಳುತ್ತಿದ್ದುದ ರಿಂದಲೂ ಮತ್ತು ನನ್ನ ಬಾಣಗಳ ಪ್ರಹಾರಗಳಿಂದಲೂ ಅನೇಕ ದೈತ್ಯರು ಪ್ರಾಣಗಳನ್ನು ಕಳೆದುಕೊಂಡರು. ಧನುಷ್ಪಾಣಿಗಳಾಗಿ ರಥದಲ್ಲಿ ಕುಳಿತು ಬಂದಿದ್ದ ಕೆಲವು ರಾಕ್ಷಸಯೋಧರು ನನ್ನ ಅನುಸ್ಯೂತವಾದ ಬಾಣಗಳ ಪ್ರಯೋಗದಿಂದ ಪ್ರಾಣತೊರೆದು ಕೆಳಗುರುಳಿದರು. ಸಾರಥಿಗಳೇ ಇಲ್ಲದಿ ರುವ ಆ ರಥಗಳನ್ನು ಕುದುರೆಗಳೇ ಮನಬಂದೆಡೆಗೆ ಎಳೆದುಕೊಂಡು ಹೋಗು ತ್ತಿದ್ದುವು. ಸಾವಿರಾರು ದೈತ್ಯರು ಪುನಃ ಸಂಘಟಿತರಾಗಿ ದಿವ್ಯಾಯುಧಗಳನ್ನು

ಧರಿಸಿ ನಾಲ್ಕು ದಿಕ್ಕುಗಳಿಂದಲೂ ನನ್ನನ್ನಾಕ್ರಮಿಸಿ ಯುದ್ಧಕ್ಕೆ ನಿಂತರು. ಎವೆ ಯಿಕ್ಕುವುದರೊಳಗಾಗಿ ಸರ್ವಾಯುಧಗಳಿಂದಲೂ ಸಜ್ಜಾಗಿದ್ದ ಆ ಅಪಾರ ಸೈನ್ಯವನ್ನು ನೋಡಿ ನನ್ನ ಮನಸ್ಸೂ ವ್ಯಾಕುಲಗೊಂಡಿತು. ಆದರೆ ಮಾತಲಿಯು ನನ್ನನ್ನು ಹೆಚ್ಚುಕಾಲ ವ್ಯಥಿತಮನಸ್ಕನನ್ನಾಗಿ ಇರಗೊಡಲಿಲ್ಲ. ತನ್ನ ರಥನಯನಚಾತುರ್ಯದಿಂದ ಅಷ್ಟು ವೇಗಶಾಲಿಗಳಾದ ಕುದುರೆಗಳನ್ನೂ ಶ್ರಮವಿಲ್ಲದೇ ನಡೆಸುತ್ತಾ ನನ್ನನ್ನು ಅಪಾಯರಹಿತವಾದ ಸ್ಥಳಕ್ಕೆ ಕ್ಷಣಮಾತ್ರ ದಲ್ಲಿ ಕರೆದೊಯ್ದನು. ಅಲ್ಲಿ ನಿಂತು ನಾನು ಕ್ಷಣಮಾತ್ರದಲ್ಲಿ ವೇಗವಾಗಿದ್ದ, ಚಿತ್ರ-ವಿಚಿತ್ರವಾಗಿದ್ದ ಅಸ್ತ್ರಗಳನ್ನು ಪ್ರಯೋಗಿಸುತ್ತಾ ಆಯುಧಪಾಣಿಗಳಾಗಿ ಸಿಂಹನಾದಮಾಡುತ್ತಿದ್ದ ಬಹಳ ಮಂದಿ ರಾಕ್ಷಸರನ್ನು ಏಕಕಾಲದಲ್ಲಿ ಯಮಾ ಲಯಕ್ಕೆ ಕಳುಹಿಸಿದೆನು.

ಧರ್ಮಜ! ಈ ರೀತಿಯಾಗಿ ನಾನು ನನ್ನ ಕೈಚಳಕದಿಂದ ಸಕಲರಾಕ್ಷಸ ರನ್ನೂ ಸರ್ವಪ್ರಯತ್ನದಿಂದಲೂ ನಿರ್ಮೂಲನಗೊಳಿಸುತ್ತಾ ಸಂಚರಿಸುತ್ತಿದ್ದು ದನ್ನು ನೋಡಿ ಇಂದ್ರನ ಸಾರಥಿಯಾದ ಮಾತಲಿಯು ಸುಪ್ರೀತನಾದನು. ನಾನು ಹಿಂದೆಯೇ ಹೇಳಿದಂತೆ ಮಾತಲಿಯ ರಥನಯನಚಾತುರ್ಯದಿಂದಾಗಿ ಅನೇಕರಾಕ್ಷಸರು ಕುದುರೆಗಳ ಕಾಲುಗಳಿಗೆ ಸಿಕ್ಕಿ ಹತರಾದರು ; ಮತ್ತೆ ಕೆಲ ವರು ರಥದ ಚಕ್ರಗಳಿಗೆ ಸಿಕ್ಕಿ ಪ್ರಾಣತೊರೆದರು ; ಮತ್ತೆ ಕೆಲವರು ಪಲಾಯನ ಮಾಡಿದರು. ಇನ್ನೂ ಕೆಲವರು ಪುನಃ ಒಟ್ಟಾಗಿ ಸೇರಿ ನನ್ನನ್ನು ಸುತ್ತುವರಿದು ನನ್ನ ಮೇಲೆ ಬಾಣಗಳ ಮಳೆಯನ್ನೇ ಸುರಿಸಿದರು. ಅವರ ಬಾಣಗಳಿಂದ ಪೀಡಿತನಾದ ನಾನು ಲಘುವಾದ ಬಾಣಗಳನ್ನು ಧನುಸ್ಸಿನಲ್ಲಿ ಯೋಜಿಸಿ ಮಂತ್ರಪುನಶ್ಚರಣೆಮಾಡಿ ನಿವಾತಕವಚರ ಮೇಲೆ ಪ್ರಯೋಗಿಸಿದೆನು. ನನ್ನ ಆ ಬಾಣಪ್ರಯೋಗದಿಂದ ನನ್ನೆದುರಿನಲ್ಲಿ ನಿಂತಿದ್ದ ಸಾವಿರಾರು ಮಂದಿ ರಾಕ್ಷಸರು ವಿಚ್ಛಿನ್ನರಾದರು. ಆದರೆ ಉಳಿದ ರಾಕ್ಷಸರು ವಿಮುಖರಾಗಲಿಲ್ಲ. ಕೋಪಾವಿಷ್ಟರಾದ ಸಾವಿರಾರು ಮಂದಿ ರಾಕ್ಷಸರು ಗುಂಪಾಗಿ ಬಂದು ಪುನಃ ನನ್ನ ಮೇಲೆ ಶಕ್ತ್ಯಾಯುಧ, ಶೂಲಾಯುಧ ಮತ್ತು ಕತ್ತಿಗಳನ್ನು ಏಕಕಾಲದಲ್ಲಿ ಪ್ರಯೋಗಿಸಿದರು. ಒಡನೆಯೇ ನಾನು ಇಂದ್ರನಿಗೆ ಪರಮಪ್ರಿಯವಾದ 'ಮಾಧವ' ಎಂಬ ಹೆಸರಿನ ದಿವ್ಯಾಸ್ತ್ರವನ್ನು ಗಾಂಡೀವಧನುಸ್ಸಿಗೆ ನಿಯೋಜಿಸಿ

ಮಂತ್ರಪುನಶ್ಚರಣೆಮಾಡಿ ಪ್ರಯೋಗಿಸಿದೆನು. ಅದರಿಂದಾಗಿ ಅವರೆಲ್ಲರೂ ಏಕಕಾಲದಲ್ಲಿ ಪ್ರಯೋಗಿಸಿದ ಖಡ್ಗ-ತೋಮರ-ತ್ರಿಶೂಲಾದಿ ಆಯುಧಗಳೆಲ್ಲವೂ ತುಂಡಾಗಿ ಕೆಳಗೆ ಬಿದ್ದುವು. ಅವರು ಪ್ರಯೋಗಿಸಿದ ಆಯಧಗಳೆಲ್ಲವನ್ನೂ ನನ್ನ ಕೈಚಳಕದಿಂದ ಕತ್ತರಿಸಿ ಮರುಕ್ಷಣದಲ್ಲಿಯೇ ನನ್ನೆದುರಾಗಿದ್ದ ಪ್ರತಿಯೊಬ್ಬ ರಾಕ್ಷಸನ ಮೇಲೆಯೂ ಹತ್ತು-ಹತ್ತು ಬಾಣಗಳನ್ನು ಪ್ರಯೋಗಿಸಿದೆನು. ಧರ್ಮಜ! ನಿಶ್ಚಯವಾಗಿಯೂ ಆ ಸಮಯದಲ್ಲಿ ನಾನು ಗಾಂಡೀವದಿಂದ ಬಿಡುತ್ತಿದ್ದ ಬಾಣಗಳು ಕಪ್ಪಾದ ದುಂಬಿಗಳ ಪಙ್ತಿಗಳಂತೆ ಹೋಗಿ ರಾಕ್ಷಸರನ್ನು ತುಂಡರಿಸುತ್ತಿದ್ದುವು. ನನ್ನ ಕೈಚಳಕವನ್ನು ನೋಡಿ ಮಾತಲಿಯು ಪ್ರತಿಕ್ಷಣದಲ್ಲಿಯೂ 'ಭಲೇ-ಭಲೇ' ಎನ್ನುತ್ತಾ ನನ್ನನ್ನು ಉತ್ತೇಜಿಸುತ್ತಿದ್ದನು. ನಿವಾತಕವಚರೂ ಏಕಪ್ರಕಾರವಾಗಿ ನನ್ನ ಮೇಲೆ ಬಾಣಗಳ ಮಳೆಗರೆಯುತ್ತಿದ್ದರು. ನಾನು ಅವುಗಳೆಲ್ಲವನ್ನೂ ನನ್ನ ಬಾಣಗಳಿಂದ ಕತ್ತರಿಸಿ ಪುನಃ ಅವರ ಮೇಲೆ ಸಾವಿರಾರು ಬಾಣಗಳನ್ನು ಪ್ರಯೋಗಿಸುತ್ತಿದ್ದೆನು. ಮಳೆಗಾಲದಲ್ಲಿ ಪರ್ವತಶಿಖರಗಳು ಮಳೆಸುರಿದಾಗ ನೀರನ್ನು ಕೆಳಕ್ಕೆ ಸುರಿಸುವಂತೆ ರಾಕ್ಷಸರ ದೇಹಗಳು ರಕ್ತವನ್ನು ಸುರಿಸುತ್ತಿದ್ದುವು. ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಸ್ಪರ್ಶವುಳ್ಳ ನನ್ನ ಬಾಣಗಳ ಪ್ರಹಾರದಿಂದ ನಿವಾತಕವಚರು ಉದ್ವಿಗ್ನರಾದರು. ನನ್ನ ಕೈಚಳಕದಿಂದ ಒಬ್ಬೊಬ್ಬರ ಮೇಲೆಯೂ ನೂರಾರು ಬಾಣಗಳನ್ನು ಏಕಕಾಲದಲ್ಲಿ ಪ್ರಯೋಗಿಸುತ್ತಿದ್ದೆನಾದ್ದರಿಂದ ಅವರ ಶರೀರಾದ್ಯಂತವಾಗಿ ನೂರಾರು ಗಾಯಗಳಾದುವು. ಅವರ ಪ್ರತಿಕ್ರಿಯೆಯೂ ಕುಂಠಿತವಾಯಿತು. ಅವರು ನನ್ನ ಮೇಲೆ ಬಾಣಪ್ರಯೋಗಮಾಡಲು ಅಸಮರ್ಥರಾದರು. ಮುಂದೇನು ಮಾಡಬೇಕೆಂಬುದೇ ತಿಳಿಯದೇ ನಿವಾತಕವಚರು ಮಾಯಾಯುದ್ಧವನ್ನು ಮಾಡಲು ನಿಶ್ಚಯಿಸಿದರು."

೧೭೦ನೆಯ ಅಧ್ಯಾಯವು ಮುಗಿಯಿತು.

## ನಿವಾತಕವಚರ ಮಾಯಾಯುದ್ಧದ ವರ್ಣನೆ

"ಅಣ್ಣ! ನಿವಾತಕವಚರು ಪರ್ವತೋಪಮವಾಗಿದ್ದ ಕಲ್ಲುಬಂಡೆಗಳನ್ನು ನನ್ನ ಮೇಲೆ ಪ್ರಯೋಗಿಸತೊಡಗಿದರು. ಅಶ್ಮವರ್ಷವು ನನ್ನ ಮೇಲೆ ಸತತವಾಗಿ ಬೀಳುತ್ತಿದ್ದಿತೇ ಹೊರತು ರಾಕ್ಷಸರು ಮಾತ್ರ ನನ್ನ ಕಣ್ಣಿಗೆ ಕಾಣುತ್ತಿರಲಿಲ್ಲ. ಆ ಅಶ್ಮವರ್ಷದಿಂದ ನಾನು ಬಹುವಾಗಿ ಪೀಡಿತನಾದೆನು. ಆದರೂ ಧೃತಿಗೆಡಲಿಲ್ಲ. ವಜ್ರಾಯುದಕ್ಕೆ ಸಮಾನವಾದ ಮಹೇಂದ್ರಾಸ್ತ್ರವನ್ನು ಗಾಂಡೀವಕ್ಕೆ ಯೋಜಿಸಿ, ಮಂತ್ರಪುನಶ್ಚರಣೆಮಾಡಿ ಪ್ರಯೋಗಿಸಿದೆನು. ಅದರಿಂದ ಉದ್ಭೂತವಾದ ಸಾವಿರಾರು ಬಾಣಗಳು ಕಲ್ಲಿನ ಮಳೆಯನ್ನು ತಡೆಗಟ್ಟಿದುದು ಮಾತ್ರವಲ್ಲದೇ–ಆ ಮಹಾಸ್ತ್ರದ ಪ್ರಭಾವದಿಂದ ಪರ್ವತೋಪಮವಾಗಿದ್ದ ಬಂಡೆಗಳೂ ಪುಡಿ-ಪುಡಿಯಾಗಿ ಹೋದುವು. ಬಾಣಗಳ ಮತ್ತು ಬಂಡೆಗಳ ಘರ್ಷಣೆಯಿಂದ ಅಗ್ನಿಯು ಉತ್ಪನ್ನವಾಗಿ ಅನೇಕ ಬಂಡೆಗಳು ಪುಡಿಯಾಗಿ ಕಿಡಿಗಳಂತೆ ಕೆಳಗೆ ಬಿದ್ದುವು. ಮಾಯಾವಿಗಳಾದ ರಾಕ್ಷಸರು ಪ್ರಯೋಗಿಸಿದ ಶಿಲಾವರ್ಷವನ್ನು ನಾನು ಹೀಗೆ ತಡೆಗಟ್ಟಿದನಂತರ ಚಕ್ರದ ಅಚ್ಚಿನಷ್ಟು ಗಾತ್ರದ ಧಾರೆಯಿಂದ ಕೂಡಿದ ಜಲವರ್ಷವು ನನ್ನ ಸುತ್ತಲೂ ಪ್ರಾರಂಭವಾಯಿತು. ನಾಲ್ಕು ದಿಕ್ಕುಗಳೂ ಜಲಧಾರೆಗಳಿಂದ ಆವೃತವಾದುವು. ಸತತವಾದ ಮಳೆಗರೆಯುವಿಕೆಯಿಂದಲೂ, ಬಿರುಸಾದ ಗಾಳಿಯೂ ಬೀಸುತ್ತಿದ್ದುದರಿಂದಲೂ ಮತ್ತು ಅವುಗಳ ಜೊತೆಗೆ ರಾಕ್ಷಸರು ಕರ್ಕಶಧ್ವನಿಗಳನ್ನು ಮಾಡುತ್ತಿದ್ದುದರಿಂದಲೂ 'ಎಲ್ಲಿ ಏನಿದೆ?' ಎಂಬ ಅರಿವೇ ನನಗುಂಟಾಗಲಿಲ್ಲ. ಅಖಂಡ ಭೂಮಂಡಲಪರ್ಯಂತವಾಗಿ ಆಕಾಶದಿಂದ ಸುರಿಯುತ್ತಿದ್ದ ಸತತವಾದ ಜಲಧಾರೆಯನ್ನು ಕಂಡ ನಾನು ವಿಮೋಹಿತನಾದೆನು. ಕೆಲವು ಕ್ಷಣಗಳು ಕಳೆದ ಮೇಲೆ ಅದೂ ಕೂಡ ರಾಕ್ಷಸರ ಮಾಯೆಯೆಂಬುದರ ಅರಿವಾಯಿತು. ಒಡನೆಯೇ ನಾನು ಇಂದ್ರನಿಂದ ಉಪದಿಷ್ಟವಾದ, ಬಹುಭಯಂಕರವಾದ, ಮಹಾಜ್ವಾಲೆಯಿಂದ ಕೂಡಿದ್ದ 'ವಿಶೋಷಣ' ಎಂಬ ಮಹಾಸ್ತ್ರವನ್ನು ಗಾಂಡೀವಕ್ಕೆ ಯೋಜಿಸಿ ಪ್ರಯೋಗಿಸಿದೆನು. ಮರುಕ್ಷಣದಲ್ಲಿಯೇ ನೀರು ಒಣಗಿ ಹೋಗಿ ಮಳೆಗರೆಯುವುದು ನಿಂತುಹೋಯಿತು. ವಾತಾವರಣವು ಪ್ರಶಾಂತ

ವಾಯಿತು. ಆದರೆ ರಾಕ್ಷಸರು ಆ ಪ್ರಶಾಂತವಾತಾವರಣವನ್ನು ಹೆಚ್ಚುಕಾಲ ಇರಗೊಡಲಿಲ್ಲ. ತಮ್ಮ ಮಾಯೆಯಿಂದ ಪ್ರಚಂಡವಾದ ಅಗ್ನಿಯನ್ನೂ, ಚಂಡಮಾರುತವನ್ನೂ ನನ್ನ ಸುತ್ತಲೂ ಸೃಷ್ಟಿಸಿದರು. ಒಡನೆಯೇ ನಾನು ಸಲಿಲಾಸ್ತ್ರದಿಂದ ಅಗ್ನಿಯನ್ನೂ-ಶೈಲಾಸ್ತ್ರದಿಂದ ವಾಯುವನ್ನೂ ಸ್ತಂಭನ ಗೊಳಿಸಿದೆನು.

ಬೆಂಕಿಯನ್ನೂ ಮತ್ತು ವಾಯುವನ್ನೂ ನಾನು ನಿರ್ಮೂಲಗೊಳಿಸಿದ ನಂತರ ಯುದ್ಧದಲ್ಲಿ ದುರ್ದಮರಾದ ರಾಕ್ಷಸರು ಏಕಕಾಲದಲ್ಲಿ ಅನೇಕವಿಧ ವಾದ ಮಾಯೆಯನ್ನು ಮಾಡಲುಪಕ್ರಮಿಸಿದರು. ಒಂದೆಡೆಯಲ್ಲಿ ಧಾರಾ ಕಾರವಾದ ಮಳೆಯು ಬರುತ್ತಿದ್ದಿತು. ಮತ್ತೊಂದು ಕಡೆಯಿಂದ ಶಿಲಾವೃಷ್ಟಿ ಯಾಗುತ್ತಿದ್ದಿತು. ನಮ್ಮ ರಥವನ್ನು ಭಸ್ಮಮಾಡಿಬಿಡುವುದೋ ಎಂಬಂತೆ ನಮ್ಮ ರಥದ ಸುತ್ತಲೂ ಅಗ್ನಿಯ ಜ್ವಾಲೆಗಳು ಕವಿದುವು. ಅದರ ಜೊತೆಗೆ ನಿಂತಲ್ಲಿ ನಿಲ್ಲಲು ಸಾಧ್ಯವಾಗದಂತಹ ಚಂಡಮಾರುತವು ಬೀಸುತ್ತಿದ್ದಿತು. ಆ ವಿಧವಾದ ಮಾಯೆಯು ನನ್ನನ್ನು ಬಹುವಾಗಿ ಪೀಡಿಸಿತು. ಮುಂದೇನು ಮಾಡಬೇಕೆಂಬುದನ್ನು ಯೋಚಿಸುವಷ್ಟರಲ್ಲಿಯೇ ನಮ್ಮ ಸುತ್ತಲೂ ಅಗಾಧ ವಾದ, ಘೋರವಾದ ಮತ್ತು ಭಯಂಕರವಾದ ಕತ್ತಲೆಯು ಕವಿಯಿತು. ಹೀಗೆ ಘೋರವಾದ ಮತ್ತು ಭಯಂಕರವಾಗ ಕತ್ತಲೆಯು ಕವಿಯಲಾಗಿ ನಮ್ಮ ಕುದುರೆಗಳು ಪರಾಙ್ಮುಖವಾದುವು. ಸಾರಥಿಯಾದ ಮಾತಲಿಯು ಜಾರಿದನು. ಹಗ್ಗಗಳೂ ಚಾವಟಿಯೂ ಅವನ ಕೈಗಳಿಂದ ಕಳಚಿ ಕೆಳಕ್ಕೆ ಬಿದ್ದುವು.

ಬಹುಭೀತನಾದ ಮಾತಲಿಯು ಪ್ರತಿಕ್ಷಣದಲ್ಲಿಯೂ 'ಎಲ್ಲಿರುವೆ ಅರ್ಜುನ? ಎಲ್ಲಿರುವೆ ಭಾರತ?' ಎಂದು ಕೂಗಿಕೊಳ್ಳುತ್ತಿದ್ದನು. ಮಹಾ ಪರಾಕ್ರಮಿಯಾದ, ಮಹಾಚತುರನಾದ, ಇಂದ್ರನ ಸಾರಥಿಯಾದ ಮಾತ ಲಿಯು ಕ್ಷಣಕಾಲ ಭಯದಿಂದ ಮೂರ್ಛಿತಿಳಿದು ಬಹುಸಂತ್ರಸ್ತನಾಗಿದ್ದ ನನ್ನೊಡನೆ ಹೇಳಿದನು : 'ಪಾರ್ಥ! ಹಿಂದೆ ದೇವಾಸುರರಿಗೆ ಅಮೃತ ಪ್ರಾಪ್ತಿಯ ಸಲುವಾಗಿ ಘೋರಯುದ್ಧವು ನಡೆಯಿತು. ಆ ಸಮಯದಲ್ಲಿಯೂ

ನಾನು ಇಂದ್ರನಿಗೆ ಸಾರಥ್ಯವನ್ನು ಮಾಡುತ್ತಿದ್ದೆನು. ಶಂಬರಾಸುರನ ಸಂಹಾರಕಾಲದಲ್ಲಿಯೂ ದೇವತೆಗಳಿಗೂ-ದಾನವರಿಗೂ ಘೋರವಾದ ಯುದ್ಧವಾಯಿತು. ಆಗಲೂ ನಾನು ಅಲ್ಲಿ ಇಂದ್ರನ ಸಾರಥಿಯಾಗಿಯೇ ಯುದ್ಧದಲ್ಲಿ ನೆರವಾಗಿದ್ದೆನು. ಅದೇ ರೀತಿಯಲ್ಲಿ ವೃತ್ರಾಸುರನ ಸಂಹಾರ ಕಾಲದಲ್ಲಿಯೂ ನಾನು ಇಂದ್ರನ ರಥದ ಕುದುರೆಗಳನ್ನು ನಡೆಸುತ್ತಿದ್ದೆನು. ವಿರೋಚನನ ಮಗನಾದ ಬಲಿಯೆಂಬ ರಾಕ್ಷಸನಿಗೂ ಮತ್ತು ಇಂದ್ರನಿಗೂ ಘೋರಯುದ್ಧವಾದ ಸಮಯದಲ್ಲಿಯೂ ನಾನೇ ಸಾರಥಿಯಾಗಿದ್ದೆನು. ಹೆಚ್ಚೇನು ಹೇಳಲಿ, ಪಾರ್ಥ! ಇಂದ್ರನು ದಾನವರೊಡನೆ ಮಾಡಿದ ಎಲ್ಲ ಯುದ್ಧಗಳಲ್ಲಿಯೂ ನಾನೇ ಸಾರಥಿಯಾಗಿದ್ದು ಆ ಘೋರಸಮರಗಳನ್ನು ಪ್ರತ್ಯಕ್ಷವಾಗಿ ನೋಡಿದ್ದೇನೆ. ಆದರೆ ಪಾಂಡವ! ಯಾವ ಯುದ್ಧದಲ್ಲಿಯೂ ನಾನು ಮೂರ್ಛಿತನಾಗಲಿಲ್ಲ. ಬ್ರಹ್ಮನು ನಿಶ್ಚಯವಾಗಿ ಈ ಯುದ್ಧದ ಮೂಲಕವಾಗಿ ಪ್ರಪಂಚದ ವಿನಾಶವನ್ನೇ ನಿಶ್ಚಯಿಸಿರಬಹುದು. ಹಾಗಿಲ್ಲದಿದ್ದರೆ ಇಂತಹ ಘೋರಯುದ್ಧವು ನಡೆಯಬೇಕೆನ್ನುವ ಸಂಕಲ್ಪವನ್ನು ಬ್ರಹ್ಮನು ಮಾಡುತ್ತಿರಲಿಲ್ಲ.'

ಅಣ್ಣ! ಮಾತಲಿಯು ಹೇಳಿದ ಮಾತುಗಳನ್ನು ಕೇಳಿ ನಾನು, ನನಗುಂಟಾಗಿದ್ದ ಭಯವನ್ನು ನನ್ನಲ್ಲಿಯೇ ಅಡಗಿಸಿಕೊಳ್ಳುತ್ತಾ, ರಾಕ್ಷಸರ ಆ ಮಾಯಾಜಾಲವನ್ನು ನನ್ನಲ್ಲಿರುವ ಮಾಯಾಜಾಲಭೂಯಿಷ್ಠವಾದ ಮಹಾಸ್ತ್ರಗಳಿಂದ ಧ್ವಂಸಗೊಳಿಸಲು ಸಂಕಲ್ಪಿಸಿ, ಭೀತನಾಗಿದ್ದ ಮಾತಲಿಗೆ ಹೇಳಿದೆನು : 'ಸಾರಥಿಯೇ! ಭಯಪಡಬೇಡ. ನನ್ನ ಭುಜಬಲ-ಪರಾಕ್ರಮವೆಷ್ಟೆಂಬುದನ್ನು ಈಗ ನೋಡು. ನನ್ನಲ್ಲಿರುವ ಅಸ್ತ್ರಗಳ ಶಕ್ತಿಯು ಎಷ್ಟೆಂಬುದನ್ನ ಅವಲೋಕಿಸು. ನನ್ನ ಈ ಗಾಂಡೀವಧನುಸ್ಸಿನ ಪ್ರಭಾವವನ್ನಾದರೂ ವೀಕ್ಷಿಸು. ನನ್ನಲ್ಲಿರುವ ಮಾಯಾಮಯವಾದ ಮಹಾಸ್ತ್ರಗಳ ಜಾಲದಿಂದ ರಾಕ್ಷಸರು ಕಲ್ಪಿಸಿರುವ ಈ ಮಾಯಾಜಾಲವನ್ನು ಕ್ಷಣಮಾತ್ರದಲ್ಲಿಯೇ ಧ್ವಂಸ ಗೊಳಿಸುವೆನು. ಬೆದರದಿರು. ಮನಸ್ಸಿಗೆ ಧೈರ್ಯವನ್ನು ತಂದುಕೋ.'

ಅಣ್ಣ! ಹೀಗೆ ಹೇಳಿ ಮಾತಲಿಯನ್ನು ಸಂತೈಸಿ, ದೇವತೆಗಳ ಹಿತಾರ್ಥವಾಗಿ ಸಕಲಪ್ರಾಣಿಗಳಿಗೂ ಆಶ್ಚರ್ಯವಾಗುವ ರೀತಿಯಲ್ಲಿ ನನ್ನ

ಬಾಣಜಾಲದಿಂದ ರಾಕ್ಷಸರು ಕಲ್ಪಿಸಿದ್ದ ಮಾಯಾಜಾಲಕ್ಕೆ ಪ್ರತಿಯಾದ ಮಾಯಾಜಾಲವನ್ನೇ ಕಲ್ಪಿಸಿದೆನು. ಆದರಿಂದಾಗಿ ರಾಕ್ಷಸರು ಕಲ್ಪಿಸಿದ್ದ ಮಾಯಾಜಾಲವು ಕ್ಷಣಮಾತ್ರದಲ್ಲಿ ವಿಧ್ವಸ್ತವಾಯಿತು. ಆದರಿಂದ ರಾಕ್ಷಸ ರೇನೂ ಹಿಂಜರಿಯಲಿಲ್ಲ. ಅಪ್ರತಿಮಪರಾಕ್ರಮಿಗಳಾದ ರಾಕ್ಷಸನಾಯಕ ರೆಲ್ಲರೂ ಸೇರಿ ಇನ್ನೂ ಅನೇಕವಿಧವಾದ ಮಾಯೆಗಳನ್ನು ಸೃಷ್ಟಿಸತೊಡಗಿ ದರು. ಅವರು ಪ್ರಪಂಚವನ್ನೇ ತಮ್ಮ ಕೈಲಿಟ್ಟುಕೊಂಡು ಆಡಿಸುತ್ತಿರುವಂತೆ ನಮಗೆ ಭಾಸವಾಯಿತು. ಒಮ್ಮೆ ಪ್ರಪಂಚವೆಲ್ಲವೂ ಘೋರತಮಸ್ಸಿನಿಂದ ಮುಚ್ಚಿಹೋಗುತ್ತಿದ್ದಿತು. ಮತ್ತೊಮ್ಮೆ ಪ್ರಪಂಚವೇ ಕಾಣಿಸದಂತೆ ಮಾಡಿ ಬಿಡುತ್ತಿದ್ದರು. ಮರುಕ್ಷಣದಲ್ಲಿಯೇ ಪ್ರಪಂಚವನ್ನು ನೀರಿನಲ್ಲಿ ಮುಳುಗಿಸಿ ಬಿಟ್ಟರೋ–ಎಂಬ ಭ್ರಾಂತಿಯನ್ನು ಉಂಟುಮಾಡುತ್ತಿದ್ದರು. ಒಂದೇ ಕ್ಷಣದಲ್ಲಿ ಪುನಃ ಪ್ರಪಂಚವು ಪ್ರಕಾಶಮಾನವಾಗಲಾಗಿ ಮಾತಲಿಯು ಕುದುರೆಗಳ ಕಡಿವಾಣಗಳನ್ನು ಹಿಡಿದು ಸಾರಥ್ಯಮಾಡಲು ಉಪಕ್ರಮಿಸಿದನು. ಧರ್ಮಜ! ನಿಶ್ಚಯವಾಗಿಯೂ ಆ ಮಹಾಯುದ್ಧವು ಸರ್ವರಿಗೂ ರೋಮಾಂಚಕಾರಿ ಯಾಗಿದ್ದಿತು. ಮಾಯೆಯು ನಿರಸನವಾದನಂತರ ಉಗ್ರ ರಾದ ನಿವಾತಕವಚರು ಪುನಃ ನನ್ನನ್ನು ಆಕ್ರಮಿಸಿದರು. ಆದರೆ ಅಣ್ಣ! ನನ್ನ ಕಣ್ಣಿಗೆ ಬಿದ್ದ ಒಬ್ಬ ರಾಕ್ಷಸನನ್ನೂ ಒಂದು ನಿಮಿಷವೂ ನಾನು ಪ್ರಾಣಸಹಿತ ಬಿಡುತ್ತಿರಲಿಲ್ಲ. ಒಡನೆಯೇ ಯಮಾಲಯಕ್ಕೆ ಕಳುಹಿಸಿಬಿಡುತ್ತಿದ್ದೆನು. ನನಗೆದುರಾಗಿ ಬಂದ ಲಕ್ಷ-ಲಕ್ಷರಾಕ್ಷಸರು ಕ್ಷಣಮಾತ್ರದಲ್ಲಿ ಹತರಾಗಿ ಹೋದರು. ನಿವಾತಕವಚರ ಸಂಪೂರ್ಣವಿನಾಶವು ಸನ್ನಿಹಿತವಾಗಿಹೋಯಿತೆಂಬ ಭಾವನೆಯು ಸರ್ವತ್ರ ಮೂಡುತ್ತಿದ್ದಿತು. ಅಷ್ಟರೊಳಗಾಗಿಯೇ ಪುನಃ ರಾಕ್ಷಸರ ಮಾಯೆಯಿಂದಾಗಿ ಒಬ್ಬ ದಾನವನೂ ನನ್ನ ಕಣ್ಣಿಗೆ ಕಾಣದಂತಾದನು."

೧೭೧ನೆಯ ಅಧ್ಯಾಯವು ಮುಗಿಯಿತು.

೧೭೨ನೆಯ ಅಧ್ಯಾಯ ನಿವಾತಕವಚಯುದ್ಧಪರ್ವ (ಮುಂದುವರಿದಿದೆ.)

## ನಿವಾತಕವಚರ ಸಂಹಾರ

ಅರ್ಜುನನು ಮುಂದುವರಿದು ಹೇಳಿದನು :

“ಅಣ್ಣ! ದೈತ್ಯರು ಅದೃಶ್ಯರಾಗಿ ನನ್ನೊಡನೆ ಮಾಯಾಯುದ್ಧವನ್ನು ಮಾಡಲು ಉಪಕ್ರಮಿಸಿದರು. ನಾನೂ ಅದೃಶ್ಯವಾದ ಅಸ್ತ್ರಗಳನ್ನೇ ಪ್ರಯೋಗಿಸುತ್ತಾ ಅವರೊಡನೆ ಸೆಣೆಸಾಡುತ್ತಿದ್ದೆನು. ಗಾಂಡೀವಧನುಸ್ಸಿನಿಂದ ಪ್ರಯೋಗಿಸಲ್ಪಟ್ಟ ಆ ಅದೃಶ್ಯಾಸ್ತ್ರಗಳು ದೈತ್ಯರು ಎಲ್ಲಿಯೇ ನಿಂತಿದ್ದರೂ ಅವರ ತಲೆಗಳನ್ನು ತುಂಡರಿಸುತ್ತಿದ್ದುವು. ನನ್ನ ಅದೃಶ್ಯಾಸ್ತ್ರಗಳ ಪ್ರಹಾರಗಳನ್ನು ತಾಳಲಾರದೇ ನಿವಾತಕವಚರು ಮಾಯಾಯುದ್ಧವನ್ನು ಉಪಸಂಹರಿಸಿ ತಮ್ಮ ಪಟ್ಟಣದೊಳಕ್ಕೆ ಹೊರಟುಹೋದರು. ದೈತ್ಯರೆಲ್ಲರೂ ಓಡಿಹೋದನಂತರ ವಾತಾವರಣವು ಪ್ರಶಾಂತವಾಗಲಾಗಿ, ನನ್ನ ಸುತ್ತಲೂ ಸತ್ತುಬಿದ್ದಿದ್ದ ಸಾವಿರಾರು ನಿವಾತಕವಚರನ್ನು ನಾನು ವೀಕ್ಷಿಸಿದೆನು. ಅವರ ಆಭರಣಗಳೂ, ಆಯುಧಗಳೂ, ಅವರು ತೊಟ್ಟಿದ್ದ ಕವಚಗಳೂ ಎಲ್ಲವೂ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದುವು. ಈ ಕಾರಣದಿಂದಾಗಿ ಕುದುರೆಗಳು ಇತ್ತಲಿಂದತ್ತಕಡೆಗೆ ಸಂಚರಿಸಲೂ ಸಾಧ್ಯವಾಗಲಿಲ್ಲ. ಒಡನೆಯೇ ಕುದುರೆಗಳು ಹಾರಿ ಅಂತರಿಕ್ಷಗಾಮಿಗಳಾದುವು. ಪಟ್ಟಣಕ್ಕೆ ತೆರಳಿದ್ದ ನಿವಾತಕವಚರು ಪುನಃ ಅದೃಶ್ಯರಾಗಿಯೇ ಆಕ್ರಮಿಸಿ ನಮ್ಮ ಸುತ್ತಲೂ ಕಲ್ಲಿನ ಕೋಟೆಯನ್ನೇ ಕಟ್ಟಿಬಿಟ್ಟರು. ಮತ್ತೆ ಕೆಲವು ರಾಕ್ಷಸರು ಭೂಮಿಯ ಮೇಲೆ ನಿಂತು ಆಕಾಶದಲ್ಲಿ ನಿಂತಿದ್ದ ನನ್ನ ರಥದ ಕುದುರೆಗಳ ಕಾಲುಗಳನ್ನು ಹಿಡಿದೆಳೆಯುತ್ತಿದ್ದರು. ಮತ್ತೆ ಕೆಲವರು ನನ್ನ ರಥದ ಚಕ್ರಗಳನ್ನೇ ಹಿಡಿದು ತಳ್ಳುತ್ತಿದ್ದರು. ಈ ರೀತಿಯಲ್ಲಿ ನಿವಾತಕವಚರು ನನ್ನ ರಥವನ್ನೂ ಕುದುರೆಗಳನ್ನೂ ಮನಬಂದೆಡೆಗೆ ಸೆಳೆದಾಡುತ್ತಾ, ಮತ್ತೊಂದು ಕಡೆಯಿಂದ ನನ್ನನ್ನು ಕಲ್ಲುಗಳ ಪ್ರಹಾರದಿಂದ ಘಾಸಿಪಡಿಸುತ್ತಾ, ಯುದ್ಧಮಾಡುತ್ತಿದ್ದರು. ನನ್ನ ಮೇಲೆ ಬಿದ್ದಿದ್ದ ಮತ್ತು ಬೀಳುತ್ತಿದ್ದ ಕಲ್ಲಿನ ರಾಶಿಗಳನ್ನು ನೋಡಿದರೆ ನಾನು ಕಲ್ಲಿನ ಪರ್ವತದ ಗುಹೆಯಲ್ಲಿ ಕುಳಿತಿರುವಂತೆ ಭಾಸವಾಯಿತು. ಹೀಗೆ ನಾನು ಕಲ್ಲುಗಳ ರಾಶಿಯಿಂದಲೇ ಮುಚ್ಚಿಹೋಗಲಾಗಿ, ಅದೇ ಸಮಯದಲ್ಲಿ

ಕುದುರೆಗಳು ದೈತ್ಯರಿಂದ ತಡೆಯಲ್ಪಡಲಾಗಿ ನಾನು ಬಹಳ ಆರ್ತನಾದೆನು. ನನ್ನ ದುಃಸ್ಥಿತಿಯನ್ನು ಕಂಡು ಮಾತಲಿಯು ಹೇಳಿದನು :

'ಅರ್ಜುನ! ಭಯಪಡುವ ಕಾರಣವಿಲ್ಲ. ನಿನ್ನಲ್ಲಿರುವ ವಜ್ರಾಸ್ತ್ರವನ್ನು ತಡಮಾಡದೇ ಈ ರಾಕ್ಷಸರ ಮೇಲೆ ಪ್ರಯೋಗಿಸು.'

ಮಾತಲಿಯ ಮಾತುಗಳನ್ನು ಕೇಳಿದೊಡನೆಯೇ ನಾನು ಇಂದ್ರನಿಗೆ ಬಹುಪ್ರಿಯವಾದ, ಬಹುಭಯಂಕರವಾದ ವಜ್ರಾಸ್ತ್ರವನ್ನು ಗಾಂಡೀವದಲ್ಲಿ ಯೋಜಿಸಿ, ಶಿಂಜಿನಿಯನ್ನು ಸೆಳೆದು, ಮಂತ್ರಪುನಶ್ಚರಣೆ ಮಾಡಿ ಪ್ರಯೋಗಿಸಿದೆನು. ವಜ್ರಾಯುಧದ ದಿವ್ಯಮಂತ್ರವನ್ನು ಪುನಶ್ಚರಣೆಮಾಡಿ ಪ್ರಯೋಗಿಸಿದ ಬಾಣಗಳೆಲ್ಲವೂ ಪ್ರತ್ಯೇಕವಾಗಿ ಸಾವಿರಾರು ವಜ್ರಾಯುಧಗಳಾಗಿ ರಾಕ್ಷಸರು ರಚಿಸಿದ್ದ ಮಾಯೆಯನ್ನು ವಿಧ್ವಸ್ತಗೊಳಿಸಿದುದೇ ಅಲ್ಲದೇ–ಅದೃಶ್ಯರಾಗಿದ್ದ ನಿವಾತಕವಚರ ಶರೀರಗಳನ್ನೂ ಹೊಕ್ಕು ಅವರೆಲ್ಲರ ಪ್ರಾಣಗಳನ್ನೂ ಅಪಹರಿಸಿದುವು. ಪರ್ವತಗಳ ಶಿಖರಗಳು ಕೆಳಗೆ ಬೀಳುವ ರೀತಿಯಲ್ಲಿ ಗತಾಸುಗಳಾದ ನಿವಾತಕವಚರು ತೊಪ-ತೊಪನೆ ಅಂತರಿಕ್ಷದಿಂದ ಭೂಮಿಯ ಮೇಲೆ ಬಿದ್ದರು. ಕುದುರೆಗಳನ್ನು ಹಿಡಿದಿದ್ದ ರಾಕ್ಷಸಾಧಮರನ್ನೂ ಬಾಣಗಳು ಧ್ವಂಸಮಾಡಿದುವು.

ಅದರಿಂದಾಗಿ ಆ ಭಾಗವೆಲ್ಲವೂ ಸತ್ತುಹೋಗಿದ್ದ ನಿವಾತಕವಚರ ಪರ್ವತಶಿಖರೋಪಮವಾದ ಜಡಶರೀರಗಳಿಂದ ತುಂಬಿಹೋಯಿತು. ಅವರ ಶರೀರಗಳು ವಿಸ್ತೃತವಾಗಿ ಬಿದ್ದ ಕಲ್ಲುಬಂಡೆಗಳಂತೆ ಕಾಣುತ್ತಿದ್ದುವು. ಕುದುರೆಗಳ ಮೇಲಾಗಲಿ, ಮಾತಲಿಯ ಮೇಲಾಗಲೀ, ನನ್ನ ಮೇಲಾಗಲೀ–ಯಾವ ಒಂದು ಚಿಕ್ಕಗಾಯವೂ ಅನಂತರ ಕಾಣಲಿಲ್ಲ. ಅದು ನನಗೆ ಅತ್ಯಾಶ್ಚರ್ಯವೆನಿಸಿತು. ಬಳಿಕ ಮಾತಲಿಯು ನಸುನಗುತ್ತಾ ಹೇಳಿದನು :

'ಅರ್ಜುನ! ನಿಶ್ಚಯವಾಗಿಯೂ ನಿನೆಗ ಸಮಾನರಾದ ಪರಾಕ್ರಮಿಗಳು ದೇವತೆಗಳಲ್ಲಿಯೂ ಇಲ್ಲ.'

ಅಣ್ಣ! ನಿವಾತಕವಚರೆಲ್ಲರೂ ಸಂಪೂರ್ಣರಾಗಿ ಧ್ವಂಸವಾಗಿಹೋದನಂತರ ಅವರ ಪತ್ನಿಯರು ಆ ದೈತ್ಯನಗರದಲ್ಲಿ–ಸಾರಸಪಕ್ಷಿಗಳು ಶರತ್ಕಾಲದಲ್ಲಿ ಆಕ್ರಂದನಮಾಡುವಂತೆ–ಅರಚುತ್ತಾ ಅಳತೊಡಗಿದರು.

ಅನಂತರದಲ್ಲಿ ನಾನು ಮಾತಲಿಯೊಡನೆ ನನ್ನ ರಥಚಕ್ರಗಳ ಕರ್ಕಶ ಧ್ವನಿಯಿಂದ ದೈತ್ಯನಗರಿಯಲ್ಲಿದ್ದ ರಾಕ್ಷಸಸ್ತ್ರೀಯರನ್ನು ಭಯಗೊಳಿಸುತ್ತಾ ಅಸುರನಗರಿಯನ್ನು ಪ್ರವೇಶಿಸಿದೆನು. ನವಿಲುಗಳ ಬಣ್ಣದಿಂದ ಕೂಡಿದ್ದ ಹತ್ತು ಸಾವಿರ ಕುದುರೆಗಳನ್ನೂ ಮತ್ತು ಸೂರ್ಯನಿಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ ರಥವನ್ನೂ ಕಂಡು ಆ ರಾಕ್ಷಸಸ್ತ್ರೀಯರು ಗುಂಪುಗುಂಪಾಗಿ ಓಡಲಾರಂಭಿಸಿದರು. ಆ ಸ್ತ್ರೀಯರು ಭಯಪಟ್ಟು ಓಡಿಹೋಗುತ್ತಿದ್ದಾಗ ಉಂಟಾದ ಅವರ ಆಭರಣಗಳ ಶಬ್ದವು ಪರ್ವತದಿಂದ ಬೀಳುವ ಕಲ್ಲುಗಳ ಶಬ್ದವನ್ನು ಅನುಕರಿಸುತ್ತಿದ್ದಿತು. ಭೀತರಾದ ರಾಕ್ಷಸಿಯರು ಕಟ್ಟಕಡೆಗೆ ಓಡಿ ಹೋಗಿ ಸ್ವರ್ಣಮಯವಾದ ಮತ್ತು ನವರತ್ನಖಚಿತವಾಗಿದ್ದ ತಮ್ಮ ಅರಮನೆ ಗಳನ್ನು ಸೇರಿಕೊಂಡರು.

ಧರ್ಮಜ! ದೈತ್ಯರ ಆ ಪಟ್ಟಣವು ಬಹಳ ಸುಂದರವಾಗಿದ್ದಿತು. ಅಮರಾವತಿಗಿಂತಲೂ ರಮಣೀಯವಾಗಿದ್ದಿತು. ನಾನು ಈ ವಿಷಯವಾಗಿ ಮಾತಲಿಯನ್ನೇ ಕೇಳಿದೆನು : 'ಮಾತಲೇ! ಇಂತಹ ಸುಂದರವಾದ ನಗರಿ ಯಲ್ಲಿ ದೇವತೆಗಳೇಕೆ ವಾಸಮಾಡಕೂಡದು? ನನಗೇನೋ ಈ ಪಟ್ಟಣವು ಇಂದ್ರನ ಅಮರಾವತಿಗಿಂತಲೂ ಬಹಳ ಸುಂದರವಾಗಿ ಕಾಣುತ್ತಿದೆ.'

ನನ್ನ ಪ್ರಶ್ನೆಗೆ ಮಾತಲಿಯು ಹೀಗೆಂದು ಉತ್ತರಿಸಿದನು : 'ಪಾರ್ಥ! ಬಹಳ ದಿನಗಳ ಹಿಂದೆ ಈ ನಗರಿಯೂ ನಮ್ಮ ಸ್ವಾಮಿಯಾದ ಇಂದ್ರನದೇ ಆಗಿದ್ದಿತು. ಇಲ್ಲೂ ದೇವತೆಗಳೇ ವಾಸಮಾಡುತ್ತಿದ್ದರು. ಒಂದಾನೊಂದು ಸಮಯದಲ್ಲಿ ದೇವತೆಗಳಿಗೂ-ದಾನವರಿಗೂ ಯುದ್ಧವಾಗಿ ದೇವತೆಗಳು ಪರಾಜಯ ಹೊಂದಲಾಗಿ ನಿವಾತಕವಚರು ದೇವತೆಗಳನ್ನು ಪಟ್ಟಣದಿಂದ ಹೊರಹಾಕಿದರು. ಅದಕ್ಕೆ ಕಾರಣವೇನೆಂದು ನೀನು ಕೇಳಬಹುದು. ಈ ನಿವಾತಕವಚರು ಬಹುಘೋರವಾದ ತಪಸ್ಸಿನಿಂದ ಚತುರ್ಮುಖಬ್ರಹ್ಮನನ್ನು ಒಲಿಸಿಕೊಂಡು ತಾವು ಆ ಪಟ್ಟಣದಲ್ಲಿಯೇ ವಾಸಮಾಡಬೇಕೆಂದೂ-ದೇವತೆ ಗಳೊಡನೆ ಯುದ್ಧಮಾಡುವಾಗ ತಮಗೆ ಯಾವ ವಿಧವಾದ ಅಪಾಯವೂ ಉಂಟಾಗಕೂಡದೆಂದೂ ವರವನ್ನು ಕೇಳಿದ್ದರು. ಚತುರ್ಮುಖನು ಆ ಎರಡು ವರಗಳನ್ನೂ ಕೊಟ್ಟುಬಿಟ್ಟನು.

ಈ ವಿಷಯವನ್ನು ತಿಳಿದ ಇಂದ್ರನು ಚತುರ್ಮುಖನ ಬಳಿಗೆ ಹೋಗಿ ದೇವತೆಗಳಿಂದ ಅಪಾಯವುಂಟಾಗಕೂಡದೆಂದು ನಿನ್ನಿಂದ ವರಪಡೆದನಂತರ ನಿವಾತಕವಚರು ಅಮರರಾದೆವೆಂದೇ ಭಾವಿಸಿರುವರೆಂದೂ–ಅವರಿಂದ ತನಗೆ ಹೆಚ್ಚಿನ ಉಪಟಳವು ಸನ್ನಿಹಿತವಾಗುವುದೆಂದೂ–ಆದುದರಿಂದ ತನಗೆ ಹಿತವನ್ನುಂಟುಮಾಡುವ ಸಲುವಾಗಿ ನಿವಾತಕವಚರ ವಿನಾಶವಾಗುವಂತೆ ಅನುಗ್ರಹಿಸಬೇಕೆಂದೂ, ಕೇಳಿಕೊಂಡನು. ಅದಕ್ಕುತ್ತರವಾಗಿ ಚತುರ್ಮುಖನು:

**ಭವಿತಾನಸ್ತ್ವಮಪ್ಯೇಷಾಂ ದೇಹೇನಾನ್ಯೇನ ಶತ್ರುಹನ್ ||೩೧||**

'ಶತ್ರುಸೂದನನೇ! ನಿನ್ನದೇ ಆದ ಬೇರೊಂದು ಶರೀರದಿಂದ ಇವರ ನಾಶವಾಗುವುದು'–ಎಂಬ ಆಶ್ವಾಸನೆಯನ್ನಿತ್ತನು.

ಪಾರ್ಥ! ನೀನು ಮಾನವನಾದರೂ ಇಂದ್ರನ ಮಗನೇ ಅಲ್ಲವೆ? ನಿವಾತಕವಚರ ವಿನಾಶಾರ್ಥವಾಗಿಯೇ ಇಂದ್ರನು ನಿನಗೆ ಸಕಲಾಸ್ತ್ರಗಳನ್ನೂ ಉಪದೇಶಿಸಿರುವನು. ಬ್ರಹ್ಮನ ವರಪ್ರಸಾದದಿಂದಾಗಿ ದೇವತೆಗಳಿಂದ ಧ್ವಂಸ ಮಾಡಲಾಗದ ಈ ನಿವಾತಕವಚರ ಆಯಷ್ಯವೂ ಮುಗಿಯುತ್ತಾ ಬಂದಿ ದ್ದಿತು. ಇದೇ ಸಮಯಕ್ಕೆ ಸರಿಯಾಗಿ ಇಂದ್ರನ ನಿರ್ದೇಶನವನ್ನನುಸರಿಸಿ ನೀನೂ ಸ್ವರ್ಗಕ್ಕೆ ಆಗಮಿಸಿದೆ. ನಿನ್ನ ಮನಸ್ಸಂಕಲ್ಪವೂ ಪೂರೈಸಿತು ಮತ್ತು ದೇವತೆಗಳ ಕಾರ್ಯವೂ ಸಾಧಿತವಾಯಿತು.

ದಾನವರ ನಿರ್ಮೂಲನಕ್ಕಾಗಿಯೇ ಅಸ್ತ್ರಗಳ ಸರ್ವಬಲವನ್ನೂ ಇಂದ್ರನು ನಿನಗೆ ಅನುಗ್ರಹಿಸಿರುವನು, ಪಾರ್ಥ!"

ಅಣ್ಣ! ಮಾತಲಿಯು ಆ ಅಸುರನಗರಿಯ ವಿಷಯವಾಗಿ ಹೀಗೆಂದು ಹೇಳಿದನು. ದಾನವರೆಲ್ಲರನ್ನೂ ಸಂಹರಿಸಿ ಆ ಪಟ್ಟಣವನ್ನು ಇಂದ್ರನಿಗಾಗಿ ಸ್ವಾಧೀನಮಾಡಿಕೊಂಡನಂತರ ಮಾತಲಿಯೊಡನೆ ನಾನು ದೇವಲೋಕಕ್ಕೆ ಹೊರಟುಹೋದೆನು."

೧೭೩ನೆಯ ಅಧ್ಯಾಯವು ಮುಗಿಯಿತು.

೧೭೩ನೆಯ ಅಧ್ಯಾಯ ನಿವಾತಕವಚಯುದ್ಧಪರ್ವ (ಮುಂದುವರಿದಿದೆ.)

## ಅರ್ಜುನನಿಂದ ಹಿರಣ್ಯಪುರವಾಸಿಗಳಾದ ಪೌಲೋಮ ಮತ್ತು ಕಾಲಕಂಜರ ವಧೆ ಮತ್ತು ಇಂದ್ರನಿಂದ ಅರ್ಜುನನ ಅಭಿನಂದನೆ

"ಧರ್ಮಜ! ನಾನು ನಿವಾತಕವಚರನ್ನು ಸಂಹರಿಸಿ ಅಮರಾವತಿಗೆ ಮಾತಲಿಯೊಡನೆ ಹಿಂದಿರುಗುತ್ತಿದ್ದಾಗ ಸ್ವೇಚ್ಛೆಯಿಂದ ಚಲಿಸುವ ಸೂರ್ಯನ ಮತ್ತು ಅಗ್ನಿಯ ಪ್ರಭೆಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ ಮಹತ್ತರವಾದ ಮತ್ತೊಂದು ಪಟ್ಟಣವನ್ನು ಆಕಾಶದಲ್ಲಿ ನೋಡಿದೆನು. ಆ ಪಟ್ಟಣದಲ್ಲಿದ್ದ ವೃಕ್ಷಗಳಲ್ಲಿ ರತ್ನಗಳು ಬಿಟ್ಟಿದ್ದುವು. ಆ ಮರಗಳ ಮೇಲೆ ಆನಂದವಾಗಿ ನಿನಾದಮಾಡುತ್ತಾ ಚಿತ್ರ-ವಿಚಿತ್ರವಾದ ಪಕ್ಷಿಗಳು ಕುಳಿತಿದ್ದುವು. ಆ ಪಟ್ಟಣಕ್ಕೆ ನಾಲ್ಕು ಮಹಾದ್ವಾರಗಳಿದ್ದುವು. ಅನೇಕ ಗೋಪುರಗಳೂ ಆ ಪಟ್ಟದಲ್ಲಿದ್ದುವು. ಶತ್ರುಗಳಿಗೆ ಪ್ರವೇಶಿಸಲು ದುಸ್ಸಾಧ್ಯವಾದ ಆ ಪಟ್ಟಣದಲ್ಲಿ ಪೌಲೋಮ–ಕಾಲಕಂಜರೆಂಬ ಅನೇಕರಾಕ್ಷಸರು ನಿತ್ಯತುಷ್ಟರಾಗಿ ವಾಸಮಾಡುತ್ತಿದ್ದರು. ಆ ಪಟ್ಟಣವು ಅನೇಕವಿಧವಾದ ರತ್ನಗಳಿಂದಲೇ ನಿರ್ಮಿತವಾಗಿದ್ದಿತು. ಆಕಾಶದಲ್ಲಿಯೇ ನಿಂತಿದ್ದಿತು. ಅದು ನೋಡಲು ಬಹು ಸುಂದರವಾಗಿಯೂ, ಅದ್ಭುತವಾಗಿಯೂ, ಆಶ್ಚರ್ಯಕರವಾಗಿಯೂ ಕಾಣುತ್ತಿದ್ದಿತು. ಪುಷ್ಪಗಳಿಂದಲೂ, ಫಲಗಳಿಂದಲೂ ಕೂಡಿದ ವೃಕ್ಷಗಳಿಂದಲೂ ಸಕಲ ವಿಧವಾದ ರತ್ನಗಳಿಂದಲೂ ಆ ಪಟ್ಟಣವು ಸಮೃದ್ಧವಾಗಿದ್ದಿತು. ಅಲ್ಲಿ ಚಿತ್ರ-ವಿಚಿತ್ರವಾದ ಸುಂದರವಾದ ದೇವಲೋಕದ ಪಕ್ಷಿಗಳಿದ್ದುವು. ನಿತ್ಯತುಷ್ಟರಾದ ರಾಕ್ಷಸರಿಂದ ಆ ಪಟ್ಟಣವು ನಿಬಿಡವಾಗಿದ್ದಿತು. ಅವರು ಕೈಗಳಲ್ಲಿ ಶೂಲ, ಮುಸಲ, ಬಿಲ್ಲು, ಕತ್ತಿ–ಇವುಗಳನ್ನು ಹಿಡಿದು ಕಂಠಗಳಲ್ಲಿ ಸುಗಂಧಮಯವಾದ ಪುಷ್ಪಹಾರಗಳನ್ನು ಧರಿಸಿ ಸ್ವೇಚ್ಛೆಯಿಂದ ತಿರುಗಾಡುತ್ತಿದ್ದರು. ಅಂತಹ ಬಹುವಿಚಿತ್ರವಾದ ಪರಮಾದ್ಭುತವಾದ ಸುಂದರವಾದ ರಾಕ್ಷಸರ ಪಟ್ಟಣವನ್ನು ನೋಡಿ ಆಶ್ಚರ್ಯಚಕಿತನಾದ ನಾನು ಮಾತಲಿಯನ್ನು ಪ್ರಶ್ನಿಸಿದೆನು :

'ಇದೇನು ಮಾತಲೇ! ಈ ಪಟ್ಟಣವು ಇಷ್ಟೊಂದು ಸುಂದರವಾಗಿಯೂ

ಆಶ್ಚರ್ಯಕರವಾಗಿಯೂ ಇರುವುದು? ಇದು ಯಾರ ಪಟ್ಟಣ? ಇದರ ಪೂರ್ವೇತಿಹಾಸವೇನು?'



ಅದಕ್ಕುತ್ತರವಾಗಿ ಮಾತಲಿಯು ಹೇಳಿದನು :

'ಪಾರ್ಥ! ಅನೇಕವರ್ಷಗಳ ಹಿಂದೆ ದೈತ್ಯನೊಬ್ಬನ ಮಗಳಾದ 'ಪುಲೋಮಾ' ಎಂಬ ಹೆಸರಿನ ರಾಕ್ಷಸಿಯೂ ಮತ್ತು 'ಕಾಲಕಾ' ಎಂಬ ಹೆಸರಿನ ಮಹಾಸುರಿಯೂ ಒಂದು ಸಹಸ್ರದೇವವರ್ಷಗಳವರೆಗೆ ಘೋರವಾದ ತಪಸ್ಸನ್ನು ಮಾಡಿದರು. ಸಹಸ್ರವರ್ಷಗಳ ಘೋರತಪಸ್ಸು ಮುಗಿದನಂತರ ಅವರ ತಪಸ್ಸಿನಿಂದ ಸುಪ್ರೀತನಾದ ಚತುರ್ಮುಖನು ಅವರಿಗೆ ಈ ವರಗಳನ್ನು ಕೊಟ್ಟನು :

ಅಗೃಹ್ಣೀತಾಂ ವರಂ ತೇ ತು ಸುತಾನಾಮಲ್ಪದುಃಖತಾಮ್ ।
ಅವಧ್ಯತಾಂ ಚ ರಾಜೇನ್ದ್ರ ಸುರರಾಕ್ಷಸಪನ್ನಗೈಃ ।
ಪುರಂ ಸುರಮಣೀಯಂ ಚ ಖಚರಂ ಸುಮಹಾಪ್ರಭಮ್ ॥೯॥

ಸರ್ವರತ್ನೈಃ ಸಮುದಿತಂ ದುರ್ಧರ್ಷಮಮರೈರಪಿ ।
ಮಹರ್ಷಿಯಕ್ಷಗನ್ಧರ್ವಪನ್ನಗಾಸುರರಾಕ್ಷಸೈಃ ॥೧೦॥

ಸರ್ವಕಾಮಗುಣೋಪೇತಂ ವೀತಶೋಕಮನಾಮಯಮ್ ।
ಬ್ರಹ್ಮಣಾ ಭರತಶ್ರೇಷ್ಠ ಕಾಲಕೇಯಕೃತೇ ಕೃತಮ್ ॥೧೧॥

ತದೇತತ್ಖಪುರಂ ದಿವ್ಯಂ ಚರತ್ಯಮರವರ್ಜಿತಮ್ ।
ಪೌಲೋಮಾಧ್ಯುಷಿತಂ ವೀರ ಕಾಲಕಞ್ಜೈಶ್ಚ ದಾನವೈಃ ॥೧೨॥

ಹಿರಣ್ಯಪುರಮಿತ್ಯೇವಂ ಖ್ಯಾಯತೇ ನಗರಂ ಮಹತ್ ।
ರಕ್ಷಿತಂ ಕಾಲಕೇಯೈಶ್ಚ ಪೌಲೋಮೈಶ್ಚ ಮಹಾಸುರೈಃ ॥೧೩॥

ತ ಏತೇ ಮುದಿತಾ ರಾಜನ್ನವಧ್ಯಾಃ ಸರ್ವದೈವತೈಃ ।
ನಿವಸನ್ತ್ಯತ್ರ ರಾಜೇನ್ದ್ರ ಗತೋದ್ವೇಗಾ ನಿರುತ್ಸುಕಾಃ ॥೧೪॥

ಮಾನುಷಾನ್ಮೃತ್ಯುರೇತೇಷಾಂ ನಿರ್ದಿಷ್ಟೋ ಬ್ರಹ್ಮಣಾ ಪುರಾ ।
ಏತಾನಪಿ ರಣೇ ಪಾರ್ಥ ಕಾಲಕಞ್ಜಾನ್ದುರಾಸದಾನ್ ।
ವಜ್ರಾಸ್ತ್ರೇಣ ನಯಸ್ವಾಶು ವಿನಾಶಂ ಸುಮಹಾಬಲಾನ್ ॥೧೫॥

ಅವರ ಮಕ್ಕಳಿಗೆ ಯಾವಾಗಲೂ ದುಃಖವೇ ಉಂಟಾಗಕೂಡದೆಂಬುದೊಂದು ವರ. ಸುರ-ರಾಕ್ಷಸ-ಪನ್ನಗರಿಂದಲೂ ಅವರು ವಧ್ಯರಾಗಕೂಡದೆಂಬುದು ಮತ್ತೊಂದು ವರ. ಇದರ ಜೊತೆಗೆ ಪುಲೋಮೆಯ ಮತ್ತು ಕಾಲಕೆಯ ಮಕ್ಕಳು ವಾಸಮಾಡಲು ಮಹಾಪ್ರಭೆಯಿಂದ ಕೂಡಿರುವ, ಆಕಾಶದಲ್ಲಿಯೇ ಇರುವ, ಸಕಲವಿಧವಾದ ರತ್ನಗಳಿಂದಲೂ ಪರಿಪೂರ್ಣವಾದ, ದೇವತೆಗಳಿಗೂ–ಯಕ್ಷ-ಗಂಧರ್ವ-ಕಿನ್ನರರಿಗೂ–ಋಷಿ-ಮಹರ್ಷಿಗಳಿಗೂ ಸಹ ಅಭೇದ್ಯವಾದ, ಸರ್ವಕಾಮನೆಗಳನ್ನೂ ಒದಗಿಸುವ, ಶೋಕ-ರೋಗಗಳಿಂದ ವಿಮುಕ್ತವಾದ ಒಂದು ಪಟ್ಟಣವನ್ನೂ ದಯಪಾಲಿಸಬೇಕೆಂದು ಆ ರಾಕ್ಷಸಿಯರು ಬ್ರಹ್ಮನನ್ನು ಕೇಳಿ ಪಡೆದುಕೊಂಡರು.

ಅರ್ಜುನ! ನೀನು ನೋಡುತ್ತಿರುವ ಈ ಪಟ್ಟಣವು ಕಾಲಕೇಯರಿಗಾಗಿ ಸಾಕ್ಷಾತ್ ಬ್ರಹ್ಮನಿಂದಲೇ ನಿರ್ಮಿತವಾಗಿದೆ. ಇಲ್ಲಿಗೆ ದೇವತೆಗಳು ಪ್ರವೇಶಿಸುವಂತೆಯೇ ಇಲ್ಲ. ಈ ಪಟ್ಟಣದಲ್ಲಿ ಬ್ರಹ್ಮನ ವರದ ಅನುಸಾರವಾಗಿ ರಾಕ್ಷಸರು ಅಪೇಕ್ಷಿಸುವ ಸಕಲವಸ್ತುಗಳೂ ಸರ್ವದಾ ಸಿದ್ಧವಾಗಿರುವುವು. ಶೋಕವಾಗಲೀ, ರೋಗವಾಗಲೀ-ಈ ಪಟ್ಟಣದ ಹತ್ತಿರದಲ್ಲಿಯೂ ಸುಳಿಯುವುದಿಲ್ಲ. ಹಿರಣ್ಯಪುರವೆಂಬ ನಾಮದೇಯವನ್ನು ಪಡೆದಿರುವ ಈ ಪಟ್ಟಣದಲ್ಲಿ ಪೌಲೋಮ ಮತ್ತು ಕಾಲಕಂ ರಾಕ್ಷಸರು ವಾಸವಾಗಿದ್ದಾರೆ. ಅವರೇ ಈ ಪಟ್ಟಣವನ್ನು ಸರ್ವದಾ ರಕ್ಷಿಸುತ್ತಿರುತ್ತಾರೆ. ದೇವ-ಗಂಧರ್ವ-ಯಕ್ಷ ರಾಕ್ಷಸರಿಂದಲೂ ಮರಣಭಯವಿಲ್ಲದ ಈ ರಾಕ್ಷಸರು ಯಾವ ವಿಧವಾದ ಭೀತಿಯೂ ಇಲ್ಲದವರಾಗಿ ಬೇಕು-ಬೇಕಾದ ಕಾಮನೆಗಳೆಲ್ಲವನ್ನೂ ಪೂರೈಸಿಕೊಳ್ಳುತ್ತಾ ಆನಂದಭರಿತರಾಗಿ ಜೀವಿಸುತ್ತಿದ್ದಾರೆ. ಹೀಗೆಂದ ಮಾತ್ರಕ್ಕೆ ಇವರು ಅಮರರೆಂದು ಭಾವಿಸಬೇಡ. ಬ್ರಹ್ಮನು ಮಾನವರಿಂದ ಇವರಿಗೆ ಮರಣವನ್ನು ನಿರ್ದಿಷ್ಟಮಾಡಿರುತ್ತಾನೆ.

ಆದುದರಿಂದ ಇವರೆಲ್ಲರನ್ನೂ ಸಂಹರಿಸಲು ನೀನೇ ಸಮರ್ಥನಾಗಿರುವೆ. ದುರಾಸದರಾದ ಬಲಿಷ್ಠರಾದ ಈ ಕಾಲಕಂಜ-ಪೌಲೋಮರನ್ನೂ ವಜ್ರಾಸ್ತ್ರದಿಂದ ಶೀಘ್ರವಾಗಿ ವಿನಾಶಗೊಳಿಸು, ಅರ್ಜುನ!'

ಮಹಾರಾಜ! ಆ ಕಾಲಕಂಜರೂ ಮತ್ತು ಪೌರೋಮರೂ ದೇವಾಸುರರಿಂದಲೂ ಅವಧ್ಯರೆಂಬುದನ್ನು ತಿಳಿದ ನಾನು ಪರಮಹೃಷ್ಟನಾಗಿ ಮಾತಲಿಯೊಡನೆ ಹೇಳಿದೆನು :

"ಮಾತಲೇ! ನನ್ನನ್ನು ಹಿರಣ್ಯಪುರದ ಸಮೀಪಕ್ಕೆ ಕೂಡಲೇ ಕರೆದುಕೊಂಡು ಹೋಗು. ದೇವೇಂದ್ರನನ್ನು ದ್ವೇಷಿಸುವ ಈ ದುಷ್ಟರ ಅಂತ್ಯವನ್ನು ಈಗಲೇ ಮಾಡಿಬಿಡುವೆನು. ನನ್ನಿಂದ ಕೊಲ್ಲಲ್ಪಡದಿರುವ ದೇವತೆಗಳ ಶತ್ರುಗಳಾರು ಇರಕೂಡದು. ದೇವತೆಗಳ ಶತ್ರುಗಳೆಲ್ಲರನ್ನೂ ನಾನು ನಿರ್ಮೂಲ ಮಾಡಲೇಬೇಕು.

ಅಣ್ಣ! ನನ್ನ ಮಾತಿನಂತೆಯೇ ಮಾತಲಿಯು ದಿವ್ಯಾಶ್ವಗಳಿಂದ ಯುಕ್ತವಾಗಿದ್ದ ಆ ದಿವ್ಯರಥವನ್ನು ಕ್ಷಮಮಾತ್ರದಲ್ಲಿ ಹಿರಣ್ಯಪುರಕ್ಕೊಯ್ದನು.

ಚಿತ್ರ-ವಿಚಿತ್ರವಾದ ಆಭರಣಗಳನ್ನೂ, ವಸ್ತ್ರಗಳನ್ನೂ ಧರಿಸಿದ್ದ ಆ ದೈತ್ಯರು ನನ್ನನ್ನು ಕಂಡಕೂಡಲೇ ನನ್ನ ಮೇಲೆ ರಭಸದಿಂದ ಬಿದ್ದರು. ಮಹಾ ಪರಾಕ್ರಮಿಗಳಾಗಿದ್ದ ಆ ರಾಕ್ಷಸರು ಕುಪಿತರಾಗಿ ಧನುರ್ಬಾಣಗಳನ್ನೂ, ಕತ್ತಿಗಳನ್ನೂ, ನಾರಾಚಗಳನ್ನೂ, ಭಲ್ಲಗಳನ್ನೂ, ನಾನಾವಿಧವಾದ ಶಕ್ತ್ಯಾಯುಧಗಳನ್ನೂ, ತೋಮರಗಳನ್ನೂ ನನ್ನ ಮೇಲೆ ಏಕಪ್ರಕಾರವಾಗಿ ಪ್ರಯೋಗಿಸ ತೊಡಗಿದರು.

ನಾನು ಕೂಡ ಅನುಸ್ಯೂತವಾಗಿ ಅವರ ಮೇಲೆ ಮಂತ್ರಪೂತವಾದ ಬಾಣಗಳನ್ನು ಪ್ರಯೋಗಮಾಡಿ ಅವರು ಪ್ರಯೋಗಿಸುತ್ತಿದ್ದ ಆಯುಧಗಳೆಲ್ಲವನ್ನೂ ಧ್ವಂಸಗೊಳಿಸಿದೆನು. ಮಾತಲಿಯು ನಡೆಸುತ್ತಿದ್ದ ರಥದ ಸಂಚಲನವೂ ರಾಕ್ಷಸರ ಆಯುಧಗಳ ಗುರಿಯನ್ನು ತಪ್ಪಿಸುವುದರಲ್ಲಿಯೂ ಅವರನ್ನು ಭ್ರಾಂತಿಗೊಳಿಸುವುದರಲ್ಲಿಯೂ ಸಮರ್ಥವಾಗಿತ್ತು. ವಿಚಿತ್ರವಾದ ರಥಚಲನದಿಂದ ಭ್ರಾಂತರಾದ ಅವರು ಪರಸ್ಪರವಾಗಿ ಅತ್ತಿತ್ತ ನೂಕಾಡುತ್ತಿದ್ದರು. ಈ ರೀತಿಯಲ್ಲಿ ಭ್ರಾಂತರಾಗಿ ಪರಸ್ಪರವಾಗಿ ಬಡಿದಾಡುತ್ತಿದ್ದ ಸಾವಿರಾರು ರಾಕ್ಷಸರ ತಲೆಗಳನ್ನು ಪ್ರಜ್ವಲಿಸುತ್ತಿದ್ದ ಬಾಣಗಳಿಂದ ಕತ್ತರಿಸಿದೆನು. ಉಳಿದ ರಾಕ್ಷಸರೆಲ್ಲರೂ ಹಿರಣ್ಯಪುರದ ಕೋಟೆಯನ್ನು ಹೊಕ್ಕು ಪಟ್ಟಣದ ಸಮೇತವಾಗಿಯೇ ಆಕಾಶಕ್ಕೆ ಹಾರಿ ರಾಕ್ಷಸರಿಗೆ ಯೋಗ್ಯವೆನಿಸಿದ ಮಾಯಾಯುದ್ಧವನ್ನು ಮಾಡಲು ಉಪಕ್ರಮಿಸಿದರು. ಮೇಲು-ಮೇಲಕ್ಕೆ ಪಟ್ಟಣದ ಸಮೇತ ಹಾರಿಹೋಗುತ್ತಿದ್ದ ಅವರ ಮಾರ್ಗವನ್ನು ನಾನು ಸಾವಿರಾರು ಬಾಣಗಳನ್ನು ಪ್ರಯೋಗಿಸಿ ತಡೆದೆನು. ಆದರೆ ನಾನು ಒಂದು ಕಡೆ ಬಾಣಗಳ ಪ್ರಯೋಗಮಾಡಿ ತಡೆದರೆ ಆ ಪಟ್ಟಣವು ಮತ್ತೊಂದು ಮಾರ್ಗವನ್ನು ಕಲ್ಪಿಸಿಕೊಂಡು ದೈತ್ಯರ ಇಚ್ಛಾನುಸಾರವಾಗಿ ಹೊರಟುಹೋಗುತ್ತಿದ್ದಿತು.

**ತತ್ಪುರಂ ಖಚರಂ ದಿವ್ಯಂ ಕಾಮಗಂ ಸೂರ್ಯಸಪ್ರಭಮ್ ।**
**ದೈತೇಯೈರ್ವರದಾನೇನ ಧಾರ್ಯತೇ ಸ್ಮ ಯಥಾಸುಖಮ್ ॥೨೬॥**

**ಅನ್ತರ್ಭೂಮೌ ನಿಪತತಿ ಪುನರೂರ್ಧ್ವಂ ಪ್ರತಿಷ್ಠತೇ ।**
**ಪುನಸ್ತಿರ್ಯಕ್ಪ್ರಯಾತ್ಯಾಶು ಪುನರಪ್ಸು ನಿಮಜ್ಜತಿ ॥೨೭॥**

ಅಣ್ಣ! ನಿಶ್ಚಯವಾಗಿಯೂ ಆಕಾಶದಲ್ಲಿ ಸಂಚರಿಸುತ್ತಿದ್ದ ಆ

ಪಟ್ಟಣವು ರಾಕ್ಷಸರು ಇಷ್ಟಪಟ್ಟಲ್ಲಿಗೆ ಹೋಗುವ ಸಾಮರ್ಥ್ಯವನ್ನು ಪಡೆದಿದ್ದಿತು. ಆ ಪಟ್ಟಣಕ್ಕೆ ಸೂರ್ಯನಿಗೆ ಸಮಾನವಾದ ಪ್ರಭೆಯಿದ್ದಿತು. ಬ್ರಹ್ಮನ ವರದಾನದಿಂದಾಗಿ ಆ ಪಟ್ಟಣವು ದೈತ್ಯರನ್ನು ಬಹಳ ಸುಖವಾಗಿ ಕಾಪಾಡುತ್ತಿದ್ದಿತು. ರಾಕ್ಷಸರ ಇಚ್ಛೆಯನ್ನನುಸರಿಸಿ ಒಮ್ಮೆ ಆ ಪಟ್ಟಣವು ಭೂಮಿಯೊಳಗೆ ಹೋಗಿಬಿಡುತ್ತಿತ್ತು. ಮತ್ತೊಮ್ಮೆ ಆಕಾಶದಲ್ಲಿ ಬಹಳ ಎತ್ತರಕ್ಕೆ ಹಾರಿಬಿಡುತ್ತಿದ್ದಿತು. ಪುನಃ ವಕ್ರ-ವಕ್ರವಾಗಿ ಹಾರುತ್ತಿದ್ದಿತು. ಮತ್ತೊಮ್ಮೆ ನೀರಿನಲ್ಲಿ ಮುಳುಗುತ್ತಿದ್ದಿತು. ಅಮರಾವತಿಗೆ ಸದೃಶವಾಗಿದ್ದ ಮನಬಂದೆಡೆಗೆ ಹೋಗುವ ಸಾಮರ್ಥ್ಯವನ್ನು ಪಡೆದಿದ್ದ ಆ ಹಿರಣ್ಯಪುರವನ್ನು ನನ್ನಲ್ಲಿದ್ದ ನಾನಾವಿಧವಾದ ಮಹಾಸ್ತ್ರಗನ್ನು ಪ್ರಯೋಗಿಸಿ ಪುನಃ ಪ್ರತಿ ಬಂಧಿಸಿದೆನು.

ಬಾಣಗಳ ಸಮೂಹದಿಂದಲೂ, ದಿವ್ಯಾಸ್ತ್ರಗಳಿಂದಲೂ ಕೂಡಿದ್ದ ಆ ಪಟ್ಟಣವನ್ನೂ ಮತ್ತು ದೈತ್ಯರನ್ನೂ ಏಕಕಾಲದಲ್ಲಿ ಘಾಸಿಗೊಳಿಸಿದೆನು. ಮಂತ್ರಪೂತವಾದ ಉಕ್ಕಿನ ಬಾಣಗಳ ಅನವರತವಾದ ಪ್ರಯೋಗದಿಂದಾಗಿ ಆ ಪಟ್ಟಣವು ವಿಧ್ವಸ್ತವಾಗಿ ಭೂಮಿಯಲ್ಲಿ ಬಿದ್ದಿತು. ಕಾಲಚೋದಿತರಾದ ಆ ದೈತ್ಯರೆಲ್ಲರೂ ವಜ್ರಾಯುಧಕ್ಕೆ ಸಮಾನವಾದ ವೇಗದಿಂದ ಕೂಡಿದ್ದ ನನ್ನ ಬಾಣಗಳಿಂದ ಪೀಡಿತರಾಗಿ ಪ್ರಾಣತೊರೆಯುತ್ತಿದ್ದರು. ಮೇಲೆ ಹಾರಿ ಕೆಳಗೆ ಬೀಳುವವನೋಪಾದಿಯಲ್ಲಿ–ಮಾತಲಿಯು ರಥವನ್ನು ಆಕಾಶಕ್ಕೊಮ್ಮೆ ಹಾರಿಸಿ ಸೂರ್ಯಪ್ರಭೆಯಿಂದ ಕೂಡಿದ್ದ ರಥವನ್ನು ಅತಿವೇಗವಾಗಿ ಭೂಮಿ ಗಿಳಿಸಿದನು. ಆ ಸಮಯಕ್ಕೆ ಸರಿಯಾಗಿ ಅರುವತ್ತು ಸಾವಿರ ರಾಕ್ಷಸರು ಕುಪಿತರಾಗಿ ರಥಗಳ ಮೇಲೆ ಕುಳಿತು ನನ್ನನ್ನು ಆಕ್ರಮಿಸಿದರು. ಒಡನೆಯೇ ನಾನು ಗೃಧ್ರಗಳ ಗರಿಗಳನ್ನು ಹೊಂದಿದ್ದ ಅಸಂಖ್ಯಾತಬಾಣಗಳನ್ನು ಅನು ಸ್ಯೂತವಾಗಿ ಪ್ರಯೋಗಿಸಿ ಅವರ ರಥಗಳನ್ನು ಧ್ವಂಸಮಾಡಿದೆನು.

ನಾನವರನ್ನು ಬಾರಿ-ಬಾರಿಗೂ ಪರಾಜಯಗೊಳಿಸುತ್ತಿದ್ದರೂ ಅವರು ವಿಮುಖರಾಗುತ್ತಿರಲಿಲ್ಲ. ಸಮುದ್ರದ ಅಲೆಗಳಂತೆ ಕ್ಷಣ-ಕ್ಷಣಕ್ಕೂ ಯುದ್ಧಸನ್ನದ್ಧರಾಗಿ ನನ್ನ ಮೇಲೆ ಬೀಳುತ್ತಿದ್ದರು. ತಾವು ಮನುಷ್ಯನಿಂದ ಪರಾಜಯ ಹೊಂದುವುದಿಲ್ಲವೆಂಬ ದುರಭಿಮಾನವೇ ಅದಕ್ಕೆ ಕಾರಣವಾಗಿ ದ್ದಿತು. ನಾನೂ ಕೂಡ ಅವರನ್ನು ಸಾಧಾರಣವಾದ ಬಾಣಗಳಿಂದ ನಿರ್ಮೂಲ

ಗೊಳಿಸುವುದು ಸಾಧ್ಯವಿಲ್ಲವೆಂದು ನಿರ್ಧರಿಸಿ ದಿವ್ಯಾಸ್ತ್ರಗಳನ್ನು ಪ್ರಯೋಗಿ ಸಲು ಉಪಕ್ರಮಿಸಿದೆನು. ರಾಕ್ಷಸಯೋಧರು ಪ್ರಯೋಗಿಸಿದ ಸಾವಿರಾರು ಬಾಣಗಳು ನಾನು ಪ್ರಯೋಗಿಸಿದ ದಿವ್ಯಾಸ್ತ್ರಗಳನ್ನೂ ವ್ಯರ್ಥಗೊಳಿಸು ತ್ತಿದ್ದುವು. ಮಹಾಬಲರಾದ ಆ ರಾಕ್ಷಸರು ಚಿತ್ರ-ವಿಚಿತ್ರವಾದ ರಥಗಳಲ್ಲಿ ಕುಳಿತು ವಿಚಿತ್ರಗತಿಗಳಲ್ಲಿ ರಥಗಳನ್ನು ನಡೆಸುತ್ತಾ ನನ್ನೊಡನೆ ಯುದ್ಧ ಮಾಡುತ್ತಿದ್ದರು. ಅವರೆಲ್ಲರೂ ಚಿತ್ರ-ವಿಚಿತ್ರವಾದ ಕಿರೀಟಗಳನ್ನೂ ವಿಚಿತ್ರ ವಾದ ಕವಚಗಳನ್ನೂ ಧರಿಸಿದ್ದರು. ಅವರ ರಥಗಳ ಮೇಲೆ ನಾನಾವರ್ಣಗಳ ಪತಾಕೆಗಳು ಹಾರಾಡುತ್ತಿದ್ದುವು. ಅನೇಕವಿಧವಾದ ಚಿತ್ರ-ವಿಚಿತ್ರವಾದ ಆಭರಣಗಳನ್ನೂ ಅವರು ತೊಟ್ಟಿದ್ದರು. ನನ್ನ ಮನಸ್ಸನ್ನು ಸಂತೋಷಗೊಳಿ ಸುವ ಸಲುವಾಗಿಯೇ ಅವರು ವಿಚಿತ್ರವಾದ ಉಡುಗೆ-ತೊಡುಗೆಗಳನ್ನೂ, ಬಣ್ಣ-ಬಣ್ಣಗಳ ಆಭರಣಗಳನ್ನೂ, ಪತಾಕೆಗಳನ್ನೂ ಧರಿಸಿರುವಂತೆ ನನಗೆ ಭಾಸವಾಗುತ್ತಿತ್ತು. ನಾನು ಎಷ್ಟೋ ಸಾವಿರ ಬಾಣಗಳನ್ನು ಪ್ರಯೋಗಿಸಿದರೂ ಅವನ್ನು ನಿರ್ಮೂಲಗೊಳಿಸಲು ಸಾಧ್ಯವಾಗಲಿಲ್ಲ. ಅದಕ್ಕೆ ಪ್ರತಿಯಾಗಿ ಪ್ರತಿಕ್ಷಣದಲ್ಲಿಯೂ ಅವರ ಬಲವು ಹೆಚ್ಚಿ ಅವರು ನನ್ನನ್ನೇ ಶರವರ್ಷ ದಿಂದ ಪೀಡಿಸತೊಡಗುತ್ತಿದ್ದರು. ಅವರೆಲ್ಲರೂ ಸರ್ವಾಸ್ತ್ರಗಳಲ್ಲಿಯೂ ಪರಿಶ್ರಮವನ್ನು ಪಡೆದಿದ್ದರು. ಅಸ್ತ್ರಗಳ ಪ್ರಯೋಗದಲ್ಲಿ ಪ್ರಾವೀಣ್ಯವನ್ನು ಪಡೆದಿದ್ದರು. ಅವರು ಅನವರತವಾಗಿ ಬಿಡುತ್ತಿದ್ದ ಅಸ್ತ್ರಜಾಲಗಳಿಂದ ನಿಪೀಡಿತನಾದ ನಾನು ಮುಂದೇನು ಮಾಡಬೇಕೆಂದು ತೋರದೇ ಭಯಗೊಂಡೆನು. ಆದರೆ ರುದ್ರನಿಂದ ಅನುಗೃಹೀತನಾಗಿದ್ದ ನನ್ನಲ್ಲಿ ಆ ಭಯವು ಹೆಚ್ಚು ಕಾಲ ಉಳಿಯಲಿಲ್ಲ.

**ತತೋऽಹಂ ದೇವದೇವಾಯ ರುದ್ರಾಯ ಪ್ರಯತೋ ರಣೇ ।**
**ಸ್ವಸ್ತಿ ಭೂತೇಭ್ಯ ಇತ್ಯುಕ್ತ್ವಾ ಮಹಾಸ್ತ್ರಂ ಸಮಚೋದಯಮ್ ।**
**ಯದ್ಯದ್ರೌದ್ರಮಿತಿ ಖ್ಯಾತಂ ಸರ್ವಾಮಿತ್ರವಿನಾಶನಮ್ ॥೪೧॥**

**ತತೋऽಪಶ್ಯಂ ತ್ರಿಶಿರಸಂ ಪುರುಷಂ ನವಲೋಚನಮ್ ।**
**ತ್ರಿಮುಖಂ ಷಡ್ಭುಜಂ ದೀಪ್ತಮರ್ಕಜ್ವಲನಮೂರ್ಧಜಮ್ ॥೪೨॥**

**ಲೇಲಿಹಾನ್ಯೈರ್ಮಹಾನಾಗೈಃ ಕೃತಚೀರಮಮಿತ್ರಹನ್ ।**
**ವಿಭೀಸ್ತತಸ್ತದಸ್ತ್ರಂ ತು ಘೋರಂ ರೌದ್ರಂ ಸನಾತನಮ್ ॥೪೩॥**

**ದೃಷ್ಟ್ವಾ ಗಾಣ್ಡೀವಸಂಯೋಗಮಾನೀಯ ಭರತರ್ಷಭ ।**
**ನಮಸ್ಕೃತ್ವಾ ತ್ರಿಣೇತ್ರಾಯ ಶರ್ವಾಯಾಮಿತತೇಜಸೇ ॥೪೪॥**

**ಮುಕ್ತವಾನ್ದಾನವೇನ್ದ್ರಾಣಾಂ ಪರಾಭಾವಾಯ ಭಾರತ ।**
**ಮುಕ್ತಮಾತ್ರೇ ತತಸ್ತಸ್ಮಿನ್ರೂಪಾಣ್ಯಾಸನ್ಸಹಸ್ರಶಃ ॥೪೫॥**

ದೇವದೇವನಾದ ರುದ್ರನಿಗೆ ರಣರಂಗದಲ್ಲಿ ಮನಸ್ಸಿನಿಂದಲೇ ನಮಸರಿಸಿ, ಸರ್ವಪ್ರಾಣಿಗಳಿಗೂ ಮಂಗಳವಾಗಲೆಂದು ಹೇಳಿ–ಸರ್ವಶತ್ರುಗಳನ್ನೂ ಏಕಕಾಲದಲ್ಲಿ ವಿನಾಶಗೊಳಿಸುವ ಸಾಮರ್ಥ್ಯವುಳ್ಳ ರೌದ್ರವೆಂಬ ಹೆಸರಿನ ಮಹಾಸ್ತ್ರವನ್ನು ಮಂತ್ರಪುನಶ್ಚರಣೆಮಾಡಿ ಗಾಂಡೀವಕ್ಕೆ ಯೋಜಿಸಿದೆನು. ಮರುಕ್ಷಣದಲ್ಲಿಯೇ ನಾನು ನನ್ನ ಸಮೀಪದಲ್ಲಿ ಮೂರು ತಲೆಗಳಿಂದಲೂ, ಥಳ-ಥಳಿಸುವ ಒಂಬತ್ತು ಕಣ್ಣುಗಳಿಂದಲೂ, ಮೂರು ಮುಖಗಳಿಂದಲೂ, ಆರು ತೋಳುಗಳಿಂದಲೂ ಕೂಡಿದ್ದ ಪುರುಷನನ್ನು ಕಂಡೆನು. ಅವನ ತಲೆಗೂದಲು ಸೂರ್ಯನ ಪ್ರಭೆಯಂತೆ ಅಥವಾ ಬೆಂಕಿಯ ಜ್ವಾಲೆಯಂತೆ ಪ್ರಜ್ವಲಿಸುತ್ತಿದ್ದಿತು. ಕ್ಷಣ-ಕ್ಷಣಕ್ಕೂ ನಾಲಿಗೆಯನ್ನು ಹೊರಕ್ಕೆ ಚಾಚುತ್ತಿದ್ದ ವಿಷಸರ್ಪಗಳೇ ಅವನಿಗೆ ನಾರುಮಡಿಯಾಗಿದ್ದಿತು. ಅಂತಹ ದಿವ್ಯಪುರುಷನ ಸಂದರ್ಶನವಾದೊಡನೆಯೇ ನನ್ನ ಭಯವು ಪೂರ್ಣವಾಗಿ ದೂರವಾಯಿತು. ಪುನಃ ಅಮಿತವಾದ ತೇಜಸ್ಸುಳ್ಳ, ಮುಕ್ಕಣ್ಣನಾದ ರುದ್ರದೇವನಿಗೆ ನಮಿಸಿ ಘೋರವಾದ, ಸನಾತನವಾದ ರೌದ್ರಾಸ್ತ್ರವನ್ನು ಗಾಂಡೀವಕ್ಕೆ ಯೋಜಿಸಿ ಶಿಂಜಿನಿಯನ್ನು ಸೆಳೆದು ದೈತ್ಯರ ವಿಧ್ವಂಸವಾಗಲೆಂಬ ಸಂಕಲ್ಪದೊಡನೆ ರಭಸದಿಂದ ಪ್ರಯೋಗಿಸಿದೆನು. ರೌದ್ರಾಸ್ತ್ರವನ್ನು ಪ್ರಯೋಗಿಸಿದೊಡನೆಯೇ ಸಾವಿರಾರು ಘೋರರೂಪಗಳು ಆ ಅಸ್ತ್ರದಿಂದ ಹೊರಬಂದುವು. ಸಾವಿರಾರು ಮೃಗಗಳು, ಸಿಂಹ-ವ್ಯಾಘ್ರಗಳೂ, ಕರಡಿಗಳೂ, ಎಮ್ಮೆಗಳೂ, ಪಕ್ಷಿಗಳೂ, ಎತ್ತುಗಳೂ, ಶರಭಗಳೂ, ನರಿಗಳೂ, ಆನೆಗಳೂ, ಕಪಿಗಳೂ, ಹಂದಿಗಳೂ, ಬೆಕ್ಕುಗಳೂ, ತೋಳಗಳೂ, ಪ್ರೇತಗಳೂ, ಭುರುಂಡಗಳೂ, ಗೃಧ್ರಗಳೂ, ಗರುಡಪಕ್ಷಿಗಳೂ, ಚಮರಮೃಗಗಳೂ ಸರ್ವತ್ರ ವ್ಯಾಪ್ತವಾದುವು.

ದೇವತೆಗಳೂ, ಋಷಿಗಳೂ, ಗಂಧರ್ವರೂ ಸರ್ವತ್ರ ವ್ಯಾಪ್ತರಾದರು. ಪಿಶಾಚರೂ, ಯಕ್ಷರೂ, ಸುರದ್ವಿಷರೂ, ಗುಹ್ಯಕರೂ, ನೈರ್‌ಋತರೂ, ಆನೆಯ ಮುಖದವರೂ, ಮೀನುಮುಖದವರೂ, ಗೂಬೆಯ ಮುಖದವರೂ, ಅಶ್ವ ಮುಖದವರೂ ಆ ರಣಾಂಗಣದಲ್ಲಿ ವ್ಯಾಪ್ತರಾದರು. ಅವರೆಲ್ಲರೂ ನಾನಾ ವಿಧವಾದ ಆಯುಧಗಳನ್ನು ಹಿಡಿದಿದ್ದರು. ಗದಾ-ಮುದ್ಗರಪಾಣಿಗಳಾದ ಯಾತುಧಾನರು ಅಸಂಖ್ಯಸಂಖ್ಯೆಯಲ್ಲಿದ್ದರು. ಅವರೇ ಅಲ್ಲದೇ ನಾನಾವಿಧ ವಾದ ರೂಪಗಳನ್ನು ಧರಿಸಿದ್ದ ಸಾವಿರಾರು ಮಂದಿ ಆ ರಣಾಂಗಣದಲ್ಲಿ ತುಂಬಿಹೋದರು. ಕೆಲವರಿಗೆ ಮೂರು ತಲೆಗಳೂ, ನಾಲ್ಕು ಕೋರೆದಾಡೆ ಗಳೂ, ನಾಲ್ಕು ಮುಖಗಳೂ, ನಾಲ್ಕು ಭುಜಗಳೂ ಇದ್ದುವು. ಮಾಂಸ, ಮೇದಸ್ಸು, ಅಸ್ಥಿಪಂಜರಗಳನ್ನು ಹೊಂದಿದ್ದ ಆ ಘೋರರೂಪಿಗಳಿಂದ ಪೌಲೋಮ-ಕಾಲಕಂಜರು ಧ್ವಂಸಮಾಡಲ್ಪಟ್ಟರು. ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ವಜ್ರಾಯುಧಕ್ಕೆ ಸಮಾನವಾಗಿದ್ದ ನಿಶಿತವಾದ ರೌದ್ರಾಸ್ತ್ರದಿಂದ ಆ ರಾಕ್ಷಸರೆಲ್ಲರನ್ನೂ ನಾನು ಕ್ಷಣಮಾತ್ರದಲ್ಲಿ ವಿನಾಶಮಾಡಿದೆನು. ಗಾಂಡೀವಧನುಸ್ಸಿನಿಂದ ಆ ಮಹಾಸ್ತ್ರವು ಹೊರ ಬಿದ್ದೊಡನೆಯೇ ಆಕಾಶದಲ್ಲಿದ್ದ ರಾಕ್ಷಸರು ಪ್ರಾಣತೊರೆದು ತೊಪ-ತೊಪನೆ ಕೆಳಗೆ ಬೀಳುತ್ತಿದ್ದರು. ರೌದ್ರಾಸ್ತ್ರದ ಮಹತ್ತ್ವವನ್ನು ನೋಡಿ ನಾನು ಪುನಃ ತ್ರಿಪುರಾಂತಕನಾದ ಈಶ್ವರನಿಗೆ ಪ್ರಣಾಮಮಾಡಿದೆನು.

ದಿವ್ಯಾಭರಣಭೂಷಿತರಾಗಿದ್ದ ಆ ರಾಕ್ಷಸರು ರೌದ್ರಾಸ್ತ್ರದಿಂದ ವಿನಾಶ ಹೊಂದಿದುದನ್ನು ನೋಡಿ ದೇವಸಾರಥಿಯಾದ ಮಾತಲಿಯೂ ಸಂತೋಷ ಭರಿತನಾಗಿ ನನ್ನೊಡನೆ ಹೇಳಿದನು :

**ಸುರಾಸುರೈರಸಹ್ಯಂ ಹಿ ಕರ್ಮ ಯತ್ಸಾಧಿತಂ ತ್ವಯಾ ।**
**ನ ಹ್ಯೇತತ್ಸಂಯುಗೇ ಕರ್ತುಮಪಿ ಶಕ್ತಃ ಸುರೇಶ್ವರಃ ॥೫೯॥**

**ಸುರಾಸುರೈರವಧ್ಯಂ ಹಿ ಪುರಮೇತತ್ಖಗಂ ಮಹತ್ ।**
**ತ್ವಯಾ ವಿಮಥಿತಂ ವೀರ ಸ್ವವೀರ್ಯತಪಸೋ ಬಲಾತ್ ॥೬೦॥**

'ಅರ್ಜುನ! ನೀನೀಗ ಸಾಧಿಸಿರುವ ಕಾರ್ಯವು ಸುರಾಸುರರಿಂದಲೂ ಸಾಧಿಸಲು ಅಸಾಧ್ಯವಾದುದು. ಸುರೇಶ್ವರನಾದ ದೇವೇಂದ್ರನೂ ಯುದ್ಧದಲ್ಲಿ

ಈ ಕಾರ್ಯವನ್ನು ಸಾಧಿಸಲು ಶಕ್ತನಲ್ಲ. ಸುರಾಸುರರಿಂದಲೂ ಧ್ವಂಸ ಮಾಡಲು ಸಾಧ್ಯವಾಗದ ಈ ಆಕಾಶನಗರಿಯನ್ನು ನೀನು ನನ್ನ ಭುಜಬಲ-ಪರಾಕ್ರಮಗಳಿಂದಲೂ, ತಪಃಪ್ರಭಾವದಿಂದಲೂ ಧ್ವಂಸಮಾಡಿಬಿಟ್ಟಿರುವೆ. ನಿಶ್ಚಯವಾಗಿಯೂ ನಿನಗಿರುವ ಶೌರ್ಯ-ಪರಾಕ್ರಮಗಳನು ಅಸದೃಶವಾಗಿವೆ, ಪಾರ್ಥ!'

ಅಣ್ಣ! ಇತ್ತಲಾಗಿ ಕಾಲಕಂಜರೂ, ಪೌಲೋಮರೂ ವಿಧ್ವಸ್ತರಾದ ನಂತರ ಆ ಆಕಾಶನಗರಿಯಲ್ಲಿದ್ದ ರಾಕ್ಷಸಪತ್ನಿಯರು ಬಹಳ ದುಃಖಗೊಂಡವ ರಾಗಿ ಕುರರಪಕ್ಷಿಗಳಂತೆ ಆಕ್ರಂದನಮಾಡುತ್ತಾ ಕೆದರಿದ ಕೇಶರಾಶಿಯಿಂದ ಕೂಡಿದವರಾಗಿ ಪಟ್ಟಣದಿಂದ ಹೊರಕ್ಕೆ ಬಂದರು. ಸತ್ತುಬಿದ್ದಿದ್ದ ತಮ್ಮ ಮಕ್ಕಳಿಗಾಗಿ, ಸೋದರರಿಗಾಗಿ, ಪಿತೃಗಳಿಗಾಗಿ ಮತ್ತು ಗಂಡಂದಿರಿಗಾಗಿ ರೋದನಮಾಡುತ್ತಾ ತಮ್ಮ ಎದೆಗಳನ್ನು ಚಚ್ಚಿಕೊಳ್ಳುತ್ತಿದ್ದರು. ಅನಾಥೆ ಯರಾದ ಅವರು ಎದೆಗಳನ್ನು ಬಡಿದುಕೊಳ್ಳುತ್ತಿದ್ದಾಗ ಅವರು ಹಾಕಿಕೊಂಡ ಆಭರಣಗಳೆಲ್ಲವೂ ಒಂದೊಂದಾಗಿ ಕಳಚಿ ಬೀಳುತ್ತಿದ್ದುವು. ಗಂಧರ್ವನಗರಿಗೆ ಸಮಾನವಾಗಿದ್ದ ಆ ಹಿರಣ್ಯಪುರವು ಅನಾಥವಾಗಿ ರಾಕ್ಷಸಸ್ತ್ರೀಯರ ಗೋಳಿ ನಿಂದ ವ್ಯಾಪ್ತವಾಗಿ ನಾಗರಾಜನಿಲ್ಲದ ಸರೋವರದಂತೆಯೂ, ಒಣಮರಗಳ ಕಾಡಿನಂತೆಯೂ, ರಾಜನಿಲ್ಲದ ನಗರಿಯಂತೆಯೂ ಕಾಂತಿಹೀನವಾಯಿತು. ಕೇವಲ ಮೇಘಗಳಿಂದ ನಿರ್ಮಿಸಿದ ನಗರಿಯೋಪಾದಿಯಲ್ಲಿ ಆ ಹಿರಣ್ಯ ಪುರವು ಛಿದ್ರ-ವಿಚ್ಛಿದ್ರವಾಗಿ ಹೋಯಿತು.

ದೇವರಾಜನ ಕಾರ್ಯವನ್ನು ನಿರ್ವಹಿಸಿ ಆನಂದಭರಿತನಾಗಿದ್ದ ನನ್ನನ್ನು ದೇವಸಾರಥಿಯಾದ ಮಾತಲಿಯು ದೇವರಾಜನ ಪಟ್ಟಣಕ್ಕೆ ಕರೆದೊಯ್ದನು. ಅಣ್ಣ! ಈ ರೀತಿಯಲ್ಲಿ ನಾನು ನಿವಾತಕವಚರನ್ನೂ, ಹಿರಣ್ಯಪುರದಲ್ಲಿದ್ದ ಕಾಲಕಂಜ-ಪೌಲೋಮರೆಂಬ ರಾಕ್ಷಸರನ್ನೂ ಇಂದ್ರನ ನಿರ್ದೇಶಾನುಸಾರ ವಾಗಿ ಧ್ವಂಸಮಾಡಿದನಂತರ ದೇವರಥದಲ್ಲಿ ಅಮರಾವತಿಗೆ ತೆರಳಿದೆನು. ನಾನು ನಿವಾತಕವಚರೊಡನೆ ಮತ್ತು ಕಾಲಕಂಜ-ಪೌಲೋಮರೊಡನೆ ಮಾಡಿದ ಯುದ್ಧದ ರೀತಿಗಳೆಲ್ಲವನ್ನೂ ಸವಿಸ್ತರವಾಗಿ ಮಾತಲಿಯು ಇಂದ್ರ ನಿಗೆತಿಳಿಸಿದನು. ಸಪ್ತಮರುತ್ತುಗಳಿಂದ ಸಮೇತನಾಗಿ ಕುಳಿತಿದ್ದ ದೇವೇಂದ್ರನು ಮಾಯಮಯವಾಗಿದ್ದ ಹಿರಣ್ಯಪುರವು ಧ್ವಂಸವಾದುದನ್ನೂ ಮತ್ತು

ಮಹಾಪರಾಕ್ರಮಿಗಳಾದ ನಿವಾತಕವಚರು ವಿನಾಶಹೊಂದಿದುದನ್ನೂ ಕೇಳಿ ಆನಂದಭರಿತನಾಗಿ 'ಸಾಧು! ಸಾಧು' ಎಂದು ಉದ್ಗರಿಸಿದನು. ಪರಮ ಹೃಷ್ಟನಾದ ಪುರಂದರನು ನನ್ನನ್ನು ಸವಿಮಾತುಗಳಿಂದ ಪದೇಪದೇ ಸಂತೈಸುತ್ತಾ ಹೇಳಿದನು :

**ಅತಿದೇವಾಸುರಂ ಕರ್ಮ ಕೃತಮೇವ ತ್ವಯಾ ರಣೇ ।**
**ಗುರ್ವರ್ಥಶ್ಚ ಕೃತಃ ಪಾರ್ಥ ಮಹಾಶತ್ರೂನ್ ಘ್ನತಾ ಮಮ ॥೭೨॥**

**ಏವಮೇವ ಸದಾ ಭಾವ್ಯಂ ಸ್ಥಿರೇಣಾಜೌ ಧನಂಜಯ ।**
**ಅಸಮ್ಮೂಢೇನ ಚಾಸ್ತ್ರಾಣಾಂ ಕರ್ತವ್ಯಂ ಪ್ರತಿಪಾದನಮ್ ॥೭೩॥**

**ಅವಿಷಹ್ಯೋ ರಣೇ ಹಿ ತ್ವಂ ದೇವದಾನವರಾಕ್ಷಸೈಃ ।**
**ಸಯಕ್ಷಾಸುರಗನ್ಧರ್ವೈಃಸಪಕ್ಷಿಗಣಪನ್ನಗೈಃ ॥೭೪॥**

**ವಸುಧಾಂ ಚಾಪಿ ಕೌನ್ತೇಯ ತ್ವದ್ಬಾಹುಬಲನಿರ್ಜಿತಾಮ್ ।**
**ಪಾಲಯಿಷ್ಯತಿ ಧರ್ಮಾತ್ಮಾ ಕುನ್ತೀಪುತ್ರೋ ಯುಧಿಷ್ಠಿರಃ ॥೭೫॥**

"ಮಗು! ದೇವ-ದಾನವರಿಂದಲೂ ಸಾಧಿಸಲು ಸಾಧ್ಯವಾಗದಿರುವ, ದುಸ್ಸಾಧ್ಯವೆನಿಸಿದ ಕಾರ್ಯವನ್ನು ನೀನಿಂದು ಮಾಡಿ ಮುಗಿಸಿರುವೆ. ಅಜೇಯರಾದ ನನ್ನ ಶತ್ರುಗಳನ್ನು ನೀನಿಂದು ಜಯಿಸಿ ನನಗೆ ಅತಿಪ್ರಿಯವಾದ ಗುರುದಕ್ಷಿಣೆಯನ್ನೂ ಸಮರ್ಪಿಸಿರುವೆ. ಮುಂದೆ ಯುದ್ಧಮಾಡುವಾಗಲೂ ನೀನು ಇದೇ ರೀತಿಯಲ್ಲಿ ಸ್ಥಿರಮನಸ್ಸಿನಿಂದಿದ್ದು, ಯಾವ ಸಮಯದಲ್ಲಿಯೂ ಉದ್ವೇಗಗೊಳ್ಳದೇ, ಯಾವ ವಿಧವಾದ ದೋಷವೂ ಉಂಟಾಗದ ರೀತಿಯಲ್ಲಿ ಮಹಾಸ್ತ್ರಗಳನ್ನು ಪ್ರಯೋಗಿಸು. ನಿನ್ನೆದುರಿನಲ್ಲಿ ದೇವ-ದಾನವ-ರಾಕ್ಷಸ-ಯಕ್ಷ-ಅಸುರ-ಗಂಧರ್ವರಾರೂ ನಿಂತು ಯುದ್ಧಮಾಡಲಾರರು. ನಿನ್ನ ಬಾಹುಬಲದಿಂದ ಜಯಿಸಲ್ಪಡುವ ಈ ಪೃಥ್ವಿಯನ್ನು ಧರ್ಮಾತ್ಮನಾದ ಯುಧಿಷ್ಠಿರನು ಆಳುವನು. ಇದರಲ್ಲಿ ಯಾವ ಸಂಶಯವೂ ಇಲ್ಲ, ಪಾರ್ಥ!"

೧೭೩ನೆಯ ಅಧ್ಯಾಯವು ಮುಗಿಯಿತು.

೧೭೪ನೆಯ ಅಧ್ಯಾಯ ನಿವಾತಕವಚಯುದ್ಧಪರ್ವ (ಮುಂದುವರಿದಿದೆ.)

## ಯುಧಿಷ್ಠಿರನು ಅರ್ಜುನನನ್ನು ಅಭಿನಂದಿಸಿದುದು ಮತ್ತು ದಿವ್ಯಾಸ್ತ್ರಗಳನ್ನು ಸಂದರ್ಶಿಸಲು ಆಶಿಸಿದುದು

ಅರ್ಜುನನು ಮುಂದುವರಿದು ಹೇಳಿದನು :

"ಅಣ್ಣ! ಪುರಂದರನಿಗೆ ನನ್ನ ಮೇಲೆ ಹೆಚ್ಚಿನ ಮಮತೆಯುಂಟಾಯಿತು. ಅಂತೆಯೇ ನನ್ನ ಶೌರ್ಯ-ಸಾಹಸಗಳಲ್ಲಿ ಹೆಚ್ಚಿನ ವಿಶ್ವಾಸವೂ ಉಂಟಾಯಿತು. ಬಾಣಹತಿಯಿಂದಾದ ನನ್ನ ಶರೀರದ ಗಾಯಗಳೆಲ್ಲವೂ ವಾಸಿಯಾಗಿತ್ತು. ಒಂದು ದಿನ ಇಂದ್ರನು ನನ್ನ ಮೈದಡವುತ್ತಾ ನನ್ನೊಡನೆ ಹೇಳಿದನು :

**ದಿವ್ಯಾನ್ಯಸ್ತ್ರಾಣಿ ಸರ್ವಾಣಿ ತ್ವಯಿ ತಿಷ್ಠನ್ತಿ ಭಾರತ ।**
**ನ ತ್ವಾಭಿಭವಿತುಂ ಶಕ್ತೋ ಮಾನುಷೋ ಭುವಿ ಕಶ್ಚನ ॥೨॥**

**ಭೀಷ್ಮೋ ದ್ರೋಣಃ ಕೃಪಃ ಕರ್ಣಃ ಶಕುನಿಃ ಸಹ ರಾಜಭಿಃ ।**
**ಸಂಗ್ರಾಮಸ್ಥಸ್ಯ ತೇ ಪುತ್ರ ಕಲಾಂ ನಾರ್ಹನ್ತಿ ಷೋಡಶೀಮ್ ॥೩॥**

'ಭಾರತನೇ! ಎಲ್ಲ ದಿವ್ಯಾಸ್ತ್ರಗಳೂ ನಿನ್ನಲ್ಲಿ ಸನ್ನಿಹಿತವಾಗಿವೆಯಲ್ಲವೇ? ಈಗ ನಿನ್ನನ್ನು ಭೂಲೋಕದಲ್ಲಿರುವ ಯಾವನೊಬ್ಬ ಮನುಷ್ಯನೂ ಪರಾಜಯಗೊಳಿಸಲಾರನು. ನೀನು ಯುದ್ಧಭೂಮಿಯಲ್ಲಿರುವಾಗ ನಿನ್ನ ಎದುರಾಗಿ ಬರಲಿರುವ ಭೀಷ್ಮ-ದ್ರೋಣ-ಕೃಣ-ಕರ್ಣ-ಶಕುನಿಗಳೇ ಮೊದಲಾದವರು ಮಿಕ್ಕ ರಾಜರೊಡನೆ ಒಟ್ಟಾಗಿ ಸೇರಿದರೂ-ಪರಾಕ್ರಮದ ವಿಷಯದಲ್ಲಿ ನಿನ್ನ ಹದಿನಾರನೆಯ ಒಂದು ಭಾಗಕ್ಕೂ ಅವರು ಸಾಟಿಯಾಗ ಲಾರರು.'

ಅಣ್ಣ! ಪುರಂದರನು ಹೀಗೆ ಹೇಳುತ್ತಾ ನಾನೀಗ ಧರಿಸಿರುವ ಈ ಸ್ವರ್ಣಮಾಲೆಯನ್ನು ನನ್ನ ಕೊರಳಿಗೆ ಹಾಕಿದನು. ದೇವತೆಗಳು ನನಗೆ ಕೊಟ್ಟಿದ್ದ ದೇವದತ್ತಶಂಖವನ್ನೇ ಪುನಃ ನನಗೆ ಅನುಗ್ರಹಿಸಿ ಕೊಟ್ಟನು. ಅಭೇದ್ಯವಾದ ಈ ಕವಚವನ್ನೂ ಅನುಗ್ರಹಿಸಿದನು. ಈ ಕಿರೀಟವನ್ನೂ ಇಂದ್ರನೇ ನನ್ನ ಮುಡಿಗೆ ತೊಡಿಸಿದನು. ಬಲುಚೆಂದವಾದ ವಸ್ತ್ರಗಳನ್ನೂ, ಅನರ್ಘವಾದ ಆಭರಣಗಳನ್ನೂ ಕೊಟ್ಟನು. ಈ ರೀತಿಯಲ್ಲಿ ಇಂದ್ರನಿಂದ

ಗೌರವಿಸಲ್ಪಟ್ಟ ನಾನು ಸಂತೋಷಭರಿತನಾಗಿ ಇಂದ್ರನ ಅರಮನೆಯಲ್ಲಿ ಗಂಧರ್ವಕುಮಾರರೊಡನೆ ಉಳಿದ ಕಾಲವನ್ನು ಸುಖವಾಗಿ ಕಳೆದೆನು.

ಅನಂತರದಲ್ಲಿ ಒಂದು ದಿನ ನನ್ನ ವಿಷಯದಲ್ಲಿ ಬಹುಪ್ರೀತನಾಗಿದ್ದ ಇಂದ್ರನು ದೇವತೆಗಳೊಡನೆ ನನ್ನನ್ನು ತನ್ನ ಬಳಿಗೆ ಕರೆಸಿಕೊಂಡು ಈ ಮಾತುಗಳನ್ನು ಹೇಳಿದನು :

'ಅರ್ಜುನ! ನೀನು ಭೂಲೋಕಕ್ಕೆ ಹಿಂದಿರುಗುವ ಕಾಲವು ಸನ್ನಿಹಿತ ವಾಗಿದೆ. ನಿನ್ನ ಸೋದರರರು ಯಾವಾಗಲೂ ನಿನ್ನನ್ನೇ ಸ್ಮರಿಸುತ್ತಿರುತ್ತಾರೆ.'

ಎಂದು ಹೇಳಿ ಮಾತಲಿಯನ್ನು ಕರೆದು ರಥವನ್ನು ಸಜ್ಜುಗೊಳಿಸುವಂತೆ ಆಜ್ಞಾಪಿಸಿದನು. ಮರುಕ್ಷಣದಲ್ಲಿಯೇ ರಥವು ಸಿದ್ಧವಾಗಲು ಇಂದ್ರನ ಮತ್ತು ದೇವತೆಗಳ ಅನುಮತಿಯನ್ನು ಪಡೆದು ರಥದಲ್ಲಿ ಕುಳಿತು ಇಲ್ಲಿಗೆ ಆಗಮಿಸಿದೆನು. ಅಣ್ಣ! ದೇವಲೋಕದಲ್ಲಿದ್ದಾಗ ಪಗಡೆಯಾಟದಿಂದುಂಟಾದ ಕಷ್ಟ-ನಷ್ಟಗಳನ್ನು ನೆನೆಯುತ್ತಲೇ ಇದ್ದೆನು. ಅಂತಹ ಸ್ವರ್ಗಸುಖದಲ್ಲಿ ಐದು ವರ್ಷಗಳಿದ್ದರೂ ಇಲ್ಲಿ ನಡೆದ ವಿಷಯವನ್ನೂ, ನಮ್ಮ ಮುಂದಿನ ಕರ್ತವ್ಯದ ವಿಷಯವನ್ನೂ ಕ್ಷಣಮಾತ್ರವಾದರೂ ಮರೆತಿರಲು ನನಗೆ ಸಾಧ್ಯವಾಗಲಿಲ್ಲ.

ನಾನು ದಿವ್ಯರಥದಲ್ಲಿ ಕುಳಿತು ಬರುತ್ತಿದ್ದಾಗ ಈ ಗಂಧಮಾದನಪರ್ವತದ ಶಿಖರದ ಮೇಲ್ಭಾಗದಲ್ಲಿ ಅನುಜರಿಂದ ಪರಿವೃತನಾಗಿ ಕುಳಿತಿದ್ದ ನಿನ್ನನ್ನು ಕಂಡೆನಣ್ಣಾ!"*

ಅರ್ಜುನನ ಮಾತುಗಳನ್ನು ಕೇಳಿ ಯುಧಿಷ್ಠಿರನ ಹೃದಯವು ಆನಂದದಿಂದ ಉಬ್ಬಿಹೋಯಿತು. ಕಣ್ಣುಗಳಿಂದ ಆನಂದಬಾಷ್ಪಗಳು ಮುತ್ತಿನ ಮಣಿಗಳಂತೆ ತೊಟ್ಟಿಕ್ಕಿದುವು. ಧನಂಜಯನ ಬೆನ್ನಮೇಲೆ ಕೈಯಿಟ್ಟುಕೊಂಡು ಯುಧಿಷ್ಠಿರನು ಅರ್ಜುನನಿಗೆ ಹೇಳಿದನು :

---

* ಅರ್ಜುನನು ಹೇಳಿದ ಈ ವಿಷಯವನ್ನು ಓದಿದ ಯಾವ ಭಾರತೀಯನಿಗೆ ತಾನೇ ರೋಮಾಂಚನವಾಗುವುದಿಲ್ಲ? ಯಾವ ವಿಧವಾದ ಗಗನನೌಕೆಗಳ ಸಹಾಯವೂ ಇಲ್ಲದೇ ಯೋಗನಿಷ್ಠೆಯಿಂದ ತಪಃಪ್ರಭಾವದಿಂದ ಸಶರೀರನಾಗಿ ಸ್ವರ್ಗಕ್ಕೆ ಹೋಗಿ ಐದು ವರ್ಷಗಳಿದ್ದು ಭಾರತೀಯನೊಬ್ಬನು ಭೂಮಿಗೆ ಪುನಃ ಬಂದನೆಂದರೆ–ಹಿಂದೆ ಭಾರತೀಯರಿಗೆ ಆತ್ಮಶಕ್ತಿಯು ಎಷ್ಟಿತ್ತೆಂಬುದನ್ನು ಮನಗಾಣಬಹುದಾಗಿದೆ.

**ದಿಷ್ಟ್ಯಾ ಧನಂಜಯಾಸ್ತ್ರಾಣಿ ತ್ವಯಾ ಪ್ರಾಪ್ತಾನಿ ಭಾರತ ।**
**ದಿಷ್ಟ್ಯಾ ಚಾರಾಧಿತೋ ರಾಜಾ ದೇವಾನಾಮೀಶ್ವರಃ ಪ್ರಭುಃ ॥೧೧॥**

**ದಿಷ್ಟ್ಯಾ ಚ ಭಗವಾನ್ ಸ್ಥಾಣುರ್ದೇವ್ಯಾ ಸಹ ಪರಂತಪ ।**
**ಸಾಕ್ಷಾದ್ದೃಷ್ಟಃ ಸ್ವಯುದ್ಧೇನ ತೋಷಿತಶ್ಚ ತ್ವಯಾನಘ ॥೧೨॥**

**ದಿಷ್ಟ್ಯಾ ಚ ಲೋಕಪಾಲೈಸ್ತ್ವಂ ಸಮೇತೋ ಭರತರ್ಷಭ ।**
**ದಿಷ್ಟ್ಯಾ ವರ್ಧಾಮಹೇ ಪಾರ್ಥ ದಿಷ್ಟ್ಯಾಸಿ ಪುನರಾಗತಃ ॥೧೩॥**

**ಅದ್ಯ ಕೃತ್ಸ್ನಾಂ ಮಹೀಂ ದೇವೀಂ ವಿಜಿತಾಂ ಪುರಮಾಲಿನೀಮ್ ।**
**ಮನ್ಯೇ ಚ ಧೃತರಾಷ್ಟ್ರಸ್ಯ ಪುತ್ರಾನಪಿ ವಶೀಕೃತಾನ್ ॥೧೪॥**

"ದೈವಬಲದಿಂದಲೇ ನಿನಗೆ ಈ ಮಹಾಸ್ತ್ರಗಳು ಪ್ರಾಪ್ತವಾಗಿವೆ. ದೈವಬಲದಿಂದಲೇ ಪುರಂದರನು ನಿನ್ನ ವಿಷಯದಲ್ಲಿ ಸುಪ್ರೀತನಾದನು. ದೈವಬಲದಿಂದಲೇ ಪ್ರಭುವಾದ ದೇವರಾಜನು ನಿನ್ನಿಂದ ಆರಾಧಿತನಾದನು. ದೈವಬಲದಿಂದಲೇ ಪಾರ್ವತೀಸಮೇತನಾದ ಪರಮೇಶ್ವರನು ಅವನೊಡನೆ ನೀನು ಮಾಡಿದ ಯುದ್ಧದಿಂದ ಸುಪ್ರೀತನಾಗಿ ಪ್ರತ್ಯಕ್ಷನಾದನಲ್ಲದೇ ನೀನು ಕೇಳಿದ ವರವನ್ನೂ ದಯಪಾಲಿಸಿದನು. ದೈವಬಲದಿಂದಲೇ ನೀನು ಲೋಕ ಪಾಲರನ್ನೂ ಸಂದರ್ಶಿಸಿದೆ. ಪಾರ್ಥ! ಮುಂದೆ ನಮ್ಮ ಅಭಿವೃದ್ಧಿಯೂ ದೈವ ಬಲದಿಂದಲೇ ಆಗಬೇಕಾಗಿದೆ. ಅದೃಷ್ಟವಿಶೇಷದಿಂದ ನೀನು ಪುನರಾಗಮಿಸಿ ನಮ್ಮನ್ನು ಸೇರಿರುವೆ!

ಇಂದೇ ನಾನು ಪುರ-ಪಟ್ಟಣಗಳಿಂದಲಂಕೃತಳಾದ ಈ ಭೂದೇವಿ ಯನ್ನು ಜಯಿಸಿಬಿಟ್ಟೆನೆಂದು ಭಾವಿಸುತ್ತೇನೆ. ಧೃತರಾಷ್ಟ್ರನ ಮಕ್ಕಳೂ ನಮ್ಮ ಅಧೀನರಾದರೆಂದೇ ಭಾವಿಸುತ್ತೇನೆ.

ಮಗು! ಈಗ ನಾನು ಮಹಾಪರಾಕ್ರಮಿಗಳಾದ ನಿವಾತಕವಚರನ್ನು ಧ್ವಂಸಮಾಡಿದ ಆ ಮಹಾಸ್ತ್ರಗಳನ್ನು ನೋಡುವ ಕುತೂಹಲದಿಂದಿದ್ದೇನೆ."

ಅಣ್ಣನ ಮಾತಿಗೆ ಅರ್ಜುನನು ವಿನೀತನಾಗಿ ಉತ್ತರಿಸಿದನು :

"ಅಣ್ಣ ನಾಳೆ ಮುಂಜಾನೆ ನೀನು ಆ ಮಹಾಸ್ತ್ರಗಳೆಲ್ಲವನ್ನೂ

ನೋಡಬಹುದಾಗಿದೆ. ನಾನು ಯಾವ ದಿವ್ಯಾಸ್ತ್ರಗಳಿಂದ ನಿವಾತಕವಚರನ್ನು ಸಂಹರಿಸಿದೆನೋ–ಅವುಗಳೆಲ್ಲವನ್ನೂ ನಿನಗೆ ತೋರುವೆನು."

ವೈಸಂಪಾಯನು ಜನಮೇಜಯನಿಗೆ ಹೇಳುತ್ತಾರೆ : "ಜನಮೇಜಯ! ಈ ರೀತಿಯಾಗಿ ನಿನ್ನ ಮುತ್ತಾತನಾದ ಧನಂಜಯನು ತನ್ನ ಐದು ವರ್ಷಗಳ ಪ್ರವಾಸಾನುಭವವನ್ನು ತನ್ನಣ್ಣನಾದ ಯುಧಿಷ್ಠಿರನಿಗೆ ಹೇಳಿದನು. ಅನಂತರ ಆ ರಾತ್ರಿಯನ್ನು ಸೋದರರೊಡನೆ ಸುಖವಾಗಿ ಕಳೆದನು."

ನೂರೆಪ್ಪತ್ನಾಲ್ಕನೆಯ ಅಧ್ಯಾಯವು ಮುಗಿಯಿತು.

೧೭೫ನೆಯ ಅಧ್ಯಾಯ ನಿವಾತಕವಚಯುದ್ಧಪರ್ವ (ಮುಂದುವರಿದಿದೆ.)

## ನಾರದಾದಿಗಳು ಮಹಾಸ್ತ್ರಗಳ ಪ್ರದರ್ಶನವನ್ನು ನಿರೋಧಿಸಿದುದು

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ರಾತ್ರಿಯು ಕಳೆಯಿತು. ಯುಧಿಷ್ಠಿರನು ತನ್ನ ಅನುಜರೊಡನೆ ಬ್ರಾಹ್ಮಮುಹೂರ್ತದಲ್ಲೆದ್ದು ಪ್ರಾತಃಕಾಲದಲ್ಲಿ ಮಾಡಬೇಕಾಗಿದ್ದ ಸ್ನಾನ-ಸಂಧ್ಯೋಪಾಸನಾದಿಗಳನ್ನು ಮುಗಿಸಿಕೊಂಡವನಾಗಿ ಭ್ರಾತೃನಂದನನಾದ ಅರ್ಜುನನಿಗೆ ಹೇಳಿದನು :

"ಕೌಂತೇಯನೇ! ನೀನು ಯಾವ ಮಹಾಸ್ತ್ರಗಳಿಂದ ನಿವಾತಕವಚರನ್ನು ಧ್ವಂಸಮಾಡಿದೆಯೋ ಆ ಮಹಾಸ್ತ್ರಗಳನ್ನು ಈಗ ಪ್ರದರ್ಶಿಸುವೆಯಾ?"

ಜನಮೇಜಯ! ಅಣ್ಣನಾದ ಯುಧಿಷ್ಠಿರನ ಆಶಯದಂತೆಯೇ ಧರ್ಮಾತ್ಮನಾದಧನಂಜಯನು ಮಹಾಸ್ತ್ರಗಳ ಪ್ರಯೋಗಸಮಯದಲ್ಲಿ ಅನುಸರಿಸಬೇಕಾದ ನಿಯಮದಂತೆ ಪರಿಶುದ್ಧನಾಗಿ ತಾನು ಸ್ವರ್ಗಲೋಕದಲ್ಲಿ ಪುರಂದರನಿಂದಲೂ ಮತ್ತು ಭೂಲೋಕದಲ್ಲಿ ಪರಶಿವನಿಂದಲೂ-ಲೋಕಪಾಲಕರಿಂದಲೂ ಪಡೆದಿದ್ದ ಮಹಾಸ್ತ್ರಗಳನ್ನು ಪ್ರದರ್ಶಿಸಲು ಉಪಕ್ರಮಿಸಿದನು.

ಮಹಾಸ್ತ್ರಗಳ ದಿವ್ಯತೇಜಸ್ಸನ್ನು ಕಾಣಬೇಕಾದರೆ ಮಂತ್ರಪುನಶ್ಚರಣೆ ಮಾಡಿ ಅವುಗಳನ್ನು ಪ್ರಯೋಗಿಸಬೇಕು. ಅದು ಹೊರತಾಗಿ ಮಹಾಸ್ತ್ರಗಳ

ದಿವ್ಯದರ್ಶನವಾಗುವುದಿಲ್ಲ. ಅವುಗಳನ್ನು ಪ್ರಯೋಗಿಸುವಾಗ ರಥದಲ್ಲಿಯೇ ಕುಳಿತು ಪ್ರಯೋಗಿಸಬೇಕೆಂಬುದೂ ಒಂದು ನಿಯಮ. ಪ್ರಸಕ್ತಸಂದರ್ಭದಲ್ಲಿ ರಥಗಳಾವುವೂ ಪಾಂಡವರಲ್ಲಿ ಇರಲಿಲ್ಲ. ಅರ್ಜುನನು ಕ್ಷಣಕಾಲ ಯೋಚಿಸಿ ತಾನು ಕುಳಿತಿರುವ ಭೂಭಾಗವನ್ನೇ ರಥದ ಉಪವೇಶನಸ್ಥಾನವೆಂದು ಭಾವಿಸಿದನು. ಪರ್ವತಶಿಖರವು ಧ್ವಜದ ಪತಾಕೆಯಾಯಿತು. ಪರ್ವತದ ಬುಡವು ರಥಚಕ್ರವಾಯಿತು. ಅಲ್ಲಿದ್ದ ಬಿದಿರಿನ ಮೆಳೆಗಳು ಚಕ್ರವನ್ನು ಸೇರಿಸುವ ನೇಮಿಗಳಾದುವು. ಅಂತಹ ಪರಮಾದ್ಭುತವಾದ ರಥವನ್ನು ಮನಸ್ಸಿನಲ್ಲಿ ಸಂಸ್ಥಾಪಿಸಿ, ತಾನು ರಥದ ಮೇಲೆಯೇ ಕುಳಿತಿರುವೆನೆಂದು ಭಾವಿಸಿ, ಇಂದ್ರನಿಂದ ಕೊಡಲ್ಪಟ್ಟ ಕವಚವನ್ನು ಧರಿಸಿ, ದೇವದತ್ತಶಂಖವನ್ನು ಊದಿ ತನ್ಮೂಲಕವಾಗಿ ಪ್ರಣವನಾದವನ್ನು ಮಾಡಿ, ಅತ್ಯಂತಪ್ರಕಾಶಮಾನವಾಗಿದ್ದ ಅಸ್ತ್ರಗಳನ್ನು ಒಂದಾದ ಮೇಲೊಂದರಂತೆ ತೆಗೆದು ಗಾಂಡೀವಕ್ಕೆ ಯೋಜಿಸಿ ಮಂತ್ರಪುನಶ್ಚರಣೆಮಾಡಿ ಪ್ರಯೋಗಿಸಿ ಪ್ರದರ್ಶಿಸತೊಡಗಿದನು.

ಮಹಾಸ್ತ್ರಗಳನ್ನು ಪ್ರಯೋಗಿಸಲು ಶಿಂಜಿನಿಯನ್ನು ಸೆಳೆದು ಭೂಮಿಯನ್ನು ಮೆಟ್ಟಿ ಅರ್ಜುನನು ಪ್ರಯೋಗಿಸಿದಾಗ ವೃಕ್ಷ-ಸರೋವರ-ಸಮುದ್ರಗಳಿಂದ ಕೂಡಿದ ಭೂಮಿಯೇ ನಡುಗಿತು. ನದಿಗಳು ಕ್ಷುಭಿತ ವಾದುವು. ಸಮುದ್ರವೂ ಅಲ್ಲೋಲ-ಕಲ್ಲೋಲವಾಯಿತು. ಹತ್ತಿರದಲ್ಲಿದ್ದ ಸಣ್ಣ-ಸಣ್ಣ ಪರ್ವತಗಳು ಇಬ್ಭಾಗವಾದುವು. ವಾಯುದೇವನು ಸ್ತಬ್ಧ ನಾದನು. ಆ ಮಹಾಸ್ತ್ರಗಳ ಕಾಂತಿಯು ಸೂರ್ಯನ ಕಾಂತಿಗಿಂತಲೂ ಮಿಗಿ ಲಾಗಿದ್ದು ಸೂರ್ಯನು ಕಾಂತಿಹೀನನಾದಂತೆ ಭಾಸವಾಯಿತು. ಸೂರ್ಯನ ಪ್ರಭೆಯೇ ಕುಂಠಿತವಾಯಿತೆಂದರೆ ಯಜ್ಞೇಶ್ವರನ ವಿಷಯವಾಗಿ ಹೇಳಬೇಕಾ ಗಿಯೇ ಇಲ್ಲ. ಯಜ್ಞೇಶ್ವರನೂ ಕಾಂತಿಹೀನನಾದನು. ದ್ವಿಜರಲ್ಲಿದ್ದ ವೇದಗಳು ಕೂಡ ಆ ಸಮಯದಲ್ಲಿ ಪ್ರಕಾಶಗೊಳ್ಳಲಿಲ್ಲ. ಭೂಮಿಯ ಒಳಗಿರುವ ಪ್ರಾಣಿ ಗಳೆಲ್ಲವೂ ಆ ಮಹಾಸ್ತ್ರಗಳ ಪ್ರಯೋಗದಿಂದ ವ್ಯಾಕುಲಗೊಂಡು ಹೊರ ಬಂದು ಮಹಾತ್ಮನಾದ ಅರ್ಜುನನನ್ನೇ ಸುತ್ತುವರಿದು ಭಯದಿಂದ ನಿಂತು ಕೊಂಡುವು. ಆ ಪ್ರಾಣಿಗಳೆಲ್ಲವೂ ಮಹಾಸ್ತ್ರಗಳ ದಿವ್ಯಜ್ವಾಲೆಗಳಿಂದ ಬೆಂದು

ಬೇಸತ್ತು ಗಡ-ಗಡನೆ ನಡುಗುತ್ತಾ ನಿಂತು ಅರ್ಜುನನನ್ನು ಕುರಿತು ಪ್ರಾಣ ಭಿಕ್ಷೆಯನ್ನು ಕೇಳುತ್ತಿದ್ದುವು.

ಮರುಕ್ಷಣದಲ್ಲಿಯೇ ಬ್ರಹ್ಮರ್ಷಿಗಳೂ, ಸಿದ್ಧರೂ, ಮಹರ್ಷಿಗಳೂ ಭೀತರಾಗಿ ಅಲ್ಲಿಗೆ ಆಗಮಿಸಿದರು. ಪೃಥ್ವಿಯಲ್ಲಿದ್ದ ಸಕಲಜಂಗಮವಸ್ತುಗಳೂ ಸಹ ಅಲ್ಲಿಗೆ ಆಗಮಿಸಿದುವು. ದೇವರ್ಷಿಗಳೂ, ದೇವತೆಗಳೂ, ಯಕ್ಷ-ರಾಕ್ಷಸರೂ, ಗಂಧರ್ವರೂ ಆಗಮಿಸಿದರು. ಆಕಾಶದಲ್ಲಿ ಸಂಚರಿಸುವ ಸಕಲಪಕ್ಷಿಗಳೂ ಪ್ರಾಣಭೀತಿಯಿಂದ ಅಲ್ಲಿಗೆ ಆಗಮಿಸಿದುವು. ಇಷ್ಟುಮಾತ್ರವೇ ಅಲ್ಲ. ಭೂಮಿಯೇ ಕಂಪಿಸುತ್ತಿರುವುದನ್ನು ಕಂಡು ಸಾಕ್ಷಾತ್ ಚತುರ್ಮುಖನೇ ಅರ್ಜುನನು ಮಹಾಸ್ತ್ರಗಳನ್ನು ಪ್ರಯೋಗಿಸುತ್ತಿದ್ದ ಪ್ರದೇಶಕ್ಕೆ ಆಗಮಿಸಿದನು. ಅವನನ್ನೇ ಅನುಸರಿಸಿ ಲೋಕಪಾಲರೂ, ಪರಿವಾರಸಮೇತನಾದ ಪರಮೇಶ್ವರನೂ ಅಲ್ಲಿಗೆ ಆಗಮಿಸಿದರು. ವಾಯುದೇವನು ಚಿತ್ರ-ವಿಚಿತ್ರವಾದ ಸುಗಂಧಯುಕ್ತವಾದ ಹೂವುಗಳನ್ನು ತಂದು ಅರ್ಜುನನ ಮೇಲೆ ಸುರಿಸುತ್ತಿದ್ದನು. ದೇವತೆಗಳಿಂದ ಪ್ರೇರಿತರಾದ ಗಂಧರ್ವರು ಅರ್ಜುನನ ಸಂಬಂಧವಾದ ಕಥೆಗಳನ್ನು ಗಾಯನದ ಮೂಲಕ ಇಂಪಾಗಿ ಹಾಡುತ್ತಿದ್ದರು. ಅಪ್ಸರೆಯರು ದಿವ್ಯಗಾಯನವನ್ನನುಸರಿಸಿ ತಾಳ-ಲಯಬದ್ಧವಾಗಿ ನೃತ್ಯ ಮಾಡುತ್ತಿದ್ದರು. ಅರ್ಜುನನು ಏಕಾಗ್ರತೆಯಿಂದ ಮಹಾಸ್ತ್ರಗಳನ್ನು ಒಂದಾದಮೇಲೊಂದರಂತೆ ಪ್ರಯೋಗಿಸುತ್ತಾ ಅವುಗಳ ಪ್ರಭಾವವನ್ನು ಪ್ರದರ್ಶಿಸಬೇಕೆಂದಿದ್ದನು. ಹೀಗೆಯೇ ಮಹಾಸ್ತ್ರಗಳನ್ನು ಲಕ್ಷ್ಯವೇ (ಗುರಿ) ಇಲ್ಲದೇ ಪ್ರಯೋಗಿಸುತ್ತಿದ್ದರೆ–ಅಖಂಡಬ್ರಹ್ಮಾಂಡವೇ ಆ ಅಸ್ತ್ರಗಳಿಗೆ ಲಕ್ಷ್ಯವಾಗಿ, ಅಖಂಡಬ್ರಹ್ಮಾಂಡವೂ ಕ್ಷಣಮಾತ್ರದಲ್ಲಿ ಭಸ್ಮೀಭೂತವಾಗಿ ಬಿಡಬಹುದೆಂದು-ದೇವತೆಗಳು ತಲ್ಲಣಿಸಿದರು. ಒಡನೆಯೇ ಬ್ರಹ್ಮನೊಡನೆ ಸಮಾಲೋಚಿಸಿ ನಾರದಮಹರ್ಷಿಗಳನ್ನು ಅರ್ಜುನನ ಬಳಿಗೆ ಕಳುಹಿಸಿ ಕೊಟ್ಟರು.

ಜನಮೇಜಯ! ದೇವತೆಗಳ ನಿರ್ದೇಶನದಂತೆ ನಾರದರು ಅರ್ಜುನನನ್ನು ಕುರಿತು ಹೇಳಿದರು :

**ಅರ್ಜುನಾರ್ಜುನ ಮಾ ಯುಂಕ್ಷ್ವ ದಿವ್ಯಾನ್ಯಸ್ತ್ರಾಣಿ ಭಾರತ ।**
**ನೈತಾನಿ ನಿರಧಿಷ್ಠಾನೇ ಪ್ರಯುಜ್ಯನ್ತೇ ಕಥಂಚನ ॥೧೯॥**

ಅಧಿಷ್ಠಾನೇ ನ ವಾ ಸಾರ್ಥಃ ಪ್ರಯುಞ್ಜೀತ ಕದಾಚನ ।
ಪ್ರಯೋಗೇಷು ಮಹಾನ್ದೋಷೋ ಹ್ಯಸ್ತ್ರಾಣಾಂ ಕರುನನ್ದನ ॥೨೦॥

ಏತಾನಿ ರಕ್ಷ್ಯಮಾಣಾನಿ ಧನಂಜಯ ಯಥಾಗಮಮ್ ।
ಬಲವನ್ತಿ ಸುಖಾರ್ಹಾಣಿ ಭವಿಷ್ಯನ್ತಿ ನ ಸಂಶಯಃ ॥೨೧॥

ಅರಕ್ಷ್ಯ ಮಾಣಾನ್ಯೇತಾನಿ ತ್ರೈಲೋಕ್ಯಸ್ಯಾಪಿ ಪಾಣ್ಡವ ।
ಭವನ್ತಿ ಸ್ಮ ವಿನಾಶಾಯ ಮೈವಂ ಭೂಯಃ ಕೃಥಾಃ ಕ್ವಚಿತ್ ॥೨೨॥



“ಅರ್ಜುನ! ಅರ್ಜುನ! ನಿಲ್ಲಿಸು! ಮಹಾಸ್ತ್ರಗಳ ಪ್ರಯೋಗವನ್ನೂ

ಮತ್ತು ಪ್ರದರ್ಶನವನ್ನೂ ಸಾಕುಮಾಡು"–ಎಂದು ಕೂಗುತ್ತಲೇ ಅರ್ಜುನನ ಬಳಿಗೆ ಬಂದರು.

ನಾರದರು ಬಂದುದನ್ನು ಕಂಡು ಅರ್ಜುನನು ಕ್ಷಣಕಾಲ ಸ್ತಬ್ಧನಾಗಿ ನಿಂತನು. ನಾರದರು ಮುಂದುವರಿದು ಅರ್ಜುನನೊಡನೆ ಹೇಳಿದರು :

"ಅರ್ಜುನ! ಈ ದಿವ್ಯಾಸ್ತ್ರಗಳ ಪ್ರಯೋಗಕ್ಕೆ ಸಮಯವು ಯಾವುದೆಂಬುದನ್ನು ನೀನು ಮರೆತಂತಿದೆ. ನೀನು ಅಕಾಲದಲ್ಲಿ ಲಕ್ಷ್ಯವೇ (ಗುರಿಯೇ) ಇಲ್ಲದೇ ಈ ಮಹಾಸ್ತ್ರಗಳನ್ನು ಖಂಡಿತವಾಗಿಯೂ ಪ್ರಯೋಗಿಸಬಾರದು. ಒಂದು ವೇಳೆ ಲಕ್ಷ್ಯವಿದ್ದರೂ ಎದುರಾಳಿಯ ಬಲಾಬಲಗಳನ್ನೂ ವಿವೇಚಿಸಿ ಮಹಾಸ್ತ್ರಗಳನ್ನು ಪ್ರಯೋಗಿಸಬೇಕು. ಅರ್ಥಾತ್ ಆಪತ್ಕಾಲದಲ್ಲಿ ಮಾತ್ರವೇ ಈ ಮಹಾಸ್ತ್ರಗಳನ್ನು ಪ್ರಯೋಗಿಸಬೇಕು. ಅಕಾಲದಲ್ಲಿ ಲಕ್ಷ್ಯವೇ ಎದುರಿಗೆ ಇಲ್ಲದಿರುವಾಗ ವ್ಯರ್ಥವಾಗಿ ಈ ಮಹಾಸ್ತ್ರಗಳನ್ನು ಪ್ರಯೋಗಿಸಿದಲ್ಲಿ ಖಂಡಿತವಾಗಿಯೂ ಇದರಿಂದ ವಿಪತ್ತುಂಟಾಗುವುದು. ನಿನಗೆ ಉಪದಿಷ್ಟವಾಗಿರುವ ಪ್ರಕಾರ ಇವುಗಳನ್ನು ಸಮಯಾಸಮಯಗಳನ್ನು ವಿವೇಚಿಸಿ ಆಪತ್ಕಾಲದಲ್ಲಿ ಮಾತ್ರವೇ ಪ್ರಯೋಗಿಸುವುದರಿಂದ ಆ ಸಮಯಗಳಲ್ಲಿ ಈ ಮಹಾಸ್ತ್ರಗಳು ನಿನಗೆ ಹೆಚ್ಚಿನ ಬಲವನ್ನೂ ನೀಡುತ್ತವೆ ಮತ್ತು ಅವುಗಳ ಪ್ರಯೋಗದ ಫಲವು ನಿನಗೆ ಹೆಚ್ಚಿನ ಆನಂದವನ್ನೂ ಉಂಟುಮಾಡುತ್ತದೆ.

ಇವುಗಳನ್ನು ಸಾಧಾರಣಬಾಣಗಳೆಂದು ಭಾವಿಸಿ ನಿರ್ಲಕ್ಷ್ಯದಿಂದ ಮನಸ್ಸಿಗೆ ಬಂದಾಗ ಪ್ರದರ್ಶನಾರ್ಥವಾಗಿ ಪ್ರಯೋಗಿಸಲು ಹೊರಟರೆ–ಈ ಮಹಾಸ್ತ್ರಗಳು ಕ್ಷಣಮಾತ್ರದಲ್ಲಿ ಈ ಮೂರು ಲೋಕಗಳನ್ನೂ ದಹಿಸಿಬಿಡಬಹುದು. ಆದುದರಿಂದಲ ನೀನು ಇನ್ನು ಮುಂದೆ ಹೀಗೆ ವಿವೇಚನೆಯಿಲ್ಲದೇ ವರ್ತಿಸಬೇಡ–ನಾರದರು ಅರ್ಜುನನಿಗೆ ಹೀಗೆ ಹೇಳಿ ಧರ್ಮರಾಜನ ಬಳಿಗೆ ಹೋಗಿ ಅವನೊಡನೆ ಹೇಳಿದರು :

**ಅಜಾತಶತ್ರೋತ್ವಂ ಚೈವ ದ್ರಕ್ಷ್ಯಸೇ ತಾನಿ ಸಂಯುಗೇ ।**
**ಯೋಜ್ಯಮಾನಾನಿ ಪಾರ್ಥೇನ ದ್ವಿಷತಾಮವಮರ್ದನೇ ॥೨೩॥**

"ಧರ್ಮಜ! ನಿನಗೆ ಅರ್ಜುನನಲ್ಲಿರುವ ಮಹಾಸ್ತ್ರಗಳನ್ನು ನೋಡಬೇಕೆನ್ನುವ ಕುತೂಹಲವು ಉಂಟಾಗಿರುವುದು ಸ್ವಾಭಾವಿಕವಾಗಿಯೇ ಇದೆ

ಆದರೂ ಅವುಗಳ ಪ್ರಭಾವವನ್ನು ಕಾಣುವ ಸಮಯವು ಇದಲ್ಲ. ಪಾರ್ಥನು ಯುದ್ಧಭೂಮಿಯಲ್ಲಿ ಶತ್ರುಗಳೊಡನೆ ಹೋರಾಡುವಾಗ ಈ ಮಹಾಸ್ತ್ರಗಳನ್ನೇ ಪ್ರಯೋಗಿಸಿ ಮಹಾಬಲಿಷ್ಠರೆನಿಸಿರುವ ಶತ್ರುಗಳೆಲ್ಲರನ್ನೂ ಮರ್ದನ ಮಾಡುತ್ತಾನೆ. ಆ ಸಮಯದಲ್ಲಿ ನೀನು ಈ ಮಹಾಸ್ತ್ರಗಳ ದಿವ್ಯಸ್ವರೂಪವನ್ನೂ, ಇವುಗಳ ಪರಮಾದ್ಭುತವಾದ ತೇಜಸ್ಸನ್ನೂ ಕಾಣ ಬಹುದಾಗಿದೆ."

ನಾರದರ ಮಾತುಗಳನ್ನು ಕೇಳಿ ಯುಧಿಷ್ಠಿರ-ಪಾರ್ಥರು ಅವರ ಮಾತಿಗೆ ಮಣಿದು ಪೂಜ್ಯರಾದ ಋಷಿಗಳನ್ನು ಯಥೋಚಿತವಾಗಿ ಸತ್ಕರಿಸಿ ಕಳುಹಿಸಿದರು.

ಜನಮೇಜಯ! ಈ ರೀತಿಯಲ್ಲಿ ದೇವತೆಗಳು ನಾರದರ ಮೂಲಕ ಅರ್ಜುನನು ಕೈಗೊಂಡಿದ್ದ ಮಹಾಸ್ತ್ರಗಳ ಪ್ರಭಾವಪ್ರದರ್ಶನವನ್ನು ತಡೆದು ತಮ್ಮ-ತಮ್ಮ ಲೋಕಗಳಿಗೆ ತೆರಳಿದರು.

ಇತ್ತಲಾಗಿ ಪಾಂಡವರು ದ್ರೌಪದಿಯೊಡನೆ ಮುಂದೆ ಕೆಲವು ದಿನಗಳು ಆ ಗಂಧಮಾದನಪರ್ವತದ ಅರಣ್ಯದಲ್ಲಿಯೇ ಸುಖದಿಂದ ಕಾಲಕಳೆಯುತ್ತಿದ್ದರು.

೧೭೫ನೆಯ ಅಧ್ಯಾಯವು ಮುಗಿಯಿತು.

೧೭೬ನೆಯ ಅಧ್ಯಾಯ ಆಜಗರಪರ್ವ

## ಯುಧಿಷ್ಠಿರನೊಡನೆ ಭೀಮನ ಸಮಾಲೋಚನೆ : ಗಂಧಮಾದನಪರ್ವತದಿಂದ ಪಾಂಡವರ ನಿರ್ಗಮನ

ಜನಮೇಜಯನು ಹೇಳುತ್ತಾನೆ :

"ವೈಶಂಪಾಯನರೇ! ರಥಿಗಳಲ್ಲಿ ಶ್ರೇಷ್ಠನೆನಿಸಿದ ಅರ್ಜುನನು ಮಹಾಸ್ತ್ರಗಳೆಲ್ಲವನ್ನೂ ಪಡೆದು ಇಂದ್ರನ ಅರಮನೆಯಿಂದ ಪುನರಾಗಮಿಸಿದ ನಂತರ ವೀರನಾದ ಅರ್ಜುನನಿಂದ ಕೂಡಿದ ಪಾಂಡುಪುತ್ರರು ಮುಂದೇನು ಮಾಡಿದರೆಂಬುದನ್ನು ವಿಶದವಾಗಿ ಹೇಳಿರಿ."

"ಜನಮೇಜಯ! ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ

ಕಿರೀಟಿಯು ಇಂದ್ರಲೋಕದಿಂದ ಪುನರಾಗಮಿಸಿದನಂತರ ಅವನ ಜೊತೆಯಲ್ಲಿ ಧರ್ಮಾದಿಗಳು ಗಂಧಮಾದನಪರ್ವತದಲ್ಲಿದ್ದ ಕುಬೇರನ ಸುರಮ್ಯವಾದ ಉದ್ಯಾನವನದಲ್ಲಿ ಯಥೇಚ್ಛವಾಗಿ ವಿಹರಿಸುತ್ತಾ ಆನಂದಭರಿತರಾಗಿದ್ದರು. ಕಿರೀಟಿಯಾದರೋ ಅಲ್ಲಿದ್ದ ಅಪ್ರತಿಮವಾದ ದೇವತೆಗಳ ಮನೆಗಳನ್ನು ವೀಕ್ಷಿಸುತ್ತಾ ವೃಕ್ಷಭರಿತವಾಗಿದ್ದ ಉದ್ಯಾನವನದಲ್ಲಿ ಧನುಷ್ಪಾಣಿಯಾಗಿ ಅಸ್ತ್ರಾಭ್ಯಾಸ ಮಾಡುತ್ತಾ ತಿರುಗಾಡುತ್ತಿದ್ದನು. ಕುಬೇರನ ವರಪ್ರಸಾದದಿಂದಾಗಿ ಸಕಲಸಂಭಾರಗಳಿಂದಲೂ ಸಜ್ಜಾಗಿದ್ದ ವಾಸಸ್ಥಳವನ್ನು ಪಡೆದ ಪಾಂಡವರು ಭೂಲೋಕದ ಸಂಪತ್ಸೌಭಾಗ್ಯಗಳನ್ನು ಸಂಪೂರ್ಣವಾಗಿ ಮರೆತುಬಿಟ್ಟರು. ಅವರಿಗೆ ಯಾವ ವಿಷಯದಲ್ಲಿಯೂ ಕೊರತೆಯೆಂಬುದೇ ಇರಲಿಲ್ಲ. ತಾವು ವನವಾಸದಲ್ಲಿ ಇದ್ದೇವೆಂಬ ಭಾವನೆಯು ಉಂಟಾಗಲೂ ಅವಕಾಶವಿರಲಿಲ್ಲ. ದೇವತೆಗಳಂತೆಯೇ ಸ್ವರ್ಗಲೋಕದ ಸುಖವನ್ನೇ ಅನುಭವಿಸುತ್ತಾ ಶಾಂತಮನಸ್ಕರಾಗಿ ಪಾಂಡವರು ಕಾಲಕಳೆಯುತ್ತಿದ್ದರು. ಅವರು ಕುಬೇರನ ಭವನದಲ್ಲಿ ಕಳೆದ ನಾಲ್ಕು ವರ್ಷಗಳೂ ಒಂದು ರಾತ್ರಿಯೋಪಾದಿಯಲ್ಲಿ ಕಳೆದುಹೋದುವು. ಅರಣ್ಯವಾಸವು ಪ್ರಾರಂಭವಾದನಂತರ ಅರ್ಜುನನ ಜೊತೆಯಲ್ಲಿ ಕಳೆದಿದ್ದು ಒಂದು ವರ್ಷ ; ಅರ್ಜುನನು ಮಹಾಸ್ತ್ರಗಳನ್ನು ಪಡೆಯುವುದಕ್ಕಾಗಿ ಹೊರಟುಹೋದನಂತರ ಅರ್ಜುನನಿಲ್ಲದೇ ಕಳೆದಿದ್ದು ಐದು ವರ್ಷಗಳು ; ಪುನಃ ಅರ್ಜುನನ ಬಂದಮೇಲೆ ಅರ್ಜುನನ ಜೊತೆಯಲ್ಲಿ ಕಳೆದಿದ್ದು ನಾಲ್ಕು ವರ್ಷಗಳು–ಒಟ್ಟು ಹತ್ತುವರ್ಷಗಳು ಪಾಂಡವರ ಹನ್ನೆರಡು ವರ್ಷಗಳ ವನವಾಸದಲ್ಲಿ ಹೀಗೆ ಕಳೆದುಹೋದುವು.

ಏಕಾಂತಸ್ಥಳದಲ್ಲಿ ಧರ್ಮರಾಜನು ಜಿಷ್ಣುವಿನಿಂದಲೂ, ದೇವತೆಗಳಿಗೆ ಸಮಾನರಾದ ನಕುಲ-ಸಹದೇವರಿಂದಲೂ ಪರಿವೃತನಾಗಿ ಕುಳಿತಿರಲಾಗಿ, ಬಲಶಾಲಿಯಾದ ಭೀಮಸೇನನು ಧರ್ಮರಾಜನನ್ನು ಕುರಿತು ಪರಮ ಪ್ರಿಯವೂ, ಪರಮಹಿತವೂ ಆದ ಈ ಮಾತುಗಳನ್ನು ಹೇಳಿದನು :

"ಮಹಾರಾಜ! ನೀನು ಮಾಡಿದ ಪ್ರತಿಜ್ಞೆಯನ್ನು ಪೂರ್ಣಗೊಳಿಸಲು ಅಥವಾ ನೀನು ಕೊಟ್ಟ ವಚನವನ್ನು ಸತ್ಯವಚನವನ್ನಾಗಿ ಮಾಡಲು ಮತ್ತು ನಿನಗೆ ಪ್ರಿಯವನ್ನುಂಟುಮಾಡಲು ನಾವು ಈ ಅರಣ್ಯವಾಸವನ್ನು

ತೊರೆದು, ಪರಿವಾರಸಮೇತನಾದ ಸುಯೋಧನನನ್ನು ಸಂಹರಿಸಲು ಇದು ವರೆಗೂ ಹೋಗಿರುವುದಿಲ್ಲ. ನಿನ್ನ ಪ್ರತಿಜ್ಞಾವಚನವು ನಮಗೆ ಅಡ್ಡವಾಗಿರ ದಿದ್ದರೆ ಈ ವೇಳೆಗಾಗಲೇ ಸುಯೋಧನನು ಸಪರಿವಾರನಾಗಿ ಯಮಾಲಯ ವನ್ನು ಸೇರಬೇಕಾಗಿದ್ದಿತು. ಸುಖ-ಸಂತೋಷಗಳಿಂದ ನಮ್ಮಷ್ಟಕ್ಕೆ ನಾವು ಇರಬಹುದಾಗಿದ್ದಿತು. ಅಸೂಯಾಪರನಾದ ದುರ್ಯೋಧನನು ನಮ್ಮನ್ನು ಸುಖವಾಗಿರಲು ಅವಕಾಶಗೊಡದೇ ದ್ಯೂತವ್ಯಾಜದಿಂದ ಅರಣ್ಯಕ್ಕಟ್ಟಿದನು. ಈಗ ನಾವು ವನವಾಸದ ಹನ್ನೊಂದನೆಯ ವರ್ಷದಲ್ಲಿದ್ದೇವೆ.

ಧರ್ಮಜ! ಅಧಮಾಧಮನಾದ, ಕುತ್ಸಿತವಾದ ಬುದ್ಧಿಯುಳ್ಳ ದುರ್ಯೋಧನನನ್ನು ವಂಚಿಸಿ ನಾವು ಒಂದು ವರ್ಷದ ಅಜ್ಞಾತವಾಸವನ್ನೂ ಮಾಡಬೇಕಾಗಿದೆ. ಆದರೆ ಇಲ್ಲಿಯೇ ಇದ್ದುಕೊಂಡು ಅಜ್ಞಾತವಾಸದ ಒಂದು ವರ್ಷವನ್ನು ಕಳೆಯುವ ಸಾಧ್ಯತೆಯಿದೆಯೇ?

ನಿನ್ನ ಅಜ್ಞಾನುಸಾರವಾಗಿ ನಾವು ಯಾವ ವಿಧವಾದ ಭಯವೂ ಇಲ್ಲದೇ ಮಾನಾಭಿಮಾನಗಳನ್ನೂ ತೊರೆದು ಅರಣ್ಯದಲ್ಲಿ ಸಂಚರಿಸುತ್ತಿದ್ದೇವೆ. ಅಜ್ಞಾತವಾಸವು ಸಮೀಪಿಸುತ್ತಿರುವುದರಿಂದ ಅದಕ್ಕೆ ಮೊದಲೇ ನಾವು ನಮ್ಮ ಮುಂದಿನ ಕಾರ್ಯಕ್ರಮಗಳನ್ನು ಸಿದ್ಧಗೊಳಿಸಬೇಕಾಗಿದೆ. ನಾವೀಗಲೇ ಇಲ್ಲಿಂದ ಪ್ರಯಾಣಮಾಡಿ ಹಸ್ತಿನಾಪುರಕ್ಕೆ ಸಮೀಪದಲ್ಲಿರುವ ಅರಣ್ಯದಲ್ಲಿ ತಂಗಬೇಕು. ದುರ್ಯೋಧನಾದಿಗಳಿಗೆ ನಾವವರ ಸಮೀಪದಲ್ಲಿಯೇ ಇರುವೆವೆಂಬ ಭಾವನೆಯುಂಟಾಗಬೇಕು. ನಾವಲ್ಲಿರುವ ವಾರ್ತೆಯು ಅವರಿಗೆ ಪದೇ-ಪದೇ ತಿಳಿಯುತ್ತಿರಬೇಕು. ಆಗವರು ನಮ್ಮನ್ನು ಹುಡುಕಲು ಹೆಚ್ಚು ಶ್ರಮವನ್ನು ವಹಿಸುವುದಿಲ್ಲ. ನಾವು ಹಸ್ತಿನಾಪಟ್ಟಣಕ್ಕೆ ಬಹುದೂರದಲ್ಲಿ ಅಜ್ಞಾತವಾಸಮಾಡುವುದನ್ನು ನಿಶ್ಚಯಿಸಬೇಕು. ಹೀಗೆ ಮಾಡುವುದರಿಂದ ಮಾತ್ರವೇ ಅವರಿಗೆ ತಿಳಿಯದಂತೆ ನಾವು ಒಂದು ವರ್ಷ ಅಜ್ಞಾತರಾಗಿರಲು ಸಾಧ್ಯವಾಗುವುದು. ನಾವು ಎಲ್ಲಿಗೂ ಹೋಗದೆ ಸುಖದಿಂದ ಇಲ್ಲಿಯೇ ಕಾಲಕಳೆಯಲು ನಿಶ್ಚಯಿಸಿದರೆ–ನಮ್ಮ ಚಲನ-ವಲನಗಳನ್ನು ತಿಳಿಯಲು ಸುಯೋಧನನು ನಾನಾದೇಶಗಳಿಗೆ ಚಾರರನ್ನು ಕಳುಹಿಸಿಬಿಡಬಹುದು. ಆದುದರಿಂದ ನಾವು ಇಲ್ಲಿಂದ ಪ್ರಯಾಣಮಾಡುವುದೇ ಯುಕ್ತವಾಗಿದೆ. ನಾನು ಹೇಳಿದ ರೀತಿಯಲ್ಲಿ ಹಸ್ತಿನಾಪಟ್ಟಣಕ್ಕೆ ಬಹುದೂರದಲ್ಲಿ

ವಾಸಮಾಡುತ್ತಾ ಒಂದು ವರ್ಷಕಾಲ ಅಜ್ಞಾತವಾಸದಲ್ಲಿ ಕಳೆದು ಪರಸ್ಪರ ಉಂಟಾಗಿರುವ ವೈರವೃಕ್ಷವನ್ನು-ಶತ್ರುವಿನಾಶವೆಂಬ ಪುಷ್ಪದೊಡನೆ ಮತ್ತು ರಾಜ್ಯಪ್ರಾಪ್ತಿಯೆಂಬ ಫಲದೊಡನೆ-ಅಧಮಾಧಮನಾದ, ಪರಿವಾರಸಮೇತ ನಾದ ದುರ್ಯೋಧನನಿಗೆ ಹಿಂದಿರುಗಿಸಿ ಸಪರಿವಾರನಾದ ದುರ್ಯೋಧನ ನನ್ನು ನಿರ್ಮೂಲಗೊಳಿಸಿ ನೀನು ಚಕ್ರವರ್ತಿಯಾಗು, ಧರ್ಮಜ! ಸ್ವರ್ಗೋ ಪಮವಾದ ಈ ಸ್ಥಳದಲ್ಲಿ ಸಂಚರಿಸುತ್ತಿರುವ (ವಾಸಮಾಡುತ್ತಿರುವ) ನಮಗೆ ನಮ್ಮ ದುಃಖವೇ ಮರೆತುಹೋಗಬಹುದು. ಹಾಗೇನಾದರೂ ನಾವು ಇಂದಿನ ಈ ಸುಖಕ್ಕೆ ಮಾರುಹೋಗಿ ಮುಂದಿನ ಕರ್ತವ್ಯವನ್ನು ಮರೆತು ಕುಳಿತರೆ ಸ್ಥಾವರ-ಜಂಗಮಗಳಿಂದ ಕೂಡಿರುವ ಈ ಭೂಮಿಯಲ್ಲಿ ಪುಣ್ಯಗಂಧಯುಕ್ತ ವಾದ ನಿನ್ನ ಕೀರ್ತಿಯು ನಶಿಸಿಹೋಗುವುದು.

ದುರ್ಯೋಧನಾದಿಗಳು ಆಳುತ್ತಿರುವ ರಾಜ್ಯವನ್ನು ವಶಪಡಿಸಿಕೊಂಡ ನಂತರ ನಿನ್ನ ಕೀರ್ತಿಯು ಶಾಶ್ವತವಾಗಿ ಉಳಿಯುವುದಲ್ಲದೇ ನೀನು ಅನೇಕ ಸತ್ಕರ್ಮಗಳನ್ನು ಮಾಡಿ ಇದಕ್ಕಿಂತಲೂ ಹೆಚ್ಚಿನ ಸುಖವನ್ನು ಪಡೆಯಬಹು ದಾಗಿದೆ. ಈಗ ಕುಬೇರನ ಅನುಗ್ರಹದಿಂದ ಪಡೆದಿರುವ ಈ ಸುಖವನ್ನು ನೀನು ರಾಜ್ಯಪ್ರಾಪ್ತಿಯಾದನಂತರವೂ ಯಾವಾಗ ಬೇಕಾದರೂ ಪುನಃ ಅನು ಭವಿಸಬಹುದು. ಆದುದರಿಂದ ನೀನೀಗಲೇ ಪಾಪಿಷ್ಠರಾದ, ನಿನಗೆ ದ್ರೋಹ ವೆಸಗಿರುವ ದುರಾತ್ಮರಾದ ಶತ್ರುಗಳ ನಿಗ್ರಹಕ್ಕೂ ವಿನಾಶಕ್ಕೂ ಸಂಕಲ್ಪಿಸು. ನಿನ್ನ ತೇಜಸ್ಸು ಮಹತ್ತರವಾಗಿದೆ. ಸಾಕ್ಷಾತ್ ಇಂದ್ರನೇ ಬಂದರೂ ನಿನ್ನ ಮುಂದೆ ನಿಲ್ಲಲು ಸಮರ್ಥನಾಗಲಾರನು. ಮೇಲಾಗಿ ನಿನ್ನ ಪ್ರವೃದ್ಧಿ ಯಲ್ಲಿಯೇ ಸರ್ವದಾ ನಿರತರಾಗಿರುವ ಕೃಷ್ಣ-ಸಾತ್ಯಕಿಯರೂ ನಿನಗಾಗಿ ದೇವತೆ ಗಳೊಡನೆ ಯುದ್ಧಮಾಡಬೇಕಾಗಿ ಬಂದರೂ ವ್ಯಥೆಪಡತಕ್ಕವರಲ್ಲ. ನಿನ್ನ ಯೋಗ-ಕ್ಷೇಮಗಳು ತಮ್ಮ ಯೋಗ-ಕ್ಷೇಮಗಳೆಂದೇ ತಿಳಿದಿರುತ್ತಾರೆ. ಈ ನಮ್ಮ ಅರ್ಜುನನೂ ಸಕಲಾಸ್ತ್ರಗಳನ್ನೂ ಪಡೆದು ಬಲದಲ್ಲಿ ಅಪ್ರತಿಮನೆನಿಸಿದ್ದಾನೆ. ನಾನೂ ಅಪ್ರತಿಮಪರಾಕ್ರಮಿಯೆನಿಸಿದ್ದೇನೆ.

ನಿನ್ನ ಅರ್ಥಸಿದ್ಧಿಗಾಗಿ ಯಾವ ರೀತಿಯಲ್ಲಿ ಯಾದವವೀರರಿಂದ ಸಮೇತ

ನಾದ ಶ್ರೀಕೃಷ್ಣನು ಸರ್ವದಾ ಸಿದ್ಧನಿರುವನೋ–ಅದೇ ರೀತಿಯಲ್ಲಿ ನಾನೂ ಸಿದ್ಧನಾಗಿದ್ದೇನೆ ಮತ್ತು ಬಾಣಪ್ರಯೋಗಕುಶಲನಾದ ನಕುಲ-ಸಹದೇವರೂ ಸಿದ್ಧರಾಗಿದ್ದಾರೆ. ನಿನ್ನ ರಾಜ್ಯಪ್ರಾಪ್ತಿ–ಐಶ್ವರ್ಯಲಾಭಗಳನ್ನೇ ಪ್ರಧಾನ ವನ್ನಾಗಿಟ್ಟುಕೊಂಡು ನಾವು ಶತ್ರುಗಳನ್ನು ವಿನಾಶಮಾಡುತ್ತೇವೆ. ಅನಂತರ ಶಾಂತಿಯನ್ನು ಪಡೆಯುತ್ತೇವೆ."

ಜನಮೇಜಯ! ವರಿಷ್ಠನೂ, ಯಮಧರ್ಮ ನಮಗನೂ, ಧರ್ಮಾರ್ಥಗಳ ರೀತಿ-ನೀತಿಗಳನ್ನು ತಿಳಿದವನೂ, ಓಜಸ್ವಂತನೂ ಆದ ಧರ್ಮರಾಜನು ತನ್ನ ಇತರ ಅನುಜರ ಅಭಿಪ್ರಾಯಗಳನ್ನೂ ತಿಳಿದು ಭೀಮನು ಹೇಳಿದುದು ಸಾಧುವಾಗಿದೆಯೆಂದು ಭಾವಿಸಿ, ಕುಬೇರನು ಅನುಗ್ರಹಿಸಿಕೊಟ್ಟಿದ್ದ ಸೌಧಕ್ಕೆ ಪ್ರದಕ್ಷಿಣ-ನಮಸ್ಕಾರಗಳನ್ನು ಮಾಡಿ ಅನುಜರೊಡನೆಯೂ, ದ್ರೌಪದಿಯೊಡನೆಯೂ, ಲೋಮಶ-ಧೌಮ್ಯರೊಡನೆಯೂ ಕೂಡಿದವನಾಗಿ ದಿವ್ಯಸೌಧವನ್ನು ಬಿಟ್ಟು ಹೊರಟು, ಸಮೀಪದಲ್ಲಿದ್ದ ಇತರ ಅರಮನೆಗಳಿಗೂ ಮತ್ತು ಗೃಹಪಾಲಕರಾದ ರಾಕ್ಷಸರಿಗೂ ನಮಸ್ಕರಿಸಿ, ತಾನು ಆ ಸ್ಥಳಕ್ಕೆ ಹಿಂದೆ ಆಗಮಿಸಿದ್ದ ಹಾದಿಯನ್ನೇ ಹಿಡಿದು ಹಿಂದಿರುಗಿದನು.

ಪರ್ವತವನ್ನು ಇಳಿದನಂತರ ತನ್ನೆದುರಿನಲ್ಲಿದ್ದ ಉನ್ನತವಾದ ಗಂಧ ಮಾದನಪರ್ವತವನ್ನು ಬಾರಿಬಾರಿಗೂ ವೀಕ್ಷಿಸುತ್ತಾ ಮಹಾತ್ಮನಾದ ಶುದ್ಧ ಮನಸ್ಕನಾದ ಧರ್ಮರಾಜನು ಪರ್ವತವನ್ನು ಪ್ರಾರ್ಥಿಸಿದನು :-

**ಸಮಾಪ್ತಕರ್ಮಾ ಸಹಿತಃ ಸುಹೃದ್ಭಿ-**
**ರ್ಜಿತ್ವಾ ಸಪತ್ನಾನ್ಪ್ರತಿಲಭ್ಯ ರಾಜ್ಯಮ್ ।**
**ಶೈಲೇನ್ದ್ರ ಭೂಯಸ್ತಪಸೇ ಜಿತಾತ್ಮಾ**
**ದ್ರಷ್ಟಾ ತವಾಸ್ಮೀತಿ ಮತಿಂ ಚಕಾರ ॥೨೧॥**

"ಪರ್ವತಶ್ರೇಷ್ಠನೇ! ನಾನು ನನ್ನ ಅನುಜರೊಡನೆ ಉಳಿದಿರುವ ವನವಾಸದ ದಿನಗಳನ್ನೂ ಮತ್ತು ಅಜ್ಞಾತವಾಸವನ್ನೂ ಮುಗಿಸಿ, ಮಿತ್ರರೊಡಗೂಡಿ ಶತ್ರುಗಳನ್ನು ಸಂಹರಿಸಿ ರಾಜ್ಯವನ್ನು ಪಡೆದು ರಾಜ್ಯಭಾರಮಾಡಿ ಕೃತಕೃತ್ಯನಾಗಿ, ಮುಪ್ಪಿನಲ್ಲಿ ಪುನಃ ನಿನ್ನಲ್ಲಿಗೆ ಬಂದು ಜಿತೇಂದ್ರಿಯನಾಗಿ ತಪಸ್ಸು ಮಾಡುವ ಇಚ್ಛೆಯಿಂದಿರುವೆನು. ನನಗೆ ಅನುಮತಿಯನ್ನು ನೀಡು ಮಹಾನುಭಾವ!"

ಹೀಗೆ ಪ್ರಾರ್ಥಿಸಿ ಪರ್ವತರಾಜನಿಗೆ ನಮಸ್ಕರಿಸಿ ಧರ್ಮರಾಜನು ಮುಂದೆ ಪ್ರಯಾಣಮಾಡಲು ನಿಶ್ಚಯಿಸಿದವನಾಗಿ ತನ್ನ ಅನುಜರೊಡನೆಯೂ ಬ್ರಾಹ್ಮಣರೊಡನೆಯೂ, ದ್ರೌಪದಿಯೊಡನೆಯೂ ಕೂಡಿದವನಾಗಿ ಅದೇ ಮಾರ್ಗದಲ್ಲಿ ಹಿಂದಕ್ಕೆ ಪ್ರಯಾಣಮಾಡಿದನು. ಯಥಾಪೂರ್ವವಾಗಿ ಪರ್ವತದ ಕಣಿವೆಗಳಲ್ಲಿ ಘಟೋತ್ಕಚನೂ ಮತ್ತು ಅವನ ಅನುಯಾಯಿಗಳೂ ಧರ್ಮಾದಿಗಳನ್ನು ಎತ್ತಿಕೊಂಡು ಹೊರಟರು. ಪಾಂಡವರು ಪ್ರಯಾಣ ಹೊರಟ ಸಮಯದಲ್ಲಿ ಲೋಮಶಮಹರ್ಷಿಗಳು ತಾವು ಆಗಮಿ ಸಿದ ಕಾರ್ಯವು ಮುಗಿಯಿತೆಂದು ಭಾವಿಸಿ–ತಂದೆಯಾದವನು ಮಗನಿಗೆ ಹಿತೋಪದೇಶವನ್ನು ಮಾಡುವಂತೆ–ಧರ್ಮರಾಜನಿಗೆ ನಾಲ್ಕಾರು ನೀತಿ ಯುಕ್ತವಾದ ಮಾತುಗಳನ್ನು ಹೇಳಿ ಸಂತುಷ್ಟಹೃದಯರಾಗಿ ಸ್ವರ್ಗಲೋಕಕ್ಕೆ ಪ್ರಯಾಣಮಾಡಿದರು. ಮಹರ್ಷಿಗಳಾದ ಆರ್ಷ್ಟಿಷೇಣರಿಂದಲೂ ಪಾಂಡವರು ಅನುಶಿಷ್ಟರಾಗಿ ಅನೇಕಾನೇಕ ತೀರ್ಥಗಳನ್ನೂ, ಆಶ್ರಮಗಳನ್ನೂ, ಸರೋವರ ಗಳನ್ನೂ ಸಂದರ್ಶಿಸುತ್ತಾ ಪ್ರಯಾಣಮಾಡಿದರು.”

೧೭೬ನೆಯ ಅಧ್ಯಾಯವು ಮುಗಿಯಿತು.

೧೭೭ನೆಯ ಅಧ್ಯಾಯ ಆಜಗರಪರ್ವ (ಮುಂದುವರಿದಿದೆ.)

## ಪಾಂಡವರು ಗಂಧಮಾದನಪರ್ವತದಿಂದ ಬದರಿಕಾಶ್ರಮದ ಮೂಲಕವಾಗಿ ಸುಬಾಹುನಗರ ಮತ್ತು ವಿಶಾಖಯೂಪವನ ಗಳನ್ನು ಸಂದರ್ಶಿಸಿ ಹೋಗುತ್ತಿರುವಾಗ ಸರಸ್ವತೀತೀರ ದಲ್ಲಿದ್ದ ದ್ವೈತವನವನ್ನು ಪ್ರವೇಶಿಸಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

“ಸಣ್ಣ-ಸಣ್ಣ ಚಿಲುಮೆಗಳಿಂದಲೂ ನದಿಗಳಿಂದಲೂ ಅಲಂಕೃತ ವಾಗಿದ್ದ, ದಿಗ್ಗಜಗಳಿಂದಲೂ ಕಿನ್ನರರಿಂದಲೂ ಪಕ್ಷಿಗಳಿಂದಲೂ ಪರಿಶೋಭಿ ಸುತ್ತಿದ್ದ, ಅತ್ಯಂತಸುಖಕರವಾದ ನಿವಾಸಸ್ಥಾನವಾಗಿದ್ದ ಕುಬೇರನ ಪರ್ವತ ಶಿಖರವನ್ನು (ಗಂಧಮಾದನಪರ್ವತವನ್ನು) ಬಿಟ್ಟುಬಂದುದರಿಂದ ಪಾಂಡವ ರಿಗೆ ಸಂತೋಷವಾಗಲಿಲ್ಲ. ಆದರೆ ಮರುಕ್ಷಣದಲ್ಲಿಯೇ ಕುಬೇರನಿಗೆ

ಬಹುಪ್ರಿಯವಾಗಿದ್ದ, ಕಪ್ಪಾದ ಮೋಡಗಳಿಂದ ಪ್ರಕಾಶಮಾನವಾಗಿ ಕಾಣುತ್ತಿದ್ದ ಕೈಲಾಸಪರ್ವತವನ್ನು ಕಂಡೊಡನೆಯೇ ಅವರ ಮನಸ್ಸು ಆಹ್ಲಾದಿತವಾಯಿತು.

ಧನುರ್ಬಾಣಗಳನ್ನೂ ಮತ್ತು ಕತ್ತಿಗಳನ್ನೂ ಹಿಡಿದಿದ್ದ ನರಶ್ರೇಷ್ಠರಾದ ಪಾಂಡವವೀರರು ಪರ್ವತದಲ್ಲಿನ ಎತ್ತರವಾದ ಪ್ರದೇಶಗಳನ್ನೂ, ಅಲ್ಲಲ್ಲಿದ್ದ ಸಿಂಹಗಳ ಗುಹೆಗಳನ್ನೂ, ಮಾಲಾರೂಪವಾದ ಸಣ್ಣ-ಸಣ್ಣ ಗುಡ್ಡಗಳನ್ನೂ, ಅನೇಕಾನೇಕ ಪ್ರಪಾತಗಳನ್ನೂ, ಗುಹಾ-ದರೀ-ದುರ್ಗಗಳನ್ನೂ, ಮಹಾರಣ್ಯ ಗಳನ್ನೂ, ಅರಣ್ಯಗಳಲ್ಲಿದ್ದ ಅಗಣಿತವಾದ ಜಿಂಕೆ-ಕರಡಿ-ಹುಲಿ-ಆನೆಗಳನ್ನೂ, ನಾನಾವಿಧವಾದ ಬಣ್ಣಬಣ್ಣಗಳ ಪಕ್ಷಿಗಳನ್ನೂ ವೀಕ್ಷಿಸುತ್ತಾ ಪ್ರಯಾಣ ಮಾಡುತ್ತಿದ್ದರು. ಅನೇಕನದಿಗಳನ್ನೂ, ಸರೋವರಗಳನ್ನೂ ದಾಟಿದರು. ನದಿ ಗಳ ಮತ್ತು ಸರೋವರಗಳ ತೀರದಲ್ಲಿ ಬೆಟ್ಟದ ಗುಹೆಗಳಲ್ಲಿ ಅವರು ರಾತ್ರಿಯ ವೇಳೆಯಲ್ಲಿ ತಂಗುತ್ತಿದ್ದರು. ದುರ್ಗಮವಾದ ಆ ಹಾದಿಯಲ್ಲಿ ಪ್ರಯಾಣ ಮಾಡಿ ಅಚಿಂತ್ಯರೂಪದಿಂದ ಕೂಡಿದ್ದ ಕೈಲಾಸಪರ್ವತವನ್ನೂ ದಾಟಿ ಬಂದ ಪಾಂಡವರು ಅತ್ಯಂತಮನೋಹರವಾಗಿದ್ದ ವೃಷಪರ್ವವನ್ನು ಆಶ್ರಮಕ್ಕೆ ಪುನಃ ಆಗಮಿಸಿದರು. ರಾಜನಾದ ವೃಷಪರ್ವವನ್ನು ಸೇರಿ ಅವನಿಂದ ಸತ್ಕೃತರಾದ ಪಾಂಡವರು ಅಲ್ಲಿಯೇ ಅಂದು ರಾತ್ರಿ ವಿಶ್ರಮಿಸಿಕೊಂಡು, ಕುಶಲ ಪ್ರಶ್ನೆಗಳಾದನಂತರ ವೃಷಪರ್ವನೊಡನೆ ಗಂಧಮಾದನಪರ್ವತದಲ್ಲಿ ನಡೆದ ವಿಷಯಗಳೆಲ್ಲವನ್ನೂ ಹೇಳಿದರು. ದೇವತೆಗಳಿಂದಲೂ, ಮಹರ್ಷಿ ಗಳಿಂದಲೂ ಸಂಸೇವ್ಯಮಾನವಾಗಿದ್ದ ವೃಷಪರ್ವನ ಆಶ್ರಮದಲ್ಲಿ ಪಾಂಡವರು ಒಂದು ರಾತ್ರಿ ತಂಗಿದ್ದು, ಬೆಳಗಾಗುತ್ತಲೇ ಸ್ನಾನ-ಸಂಧ್ಯಾದಿಗಳನ್ನು ಮುಗಿಸಿ ಕೊಂಡು ಪ್ರಯಾಣಹೊರಟು, ವಿಶಾಲ–ಎಂಬ ಹೆಸರಿನ ಎಲಚೀಗಿಡದ ಬಳಿಗೆ (ವಿಶಾಲಾಬದರಿಕಾಶ್ರಮಕ್ಕೆ) ಬಂದು ಅಲ್ಲಿ ಸ್ವಲ್ಪಕಾಲ ತಂಗಿದರು. ಅಲ್ಲಿಂದ ಸಮೀಪದಲ್ಲಿದ್ದ ನರ-ನಾರಾಯಣಾಶ್ರಮಕ್ಕೆ ಬಂದು, ಅಲ್ಲಿ ಯಾವ ವಿಧವಾದ ಆತಂಕವೂ ಇಲ್ಲದೇ ಬಹಳ ದಿನಗಳವರೆಗೆ ವಾಸವಾಗಿದ್ದರು. ಆ ನರ-ನಾರಾಯಣಾಶ್ರಮದ ಸಮೀಪದಲ್ಲಿ ಕುಬೇರನಿಗೆ ಅತಿಪ್ರಿಯವಾದ, ಸುರರಿಂದಲೂ-ಸಿದ್ಧರಿಂದಲೂ ಸಂಸೇವ್ಯಮಾನವಾದ ಸರೋವರವಿದ್ದಿತು. ಸುಂದರವಾದ ಆ ಸರೋವರವನ್ನು ವೀಕ್ಷಿಸುತ್ತಾ ಪಾಂಡವರು ದಿನಗಳನ್ನು

ಸುಖದಿಂದ ಕಳೆದರು. ಬ್ರಹ್ಮರ್ಷಿಗಳು ನಂದನವನದಲ್ಲಿ ಯಾವ ರೀತಿಯಲ್ಲಿ ನಿರಾತಂಕವಾಗಿ ಬ್ರಹ್ಮಾನಂದವನ್ನು ಅನುಭವಿಸುತ್ತಾ ನಿತ್ಯ ಸಂತುಷ್ಟರಾಗಿರುವರೋ–ಅದೇ ರೀತಿಯಲ್ಲಿ ಪಾಂಡವರೂ ದಿವ್ಯಸರೋವರದಲ್ಲಿ ಮಿಂದು ಅದರ ತೀರದಲ್ಲಿ ಆನಂದಭರಿತರಾಗಿರುತ್ತಿದ್ದರು. ಪರಮಪವಿತ್ರವಾದ ಬದರಿಕಾಶ್ರಮದ ಪ್ರದೇಶದಲ್ಲಿ ಒಂದು ತಿಂಗಳ ಕಾಲ ತಂಗಿದ್ದು ಅನಂತರದಲ್ಲಿ ತಾವು ಬಂದ ಮಾರ್ಗದಲ್ಲಿಯೇ ಹಿಂದಿರುಗಿ ಪ್ರಯಾಣಮಾಡುತ್ತಾ ಅಲ್ಲಿಂದ ಮುಂದೆ ಕಿರಾತರಾಜನಾದ ಸುಬಾಹುವಿನ ದೇಶದ ಕಡೆಗೆ ಪ್ರಯಾಣ ಮಾಡಿದರು. ಆ ಮಾರ್ಗದಲ್ಲಿ ಪಾಂಡವರು ಕುಲಿಂದದೇಶದ ತುಷಾರ-ದರದ ಮೊದಲಾದ ಸಂಪತ್ಸಮೃದ್ಧವಾಗಿದ್ದ ಪ್ರದೇಶಗಳನ್ನೂ ದಾಟಿ ಅತಿದುರ್ಗಮವಾದ ಹಿಮವತ್ಪರ್ವತದ ಕಣಿವೆಗಳ ಮೂಲಕವಾಗಿ ಸುಬಾಹುವಿನ ರಾಜ್ಯವನ್ನು ಸೇರಿದರು. ಪಾಂಡವರು ಪುನಃ ತನ್ನ ರಾಜ್ಯಕ್ಕೆ ಆಗಮಿಸಿದರೆಂಬ ವಾರ್ತೆಯನ್ನು ಚಾರರ ಮೂಲಕ ತಿಳಿದ ಸುಬಾಹುವು ಆನಂದಭರಿತನಾಗಿ ಪಾಂಡವರನ್ನು ಎದುರ್ಗೊಂಡು ಸ್ವಾಗತಿಸಲು ಪರಿವಾರಸಮೇತನಾಗಿ ಪಟ್ಟಣದ ಎಲ್ಲೆಯ ಬಳಿಗೆ ಬಂದನು. ಸುಬಾಹುವಿನ ಆಶ್ರಮದಲ್ಲಿ ಬಿಟ್ಟು ಹೋಗಿದ್ದ ವಿಶೋಕನೇ ಮೊದಲಾದ ಸೂತರೂ, ಇಂದ್ರಸೇನನೇ ಮೊದಲಾದ ಸೇವಕರೂ, ಪರಿಚಾರಕರೂ, ದಾಸಿಯರೂ, ಅಡಿಗೆಯವರೂ ಪುನಃ ಪಾಂಡವರನ್ನು ಸೇರಿದರು. ಧರ್ಮಜನಿಗೂ, ಸುಬಾಹುವಿಗೂ ಪರಸ್ಪರ ಸ್ನೇಹಪರವಾದ ಸಂಭಾಷಣೆಗಳಾದನಂತರ ಪರಮತುಷ್ಟರಾದ ಪಾಂಡವರು ಸುಬಾಹುವಿನ ಆಶ್ರಮದಲ್ಲಿ ಸುಖವಾಗಿ ಒಂದು ರಾತ್ರಿಯನ್ನು ಕಳೆದರು. ಬಳಿಕ ತಮ್ಮ ಸೂತ-ರಥಸಹಿತವಾದ ಪರಿವಾರವೆಲ್ಲವನ್ನೂ ಕರೆದುಕೊಂಡು ಹೊರಟರು. ಅಲ್ಲಿಯವರೆಗೆ ತಮ್ಮನ್ನು ಕರೆತಂದ ಘಟೋತ್ಕಚನನ್ನೂ ಮತ್ತು ಅವನ ಅನುಯಾಯಿಗಳನ್ನೂ ಆದರಪೂರ್ವಕವಾಗಿ ಕಳುಹಿಸಿ ಕೊಟ್ಟರು.

ಅನಂತರದಲ್ಲಿ ಪರಿವಾರಸಮೇತರಾದ ಪಾಂಡವರು ಯಮುನಾ ನದಿಯ ಉಗಮಸ್ಥಾನವಾದ ಯಾಮುನನೆಂಬ ಪರ್ವತದ ಬಳಿಗೆ ಆಗಮಿಸಿದರು. ಆ ಪರ್ವತದ ಮಧ್ಯದಲ್ಲಿ ಅನೇಕಪ್ರವಾಹಗಳಿದ್ದುವು. ಮಾಸಲುಕೆಂಪು

ಬಣ್ಣದ ಪರ್ವತಶ್ರೇಣಿಗಳಿದ್ದುವು. ಅರುಣವರ್ಣದ ಆ ಪರ್ವತಶ್ರೇಣಿಗಳ ಮೇಲೆ ಬಿಳುಪಾದ ಹಿಮವು ಮುಚ್ಚಿಕೊಂಡಿರುವುದನ್ನು ನೋಡಿದರೆ ಆ ಪರ್ವತವು ಶ್ವೇತವಸ್ತ್ರವನ್ನು ಉತ್ತರೀಯವನ್ನಾಗಿ ಹೊದೆದುಕೊಂಡಿರುವಂತೆ ಭಾಸವಾಗುತ್ತಿತ್ತು. ಪಾಂಡವರು ಆ ಪರ್ವತವನ್ನು ದಾಟಿ ವಿಶಾಖಯೂಪ ವೆಂಬ ಪವಿತ್ರಸ್ಥಳಕ್ಕೆ ಹೋದರು. ಆ ವನವು ಕುಬೇರನ ಚೈತ್ರರಥೋ ದ್ಯಾನವನದಂತೆ ಮನೋಹರವಾಗಿದ್ದಿತು. ವರಾಹಗಳಿಂದಲೂ, ಜಿಂಕೆ ಗಳಿಂದಲೂ, ಅನೇಕವಿಧವಾದ ಮೃಗ-ಪಕ್ಷಿಗಳಿಂದಲೂ ಕೂಡಿದ್ದ ವಿಶಾಖ ಯೂಪವೆಂಬ ಆ ಅರಣ್ಯದಲ್ಲಿ ಪಾಂಡವರು ಬೇಟೆಯಾಡುವುದನ್ನೇ ಮುಖ್ಯ ವೃತ್ತಿಯನ್ನಾಗಿ ಇಟ್ಟುಕೊಂಡು ಒಂದು ವರ್ಷಕಾಲ ಸುಖವಾಗಿದ್ದರು.

ಆ ಅರಣ್ಯಕ್ಕೆ ಸಮೀಪದಲ್ಲಿದ್ದ ಒಂದು ಪರ್ವತದ ಕಂದರದಲ್ಲಿ ಮಹಾ ಬಲದಿಂದ ಕೂಡಿದ್ದ, ಹಸಿವಿನಿಂದ ಬಳಲಿದ್ದ ಮತ್ತು ಭಯಂಕರವಾದ ಮೃತ್ಯುವಿನಂತೆ ಕಾಣುತ್ತಿದ್ದ ಒಂದು ಹೆಬ್ಬಾವು ಆಹಾರವನ್ನು ಹುಡುಕು ತ್ತಲಿದ್ದಿತು. ಆ ವೇಳೆ ಸರಿಯಾಗಿ ಭೀಮನು ಬೇಟೆಯಾಡುವು ಕಾರಣದಿಂದ ಆ ಸರ್ಪವಿದ್ದ ಪ್ರದೇಶಕ್ಕೆ ಹೋದನು. ಒಡನೆಯೇ ಆ ಮಹಾಸರ್ಪವು ತನ್ನ ದೇಹದಿಂದ ಭೀಮನನ್ನು ಸುತ್ತಿಕೊಂಡು ಹಗ್ಗದಿಂದ ಬಿಗಿಯುವ ರೀತಿಯಲ್ಲಿ ಬಲವಾಗಿ ಬಿಗಿಯಿತು. ಭೀಮನು ಬಹಳ ಸಂಕಟಪಟ್ಟನು. ಸರ್ಪದ ಹಿಡಿತದಿಂದ ಬಿಡಿಸಕೊಳ್ಳಲು ಸಾಧ್ಯವಾಗಲೇ ಇಲ್ಲ. ಭೀಮಸೇನನು ಪ್ರಜ್ಞಾಹೀನನಾದನು. ಈ ಸಮಯಕ್ಕೆ ಸರಿಯಾಗಿ ಮಹಾತ್ಮನಾದ ಯುಧಿಷ್ಠಿರನು ಅಲ್ಲಿಗೆ ಆಗಮಿಸಿ ಭೀಮಸೇನನ ರಕ್ಷಕನಾದನು. ಯುಧಿಷ್ಠಿರನು ಧರ್ಮಪ್ರವಚನದಿಂದ ಭೀಮನನ್ನು ಸರ್ಪದ ಹಿಡಿತದಿಂದ ವಿಮೋಚನೆಮಾಡಿದನು. ಹಿಂದೆ ಹೇಳಿದಂತೆ ವಿಶಾಖಯೂಪಾರಣ್ಯದಲ್ಲಿ ಒಂದು ವರ್ಷವನ್ನು ಕಳೆದು ಮುಂದೆ ಪ್ರಯಾಣಮಾಡುತ್ತಾ ತಪಸ್ಸಿ ನಲ್ಲಿಯೂ ಮತ್ತು ಧನುರ್ವಿದ್ಯೆಯಲ್ಲಿಯೂ ಸಂಪೂರ್ಣವಾದ ಆಸಕ್ತಿಯನ್ನು ಹೊಂದಿದ್ದ ಪಾಂಡವರು, ಮರುಧನ್ವವನ್ನು ದಾಟಿ ಸರಸ್ವತೀನದಿಯ ತೀರಕ್ಕೆ ಹೋದರು. ಅಲ್ಲಿ ಕೆಲವು ದಿನಗಳಿದ್ದು ಆ ತೀರಪ್ರದೇಶದಲ್ಲಿಯೇ ಪ್ರಯಾಣ ಮಾಡುತ್ತಾ ದ್ವೈತವನವನ್ನು ಸೇರಿದರು. ತಪೋದಮಾಚಾರಸಮಾಧಿ

ಯುಕ್ತರಾಗಿದ್ದ, ಬಹುವೃದ್ಧರಾಗಿದ್ದ ತಪಸ್ವಿಗಳು ದರ್ಭಾಸನಗಳನ್ನೂ, ಉದಕಪಾತ್ರೆಗಳನ್ನೂ ಕೈಯಲ್ಲಿ ಹಿಡಿದುಕೊಂಡು ಪಾಂಡವರನ್ನು ಎದುರುಗೊಂಡರು. ಅನೇಕವರ್ಷಗಳ ಹಿಂದೆ ನೋಡಿದ್ದ ಪಾಂಡವರನ್ನು ಪುನಃ ಸಂದರ್ಶಿಸಿದ ಮಹರ್ಷಿಗಳ ಆನಂದಕ್ಕೆ ಪಾರವೇ ಇರಲಿಲ್ಲ. ಪಾಂಡವರೂ ಮಹರ್ಷಿಗಳಿಗೆ ಯಥಾವಿಧಿಯಾಗಿ ನಮಸ್ಕರಿಸಿದರು. ಸರಸ್ವತೀತೀರದಲ್ಲಿದ್ದ ದ್ವೈತವನದಲ್ಲಿ ಪ್ಲಕ್ಷ, ಅಕ್ಷ, ರೌಹೀತಕ, ವೇತಸ, ಬದರಿ, ಖಾದಿರ, ಶಿರೀಷ, ಬಿಲ್ವ, ಇಂಗುದ, ಕರೀರ, ಪೀಲು, ಶಮೀ-ಮುಂತಾದ ನಯನಮನೋಹರವಾಗ ಅನೇಕವೃಕ್ಷಗಳಿದ್ದುವು. ಯಕ್ಷ-ಗಂಧರ್ವ-ಮಹರ್ಷಿಗಳಿಗೂ ಪ್ರಿಯವಾಗಿದ್ದ ಮತ್ತು ದೇವತೆಗಳಿಗೂ ಆವಾಸಸ್ಥಾನವಾಗಿದ್ದ ಸರಸ್ವತೀನದಿಯ ತೀರಪ್ರದೇಶದಲ್ಲಿ ರಾಜಪುತ್ರರಾದ ಪಾಂಡವರು ಬಹಳ ಸುಖದಿಂದ ಕಾಲ ಕಳೆಯುತ್ತಿದ್ದರು."

೧೭೭ನೆಯ ಅಧ್ಯಾಯವು ಮುಗಿಯಿತು.

೧೭೮ನೆಯ ಅಧ್ಯಾಯ ಆಜಗರಪರ್ವ (ಮುಂದುವರಿದಿದೆ.)

## ಭೀಮನು ಬೇಟೆಯಾಡುತ್ತಿದ್ದ ಕಾಲದಲ್ಲಿ ಅಜಗರಸರ್ಪಕ್ಕೆ ಸಿಕ್ಕಿಬಿದ್ದುದು

ಭೀಮನು ಸರ್ಪದಿಂದ ಬಂಧಿತನಾದನೆಂದು ತಿಳಿದು ಜನಮೇಜಯನಿಗೆ ಪರಮಾಶ್ಚರ್ಯವಾಯಿತು. ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

"ಬ್ರಾಹ್ಮಣೋತ್ತಮರೇ! ಅಂತಹ ಮಹಾಪರಾಕ್ರಮಿಯಾದ, ಹತ್ತು ಸಾವಿರ ಆನೆಗಳ ಬಲದಿಂದ ಕೂಡಿದ್ದ ಭೀಮಸೇನನು ಸರ್ಪವೊಂದಕ್ಕೆ ಸಿಕ್ಕಿ ಭಯಪಟ್ಟುದೇಕೆ? ಸರ್ಪವು ಪರ್ವತೋಪಮನಾದ ಭೀಮನನ್ನು ಹೇಗೆ ಬಂಧಿಸಿತು? ಪುಲಸ್ತ್ಯಕುಲೋತ್ಪನ್ನನಾದ ಕುಬೇರನನ್ನೇ ಯುದ್ಧಕ್ಕೆ ಆಮಂತ್ರಿಸಿದ ಮಹಾವೀರನವನು. ಸರೋವರದಲ್ಲಿ ಸೌಗಂಧಿಕಪುಷ್ಪಗಳನ್ನು ತರಲು ಹೋದಾಗ ಪ್ರತಿಭಟಿಸಿ ಬಂದ ಯಕ್ಷ-ರಾಕ್ಷಸರೆಲ್ಲರನ್ನೂ ನಿರ್ಮೂಲನ ಮಾಡಿದ ವೀರಾಗ್ರಣಿಯು. ಶತ್ರುಮರ್ದನನಾದ ಘೋರಪರಾಕ್ರಮಿಯಾದ ಅಂತಹ ಭೀಮಸೇನನನ್ನು ನೀವು ಭೀತನಾದನೆಂದೂ, ಆಪತ್ತಿಗೆ ಗುರಿಯಾದನೆಂದೂ ಹೇಳುತ್ತಿರುವಿರಲ್ಲಾ! ಈ ಸಂಗತಿಯು ನನಗೆ ಬಹಳ ಆಶ್ಚರ್ಯವೆನಿ

ಸಿದೆ. ಈ ವಿಚಿತ್ರಸನ್ನಿವೇಶವನ್ನು ವಿಸ್ತಾರವಾಗಿಯೇ ಕೇಳಿ ತಿಳಿದುಕೊಳ್ಳ ಬೇಕೆಂಬ ಆಶಯದಿಂದಿರುವೆನು. ದಯಮಾಡಿ ಹೇಳಿರಿ."

"ಜನಮೇಜಯ! ವೃಷಪರ್ವನ ಆಶ್ರಮದಿಂದ ಹಿಂದಿರುಗಿದ ಪಾಂಡವರು ಅತ್ಯಂತವಿಸ್ಮಯಕಾರಕವಾದ ವಿಶಾಖಯೂಪವೆಂಬ ಅರಣ್ಯದಲ್ಲಿ ವಾಸಮಾಡುತ್ತಿರುವಾಗ–ಒಂದು ದಿನ ಧನುಷ್ಪಾಣಿಯಾದ ಮತ್ತು ಖಡ್ಗವನ್ನು ಧರಿಸಿದ್ದ ವೃಕೋದರನು ಸ್ವೇಚ್ಛೆಯಿಂದ ಸಂಚರಿಸುತ್ತಿದ್ದನು. ದೇವ-ಗಂಧರ್ವ ಸೇವಿತವಾದ ರಮ್ಯವಾದ ಆ ಅರಣ್ಯವನ್ನು ನೋಡಿ ಆನಂದಿಸುತ್ತಿದ್ದನು. ದೇವರ್ಷಿಗಳಿಂದಲೂ, ಸಿದ್ಧ-ಚಾರಣರಿಂದಲೂ, ಗಂಧರ್ವಾಪ್ಸರೆಯರಿಂದಲೂ ಸಂಸೇವ್ಯಮಾನವಾದ ಹಿಮವತ್ಪರ್ವತದ ಶುಭಪ್ರದವಾದ ತಪ್ಪಲುಗಳನ್ನು ನೋಡಿ ಪ್ರಮುದಿತನಾಗುತ್ತಿದ್ದನು. ಅಲ್ಲಿದ್ದ ವೃಕ್ಷಗಳಲ್ಲಿ ಕುಳಿತು ಮಧುರವಾಗಿ ನಿನಾದಮಾಡುತ್ತಿದ್ದ ಚಕೋರ, ಚಕ್ರವಾಕ, ಜೀವ ಜೀವಕ, ಕೋಗಿಲೆ, ಭೃಂಗರಾಜ–ಇವೇ ಮುಂತಾದ ಪಕ್ಷಿಗಳ ಗಾನವನ್ನು ಕೇಳಿ ಆನಂದಿಸುತ್ತಿದ್ದನು. ಸರ್ವಕಾಲದಲ್ಲಿಯೂ ಪುಷ್ಪ-ಫಲಯುಕ್ತವಾಗಿರುತ್ತಿದ್ದ, ಹಿಮಸ್ಪರ್ಶದಿಂದ ಅತ್ಯಂತ ಕೋಮಲವಾಗಿದ್ದ, ವಿಶಾಲವಾಗಿದ್ದು ಬಹುಚ್ಛಾಯೆಯಿಂದ ಕೂಡಿದ್ದ ವೃಕ್ಷಗಳ ಸಮೂಹವನ್ನು ನೋಡಿ ಹಿರಿಹಿಗ್ಗುತ್ತಿದ್ದನು. ಪರ್ವತದಿಂದ ಪ್ರವಹಿಸುತ್ತಿದ್ದ ಗಿರಿನದಿಗಳು ವೈಡೂರ್ಯಮಣಿಗಳಂತೆ ನೀರಿನಿಂದ ಪೂರ್ಣವಾಗಿದ್ದುವು. ಆ ನದಿಗಳ ನೀರು ಹಿಮಸದೃಶವಾಗಿ ಕಾಣುತ್ತಿದ್ದಿತು. ಆ ನೀರಿನಲ್ಲಿ ಸಾವಿರಾರು ಹಂಸ-ಕಾರಂಡವಾದಿ ಪಕ್ಷಿಗಳಿದ್ದು ನಯನ ಮನೋಹರವಾಗಿ ವಿಹರಿಸುತ್ತಿದ್ದುವು. ಆ ಸುಂದರದೃಶ್ಯವನ್ನು ನೋಡಿ ಆನಂದಿಸುತ್ತಾ ಭೀಮನು ಮುಂದೆ ಮುಂದೆ ಧಾವಿಸುತ್ತಿದ್ದನು. ಗಗನಚುಂಬಿಗಳಾದ ದೇವದಾರುವೃಕ್ಷಗಳು ಮೇಘಗಳಿಗೆ ಹಾಕಿರುವ ಬಲೆಗಳೋಪಾದಿಯಲ್ಲಿ ಶೋಭಿಸುತ್ತಿದ್ದುವು. ಹರಿಚಂದನ, ತುಂಗ, ಕಾಲೀಯಕವೇ ಮುಂತಾದ ಅನೇಕವೃಕ್ಷಗಳು ಆ ಕಾಡಿನಲ್ಲಿದ್ದುವು. ಮಹಾಬಲಶಾಲಿಯಾದ ಭೀಮಸೇನನು ಕೈಯ್ಯಲ್ಲಿ ಧನುರ್ಬಾಣಗಳನ್ನು ಹಿಡಿದು ಪ್ರಕೃತಿಸೌಂದರ್ಯ ವನ್ನು ವೀಕ್ಷಿಸುತ್ತಾ ಕಣ್ಣಿಗೆ ಬಿದ್ದ ಹರಿಣ-ಸಾರಂಗಾದಿಗಳನ್ನು ಅಟ್ಟಿಸಿಕೊಂಡು ಹೋಗಿ ವಿಷಲೇಪವಾಗದಿರುವ ಬಾಣಗಳಿಂದ ಗುರಿಯಿಟ್ಟು ಕೊಲ್ಲುತ್ತಿದ್ದನು.

ಮಹಾಬಲಶಾಲಿಯೆಂದು ವಿಖ್ಯಾತನಾದ, ನೂರು ಆನೆಗಳ ಬಲವನ್ನು

ಹೊಂದಿದ್ದ ಭೀಮಸೇನನು ದೊಡ್ಡ ಕಾಡುಹಂದಿಗಳನ್ನೂ, ಮೃಗಗಳನ್ನೂ, ಕೋರೆದಾಡೆಗಳಿರುವ ಅನೇಕದುಷ್ಟಮೃಗಗಳನ್ನೂ, ಕಾಡುಕೋಣಗಳನ್ನೂ ಬಾಹುಬಲದಿಂದಲೇ ಸಂಹಾರಮಾಡುತ್ತಾ ಮುಂದೆ-ಮುಂದೆ ಹೋಗುತ್ತಿದ್ದನು. ಹಿಂದೆಯೇ ಹೇಳಿದಂತೆ ನೂರು ಆನೆಗಳ ಬಲದಿಂದ ಕೂಡಿದ್ದ, ನೂರು ಮಂದಿ ಮಾನವವೀರರು ಎದುರಾಗಿ ಬಂದರೂ ಎದುರಿಸುವ ಸಾಮರ್ಥ್ಯವಿದ್ದ, ಸಿಂಹ-ಶಾರ್ದೂಲಗಳಿಗೆ ಸದೃಶವಾದ ಬಲವನ್ನು ಹೊಂದಿದ್ದ, ಮಹಾಬಾಹುವಾದ ಭೀಮಸೇನನು ಹಾದಿಯಲ್ಲಿ ಸಿಕ್ಕಿದ ಅನೇಕಾನೇಕ ವೃಕ್ಷಗಳನ್ನು ಮೂಲಸಮೇತವಾಗಿ ಕಿತ್ತು ನೆಲದ ಮೇಲೊಮ್ಮೆ ಅಪ್ಪಳಿಸಿ ಆ ಅರಣ್ಯದ ನಾಲ್ಕು ಕಡೆಗಳಿಂದಲೂ ಪ್ರತಿಧ್ವನಿಯು ಬರುವಂತೆ ಮಾಡುತ್ತಿದ್ದನು. ಅವನು ಗರ್ಜನೆಮಾಡುತ್ತಾ ಇಡುತ್ತಿದ್ದ ಕಾಲುಗಳ ಸಪ್ಪಳವು ಭೂಮಿಯನ್ನೇ ನಡುಗಿಸುವುದಾಗಿದ್ದಿತು. ಒಮ್ಮೆ ಉತ್ಸಾಹದಿಂದಿದ್ದ ಭೀಮಸೇನನು ತನ್ನೆರಡು ತೋಳುಗಳನ್ನೂ ಕೈಗಳಿಂದ ತಟ್ಟಿಕೊಳ್ಳುವನು. ವೀರಘೋಷಣೆಯನ್ನು ಮಾಡುವನು. ಮತ್ತೊಮ್ಮೆ ಗಟ್ಟಿಯಾಗಿ ಚಪ್ಪಾಳೆತಟ್ಟುವನು. ಒಮ್ಮೆ ಬಹುವೇಗವಾಗಿ ಹೋಗುವನು. ಅವನಿಗೆ ಭಯವೆಂಬುದು ಮನಸ್ಸಿನಲ್ಲಿಯೂ ಸುಳಿದಾಡುತ್ತಿರಲಿಲ್ಲ. ಬಲದರ್ಪದಿಂದ ಕೂಡಿದ್ದ ಭೀಮಸೇನನು ಒಂದೊಂದು ಸಲ ಇಲ್ಲಿಂದ ಲ್ಲಿಗೆ ಹಾರಿಬಿಡುವನು. ವಾಯುಸುತನ ಸಿಂಹನಾದಗಳನ್ನು ಕೇಳಿದೊಡನೆಯೇ ಅರಣ್ಯದಲ್ಲಿ ಮಹಾಬಲಶಾಲಿಗಳೆನಿಸಿದ ದುಷ್ಟಮೃಗಗಳಾದ ಸಿಂಹ-ಗಜಗಳೂ ತಮ್ಮ ತಮ್ಮ ಸ್ಥಾನಗಳನ್ನು ತೊರೆದುಹೋಗಿಬಿಡುತ್ತಿದ್ದುವು. ಬೇಟೆಯಾಡುವುದರಲ್ಲಿ ಬಹಳ ಉತ್ಸುಕನಾಗಿದ್ದ ಭೀಮಸೇನನು ಒಮ್ಮೊಮ್ಮೆ ಓಡುವನು ; ಒಮ್ಮೊಮ್ಮೆ ನಿಲ್ಲುವನು ; ಮತ್ತೊಮ್ಮೆ ಕುಳಿತುಕೊಳ್ಳುವನು. ಅವನನ್ನು ನೋಡಿ ಕೆಲವು ಪ್ರಾಣಿಗಳು ಓಡುತ್ತಿದ್ದುವು. ಮತ್ತೆ ಕೆಲವು ಪ್ರಾಣಿಗಳು ನಿಂತಲ್ಲಿಯೇ ನಿಂತು ದುರದುರನೆ ನೋಡುತ್ತಿದ್ದುವು. ಮತ್ತೆ ಕೆಲವು ಭಯದಿಂದ ಇದ್ದಲ್ಲಿಯೇ ಕುಳಿತುಬಿಡುತ್ತಿದ್ದುವು. ವನೇಚರರಿಗೆ ಸದೃಶವಾದ ಅಲಂಕಾರವನ್ನು ಧರಿಸಿದ್ದ ಭೀಮಸೇನನು ಕಾಲ್ನಡಿಗೆಯಲ್ಲಿಯೇ ಅರಣ್ಯದಲ್ಲಿ ಸುತ್ತಾಡುತ್ತಾ ಪರಮಾದ್ಭುತವಾಗಿ ಗರ್ಜನೆಮಾಡುತ್ತಿದ್ದನು. ಮಹಾಸತ್ತ್ವನಾದ ಮತ್ತು ಮಹಾಪರಾಕ್ರಮಿಯಾದ ಭೀಮಸೇನನು ತನ್ನ ಘೋರ ಗರ್ಜನೆಗಳಿಂದ ಸರ್ವಭೂತಗಳನ್ನೂ ಭಯಗೊಳಿಸುತ್ತಿದ್ದನು. ಭೀಮನ ಆ

ಗರ್ಜನೆಗಳಿಂದ ಭೂಮಿಯ ಮೇಲಿದ್ದವರು ಮಾತ್ರವೇ ಅಲ್ಲದೆ ಹುತ್ತದೊಳಗಿದ್ದ ವಿಷಸರ್ಪಗಳೂ ನಡುಗಿದುವು. ಹುತ್ತದಿಂದ ಹೊರಗಿದ್ದ ಸರ್ಪಗಳು ಭೀಮನ ಗರ್ಜನೆಯಿಂದ ಭಯಗೊಂಡು ಹುತ್ತದೊಳಕ್ಕೆ ಸೇರಿಕೊಳ್ಳಲು ಅವಸರದಿಂದ ಹರಿದುಹೋಗುತ್ತಿದ್ದುವು. ವೇಗವಾಗಿ ಹರಿದುಹೋಗುತ್ತಿದ್ದ ಹಾವುಗಳನ್ನು ತನ್ನ ವೇಗದಿಂದ ಅತಿಕ್ರಮಿಸಿ ಭೀಮನು ಮುಂದೆ ಹೋಗುತ್ತಿದ್ದನು. ಕೆಲವು ಹಾವುಗಳು ಭೀಮನನ್ನು ಮೆಲ್ಲನೆ ಅನುಸರಿಸಿ ಹೋಗುತ್ತಿದ್ದುವು. ಹೀಗೆಯೇ ಮುಂದೆ-ಮುಂದೆ ನಡೆದುಹೋಗುತ್ತಿದ್ದ ಸಮಯದಲ್ಲಿ ಇಂದ್ರನಿಗೆ ಸಮಾನನಾದ ಭೀಮಸೇನನು ದೊಡ್ಡದಾದ ಶರೀರವನ್ನು ಹೊಂದಿದ್ದ, ನೋಡಿದವರಿಗೆ ರೋಮಾಂಚನವನ್ನುಂಟುಮಾಡುವ ಒಂದಾನೊಂದು ಮಹಾಸರ್ಪವನ್ನು ಕಂಡನು. ಗಿರಿದುರ್ಗದ ಕಂದರದಲ್ಲಿದ್ದ ಆ ಮಹಾಸರ್ಪವು ಕಂದರವನ್ನು ಪೂರ್ಣವಾಗಿ ಆವರಿಸಿ ಮಲಗಿದ್ದಿತು.

ಆ ಮಹಾಸರ್ಪವು ಪರ್ವತದಂತೆ ವಿಸ್ತಾರವಾದ ದೇಹವುಳ್ಳದ್ದಾಗಿದ್ದಿತು. ದಪ್ಪವಾದ ಶರೀರವನ್ನೂ ಮಹಾಬಲವನ್ನೂ ಹೊಂದಿದ್ದಿತು. ಅದರ ಶರೀರವು ಚಿತ್ರ-ವಿಚಿತ್ರವಾದ ಕೂದಲುಗಳಿಂದ ಕೂಡಿದ್ದು ಅದರ ಬಣ್ಣವು ಹಳದಿಯಾಗಿದ್ದಿತು. ಅದರ ಬಾಯಿಯು ಗುಹೆಯ ಬಾಯಿಯಂತೆಯೇ ಅಗಲವಾಗಿದ್ದು ನಾಲ್ಕು ಕೋರೆದಾಡೆಗಳಿಂದ ಕೂಡಿದ್ದಿತು. ಅದರ ಕಣ್ಣುಗಳು ತಾಮ್ರದಂತೆ ಕೆಂಪಾಗಿದ್ದು ಥಳಥಳಿಸುತ್ತಿದ್ದುವು. ಅದು ತನ್ನ ಚಂಚಲವಾದ ನಾಲಿಗೆಯಿಂದ ತನ್ನ ಕಟವಾಯಿಗಳನ್ನು ಕ್ಷಣಕ್ಷಣಕ್ಕೂ ನೆಕ್ಕುತ್ತಿದ್ದಿತು. ಅದು ಸಕಲಪ್ರಾಣಿಗಳಿಗೂ ಭಯಂಕರವಾಗಿದ್ದುದಲ್ಲದೇ ಕಾಲಾಂತಕನಾದ ಯಮನೋಪಾದಿಯಲ್ಲಿ ಕಾಣುತ್ತಿದ್ದಿತು. ಶ್ವಾಸೋಚ್ಛ್ವಾಸಗಳಿಂದ ಬೆದರಿಸುತ್ತಿರುವುದೋ–ಎಂಬಂತೆ ಕಾಣುತ್ತಿದ್ದಿತು. ಅಂತಹ ಘಟಸರ್ಪವನ್ನು ಭೀಮಸೇನನು ನೋಡಿದನು.

ಭೀಮಸೇನನು ತನ್ನ ಸಮೀಪಕ್ಕೆ ಬಂದಕೂಡಲೇ ಕೋಪಗೊಂಡ ಅಜಗರ ಮಹಾಸರ್ಪವು ಬುಸುಗುಟ್ಟುತ್ತಾ ಬಂದು ಭೀಮನನ್ನು ಸುತ್ತುವರಿದು ಅವನ ಎರಡು ಭುಜಗಳನ್ನೂ ಬಿಗಿಯಾಗಿ ಸುತ್ತಿಕೊಂಡಿತು. ಸರ್ಪಕ್ಕೆ ವರ

ದಾನವೂ ಇದ್ದಿತಾದ್ದರಿಂದ ಆ ಅಜಗರದಿಂದ ಬಂಧಿತನಾದ ಭೀಮಸೇನನು ಒಡನೆಯೇ ಪ್ರಜ್ಞಾಹೀನನಾದನು.



ಜನಮೇಜಯ! ಈ ವೈಚಿತ್ರ್ಯವನ್ನಾದರೂ ಕೇಳು. ಭೀಮನ ಎರಡು ಭುಜಗಳೂ ಹತ್ತುಸಾವಿರ ಆನೆಗಳಿಗಿರುವ ಬಲವನ್ನು ಹೊಂದಿದ್ದುವು. ಅವನು ಶತ್ರುಗಳಿಂದ ಪರಾಭವವೆಂಬುದನ್ನೇ ಕಾಣದವನಾಗಿದ್ದನು. ಅಂತಹ ಮಹಾ ಪರಾಕ್ರಮಿಯಾದ ಭೀಮಸೇನನಂದು ಒಂದು ಘಟಸರ್ಪದ ಬಿಗಿತದಿಂದ ಬಿಡಿಸಿಕೊಳ್ಳಲಾರದೇ ಕಣ್ಣು-ಬಾಯಿ ಬಿಡುತ್ತಿದ್ದನು. ಅವನ ಎರಡು ಭುಜಗಳಲ್ಲಿದ್ದ ಅಪರಿಮಿತವಾದ ಬಲವೂ ಯಾವ ಪ್ರಯೋಜನಕ್ಕೂ ಬರಲಿಲ್ಲ. ಸರ್ಪದಿಂದ ಬಿಡಿಕೊಳ್ಳಬೇಕೆಂದು ಭೀಮನು ಮಾಡಿದ ಪ್ರಯತ್ನಗಳೆಲ್ಲವೂ

ವ್ಯರ್ಥವಾಗಿ ಹೋದುವು. ಸಾವಿರ ಆನೆಗಳ ಬಲದಿಂದ ಕೂಡಿದ್ದ ಸಿಂಹಸ್ಕಂಧನಾದ, ಮಹಾಭುಜನಾದ ಭೀಮಸೇನನು ಅಜಗರದಿಂದ ಬಂಧಿತನಾದೊಡನೆ ತನ್ನ ಶಕ್ತಿಯೆಲ್ಲವನ್ನೂ ಕಳೆದುಕೊಂಡುಬಿಟ್ಟನು. ಅಜಗರಸರ್ಪಕ್ಕೆ ಲಭಿಸಿದ್ದ ಮಹಾವರವೇ ಅದಕ್ಕೆ ಕಾರಣವಾಗಿದ್ದಿತು.

ಸರ್ಪದಿಂದ ಬಿಡಿಸಿಕೊಳ್ಳುವ ಸಲುವಾಗಿ ಭೀಮಸೇನನೇನೋ ಸಾಕಷ್ಟು ಪ್ರಯತ್ನಿಸಿದನು. ಮುಕ್ಕರಿದು ಹಿಗ್ಗಿದನು. ಎಷ್ಟೇ ಪ್ರಯತ್ನಿಸಿದರೂ ಮಹಾಸರ್ಪದ ಬಿಗಿತದಿಂದ ಮುಕ್ತನಾಗಲು ಸಾಧ್ಯವಾಗಲೇ ಇಲ್ಲ. ಅಥವಾ ಪ್ರತಿಯಾಗಿ ಹೊಡೆಯಲೂ ಸಾಧ್ಯವಾಗಲಿಲ್ಲ."

೧೭೮ನೆಯ ಅಧ್ಯಾಯವು ಮುಗಿಯಿತು.

೧೭೯ನೆಯ ಅಧ್ಯಾಯ ಆಜಗರಪರ್ವ (ಮುಂದುವರಿದಿದೆ.)

## ಅಜಗರ-ಭೀಮಸೇನರ ಸಂಭಾಷಣೆ : ಭೀಮಸೇನನ ಚಿಂತೆ : ಯುಧಿಷ್ಠಿರನಿಂದ ಭೀಮನ ಬಿಡುಗಡೆ

ವೈಶಂಪಾಯನರು ಅಜಗರಸರ್ಪದ ಕಥೆಯನ್ನು ಮುಂದುವರಿಸಿ ಹೇಳಿದರು :

"ಜನಮೇಜಯ! ತೇಜಸ್ವಿಯಾದ ಭೀಮಸೇನನು ಸರ್ಪದ ವಶವರ್ತಿಯಾಗಲಾಗಿ, ವಾಯುಪುತ್ರನು ಸರ್ಪದ ಪರಮಾದ್ಭುತವಾದ ಬಲವನ್ನು ಕುರಿತು ಕ್ಷಣಕಾಲ ತನ್ನಲ್ಲಿ ತಾನೇ ಯೋಚಿಸಿ ತಲೆದೂಗಿ ಸರ್ಪವನ್ನು ಪ್ರಶ್ನಿಸಿದನು :

"ಎಲೈ ಸರ್ಪರಾಜನೇ! ನೀನು ಯಾರು? ನೀನು ನನ್ನನ್ನು ಹಿಡಿದು ಮುಂದೇನು ಮಾಡಬೇಕೆಂದಿರುವೆ? ನನ್ನನ್ನು ಭೀಮಸೇನನೆಂದು ಕರೆಯುವರು. ಪಾಂಡುಮಹಾರಾಜನ ಎರಡನೆಯ ಮಗನು ನಾನು. ಧರ್ಮಾತ್ಮನಾದ, ಸತ್ಯಸಂಧನಾದ ಯುಧಿಷ್ಠಿರನೇ ನನ್ನಣ್ಣನು. ನಾನೇನೂ ದುರ್ಬಲನಲ್ಲ, ಸರ್ಪರಾಜ! ಹತ್ತುಸಾವಿರ ಆನೆಗಳ ಬಲವನ್ನು ಹೊಂದಿರುವೆನು. ನನ್ನಂತಹ ಬಲಶಾಲಿಯನ್ನೂ ನೀನು ಪರಾಜಯಗೊಳಿಸಲು ಹೇಗೆ ಸಮರ್ಥನಾದೆ? ನೂರಾರು ಸಿಂಹಗಳನ್ನೂ, ಖಡ್ಗಮೃಗಗಳನ್ನೂ, ವ್ಯಾಘ್ರಗಳನ್ನೂ, ಕಾಡುಕೋಣಗಳನ್ನೂ, ಕಾಡಾನೆಗಳನ್ನೂ ನಾನು ಕ್ಷಣಮಾತ್ರದಲ್ಲಿ

ಧ್ವಂಸಮಾಡಿಬಿಟ್ಟಿದ್ದೇನೆ. ಆ ದುಷ್ಟಪ್ರಾಣಿಗಳ ವಿಷಯವೂ ಹಾಗಿರಲಿ. ರಾಕ್ಷಸ-ಪಿಶಾಚ-ನಾಗ-ಕಿನ್ನರರೂ ನನ್ನ ಭುಜಬಲ-ಪರಾಕ್ರಮಗಳನ್ನೆದುರಿಸಿ ನಿಲ್ಲಲಾರರು. ಹೀಗಿರುವಾಗ ನೀನಿಂದು ನನ್ನನ್ನು ಪರಾಜಯಗೊಳಿಸಿರುವೆ. ಇದಕ್ಕೆ ಕಾರಣವು ನಿನಗಿರುವ ಸ್ವಾಭಾವಿಕವಾದ ಬಲವಿರಲಾರದು. ನಿನ್ನಲ್ಲಿ ಯಾವುದಾದರೂ ಇಂದ್ರಜಾಲ-ಮಹೇಂದ್ರಜಾಲಾದಿ ವಿದ್ಯೆಗಳ ಬಲವಿರಬೇಕು. ಅಥವಾ ಯಾರಾದರೂ ಅನುಗ್ರಹಿಸಿರುವ ವರದ ಬಲವಾದರೂ ನಿನ್ನಲ್ಲಿರಬೇಕು. ಇವೆರಡೂ ಇರದಿದ್ದರೆ ನೀನಿಂದು ನನ್ನನ್ನು ಖಂಡಿತವಾಗಿಯೂ ಬಂದಿಸಲಾಗುತ್ತಿರಲಿಲ್ಲ. ನಾನೆಷ್ಟೇ ಪ್ರಯತ್ನಿಸಿದರೂ ನಿನ್ನ ಬಿಗಿತದಿಂದ ತಪ್ಪಿಸಿಕೊಳ್ಳಲು ಅಸಮರ್ಥನಾಗಿದ್ದೇನೆ. ಒಂದು ವೇಳೆ ನಿನ್ನ ಸ್ವಾಭಾವಿಕವಾದ ಬಲದಿಂದಲೇ ನೀನಿಂದು ನನ್ನನ್ನು ಈ ರೀತಿಯಲ್ಲಿ ಬಂಧಿಸಿರುವುದಾದರೆ–ಮಾನವರ ಬಲಕ್ಕೆ ಇಂದೇ ಧಿಕ್ಕಾರವಿರಲಿ! 'ಮಾನವರ ಬಲವು ನಿಷ್ಪ್ರಯೋಜಕ ಮತ್ತು ಅವರ ವಿಕ್ರಮವು ಅಸತ್ಯ'–ಎಂದು ನಾನು ನಿರ್ಧರಿಸಬೇಕಾಗುವುದು. ನಿನ್ನ ಅಪಾರವಾದ ಬಲದಿಂದ ನನಗಿದ್ದ ಹತ್ತು ಸಾವಿರ ಆನೆಗಳ ಬಲವೂ ಉಡುಗಿಹೋಗಿದೆ, ಸರ್ಪರಾಜ!"

ಜನಮೇಜಯ! ಮಹಾಪರಾಕ್ರಮಿಯಾದ ಮತ್ತು ಸುಚರಿತ್ರನಾದ ಭೀಮಸೇನನು ಹೀಗೆ ಹೇಳಲಾಗಿ, ಘೋರಸರ್ಪವು ಸುದೀರ್ಘವಾಗಿ ತನ್ನ ಶರೀರದಿಂದ ಭೀಮಸೇನನನ್ನು ಸುತ್ತಿಕೊಂಡು, ಭೀಮನ ಭುಜಗಳ ಬಿಗಿತವನ್ನು ಸಡಿಲಿಸಿತು.

ಭುಜಗಳ ಬಿಗಿತದಿಂದ ತಪ್ಪಿಸಿಕೊಂಡಿದ್ದರೂ ಭೀಮನಿಗೆ ತನ್ನನ್ನು ಸರ್ಪದಿಂದ ಬಿಡಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಭೀಮನನ್ನು ಸಂಪೂರ್ಣವಾಗಿ ಸುತ್ತಿಕೊಂಡು ಭೀಮನ ಮುಖಕ್ಕೆದುರಾಗಿ ತನ್ನ ಮೂತಿಯನ್ನಿಟ್ಟುಕೊಂಡು ಅಜಗರಸರ್ಪವು ಹೇಳಿತು :

**ದಿಷ್ಟಸ್ತ್ವಂ ಕ್ಷುಧಿತಸ್ಯಾದ್ಯ ದೇವೈರ್ಭಕ್ಷೋ ಮಹಾಭುಜ ।**
**ದಿಷ್ಟ್ಯಾ ಕಾಲಸ್ಯ ಮಹತಃ ಪ್ರಿಯಾಃ ಪ್ರಾಣಾ ಹಿ ದೇಹಿನಾಮ್ ॥**

"ಮಹಾಭುಜನೇ! ಅನೇಕಾನೇಕ ವರ್ಷಗಳಿಂದ ಆಹಾರವಿಲ್ಲದೇ ಹಸಿದಿದ್ದ ನನ್ನ ಸಮೀಪಕ್ಕೆ ನೀನು ದೇವತೆಗಳಿಂದಲೇ ಕಳುಹಿಸಲ್ಪಟ್ಟಿರುವೆ.

ನಿನ್ನನ್ನು ದೇವತೆಗಳು ನನ್ನ ಭಕ್ಷಣೆಗೆಂದೇ ಕಳುಹಿಸಿದ್ದಾರೆ. 'ಪ್ರಿಯಾಃ ಪ್ರಾಣಾ ಹಿ ದೇಹಿನಾಂ'–ಶರೀರಗಳನ್ನು ಹೊಂದಿರುವವರಿಗೆ ಪ್ರಾಣಗಳೇ ಅತಿಪ್ರಿಯವಾದುವುಗಳು. ಭೀಮಸೇನ! ನಾನಿಷ್ಟು ಕ್ಷುಧಾರ್ತನಾಗಿದ್ದರೂ ನೀನು ಕೇಳಿರುವ ಪ್ರಶ್ನೆಗೆ ಉತ್ತರಿಸದೇ, ನಾನು ಯಾವ ಕಾರಣದಿಂದ ಈ ಸರ್ಪಜನ್ಮವನ್ನು ಹೊಂದಿದೆನೆಂಬುದನ್ನು ಹೇಳದೇ ನಿನ್ನನ್ನು ಭಕ್ಷಿಸುವುದಿಲ್ಲ. ನಾನದನ್ನು ನಿನಗೆ ಹೇಳಿಯೇ ನನ್ನ ಮುಂದಿನ ಕಾರ್ಯವನ್ನು ಮಾಡುತ್ತೇನೆ. ಮಹರ್ಷಿಗಳ ಕೋಪಕ್ಕೆ ಪಾತ್ರನಾಗಿ ನಾನೀ ದುರವಸ್ಥೆಯನ್ನು ಪಡೆದೆನು.

ಭೀಮಸೇನ! ನನಗೆ ಪ್ರಾಪ್ತವಾಗಿರುವ ಆ ಮಹಾಶಾಪದಿಂದ ವಿಮೋಚನೆಹೊಂದುವ ಆಶಯದಿಂದಲೇ ನಾನು ನಿನಗೆ ಈ ವೃತ್ತಾಂತವನ್ನು ಹೇಳುತ್ತೇನೆ. ರಾಜರ್ಷಿಯಾದ, ವಿಖ್ಯಾತನಾದ ನಹುಷಚಕ್ರವರ್ತಿಯ ಹೆಸರನ್ನು ನೀನು ಕೇಳಿರುವೆಯಲ್ಲವೇ? ಅವನು ಆಯು ಎಂಬ ರಾಜನ ಮಗನು ಮತ್ತು ನಿನ್ನಿ ಪೂರ್ವಜನು. ಅರ್ಥಾತ್ ನೀನೂ ಅವನ ವಂಶಕ್ಕೇ ಸೇರಿದವ ನಾಗಿರುವೆ. ಆ ಆಯುವಿನ ಮಗನಾದ ನಹುಷನೇ ನಾನು. ಬ್ರಾಹ್ಮಣರನ್ನು ಅವಮಾನಪಡಿಸಿ, ಮಹರ್ಷಿಗಳಾದ ಅಗಸ್ತ್ಯರನ್ನೂ ತಿರಸ್ಕರಿಸಿ, ಅವರ ಶಾಪಕ್ಕೊಳಗಾಗಿ ಈ ದುರವಸ್ಥೆಯನ್ನು ಅನುಭವಿಸುತ್ತಿದ್ದೇನೆ. ಈ ದುರವಸ್ಥೆಯ ವೈಪರೀತ್ಯವನ್ನಾದರೂ ನೋಡು :

**ತ್ವಾಂ ಚೇದವಧ್ಯಂ ದಾಯಾದಮತೀವ ಪ್ರಿಯದರ್ಶನಮ್ ।**
**ಅಹಮದ್ಯೋಪಯೋಕ್ಷ್ಯಾಮಿ ವಿಧಾನಂ ಪಶ್ಯ ಯಾದೃಶಮ್ ॥೧೫॥**

ನೀನು ನನ್ನ ವಂಶಜನು. ಅವಧ್ಯನು. ಮೇಲಾಗಿ ಪ್ರಿಯದರ್ಶನನೂ ಆಗಿರುವೆ. ನಿನ್ನನ್ನು ನೋಡಿದವರಾರಿಗೂ ನಿನ್ನನ್ನು ಸಂಹರಿಸಲು ಮನಸ್ಸು ಬರುವುದಿಲ್ಲ. ಅಂತಹ ನಿನ್ನನ್ನೂ ನಾನಿಂದು ಭಕ್ಷಿಸಲು ನಿಶ್ಚಯಿಸಿದ್ದೇನೆ. ನನ್ನ ದುರವಸ್ಥೆಯೇನೆಂಬುದನ್ನು ಇದರಿಂದಲಾದರೂ ಅರ್ಥಮಾಡಿಕೋ ಭೀಮಸೇನ! ದೈವದ ವಿಚಿತ್ರಗತಿಯನ್ನಾದರೂ ನೋಡು, ಪರಾಕ್ರಮದ ವಿಷಯವಾಗಿ ಹೇಳುವುದಾದರೆ :

**ನ ಹಿ ಮೇ ಮುಚ್ಯತೇ ಕಶ್ಚಿತ್ಕಥಂಚಿತ್ಪ್ರಗ್ರಹಂ ಗತಃ ।**
**ಗಜೋ ವಾ ಮಹಿಷೋ ವಾಪಿ ಷಷ್ಠೇ ಕಾಲೇ ನರೋತ್ತಮ ॥೧೬॥**

ದಿನದ ಆರನೆಯ ಭಾಗದಲ್ಲಿ ನನ್ನ ಕೈಗೆ ಯಾರೇ ಸಿಕ್ಕಲಿ ; ಎಷ್ಟೇ ಪ್ರಯತ್ನಿಸಲಿ–ಅವರು ಬಿಡಿಸಿಕೊಳ್ಳಲಾರರು. ಆನೆಯಾಗಲೀ, ಕಾಡುಕೋಣ ವಾಗಲೀ, ಮಹಾಪರಾಕ್ರಮಿಯೆನಿಸಿದ ಮಾನವನೇ ಆಗಲೀ–ನನ್ನ ಹಿಡಿತ ದಿಂದ ತಪ್ಪಿಸಿಕೊಳ್ಳುವ ಸಾಧ್ಯತೆಯೇ ಇಲ್ಲ, ಭೀಮಸೇನ!

**ನಾಸಿ ಕೇವಲಸರ್ಪೇಣ ತಿರ್ಯಗ್ಯೋನಿಷು ವರ್ತತಾ ।**
**ಗೃಹೀತಃ ಕೌರವಶ್ರೇಷ್ಠ ವರದಾನಮಿದಂ ಮಮ ॥೧೭॥**

ನೀನು ಊಹಿಸಿರುವಂತೆಯೇ ತಿರ್ಯಗ್ಯೋನಿಯಲ್ಲಿ ಹುಟ್ಟಿರುವ ಸಾಧಾರಣವಾದ ಸರ್ಪದಿಂದ ಅಥವಾ ಸರ್ಪಕ್ಕಿರುವ ಸ್ವಾಭಾವಿಕವಾದ ಬಲ ದಿಂದ ನೀನು ಪರಾಜಿತನಾಗಿರುವುದಿಲ್ಲ. ನನ್ನಲ್ಲಿರುವ ವರದ ಬಲವು ನಿನ್ನನ್ನು ಪರಾಜಯಗೊಳಿಸಿದೆ. ಇಂದ್ರನ ಶ್ರೇಷ್ಠವಿಮಾನದಲ್ಲಿದ್ದ ಸಿಂಹಾಸನದಿಂದ ಚ್ಯುತನಾದ ನಾನು ರಭಸದಿಂದ ತಲೆಕೆಳಗಾಗಿ ಭೂಮಿಯ ಕಡೆಗೆ ಬೀಳು ತ್ತಿರುವ ಸಮಯದಲ್ಲಿ–'ಮಹರ್ಷಿಗಳೇ! ನನ್ನನ್ನು ಈ ಘೋರಶಾಪದಿಂದ ವಿಮುಕ್ತನನ್ನಾಗಿ ಮಾಡಲಾರಿರಾ?'–ಎಂದು ಆರ್ತನಾಗಿ ಪೂಜ್ಯರಾದ ಅಗಸ್ತ್ಯರನ್ನು ಪ್ರಾರ್ಥಿಸಿದೆನು.

ದಯಾಮಯರಾದ ತೇಜಸ್ವಿಗಳಾದ ಆ ಮಹರ್ಷಿಗಳು ನನ್ನ ಮೇಲೆ ಕೃಪೆಯಿಟ್ಟು ಹೇಳಿದರು :

'ಮಹಾರಾಜ! ಸ್ವಲ್ಪ ಕಾಲಾನಂತರದಲ್ಲಿ ಈ ಶಾಪದಿಂದ ವಿಮೋಚನೆ ಯನ್ನು ಹೊಂದುವೆ.'

ಮರುಕ್ಷಣದಲ್ಲಿಯೇ ನಾನು ಮಹಾಸರ್ಪದ ರೂಪವನ್ನು ಧರಿಸಿ ಭೂಮಿಯ ಮೇಲೆ ಬಿದ್ದೆನು. ಆದರೆ ನನಗೆ ಪೂರ್ವಜನ್ಮದ ಸ್ಮರಣೆಯು ಮಾತ್ರ ಮರೆತುಹೋಗಿಲ್ಲ. ಇದು ನಡೆದು ಅನೇಕಾನೇಕಸಹಸ್ರವರ್ಷಗಳೇ ಕಳೆದಿದ್ದರೂ ಅಂದು ಯಾರು–ಏನು ಹೇಳಿದ್ದರೆಂಬುದೆಲ್ಲವನ್ನೂ ಜ್ಞಾಪಕ ದಲ್ಲಿಟ್ಟುಕೊಂಡಿರುತ್ತೇನೆ.

**ಯಸ್ತು ತೇ ವ್ಯಾಹೃತಾನ್ಪ್ರಶ್ನಾನ್ಪ್ರತಿಬ್ರೂಯಾದ್ವಿಭಾಗವಿತ್ ।**
**ಸ ತ್ವಾಂ ಮೋಕ್ಷಯಿತಾ ಶಾಪಾದಿತ ಮಾಮಬ್ರವೀದೃಷಿಃ ॥೨೧॥**

**ಗೃಹೀತಸ್ಯ ತ್ವಯಾ ರಾಜನ್ಪ್ರಾಣಿನೋऽಪಿ ಬಲೀಯಸಃ ।**
**ಸತ್ತ್ವಭ್ರಂಶೋऽಧಿಕಸ್ಯಾಪಿ ಸರ್ವಸ್ಯಾಶು ಭವಿಷ್ಯತಿ ॥೨೨॥**

ಮಹರ್ಷಿಗಳು ಪುನಃ ನನ್ನೊಡನೆ ಹೇಳಿದುದೇನೆಂದರೆ : 'ಯಾವ ಆತ್ಮಾನಾತ್ಮವಿವೇಕಿಯು ನೀನು ಕೇಳುವ ಪ್ರಶ್ನೆಗಳಿಗೆ ಯಥಾವತ್ತಾಗಿ ಉತ್ತರಕೊಡುವನೋ-ಆ ಮಹಾನುಭಾವನು ನಿನ್ನ ಈ ಶಾಪವನ್ನು ಪರಿಹರಿಸುತ್ತಾನೆ. ಮತ್ತು ನೀನು ಭೂಮಿಯಲ್ಲಿ ಸರ್ಪರೂಪದಲ್ಲಿರುವಾಗ ನಿನ್ನ ಹಿಡಿತಕ್ಕೆ ಸಿಕ್ಕಿದವನು ಎಷ್ಟೇ ಬಲಶಾಲಿಯಾಗಿದ್ದರೂ ಅವನು ತನ್ನ ಬಲವನ್ನು ಕಳೆದುಕೊಳ್ಳುತ್ತಾನೆ.' ಆ ದಯಾಮಯರಾದ ಅಗಸ್ತ್ಯರೂ ಮತ್ತು ಅವರೊಡನಿದ್ದ ಬ್ರಾಹ್ಮಣರೂ ನನ್ನ ಮೇಲಿನ ಅನುಕಂಪದಿಂದ ಹೀಗೆ ಹೇಳಿ ಅದೃಶ್ಯರಾದರು. ಆ ಮಾತುಗಳು ಇಂದಿಗೂ ನನ್ನ ಕಿವಿಯಲ್ಲಿ ಪ್ರತಿಧ್ವನಿಸುತ್ತಿವೆ.

ಮಹಾದ್ಯುತಿಮಂತನೇ! ಮಹಾದುಷ್ಕರ್ಮಿಯಾದ ನಾನಿಂದು ಈ ಸರ್ಪದೇಹವನ್ನಾಶ್ರಯಿಸಿ ನರಕರೂಪವಾದ ಅಶುದ್ಧವಾತಾವರಣದಲ್ಲಿ ಅಭಕ್ಷ್ಯಗಳನ್ನು ತಿನ್ನುತ್ತಾ ಶಾಪವಿಮೋಚನೆಯ ಕಾಲವನ್ನು ನಿರೀಕ್ಷಿಸು ತ್ತಿದ್ದೇನೆ."

ಹೀಗೆ ಹೇಳಿದ ಸರ್ಪರಾಜನ ಮಾತನ್ನು ಕೇಳಿ ಭೀಮಸೇನನು ಹೇಳಿದನು:

**ನ ಚ ಕುಪ್ಯೇ ಮಹಾಸರ್ಪ ನ ಚಾತ್ಮಾನಂ ವಿಗರ್ಹಯೇ ॥೨೫॥**

**ಯಸ್ಮಾದಭಾವೀ ಭಾವೀ ವಾ ಮನುಷ್ಯಃ ಸುಖದುಃಖಯೋಃ ।**
**ಆಗಮೇ ಯದಿ ವಾಪಾಯೇ ನ ತತ್ರ ಗ್ಲಪಯೇನ್ಮನಃ ॥೨೬॥**

"ಸರ್ಪರಾಜನೇ! ನೀನು ಹೇಳಿದುದೆಲ್ಲವನ್ನೂ ಅನುಮೋದಿಸುತ್ತೇನೆ. ನಾನು ನಿನ್ನ ವಿಷಯದಲ್ಲಿಯೂ ಕೋಪಿಸಿಕೊಳ್ಳುವುದಿಲ್ಲ. ಆತ್ಮನಿಂದನೆಯನ್ನೂ ಮಾಡಿಕೊಳ್ಳುವುದಿಲ್ಲ. ಏಕೆಂದರೆ : ಮಾನವನು ತಾನು ಮಾಡಿದ ಪುಣ್ಯ-ಪಾಪಗಳ ಕರ್ಮಾನುಸಾರವಾಗಿ ಸುಖ-ದುಃಖಗಳನ್ನು ಅನುಭವಿಸು ತ್ತಾನೆ. ಪುಣ್ಯಕರ್ಮಗಳ ಫಲದಿಂದ ಸುಖವನ್ನನುಭವಿಸುವಂತೆ ದುಷ್ಕರ್ಮ ಫಲದಿಂದ ಪ್ರಾಪ್ತವಾಗುವ ಅಪಾಯವನ್ನೂ ಮಾನವನು ಎದುರಿಸಿಯೇ

ತೀರಬೇಕು. ಸುಖವು ಬಂದಾಗ ಹಿರಿಹಿಗ್ಗಿ, ದುಷ್ಕರ್ಮಫಲದಿಂದ ಕಷ್ಟವು ಬಂದಾಗ ಮನಸ್ಸನ್ನು ಬೇಸರಗೊಳ್ಳಲು ಬಿಡಬಾರದು.

**ದೈವಂ ಪುರುಷಕಾರೇಣ ಕೋ ವಞ್ಚಯಿತುಮರ್ಹತಿ ।**
**ದೈವಮೇವ ಪರಂ ಮನ್ಯೇ ಪುರುಷಾರ್ಥೋ ನಿರರ್ಥಕಃ ॥೨೭॥**

ಪುರುಷಪ್ರಯತ್ನದಿಂದ ಯಾವನು ತಾನೇ ದೈವದ ಸಂಕಲ್ಪವನ್ನು ವಂಚಿಸಿಯಾನು? ದೈವಸಂಕಲ್ಪವೇ ಮಿಗಿಲಾದುದು. ವ್ಯತಿರಿಕ್ತವಾದ ದೈವ ಸಂಕಲ್ಪದ ಮುಂದೆ ಮನುಷ್ಯಪ್ರಯತ್ನವು ಸ್ವಲ್ಪವಾದರೂ ಪ್ರಯೋಜನಕಾರಿ ಯಾಗಲಾರದು.

**ಪಶ್ಯ ದೈವೋಪಘಾತಾದ್ಧಿ ಭುಜವೀರ್ಯವ್ಯಪಾಶ್ರಯಮ್ ।**
**ಇಮಾಮವಸ್ಥಾಂ ಸಮ್ಪ್ರಾಪ್ತಮನಿಮಿತ್ತಮಿಹಾದ್ಯ ಮಾಮ್ ॥೨೮॥**

ಸರ್ಪರಾಜನೇ! ಇಂದು ಈ ನನ್ನ ದುಃಸ್ಥಿತಿಯನ್ನೇ ನೋಡು. ದೈವೋಪಘಾತದಿಂದಾಗಿ ಹತ್ತು ಸಾವಿರ ಆನೆಗಳ ಬಲದಿಂದ ಕೂಡಿದ್ದ ನನ್ನ ಭುಜಬಲವು ನಿರರ್ಥಕವಾಗಿ ಹೋಯಿತು. ಯಾವ ವಿಧವಾದ ಕಾರಣವೂ ಇಲ್ಲದೇ ನಾನಿಂದು ಈ ದುರವಸ್ಥೆಯನ್ನು ಅನುಭವಿಸಬೇಕಾಗಿ ಬಂದಿದೆ. ಇದು ದೈವಸಂಕಲ್ಪವಲ್ಲದೇ ಮತ್ತೇನು? ನನ್ನ ಪ್ರಯತ್ನವೊಂದೂ ಪ್ರಯೋಜನಕ್ಕೆ ಬರಲಿಲ್ಲ.

**ಕಿಂತು ನಾದ್ಯಾನುಶೋಚಾಮಿ ತಥಾತ್ಮಾನಂ ವಿನಾಶಿತಮ್ ।**
**ಯಥಾ ತು ವಿಪಿನೇ ನ್ಯಸ್ತಾನ್ಭ್ರಾತೄನ್ರಾಜ್ಯಪರಿಚ್ಯುತಾನ್ ॥೨೯॥**

ಸರ್ಪರಾಜನೇ! ನಾನಿಂದು ದೈವದಿಂದ ಉಪಹತನಾಗಿ ನಿನ್ನಿಂದ ವಧ್ಯ ನಾಗುವುದಕ್ಕೆ ಶೋಕಿಸುವುದಿಲ್ಲ. ನನ್ನನ್ನು ನೀನು ನುಂಗಿಹಾಕಿದರೂ ನನಗಾವ ದುಃಖವೂ ಇಲ್ಲ. ಆದರೆ ನನ್ನ ಸಹೋದರರು ರಾಜ್ಯಭ್ರಷ್ಟರಾಗಿ ಕಾಡುಪಾಲಾಗಿರುವುದಕ್ಕೆ ನಾನಿಂದು ಶೋಕಿಸಬೇಕಾಗಿದೆ ಮತ್ತು ಅವರ ಮುಂದಿನ ದುರವಸ್ಥೆಗಾಗಿಯೇ ಶೋಕಿಸಬೇಕಾಗಿದೆ.

ಹಿಮವತ್ಪರ್ವತವಾದರೋ ಅತ್ಯಂತದುರ್ಗಮವಾದ ಪರ್ವತ. ಯಕ್ಷ-ರಾಕ್ಷಸರಿಂದ ಪರಿವೃತವಾಗಿರುವುದು. ಇಂತಹ ದುರ್ಗಮವಾದ ಪರ್ವತದಲ್ಲಿ

ನನ್ನನ್ನು ಕಾಣದ ನನ್ನ ಅಗ್ರಜಾನುಜರು ಅಲ್ಲಲ್ಲಿ ಹುಡುಕುತ್ತಾ ದಿಕ್ಕು ಕಾಣದವರಾಗುತ್ತಾರೆ. ನಾನು ಮಹಾಸರ್ಪದಿಂದ ಭಕ್ಷಿತನಾಗಿ ಸತ್ತು ಹೋದೆನೆಂದು ತಿಳಿದನಂತರದಲ್ಲಿ ಅವರು ಮುಂದೆ ರಾಜ್ಯಪ್ರಾಪ್ತಿಗೆ ಯಾವ ವಿಧವಾದ ಪ್ರಯತ್ನವನ್ನೂ ಮಾಡಲೇ ಸುಮ್ಮನೇ ಇದ್ದುಬಿಡುತ್ತಾರೆ. ಏಕೆಂದರೆ: ರಾಜ್ಯವನ್ನು ಪುನಃ ಪಡೆಯಬೇಕೆಂಬ ಆಶಯದಿಂದ ನಾನು ಧರ್ಮಾತ್ಮರಾದ ಅವರನ್ನು ಕಠಿನೋಕ್ತಿಗಳಿಂದ ಕಾರ್ಯೋನ್ಮುಖರನ್ನಾಗಿ ಮಾಡುತ್ತಿದ್ದೆನು. ಸರ್ಪರಾಜ! ನಾನು ಸತ್ತನಂತರ ಅವರು ತಟಸ್ಥ ರಾಗುತ್ತಾರೆ.

**ಅಥವಾ ನಾರ್ಜುನೋ ಧೀಮಾನ್ವಿಷಾದಮುಪಯಾಸ್ಯತಿ ।**
**ಸರ್ವಾಸ್ತ್ರವಿದನಾಧೃಷ್ಯೋ ದೇವಗನ್ಧರ್ವರಾಕ್ಷಸೈಃ ॥೩೨॥**

**ಸಮರ್ಥಃ ಮಹಾಬಾಹುರೇಕೋಽಪಿ ಸಮಹಾಬಲಃ ।**
**ದೇವರಾಜಮಪಿ ಸ್ಥಾನಾತ್ಪ್ರಚ್ಯಾವಯಿತುಮಞ್ಜಸಾ ॥೩೩॥**

ಅಥವಾ ಅರ್ಜುನನೊಬ್ಬನಾದರೂ ನಾನು ಸತ್ತುಹೋದುದಕ್ಕೆ ದುಃಖಿಸುತ್ತಾ ಶತ್ರುವಿನಾಶಕಾರ್ಯದಿಂದ ವಿಮುಖನಾಗಿ ಕುಳಿತುಕೊಳ್ಳುವುದಿಲ್ಲವೆಂದು ಭಾವಿಸುತ್ತೇನೆ. ಏಕೆಂದರೆ : ಅರ್ಜುನನು ಮಹಾಮೇಧಾವಿಯು. ಸಕಲಾಸ್ತ್ರಗಳನ್ನೂ ಬಲ್ಲವನು. ದೇವ-ಗಂಧರ್ವ-ರಾಕ್ಷಸರಿಂದಲೂ ಅಪರಾಜಿತನು. ಏಕಾಕಿಯಾಗಿ ನಿಂತು ಯುದ್ಧಮಾಡಿ ಇಂದ್ರನನ್ನಾದರೂ ದೇವರಾಜಪದವಿಯಿಂದ ಕೆಳಗಿಳಿಸುವ ಮಹಾಸಾಮರ್ಥ್ಯವುಳ್ಳವನು.

**ಕಿಂ ಪುನರ್ಧೃತರಾಷ್ಟ್ರಸ್ಯ ಪುತ್ರಂ ದುರ್ದ್ಯೂತದೇವಿನಮ್ ।**
**ವಿದ್ವಿಷ್ಟಂ ಸರ್ವಲೋಕಸ್ಯ ದಮ್ಭಮೋಹಪರಾಯಣಮ್ ॥೩೪॥**

ಇಂತಹ ಸಾಮರ್ಥ್ಯವುಳ್ಳ ಅರ್ಜುನನು ಧೃತರಾಷ್ಟ್ರನ ಮಗನಾದ, ದುರಭಿಮಾನಿಯಾದ, ಜೂಜುಕೋರನಾದ, ಮಹಾವಂಚನಾದ, ಸರ್ವಲೋಕಕ್ಕೂ ಅಪ್ರಿಯನಾದ ದುರ್ಯೋಧನನನ್ನು ಸೋಲಿಸಬಲ್ಲನೆಂದು (ಸ್ಥಾನಭ್ರಷ್ಟನನ್ನಾಗಿ ಮಾಡಬಲ್ಲನೆಂದು) ಮತ್ತೆ ಹೇಳಬೇಕೇ?

**ಮಾತರಂ ಚೈವ ಶೋಚಾಮಿ ಕೃಪಣಾಂ ಪುತ್ರಗೃದ್ಧಿನೀಮ್ ।**
**ಯಾಸ್ಮಾಕಂ ನಿತ್ಯಮಾಶಾಸ್ತೇ ಮಹತ್ತ್ವಮಧಿಕಂ ಪರೈಃ ॥೩೫॥**

**ತಸ್ಯಾಃ ಕಥಂ ತ್ವನಾಥಾಯಾ ಮದ್ವಿನಾಶಾದ್ಭುಜಙ್ಗಮ ।**
**ಸಫಲಾಸ್ತೇ ಭವಿಷ್ಯನ್ತಿ ಮಯಿ ಸರ್ವೇ ಮನೋರಥಾಃ ॥೩೬॥**

ಭುಜಂಗಮನೇ! ನನಗೆ ಶರೀರವನ್ನಿತ್ತಿರುವ ನನ್ನ ತಾಯಿಯ ವಿಷಯ ವಾಗಿಯೂ ನಾನು ಶೋಕಿಸಬೇಕಾಗಿದೆ. ಆ ನಮ್ಮ ಬಡತಾಯಿಯು ತನ್ನ ಮಕ್ಕಳ ವಿಷಯದಲ್ಲಿ ಬಹಳ ಅಕ್ಕರೆಯಿಂದಿದ್ದಾಳೆ. ತನ್ನ ಮಕ್ಕಳ ಅಭ್ಯುದಯ ವನ್ನೇ ಯಾವಾಗಲೂ ಕೋರುತ್ತಿದ್ದಾಳೆ. ಈಗ ನಮ್ಮ ಶತ್ರುಗಳು ಅನು ಭವಿಸುತ್ತಿರುವ ವೈಭವಕ್ಕಿಂತಲೂ ಹೆಚ್ಚಿನ ವೈಭವವು ತನ್ನ ಮಕ್ಕಳಿಗೆ ಪ್ರಾಪ್ತ ವಾಗಬೇಕೆಂದು ಅನುದಿನವೂ ಬಯಸುತ್ತಿದ್ದಾಳೆ. ಅವಳು ನನ್ನ ಮೂಲಕ ವಾಗಿಯೇ ತನ್ನ ಮನೋರಥಗಳೆಲ್ಲವನ್ನೂ ಈಡೇರಿಸಿಕೊಳ್ಳಲು ನಿಶ್ಚಯಿ ಸಿದ್ದಾಳೆ. ನನ್ನ ವಿನಾಶವಾದನಂತರ ಅವಳೊಬ್ಬಳು ಅನಾಥೆಯೇ ಆಗುತ್ತಾಳೆ. ನನ್ನ ಮೂಲಕ ಈಡೇರಿಸಿಕೊಳ್ಳಬೇಕೆಂದಿರುವ ಅವಳ ಮನೋರಥಗಳೆಲ್ಲವೂ ಹೇಗೆ ತಾನೇ ಸಫಲವಾಗುತ್ತವೆ?

**ನಕುಲಃ ಸಹದೇಶ್ಚ ಯಮೌ ಚ ಗುರುವರ್ತಿನೌ**
**ಮದ್ಬಾಹುಬಲಸಂಗುಪ್ತೌ ನಿತ್ಯಂ ಪುರುಷಮಾನಿನೌ ॥೩೭॥**

**ಭವಿಷ್ಯತೋ ನಿರುತ್ಸಾಹೌ ಭ್ರಷ್ಟವೀರ್ಯಪರಾಕ್ರಮೌ ।**
**ಮದ್ವಿನಾಶಾತ್ಪರಿದ್ಯೂನಾವಿತಿ ಮೇ ವರ್ತತೇ ಮತಿಃ ॥೩೮॥**

ಯಮಳರಾದ, ಲೋಕಸುಂದರರಾದ ನಕುಲ-ಸಹದೇವರನ್ನು ನೆನೆದು ನಾನು ಶೋಕಿಸುತ್ತೇನೆ . ಏಕೆಂದರೆ: ಅವರು ಸರ್ವದಾ ನನ್ನ ಜೊತೆಯಲ್ಲಿಯೇ ಇರುತ್ತಿದ್ದರು. ನನ್ನ ಬಾಹುಬಲದಿಂದ ರಕ್ಷಿತರಾಗಿದ್ದರು. ನನ್ನ ವಿನಾಶವಾದ ನಂತರ ಅವರು ಅಧೀರರಾಗುತ್ತಾರೆ. ನಿರುತ್ಸಾಹಿಗಳಾಗುತ್ತಾರೆ. ಶಕ್ತಿಹೀನರಾಗು ತ್ತಾರೆ. ಅವರಿಗೆ ರಕ್ಷಣೆಯೇ ಇಲ್ಲದೇ ಬಹಳ ದುಃಖಿತರಾಗುತ್ತಾರೆ. ಈ ಕಾರಣಗಳಿಂದ ನನಗೆ ದುಃಖವಾಗುತ್ತಿರುವುದೇ ಹೊರತು ನನ್ನ ಪ್ರಾಣವು ಹೋಗಿಬಿಡುವುದೆಂಬ ಭಯದಿಂದ ನಾನೆಂದಿಗೂ ದುಃಖಿಸುವವನಲ್ಲ."

ಜನಮೇಜಯ! ಮಹಾಪರಾಕ್ರಮಿಯಾದ ವೃಕೋದರನು ಅಜಗರನೊ ಡನೆ ಹೀಗೆ ಹೇಳಿಕೊಂಡು ಹೆಚ್ಚಾಗಿ ಶೋಕಿಸಿದನು. ಸರ್ಪದ ಶರೀರದಿಂದ ಬಂಧಿತನಾಗಿದ್ದ ಅವನಿಗೆ ಮೈಯ್ಯನ್ನು ಅಲ್ಲಾಡಿಸಲು ಕೂಡ ಸಾಧ್ಯ ವಾಗುತ್ತಿರಲಿಲ್ಲ.

(ಸಾಮಾನ್ಯವಾಗಿ ನಮ್ಮ ಅಣ್ಣ-ತಮ್ಮಂದಿರು, ಮಕ್ಕಳು, ತಾಯಿ-ತಂದೆಗಳು–ಯಾರಾದರೂ ಅಪಾಯಕ್ಕೊಳಗಾದರೆ ನಮ್ಮ ಮನಸ್ಸು ತವಕ ಪಡುತ್ತಿರುತ್ತದೆ.) ಅಂತೆಯೇ ಅತ್ತ ಯುಧಿಷ್ಠಿರನ ಮನಸ್ಸೂ ತವಕಪಡುತ್ತ ಲಿದ್ದಿತು. ಕಾರಣವು ತಿಳಿಯದು. ಅದರ ಜೊತೆಗೆ ನಾನಾವಿಧವಾದ ಅನಿಷ್ಟ ಸೂಚಕಚಿಹ್ನೆಗಳೂ ಸುತ್ತಲೂ ಕಾಣಿಸಿಕೊಂಡುವು. ಅನೇಕವಿಧವಾದ ಉತ್ಪಾತಗಳು ಕಾಣಿಸಿಕೊಂಡುವು. ಗುಳ್ಳೇನರಿಗಳು ಆಶ್ರಮದ ದಕ್ಷಿಣಭಾಗ ದಲ್ಲಿ ಆಗ್ನೇಯಾಭಿಮುಖವಾಗಿ ನಿಂತು ಆಮಂಗಳಕರವಾಗಿ ಅರಚಿಕೊಳ್ಳು ತ್ತಿದ್ದುವು. ಒಂದು ರೆಕ್ಕೆ, ಒಂದು ಕಣ್ಣು, ಒಂದು ಕಾಲಿನಿಂದ ಕೂಡಿದ್ದ, ನೋಡಲು ಬಹುಘೋರವಾಗಿದ್ದ ವರ್ತಿಕವೆಂಬ ಪಕ್ಷಿಗಳು ಸೂರ್ಯನಿಗೆ ದುರಾಗಿ ನಿಂತು ರಕ್ತವನ್ನು ಕಾರುತ್ತಿದ್ದುವು. ಚಂಡಮಾರುತವು ಹಲವು ಮರ-ಗಿಡ-ಬಳ್ಳಿಗಳನ್ನು ಬುಡಮೇಲು ಮಾಡುತ್ತಾ ವೇಗವಾಗಿ ಬೀಸುತ್ತಿದ್ದಿತು. ಆಶ್ರಮದ ಹಿಂಬದಿಯಲ್ಲಿ ಕಾಗೆಗಳು ಕುಳಿತು 'ಕಾ-ಕಾ' (ಹೋಗು ; ಹೋಗು) ಎಂದು ಕೂಗುತ್ತಿದ್ದುವು. ಮೃಗ-ಪಕ್ಷಿಗಳು ಅಪಸವ್ಯಗತಿಯನ್ನು ಹಿಡಿದು ಹೋಗುತ್ತಿದ್ದುವು. ಅಂತಹ ಅಶುಭಸೂಚಕಗಳಾದ ನಿಮಿತ್ತಗಳನ್ನು ಸುತ್ತಲೂ ನೋಡುತ್ತಾ ಯುಧಿಷ್ಠಿರನು ಭ್ರಾಂತನಾದನು. ಅನಿಷ್ಟ ನಿವಾರಣೆಯ ಸೂಚಕವಾಗಿ ಯುಧಿಷ್ಠಿರನ ಬಲಭುಜವೂ ಒಮ್ಮೊಮ್ಮೆ ಅದುರುತ್ತಿದ್ದಿತು.

ಯುಧಿಷ್ಠಿರನ ಹೃದಯವೂ ಮತ್ತು ಎಡಗಾಲೂ ಬಾರಿ ಬಾರಿಗೂ ಅದುರುತ್ತಾ ಅಶುಭಫಲವನ್ನು ಪುನಃ ಪುನಃ ಸೂಚಿಸುತ್ತಿದ್ದಿತು. ಎಡಗಣ್ಣೂ ಕ್ಷಣ-ಕ್ಷಣಕ್ಕೂ ಹಾರುತ್ತಿದ್ದುದನ್ನು ಮನಗೊಂಡು ಯುಧಿಷ್ಠಿರನು ವಿಹ್ವಲನಾಗಿ ಯಾವುದೋ ಅಪಾಯವು ತನ್ನ ಅನುಜನಿಗೆ ಪ್ರಾಪ್ತವಾಗಿರುವುದೆಂದು ನಿಶ್ಚಸಿಯಿಸದವನಾಗಿ ತನ್ನ ಸಮೀಪದಲ್ಲಿದ್ದ ದ್ರೌಪದಿಯನ್ನು ಭೀಮನೆಲ್ಲೆಂದು ಪ್ರಶ್ನಿಸಿದನು. ಅದಕ್ಕುತ್ತರವಾಗಿ ದ್ರೌಪದಿಯು–'ಬಹಳ ಹೊತ್ತಿಗೆ ಮೊದಲೇ ಭೀಮನು ಆಶ್ರಮದಿಂದ ಹೊರಟುಹೋದನು'–ಎಂದು ಹೇಳಿದಳು. ಒಡನೆಯೇ ಯುಧಿಷ್ಠಿರನು ಅರ್ಜುನನಿಗೆ ಆಶ್ರಮದಲ್ಲಿಯೇ ಇದ್ದು ದ್ರೌಪದಿ ಯನ್ನು ರಕ್ಷಿಸಿಕೊಂಡಿರುವಂತೆಯೂ, ನಕುಲ-ಸಹದೇವರಿಗೆ ಬ್ರಾಹ್ಮಣರನ್ನು ರಕ್ಷಿಸಿಕೊಂಡಿರುವಂತೆಯೂ ಆಜ್ಞಾಪಿಸಿ ಧೌಮ್ಯರನ್ನು ತನ್ನ ಜೊತೆಯಲ್ಲಿ

ಕರೆದುಕೊಂಡು ಭೀಮಸೇನನನ್ನು ಹುಡುಕುವ ಸಲುವಾಗಿ ಹೊರಟೇಬಿಟ್ಟನು. ಆ ಘೋರಾರಣ್ಯದಲ್ಲಿ ಭೀಮಸೇನನನ್ನು ಹುಡುಕುವುದು ತಾನೇ ಹೇಗೆ? ಆಶ್ರಮದಿಂದ ಹೊರಹೊರಟ ಯುಧಿಷ್ಠಿರನು ಭೀಮಸೇನನ ಬೃಹದಾಕಾರದ ಹೆಜ್ಜೆಗಳನ್ನೇ ಅನುಸರಿಸಿ ಆ ಮಹಾರಣ್ಯದಲ್ಲಿ ಅವನನ್ನು ಹುಡುಕಲು ಹೊರಟನು. ಭೀಮನ ಹೆಜ್ಜೆಗಳನ್ನೇ ಅನುಸರಿಸಿ ಪೂರ್ವಾಭಿಮುಖವಾಗಿ ಪ್ರಯಾಣ ಮಾಡುತ್ತಿದ್ದಾಗ ಹತ್ತಾರು ಆನೆಗಳು ಸತ್ತುಬಿದ್ದಿರುವುದನ್ನು ಕಂಡನು. ಆ ಪ್ರದೇಶವು ಭೀಮನ ಹೆಜ್ಜೆಗಳ ಗುರುತುಗಳಿಂದ ಕೂಡಿದ್ದಿತು. ಅದರಿಂದ ಭೀಮನೇ ಆ ಸಲಗಗಳನ್ನು ಸಂಹರಿಸಿರಬಹುದೆಂದು ಯುಧಿಷ್ಠಿರನು ನಿಶ್ಚಯಿಸಿದನು. ಅಲ್ಲಿಂದ ಮುಂದೆ ಸ್ವಲ್ಪದೂರ ಅವನ ಹೆಜ್ಜೆಗಳು ಸ್ಪಷ್ಟವಾಗಿ ಕಾಣದಿದ್ದರೂ ಸಾವಿರಾರು ಜಿಂಕೆಗಳೂ, ನೂರಾರು ಸಿಂಹಗಳೂ ಸತ್ತುಬಿದ್ದಿರುವುದನ್ನೂ ಮತ್ತು ಸುತ್ತಮುತ್ತಲಿನ ವೃಕ್ಷಗಳು ಕೀಳಲ್ಪಟ್ಟಿರುವುದನ್ನೂ ಕಂಡು ಅವೆಲ್ಲವೂ ಭೀಮನ ಸಾಹಸಕಾರ್ಯಗಳೆಂದೇ ನಿಶ್ಚಯಿಸಿ ಮುಂದೆ ನಡೆದನು. ಭೀಮನು ಜಿಂಕೆಗಳನ್ನು ಹಿಂಬಾಲಿಸಿ ವೇಗವಾಗಿ ಹೋದುದರಿಂದುಂಟಾದ ಗಾಳಿಯಿಂದಲೇ ಅನೇಕ ವೃಕ್ಷಲತೆಗಳು ಕೆಳಗುರುಳಿಬಿದ್ದಿದ್ದುವು.

ಯುಧಿಷ್ಠಿರನು ಅವೆಲ್ಲವನ್ನೂ ದಾಟಿ ಹೆಚ್ಚು ಸಂಚಾರವಿಲ್ಲದ, ನೀರಿಲ್ಲದೇ ಬೆಂಗಾಡಿನಂತೆ ಕಾಣುತ್ತಿದ್ದ, ಬಹುದುರ್ಗಮವಾದ, ಹಳ್ಳ-ತಿಟ್ಟುಗಳಿಂದ ಕೂಡಿದ್ದ, ಹಲವು ಪೊದೆಗಳಿಂದ ಆವೃತವಾಗಿದ್ದ, ಅನೇಕ ಮುಳ್ಳು ಗಿಡಗಳಿಂದ ಕೂಡಿದ್ದ ಪ್ರದೇಶವೊಂದರಲ್ಲಿ ತನ್ನ ತಮ್ಮನಾದ ಭೀಮಸೇನನು ಮಹಾಸರ್ಪದಿಂದ ಸುತ್ತಲ್ಪಟ್ಟಿರುವುದನ್ನು ಕಂಡನು.

೧೭೯ನೆಯ ಅಧ್ಯಾಯ ಮುಗಿಯಿತು.

೧೮೦ನೆಯ ಅಧ್ಯಾಯ ಆಜಗರಪರ್ವ (ಮುಂದುವರಿದಿದೆ.)

## ಭೀಮನ ಸಮೀಪಕ್ಕೆ ಯುಧಿಷ್ಠಿರನ ಆಗಮನ : ಸರ್ಪರೂಪಿಯಾದ ನಹುಷನ ಪ್ರಶ್ನೆಗಳಿಗೆ ಧರ್ಮಜನ ಉತ್ತರ

ಜನಮೇಜಯ! ತಮ್ಮನ ಆ ದುಃಸ್ಥಿತಿಯನ್ನು ಕಂಡೊಡನೆಯೇ ಯುಧಿಷ್ಠಿರನಿಗೆ ಬಹುಸಂಕಟವಾಯಿತು. ಭೀಮಸೇನನ ಸಮೀಪಕ್ಕೆ ಹೋಗಿ

ಅವನೊಡನೆ ಹೇಳಿದನು : "ಕುಂತೀಪುತ್ರನೇ! ನೀನು ಈ ಆಪತ್ತಿಗೆ ಹೇಗೆ ಒಳಗಾದೆ? ಪರ್ವತಸದೃಶನಾಗಿರುವ ಈ ಸರ್ಪರಾಜನಾದರೂ ಯಾರು? ಇವನ ಪೂರ್ವೇತಿಹಾಸವೇನು? ಎಲ್ಲವನ್ನೂ ವಿಶದವಾಗಿ ಹೇಳು, ಭೀಮ ಸೇನ!"

ಸರ್ಪದ ಬಿಗಿಯಾದ ಸುತ್ತುವಿಕೆಯಿಂದ ನಿಶ್ಚೇಷ್ಟನಾಗಿ ಹತಾಶನಾಗಿ ತಲೆತಗ್ಗಿಸಿ ನಿಂತಿದ್ದ ಭೀಮಸೇನನು ಯುಧಿಷ್ಠಿರನ ಮಾತುಗಳನ್ನು ಕೇಳಿದೊಡ ನೆಯೇ ಮಹಾತ್ಮನಾದ ಅಣ್ಣನನ್ನು ತಲೆಯೆತ್ತಿ ನೋಡಿ ಹೇಳಿದನು : "ಆರ್ಯನೇ! ಮಹಾಸತ್ತ್ವನಾದ ಈ ಸರ್ಪರಾಜನು ನನ್ನನ್ನು ಭಕ್ಷಿಸುವ ಸಲುವಾಗಿ ಹಿಡಿದಿದ್ದಾನೆ. ಸುಪ್ರಸಿದ್ಧನಾದ ಹಿಂದಿನ ನಹುಷಚಕ್ರವರ್ತಿಯೇ ಇಂದು ಈ ಮಹಾಸರ್ಪದ ರೂಪವನ್ನು ತಾಳಿದ್ದಾನೆ."

ಭೀಮನು ಹೀಗೆಂದು ಹೇಳಲಾಗಿ ಯುಧಿಷ್ಠಿರನು ಅಜಗರನನ್ನು ಕುರಿತು ಹೇಳಿದನು : "ಆಯುಷ್ಮಂತನೇ! ಮಹಾಪರಾಕ್ರಮಿಯಾದ ಈ ನನ್ನ ತಮ್ಮನನ್ನು ಬಿಟ್ಟುಬಿಡು. ನಿನ್ನ ಹಸಿವನ್ನು ನೀಗುವಂತಹ ಇನ್ನಾವುದಾದರೂ ಆಹಾರವನ್ನು ನಿನಗೆ ಒದಗಿಸಿಕೊಡುವೆವು."

ಅದಕ್ಕುತ್ತರವಾಗಿ ಸರ್ಪವು ಹೇಳಿತು :

"ಧರ್ಮಜ! ಈ ರಾಜಕುಮಾರನು ತಾನೇ ತಾನಾಗಿ ನನ್ನ ಬಾಯಿಗೆ ಬಂದು ಬಿದ್ದಿರುವನು. ಬಹಳ ದಿವಸಗಳನಂತರ ಈ ಒಂದು ಆಹಾರವು ನನಗೆ ಧೈವಾಯತ್ತವಾಗಿ ಸಿಕ್ಕಿರುವುದು. ಹೀಗೆ ಸಿಕ್ಕಿರುವ ಆಹಾರವನ್ನು ಬಿಟ್ಟು ಕೊಡುವುದು ಒತ್ತಟ್ಟಿಗಿರಲಿ. ಹೆಚ್ಚು ಕಾಲ ಇಲ್ಲಿದ್ದರೆ ನಿನಗೂ ಸಹ ಅಪಾಯ ವುಂಟು. ನೀನು ಇಲ್ಲಿಯೇ ನಿಲ್ಲುವೆಯಾದರೆ ನಾಳಿನ ಆಹಾರಕ್ಕಾಗಿ ನೀನೇ ನನಗೆ ಒದಗಿ ಬಂದಂತಾಗುವುದು. ವಿಧಿನಿಯಮವೇ ಹೀಗಿರುವುದು, ಯುಧಿಷ್ಠಿರ! ಈ ನನ್ನ ಪ್ರದೇಶಕ್ಕೆ ಯಾರೇ ಬಂದರೂ ಅವರು ನನ್ನ ಆಹಾರ ವಾಗಿ ಪರಿಣಮಿಸುವರು. ನಾನು ಹಿಂದೆಯೇ ಹೇಳಿದಂತೆ ಅನೇಕಾನೇಕ ವರ್ಷಗಳು ಆಹಾರವಿಲ್ಲದೇ ಪರಿತಪಿಸುತ್ತಿದ್ದ ನನಗೆ ದೈವಾಯತ್ತವಾಗಿ ಸಿಕ್ಕಿರುವ ಈ ಆಹಾರವನ್ನು ನಾನು ಬಿಡುವುದೂ ಇಲ್ಲ, ಬೇರೆಯ ಆಹಾರ ವನ್ನು ಅಪೇಕ್ಷಿಸುವುದೂ ಇಲ್ಲ."

ಸರ್ಪವು ಹೇಳಿದ ಮಾತುಗಳನ್ನು ಕೇಳಿ ಯುಧಿಷ್ಠಿರನು ಪುನಃ ಪ್ರಶ್ನಿಸಿದನು:



"ಸರ್ಪರಾಜನೇ ನೀನಾರೆಂಬುದನ್ನು ನಾನು ತಿಳಿಯಲು ಇಚ್ಛಿಸುತ್ತೇನೆ. ನೀನೇನು ದೇವನೇ? ರಾಕ್ಷಸನೇ? ಅಥವಾ ನಿಶ್ಚಯವಾಗಿಯೂ ಉರಗನೇ?–ಎಂಬುದನ್ನು ಸತ್ಯವಾಗಿ ಹೇಳು. ನಿನ್ನನ್ನು ಪ್ರಶ್ನೆಮಾಡುತ್ತಿರುವವನು ಯುಧಿಷ್ಠಿರನೆಂಬುದನ್ನು ತಿಳಿದು ನನ್ನ ಪ್ರಶ್ನೆಗೆ ಸರಿಯಾದ ಉತ್ತರವನ್ನು ಹೇಳು. ಮೇಲಾಗಿ ನೀನು ಭೀಮಸೇನನನ್ನು ಹಿಡಿದುಕೊಂಡಿರುವ ಕಾರಣವಾದರೂ ಏನು? ಕೇವಲ ಆಹಾರಕ್ಕಾಗಿಯೇ ನೀನಿವನನ್ನು

ಬಂಧಿಸಿರುವೆಯೆಂದು ನಾನು ಭಾವಿಸುವುದಿಲ್ಲ. ನೀನು ಯಾವುದನ್ನು ಪಡೆದರೆ, ತಿಳಿದರೆ ಅಥವಾ ಯಾವುದನ್ನು ತಿಂದರೆ–ಸುಪ್ರೀತನಾಗುವೆಯೆಂಬುದನ್ನು ಹೇಳು. ಆಹಾರದ ವಿಷಯದಲ್ಲಿ ನಾನು ಈ ಭೀಮಸೇನನಿಗೆ ಪ್ರತಿಯಾಗಿ ಯಾವ ಆಹಾರವನ್ನು ಬೇಕಾದರೂ ಒದಗಿಸುವೆನು. ಭೀಮನನ್ನು ಮುಕ್ತನನ್ನಾಗಿ ಮಾಡಲು ನಿನಗೆ ಯಾವ ಆಹಾರವು ಬೇಕೆಂಬುದನ್ನು ನಿಸ್ಸಂಕೋಚವಾಗಿ ಹೇಳು, ಸರ್ಪರಾಜ!"

ಯುಧಿಷ್ಠಿರನ ಆ ಪ್ರಶ್ನೆಗಳಿಗೆ ಅಜಗರವು ಯಥಾವತ್ತಾಗಿ ಉತ್ತರಿಸಿತು : "ನರಾಧಿಪನೇ! ನಾನು ನಿನ್ನ ಪೂರ್ವಜನು. ಆಯುವೆಂಬ ರಾಜನ ಮಗನು. ನಮ್ಮ ವಂಶಪ್ರವರ್ತಕನಾದ ಚಂದ್ರನಿಂದ ಐದನೆಯವನಾದ ನಾನು ಈ ಭೂಮಂಡಲದಲ್ಲಿ ನಹುಷನೆಂಬ ಹೆಸರಿನಿಂದ ವಿಖ್ಯಾತನಾಗಿದ್ದೆನು. ಅನೇಕ ಯಜ್ಞ-ಯಾಗಗಳನ್ನು ಮಾಡಿದುದರ ಫಲವಾಗಿ, ತಪಸ್ಸುಮಾಡಿ ದುದರ ಫಲವಾಗಿ, ವೇದ-ವೇದಾಂಗಗಳನ್ನು ಅಧ್ಯಯನ ಮಾಡಿದುದರ ಫಲವಾಗಿ ಮತ್ತು ಜಿತೇಂದ್ರಿಯತೆಯಿಂದ ಇದ್ದುದರ ಫಲವಾಗಿ-ತ್ರೈಲೋಕ್ಯಾಧಿ ಪತ್ಯವನ್ನು ಪಡೆದೆನು. ಆದರೆ ತ್ರೈಲೋಕ್ಯಾಧಿಪತ್ಯವನ್ನು ಪಡೆದನಂತರ ನನ್ನನ್ನು ಅಹಂಕಾರವು ಆಕ್ರಮಿಸಿತು. ಪಲ್ಲಕ್ಕಿಯಲ್ಲಿ ಕುಳಿತು ನನ್ನನ್ನು ತಮ್ಮ ಹೆಗಲುಗಳ ಮೇಲೆ ಹೊತ್ತುಕೊಂಡು ಹೋಗುವಂತೆ ಸಾವಿರಾರು ಬ್ರಾಹ್ಮಣರಿಗೆ ಆಜ್ಞೆಮಾಡಿದೆನು. ಇಷ್ಟೇ ಅಲ್ಲದೇ ನಾನು ಆ ಬ್ರಾಹ್ಮಣರನ್ನು ನಿಂದಿಸಿದೆನು. ಅದರ ಫಲವಾಗಿ ನಾನಿಂದ ಈ ದುರವಸ್ಥೆಯನ್ನು ಅನುಭವಿಸುತ್ತಿದ್ದೇನೆ. ಮಹಾಮಹಿಮರಾದ ಅಗಸ್ತ್ಯರು ನನ್ನನ್ನು ಈ ದುರವಸ್ಥೆಗೆ ಗುರಿಮಾಡಿದ್ದಾರೆ. ಆದರೆ ಅವರ ದಿವ್ಯಾನುಗ್ರಹದಿಂದಲೇ ನನಗಿದುವರೆಗೂ ನನ್ನ ಹಿಂದಿನ ಜನ್ಮದ ಸ್ಮರಣೆಯು ಅಚ್ಚಳಿಯದಂತಿದೆ. ಅಗಸ್ತ್ಯಮಹರ್ಷಿಗಳ ಅನುಗ್ರಹದಿಂದಲೇ ದಿನದ ಆರನೆಯ ಭಾಗದಲ್ಲಿ ನಿನ್ನ ತಮ್ಮನಾದ ಈ ಭೀಮಸೇನನು ನನಗೆ ಆಹಾರವಾಗಿ ಸಿಕ್ಕಿರುವನು. ಈ ಕಾರಣದಿಂದಲೇ ನಾನು ನನಗೆ ದೈವದತ್ತವಾಗಿ ಸಿಕ್ಕಿರುವ ಈ ಆಹಾರವನ್ನು ಬಿಡುವುದೂ ಇಲ್ಲ ; ಬೇರೆಯ ಆಹಾರವನ್ನು ಅಪೇಕ್ಷಿಸುವುದೂ ಇಲ್ಲ. ಹೀಗೆ ಹೇಳಿದ ಮಾತ್ರಕ್ಕೆ ನೀನು ನಿರಾಶನಾಗಬೇಕಾಗಿಲ್ಲ. ನನ್ನ ಕೆಲವು ಪ್ರಶ್ನೆ

ಗಳಿವೆ. ಆ ಪ್ರಶ್ನೆಗಳಿಗೆ ನೀನು ಸಮಂಜಸವಾದ ಉತ್ತರಗಳನ್ನು ಕೊಡುವುದಾದರೆ ಮಾತ್ರ ನಾನು ನಿನ್ನ ತಮ್ಮನನ್ನು ಬಿಡುಗಡೆಮಾಡುತ್ತೇನೆ."

ತಮ್ಮನ ಬಿಡುಗಡೆಗೆ ಸರ್ಪವು ಒಂದು ಮಾರ್ಗವನ್ನು ಸೂಚಿಸಿದುದಕ್ಕಾಗಿ ಯುಧಿಷ್ಠಿರನಿಗೆ ಆನಂದವಾಯಿತು. ಒಡನೆಯೇ ಸರ್ಪವನ್ನು ಕುರಿತು ಹೇಳಿದನು :

"ಸರ್ಪರಾಜನೇ! ನೀನು ಯಾವ ಪ್ರಶ್ನೆಯನ್ನು ಬೇಕಾದರೂ ಕೇಳಬಹುದು. ನಿನ್ನ ಮನಸ್ಸಿಗೆ ತೃಪ್ತಿಯಾಗುವಂತೆ ನಾನು ಆ ಪ್ರಶ್ನೆಗಳಿಗೆ ಉತ್ತರಿಸಲು ಪ್ರಯತ್ನಿಸುತ್ತೇನೆ. ಬ್ರಾಹ್ಮಣರು ತಿಳಿದಿರುವ ಬ್ರಹ್ಮರಹಸ್ಯವನ್ನು ನೀನೂ ತಿಳಿದಿರುವೆಯಲ್ಲವೆ? ನಿನಗೆ ಬಗೆಹರಿಯದ ಸಮಸ್ಯೆಯೇ ಇಲ್ಲ. ಆದರೂ ನಿನ್ನ ಪ್ರಶ್ನೆಗಳಿಗೆ ಯಥಾಮತಿ ಉತ್ತರಿಸುವೆನು."

ಸರ್ಪವು ಪ್ರಶ್ನಿಸುತ್ತದೆ :

**ಬ್ರಾಹ್ಮಣಃ ಕೋ ಭವೇದ್ರಾಜನ್ವೇದ್ಯಂ ಕಿಂ ಚ ಯುಧಿಷ್ಠಿರ ।**
**ಬ್ರವೀಹ್ಯತಿಮತಿಂ ತ್ವಾಂ ಹಿ ವಾಕ್ಯೈರನುಮಿಮೀಮಹೇ ॥೨೦॥**

"ಯುಧಿಷ್ಠಿರ! ಬ್ರಾಹ್ಮಣನೆಂಬುವನು ಯಾರು? ಪ್ರಪಂಚದಲ್ಲಿ ಮಾನವನಾಗಿ ಹುಟ್ಟಿದವನು ಯಾವ ವಿಷಯವನ್ನು ತಿಳಿಯಲೇಬೇಕು? ಯಾವುದನ್ನು ತಿಳಿಯುವುದರಿಂದ ಅವನು ಸುಖಿಯಾಗುತ್ತಾನೆ? ನೀನು ಆಡಿದ ಮಾತುಗಳಿಂದಾಗಿ ನಿನ್ನನ್ನು ಮಹಾಬುದ್ಧಿವಂತನೆಂದು ತಿಳಿಯುತ್ತೇನೆ. ಈ ನನ್ನ ಪ್ರಶ್ನೆಗಳಿಗೆ ಯಥಾಶಾಸ್ತ್ರವಾಗಿ ಉತ್ತರಿಸು."

ಯುಧಿಷ್ಠಿರನು ಉತ್ತರಿಸುತ್ತಾನೆ :

**ಸತ್ಯಂ ದಾನಂ ಕ್ಷಮಾ ಶೀಲಮಾನೃಶಂಸ್ಯಂ ತಪೋ ಘೃಣಾ ।**
**ದೃಶ್ಯನ್ತೇ ಯತ್ರ ನಾಗೇನ್ದ್ರ ಸ ಬ್ರಾಹ್ಮಣ ಇತಿ ಸ್ಮೃತಃ ॥೨೧॥**

"ನಾಗೇಂದ್ರನೇ! ಸತ್ಯವಚನ, ದಾನಶೀಲತೆ, ಕ್ಷಮೆ, ಸೌಶೀಲ್ಯ, ಉದಾರತೆ, ತಪಸ್ಸು, ದಯೆ–ಈ ಎಲ್ಲ ಗುಣಗಳೂ ಯಾವನಲ್ಲಿರುತ್ತವೆಯೋ ಅಂತಹವನು ಬ್ರಾಹ್ಮಣನೆನಿಸಿಕೊಳ್ಳುತ್ತಾನೆ.

**ವೇದ್ಯಂ ಸರ್ಪ ಪರಂ ಬ್ರಹ್ಮ ನಿರ್ದುಃಖಮಸುಖಂ ಚ ಯತ್ ।**
**ಯತ್ರ ಗತ್ವಾ ನ ಶೋಚನ್ತಿ ಭವತಃ ಕಿಂ ವಿವಕ್ಷಿತಮ್ ॥೨೨॥**

ಸರ್ಪರಾಜನೇ! ಎಲ್ಲಕ್ಕಿಂತಲೂ ಮುಖ್ಯವಾಗಿ ಪರಬ್ರಹ್ಮವಸ್ತುವನ್ನು ತಿಳಿಯಬೇಕು. ಆ ಪರಬ್ರಹ್ಮವಸ್ತುವನ್ನು ತಿಳಿಯುವುದರಿಂದಲೇ ಸುಖ-ದುಃಖಗಳೆರಡೂ ದೂರವಾಗುವುವು. ಪರಬ್ರಹ್ಮವಸ್ತುವಿನಲ್ಲಿ ಸೇರಿದ್ದೇ ಆದರೆ ಮಾನವನು ಆನಂದಸ್ವರೂಪನೇ ಆಗುವನು. ಅವನಿಗೆ ಶೋಕವೆಂಬುದೇ ಇರುವುದಿಲ್ಲ. ಇಂತಹ ಪರಬ್ರಹ್ಮವಸ್ತುವನ್ನು ತಿಳಿದುಕೊಳ್ಳುವುದೂ ಮತ್ತು ಪರಬ್ರಹ್ಮವಸ್ತುವಿನಲ್ಲಿ ಲೀನವಾಗಿ ಹೋಗುವುದೂ–ಮಾನವನ ಮುಖ್ಯ ಕರ್ತವ್ಯವೆಂದು ನಾನು ಭಾವಿಸುತ್ತೇನೆ. ನಿನ್ನ ಅಭಿಪ್ರಾಯವೇನು? ಸರ್ಪರಾಜ!"

**ಚಾತುರ್ವರ್ಣ್ಯಂ ಪ್ರಮಾಣಂ ಚ ಸತ್ಯಂ ಚ ಬ್ರಹ್ಮ ಚೈವ ಹಿ ।**
**ಶೂದ್ರೇಷ್ವಪಿ ಚ ಸತ್ಯಂ ಚ ದಾನಮಕ್ರೋಧ ಏವ ಚ ।**
**ಆನೃಶಂಸ್ಯಮಹಿಂಸಾ ಚ ಘೃಣಾ ಚೈವ ಯುಧಿಷ್ಠಿರ ॥೨೩॥**

**ವೇದ್ಯಂ ಯಚ್ಚಾತ್ರ ನಿರ್ದುಃಖಮಸುಖಂ ಚ ನರಾಧಿಪ ।**
**ತಾಭ್ಯಾಂ ಹೀನಂ ಪದಂ ಚಾನ್ಯನ್ನ ತದಸ್ತೀತಿ ಲಕ್ಷಯೇ ॥೨೪॥**

"ಯುಧಿಷ್ಠಿರ! ಬ್ರಾಹ್ಮಣನೇ ಮೊದಲಾದ ನಾಲ್ಕು ವರ್ಣದವರಿಗೂ ಹಿತವನ್ನೂ ಮತ್ತು ಧರ್ಮದ ವ್ಯವಸ್ಥೆಯನ್ನೂ ವೇದಗಳು ಮಾಡುವುವು. ವೇದಗಳಲ್ಲಿ ಮತ್ತು ಸ್ಮೃತಿಗಳಲ್ಲಿ ಆಯಾಯಾ ವರ್ಣದವರು ಅನುಷ್ಠಾನ ಮಾಡಬೇಕಾದ ಕರ್ಮಗಳೂ ಉಕ್ತವಾಗಿವೆ. ಹೀಗಿರುವಲ್ಲಿ ನೀನು ಹೇಳಿದಂತೆ ಬ್ರಾಹ್ಮಣನಿಗೆ ಉಕ್ತವಾದ ಸತ್ಯವಚನ, ದಾನಶೀಲತೆ, ಕ್ಷಮೆ, ದಯೆ, ಅಹಿಂಸೆ–ಇತ್ಯಾದಿ ಗುಣಗಳು ಶೂದ್ರನೊಬ್ಬನಲ್ಲಿ ಇದ್ದರೆ ಅವನು ಬ್ರಾಹ್ಮಣನಾಗುತ್ತಾನೆಯೇ? ಎರಡನೆಯದಾಗಿ ತಿಳಿಯಲೇಬೇಕಾದ ವಸ್ತುವು ಪರಬ್ರಹ್ಮವೆಂದು ನೀನು ಹೇಳಿದೆ. ಆ ವಸ್ತುವನ್ನು ತಿಳಿಯುವುದರಿಂದ ಮಾನವನು ಸುಖ-ದುಃಖಗಳೆರಡಕ್ಕೂ ಭಾಗಿಯಾಗದೇ ಯಾವಾಗಲೂ ಆನಂದದಲ್ಲಿಯೇ ತಲ್ಲೀನನಾಗುವನೆಂದೂ ನೀನು ಹೇಳಿದೆ. ಆದರೆ ಸುಖ-ದುಃಖಗಳೆರಡರಿಂದಲೂ ವಿಹೀನವಾದ ಶುದ್ಧವಾದ ಆತ್ಮವಸ್ತುವನ್ನು ನಾನು ಮಾತ್ರ ಕಂಡಿಲ್ಲ ಅಥವಾ ಹೀಗೊಂದು ವಸ್ತುವಿದೆಯೆಂಬ ಅರಿವೂ ನನಗಿಲ್ಲ. (ಸುಖ-ದುಃಖಗಳೆರಡೂ ಇಲ್ಲದಿರುವ ಸ್ಥಾನವೊಂದು ಇರಬಲ್ಲುದೆಂದು ನಾನು ಭಾವಿಸುವುದಿಲ್ಲ.)"

**ಶೂದ್ರೇ ತು ಯದ್ಭವೇಲ್ಲಕ್ಷ್ಮದ್ವಿಜೇ ತಚ್ಚನ ವಿದ್ಯತೇ ।**
**ನ ವೈ ಶೂದ್ರೋಭವೇಚ್ಛೂದ್ರೋ ಬ್ರಾಹ್ಮಣೋ ನ ಚ ಬ್ರಾಹ್ಮಣಃ ॥೨೫॥**

**ಯತ್ರೈತಲ್ಲಕ್ಷ್ಯತೇ ಸರ್ಪ ವೃತ್ತಂ ಸ ಬ್ರಾಹ್ಮಣಃ ಸ್ಮೃತಃ ।**
**ಯತ್ರೈತನ್ನ ಭವೇತ್ಸರ್ಪ ತಂ ಶೂದ್ರಮಿತಿ ನಿರ್ದಿಶೇತ್ ॥೨೬॥**

"ಸರ್ಪರಾಜನೇ! ನಾನು ಹಿಂದೆ ಹೇಳಿದುದನ್ನು ಹೀಗೂ ಹೇಳಬಹುದಾಗಿದೆ. ಮೇಲೆ ಹೇಳಿದ ಸತ್ಯ-ದಾನಾದಿ ಗುಣಗಳು ಶೂದ್ರನಲ್ಲಿದ್ದರೆ–ಬ್ರಾಹ್ಮಣನಲ್ಲಿಲ್ಲದಿದ್ದರೆ–ಆಗ ಶೂದ್ರನೂ ಶೂದ್ರನಲ್ಲ. ಬ್ರಾಹ್ಮಣನು ಬ್ರಾಹ್ಮಣನೂ ಅಲ್ಲ. ಪರ್ಯಾಯಾಂತರವಾಗಿ ಶಮ, ದಮ, ದಯೆ, ಸತ್ಯ, ತಪಸ್ಸು, ಕ್ಷಮೆ–ಇತ್ಯಾದಿ ಗುಣಗಳಿಂದ ಕೂಡಿರುವವನು ಬ್ರಾಹ್ಮಣನೇ ಸರಿ. ಅವನು ಶೂದ್ರನಲ್ಲ ; ಶೂದ್ರನಾಗುವ ಸಾಧ್ಯತೆಯೂ ಇಲ್ಲ. ಈ ಗುಣಗಳಿಲ್ಲದವನೂ, ಕಾಮ-ಕ್ರೋಧಾದಿಗಳನ್ನು ಹೊಂದಿರುವವನೂ, ಕ್ರೂರಕರ್ಮಿಯೂ ಆದವನು ಶೂದ್ರನೇ ಸರಿ. ಅವನೆಂದಿಗೂ ಬ್ರಾಹ್ಮಣನಾಗಲಾರನು.

ಮೇಲೆ ಹೇಳಿದ ಶಮ-ದಮಾದಿ ಗುಣಗಳೆಲ್ಲವೂ ಯಾವನಲ್ಲಿವೆಯೋ ಅವನು ಬ್ರಾಹ್ಮಣನೆನಿಸಿಕೊಳ್ಳುತ್ತಾನೆ. ಯಾವನಲ್ಲಿ ಈ ಗುಣಗಳಿಲ್ಲದೇ ತಮೋಗುಣದ ಪ್ರವೃತ್ತಿಯೇ ಇರುವುದೋ–ಅವನು ಶೂದ್ರನೆನಿಸಿಕೊಳ್ಳುತ್ತಾನೆ.

**ಯತ್ತ್ವಪುನರ್ಭವತಾ ಪ್ರೋಕ್ತಂ ನ ವೇದ್ಯಂ ವಿದ್ಯತೀತಿ ಚ ।**
**ತಾಭ್ಯಾಂ ಹೀನಮತೋಽನ್ಯತ್ರ ಪದಮಸ್ತೀತಿ ಚೇದಪಿ ॥೨೭॥**

**ಏವಮೇತನ್ಮತಂ ಸರ್ಪ ತಾಭ್ಯಾಂ ಹೀನಂ ನ ವಿದ್ಯತೇ ।**
**ಯಥಾ ಶೀತೋಷ್ಣಯೋರ್ಮಧ್ಯೇ ಭವೇನ್ನೋಷ್ಣಂ ನ ಶೀತತಾ ॥೨೮॥**

**ಏವಂ ವೈ ಸುಖದುಃಖಾಭ್ಯಾಂ ಹೀನಮಸ್ತಿ ಪದಂ ಕ್ವಚಿತ್ ।**
**ಏಷಾ ಮಮ ಮತಿಃ ಸರ್ಪ ಯಥಾ ವಾ ಮನ್ಯತೇ ಭವಾನ್ ॥೨೯॥**

ಸುಖ-ದುಃಖಗಳೆರಡೂ ಇಲ್ಲದ ವಸ್ತುವೇ ಇಲ್ಲವೆಂದು ಹೇಳುವುದು ನಿನ್ನ ವೈಯಕ್ತಿಕವಾದ ಅಭಿಪ್ರಾಯ ಮಾತ್ರ. ಏಕೆಂದರೆ : ಶೀತವಿರುವ ಕಡೆ ಉಷ್ಣವಿರಲಾರದೆಂಬುದೂ–ಉಷ್ಣವಿರುವ ಕಡೆ ಶೀತವಿರಲಾರದೆಂಬುದೂ ಸತ್ಯ

ವಾದರೂ–ಶೀತೋಷ್ಣಗಳೆರಡೂ ಸಮವಾಗಿ ಒಂದೆಡೆಯಲ್ಲಿ ಇರಬಹುದು. 'ಶೀತವೂ ಇಲ್ಲ ; ಉಷ್ಣವೂ ಇಲ್ಲ ; ಸಮಶೀತೋಷ್ಣವಾಗಿದೆ'–ಎಂದು ಹೇಳಿ ಕೊಳ್ಳುವ ವಾತಾವರಣವೂ ಇದೆಯಲ್ಲವೆ? ಶೀತೋಷ್ಣಗಳೆರಡೂ ಹೇಗೆ ಇಲ್ಲದೆಯೇ ಇರಬಹುದೋ–ಅದೇ ರೀತಿಯಲ್ಲಿ ಸುಖ-ದುಃಖಗಳೆರಡೂ ಇಲ್ಲದಿರುವ ಒಂದು ಸ್ಥಾನವಿರುವುದೆಂದು ನಾನು ಭಾವಿಸಿರುತ್ತೇನೆ. ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು, ಸರ್ಪರಾಜ?"

ಯದಿ ತೇ ವೃತ್ತತೋ ರಾಜನ್ಬ್ರಾಹ್ಮಣಃ ಪ್ರಸಮೀಕ್ಷಿತಃ ।
ವೃಥಾ ಜಾತಿಸ್ತದಾಯುಷ್ಮನ್ಕೃತಿರ್ಯಾವನ್ನ ವಿದ್ಯತೇ ॥೩೦॥

"ಆಯುಷ್ಮಂತನೇ! ನೀನು ಹೇಳಿದಂತೆ ಸದಾಚಾರಸಂಪನ್ನನಾಗಿರು ವವನೇ ಬ್ರಾಹ್ಮಣನೆಂದು ನಿಶ್ಚಯಿಸುವುದಾದರೆ–ವರ್ಣಾಶ್ರಮಗಳೇ ಹಾಳಾಗಿ ಹೋಗುತ್ತವೆಯಲ್ಲವೇ? ಏಕೆಂದರೆ : ಮಾನವನು ವೃತ್ತಿಯಲ್ಲಿ ಪ್ರವೃತ್ತ ನಾಗುವವರೆಗೂ ಅವನು ಯಾವ ಜಾತಿಯವನೆಂದು ಹೇಳುವ ಸಾಧ್ಯತೆಯೇ ಇರುವುದಿಲ್ಲ."

ಜಾತಿರತ್ರ ಮಹಾಸರ್ಪ ಮನುಷ್ಯತ್ವೇ ಮಹಾಮತೇ ।
ಸಂಕರಾತ್ಸರ್ವವರ್ಣಾನಾಂ ದುಷ್ಪರೀಕ್ಷ್ಯೇತಿ ಮೇ ಮತಿಃ ॥೩೧॥

ಸರ್ವೇ ಸರ್ವಾಸ್ವಪತ್ಯಾನಿ ಜನಯನ್ತಿ ಸದಾ ನರಾಃ ।
ವಾಙ್ಮೈಥುನಮಥೋ ಜನ್ಮ ಮರಣಂ ಚ ಸಮಂ ನೃಣಾಮ್ ॥೩೨॥

ಇದಮಾರ್ಷಂ ಪ್ರಮಾಣಂ ಚ ಯೇ ಯಜಾಮಹ ಇತ್ಯಪಿ ।
ತಸ್ಮಾಚ್ಛೀಲಂ ಪ್ರಧಾನೇಷ್ಟಂ ವಿದುರ್ಯೇ ತತ್ತ್ವದರ್ಶಿನಃ ॥೩೩॥

"ಸರ್ಪರಾಜನೇ! ನೀನು ಹೇಳುವುದೂ ಸರಿ, ಆದರೆ ಮಾನವ ಜನಾಂಗದಲ್ಲಿ ಹುಟ್ಟಿದವನ ಜಾತಿಯು ಯಾವುದೆಂಬುದನ್ನು ನಿರ್ಧರಿಸಲು ಸಾಧ್ಯವಿಲ್ಲವೆಂದು ನಾನು ಭಾವಿಸುತ್ತೇನೆ. ಬ್ರಾಹ್ಮಣನಾದವನು ಬ್ರಾಹ್ಮಣಕನ್ಯೆ ಯನ್ನೇ ವಿವಾಹಮಾಡಿಕೊಂಡರೆ ಹುಟ್ಟುವವನು ಬ್ರಾಹ್ಮಣನಾಗುತ್ತಾನೆ ಎಂದು ಹೇಳಬಹುದಾದರೂ–ಸರ್ವರ್ಣಗಳ ಸಂಕರವೂ ಆಗುವ ಸಂಭವ ವಿರುವುದರಿಂದ ಜಾತಿಯನ್ನು ನಿರ್ಧರಿಸುವುದು ದುಸ್ಸಾಧ್ಯ. ಎಲ್ಲ ವರ್ಣಗಳ

ಪುರುಷರೂ ಎಲ್ಲ ವರ್ಣಗಳ ಸ್ತ್ರೀಯರೊಡನೆಯೂ ಸಂಗಮಾಡುತ್ತಾರೆ. ಈಗ ಮಾನವರಲ್ಲಿ ಸರ್ವಸಮಾನವಾಗಿರುವುದು ಯಾವುವೆಂದರೆ : ಭಾಷೆ, ಮೈಥುನ, ಹುಟ್ಟು ಮತ್ತು ಸಾವುಗಳು ಮಾತ್ರ. ಈ ವಿಷಯದಲ್ಲಿ ಆರ್ಷಪ್ರಮಾಣವೂ ನಿರ್ಣಾಯಕವಾಗಿದೆ. ಆದುದರಿಂದಲೇ ಯಜ್ಞಮಾಡುವ ಮೊದಲು–'ಯೇ ಯಜಾಮಹೇ'–"ಯಾವುದೇ ಜಾತಿಗೆ ಸೇರಿರುವ ನಾವಿಂದು ಯಜ್ಞಮಾಡಲು ಉಪಕ್ರಮಿಸಿದ್ದೇವೆ."–ಎಂದು ಹೇಳಿಯೇ ಯಜ್ಞವನ್ನು ಆರಂಭಿಸುತ್ತಾರೆ. ಆದುದರಿಂದಲೇ ತತ್ತ್ವದರ್ಶಿಗಳಾದವರು ಜಾತಿಯನ್ನು ನಿರ್ಧರಿಸಲು ಮನುಷ್ಯನ ಶೀಲವನ್ನೇ ಪ್ರಧಾನವನ್ನಾಗಿ ತೆಗೆದು ಕೊಳ್ಳಬೇಕೆಂಬ ಅಭಿಪ್ರಾಯವುಳ್ಳವರಾಗಿದ್ದಾರೆ. ಆದರೆ ಸಂಸ್ಕಾರಗಳು ಬ್ರಾಹ್ಮಣತ್ವವನ್ನು ಸಂಪಾದಿಸಿಕೊಡುತ್ತವೆ, ಸರ್ಪರಾಜ!

**ಪ್ರಾಙ್ನಾಭಿವರ್ಧನಾತ್ಪುಂಸೋ ಜಾತಕರ್ಮ ವಿಧೀಯತೇ ।**
**ತತ್ರಾಸ್ಯ ಮಾತಾ ಸಾವಿತ್ರೀ ಪಿತಾ ತ್ವಚಾರ್ಯ ಉಚ್ಯತೇ ॥೩೪॥**

**ತಾವಚ್ಛೂದ್ರಸಮೋ ಹ್ಯೇಷ ಯಾವದ್ವೇದೇ ನ ಜಾಯತೇ ।**
**ತಸ್ಮಿನ್ನೇವಂ ಮತಿದ್ವೈಧೇ ಮನುಃ ಸ್ವಾಯಮ್ಭುವೋಽಬ್ರವೀತ್ ॥೩೫॥**

**ಕೃತಕೃತ್ಯಾಃ ಪುನರ್ವರ್ಣಾ ಯದಿ ವೃತ್ತಂ ನ ವಿದ್ಯತೇ ।**
**ಸಂಕರಸ್ತತ್ರ ನಾಗೇನ್ದ್ರ ಬಲಾವಾನ್ಪ್ರಸಮೀಕ್ಷಿತಃ ॥೩೬॥**

ನಾಗೇಂದ್ರನೇ! ಹುಟ್ಟಿದ ಮಗುವಿಗೆ ಹೊಕ್ಕುಳುಬಳ್ಳಿಯನ್ನು ಛೇದ ಮಾಡುವ ಮೊದಲು ತಾಯಿ-ತಂದೆಗಳು ಜಾತಕರ್ಮಸಂಸ್ಕಾರವನ್ನು ಮಾಡುತ್ತಾರೆ. ತಾಯಿಯು ಸಾವಿತ್ರಿಯ ಸ್ಥಾನದಲ್ಲಿಯೂ ತಂದೆಯು ಆಚಾರ್ಯ ಸ್ಥಾನದಲ್ಲಿಯೂ ಇರುತ್ತಾನೆ. ಆ ಶಿಶುವನ್ನು ರೂಢಿಯಲ್ಲಿ 'ಬ್ರಾಹ್ಮಣ ಶಿಶು' ಎನ್ನುತ್ತಾರೆ. ಆದರೆ ಉಪನಯನವಾಗಿ ವೇದಾಧ್ಯಯನದ ಅಧಿಕಾರವನ್ನು ಪಡೆಯುವವರೆಗೆ ಆ ಬಾಲಕನು ಶೂದ್ರನಾಗಿಯೇ ಇರುವನು. ಆದುದರಿಂದ ಬ್ರಾಹ್ಮಣನಾಗಬೇಕಾದರೆ ಸಂಸ್ಕಾರವೇ ಪ್ರಧಾನವೆಂಬುದು ಇಲ್ಲಿ ಸ್ಪಷ್ಟವಾಗಿದೆ.

'ಸಂಸ್ಕಾರ' ಎಂದರೇನು ; 'ಸತ್ವ್ಯೃತ್ತ' ಎಂದರೇನು? ಎಂದರೆ : ಸಂಸ್ಕಾರದ ಫಲವೇ ಸದ್ವೃತ್ತ–ಎಂಬುದು ನನ್ನ ಅಭಿಪ್ರಾಯವಾಗಿದೆ. ಬಹಳ

ಹಿಂದೆಯೇ 'ಸಂಸ್ಕಾರ ಮತ್ತು ವೃತ್ತ' ಎಂಬ ವಿಷಯದಲ್ಲಿ ಮನಸ್ಸು ಡೋಲಾಯಮಾನವಾದಾಗ ಸ್ವಾಯಭುವಮನುವು ಹೀಗೆ ಹೇಳಿದ್ದಾನೆ :

ಬ್ರಾಹ್ಮಣಾದಿ ವರ್ಣದವರು, ಜಾತಕರ್ಮ-ನಾಮಕರಣಾದಿ ವೈದಿಕ ಸಂಸ್ಕಾರಗಳನ್ನು ಪಡೆದ ಮೇಲೂ ಅವರಲ್ಲಿ ಸದ್ವೃತ್ತಿಯೇ ಇಲ್ಲದಿದ್ದರೆ–ಅಲ್ಲಿ ಬಲವಾದ ವರ್ಣಸಾಂಕರ್ಯವಿದೆಯೆಂದು ನಿಶ್ಚಯಿಸಬೇಕು. ಈ ರೀತಿಯಲ್ಲಿ ಈ ವಿಷಯವು ಅನೇಕವಿಧವಾದ ವಿಮರ್ಶೆಗಳಿಂದ ನಿಶ್ಚಯಿಸಲ್ಪಟ್ಟಿದೆ.

**ಯತ್ರೇದಾನೀಂ ಮಹಾಸರ್ಪ ಸಂಸ್ಕೃತಂ ವೃತ್ತಮಿಷ್ಯತೇ ।**
**ತಂ ಬ್ರಾಹ್ಮಣಮಹಂ ಪೂರ್ವಮುಕ್ತವಾನ್ಭುಜಗೋತ್ತಮ ॥೩೭॥**

ಸರ್ಪರಾಜನೇ! ಈ ಕಾರಣಗಳಿಂದಾಗಿ ಸಂಸ್ಕಾರವೆಂದರೆ ಸದ್ವೃತ್ತ ವೆಂದೇ ನನ್ನ ದೃಢನಿಶ್ಚಯವಾಗಿದೆ. ಜಾತಕರ್ಮಾದಿ ಸಂಸ್ಕಾರಗಳಿಂದ ಕೂಡಿರುವನೆಂದರೆ ಸದ್ವೃತ್ತಿಯುಳ್ಳವನಾಗಿರುವನೆಂದೇ ಅರ್ಥಮಾಡಬೇಕು. ಸದ್ವೃತ್ತಿಯಿಂದ ವಿಹೀನನಾಗಿದ್ದರೆ ಅವನಿಗಾಗಿರುವ ಸಂಸ್ಕಾರವೂ ವ್ಯರ್ಥವೇ ಸರಿ. ಸಂಸ್ಕಾರ ಸಹಿತವಾದ ಒಳ್ಳೆಯ ನಡತೆ ಯಾವನಲ್ಲಿರುವುದೋ ಅಂತಹವನನ್ನೇ ನಾನು ಈ ಹಿಂದೆ ಬ್ರಾಹ್ಮಣನೆಂದು ಹೇಳಿದೆನು."

**ಶ್ರುತಂ ವಿದಿತವೇದ್ಯಸ್ಯ ತವ ವಾಕ್ಯಂ ಯುಧಿಷ್ಠಿರ ।**
**ಭಕ್ಷಯೇಯಮಹಂ ಕಸ್ಮಾದ್ಭ್ರಾತರಂ ತೇ ವೃಕೋದರಮ್ ॥೩೮॥**

"ಯುಧಿಷ್ಠಿರ! ತಿಳಿಯಬೇಕಾಗಿರುವ ಎಲ್ಲ ವಿಷಯಗಳೂ ನಿನಗೆ ತಿಳಿದಿವೆ. ನೀನು ಪ್ರಾಜ್ಞನಾಗಿರುವೆ. ನಿನ್ನೀ ಮಾತುಗಳನ್ನು ಕೇಳಿದ ನಂತರ ನಾನು ನನ್ನ ತಮ್ಮನನ್ನು ಹೇಗೆ ತಾನೇ ಭಕ್ಷಿಸಲಿ?"

೧೮೦ನೆಯ ಅಧ್ಯಾಯವು ಮುಗಿಯಿತು.

೧೮೧ನೆಯ ಅಧ್ಯಾಯ ಆಜಗರಪರ್ವ (ಮುಂದುವರಿದಿದೆ.)

## ತನ್ನ ಪ್ರಶ್ನೆಗಳಿಗೆ ಯುಧಿಷ್ಠಿರನಿಂದ ಸದುತ್ತರಗಳನ್ನು ಪಡೆದ ಸರ್ಪರೂಪಿಯಾದ ನಹುಷನು ಸಂತುಷ್ಟನಾಗಿ ಭೀಮಸೇನನನ್ನು ಬಿಡುಗಡೆಮಾಡಿದುದು : ಶಾಪದಿಂದ ವಿಮುಕ್ತನಾದ ನಹುಷನು ಸ್ವರ್ಗಕ್ಕೆ ಹೋದುದು

ಯುಧಿಷ್ಠಿರನು ಅಜಗರನನ್ನು ಕುರಿತು ಕೇಳುತ್ತಾನೆ :

"ಸರ್ಪರಾಜನೇ! ನೀನು ವೇದ-ವೇದಾಂಗಪರಾಂಗತನಾಗಿರುವೆ. ಯಾವ ಕರ್ಮಾಚರಣೆಯಿಂದ ಸದ್ಗತಿಯುಂಟಾಗುವುದೆಂಬುದನ್ನು ದಯ ಮಾಡಿ ಹೇಳು."

ಸರ್ಪವು ಹೇಳುತ್ತದೆ :

**ಪಾತ್ರೇ ದತ್ತ್ವಾ ಪ್ರಿಯಾಣ್ಯುಕ್ತ್ವಾ ಸತ್ಯಮುಕ್ತ್ವಾ ಚ ಭಾರತ ।**
**ಅಹಿಂಸಾನಿರತಃ ಸ್ವರ್ಗಂ ಗಚ್ಛೇದಿತಿ ಮತಿರ್ಮಮ ॥೨॥**

ಭಾರತನೇ! ಸತ್ಪಾತ್ರನಿಗೆ ದಾನಮಾಡುವುದು, ಪ್ರಿಯೋಕ್ತಿಗಳನ್ನು ಹೇಳುವುದು, ಸತ್ಯಭಾಷಿಯಾಗಿರುವುದು ಮತ್ತು ಅಹಿಂಸಾವ್ರತವನ್ನು ಪಾಲಿಸುವುದು–ಇವುಗಳ ಫಲವಾಗಿ ಮಾನವನು ಅವಸಾನಾಂತರದಲ್ಲಿ ಸ್ವರ್ಗಲೋಕವನ್ನು ಪಡೆಯುತ್ತಾನೆಂಬುದು ನನ್ನ ಅಭಿಪ್ರಾಯವಾಗಿದೆ."

**ದಾನಾದ್ವಾ ಸರ್ಪ ಸತ್ಯಾದ್ವಾ ಕಿಮತೋ ಗುರು ದೃಶ್ಯತೇ ।**
**ಅಹಿಂಸಾಪ್ರಿಯಯೋಶ್ಚೈವ ಗುರುಲಾಘವಮುಚ್ಯತಾಮ್ ॥೩॥**

"ಸರ್ಪರಾಜನೇ! ಸತ್ಪಾತ್ರನಲ್ಲಿ ದಾನ ಮತ್ತು ಸತ್ಯವಚನ–ಇವುಗಳಲ್ಲಿ ಯಾವುದು ಶ್ರೇಷ್ಠವಾದುದು? ಅಹಿಂಸೆ ಮತ್ತು ಪ್ರಿಯೋಕ್ತಿಗಳಲ್ಲಿ ಯಾವುದು ಶ್ರೇಷ್ಠವಾದುದು? ಈ ರಹಸ್ಯವಿಷಯವನ್ನು ಹೇಳು."

**ದಾನಂ ಚ ಸತ್ಯಂ ತತ್ತ್ವಂ ವಾ ಅಹಿಂಸಾ ಪ್ರಿಯಮೇವ ಚ ।**
**ಏಷಾಂ ಕಾರ್ಯಗರೀಯಸ್ತ್ವಾದ್ದೃಶ್ಯತೇ ಗುರುಲಾಘವಮ್ ॥೪॥**

"ಯುಧಿಷ್ಠಿರ! ದಾನ, ಸತ್ಯವಚನ, ಅಹಿಂಸೆ, ಪ್ರಿಯವಾಕ್ಯ–ಇವುಗಳಲ್ಲಿ ಪ್ರತಿಯೊಂದರ ಹಿರಿಮೆಯನ್ನು ತಾರತಮ್ಯದಿಂದ ಹೇಳುವ ಸಾಧ್ಯತೆ

ಯಿಲ್ಲ. ಅವುಗಳನ್ನು ಕಾರ್ಯರೂಪಕ್ಕೆ ತರುವ ಕಾಲದಲ್ಲಿ ಆಯಾ ಕಾರ್ಯಗಳ ಗುರು-ಲಾಘವಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಆದರದರ ಫಲಗಳನ್ನು ನಿರ್ಧರಿಸಬೇಕಾಗುತ್ತದೆ.

**ಕಸ್ಮಾಚ್ಚಿದ್ದಾನಯೋಗಾದ್ಧಿ ಸತ್ಯಮೇವ ವಿಶಿಷ್ಯತೇ ।**
**ಸತ್ಯವಾಕ್ಯಾಚ್ಚ ರಾಜೇನ್ದ್ರ ಕಿಂಚಿದ್ದಾನಂ ವಿಶಿಷ್ಯತೇ ॥೫॥**

ಕೆಲವು ಸಮಯಗಳಲ್ಲಿ ದಾನಕ್ಕಿಂತಲೂ ಸತ್ಯವಚನವೇ ಪ್ರಶಂಸಾರ್ಹವಾಗುತ್ತದೆ. ಮತ್ತೆ ಕೆಲವು ಸಮಯಗಳಲ್ಲಿ ಸತ್ಯವಚನಕ್ಕಿಂತಲೂ ಸತ್ಪಾತ್ರನಲ್ಲಿ ದಾನಮಾಡುವುದೇ ಪ್ರಶಂಸಾರ್ಹವಾಗುತ್ತದೆ.

**ಏವಮೇವ ಮಹೇಷ್ವಾಸ ಪ್ರಿಯವಾಕ್ಯಾನ್ಮಹೀಪತೇ ।**
**ಅಹಿಂಸಾ ದೃಶ್ಯತೇ ಗುರ್ವೀ ತತಶ್ಚ ಪ್ರಿಯಮಿಷ್ಯತೇ ॥೬॥**

ಇದೇ ರೀತಿಯಲ್ಲಿಯೇ ಕೆಲವು ಸಮಯಗಳಲ್ಲಿ ಅಹಿಂಸೆಯು ಪ್ರಶಂಸಾರ್ಹವಾಗುತ್ತದೆ. ಮತ್ತೆ ಕೆಲವು ಸಮಯಗಳಲ್ಲಿ ಪ್ರಿಯೋಕ್ತಿಗಳೇ ಪ್ರಶಂಸಾರ್ಹವಾಗುತ್ತವೆ. ಆದುದರಿಂದ ತಾತ್ಕಾಲಿಕವಾಗಿ ಆಯಾ ಕಾರ್ಯಗಳ ಫಲವೇನೆಂಬುದನ್ನು ಅವಲಂಬಿಸಿ ಅವುಗಳಲ್ಲಿ ಯಾವುದು ಮುಖ್ಯವೆಂಬುದನ್ನು ನಿರ್ಧರಿಸಬೇಕೇ ಹೊರತು ಒಂದೊಂದಕ್ಕೂ ತಾರತಮ್ಯವನ್ನು ಹೇಳುವ ಸಾಧ್ಯತೆಯಿಲ್ಲ. ಒಟ್ಟಿನಲ್ಲಿ ಸಂಸ್ಕೃತನಾದ ಮಾನವನಲ್ಲಿ ಈ ನಾಲ್ಕು ಗುಣಗಳೂ ಇರುತ್ತವೆ. ಮಹಾರಾಜ! ಈಗ ನೀನು ಮತ್ತೇನನ್ನಾದರೂ ಕೇಳುವುದಿದ್ದರೆ ಕೇಳಬಹುದು. ಯಥೋಚಿತವಾಗಿ ಉತ್ತರಿಸುತ್ತೇನೆ."

**ಕಥಂ ಸ್ವರ್ಗೇ ಗತಿಃ ಸರ್ಪ ಕರ್ಮಣಾಂ ಚ ಫಲಂ ಧ್ರುವಮ್ ।**
**ಅಶರೀರಸ್ಯ ದೃಶ್ಯೇತ ಪ್ರಬ್ರೂಹಿ ವಿಷಯಾಂಶ್ಚಮೇ ॥೭॥**

"ಸರ್ಪರಾಜನೇ! ಮನುಷ್ಯನು ಮೃತನಾಗಿ ಹೋದೊಡನೆಯೇ ಅವನ ಶರೀರವನ್ನು ಸುಟ್ಟುಬಿಡುತ್ತಾರೆ. ಶರೀರವೇ ಸುಟ್ಟುಹೋದನಂತರ ಕರ್ಮಫಲಗಳು ಹೇಗೆ ತಾನೇ ಉಳಿಯುವುವು? ಸ್ವರ್ಗಕ್ಕೆ ಹೋಗುವುದಾದರೂ ಹೇಗೆ? ಶರೀರವಿಲ್ಲದೆಯೇ ಸ್ವರ್ಗದಲ್ಲಿ ಸುಖವನ್ನು ಅನುಭವಿಸುವುದಾದರೂ ಹೇಗೆ ಸಾಧ್ಯ?–ಇವುಗಳೆಲ್ಲವನ್ನೂ ವಿಶದವಾಗಿ ಹೇಳು."

"ಯುಧಿಷ್ಠಿರ! ಭೌತಿಕಶರೀರವು ನಷ್ಟವಾದ ಮಾತ್ರಕ್ಕೆ ಜೀವವು ನಷ್ಟವಾಗಿ ಹೋಗುವುದಿಲ್ಲ.

**ತಿಸ್ರೋ ವೈ ಗತಯೋ ರಾಜನ್ಪರಿದೃಷ್ಟಾಃ ಸ್ವಕರ್ಮಭಿಃ ।**
**ಮಾನುಷಂ ಸ್ವರ್ಗವಾಸಶ್ಚ ತಿರ್ಯಗ್ಯೋನಿಶ್ಚ ತತ್ತ್ರಿಧಾ ॥೯॥**

ಆಯಾ ಜನ್ಮಗಳಲ್ಲಿ ಮಾಡಿದ ಪಾಪ-ಪುಣ್ಯಕಾರ್ಯಗಳ ಫಲದಿಂದ ಸುತ್ತುವರಿಯಲ್ಪಟ್ಟ ಜೀವನು ಮೂರು ವಿಧವಾಗಿ ಪರಿವರ್ತನೆಹೊಂದಲು ಸಾಧ್ಯವಿದೆ. ಸ್ವರ್ಗಪ್ರಾಪ್ತಿ, ಮನುಷ್ಯಜನ್ಮ, ತಿರ್ಯಗ್ಯೋನಿಜನ್ಮ–ಇವೇ ಆ ಮೂರು ಗತಿಗಳು. (ಇವನ್ನು ಕ್ರಮವಾಗಿ ಊರ್ಧ್ವಗತಿ-ಮಧ್ಯಗತಿ-ಅಧೋಗತಿಗಳೆಂದು ಹೇಳುತ್ತಾರೆ.)

**ತತ್ರ ವೈ ಮಾನುಷಾಲ್ಲೋಕಾದ್ದಾನಾದಿಭಿರತನ್ದ್ರಿತಃ ।**
**ಅಹಿಂಸಾರ್ಥಸಮಾಯುಕ್ತೈಃ ಕಾರಣೈಃ ಸ್ವರ್ಗಮಶ್ನುತೇ ॥೧೦॥**

ಯಾವ ಮನುಷ್ಯನು ಆಲಸ್ಯರಹಿತನಾಗಿ ದಾನ-ಅಹಿಂಸೆ-ಸತ್ಯನಿಷ್ಠೆ ಇವುಗಳನ್ನು ಆಚರಿಸುವನೋ–ಅವನು ಸ್ವರ್ಗಕ್ಕೆ ಹೋಗಲು ಸಮರ್ಥನಾಗುತ್ತಾನೆ.

**ವಿಪರೀತೈಶ್ಚರಾಜೇನ್ದ್ರ ಕಾರಣೈರ್ಮಾನುಷೋ ಭವೇತ್ ।**
**ತಿರ್ಯಗ್ಯೋನಿಸ್ತಥಾ ತಾತ ವಿಶೇಷಶ್ಚಾತ್ರ ವಕ್ಷ್ಯತೇ ॥೧೧॥**

ದಾನಾದಿಗಳನ್ನು ಮಾಡದೇ ಪಾಪಕಾರ್ಯಗಳನ್ನೂ ಮಾಡದೇ ಇದ್ದು ಪಾಪ-ಪುಣ್ಯಗಳೆರಡೂ ಸಮಾನವಾಗಿದ್ದರೆ–ಅಂತಹವನು ಮರ್ತ್ಯಲೋಕದಲ್ಲಿಯೇ ಪುನಃ ಮನುಷ್ಯನಾಗಿ ಜನ್ಮತಾಳುತ್ತಾನೆ. ಇದಕ್ಕೆ ವಿರುದ್ಧವಾದ ಆಚಾರವ್ಯವಹಾರವುಳ್ಳವನು ತಿರ್ಯಗ್ಜಂತುಗಳ ಯೋನಿಗಳಲ್ಲಿ ಜನ್ಮತಾಳುತ್ತಾನೆ. ಇಷ್ಟು ಮಾತ್ರವಲ್ಲ:

**ಕಾಮಕ್ರೋಧಸಮಾಯುಕ್ತೋ ಹಿಂಸಾಲೋಭಸಮನ್ವಿತಃ ।**
**ಮನುಷ್ಯತ್ವಾತ್ಪರಿಭ್ರಷ್ಟಸ್ತಿರ್ಯಗ್ಯೋನೌ ಪ್ರಸೂಯತೇ ॥೧೨॥**

ಯಾವನು ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯಗಳಿಗೆ ಆಶ್ರಯನಾಗಿರುವನೋ–ಅಂತಹವನೂ ಮನುಷ್ಯತ್ವವನ್ನು ಕಳೆದುಕೊಂಡು ಜನ್ಮಾಂತರದಲ್ಲಿ ಕುತ್ಸಿತಪ್ರಾಣಿಗಳ ಯೋನಿಗಳಲ್ಲಿ ಜನ್ಮತಾಳುತ್ತಾನೆ.

**ತಿರ್ಯಗ್ಯೋನ್ಯಾಃ ಪೃಥಗ್ಭಾವೋ ಮನುಷ್ಯಾರ್ಥೇ ವಿಧೀಯತೇ ।**
**ಗವಾದಿಭ್ಯಸ್ತಥಾಶ್ವೇಭ್ಯೋ ದೇವತ್ವಮಪಿ ದೃಶ್ಯತೇ ॥೧೩॥**

ಇದೇ ರೀತಿಯಲ್ಲಿ ತಿರ್ಯಗ್ಜಂತುಗಳೂ ಅವುಗಳ ಕರ್ಮಫಲದಿಂದಾಗಿ ಮನುಷ್ಯಜನ್ಮವನ್ನು ಪಡೆಯಲು ಸಾಧ್ಯವಿದೆ. ಕುದುರೆ, ಹಸು–ಮುಂತಾದ ಕೆಲವು ಪ್ರಾಣಿಗಳಿಗೆ ಉಚ್ಚಯೋನಿಗಳಲ್ಲಿ ಜನಿಸಿ ಸ್ವರ್ಗಕ್ಕೂ ಹೋಗುವ, ಸ್ವರ್ಗಸುಖವನ್ನೂ ಅನುಭವಿಸುವ ಸಾಧ್ಯತೆಯಿದೆ.

**ಸೋಽಯಮೇತಾ ಗತೀಸ್ತಾತ ಜನ್ತುಶ್ಚರತಿ ಕಾರ್ಯವಾನ್ ॥೧೪॥**

ಹೀಗೆ ಸಂಸಾರಚಕ್ರದಲ್ಲಿ ಸಿಕ್ಕಿದ ಕರ್ಮವಶನಾದ ಜೀವನು ಮೇಲೆ ಹೇಳಿದಂತೆ ಕರ್ಮಾನುಗುಣವಾಗಿ ಬೇರೆ ಬೇರೆ ಗತಿಗಳನ್ನು ಹೊಂದುತ್ತಾನೆ.

**ನಿತ್ಯೇ ಮಹತಿ ಚಾತ್ಮಾನಮವಸ್ಥಾಪಯತೇ ದ್ವಿಜಃ ।**
**ಜಾತೋ ಜಾತಶ್ಚ ಬಲವದ್ಭುಙ್ಕ್ತೇ ಚಾತ್ಮಾ ಸ ದೇಹವಾನ್ ।**
**ಫಲಾರ್ಥಸ್ತಾತ ನಿಷ್ಪೃಕ್ತಃ ಪ್ರಜಾಪಾಲನಭಾವನಃ ॥೧೫॥**

ಆದರೆ ದ್ವಿಜನಾದವನು ಕರ್ಮಗಳನ್ನಾಗಲೀ, ಕರ್ಮಫಲಗಳನ್ನಾಗಲೀ ಇಚ್ಛಿಸದೇ ಜೀವಾತ್ಮನನ್ನು ಪರಮಾತ್ಮಸ್ವರೂಪದಲ್ಲಿ ನೆಲೆಗೊಳಿಸಲು ಪ್ರಯತ್ನಿಸುತ್ತಾನೆ. ಜ್ಞಾನಿಯೊಬ್ಬನ ಹೊರತಾಗಿ ಉಳಿದವರೆಲ್ಲರೂ ದೇಹಾಭಿಮಾನಿಗಳಾಗಿ ತಮ್ಮ ತಮ್ಮ ಕರ್ಮಫಲಗಳನ್ನು ಅನುಭವಿಸುತ್ತಾ ನಾನಾವಿಧವಾದ ಯೋನಿಗಳಲ್ಲಿ ಹುಟ್ಟುತ್ತಾ-ತಾವು ಮಾಡಿದ ಕರ್ಮಫಲಗಳನ್ನು ಅನುಭವಿಸುತ್ತಿರುತ್ತಾರೆ. ಆದರೆ ನಿಷ್ಕಾಮಕರ್ಮವನ್ನು ಮಾಡುವವನು ಹುಟ್ಟು-ಸಾವುಗಳೆಂಬ ಈ ಚಕ್ರವನ್ನು ತಿಳಿದವನಾಗಿ ಇದರಿಂದ ತಪ್ಪಿಸಿಕೊಳ್ಳಲು ಯತ್ನಿಸುತ್ತಾನೆ.”

“ಸರ್ಪರಾಜನೇ! ನಿನ್ನನ್ನು ಕೇಳಿ ತಿಳಿದುಕೊಳ್ಳುವ ವಿಷಯಗಳು ಅನೇಕವಾಗಿವೆ. ನನಗೆ ಸ್ವಲ್ಪವೂ ಸಂಶಯವುಂಟಾಗದ ರೀತಿಯಲ್ಲಿ ನಾನೀಗ ಕೇಳುವ ಪ್ರಶ್ನೆಗಳಿಗೆ ಉತ್ತರವನ್ನು ಕೊಡುವವನಾಗು.

**ಶಬ್ದೇ ಸ್ಪರ್ಶೇ ಚ ರೂಪೇ ಚ ತಥೈವ ರಸಗನ್ಧಯೋಃ ।**
**ತಸ್ಯಾಧಿಷ್ಠಾನಮವ್ಯಗ್ರೋ ಬ್ರೂಹಿ ಸರ್ಪ ಯಥಾತಥಮ್ ॥೧೬॥**

**ಕಿಂ ನ ಗೃಹಾತಿ ವಿಷಯಾನ್ಯುಪಗಚ್ಛ ಮಹಾಮತೇ ।**
**ಏತಾವದುಚ್ಯತಾಂ ಚೋಕ್ತಂ ಸರ್ವಂ ಪನ್ನಗಸತ್ತಮ ॥೧೭॥**

ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳಲ್ಲಿ ಅವನ (ಆತ್ಮನ) ಅಧಿಷ್ಠಾನವು ತಾಟಸ್ಥ್ಯದಿಂದಿರುತ್ತದೆ. ಇದು ಹೇಗೆಂಬುದನ್ನು ತಿಳಿಸು. ಮನಸ್ಸಿನಿಂದ ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳನ್ನು ಏಕಕಾಲದಲ್ಲಿ ಗ್ರಹಣಮಾಡಲು ಸಾಧ್ಯವಿಲ್ಲವೇ?—ಎಂಬುದನ್ನೂ ಹೇಳು."

**ಯದಾತ್ಮದ್ರವ್ಯಮಾಯುಷ್ಮನ್ದೇಹಸಂಶ್ರಯಣಾನ್ವಿತಮ್ ।**
**ಕರಣಾಧಿಷ್ಠಿತಂ ಭೋಗಾನುಪಭುಙ್ಕ್ತೇ ಯಥಾವಿಧಿ ॥೧೮॥**

"ಧರ್ಮಜ! ಆವರಣಶಕ್ತಿಯಿಂದ ಆವೃತವಾದ ನಿರ್ಗುಣಬ್ರಹ್ಮವು ಮಲಿನವಾದ ರಜೋಗುಣಪ್ರಧಾನವಾದ ಅವಿದ್ಯೆಯಲ್ಲಿ ಪ್ರತಿಬಿಂಬಿಸಿ ಜೀವ ವೆನಿಸಿಕೊಳ್ಳುತ್ತದೆ. ಈ ಜೀವವು ಇಂದ್ರಿಯಗಳಿಂದ ಮತ್ತು ಮನಸ್ಸಿನಿಂದ ಯುಕ್ತವಾಗಿ ಭೋಕ್ತೃವೆನಿಸಿಕೊಳ್ಳುತ್ತದೆ. ಲಿಂಗಶರೀರದಲ್ಲಿ ಈ ಜೀವನಿಗೆ ತಾದಾತ್ಮ್ಯಭಾವವುಂಟಾಗುತ್ತದೆ.

**ಜ್ಞಾನಂ ಚೈವಾತ್ರ ಬುದ್ಧಿಶ್ಚ ಮನಶ್ಚ ಭರತರ್ಷಭ ।**
**ತಸ್ಯ ಭೋಗಾಧಿಕರಣೇ ಕರಣಾನಿ ನಿಬೋಧ ಮೇ ॥೧೯॥**

**ಮನಸಾ ತಾತ ಪರ್ಯೇತಿ ಕ್ರಮಶೋ ವಿಷಯಾನಿಮಾನ್ ।**
**ವಿಷಯಾಯತನಸ್ಥೋ ಹಿ ಭೂತಾತ್ಮಾಕ್ಷೇತ್ರಮಾಸ್ಥಿತಃ ॥೨೦॥**

**ತತ್ರ ಚಾಪಿ ನರವ್ಯಾಘ್ರ ಮನೋ ಜನ್ತೋರ್ವಿಧೀಯತೇ ।**
**ತಸ್ಮಾದ್ಯುಗಪದತ್ರಾಸ್ಯ ಗ್ರಹಣಂ ನೋಪಪದ್ಯತೇ ॥೨೧॥**

ಜ್ಞಾನ, ಬುದ್ಧಿ, ಮನಸ್ಸು—ಇವುಗಳು ಜೀವಾತ್ಮನಿಗೆ ಭೋಗಪಡುವುದ ರಲ್ಲಿ ಕಾರಣಗಳಾಗುತ್ತವೆ. ಈ ಕಾರಣದಿಂದ ಜೀವನು ಬುದ್ಧಿ, ರಾಗ, ದ್ವೇಷ, ಪ್ರಯತ್ನ, ಸಂಸಾರ, ಧರ್ಮ, ಅಧರ್ಮ, ಸುಖ, ದುಃಖ—ಎಂಬ ನವಗುಣ ಗಳಿಂದ ಗ್ರಸಿತನಾಗಿ ಸುಖ-ದುಃಖಗಳನ್ನು ಅನುಭವಿಸುವನು. ಶ್ರೋತ್ರ, ತ್ವಕ್, ಚಕ್ಷುಸ್ಸು, ರಸನ, ಘ್ರಾಣಗಳೆಂಬ ಪಂಚೇಂದ್ರಿಯಗಳಿಂದ ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳನ್ನು ಜೀವನು ಭೋಗಿಸುವಾಗಲೂ ಮನ

ಸ್ಸಿನ ಮೂಲಕವೇ ಅವುಗಳನ್ನು ಭೋಗಿಸಬೇಕಾಗಿದೆ. ಮನಸ್ಸಿಲ್ಲದೇ ಕಣ್ಣು ಬಿಟ್ಟುಕೊಂಡಿದ್ದರೂ ಜೀವನು ನೋಡಲಾರನು. ಮನಸ್ಸಿಲ್ಲದೇ ಆಘ್ರಾಣಿಸಿದರೂ ಜೀವನು ವಾಸನೆಯನ್ನು ತಿಳಿಯಲಾರನು. ಮನಸ್ಸು ಯಾವ ಇಂದ್ರಿಯದೊಡನೆ ಜೀವವನ್ನು ಸೇರಿರುವುದೋ–ಆ ಇಂದ್ರಿಯಸುಖವನ್ನು ಜೀವನು ಅನುಭವಿಸುತ್ತಾನೆ. ಏಕಕಾಲದಲ್ಲಿ ಮನಸ್ಸು ಪಂಚೇಂದ್ರಿಯಗಳಲ್ಲಿಯೂ ಪ್ರವಹಿಸುವ ಸಾಧ್ಯತೆಯಿಲ್ಲ. ಅಂತೆಯೇ ಅವುಗಳಿಂದುಂಟಾಗುವ ಸುಖ-ದುಃಖಗಳನ್ನೂ ಏಕಕಾಲದಲ್ಲಿ ಜೀವನು ಅನುಭವಿಸಲಾರನು.

**ಸ ಆತ್ಮಾ ಪುರುಷವ್ಯಾಘ್ರ ಭ್ರುವೋರಂತರಮಾಶ್ರಿತಃ ।**
**ಬುದ್ಧಿಂ ದ್ರವ್ಯೇಷು ಸೃಜತಿ ವಿವಿಧೇಷು ಪರಾವರಾಮ್ ॥೨೨॥**

**ಬುದ್ಧೇರುತ್ತರಕಾಲಾ ಚ ವೇದನಾ ದೃಶ್ಯತೇ ಬುಧೈಃ ।**
**ಏಷ ರೈ ರಾಜಶಾರ್ದೂಲ ವಿಧಿಃ ಕ್ಷೇತ್ರಜ್ಞಭಾವನಃ ॥೨೩॥**

ಆತ್ಮನು ಎರಡು ಹುಬ್ಬುಗಳ ನಡುವೆ ಆಜ್ಞಾಚಕ್ರದಲ್ಲಿರುತ್ತಾನೆ. ಅಲ್ಲಿಯೇ ಬುದ್ಧಿಯ ಅಧಿಷ್ಠಾನವಿರುವುದು. ಪರಮಾತ್ಮನು ಬುದ್ಧಿಯನ್ನು ನಾನಾವಿಷಯಗಳ ಕಡೆಗೆ ಹೋಗುವಂತೆ ಪ್ರೇರಿಸುತ್ತಾನೆ. ಯೋಗಿಗಳಾದವರು ಅದೇ ಬುದ್ಧಿಯನ್ನು ಹಿಂದಕ್ಕೆ ತಿರುಗಿಸಿ ಸಾಕ್ಷಿಭೂತನಾದ ಪರಮಾತ್ಮನನ್ನು ಕಾಣುತ್ತಾರೆ. ರಾಜಶಾರ್ದೂಲನೇ! ಈ ವಿಧವಾದ ಜ್ಞಾನವೇ ಆತ್ಮಪ್ರಕಾಶನದ ವಿಧಿಯಾಗಿರುತ್ತದೆ."

**ಮನಸಶ್ಚಾಪಿ ಬುದ್ಧೇಶ್ಚ ಬ್ರೂಹಿ ಮೇ ಲಕ್ಷಣಂ ಪರಮ್ ।**
**ಏತದಧ್ಯಾತ್ಮವಿದುಷಾಂ ಪರಂ ಕಾರ್ಯಂ ವಿಧೀಯತೇ ॥೨೪॥**

"ಸರ್ಪರಾಜನೇ! ಬುದ್ಧಿಗೂ ಮತ್ತು ಮನಸ್ಸಿಗೂ ಇರುವ ವ್ಯತ್ಯಾಸವನ್ನು ಅಥವಾ ಇವುಗಳೆರಡರ ಲಕ್ಷಣಗಳನ್ನು ಹೇಳು. ಈ ಎರಡರ ಲಕ್ಷಣಗಳನ್ನು ತಿಳಿದುಕೊಳ್ಳುವುದೇ ಆತ್ಮದರ್ಶನಾಕಾಂಕ್ಷಿಗಳಾದವರ ಆದ್ಯಕರ್ತವ್ಯವಾಗಿದೆಯೆಂದು ನಾನು ಭಾವಿಸುತ್ತೇನೆ."

**ಬುದ್ಧಿರಾತ್ಮಾನುಗಾ ತಾತಾ ಉತಾತೇನ ವಿಧೀಯತೇ ।**
**ತದಾಶ್ರಿತಾ ಹಿ ಸಂಜ್ಞೈಷಾ ಬುದ್ಧಿಸ್ತಸ್ಯೈಷಿಣೀ ಭವೇತ್ ॥೨೫॥**

**ಬುದ್ಧಿರುತ್ಪದ್ಯತೇ ಕಾರ್ಯಾನ್ಮನಸ್ತೂತ್ಪನ್ನಮೇವ ಹಿ ।**
**ಬುದ್ಧೇರ್ಗುಣವಿಧಾನೇನ ಮನಸ್ತದ್ಗುಣವದ್ಭವೇತ್ ॥೨೬॥**

**ಏತದ್ವಿಶೇಷಣಂ ತಾತ ಮನೋಬುದ್ಧ್ಯೋರ್ಯದನ್ತರಮ್ ।**
**ತ್ವಮಪ್ಯತ್ರಾಭಿಸಮ್ಬುದ್ಧಃ ಕಥಂ ವಾ ಮನ್ಯತೇ ಭವಾನ್ ॥೨೭॥**

"ಕುರುವಂಶಪ್ರದೀಪನಾದ ಧರ್ಮರಾಜನೇ! ಮಾಯೆಯ ಕಾರಣದಿಂದಾಗಿ ಬುದ್ಧಿಯು ಆತ್ಮನ ಅಧೀನದಲ್ಲಿರುವಂತೆ ಕಾಣುತ್ತದೆ. ಯದ್ಯಪಿ ಆತ್ಮನಿಗೆ ಬುದ್ಧಿಯು ಅಧೀನದಲ್ಲಿರುವುದೇ ಯುಕ್ತವಾಗಿದ್ದರೂ–ಅನುಕ್ರಮವಾಗಿ ಬುದ್ಧಿಯು ಆತ್ಮನ ನಿರ್ದೇಶಕವಾಗುತ್ತದೆ. ಬುದ್ಧಿಯು ಕಾರ್ಯಗಳನ್ನು ಉತ್ಪತ್ತಿಮಾಡುತ್ತದೆ. ಮೊದಲನೆಯದಾಗಿ ಸೂಕ್ಷ್ಮಪಂಚಭೂತಗಳ ಏಕತ್ರ ಸೇರುವಿಕೆಯಿಂದ ಅಂತಃಕರಣವುಂಟಾಗುತ್ತದೆ. ಈ ಅಂತಃಕರಣವೇ ಸಂಶಯ-ನಿಶ್ಚಯ-ಗರ್ವ-ಸ್ಮರಣರೂಪವಾದ ಪರಿಣಾಮ–ಎಂಬ ನಾಲ್ಕು ಭೇದಗಳಿಂದ ಮನಸ್ಸು-ಬುದ್ಧಿ-ಅಹಂಕಾರ-ಚಿತ್ತ ಎನಿಸಿಕೊಂಡಿದೆ. ಎಂದರೆ ಮನಸ್ಸೂ ಕೂಡ ಬುದ್ಧಿಯಂತೆಯೇ ಸ್ವಯಂಜನ್ಯವಾದುದು. ಮೇಲೆ ಹೇಳಿದಂತೆ ಕಾರ್ಯಗಳನ್ನು ಬುದ್ಧಿಯು ಉತ್ಪತ್ತಿಮಾಡುತ್ತದೆ. ಉತ್ಪತ್ತಿಮಾಡಿದ್ದನ್ನು ಕಾರ್ಯರೂಪಕ್ಕೆ ತರಲು ಮನಸ್ಸು ಇಂದ್ರಿಯಗಳನ್ನು ಪ್ರಚೋದಿಸುತ್ತದೆ. ನಾವು ಅನೇಕವೇಳೆ 'ಮನಸ್ಸಿಲ್ಲ' ಎಂದು ಕುಳಿತುಕೊಳ್ಳುತ್ತೇವೆ. ಇದರ ಅರ್ಥವೇನೆಂದರೆ: ಬುದ್ಧಿಯು ಕಾರ್ಯವನ್ನು ಉತ್ಪತ್ತಿಮಾಡಿಬಿಟ್ಟಿದೆ. ಆದರೆ ಅದನ್ನು ಕಾರ್ಯರೂಪಕ್ಕೆ ತರಲು ಮನಸ್ಸು ಇಂದ್ರಿಯಗಳಿಗೆ ಪ್ರೇರಣೆಯನ್ನು ಮಾಡಿರುವುದಿಲ್ಲ. ಕಾರ್ಯಪ್ರವರ್ತನೆಯಿಂದ ಉಂಟಾದ ಸುಖ-ದುಃಖಗಳನ್ನು ಅನುಭವಿಸುವುದೂ ಸಹ ಮನಸ್ಸೇ ; ಬುದ್ಧಿಯಲ್ಲ. ಒಳ್ಳೆಯ ದೃಶ್ಯಗಳನ್ನು ನೋಡುವಂತೆ ಕಾರ್ಯವನ್ನು ಉತ್ಪತ್ತಿಮಾಡುವುದು, ಬುದ್ಧಿ ; ಇಂದ್ರಿಯಗಳನ್ನು ಪ್ರೇರಿಸಿ ದೃಶ್ಯವನ್ನು ನೋಡಿ ಅನಂತರ ಆನಂದಿಸುವುದು ಮನಸ್ಸು. 'ಮನಸ್ಸಿಗೆ ಬಹಳ ಆನಂದವಾಗಿತ್ತು.' ದೃಶ್ಯವು ಚೆನ್ನಾಗಿರದಿದ್ದಾಗ–'ಮನಸ್ಸಿಗೇಕೋ ಹಿಡಿಸಲಿಲ್ಲ'–ಹೀಗೆಂದು ಹೇಳುತ್ತೇವೆ. ಆದುದರಿಂದ ಕಾರ್ಯಗಳನ್ನು ಉತ್ಪತ್ತಿಮಾಡುವುದು ಬುದ್ಧಿ. ಬುದ್ಧಿಯು ಉತ್ಪತ್ತಿಮಾಡಿದ್ದನ್ನು ಇಂದ್ರಿಯಗಳ ಮೂಲಕ ಕಾರ್ಯರೂಪಕ್ಕೆ ತರುವುದು

ಮತ್ತು ಅದರ ಫಲಾಫಲಗಳನ್ನು ಅನುಭವಿಸುವುದು ಮನಸ್ಸು. ಬುದ್ಧಿ ಮತ್ತು ಮನಸ್ಸುಗಳು ಪಟ-ಸೂತ್ರನ್ಯಾಯದಂತಿರುವುದೆಂದು ತಜ್ಞರು ಹೇಳುತ್ತಾರೆ. ಧರ್ಮಜ! ನೀನಾದರೋ ತಜ್ಞನಾಗಿರುವೆ. ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನೆಂಬುದನ್ನೂ ಹೇಳು."

"ಸರ್ಪರಾಜ! ನೀನು ಬುದ್ಧಿವಂತರಲ್ಲಿಯೇ ಶ್ರೇಷ್ಠನೆನಿಸಿರುವೆ. ನಿನ್ನ ಬುದ್ಧಿಯು ಪರಮೋತ್ಕೃಷ್ಟವಾಗಿದೆ. ಯಾವ ವಿಷಯವನ್ನು ತಿಳಿಯಬೇಕೆಂದು ಯೋಗಿಗಳು ಇಚ್ಛಿಸುವರೋ–ಆ ವಿಷಯವನ್ನು ನೀನು ಸಂಪೂರ್ಣವಾಗಿ ತಿಳಿದಿರುವೆ. ಹೀಗಿರುವಾಗ ನೀನೇಕೆ ನನ್ನನ್ನು ಈ ವಿಧವಾಗಿ ಪ್ರಶ್ನಿಸುವೆ? ನೀನು ಸರ್ವಜ್ಞನು. ನೀನು ಮಾಡಿದ ಪುಣ್ಯಕ್ರಿಯೆಯ ಫಲದಿಂದಾಗಿ ಸಶರೀರನಾಗಿಯೇ ಸ್ವರ್ಗಕ್ಕೆ ಹೋಗಿ ಅಲ್ಲಿಯ ಸುಖಗಳನ್ನು ಅನುಭವಿಸಿರುವೆ. ಹೀಗಿದ್ದರೂ ನಿನ್ನಂತಹವನಿಗೆ ಮಾಯೆಯು ಆವೃತವಾದುದು ಹೇಗೆ? ಅದ್ಭುತಕರ್ಮಿಯಾದ ನೀನು ಸ್ವರ್ಗದಿಂದ ಇಂತಹ ದುರವಸ್ಥೆಯಲ್ಲಿ ಕೆಳಗೆ ಬೀಳಲು ಕಾರಣವಾದರೂ ಏನು? ನನ್ನ ಈ ಒಂದು ಸಂಶಯವನ್ನು ಪರಿಹರಿಸು."

**ಸುಪ್ರಜ್ಞಮಪಿ ಚೇಚ್ಛೂರಮೃದ್ಧಿರ್ಮೋಹಯತೇ ನರಮ್ ।**
**ವರ್ತಮಾನಃ ಸುಖೇ ಸರ್ವೋ ಮುಹ್ಯತೀತಿ ಮತಿರ್ಮಮ ॥೩೦॥**

"ಯುಧಿಷ್ಠಿರ! ಮಾನವನು ಸುಜ್ಞಾನಿಯೇ ಆಗಿರಬಹುದು ; ಶೂರನೂ ಆಗಿರಬಹುದು. ಆದರೆ ಐಶ್ವರ್ಯವೆಂಬುದು ಸುಜ್ಞಾನಿಯನ್ನೂ ಮದಾಂಧನನ್ನಾಗಿ ಮಾಡಿಬಿಡುತ್ತದೆ. ಯಾವನು ಯಾವಾಗಲೂ ಸುಖ ದಲ್ಲಿಯೇ ಇರುತ್ತಾನೆಯೋ–ಅವನು ದುರಭಿಮಾನಿಯಾಗುವುದು ನಿಶ್ಚಯ ವೆಂದು ನಾನು ನಿರ್ಧರಿಸಿದ್ದೇನೆ.

**ಸೋಽಹಮೈಶ್ವರ್ಯಮೋಹೇನ ಮದಾವಿಷ್ಟೋ ಯುಧಿಷ್ಠಿರ ।**
**ಪತಿತಃ ಪ್ರತಿಸಮ್ಬುದ್ಧಸ್ತ್ವಾಂ ತು ಸಮ್ಬೋಧಯಾಮ್ಯಹಮ್ ॥**

ಭೂಲೋಕದಲ್ಲಿ ನಾನು ಮಾಡಿದ ಸತ್ಕರ್ಮಗಳ ಫಲದಿಂದ ನನಗೆ ಇಂದ್ರಪದವಿಯು ಪ್ರಾಪ್ತವಾದುದಕ್ಕಾಗಿ ಮತ್ತು ಅತುಲೈಶ್ವರ್ಯವನ್ನು ಪಡೆದುದಕ್ಕಾಗಿ ದುರಭಿಮಾನವನ್ನು ಹೊಂದಿದೆನು. ಆ ಕಾರಣದಿಂದಲೇ

ಅಧಃಪತನವನ್ನು ಹೊಂದಿದೆನು. ನಾನಿಂದು ನನ್ನ ಹಿಂದಿನ ವಿಷಯಗಳೆಲ್ಲ ವನ್ನೂ ಸ್ಮರಿಸಿ ನಿನ್ನೊಡನೆ ಮಾತನಾಡುತ್ತಿದ್ದೇನೆ.

**ಕೃತಂ ಕಾರ್ಯಂ ಮಹಾರಾಜ ತ್ವಯಾ ಮಮ ಪರಂತಪ ।**
**ಕ್ಷೀಣಃ ಶಾಪಃ ಸುಕೃಚ್ಛ್ರೋ ಮೇ ತ್ವಯಾ ಸಮ್ಭಾಷ್ಯ ಸಾಧುನಾ ॥**

ಮಹಾರಾಜ! ಇಂದು ನೀನು ನನಗೆ ಒಳ್ಳೆಯದನ್ನೇ ಮಾಡಿರುವೆ. ಸತ್ಪುರುಷನಾದ ನಿನ್ನೊಡನೆ ಸಂಭಾಷಣೆಯನ್ನು ಮಾಡಿದ್ದರಿಂದ ನನ್ನ ಶಾಪವು ಪರಿಹಾರವಾಗಿರುವುದು. ನಾನು ಹಿಂದೆ ಸ್ವರ್ಗಲೋಕಕ್ಕೆ ಹೋಗಿ ಅಲ್ಲಿದ್ದ ದೇವಯಾನದಲ್ಲಿ ಕುಳಿತು ದುರಭಿಮಾನದಿಂದ ಮತ್ತನಾಗಿ ನನ್ನ ದರ್ಪವನ್ನು ತೋರಿಸುವುದೊಂದನ್ನುಳಿದು ಮತ್ತಾವುದನ್ನೂ ಚಿಂತಿಸದೇ ಯಥೇಚ್ಛವಾಗಿ ಸಂಚರಿಸುತ್ತಿದ್ದೆನು. ಬ್ರಹ್ಮರ್ಷಿಗಳೂ, ದೇವ-ಗಂಧರ್ವ-ಯಕ್ಷ-ರಾಕ್ಷಸ-ಪನ್ನಗರೇ ಆದಿಯಾಗಿ ಸರ್ವರೂ ನನಗೆ ಕಾಣಿಕೆಗಳನ್ನೊಪ್ಪಿಸುತ್ತಿದ್ದರು. ನನಗೆ ಮತ್ತೊಂದು ಅತ್ಯದ್ಭುತವಾದ ಶಕ್ತಿಯೂ ಇದ್ದಿತು, ಯುಧಿಷ್ಠಿರ!

**ಚಕ್ಷುಷಾ ಯಂ ಪ್ರಪಶ್ಯಾಮಿ ಪ್ರಾಣಿನಂ ಪೃಥಿವೀಪತೇ ।**
**ತಸ್ಯ ತೇಜೋ ಹರಾಮ್ಯಾಶು ತದ್ಧಿ ದೃಷ್ಟೇರ್ಬಲಂ ಮಮ ॥೩೫॥**

ನಾನು ಯಾವ ಚೇತನವನ್ನೇ ಆಗಲೀ, ನೆಟ್ಟದೃಷ್ಟಿಯಿಂದ ನೋಡಿದೆ ನೆಂದರೆ ಅದರ ತೇಜಸ್ಸನ್ನು ಆಕರ್ಷಿಸುತ್ತಿದ್ದೆನು. ಈ ಕಾರಣದಿಂದಾಗಿ ತ್ರಿಭುವನಗಳಲ್ಲಿದ್ದ ಸಕಲರೂ ನನಗೆ ದಾಸರಾಗಿದ್ದರು. ನನ್ನ ದೃಷ್ಟಿಯ ಬಲವು ಅಷ್ಟು ಪ್ರಖರವಾಗಿದ್ದಿತು. ಸಾವಿರಾರು ಮಂದಿ ಬ್ರಹ್ಮರ್ಷಿಗಳು ನನ್ನ ಪಲ್ಲಕ್ಕಿಯನ್ನು ಹೊರುತ್ತಿದ್ದರು. ಆ ನನ್ನ ಕೆಟ್ಟ ಆಚರಣೆಯೇ ನನ್ನನ್ನು ಉಚ್ಛ್ರಾಯಸ್ಥಿತಿಯಿಂದ ಭ್ರಷ್ಟನನ್ನಾಗಿ ಮಾಡಿತು. ಒಂದಾನೊಂದು ದಿನ ನನ್ನ ಪಲ್ಲಕ್ಕಿಯನ್ನು ಸಪ್ತರ್ಷಿಗಳು ಹೊತ್ತುಕೊಂಡು ಹೋಗುತ್ತಿದ್ದರು. ಅವರಲ್ಲಿ ಅಗಸ್ತ್ಯರೂ ಒಬ್ಬರು. ಆಕಸ್ಮಿಕವಾಗಿ ನನ್ನ ಕಾಲು ಅಗಸ್ತ್ಯರ ತಲೆಗೆ ತಗುಲಿತು. ಒಡನೆಯೇ ಅಗಸ್ತ್ಯರು ಕುಪಿತರಾಗಿ–'ಹಾಳಾಗಿ ಹೋಗು. ಹಾವಾಗಿ ಹೋಗು'–ಎಂದು ಶಪಿಸಿದರು. ಒಡನೆಯೇ ನಾನು ಆ ಪಲ್ಲಕ್ಕಿಯಿಂದ ಕೆಳಗುರುಳಿದೆನು. ಬೀಳುತ್ತಿರುವಾಗಲೇ ನನಗೆ ಸರ್ಪದ ಶರೀರವು ಪ್ರಾಪ್ತವಾಯಿತು. ಆ ಸ್ಥಿತಿಯಲ್ಲಿದ್ದ ನಾನು ಆ ಬ್ರಾಹ್ಮಣಶ್ರೇಷ್ಠರನ್ನು ಅಂಗ

ಲಾಚಿ ಬೇಡಿದೆನು. "ಬ್ರಾಹ್ಮಣೋತ್ತಮರೇ! ದಯಮಾಡಿ ನೀವು ಈ ಘೋರಶಾಪದಿಂದ ವಿಮುಕ್ತಿಮಾಡಲಾರಿರಾ? ಐಶ್ವರ್ಯಮದದಿಂದ ಕೊಬ್ಬಿರುವ ನನ್ನನ್ನು ದಯಮಾಡಿ ಕ್ಷಮಿಸಿರಿ." ನನ್ನೀ ಬೇಡಿಕೆಯನ್ನು ಕೇಳಿ ಮರುಗಿದ ಅಗಸ್ತ್ಯರು ನನ್ನೊಡನೆ ಹೇಳಿದರು :

**ಯುಧಿಷ್ಠಿರೋ ಧರ್ಮರಾಜಃ ಶಾಪಾತ್ತ್ವಾಂ ಮೋಕ್ಷಯಿಷ್ಯತಿ ।**
**ಅಭಿಮಾನಸ್ಯ ಘೋರಸ್ಯ ಪಾಪಸ್ಯ ಚ ನರಾಧಿಪ ॥೪೦॥**

"ಧರ್ಮಾತ್ಮನಾದ ಯುಧಿಷ್ಠಿರನು ನಿನ್ನನ್ನು ಈ ಶಾಪದಿಂದ ವಿಮೋಚನೆಮಾಡುತ್ತಾನೆ. ಅವನ ದರ್ಶನವಾಗುವ ವೇಳೆಗೆ ನಿನಗಿರುವ ಈ ದುರಭಿಮಾನದ ಮತ್ತು ಇದರಿಂದ ಪ್ರಾಪ್ತವಾದ ಪಾಪದ ನಾಶವೂ ಆಗಿರುತ್ತದೆ. ಅನಂತರ ಪುನಃ ನೀನು ಸ್ವರ್ಗಕ್ಕೆ ಬರಬಹುದಾಗಿದೆ."

ಅವರು ಹೇಳಿದಂತೆಯೇ ಎಲ್ಲವೂ ನಡೆಯಿತು. ನಿಶ್ಚಯವಾಗಿಯೂ ನಾನು ಆ ಬ್ರಾಹ್ಮಣರ ತಪಃಪ್ರಭಾವವನ್ನು ಕಂಡು ಆಶ್ಚರ್ಯಚಕಿತನಾಗಿರುತ್ತೇನೆ. ಆದುದರಿಂದಲೇ ನಾನು ನಿನಗೆ ಬ್ರಾಹ್ಮಣತ್ವದ ಮತ್ತು ಪರಾತ್ಪರ ವಸ್ತುವಿನ ಲಕ್ಷಣಗಳನ್ನು ಹೇಳಿದೆನು.

**ಸತ್ಯಂ ದಮಸ್ತಪೋ ದಾನಮಹಿಂಸಾ ಧರ್ಮನಿತ್ಯತಾ ।**
**ಸಾಧಕಾನಿ ಸದಾ ಪುಂಸಾಂ ನ ಜಾತಿರ್ನ ಕುಲಂ ನೃಪ ॥೪೨॥**

ಬ್ರಾಹ್ಮಣತ್ವವನ್ನು ಹೊಂದಲು ಮತ್ತು ಪರಾತ್ಪರವಸ್ತುವನ್ನು ಕಾಣಲು ಸತ್ಯ-ದಮ-ತಪಸ್ಸು-ದಾನ-ಅಹಿಂಸೆ-ಧರ್ಮತತ್ಪರತೆ–ಇವೇ ಮಾನವರಿಗೆ ಮುಖ್ಯಸಾಧನಗಳು. ಕುಲವಾಗಲೀ, ಜಾತಿಯಾಗಲೀ, ಮುಖ್ಯವಲ್ಲ.

**ಅರಿಷ್ಟ ಏಷ ತೇ ಭ್ರಾತಾ ಭೀಮಸೇನೋ ಮಹಾಬಲಃ ।**
**ಸ್ವಸ್ತಿ ತೇಽಸ್ತು ಮಹಾರಾಜ ಗಮಿಷ್ಯಾಮಿ ದಿವಂ ಪುನಃ ॥೪೩॥**

ಮಹಾಪರಾಕ್ರಮಿಯಾದ ನಿನ್ನ ತಮ್ಮನಾದ ಭೀಮಸೇನನು ಯಾವ ತೊಂದರೆಯೂ ಇಲ್ಲದೇ ಸುಖವಾಗಿರುವನು. ನಿನಗೆ ಮಂಗಳವಾಗಲಿ. ನಾನು ಪುನಃ ಸ್ವರ್ಗಲೋಕಕ್ಕೆ ಪ್ರಯಾಣಮಾಡುತ್ತೇನೆ."

ಜನಮೇಜಯ! ನಹುಷನು ಧರ್ಮರಾಜನಿಗೆ ಹೀಗೆ ಹೇಳಿ ಸರ್ಪದ ಸ್ವರೂಪವನ್ನು ತೊರೆದು ದಿವ್ಯಶರೀರವನ್ನು ಹೊಂದಿದವನಾಗಿ ತನಗಾಗಿ ಬಂದಿದ್ದ ದಿವ್ಯವಿಮಾನದಲ್ಲಿ ಕುಳಿತು ಸ್ವರ್ಗಲೋಕಕ್ಕೆ



ಹೊರಟುಹೋದನು. ಕೀರ್ತಿಮಂತನಾದ ಮತ್ತು ಧರ್ಮಾತ್ಮನಾದ ಯುಧಿಷ್ಠಿರನೂ ಧೌಮ್ಯರೊಡನೆಯೂ, ಅನುಜನೊಡನೆಯೂ ತನ್ನ ಆಶ್ರಮಕ್ಕೆ ತೆರಳಿದನು.

ಧರ್ಮಾತ್ಮನಾದ ಯುಧಿಷ್ಠಿರನು ಆಶ್ರಮದ ಬಳಿಯಲ್ಲಿ ಉಪವಿಷ್ಟರಾಗಿದ್ದ ಬ್ರಾಹ್ಮಣರಿಗೆ ಎಲ್ಲ ವಿಷಯಗಳನ್ನೂ ಯಥಾವತ್ತಾಗಿ ಹೇಳಿದನು.

ಧರ್ಮಜನ ಮಾತುಗಳನ್ನು ಕೇಳಿ ಅರ್ಜುನ-ನಕುಲ-ಸಹದೇವರೂ, ದ್ರೌಪದಿಯೂ ಮತ್ತು ಬ್ರಾಹ್ಮಣರೆಲ್ಲರೂ ಲಜ್ಜಿತರಾದರು. ಪಾಂಡವರ ಹಿತೈಷಿಗಳಾದ ಆ ಬ್ರಾಹ್ಮಣರು ಭೀಮನನ್ನು ನಿಂದಿಸಿ ಇನ್ನು ಮುಂದೆ ಈ ವಿಧವಾದ ಸಾಹಸಕಾರ್ಯಗಳನ್ನು ಮಾಡಲು ಹೋಗಬಾರದೆಂದು ಎಚ್ಚರಿಸಿದರು. ಭೀಮಸೇನನು ಅಪಾಯದಿಂದ ಪಾರಾಗಿ ಬಂದುದಕ್ಕಾಗಿ ಪಾಂಡವರು ಆನಂದಪಡುತ್ತಾ ಆ ವನದಲ್ಲಿಯೇ ಸುಖ-ಸಂತೋಷಗಳಿಂದ ಕಾಲಕಳೆಯುತ್ತಿದ್ದರು.

೧೮೧ನೆಯ ಅಧ್ಯಾಯವು ಮುಗಿಯಿತು.

೧೮೨ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ

## ವರ್ಷರ್ತು ಮತ್ತು ಶರದೃತುಗಳ ವರ್ಣನೆ : ದ್ವೈತವನದಿಂದ ಕಾಮ್ಯಕವನಕ್ಕೆ ಯುಧಿಷ್ಠಿರಾದಿಗಳ ಪ್ರಯಾಣ

ಜನಮೇಜಯ! ಪಾಂಡವರು ದ್ವೈತವನದಲ್ಲಿ ವಾಸಮಾಡುತ್ತಿರುವಾಗ ಸರ್ವರಿಗೂ ಸುಖಕರವಾದ ವರ್ಷಾಕಾಲವು ಪ್ರಾದುರ್ಭವಿಸಿತು. ನೀಲಮೇಘಗಳು ಆಕಾಶದಲ್ಲಿ ದಟ್ಟವಾಗಿ ಕಾಣತೊಡಗಿದುವು. ಗುಡುಗು-ಸಿಡಿಲುಗಳ ಗರ್ಜನೆಗಳೊಡನೆ ಹಗಲು-ರಾತ್ರಿಗಳೆಂಬ ವಿವೇಚನೆಯೇ ಇಲ್ಲದೇ ಮಳೆಗರೆಯಲು ಪ್ರಾರಂಭವಾಯಿತು. ದಟ್ಟವಾದ ಮೋಡಗಳ ಸಮೂಹವು ವರ್ಷಾಕಾಲದ ಪತಾಕೆಯಂತೆ ಕಂಗೊಳಿಸುತ್ತಿದ್ದಿತು. ಭೂಮಿಯ ಮೇಲೆ ಸೂರ್ಯನ ಕಾಂತಿಯೇ ಬೀಳುತ್ತಿರಲಿಲ್ಲ. ಅದಕ್ಕೆ ಬದಲಾಗಿ ಮಿಂಚಿನ ಪ್ರಕಾಶವು ಪ್ರತಿಕ್ಷಣದಲ್ಲಿಯೂ ಕಾಣುತ್ತಲಿದ್ದಿತು. ಭೂಮಿಯ ಮೇಲೆ ಹಸುರಾದ ಹುಲ್ಲು ಬೆಳೆದು ಪ್ರಾಣಿಗಳಿಗೆ ಆಹ್ಲಾದವನ್ನುಂಟುಮಾಡುತ್ತಿದ್ದಿತು. ಸರ್ಪಾದಿಜಂತುಗಳು ಮಳೆಯಲ್ಲಿ ನೆನೆಯುತ್ತಾ ಆನಂದದಿಂದ ಓಡಾಡುತ್ತಿದ್ದುವು. ಅರಣ್ಯವೆಲ್ಲಾ ನೀರಿನಿಂದ ತುಂಬಿಹೋಗಿ ಹಳ್ಳ-ಕೊಳ್ಳಗಳು ಎಲ್ಲಿವೆಯೆಂಬುದೂ ತಿಳಿಯುತ್ತಿರಲಿಲ್ಲ. ನದಿಗಳೂ, ಹಳ್ಳ-ಕೊಳ್ಳಗಳೂ ಒಂದಾಗಿ ಕಾಣುತ್ತಿದ್ದುವು. ನದಿಯ ತೀರಗಳಲ್ಲಿರುತ್ತಿದ್ದ ವೃಕ್ಷಗಳಾವುವೂ ಕಾಣುತ್ತಿರಲಿಲ್ಲ. ಬೇಸಿಗೆ ಕಳೆದನಂತರ ಬಂದ ಆ ಋತುವಿನಲ್ಲಿ ನದಿಗಳು ತುಂಬಿ ಸರ್ಪಗಳಂತೆ ಬುಸುಗುಟ್ಟುತ್ತಾ ಅರಣ್ಯಮಧ್ಯದಲ್ಲಿ ಹರಿಯುತ್ತಿದ್ದು ಅರಣ್ಯಕ್ಕೇ ವಿಶೇಷವಾದ

ಸೊಬಗನ್ನುಂಟುಮಾಡುತ್ತಿದ್ದುವು. ಅನುಸ್ಯೂತವಾಗಿ ಮಳೆಯು ಸುರಿಯುತ್ತಿರಲಾಗಿ ಅರಣ್ಯದಲ್ಲಿದ್ದ ಕಾಡುಹಂದಿ, ಜಿಂಕೆ ಮತ್ತು ಪಕ್ಷಿಗಳು ಧ್ವನಿ ಮಾಡುತ್ತಿದ್ದುದು ಅರಣ್ಯದ ಸುತ್ತಲೂ ಕೇಳಿಬರುತ್ತಿದ್ದಿತು. ಮಳೆಯ ನೀರಿಗಾಗಿಯೇ ಕಾದಿರುತ್ತಿದ್ದ ಚಾತಕಪಕ್ಷಿಗಳೂ, ಕೋಗಿಲೆಗಳೂ, ಗುಡುಗಿನ ಶಬ್ದದಿಂದ ಮದಿಸಿಹೋಗಿದ್ದ ನವಿಲುಗಳೂ ಮತ್ತು ಕಪ್ಪೆಗಳೂ ಮಹಾನಂದದಿಂದ ಆ ಅರಣ್ಯದಲ್ಲಿ ನಲಿದಾಡುತ್ತಿದ್ದುವು. ಪಾಂಡವರು ಮರುಭೂಮಿಯ ಪ್ರದೇಶದಲ್ಲಿ ಸಂಚರಿಸುತ್ತಾ ಕಾಲವನ್ನು ಕಳೆಯುತ್ತಿದ್ದಾಗಲೇ ಸರ್ವರಿಗೂ ಸಂತೋಷವನ್ನುಂಟುಮಾಡುತ್ತಿದ್ದ, ಸಿಡಿಲು-ಗುಡುಗಿನ ಶಬ್ದಗಳಿಂದ ವ್ಯಾಪವಾಗಿದ್ದ ವರ್ಷಾಕಾಲವು ಕಳೆದುಹೋಯಿತು. ಅನಂತರದಲ್ಲಿ ಕ್ರೌಂಚಪಕ್ಷಿಗಳಿಂದಲೂ, ಹಂಸಪಕ್ಷಿಗಳಿಂದಲೂ ಸಮಾವೃತವಾದ ಶರದೃತುವು ಪ್ರಾರಂಭವಾಯಿತು. ಅರಣ್ಯಗಳಲ್ಲಿ ಹುಲ್ಲು ಬಹುವಾಗಿ ಬೆಳೆದುಹೋಗಿದ್ದಿತು. ನದಿಗಳು ಶಾಂತವಾಗಿ ಹರಿಯುತ್ತಿದ್ದುವು. ಆಕಾಶವು ಸ್ವಚ್ಛವಾಗಿತ್ತು. ರಾತ್ರಿಯ ವೇಳೆಯಲ್ಲಿ ನಕ್ಷತ್ರಗಳು ಉಜ್ವಲಪ್ರಕಾಶದಿಂದ ಬೆಳಗುತ್ತಿದ್ದುವು. ಮೃಗಗಳಿಂದಲೂ, ಪಕ್ಷಿಗಳಿಂದಲೂ ಸಮಾವೃತವಾಗಿದ್ದ ಆ ಕಾಡಿನಲ್ಲಿ ಶರತ್ಕಾಲದ ಸಮಯದಲ್ಲಿ ಪಾಂಡವರೂ ಸಂತೋಷಭರಿತರಾಗಿದ್ದರು.

ರಾತ್ರಿಯು ಯಾವ ವಿಧವಾದ ಧೂಳಿನಿಂದಾಗಲೀ, ಮೋಡಗಳಿಂದಾಗಲೀ ಕೂಡಿರದೇ ಚಂದ್ರನಿಂದಲೂ ಕೋಟ್ಯನುಕೋಟಿ ನಕ್ಷತ್ರಗಳಿಂದಲೂ ಪ್ರಕಾಶಮಾನವಾಗಿರುತ್ತಿದ್ದಿತು. ನದಿಗಳಲ್ಲಿಯೂ, ಸರೋವರಗಳಲ್ಲಿಯೂ ಅಲಂಕಾರಪ್ರಾಯವಾಗಿ ಕಾಣುತ್ತಿದ್ದ ಅರಳಿದ ಕಮಲಪುಷ್ಪಗಳನ್ನು ನೋಡಿ ಪಾಂಡವರು ಆನಂದಪಡುತ್ತಿದ್ದರು. ಸರಸ್ವತೀನದಿಯ ತೀರದಲ್ಲಿ ಸಂಚರಿಸುತ್ತಿದ್ದ ಧನುರ್ಧಾರಿಗಳಾದ ಪಾಂಡವರ ಆನಂದಕ್ಕೆ ಪಾರವೇ ಇರಲಿಲ್ಲ. ಆ ನದಿಯ ದಡಗಳೂ ನಿರ್ಮಲಾಕಾಶದಂತೆಯೇ ಸ್ವಚ್ಛವಾಗಿದ್ದುವು. ಆ ನದಿಯಲ್ಲಿ ಅನೇಕಪುಣ್ಯತೀರ್ಥಗಳಿದ್ದುವು. ಪ್ರವಾಹವು ತೀರಪರ್ಯಂತವಾಗಿದ್ದಿತು ಮತ್ತು ಅದರ ನೀರು ಬಹಳ ಸ್ವಚ್ಛವಾಗಿದ್ದಿತು. ಅಂತಹ ಬಹುಸುಂದರಳಾದ, ಬಹುಪುಣ್ಯವತಿಯಾದ ಸರಸ್ವತೀನದಿಯ ತೀರದಲ್ಲಿ ಪಾಂಡವರು ಪುಣ್ಯತಮವಾದ ಕಾರ್ತೀಕಶುಕ್ಲ ಪೌರ್ಣಮೆಯ ರಾತ್ರಿಯನ್ನು ಕಳೆದರು. ಆ ಪರ್ವಕಾಲವನ್ನು ಪಾಂಡವರು ಆ ನದೀತೀರದಲ್ಲಿಯೇ ತಪಸ್ಸಿನಲ್ಲಿ ನಿರತ

ರಾಗಿದ್ದ ಋಷಿ-ಮಹರ್ಷಿಗಳೊಡನೆ ಕಳೆದರು. ಮರುದಿನವೇ ಕಾರ್ತಿಕ ಬಹುಳ ಪ್ರಥಮೆಯ ದಿನ ಪಾಂಡವರು ಧೌಮ್ಯರೇ ಮೊದಲಾದ ಬ್ರಾಹ್ಮಣ ರೊಡನೆಯೂ, ಸೂತರೊಡನೆಯೂ ಸೇವಕರೊಡನೆಯೂ ಕೂಡಿದವರಾಗಿ ಕಾಮ್ಯಕವನಕ್ಕೆ ಪ್ರಯಾಣಮಾಡಿದರು."

೧೮೨ನೆಯ ಅಧ್ಯಾಯವು ಮುಗಿಯಿತು.

೧೮೩ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಪರ್ವ (ಮುಂದುವರಿದಿದೆ.)

## ಪಾಂಡವರ ಬಳಿಗೆ ಶ್ರೀಕೃಷ್ಣ-ಮಾರ್ಕಂಡೇಯ-ನಾರದರ ಆಗಮನ : ಧರ್ಮಜನ ಕೋರಿಕೆಯಂತೆ ಮಾರ್ಕಂಡೇಯರಿಂದ ಕರ್ಮಫಲ-ಭೋಗಗಳ ವಿವೇಚನೆ

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಕಾಮ್ಯಕವನಕ್ಕೆ ಪುನಃ ಆಗಮಿಸಿದ ಪಾಂಡವರನ್ನು ಅಲ್ಲಿದ್ದ ಋಷಿ-ಮಹರ್ಷಿಗಳೂ ಬ್ರಾಹ್ಮಣರೂ ಆದರಪೂರ್ವಕವಾಗಿ ಸ್ವಾಗತಿ ಸಿದರು. ಪಾಂಡವರು ಕೃಷ್ಣೆಯೊಡನೆ ಅಲ್ಲಿಯೇ ವಾಸಮಾಡುತ್ತಿದ್ದರು. ಕಾಮ್ಯ ಕವನದಲ್ಲಿ ವಾಸಮಾಡುತ್ತಿದ್ದ ವಿಶ್ವಾಸಾರ್ಹರಾದ ಪಾಂಡವರನ್ನು ಸಂದರ್ಶಿ ಸಲು ಅನೇಕಬ್ರಾಹ್ಮಣರು ಅನುದಿನವೂ ಅವರ ಆಶ್ರಮಕ್ಕೆ ಬಂದು ಹೋಗು ತ್ತಿದ್ದರು. ಒಂದು ದಿನ ಒಬ್ಬ ಬ್ರಾಹ್ಮಣನು ಆಗಮಿಸಿ ಯುಧಿಷ್ಠಿರಾದಿಗಳಿತ್ತ ಆತಿಥ್ಯವನ್ನು ಸ್ವೀಕರಿಸಿ, ಪಾಂಡವರಿಗೆ ಬಹುಪ್ರಿಯವಾದ ವಾರ್ತೆಯನ್ನು ಹೇಳಿದನು : "ಯುಧಿಷ್ಠಿರ! ಅರ್ಜುನನ ಪ್ರಿಯಸಖನೂ, ಮಹಾಬಾಹುವೂ, ಜಿತೇಂದ್ರಿಯನೂ, ಶೂರವಂಶೀಯನೂ, ಉದಾರವಾದ ಬುದ್ಧಿಯುಳ್ಳವನೂ ಆದ ಶ್ರೀಕೃಷ್ಣನು ಇಲ್ಲಿಗೆ ಆಗಮಿಸಲಿದ್ದಾನೆ. ನೀವು ಕಾಮ್ಯಕವನಕ್ಕೆ ಅಗಮಿಸಿರುವ ವಾರ್ತೆಯು ಈಗಾಗಲೇ ಶ್ರೀಕೃಷ್ಣನಿಗೆ ತಿಳಿದಿರುವುದು. ಯುಧಿಷ್ಠಿರ! ಹರಿಯು ಯಾವಾಗಲೂ ನಿಮ್ಮನ್ನು ನೋಡಬೇಕೆಂಬ ಹಂಬಲವುಳ್ಳವನೂ ಮತ್ತು ನಿಮ್ಮ ನಿರಂತರಶ್ರೇಯೋಭಿಲಾಷಿಯೂ ಆಗಿರುತ್ತಾನೆ. ಶ್ರೀಕೃಷ್ಣನು ಮಾತ್ರವಲ್ಲದೇ ಚಿರಂಜೀವಿಗಳಾದ, ಮಹಾ

ತಪಸ್ವಿಗಳಾದ, ಸ್ವಾಧ್ಯಾಯನಿರತರಾದ ಮಾರ್ಕಂಡೇಯ ಮಹರ್ಷಿಗಳೂ ಇಲ್ಲಿಗೆ ಗಮಿಸಲಿದ್ದಾರೆ.” ಜನಮೇಜಯ! ಆ



ಬ್ರಾಹ್ಮಣನು ಹೀಗೆ ಹೇಳುತ್ತಿರುವಾಗಲೇ ಶೈಬ್ಯ ಮತ್ತು ಸುಗ್ರೀವಗಳೆಂಬ ಕುದುರೆಗಳಿಂದ ಎಳೆಯಲ್ಪಟ್ಟ ದಿವ್ಯರಥದಲ್ಲಿ ಕುಳಿತು–ಶಚೀ ಸಮೇತನಾದ ಇಂದ್ರನಂತೆ–ಕೇಶವನು ಸತ್ಯಭಾಮಾಸಮೇತನಾಗಿ ಪಾಂಡವರ ಆಶ್ರಮಕ್ಕೆ ಅವರನ್ನು ಕಾಣುವ ಸಲುವಾಗಿ ಆಗಮಿಸಿದನು. ರಥದಿಂದಿಳಿದೊಡನೆಯೇ ಭಾಮಾಸಮೇತನಾದ ಶ್ರೀಕೃಷ್ಣನು ಆದರದಿಂದ ಸ್ವಾಗತಿಸಲು ಮುಂದೆ ಬಂದಿದ್ದ ಧರ್ಮರಾಜನಿಗೂ ಮತ್ತು ಭೀಮನಿಗೂ

ಅಭಿವಾದನಪೂರ್ವಕವಾಗಿ ನಮಸ್ಕರಿಸಿ, ಧರ್ಮಜನ ಪಕ್ಕದಲ್ಲಿ ನಿಂತಿದ್ದ ಧೌಮ್ಯರಿಗೂ ನಮಸ್ಕರಿಸಿದನು. ನಕುಲ-ಸಹದೇವರು ಮುಂದೆ ಬಂದು ಶ್ರೀಕೃಷ್ಣನಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಿದರು. ಅವರ ನೆತ್ತಿಯನ್ನು ಮುಟ್ಟಿ ಅವರನ್ನು ಸಂತೈಸಿದ ನಂತರ ಶ್ರೀಕೃಷ್ಣನು ತನ್ನ ಪ್ರಿಯಸಖನಾದ ಅರ್ಜುನನ್ನು ಗಾಢಾಲಿಂಗನಮಾಡಿಕೊಂಡನು. ಅನಂತರದಲ್ಲಿ ದ್ರೌಪದಿಯ ಬಳಿಗೆ ಹೋಗಿ ಅವಳ ಯೋಗ-ಕ್ಷೇಮವನ್ನು ವಿಚಾರಿಸಿ ಸವಿ ಮಾತುಗಳಿಂದ ಅವಳನ್ನು ಸಂತೈಸಿದನು. ಬಹುಕಾಲಾನಂತರ ನೋಡಿದ ಪ್ರಿಯಸಖನಾದ ಅರ್ಜುನನನ್ನು ಒಮ್ಮೆ ಆಲಿಂಗನೆಮಾಡಿಕೊಂಡಿದ್ದರಿಂದ ಕೇಶವನಿಗೆ ತೃಪ್ತಿಯಾಗಲಿಲ್ಲ. ಮತ್ತೆ ಮತ್ತೆ ತನ್ನ ಪ್ರಿಯಸಖನನ್ನು ಬಾಚಿ ತಬ್ಬಿಕೊಂಡು ಆನಂದಬಾಷ್ಪಗಳನ್ನು ಸುರಿಸಿದನು. ಅನಂತರದಲ್ಲಿ ಶ್ರೀಕೃಷ್ಣನಿಗೆ ಪ್ರಿಯಳೂ, ಪ್ರೇಯಸಿಯೂ ಆದ ಸತ್ಯಭಾಮೆಯು ಪಾಂಡವರ ಪ್ರಿಯಪತ್ನಿಯಾದ ದ್ರೌಪದಿಯನ್ನು ಆಲಿಂಗನೆಮಾಡಿಕೊಂಡಳು. ಕುಶಲಪ್ರಶ್ನೆಗಳಾದನಂತರ ಧೌಮ್ಯಸಮೇತರಾದ ಪಾಂಡವರು ಪುಂಡರೀಕಾಕ್ಷನಾದ ಶ್ರೀಕೃಷ್ಣನನ್ನು ಯಥಾವಿಧಿಯಾಗಿ ಸತ್ಕರಿಸಿ ಅವನ ಸುತ್ತಲೂ ಕುಳಿತು ಕೊಂಡರು. ಪ್ರಿಯಸಖನಾದ ಧನಂಜಯನೊಡನೆ ಸೇರಿದ ಶ್ರೀಕೃಷ್ಣನ ಮುಖಾರವಿಂದದಲ್ಲಿ ಅನಿರ್ವಚನೀಯವಾದ ತೇಜಸ್ಸು ಮೂಡಿಬಂದಿತು. ಭೂತಪತಿಯಾದ ಪರಮೇಶ್ವರನು ಕಾರ್ತಿಕೇಯನ ಜೊತೆಯಲ್ಲಿದ್ದಾಗ ಪ್ರಕಾಶಮಾನವಾಗಿ ಕಾಣುವಂತೆ–ಅರ್ಜುನಸಮೇತನಾದ ಶ್ರೀಕೃಷ್ಣನು ಪ್ರಕಾಶಿಸಿದನು. ಅನಂತರದಲ್ಲಿ ಅರ್ಜುನನು ಅರಣ್ಯದಲ್ಲಿ ಮತ್ತು ದೇವಲೋಕದಲ್ಲಿ ತನಗುಂಟಾದ ಅನುಭವಗಳನ್ನೂ ಮತ್ತು ತಾನು ಪಡೆದ ಮಹಾಸ್ತ್ರಗಳ ವಿವರಣೆಯನ್ನೂ ವಿಶದವಾಗಿ ಶ್ರೀಕೃಷ್ಣನಿಗೆ ಹೇಳಿ, ಸುಭದ್ರೆಯ ಮತ್ತು ಅಭಿಮನ್ಯುವಿನ ಕುಶಲವನ್ನು ಕೇಳಿದನು. ಶ್ರೀಕೃಷ್ಣನು ಯಥೋಕ್ತವಾಗಿ ಅರ್ಜುನನಿಗೆ ಉತ್ತರಿಸಿ ಪಾರ್ಥನನ್ನೂ, ಕೃಷ್ಣೆಯನ್ನೂ ಮತ್ತು ಪುರೋಹಿತರಾದ ಧೌಮ್ಯರನ್ನೂ ಯಥೋಚಿತವಾಗಿ ಗೌರವಿಸಿ, ದಿವ್ಯಾಸನದಲ್ಲಿ ಕುಳಿತು ಯುಧಿಷ್ಠಿರನ ಧಾರ್ಮಿಕತೆಯನ್ನು ಪ್ರಶಂಸಿಸುತ್ತಾ ಅವನನ್ನು ಕುರಿತು ಹೇಳಿದನು :

ಧರ್ಮಃ ಪರಃ ಪಾಣ್ಡವ ರಾಜ್ಯಲಾಭಾ-
ತ್ತಸ್ಯಾರ್ಥಮಾಹುಸ್ತಪ ಏವ ರಾಜನ್ ।
ಸತ್ಯಾರ್ಜವಾಭ್ಯಾಂ ಚರತಾ ಸ್ವಧರ್ಮಂ
ಜಿತಸ್ತ್ವಯಾಯಂ ಚ ಪರಶ್ಚ ಲೋಕಃ ॥೧೬॥

"ಯುಧಿಷ್ಠಿರ! ರಾಜ್ಯದ ಲಾಭಕ್ಕಿಂತಲೂ ಧರ್ಮಮಾರ್ಗವೇ ಶ್ರೇಷ್ಠವಾದುದು. ಅಂತಹ ಧರ್ಮದ ಅಭಿವೃದ್ಧಿಗಾಗಿಯೇ ತಪಶ್ಚರಣೆ, ವ್ರತಪರಿಪಾಲನೆ–ಮುಂತಾದುವುಗಳು ಆಚರಿಸಲ್ಪಡುತ್ತವೆ. ಸತ್ಯನಿಷ್ಠೆ ಮತ್ತು ಸರಳತೆಗಳಿಂದ ಸ್ವಧರ್ಮವನ್ನು ಸ್ವಲ್ಪವಾದರೂ ನ್ಯೂನಾತಿರೇಕಗಳಿಲ್ಲದೇ ಪರಿಪಾಲಿಸುತ್ತಿರುವ ನಿನ್ನಿಂದ ಇಹ-ಪರಲೋಕಗಳೆರಡೂ ಜಯಿಸಲ್ಪಟ್ಟಿವೆ.

ಅಧೀತಮಗ್ರೇ ಚರತಾ ವ್ರತಾನಿ
ಸಮ್ಯಗ್ಧನುರ್ವೇದಮವಾಪ್ಯ ಕೃತ್ಸ್ನಮ್ ।
ಕ್ಷಾತ್ರೇಣ ಧರ್ಮೇಣ ವಸೂನಿ ಲಬ್ಧ್ವಾ
ಸರ್ವೇ ಹ್ಯವಾಪ್ತಾಃ ಕ್ರತವಃ ಪುರಾಣಾಃ ॥೧೭॥

ನೀನು ಬಾಲ್ಯದಲ್ಲಿ ಬ್ರಹ್ಮಚರ್ಯಾದಿ ವ್ರತಗಳನ್ನು ಆಚರಿಸುತ್ತಾ ಸಾಂಗವೇದಾಧ್ಯಯನವನ್ನೂ ಮಾಡಿರುವೆ. ಪರಿಪೂರ್ಣವಾದ ಧನುರ್ವೇದವನ್ನೂ ಅಭ್ಯಾಸಮಾಡಿರುವೆ. ಅನಂತರ ಕ್ಷತ್ರಿಯಧರ್ಮೋಕ್ತವಾದ ರೀತಿಯಲ್ಲಿ ಐಶ್ವರ್ಯವನ್ನೂ ಸಂಗ್ರಹಿಸಿ, ಪುರಾತನವಾದ ಅನೇಕ ಯಜ್ಞ-ಯಾಗಾದಿಗಳನ್ನು ಮಾಡಿರುವೆ.

ನ ಗ್ರಾಮ್ಯಧರ್ಮೇಷು ರತಿಸ್ತವಾಸ್ತಿ
ಕಾಮಾನ್ನ ಕಿಂಚಿತ್ಕುರುಷೇ ನರೇನ್ದ್ರ
ನ ಚಾರ್ಥಲೋಭಾತ್ಪ್ರಜಹಾಸಿ ಧರ್ಮಂ
ತಸ್ಮಾತ್ಪ್ರಭಾವಾದಸಿ ಧರ್ಮರಾಜಃ ॥೧೮॥

ನಿನಗೆ ಗ್ರಾಮ್ಯಧರ್ಮಗಳಲ್ಲಿ (ಆಹಾರ-ನಿದ್ರಾ-ಮೈಥುನಾದಿಗಳಲ್ಲಿ) ಹೆಚ್ಚು ಆಸಕ್ತಿಯಿಲ್ಲ. ಯಾವ ವಿಧವಾದ ಕಾಮನೆಯಿಂದಲೂ ನೀನು ಧರ್ಮವನ್ನಾಚರಿಸುವುದಿಲ್ಲ ಮತ್ತು ಅರ್ಥಲೋಭದಿಂದ ನೀನು ಧರ್ಮವನ್ನು ಬಿಡತಕ್ಕವನೂ ಅಲ್ಲ. ರಾಜ್ಯಲಾಭಕ್ಕಿಂತಲೂ ಧರ್ಮವೇ ಶ್ರೇಷ್ಠವೆಂಬ ನಿಶ್ಚಯ

ಜ್ಞಾನವುಳ್ಳವನು ನೀನು. ಆದುದರಿಂದಲೇ ನೀನು ಧರ್ಮರಾಜನೆಂಬ ಅನ್ವರ್ಥನಾಮವನ್ನು ಹೊಂದಿರುವೆ.

**ದಾನಂ ಚ ಸತ್ಯಂ ಚ ತಪಶ್ಚ ರಾಜನ್**
**ಶ್ರದ್ಧಾ ಚ ಬುದ್ಧಿಶ್ಚ ಕ್ಷಮಾ ಧೃತಿಶ್ಚ ।**
**ಅವಾಪ್ಯ ರಾಷ್ಟ್ರಾಣಿ ವಸೂನಿ ಭೋಗಾ-**
**ನೇಷಾ ಪರಾ ಪಾರ್ಥ ಸದಾ ರತಿಸ್ತೇ ॥೧೯॥**

ನೀನು ಅನೇಕರಾಜ್ಯಗಳಿಗೆ ಅಧಿಪತಿಯಾಗಿ ಅತುಲವಾದ ಐಶ್ವರ್ಯವನ್ನು ಸಂಪಾದಿಸಿ, ಸಕಲವಿಧವಾದ ಭೋಗಸಾಮಗ್ರಿಗಳನ್ನು ಪಡೆದರೂ ಸಹ ದಾನ, ಸತ್ಯ, ತಪಸ್ಸು, ಶ್ರದ್ಧೆ, ಬುದ್ಧಿ, ಕ್ಷಮೆ ಮತ್ತು ಧೈರ್ಯ–ಇವುಗಳಲ್ಲಿಯೇ ಸ್ಥಿರವಾದ ಬುದ್ಧಿಯುಳ್ಳವನಾಗಿರುವೆ. ಇವುಗಳಿಂದ ಮಾತ್ರವೇ ನೀನು ಪರಮಾನಂದವನ್ನು ಅನುಭವಿಸುವೆ. (ನಿನಗೆ ವಸ್ತುಗತವಾದ ಸುಖಗಳೊಂದೂ ಆನಂದವನ್ನುಂಟುಮಾಡಲಾರವು.)

**ಯದಾ ಜನೌಘಃ ಕರುಜಾಙ್ಗಲಾನಾಂ**
**ಕೃಷ್ಣಾಂ ಸಭಾಯಾಮವಶಾಮಪಶ್ಯತ್ ।**
**ಅಪೇತಧರ್ಮವ್ಯವಹಾರವೃತ್ತಂ**
**ಸಹೇತ ತತ್ಪಾಣ್ಡವ ಕಸ್ತ್ವದನ್ಯಃ ॥೨೦॥**

ಅಪಾರವಾದ ಜನಸ್ತೋಮದಿಂದ ಕೂಡಿದ್ದ ಸಭಾಮಂಟಪದಲ್ಲಿ ಸರ್ವರ ಸಮಕ್ಷದಲ್ಲಿಯೇ ದ್ರೌಪದಿಗೆ ಮಾಡಿದ ಅಧರ್ಮಯುಕ್ತವಾದ ಅವ್ಯವಹಾರ್ಯವಾದ ಅವಮಾನವನ್ನು ಧರ್ಮನಿಷ್ಠನಾದ ನೀನು ಸಹಿಸಿದೆಯಲ್ಲದೇ ಮತ್ತಾರಿಂದ ತಾನೇ ಆ ದುಷ್ಟವರ್ತನೆಯನ್ನು ಸಹಿಸಲು ಸಾಧ್ಯವಾಗುತ್ತಿದ್ದಿತು?

**ಅಸಂಶಯಂ ಸರ್ವಸಮೃದ್ಧ ಕಾಮಃ**
**ಕ್ಷಿಪ್ರಂ ಪ್ರಜಾಃ ಪಾಲಯಿತಾಸಿ ಸಮ್ಯಕ್ ।**
**ಇಮೇ ವಯಂ ನಿಗ್ರಹಣೇ ಕುರೂಣಾಂ**
**ಯದಿ ಪ್ರತಿಜ್ಞಾ ಭವತಃ ಸಮಾಪ್ತಾ ॥೨೧॥**

ಅಂದಿನ ಆ ನಿನ್ನ ಸಹನೆಯು ನಿಷ್ಪ್ರಯೋಜಕವಲ್ಲ, ಯುಧಿಷ್ಠಿರ! ಆ

ನಿನ್ನ ಸಹನೆಗೆ ಮತ್ತು ಧರ್ಮನಿಷ್ಠೆಗೆ ಅನುಗುಣವಾದ ಪ್ರತಿಫಲವನ್ನೇ ಹೊಂದಿ, ಸರ್ವಸಂಪತ್ಸಮೃದ್ಧವಾದ ರಾಜ್ಯವನ್ನು ಪಡೆದು ಧರ್ಮದಿಂದ ರಾಜ್ಯಪರಿಪಾಲನೆಮಾಡುತ್ತಾ, ನಿನ್ನ ಸಕಲೇಷ್ಟಾರ್ಥಗಳನ್ನೂ ಶೀಘ್ರದಲ್ಲಿಯೇ ಪೂರ್ಣಮಾಡಿಕೊಳ್ಳುವೆಯೆಂಬುದರಲ್ಲಿ ಸ್ವಲ್ಪವಾದರೂ ಸಂಶಯಪಡುವ ಕಾರಣವಿಲ್ಲ. ನಿನ್ನಿಂದ ಪ್ರತಿಜ್ಞಾತವಾಗಿರುವ ಅರಣ್ಯವಾಸ ಮತ್ತು ಅಜ್ಞಾತ ವಾಸಗಳು ಮುಗಿದೊಡನೆಯೇ ಕೌರವರ ನಿಗ್ರಹಕ್ಕೆ ನಾವೂ ಟೊಂಕಕಟ್ಟಿ ನಿಲ್ಲುತ್ತೇವೆ. ಧರ್ಮ-ಭೀಮ-ನಕುಲ-ಸಹದೇವ-ದ್ರೌಪದೀ-ಧೌಮ್ಯರೇ! ನಿಶ್ಚಯವಾಗಿಯೂ ನಿಮ್ಮ ಶುಭಾಶಯಗಳ ಪರಿಣಾಮವಾಗಿ ಈ ನನ್ನ ಪ್ರಿಯ ಸಖನಾದ ಅರ್ಜುನನು ಸಕಲವಿಧವಾದ ಮಹಾಸ್ತ್ರಗಳಲ್ಲಿಯೂ ಪರಿಶ್ರಮ ವನ್ನು ಹೊಂದಿ ಪರಮಹರ್ಷಿತನಾಗಿ ಪುನಃ ಆಗಮಿಸಿರುವನು. ದ್ರೌಪದಿ! ನೀನು ಬಹಳ ಅದೃಷ್ಟವಂತಳಮ್ಮಾ! ಯಾವ ವಿಧವಾದ ಅಪಾಯಕ್ಕೂ ಒಳಗಾಗದೇ ಸರ್ವಾಸ್ತ್ರಗಳಲ್ಲಿಯೂ ಮತ್ತು ಗಂಧರ್ವವಿದ್ಯೆಗಳಾದ ಗಾಯನ-ನೃತ್ಯಗಳಲ್ಲಿಯೂ ಪ್ರಾವೀಣ್ಯವನ್ನು ಪಡೆದು ಬಂದ ಅರ್ಜುನನನ್ನು ಪುನಃ ಸೇರಿದೆಯಲ್ಲವೇ? ನಿಶ್ಚಯವಾಗಿಯೂ ನೀನೇ ಧನ್ಯಳು. ಪ್ರತಿ ವಿಂಧ್ಯ-ಸುತಸೋಮಾದಿ ನಿನ್ನ ಐವರು ಮಕ್ಕಳೂ ಸರ್ವದಾ ಧನುರ್ವೇದ ನಿರತರಾಗಿ ರುತ್ತಾ, ಸುಶೀಲರಾಗಿ, ಸತ್ಪುರುಷರ ಮಾರ್ಗಾನುಸರಣೆಯಲ್ಲಿಯೇ ಇರುವವರಾಗಿ ತಮ್ಮ ಗೆಳೆಯರೊಡನೆ ಕಾಲಕಳೆಯುತ್ತಿದ್ದಾರೆ. ನಿನ್ನ ತಂದೆಯೂ ಮತ್ತು ನಿನ್ನ ಸೋದರರೂ ನಿನ್ನ ಐವರು ಮಕ್ಕಳಿಗೂ ಐದು ರಾಜ್ಯಗಳನ್ನು ಕೊಟ್ಟು ಅವರನ್ನು ಆ ರಾಜ್ಯಗಳಿಗೆ ಅಧೀಶರನ್ನಾಗಿ ಮಾಡಬೇಕೆಂಬ ಅಪೇಕ್ಷೆಯುಳ್ಳವರಾಗಿದ್ದಾರೆ. ಆದರೆ ನಿನ್ನ ಮಕ್ಕಳು ಮಾತ್ರ ಮಾತಾಮಹರ ಮನೆಯಲ್ಲಾಗಲೀ, ಅವರು ಕೊಡಲು ಅಪೇಕ್ಷಿಸಿರುವ ರಾಜ್ಯದ ಬಳುವಳಿಯಲ್ಲಾಗಲೀ ಆಸಕ್ತಿಯನ್ನೇ ತೋರುತ್ತಿಲ್ಲ. ಅವರಿಗದು ಬೇಡವಾಗಿದೆ. ಅವರು ಆನರ್ತದೇಶಕ್ಕೆ ಆಗಮಿಸಿ ಅಲ್ಲಿ ಧನುರ್ವಿದ್ಯೆಯ ಅಭ್ಯಾಸದಲ್ಲಿ ತೊಡಗಿದ್ದಾರೆ. ವೃಷ್ಣಿಪುರದಲ್ಲಿ ವಾಸಮಾಡುತ್ತಿರುವ ನಿನ್ನ ಮಕ್ಕಳು ದೇವಲೋಕವನ್ನೂ ಆಶಿಸುವವಲ್ಲ ನೀನೂ ಮತ್ತು ಕುಂತಿಯೂ ಆ ನಿನ್ನ ಮಕ್ಕಳ ವಿದ್ಯಾಭ್ಯಾಸ, ನಡತೆ, ಶರೀರಪೋಷಣೆಗಳಲ್ಲಿ

ಎಷ್ಟು ಆಸಕ್ತಿಯುಳ್ಳವರಾಗಿರುವಿರೋ ಅದೇ ರೀತಿಯಲ್ಲಿ ನನ್ನ ತಂಗಿ ಸುಭದ್ರೆಯೂ ನಿನ್ನ ಮಕ್ಕಳ ವಿಷಯದಲ್ಲಿ ಹೆಚ್ಚಿನ ಆಸಕ್ತಿಯಿಂದಲೂ ಹೆಚ್ಚಿನ ಅಕ್ಕರೆಯಿಂದಲೂ ವರ್ತಿಸುತ್ತಿರುವಳು. ನಿನಗಿಂತಲೂ ಹೆಚ್ಚಿನ ಜಾಗರೂಕತೆಯನ್ನು ವಹಿಸಿ ಅವರ ಪೋಷಣೆಮಾಡುತ್ತಿದ್ದಾಳೆಂದರೂ ತಪ್ಪಾಗಲಾರದು. ದ್ರೌಪದಿ! ರುಕ್ಮಿಣಿಯ ಪುತ್ರನಾದ ಪ್ರದ್ಯುಮ್ನನು ಯಾವ ರೀತಿಯಲ್ಲಿ ಅನಿರುದ್ಧನಿಗೂ, ಅಭಿಮನ್ಯುವಿಗೂ, ಸುನೀತನಿಗೂ ಮತ್ತು ಭಾನುವಿಗೂ ಧನುರ್ವಿದ್ಯಾಭ್ಯಾಸದಲ್ಲಿ ಆಚಾರ್ಯನಾಗಿರುವನೋ–ಅದೇ ರೀತಿಯಲ್ಲಿ ನಿನ್ನ ಐವರು ಮಕ್ಕಳಿಗೂ ಅವನೇ ಧನುರ್ವಿದ್ಯೆಗೆ ಆಚಾರ್ಯನೂ ಮತ್ತು ಅವರ ಹಿತರಕ್ಷಕನೂ ಆಗಿರುವನು. ಅಭಿಮನ್ಯುವೂ ಸಹ ನಿನ್ನ ಮಕ್ಕಳಿಗೆ ಗದಾಯುದ್ಧ, ಕತ್ತಿವರಸೆ, ಗುರಾಣಿಯನ್ನು ಹಿಡಿಯುವ ರೀತಿ, ಕುದುರೆಸವಾರಿ–ಇವೇ ಮುಂತಾದ ಯುದ್ಧವಿದ್ಯೆಗಳನ್ನು ಸ್ವಲ್ಪವೂ ಬೇಸರವಿಲ್ಲದೇ ಹೇಳಿಕೊಡುತ್ತಿದ್ದಾನೆ. ಪರಾಕ್ರಮಶಾಲಿಗಳಾದ ನಿನ್ನ ಮಕ್ಕಳೂ ಅಷ್ಟೇ ಆಸಕ್ತಿಯಿಂದ ಆ ವಿದ್ಯೆಗಳೆಲ್ಲವನ್ನೂ ಕಲಿಯುತ್ತಿದ್ದಾರೆ. ಪ್ರದ್ಯುಮ್ನನಾದರೋ ನಿನ್ನ ಮಕ್ಕಳಿಗೂ ಮತ್ತು ಅಭಿಮನ್ಯುವಿಗೂ ಧನುರ್ವಿದ್ಯೆಯ ರಹಸ್ಯಗಳೆಲ್ಲವನ್ನೂ ಹೇಳಿಕೊಟ್ಟು, ಮಹಾಸ್ತ್ರಗಳೆಲ್ಲವನ್ನೂ ಉಪದೇಶಿಸಿ, ಅವರು ತೋರುವ ಆಸಕ್ತಿಯನ್ನೂ ಅವರ ಶಸ್ತ್ರಾಸ್ತ್ರಪ್ರಯೋಗ ಕೌಶಲವನ್ನೂ ಮತ್ತು ಅವರ ಪರಾಕ್ರಮವನ್ನೂ ನೋಡಿ ಹಿರಿಹಿಗ್ಗುತ್ತಾನೆ. ನಿನ್ನ ಮಕ್ಕಳೇನಾದರೂ ವಿಹಾರಾರ್ಥವಾಗಿ ಹೊರಟರೆಂದರೆ–ಅವರಲ್ಲಿ ಪ್ರತಿಯೊಬ್ಬ ರಾಜಕುಮಾರನ ಹಿಂದೆಯೂ (ರಾಜರ ಹಿಂದೆ ಹೊರಡುವಂತೆಯೇ) ರಥಗಳೂ, ಕುದುರೆಗಳೂ, ಆನೆಗಳೂ ಮತ್ತು ಪಲ್ಲಕ್ಕಿಗಳೂ ಹೊರಡುತ್ತವೆ."

ಶ್ರೀಕೃಷ್ಣನು ದ್ರೌಪದಿಯೊಡನೆ ಹೀಗೆ ಹೇಳಿ ಅನಂತರ ಧರ್ಮಜನ ಕಡೆಗೆ ತಿರುಗಿ ಹೇಳಿದನು : "ಯುಧಿಷ್ಠಿರ! ನಿನ್ನ ಪ್ರತಿಜ್ಞಾತವಾದ ವರ್ಷಗಳು ಮುಗಿದೊಡನೆಯೇ ಈ ರಾಜಕುಮಾರರೂ, ದಶಾರ್ಹಯೋಧರೂ, ಕುಕುರಯೋಧರೂ, ಅಂಧಕಯೋಧರೂ–ಮತ್ತಿತರರೂ ನಿನ್ನ ಆಜ್ಞಾಧಾರಕರಾಗಿ ನೀನು ಹೇಳುವ ಸ್ಥಳದಲ್ಲಿ ಯುದ್ಧಸನ್ನದ್ಧರಾಗಿ ನಿಲ್ಲುತ್ತಾರೆ. ಬಲರಾಮನಿಂದ ನಿಯಂತ್ರಿತರಾದ ಯದುಸೈನಿಕರು ಬಿರುಗಾಳಿಯಂತೆ ರಭಸಯುಕ್ತ

ವಾದ ಮತ್ತು ಅಪ್ರತಿಹತವಾದ ಶಸ್ತ್ರಾಸ್ತ್ರಗಳನ್ನು ಧರಿಸಿ ರಥ-ಗಜಾಶ್ವ-ಪದಾತಿಸೈನ್ಯಸಮೇತರಾಗಿ ನಿನ್ನನ್ನು ಹಿಂಬಾಲಿಸಿ ನಿಲ್ಲುತ್ತಾರೆ. ಅವರೆಲ್ಲರ ಬೆಂಬಲದಿಂದ ನೀನು ಪಾಪಾತ್ಮರಲ್ಲಿ ಅಗ್ರಗಣ್ಯನಾದ ಸುಯೋಧನನನ್ನು ಅವನ ಬಂಧು-ಬಾಂಧವರ ಸಹಿತವಾಗಿ–ನಾನು ನರಕಾಸುರನನ್ನೂ, ಶಾಲ ನನ್ನೂ ವಿಧ್ವಂಸಗೊಳಿಸಿದಂತೆ-ವಿಧ್ವಂಸಗೊಳಿಸು. ಯುಧಿಷ್ಠಿರ! ನೀನಂದು ರಾಜಸಭೆಯಲ್ಲಿ ಮಾಡಿದ ಪ್ರತಿಜ್ಞೆಯನ್ನು ಪೂರ್ಣಗೊಳಿಸು. ಪ್ರತಿಜ್ಞೆಗೆ ಭಂಗತರಬೇಕಾದ ಪ್ರಸಂಗವೇ ಬರುವುದಿಲ್ಲ. ನಿನ್ನ ಆಶಯದಂತೆ ಪ್ರತಿಜ್ಞೆ ಯನ್ನು ಪೂರ್ಣಗೊಳಿಸಿದ ನಂತರದಲ್ಲಿ ದಶಾರ್ಹಸೇನೆಯಿಂದೊಡಗೂಡಿ ದವನಾಗಿ ಶತ್ರುವಿನ ಸೇನೆಯನ್ನು ಧ್ವಂಸಮಾಡಿ ಹಸ್ತಿನೆಯನ್ನು ಸ್ವಾಧೀನ ಮಾಡಿಕೊಳ್ಳಬಹುದಾಗಿದೆ. ಶತ್ರುಗಳನ್ನು ವಿನಾಶಮಾಡುವುದರಿಂದ ಕೋಪಕ್ಕೆ ಉಪಶಮನವನ್ನು ಮಾಡಿಕೊಂಡು ಪಾಪರಹಿತನಾಗಿ, ಯಥೇಚ್ಛವಾಗಿ ಪುಣ್ಯಕ್ಷೇತ್ರಗಳಲ್ಲಿ ಸಂಚರಿಸುತ್ತಾ ಶೋಕರಹಿತನಾಗಿ, ಸಕಲದೇಶಗಳ ಆಡಳಿತಕ್ಕೂ ಕೇಂದ್ರವಾಗಿರುವ ಸುಪ್ರಸಿದ್ಧವಾದ ಹಸ್ತಿನಾಪುರವನ್ನು ಆಳುವೆ, ಯುಧಿಷ್ಠಿರ!"

ಯುಧಿಷ್ಠಿರನು ಏಕಾಗ್ರಚಿತ್ತನಾಗಿ ಶ್ರೀಕೃಷ್ಣನು ಹೇಳಿದುದೆಲ್ಲವನ್ನೂ ಕೇಳಿದನು. ಶ್ರೀಕೃಷ್ಣನ ಅಭಿಮತವನ್ನು ತಿಳಿದು ಧರ್ಮರಾಜನಿಗೆ ಹಿಡಿಸ ಲಾರದಷ್ಟು ಆನಂದವಾಯಿತು. ಆನಂದಾಶ್ರುಗಳನ್ನು ಸುರಿಸುತ್ತಾ ಎರಡು ಕೈಗಳನ್ನೂ ಜೋಡಿಸಿ ಧರ್ಮರಾಜನು ಶ್ರೀಕೃಷ್ಣನಿಗೆ ಹೇಳಿದನು :

**ಅಸಂಶಯಂ ಕೇಶವ ಪಾಣ್ಡವಾನಾಂ**
**ಭವಾನ್ಗತಿಸ್ತ್ವಚ್ಛರಣಾ ಹಿ ಪಾರ್ಥಾಃ ।**
**ಕಾಲೋದಯೇ ತಚ್ಚ ತತಶ್ಚ ಭೂಯಃ**
**ಕರ್ತಾ ಭವಾನ್ಕರ್ಮ ನ ಸಂಶಯೋಽಸ್ತಿ ॥೩೮॥**

**ಯಥಾಪ್ರತಿಜ್ಞಂ ವಿಹೃತಶ್ಚ ಕಾಲಃ**
**ಸರ್ವಾಃ ಸಮಾ ದ್ವಾದಶ ನಿರ್ಜನೇಷು ।**
**ಅಜ್ಞಾತಚರ್ಯಾಂ ವಿಧಿವತ್ಸಮಾಪ್ಯ**
**ಭವದ್ಗತಾಃ ಕೇಶವ ಪಾಣ್ಡವೇಯಾಃ ॥೩೯॥**

ಏಷೈವ ಬುದ್ಧಿರ್ಜುಷತಾಂ ಸದಾ ತ್ವಾಂ
ಸತ್ಯೇ ಸ್ಥಿತಾಃ ಕೇಶವ ಪಾಣ್ಡವೇಯಾಃ ।
ಸದಾನಧರ್ಮಾಃ ಸಜನಾಃ ಸದಾರಾಃ
ಸಬಾನ್ಧವಾಸ್ತ್ವಚ್ಛರಿಣಾ ಹಿ ಪಾರ್ಥಾಃ ॥೪೦॥

"ಕೇಶವ! ನೀನು ಪಾಂಡವರ ಪ್ರಾಣರಕ್ಷಕನೆಂಬುದರಲ್ಲಿ ಸಂಶಯವೇ ಇಲ್ಲ. ಕುಂತಿಯ ಮಕ್ಕಳು ನಿನ್ನನ್ನು ಶರಣ್ಯನನ್ನಾಗಿ ಪಡೆದು ಧನ್ಯರಾಗಿರುವರು. ಕಾಲವು ಸನ್ನಿಹಿತವಾದಾಗ, ಈಗ ನೀನು ಹೇಳಿದ ಕಾರ್ಯಗಳನ್ನೇ ಅಲ್ಲದೇ ಇನ್ನೂ ಮಿಗಿಲಾದ ಎಷ್ಟೋ ಕಾರ್ಯಗಳನ್ನು ಮಾಡಿ ನಮಗೆ ನೆರ ವಾಗುವೆಯೆಂಬ ಸಂಪೂರ್ಣವಾದ ಭರವಸೆಯು ನನಗಿರುವುದು. ನಾವಂದು ಪ್ರತಿಜ್ಞೆಮಾಡಿದಂತೆ ಹನ್ನೆರಡು ವರ್ಷಗಳ ಪರ್ಯಂತವಾಗಿ ಈ ನಿರ್ಜನವಾದ ಕಾಡಿನಲ್ಲಿ ಕಳೆಯುತ್ತೇವೆ. ಅನಂತರದಲ್ಲಿ ಒಂದು ವರ್ಷ ಅಜ್ಞಾತವಾಸವನ್ನೂ ಮುಗಿಸಿ ನಿನ್ನ ಆಶ್ರಯವನ್ನು ಪಡೆಯುತ್ತೇವೆ. ನಿನ್ನನ್ನು ಯಾರು ಆಶ್ರಯಿಸಿರುತ್ತಾರೆಯೋ-ಅವರೆಲ್ಲರೂ ಇದೇ ವಿಧವಾದ ಧರ್ಮಮಾರ್ಗ ವನ್ನು ಅವಲಂಬಿಸಿ ಸತ್ಯನಿಷ್ಠೆಯಿಂದಿರುತ್ತಾರೆ. ನಿನ್ನ ಆಶ್ರಿತರು ಅಧರ್ಮ ಮಾರ್ಗದಲ್ಲಿ ನಡೆಯುವ ಸಾಧ್ಯತೆಯೇ ಇಲ್ಲ. ಅದೇ ರೀತಿಯಲ್ಲಿ ನಾವೂ ಸಹ ನಿನ್ನ ಆಶ್ರಯವನ್ನು ಪಡೆದು ಧರ್ಮಮಾರ್ಗಪ್ರವೃತ್ತರಾಗಿದ್ದೇವೆ. ನಾವು ಮಾಡುವ ದಾನ-ಧರ್ಮಗಳೂ ಮತ್ತು ಪಶು-ಪತ್ನೀ-ಸುತರಿಂದೊಡಗೂಡಿ ರುವ ಈ ಸಂಸಾರವೆಲ್ಲವೂ ನಿನಗೇ ಅರ್ಪಿತವಾಗಿವೆ. ವಾಸುದೇವ! ಎಲ್ಲ ವನ್ನೂ ನಿನ್ನ ರಕ್ಷಣೆಗೇ ಒಪ್ಪಿಸಿಬಿಟ್ಟಿದ್ದೇನೆ.

ಜನಮೇಜಯ! ವೃಷ್ಣಿಕುಲೋತ್ಪನ್ನನಾದ ಶ್ರೀಕೃಷ್ಣನೂ ಮತ್ತು ಧರ್ಮರಾಜನೂ ಹೀಗೆ ಸಂಭಾಷಿಸುತ್ತಿರಲಾಗಿ–ತಪೋವೃದ್ಧರೂ, ಜ್ಞಾನ ವೃದ್ಧರೂ, ವಯೋವೃದ್ಧರೂ, ಧರ್ಮಾತ್ಮರೂ ಆದ ಮಾರ್ಕಂಡೇಯ ಮಹರ್ಷಿಗಳು ಅಲ್ಲಿಗೆ ಆಗಮಿಸಿದರು. ಆ ಮಹರ್ಷಿಗಳಿಗೆ ಮುಪ್ಪು-ಸಾವು ಗಳೆರಡೂ ಇಲ್ಲ. ರೂಪವಂತರಾಗಿಯೂ, ಉದಾರಿಗಳಾಗಿಯೂ, ಸದ್ಗುಣ ಪರಿಪೂರ್ಣರಾಗಿಯೂ ಇದ್ದರು. ಅವರು ಹುಟ್ಟಿ ಬಹುಸಹಸ್ರವರ್ಷಗಳೇ ಕಳೆದಿದ್ದರೂ ಇಪ್ಪತ್ತೈದು ವರ್ಷಗಳ ಯುವಕರಂತೆಯೇ ಕಾಣುತ್ತಿದ್ದರು.

ಬಹುವಯಸ್ಕರಾದ ಮಹಾತೇಜಸ್ವಿಗಳಾದ ಮಾರ್ಕಂಡೇಯಮಹರ್ಷಿಗಳು ಆಶ್ರಮದ ಬಳಿಗೆ ಬರುತ್ತಲೇ ಬ್ರಾಹ್ಮಣರೆಲ್ಲರೂ ಮೇಲೆದ್ದು ಮಹರ್ಷಿಗಳನ್ನು ಯಥಾವಿಧಿಯಾಗಿ ಸ್ವಾಗತಿಸಿ ಗೌರವಿಸಿದರು. ಧರ್ಮರಾಜನೂ ಶ್ರೀಕೃಷ್ಣ ಸಮೇತನಾಗಿ ಮುಂದೆಹೋಗಿ ಮಹರ್ಷಿಗಳ ಪಾದಗಳಿಗೆ ನಮಸ್ಕರಿಸಿ, ಆಶ್ರಮದೊಳಕ್ಕೆ ಕರೆದೊಯ್ದು, ಅರ್ಘ್ಯ-ಪಾದ್ಯಾದಿಗಳನ್ನಿತ್ತು ಯಥಾಶಾಸ್ತ್ರ ವಾಗಿ ಸತ್ಕರಿಸಿದನು. ಅನಂತರ ಬ್ರಾಹ್ಮಣರ ಮತ್ತು ಪಾಂಡವರ ಅಭಿಮತ ದಂತೆ ಶ್ರೀಕೃಷ್ಣನು ಮಾರ್ಕಂಡೇಯರಿಗೆ ಹೇಳಿದನು :

"ಮಹರ್ಷಿಗಳೇ! ಪಾಂಡುವಿನ ಮಕ್ಕಳಾದ ಈ ಧರ್ಮರಾಜಾದಿ ಗಳೂ, ಇಲ್ಲಿ ನೆರೆದಿರುವ ಬ್ರಾಹ್ಮಣರೂ, ದ್ರೌಪದೀ-ಸತ್ಯಭಾಮೆಯರೂ ಮತ್ತು ನಾನೂ ನಿಮ್ಮ ಅಮೃತಧಾರಾಸಮಾನವಾದ ಮಾತುಗಳನ್ನು ಕೇಳಲಿಚ್ಛಿ ಸಿದ್ದೇವೆ. ಹಿಂದೆ ನಡೆದ ಪುಣ್ಯಪ್ರದವಾದ ಕಥೆಗಳನ್ನೂ–ಹಿಂದಿದ್ದ ರಾಜರೂ, ಸ್ತ್ರೀಯರೂ ಮತ್ತು ಋಷಿ-ಮಹರ್ಷಿಗಳೂ ಆಚರಿಸುತ್ತಿದ್ದ ಸದಾಚಾರ ಗಳನ್ನೂ ತಿಳಿಸಿರಿ."

ಹೀಗೆಂದು ಮಹರ್ಷಿಗಳನ್ನು ಪ್ರಾರ್ಥಿಸಿ ಕೇಶವನು ತನ್ನ ಆಸನದಲ್ಲಿ ಕುಳಿತನು. ಮಾರ್ಕಂಡೇಯರ ಪ್ರವಚನವನ್ನು ಕೇಳಲು ಎಲ್ಲರೂ ತಮ್ಮ ತಮ್ಮ ಆಸನಗಳಲ್ಲಿ ಕುಳಿತಿರಲಾಗಿ, ವಿಶುದ್ಧಾತ್ಮರಾದ ದೇವರ್ಷಿಗಳಾದ ನಾರದರೂ ಪಾಂಡವರನ್ನು ನೋಡುವ ಸಲುವಾಗಿ ಅಲ್ಲಿಗೆ ಆಗಮಿಸಿದರು. ಮಾರ್ಕಂಡೇಯರೇ ಆದಿಯಾಗಿ ಅಲ್ಲಿ ಉಪಸ್ಥಿತರಾಗಿದ್ದ ಸರ್ವರೂ ಪ್ರತ್ಯು ತ್ಥಾನಮಾಡಿ ನಾರದಮಹರ್ಷಿಗಳನ್ನು ಸ್ವಾಗತಿಸಿದರು. ಅನಂತರದಲ್ಲಿ ಪಾಂಡವರು ಯಥಾವಿಧಿಯಾಗಿ ನಾರದರಿಗೆ ಅರ್ಘ್ಯ-ಪಾದ್ಯಾದಿಗಳನ್ನಿತ್ತು ಸತ್ಕರಿಸಿದರು. ನಾರದರು ಬರುವ ಮೊದಲು ಶ್ರೀಕೃಷ್ಣಸಮೇತರಾದ ಪಾಂಡ ವರೂ ಮತ್ತು ಬ್ರಾಹ್ಮಣರೂ ಮಾರ್ಕಂಡೇಯರು ಆರಂಭಿಸಲಿದ್ದ ಪುಣ್ಯ ಕರವಾದ ಕಥೆಗಳನ್ನು ಕೇಳಲು ಕುಳಿತಿದ್ದರೆಂಬ ವಾರ್ತೆಯನ್ನು ಕೇಳಿ, ಸನಾತನರಾದ ಕಾಲಜ್ಞರಾದ ನಾರದರೂ ಆ ಕಥಾಶ್ರವಣವನ್ನು ಅನು ಮೋದಿಸಿ ನಸುನಗುತ್ತಾ ಮಾರ್ಕಂಡೇಯರೊಡನೆ ಹೇಳಿದರು :

“ಬ್ರಹ್ಮರ್ಷಿಗಳೇ! ಪಾಂಡವರಿಗೆ ಯಾವ ಕಥೆಯನ್ನು ಹೇಳಲು ಆಶಿಸಿದ್ದಿರೋ ಆ ಕಥೆಯನ್ನು ನೀವಿನ್ನು ಪ್ರಾರಂಭಿಸಬಹುದು.”



ನಾರದರ ಮಾತುಗಳನ್ನು ಕೇಳಿ ಮಹಾತಪಸ್ವಿಗಳಾದ ಮಾರ್ಕಂಡೇಯರು ಹೇಳಿದರು :

“ಮನಃ ಸಮಾಧೀಯತಾಮ್–ಒಂದು ಕ್ಷಣ ಸಾವಧಾನಚಿತ್ತರಾಗಿರಿ. ಹೇಳಲಿರುವ ವಿಷಯವು ಬಹುವಾಗಿದೆ ಮತ್ತು ಅತಿಗಹನವೂ ಆಗಿದೆ.”

ಮಹರ್ಷಿಗಳಿಂದ ಆಜ್ಞಪ್ತರಾದ ಸಭಿಕರು ಮಧ್ಯಾಹ್ನದ ಸೂರ್ಯನಿಗಿರುವ ತೇಜಸ್ಸಿನೋಪಾದಿಯಲ್ಲಿ ಮಹಾತೇಜಸ್ಸಿನಿಂದ ಕಂಗೊಳಿಸುತ್ತಿದ್ದ ಮಾರ್ಕಂಡೇಯರನ್ನು ಎವೆಯಿಕ್ಕದೇ ನೋಡುತ್ತಾ ಒಂದು ಕ್ಷಣಕಾಲ ಮೌನವಾಗಿ ಕುಳಿತಿದ್ದರು.

ಜನಮೇಜಯ! ಯಾವ ಕಥೆಯನ್ನು ಹೇಳಬೇಕೆಂಬ ವಿವಕ್ಷೆಯಲ್ಲಿ ಮಾರ್ಕಂಡೇಯರು ಮಗ್ನರಾಗಿರುವಾಗ ಯುಧಿಷ್ಠಿರನು ಕಥಾಪ್ರಾರಂಭಕ್ಕಾಗಿ ಪೀಠಿಕಾರೂಪವಾಗಿ ತನ್ನ ಸಮಸ್ಯೆಯನ್ನು ಮುಂದಿಟ್ಟನು :

"ಮಹರ್ಷಿಗಳೇ! ನೀವು ಸನಾತನರಾಗಿರುವುದರಿಂದ ದೇವ-ದಾನವರ, ಮಹಾತ್ಮರಾದ ಋಷಿ-ಮಹರ್ಷಿ-ರಾಜರ್ಷಿಗಳ ಚರಿತ್ರೆಗಳೆಲ್ಲವನ್ನೂ ಯಥಾ ರೀತಿಯಾಗಿ ತಿಳಿದವರಾಗಿರುವಿರಿ. ನೀವು ನಮ್ಮಿಂದ ಸೇವಿಸಲ್ಪಡತಕ್ಕವರೂ, ಗೌರವಿಸಲ್ಪಡತಕ್ಕವರೂ ಆಗಿರುವಿರಿ. ನಿಮ್ಮ ಸಹವಾಸದಲ್ಲಿ ಸ್ವಲ್ಪ ಕಾಲವಾದರೂ ಇರಬೇಕೆಂದೂ, ನಿಮ್ಮ ಪ್ರವಚನವನ್ನು ಕೇಳಬೇಕೆಂದೂ ನಾವು ಬಹಳ ದಿನಗಳಿಂದಲೂ ಆಶಿಸಿದ್ದೆವು. ಇದೇ ಸಮಯಕ್ಕೆ ಸರಿಯಾಗಿ ನಮ್ಮನ್ನು ಕಾಣಲು ದೇವಕೀಪುತ್ರನಾದ ಶ್ರೀಕೃಷ್ಣನೂ ಇಲ್ಲಿಗೆ ಆಗಮಿ ಸಿರುವನು. ಇಂತಹ ಸನ್ನಿವೇಶದಲ್ಲಿ ನನ್ನ ಮನಸ್ಸಿನಲ್ಲಿ ಉದ್ಭೂತವಾಗಿರುವ ಸಮಸ್ಯೆಗಳನ್ನು ನಿಮ್ಮ ಮುಂದಿಡುವುದೂ ಮತ್ತು ಅವುಗಳಿಗೆ ಪರಿಹಾರ ರೂಪವಾದ ಉತ್ತರಗಳನ್ನು ನಿಮ್ಮಿಂದ ಪಡೆಯುವುದೂ ನನ್ನ ಇಂದಿನ ಆಶಯವಾಗಿದೆ.

ಮಹರ್ಷಿಗಳೇ! ನಾನು ನನ್ನ ಇಂದಿನ ಕಷ್ಟಗಳನ್ನು ಅನುಭವಿಸುವಾಗ ನನ್ನ ಬುದ್ಧಿಯು ಈ ವಿಧವಾದ ಸಂದೇಹಗಳನ್ನು ನನ್ನ ಮುಂದೆ ತಂದೊಡ್ಡುತ್ತದೆ. ಧರ್ಮಮಾರ್ಗದಲ್ಲಿಯೇ ಜೀವನಪರ್ಯಂತವಾಗಿ ಇರಬೇಕೆಂದು ನಿಶ್ಚಯಿಸಿರುವ ನಾನು ಸಕಲಸುಖೋಪಭೋಗಗಳನ್ನೂ ತೊರೆಯಬೇಕಾಯಿತು. ಇದಕ್ಕೆ ಪ್ರತಿಯಾಗಿ, ಪಾಪಾತ್ಮರಾದ ಧೃತರಾಷ್ಟ್ರನ ಮಕ್ಕಳು ಸಕಲವಿಧದಲ್ಲಿಯೂ ಅಭಿವೃದ್ಧಿಯನ್ನೇ ಹೊಂದುತ್ತಿರುವರು. ಆದುದರಿಂದ ಈ ಸಮಸ್ಯೆಯು ನನಗೆ ಉದ್ಭವಿಸಿದೆ.

**ಕರ್ಮಣಃ ಪುರುಷಃ ಕರ್ತಾ ಶುಭಸ್ಯಾಪ್ಯಶುಭಸ್ಯ ವಾ ।**
**ಸ ಫಲಂ ತದುಪಾಶ್ನಾತಿ ಕಥಂ ಕರ್ತಾ ಸ್ವಿದೀಶ್ವರಃ ॥೫೭॥**

**ಕುತೋ ವಾ ಸುಖದುಃಖೇಷು ನೃಣಾಂ ಬ್ರಹ್ಮವಿದಾಂ ವರ ।**
**ಇಹ ವಾ ಕೃತಮನ್ವೇತಿ ಪರದೇಹೇಽಥ ವಾ ಪುನಃ ॥೫೮॥**

ಶುಭಾಶುಭಕರ್ಮಗಳಿಗೆ ಪುರುಷನೇ ಕರ್ತೃವು. ಅವನು ಮಾಡಿದ

ಕರ್ಮಾನುಸಾರವಾಗಿ ಅದರ ಫಲವನ್ನು ಪಡೆಯುತ್ತಾನೆ. ಈ ಮಧ್ಯದಲ್ಲಿ ಈಶ್ವರನ ಕಾರ್ಯವೇನು? ಈಶ್ವರನು ಹೇಗೆ ಕರ್ತೃವಾಗುತ್ತಾನೆ? ಬ್ರಹ್ಮವಿದರಲ್ಲಿ ಶ್ರೇಷ್ಠರಾದವರೇ! ಮಾನವನು ತನ್ನ ಕರ್ಮಸಂಬಂಧವಾದ ಸುಖ-ದುಃಖಗಳನ್ನು ಈ ಜನ್ಮದಲ್ಲಿಯೇ ಅನುಭವಿಸುತ್ತಾನೆಯೋ? ಅಥವಾ ಜನ್ಮಾಂತರಗಳಲ್ಲಿ ಅನುಭರಿಸುತ್ತಾನೆಯೋ?

(ಮನುಷ್ಯನು ಸಾಮಾನ್ಯವಾಗಿ ಪ್ರಾಪಂಚಿಕಸುಖೇಚ್ಛುವಾಗಿರುತ್ತಾನೆ. ಅವನು ಸನ್ಮಾರ್ಗದಿಂದಲೋ ದುರ್ಮಾರ್ಗದಿಂದಲೋ ಹಣವನ್ನು ಸಂಪಾದಿಸಿ ಆ ಸುಖವನ್ನು ಪಡೆಯುತ್ತಾನೆ. ಹಾಗೆ ಸಂಪಾದಿಸಿದ ಹಣದಿಂದ ಕೆಲವು ಪುಣ್ಯಕೆಲಸಗಳನ್ನೂ ಅವನು ಮಾಡಬಹುದು. ಅವನು ದುರ್ಮಾರ್ಗದಲ್ಲಿ ಸಂಪಾದನೆ ಮಾಡಿದ ಹಣಕ್ಕೆ ಬೆಲೆಯಿಲ್ಲದಿಲ್ಲ. ಅಥವಾ ದುರ್ಮಾರ್ಗಿಯಾದ ಅವನನ್ನು ದೈವವೂ ಯಾವ ವಿಧದಲ್ಲಿಯೂ ಶಿಕ್ಷಿಸಹೋಗುವುದಿಲ್ಲ. (ಪ್ರತ್ಯಕ್ಷವಾಗಿ ಕಾಣುತ್ತಿರುವಂತೆ) ಅವನು ದುರ್ಮಾರ್ಗದಲ್ಲಿ ಸಂಪಾದನೆ ಮಾಡುತ್ತಿರುವನೆಂದು–ಹಾಗೆ ಸಂಪಾದನೆಮಾಡಲು ಅಶಕ್ತರಾದವರು, ಹೇಡಿಗಳಾದವರು ಹೇಳಿಕೊಂಡು ಕುಳಿತಿರಬಹುದೇ ಹೊರತು ಅವನ ಸಂಪಾದನೆಗಾಗಲೀ ಮತ್ತು ಅವನು ಅನುಭವಿಸುವ ಸುಖಲೋಲುಪತೆಗಾಗಲೀ ಯಾವ ಅಡ್ಡಿ-ಆತಂಕಗಳೂ ಬರುವುದಿಲ್ಲ. ದುರ್ಮಾರ್ಗಿಯೂ ಅನೇಕವಿಧವಾದ ಪೂಜೆ-ಪುನಸ್ಕಾರಗಳು, ದಾನ-ಧರ್ಮಗಳು ಮುಂತಾದುವನ್ನು ಮಾಡುತ್ತಲೇ ಇರುತ್ತಾನೆ. (ಮಾಡದಿದ್ದರೂ ಬಾಧಕಗಳೇನೂ ಕಾಣುವುದಿಲ್ಲ.) ಅಂತಹ ಸಂದರ್ಭದಲ್ಲಿ ದೈವದ ಪ್ರವರ್ತನೆಯು ಹೇಗೆ?

ಮತ್ತೊಬ್ಬನು ಧರ್ಮವನ್ನೇ ಬಲವಾಗಿ ಹಿಡಿದಿರುತ್ತಾನೆ. ಈ ಕಾರಣದಿಂದ ಅನೇಕಕಷ್ಟಗಳಿಗೆ ಗುರಿಯಾಗುತ್ತಾನೆ. ದ್ರವ್ಯಸಂಪಾದನೆ, ಸುಖೋಪಭೋಗ–ಎಲ್ಲವನ್ನೂ ಅವನು ಧರ್ಮದೃಷ್ಟಿಯಿಂದಲೇ ನೋಡುತ್ತಾನೆ. ಅಧರ್ಮಮಾರ್ಗದಿಂದ ಲಕ್ಷೋಪಲಕ್ಷ ದ್ರವ್ಯವು ಸಿಕ್ಕುವುದಾದರೂ ಅದು ಅವನಿಗೆ ಬೇಡವಾಗುತ್ತದೆ. ದ್ರವ್ಯವು ಅತ್ಯಾವಶ್ಯಕವಾಗಿ ಬೇಕಾಗಿರುವ ಸಂದರ್ಭದಲ್ಲಿಯೂ ಅಧರ್ಮವೆನಿಸಿದ ರೀತಿಯಿಂದ ಹಣವು ಬರುವುದಾದರೆ ಅದನ್ನು ತಿರಸ್ಕರಿಸುತ್ತಾನೆ. ಧರ್ಮ ; ಧರ್ಮ ; ಧರ್ಮ' ಎಂದು

ಹೇಳಿಕೊಂಡು, ಸಾಯುವವರೆಗೂ ತಾನೂ ಕಷ್ಟಪಡುತ್ತಾ ತನ್ನ ಸಂಸಾರ ವನ್ನೂ ಕಷ್ಟಪಡಿಸುತ್ತಾ ಸತ್ತುಹೋಗುತ್ತಾರೆ. ಇಲ್ಲಿ ದೈವದ ಪ್ರವರ್ತನೆಯು ಹೇಗೆ? ಭಸ್ಮವಾಗಿ ಪಂಚಭೂತಗಳಲ್ಲಿ ಸೇರಿಹೋಗುವ ಈ ದೇಹಕ್ಕೆ ಪುನರಾ ಗಮನವಿಲ್ಲ. ಆದುದರಿಂದ ಸರ್ವಪ್ರಯತ್ನದಿಂದಲೂ ಧರ್ಮಾಧರ್ಮಗಳನ್ನು ಮನಸ್ಸಿಗೂ ತಂದುಕೊಳ್ಳದೇ ಹಣವನ್ನು ಸಂಪಾದಿಸಿ ಪ್ರಾಪಂಚಿಕಸುಖವನ್ನು ಸರ್ವಪ್ರಕಾರದಿಂದಲೂ ಪಡೆಯುವುದೇ ಒಳ್ಳೆಯದು ಎಂಬ ವಿಧಾನವು ಸರಿಯೇ?

ಮನುಷ್ಯನು ಪಶುಮಾತ್ರನಲ್ಲ. ಕೇವಲ ಆಹಾರ-ನಿದ್ರಾ-ಮೈಥುನಗಳೇ ಅವನ ಗುರಿಯಲ್ಲ. ಅವನು ಜನ್ಮ-ಜನ್ಮಕ್ಕೂ ಸಂಸ್ಕೃತನಾಗಬೇಕು. ಧರ್ಮ ಮಾರ್ಗಪ್ರವೃತ್ತನಾಗಬೇಕು. ಪ್ರಾಪಂಚಿಕವಾದ ಐಶ್ವರ್ಯವೂ–ಪ್ರಾಪಂಚಿಕ ಸುಖವೂ ಕ್ಷಣಿಕವಾದುದು. ಅದರಲ್ಲಿ ಶಾಶ್ವತವಾದ ಆನಂದವು ಸಿಕ್ಕುವು ದಿಲ್ಲ. ಮಾನವನು ಶಾಶ್ವತವಾದ ಆನಂದವು ಸಿಕ್ಕುವ ಹಾದಿಯನ್ನು ಹಿಡಿಯ ಬೇಕು. ಹೀಗೆಂದು ನಿಶ್ಚಯಿಸಿ ಕಷ್ಟ-ಕಾರ್ಪಣ್ಯಗಳನ್ನು ಅನುಭವಿಸುವುದು ಸರಿಯೇ?

ದುರ್ಯೋಧನಾದಿಗಳು ಪಗಡೆಯಾಟದಲ್ಲಿ ಪಾಂಡವರಿಗೆ ಮೋಸ ಮಾಡಿ ರಾಜ್ಯವನ್ನು ಗೆದ್ದರು. ದ್ರೌಪದಿಗೆ ಅವಮಾನಮಾಡಿದರು. ಎಲ್ಲರನ್ನೂ ಕಾಡಿಗಟ್ಟಿದರು. ಅವರು ಮಾಡಿದ್ದು ಅಧರ್ಮ. ಅದನ್ನು ಯಾರೂ ಇಲ್ಲ ವೆನ್ನುವುದಿಲ್ಲ. ಆದರೆ ಅತುಲೈಶ್ವರ್ಯಯುಕ್ತವಾದ ರಾಜ್ಯವು ಅವರಿಗೇ ಲಭಿಸಿತು. ನಿರುಪದ್ರವರಾಗಿ ಸಕಲವಿಧವಾದ ಸುಖೋಪಭೋಗಗಳನ್ನೂ ಅವರು ಅನುಭವಿಸುತ್ತಿದ್ದಾರೆ.

ಪಾಂಡವರು ಧರ್ಮಕ್ಕೆ ಕಟ್ಟುಬಿದ್ದು ಕಾಡಿಗೆ ಹೊರಟರು. ಕಾಡಿನಲ್ಲಿ ಪಡಬಾರದ ಕಷ್ಟಗಳನ್ನು ಅನುಭವಿಸುತ್ತಿದ್ದಾರೆ. ಎಂದರೆ ಸನ್ಮಾರ್ಗಿಗಳಿಗೆ ಅಪಾರಕಷ್ಟವೂ, ಅಪಮಾರ್ಗಿಗಳಿಗೆ ಸುಖವೂ ಎಂಬುದು ಇದರಿಂದ ಸ್ಪಷ್ಟ ವಾಯಿತಲ್ಲವೇ? ಇಲ್ಲಿ ದೈವದ ಪ್ರತಿಕ್ರಿಯೆಯು ಏನಿದೆ? ಈ ವಿಷಯವನ್ನೇ ಧರ್ಮರಾಜನು ಮಾರ್ಕಂಡೇಯರನ್ನು ಕೇಳುತ್ತಾನೆ)

**ದೇಹೀ ಚ ದೇಹಂ ಸಂತ್ಯಜ್ಯ ಮೃಗ್ಯಮಾಣಃ ಶುಭಾಶುಭೈಃ ।**
**ಕಥಂ ಸಂಯುಜ್ಯತೇ ಪ್ರೇತ್ಯ ಇಹ ವಾ ದ್ವಿಜಸತ್ತಮ ॥೫೯॥**

**ಐಹಲೌಕಿಕಮೇವೇಹ ಉತಾಹೋ ಪಾರಲೌಕಿಕಮ್ ।**
**ಕ್ವ ಚ ಕರ್ಮಾಣಿ ತಿಷ್ಠನ್ತಿ ಜನ್ತೋಃ ಪ್ರೇತಸ್ಯ ಭಾರ್ಗವ ॥೬೦॥**

ದೇಹಪರಿತ್ಯಾಗಮಾಡಿದನಂತರ ಶುಭಾಶುಭಕರ್ಮಗಳು ಪ್ರೇತವನ್ನು ಅನುಸರಿಸಿ ಪರಲೋಕಕ್ಕಾಗಲೀ ಅಥವಾ ಅವನು ಪಡೆಯುವ ಮತ್ತೊಂದು ಜನ್ಮಕ್ಕಾಗಲೀ ಹೋಗುವ ಸಾಧ್ಯತೆಯು ಹೇಗೆ? ಶುಭಾಶುಭಕರ್ಮಗಳು ಯಾವ ರೀತಿಯಲ್ಲಿ ಯಾವ ರೂಪದಲ್ಲಿ ಅವನನ್ನು ಅನುಸರಿಸಿ ಹೋಗುವುವು? ದೇಹತ್ಯಾಗಮಾಡಿದ ಮೇಲೆ ಮಾನವನ ಅಥವಾ ಜೀವಿಯ ಸ್ವರೂಪವೇನು? ನಾವೀಗ ಅನುಭವಿಸುವ ಶುಭಾಶುಭಫಲಗಳು ಈ ಜನ್ಮದ ಕರ್ಮಫಲಗಳೇ? ಅಥವಾ ಹಿಂದಿನ ಜನ್ಮದ ಕರ್ಮಫಲಗಳೇ? ಅಥವಾ ಇಂದಿನ ನಮ್ಮ ಕರ್ಮಫಲಗಳು ಮುಂದಿನ ಜನ್ಮಗಳಲ್ಲಿ ಅಥವಾ ಲೋಕಾಂತರಗಳಲ್ಲಿ ಫಲಕೊಡುವುವೇ? ಪ್ರಾಣತ್ಯಾಗಮಾಡಿದ ನಂತರ ಪ್ರೇತವು ದೇಹಾಂತರವನ್ನು ಪಡೆಯುವವರೆಗೆ ಈ ಶುಭಾಶುಭಕರ್ಮಗಳು ಎಲ್ಲಿ ಅಡಗಿರುವುವು?–ಈ ಎಲ್ಲ ರಹಸ್ಯ ವಿಷಯಗಳನ್ನೂ ತಿಳಿಯಹೇಳಿರಿ."

ಧರ್ಮರಾಜನ ಪ್ರಶ್ನೆಗಳನ್ನು ಕೇಳಿ ನಸುನಗುತ್ತಾ ಮಾರ್ಕಂಡೇಯರು ಹೇಳಿದರು :

**ತ್ವದ್ಯುಕ್ತೋಽಯಮನುಪ್ರಶ್ನೋ ಯಥಾವದ್ವದತಾಂ ವರ ।**
**ವಿದಿತಂ ವೇದಿತವ್ಯಂ ತೇ ಸ್ಥಿತ್ಯರ್ಥಂ ತ್ವಂ ತು ಪೃಚ್ಛಸಿ ॥೬೧॥**

**ಅತ್ರ ತೇ ಕಥಯಿಷ್ಯಾಮಿ ತದಿಹೈಕಮನಾಃ ಶೃಣು ।**
**ಯಥೇಹಾಮುತ್ರ ಚ ನರಃ ಸುಖದುಃಖಮುಪಾಶ್ನುತೇ ॥೬೨॥**

"ವಾಗ್ಮಿಗಳಲ್ಲಿ ಶ್ರೇಷ್ಠನೇ! ನಿನ್ನ ಸ್ವಭಾವಕ್ಕೆ, ನಿನಗಿರುವ ಉನ್ನತ ಮಟ್ಟದ ಬುದ್ಧಿಗೆ ಅನುಸಾರವಾಗಿಯೇ ನೀನು ಈ ಪ್ರಶ್ನೆಗಳನ್ನು ಕೇಳಿರುವೆ. ನೀನು ಕೇಳಬೇಕಾಗಿರುವ ಪ್ರಶ್ನೆಯೂ ಅದೇ ಆಗಿರುವುದು. ನೀನು ಕೇಳಿರುವ ಪ್ರಶ್ನೆಗಳಿಗೆ ಉತ್ತರವೂ ನಿನಗೆ ತಿಳಿಯದಿಲ್ಲ. ರಹಸ್ಯಗಳೆಲ್ಲವೂ

ಸಂಪೂರ್ಣವಾಗಿ ತಿಳಿದಿವೆ. ಆದರೂ ಲೋಕಮರ್ಯಾದಾರಕ್ಷಣಾರ್ಥವಾಗಿ ಅಥವಾ ಪ್ರಪಂಚದ ಬೋಧೆಗಾಗಿ ನೀನು ಈ ಪ್ರಶ್ನೆಗಳನ್ನು ಕೇಳಿರುವೆ. ನೀನು ಕೇಳಿರುವ ಎಲ್ಲ ಪ್ರಶ್ನೆಗಳಿಗೂ ಉತ್ತರಕೊಡುತ್ತೇನೆ. ಮನುಷ್ಯನು ತನ್ನ ಕರ್ಮಾನುಸಾರವಾಗಿ ಈ ಲೋಕದಲ್ಲಿ ಅನುಭವಿಸುವ ಶುಭಾಶುಭಫಲಗಳ ರೂಪವಾದ ಸುಖ-ದುಃಖಗಳನ್ನೂ, ಪರಲೋಕದಲ್ಲಿ ಮತ್ತು ಜನ್ಮಾಂತರಗಳಲ್ಲಿ ಅನುಭವಿಸಬೇಕಾಗಿರುವ ಸುಖ-ದುಃಖಗಳನ್ನೂ ವಿವರವಾಗಿ ಹೇಳುತ್ತೇನೆ. ಏಕಾಗ್ರಚಿತ್ತನಾಗಿ ಕೇಳು.

**ನಿರ್ಮಲಾನಿ ಶರೀರಾಣಿ ವಿಶುದ್ಧಾನಿ ಶರೀರಿಣಾಮ್ ।**
**ಸಸರ್ಜ ಧರ್ಮತನ್ತ್ರಾಣಿ ಪೂರ್ವೋತ್ಪನ್ನಃ ಪ್ರಜಾಪತಿಃ ॥೬೩॥**

ಸರ್ವಪ್ರಥಮನಾದ ಪ್ರಜಾಪತಿಬ್ರಹ್ಮನು ಆದಿಯಲ್ಲಿ ನಿರ್ಮಲನಾದ, ವಿಶುದ್ಧವಾದ ಮತ್ತು ಧರ್ಮಮಾರ್ಗಕ್ಕೆ ಹೊಂದಿಕೊಳ್ಳುವ ಜೀವರಾಶಿ ಯನ್ನು ಸೃಷ್ಟಿಸಿದನು.

**ಅಮೋಘಫಲಸಂಕಲ್ಪಾಃ ಸುವ್ರತಾಃ ಸತ್ಯವಾದಿನಃ ।**
**ಬ್ರಹ್ಮಭೂತಾ ನರಾಃ ಪುಣ್ಯಾಃ ಪುರಾಣಾಃ ಕುರುಸತ್ತಮ ॥೬೪॥**

ಕುರುಸತ್ತಮನೇ! ಆದುದರಿಂದಲೇ ನಮ್ಮ ಮೂಲಪುರುಷರು ಸಂಕಲ್ಪ ಮಾತ್ರದಿಂದಲೇ ಫಲಸಿದ್ಧಿಯುಳ್ಳವರಾಗಿಯೂ, ಸುವ್ರತರಾಗಿಯೂ, ಸತ್ಯ ವಾದಿಗಳಾಗಿಯೂ, ನಿತ್ಯತೃಪ್ತರಾಗಿಯೂ, ಸದಾ ಬ್ರಹ್ಮಧ್ಯಾನದಲ್ಲಿಯೇ ನಿರತ ರಾಗಿಯೂ, ಬ್ರಹ್ಮಭೂತರಾಗಿಯೂ, ಬಹುಪುಣ್ಯಶಾಲಿಗಳಾಗಿಯೂ ಇದ್ದರು. ಅವರು ಮರ್ತ್ಯಲೋಕದಲ್ಲಿ ಹುಟ್ಟಿದ ಮಾತ್ರದಿಂದ ಮರ್ತ್ಯರು ಅಥವಾ ಮಾನವರು ಎಂದು ಕರೆಯಲ್ಪಡುತ್ತಿದ್ದರೇ ಹೊರತು ಅವರಿಗೂ ದೇವತೆ ಗಳಿಗೂ ಸ್ವಲ್ಪವಾದರೂ ತಾರತಮ್ಯಮೇ ಇರಲಿಲ್ಲ.

**ಸರ್ವೇ ದೇವೈಃ ಸಮಾಯಾನ್ತಿ ಸ್ವಚ್ಛನ್ದೇನ ನಭಸ್ತಲಮ್ ।**
**ತತಶ್ಚ ಪುನರಾಯಾನ್ತಿ ಸರ್ವೇ ಸ್ವಚ್ಛನ್ದಚಾರಿಣಃ ॥೬೫॥**

ಆಗಿನ ಕಾಲದಲ್ಲಿ ಎಲ್ಲರೂ ದೇವತೆಗಳೊಡನೆಯೂ ಸಂಪರ್ಕವನ್ನು ಹೊಂದಿದ್ದರು ಇಚ್ಛೆಬಂದಾಗ ಸಶರೀರರಾಗಿಯೇ ಲೋಕಾಂತರಗಳಿಗೂ ಹೋಗಿ ಬರುತ್ತಿದ್ದರು. ಅವರಿಗೆ ಎಲ್ಲಿಗೆ ಹೋಗಲೂ ತಡೆಯೇ ಇರಲಿಲ್ಲ.

**ಸ್ವಚ್ಛಂದ ಮರಣಾಶ್ಚಾಸನ್ನರಾಃ ಸ್ವಚ್ಛಂದಚಾರಿಣಃ ।**
**ಅಲ್ಪಬಾಧಾ ನಿರಾತಙ್ಕಾಃ ಸಿದ್ಧಾರ್ಥಾ ನಿರುಪದ್ರವಾಃ ॥೬೬॥**

ಅವರು ಇಚ್ಛಾಮರಣಿಗಳಾಗಿದ್ದರು. ಅವರಿಗೆ ಯಾವ ವಿಧವಾದ ಬಾಧೆಗಳಾಗಲೀ, ಆತಂಕಗಳಾಗಲೀ ಇರುತ್ತಿರಲಿಲ್ಲ. ಉಪದ್ರವರಹಿತರಾಗಿದ್ದರು. ಸಂಕಲ್ಪಮಾತ್ರದಿಂದಲೇ ಸಕಲವಿಧವಾದ ಕಾಮನಾವಸ್ತುಗಳನ್ನೂ ಪಡೆಯಲು ಸಮರ್ಥರಾಗಿದ್ದರೂ–ಅವರು ಯಾವ ವಿಧವಾದ ಕಾಮನಾವಸ್ತುಗಳನ್ನೂ ಅಪೇಕ್ಷಿಸದೇ ಸದಾ ಬ್ರಹ್ಮಸಮಾಧಿಯಲ್ಲಿಯೇ ಇರುತ್ತಿದ್ದರು. ಆ ಬ್ರಹ್ಮಾನಂದದ ಮುಂದೆ ಕಾಮನಾವಸ್ತುಗಳಿಂದ ಪಡೆಯಬಹುದಾದ ಆನಂದವು ಆ ಕಾಲದ ಜನರಿಗೆ ತೃಣಪ್ರಾಯವಾಗಿದ್ದಿತು. ಅವರಿಗೆ ಯಾವ ವಿಧವಾದ ಭಯವೂ ಇರಲಿಲ್ಲ.

**ದ್ರಷ್ಟಾರೋ ದೇವಸಙ್ಘಾನಾಮೃಷೀಣಾಂ ಚ ಮಹಾತ್ಮನಾಮ್ ।**
**ಪ್ರತ್ಯಕ್ಷಾಃ ಸರ್ವಧರ್ಮಾಣಾಂ ದಾನ್ತಾ ವಿಗತಮತ್ಸರಾಃ ।**
**ಆಸನ್ವರ್ಷಸಹಸ್ರೀಯಾಸ್ತಥಾ ಪುತ್ರಸಹಸ್ರಿಣಃ ॥೬೭॥**

ದೇವಸಭೆಗಳಿಗೂ, ಋಷಿ-ಮಹರ್ಷಿಗಳ ಸನ್ನಿಧಿಗೂ ಮತ್ತು ಮಹಾತ್ಮರ ಸನ್ನಿಧಿಗೂ ಪದೇ ಪದೇ ಹೋಗಿಬರುತ್ತಿದ್ದರು. ಸರ್ವಧರ್ಮಗಳೂ ಅವರಿಗೆ ಪ್ರತ್ಯಕ್ಷವಾಗಿದ್ದುವು. ಯಾವ ಗ್ರಂಥಗಳನ್ನೂ ನೋಡುವ ಆವಶ್ಯಕತೆಯಿರಲಿಲ್ಲ. ಅಥವಾ ಆಗಿನ ಕಾಲದಲ್ಲಿ ಧರ್ಮಗಳು ಗ್ರಂಥರೂಪಕ್ಕೆ ಬಂದಿರಲಿಲ್ಲ. ಎಲ್ಲ ಧರ್ಮಗಳೂ ಅವರ ಸ್ಮೃತಿಯಲ್ಲಿಯೇ ಅಡಗಿದ್ದುವು. ಅವರು ಜಿತೇಂದ್ರಿಯರಾಗಿಯೂ, ಅಸೂಯಾರಹಿತರಾಗಿಯೂ ಇದ್ದರು. ಅವರು ಸ್ವೇಚ್ಛಾಮರಣಿಗಳಾಗಿದ್ದುದರಿಂದ ಸಹಸ್ರವರ್ಷಪರ್ಯಂತವೂ ಈ ಭೂಮಿಯಲ್ಲಿ ಜೀವಿಸುತ್ತಿದ್ದರು ಮತ್ತು ಒಬ್ಬೊಬ್ಬರಿಗೂ ಸಾವಿರಾರು ಮಕ್ಕಳಿರುತ್ತಿದ್ದರು.

**ತತಃ ಕಾಲಾನ್ತರೇಽನ್ಯಸ್ಮಿನ್ಪೃಥಿವೀತಲಚಾರಿಣಃ ॥೬೮॥**

**ಕಾಮಕ್ರೋಧಾಭಿಭೂತಾಸ್ತೇ ಮಾಯಾವ್ಯಾಜೋಪಜೀವಿನಃ ।**
**ಲೋಭಮೋಹಾಭಿಭೂತಾಶ್ಚ ತ್ಯಕ್ತಾ ದೇಹೈಸ್ತತೋ ನರಾಃ ॥೬೯॥**

ಅನೇಕಸಹಸ್ರವರ್ಷಗಳು ಕಳೆದನಂತರ ಮುಂದಿನ ಪೀಳಿಗೆಗಳಲ್ಲಿ ಧರ್ಮಕ್ಕೆ ಮಾಲಿನ್ಯವುಂಟಾಗಲು ಪ್ರಾರಂಭವಾಯಿತು. ಲೋಕಾಂತರಗಳಿಗೆ

ಇಚ್ಛೆಬಂದಾಗ ಸಶರೀರವಾಗಿಯೇ ಹೋಗುತ್ತಿದ್ದರು ಧರ್ಮಕ್ಕೆ ಗ್ಲಾನಿಯುಂಟಾದೊಡನೆಯೇ ಭೂಮಿಯಲ್ಲಿ ಮಾತ್ರವೇ ಸಂಚಾರಸಮರ್ಥರಾದರು. ಬ್ರಹ್ಮಜ್ಞಾನವೂ ಶಿಥಿಲವಾಗುತ್ತಾ ಬಂದಿತು. ಬ್ರಹ್ಮಾನಂದದ ಸುಖವನ್ನು ಮರೆತ ಅವರು ಸ್ವಕಾರ್ಯದಿಂದುಂಟಾಗುವ ಕಾಮನಾವಸ್ತುಗಳಿಂದಲೇ ಸುಖವನ್ನು ಅನುಭವಿಸಲು ಪ್ರಾರಂಭಿಸಿದರು. ಕಾಮದ ಜೊತೆಯಲ್ಲಿಯೇ ಕ್ರೋಧವೂ ಅವರನ್ನು ಆಕ್ರಮಿಸಿತು. ಧಾರ್ಮಿಕಮಾರ್ಗವು ಮಸುಕಾಗಿ ಡಂಭಾಚಾರವು ಪ್ರಾರಂಭವಾಯಿತು. ಆಶೆಯ ದಾಸರಾದರು. ಲೋಭ-ಮೋಹವಶರಾದರು. ಭಯವು ಅವರನ್ನು ಆವರಿಸಿತು. ಇಚ್ಛಾಮರಣಶಕ್ತಿಯೂ ಹೊರಟು ಹೋಯಿತು. ರೋಗಪೀಡಿತರಾಗತೊಡಗಿದರು. ಅನೇಕಪಾಪಕರ್ಮಗಳನ್ನು ಮಾಡಿ ಪ್ರಾಣತೊರೆಯುತ್ತಿದ್ದ ಅವರು ನರಕಕ್ಕೆ ಹೋಗುತ್ತಿದ್ದರು.

**ಅಶುಭೈಃ ಕರ್ಮಭಿಃ ಪಾಪಾಸ್ತಿರ್ಯಙ್ನಿರಯಗಾಮಿನಃ ।**
**ಸಂಸಾರೇಷು ವಿಚಿತ್ರೇಷು ಪಚ್ಯಮಾನಾಃ ಪುನಃ ಪುನಃ ॥೭೦॥**

ಅವರು ಮಾಡಿದ ಪಾಪಕರ್ಮಗಳು ಪಶು-ಪಕ್ಷ್ಯಾದಿ ತಿರ್ಯಗ್ಯೋನಿಗಳಲ್ಲಿ ಹುಟ್ಟುವಂತೆ ಮಾಡಿ ನರಕಕ್ಕೂ ಕೊಂಡೊಯ್ಯುತ್ತಿದ್ದುವು. ಅವರು ತಮಗಿದ್ದ ಸ್ವಾತಂತ್ರ್ಯವನ್ನು ಸಂಪೂರ್ಣವಾಗಿ ಕಳೆದುಕೊಂಡು ಶುಭಾಶುಭ ಕರ್ಮಫಲಗಳ ಅಧೀನರಾಗಿ ಹೋದರು. ಆ ಕರ್ಮಫಲಗಳು ಅವರನ್ನು ನರಕದಲ್ಲಿಯೂ ಹೆಚ್ಚುಕಾಲ ಬಿಡುತ್ತಿರಲಿಲ್ಲ. ಕರ್ಮಫಲಗಳು ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯಗಳಿಂದ ಸಂವರ್ಧಿತವಾಗಿ ಪುನಃ ಪುನಃ ವಿಚಿತ್ರವಾದ ನಾನಾಯೋನಿಗಳಲ್ಲಿ ಹುಟ್ಟುವಂತೆ ಮಾಡಿ ದುಃಖದಿಂದ ಸಂತಪ್ತರನ್ನಾಗಿ ಮಾಡಿಬಿಡುತ್ತಿದ್ದುವು.

**ಮೋಘೇಷ್ಟಾ ಮೋಘಸಂಕಲ್ಪಾ ಮೋಘಜ್ಞಾನಾ ವಿಚೇತಸಃ ।**
**ಸರ್ವಾಭಿಶಙ್ಕೇನಶ್ಚೈವ ಸಂವೃತ್ತಾಃ ಕ್ಲೇಶದಾಯಿನಃ ॥೭೧॥**

ಅವರ ಇಷ್ಟಗಳೊಂದೂ ನೆರವೇರುತ್ತಿರಲಿಲ್ಲ. ಸಂಕಲ್ಪಗಳೊಂದೂ ಕಾರ್ಯರೂಪಕ್ಕೆ ಬರುತ್ತಿರಲಿಲ್ಲ. ಅವರ ಜ್ಞಾನವೂ ಪ್ರಾಪಂಚಿಕಸುಖಪ್ರಾಪ್ತಿಯ ಸಾಧನೆಯಲ್ಲಿಯೇ ಸೀಮಿತವಾಗಿದ್ದಿತು. ಅವರಿಗೆ ಏಕಾಗ್ರತೆಯೆಂಬುದೇ ಇರಲಿಲ್ಲ. ಅವರು ಮನಸ್ಸಿನ ಪ್ರೇರಣೆಯಂತೆ ಕಾರ್ಯಮಾಡು

ತ್ತಿದ್ದರೇ ಹೊರತು ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡು ಅಥವಾ ಬುದ್ಧಿಯನ್ನು ಹತೋಟಿಯಲ್ಲಿಟ್ಟುಕೊಂಡು ಕಾರ್ಯಮಾಡುವ ಸ್ವಭಾವದವರಾಗಿರಲಿಲ್ಲ. ಎಲ್ಲ ವಿಷಯಗಳಲ್ಲಿಯೂ ಅವರಿಗೆ ಸಂಶಯವುಂಟಾಗುತ್ತಿದ್ದಿತು. ಎಲ್ಲರನ್ನೂ ಶಂಕಿಸುತ್ತಿದ್ದರು. ಯಾರನ್ನು ಕಂಡರೂ ಭಯಪಡುತ್ತಿದ್ದರು. ಇತರ ರಿಗೆ ತ್ರಾಸಕೊಡಲು ಸರ್ವದಾ ನಿರತರಾಗಿರುತ್ತಿದ್ದರು.

**ಅಶುಭೈಃ ಕರ್ಮಭಿಶ್ಚಾಪಿ ಪ್ರಾಯಶಃ ಪರಿಚಿಹ್ನಿತಾಃ ।**
**ದೌಷ್ಕುಲ್ಯಾ ವ್ಯಾಧಿಬಹುಲಾ ದುರಾತ್ಮಾನೋಽಪ್ರತಾಪಿನಃ ॥೭೨॥**

ಸರ್ವದಾ ಅಶುಭಕರ್ಮಗಳನ್ನೇ ಮಾಡುತ್ತಲಿದ್ದ ಅವರು ಜನ್ಮಾಂತರಗಳಲ್ಲಿ ನೀಚಜಾತಿಗಳಲ್ಲಿ ಪುನಃ ಪುನಃ ಹುಟ್ಟಿ ಅನೇಕವಿಧವಾದ ರೋಗ-ರುಜಿನಗಳನ್ನು ಅನುಭವಿಸತೊಡಗಿದರು. ಪರಹಿಂಸೆಯಿಂದಲೇ ಅವರ ಜೀವನವು ಸಾಗುತ್ತಿತ್ತು.

**ಭವನ್ತ್ಯಲ್ಪಾಯುಷಃ ಪಾಪಾ ರೌದ್ರಕರ್ಮಫಲೋದಯಾಃ ।**
**ನಾಥನ್ತಃ ಸರ್ವಕಾಮಾನಾಂ ನಾಸ್ತಿಕಾ ಭಿನ್ನಚೇತಸಃ ॥೭೩॥**

ದುರಾತ್ಮರಾದ ಅವರು ತಮ್ಮ ರೌದ್ರಕರ್ಮಗಳ ಫಲವಾಗಿ ಅಲ್ಪಾಯುಗಳಾಗಿ ಹುಟ್ಟಿದರು. ಇಷ್ಟೆಲ್ಲಾ ದುಷ್ಕರ್ಮಗಳನ್ನು ಮಾಡಿ ಹುಟ್ಟಿದ ಅವರ ಆಸೆಗೆ ಮಿತಿಯೆಂಬುದೇ ಇರಲಿಲ್ಲ. ಆಶಾಪೂರಣಕ್ಕಾಗಿ ದೈವ-ಧರ್ಮಗಳೆರಡನ್ನೂ ಬದಿಗೊತ್ತಿ ನಾಸ್ತಿಕರಾದರು. ಅವರಿಗೆ ಯಾವ ವಿಧವಾದ ಸ್ಥಿರ ಬುದ್ಧಿಯೂ ಇರಲಿಲ್ಲ.

**ಜನ್ತೋಃ ಪ್ರೇತಸ್ಯ ಕೌನ್ತೇಯ ಗತಿಃ ಸ್ವೈರಿಹ ಕರ್ಮಭಿಃ ।**
**ಪ್ರಾಜ್ಞಸ್ಯ ದೀನಬುದ್ಧೇಶ್ಚ ಕರ್ಮಕೋಶಃ ಕ್ವ ತಿಷ್ಠತಿ ॥೭೪॥**

**ಕ್ವಸ್ಥಸ್ತತ್ಸಮುಪಾಶ್ನಾತಿ ಸುಕೃತಂ ಯದಿ ವೇತರತ್ ।**
**ಇತಿ ತೇ ದರ್ಶನಂ ಯಚ್ಚ ತತ್ರಾಪ್ಯನುನಯಂ ಶೃಣು ॥೭೫॥**

ಪ್ರಪಂಚವು ಹುಟ್ಟಿದಂದಿನಿಂದಲೂ ಇಷ್ಟೊಂದು ಮಾರ್ಪಾಡುಗಳಾಗಿವೆ. ಧರ್ಮಜ! ಆದುದರಿಂದ ಸಾಮಾನ್ಯವಾಗಿ ಹೀಗೆ ಹೇಳಬಹುದಾಗಿದೆ : ಶರೀರವನ್ನು ತ್ಯಜಿಸಿದ ಪ್ರೇತವನ್ನು ಒಡನೆಯೇ ಆ ಜನ್ಮದಲ್ಲಿ ಅವನು

ಮಾಡಿದ ಶುಭಾಶುಭಕರ್ಮಗಳು ಹಿಂಬಾಲಿಸುವುವು. ಪ್ರಾಜ್ಞನಾಗಲೀ, ಬುದ್ಧಿಹೀನನಾಗಲೀ–ಅವಸಾನಹೊಂದಿದನಂತರ ಅವನು ಮಾಡಿದ ಕರ್ಮ ಫಲಗಳು ಎಲ್ಲಿರುವುವು? ಅವನು ಮಾಡಿದ ಸುಕೃತ-ದಷ್ಕೃತಗಳ ಫಲಗಳು ಎಲ್ಲಿದ್ದು ಅವನನ್ನು ಜನ್ಮಾಂತರದಲ್ಲಿ ಹಿಂಬಾಲಿಸುವುವು?–ಇವೇ ಮುಂತಾಗಿ ನೀನು ಕೇಳಿದೆಯಲ್ಲವೇ? ಇದರ ಸಿದ್ಧಾಂತವೇನೆಂಬುದನ್ನೂ ಹೇಳುವೆನು ಕೇಳು, ಧರ್ಮಪುತ್ರ!

**ಅಯಮಾದಿಶರೀರೇಣ ದೇವಸೃಷ್ಟೇನ ಮಾನವಃ ।**
**ಶುಭಾನಾಮಶುಭಾನಾಂ ಚ ಕುರುತೇ ಸಂಚಯಂ ಮಹತ್ ॥೭೬॥**

**ಆಯುಷೋಽನ್ತೇ ಪ್ರಹಾಯೇದಂ ಕ್ಷೀಣಪ್ರಾಯಂ ಕಲೇವರಮ್ ।**
**ಸಮ್ಭವತ್ಯೇವ ಯುಗಪದ್ಯೋನೌ ನಾಸ್ತ್ಯನ್ತರಾಭವಃ ॥೭೭॥**

ದೈವಸೃಷ್ಟವಾದ ಈ ಶರೀರದಿಂದಲೇ ಮಾನವನ ಶುಭಾಶುಭಕರ್ಮ ಫಲಗಳನ್ನು ಸಂಚಯನಮಾಡುತ್ತಾ ಬರುತ್ತಾನೆ. ದೇಹಾವಸಾನವಾದ ನಂತರ ಜೀವವು ಈ ದೇಹದಿಂದ ಆರ್ಜಿಸಿದ ಪಾಪ-ಪುಣ್ಯಗಳನ್ನು ಹೊತ್ತು ಸೂಕ್ಷ್ಮಶರೀರದಿಂದ ಪಾಪ-ಪುಣ್ಯಗಳಿಗೆ ಅನುಗುಣವಾದ ಮತ್ತೊಂದು ಶರೀರಕ್ಕೆ ಒಡನೆಯೇ ಹೋಗಿ ಸೇರಿಕೊಳ್ಳುವುದು. ಒಂದು ಮುಹೂರ್ತ ಮಾತ್ರವಾದರೂ ಆ ಸೂಕ್ಷ್ಮಶರೀರವು ಪ್ರತ್ಯೇಕವಾಗಿರಲಾರದು. ಜೀವನಿಗೆ ಸ್ಥೂಲಶರೀರ, ಸೂಕ್ಷ್ಮಶರೀರ ಮತ್ತು ಕಾರಣಶರೀರಗಳೆಂಬ ಮೂರು ವಿಧ ವಾದ ಶರೀರಗಳಿವೆ. ಸ್ಥೂಲಶರೀರವು ಪಂಚಭೂತಗಳ ಇಪ್ಪತ್ತೈದು ತತ್ತ್ವ ಗಳಿಂದ ಆಗಿರುತ್ತದೆ. ಇದೇ ನಾವು ಮಾಡಿದ ಪುಣ್ಯ-ಪಾಪಗಳ ಫಲಭೋಗ ಸ್ಥಾನ. ಇದು ಇಂದ್ರಿಯಗೋಚರವಾದದು. ರೇತಸ್ಸು-ರಕ್ತ-ಮಾಂಸ-ಮಜ್ಜಾ-ಮೇದಸ್ಸು-ಅಸ್ಥಿ-ಚರ್ಮ–ಈ ಸಪ್ತಧಾತುಗಳಿಂದಲೂ, ಜನ್ಮ-ವೃದ್ಧಿ-ಸ್ಥಿರತೆ-ವಿಪರಿಣಾಮ-ಕ್ಷೀಣ-ವಿನಾಶಗಳೆಂಬ ಆರು ವಿಕಾರಗಳಿಂದಲೂ, ಅಶುದ್ಧ-ಅಶೌಚ-ದುರ್ಗಂಧ-ಅಸ್ಥಿರ-ಸ್ಥೂಲ-ಖಂಡ-ದಗ್ಧ-ಶಿಥಿಲ-ಅಧ್ರುವ-ಆಮಿಷಗಳೆಂಬ ಹತ್ತು ದೋಷಗಳಿಂದಲೂ ಕೂಡಿದ್ದಾಗಿರುತ್ತದೆ.

ಸೂಕ್ಷ್ಮಶರೀರವು ಪಂಚಜ್ಞಾನೇಂದ್ರಿಯಗಳಿಂದಲೂ, ಪಂಚ ಕರ್ಮೇಂದ್ರಿಯಗಳಿಂದಲೂ, ಪಂಚಪ್ರಾಣಗಳಿಂದಲೂ, ಮನಸ್ಸು ಮತ್ತು

ಬುದ್ಧಿಗಳಿಂದಲೂ ಕೂಡಿದ್ದು ಹದಿನೇಳು ತತ್ತ್ವಗಳಿಂದ ಕೂಡಿದೆ. ಇದು ಪ್ರಾಣಿಗಳ ಪಾಪ-ಪುಣ್ಯಗಳಿಗೆ ಫಲವಾದ ಭೋಗಾನುಭವಕ್ಕೆ ಸಾಧನ ವಾದುದು. ಇದು ಇಂದ್ರಿಯಕ್ಕೆ ಅಗೋಚರವಾದುದು. ಅನಾತ್ಮರೂಪವಾದ ಇದು ಮೋಕ್ಷಪರ್ಯಂತವಾಗಿರುತ್ತದೆ. ಲಿಂಗಶರೀರದಲ್ಲಿ ಯಾವನು ತಾದಾತ್ಮ್ಯಾಧ್ಯಾಸಮಾಡುವನೋ ಅವನು ಬುದ್ಧಿ-ರಾಗ-ದ್ವೇಷ-ಪ್ರಯತ್ನ-ಸಂಸಾರ-ಧರ್ಮ-ಅಧರ್ಮ-ಸುಖ-ದುಃಖಗಳೆಂಬ ನವಗುಣಗಳಿಂದ ಕೂಡಿ ದವನಾಗಿ ಸುಖ-ದುಃಖಗಳನ್ನು ಅನುಭವಿಸುವನು. ಎಂದರೆ ಸ್ಥೂಲಶರೀರವು ಭೋಗಸಾಧನವಾಗಿಯೂ, ಅಭಾಸಯುಕ್ತವಾದ ಬುದ್ಧಿಯು ಭೋಕ್ತೃ ವಾಗಿಯೂ, ವಿಷಯಗಳು ಭೋಗ್ಯವಾಗಿಯೂ ಇರುವುವು. ಆದುದರಿಂದ ಜೀವಿಯು ಮೋಕ್ಷಪರ್ಯಂತವಾಗಿ ಸೂಕ್ಷ್ಮಶರೀರದಲ್ಲಿಯೇ ಇರುವನು. ಮನುಷ್ಯನು ಆಯುಷ್ಯವು ಮುಗಿದು ಸತ್ತುಹೋದರೆ ಸೂಕ್ಷ್ಮಶರೀರವು ಒಡನೆಯೇ ಬೇರೆಯ ಶರೀರವನ್ನು ಸೇರಿಕೊಳ್ಳುವುದು. (ಅಪಘಾತಗಳಿಗೆ ಈಡಾಗಿ ಅಪಮೃತ್ಯುಗೊಳಗಾದವನ ಸೂಕ್ಷ್ಮಶರೀರವು ಅವನ ಆಯುಷ್ಯವು ಮುಗಿಯುವವರೆಗೂ ಅದೇ ಸ್ಥಿತಿಯಲ್ಲಿ ಸಂಚರಿಸುತ್ತಿರುವುದೆಂದು ಹೇಳು ತ್ತಾರೆ.) ಆಯುಷ್ಯವು ಮುಗಿದು ಮೃತನಾದವನ ಸೂಕ್ಷ್ಮಶರೀರವು ಆರ್ಜಿಸಿದ ಪಾಪ-ಪುಣ್ಯಗಳಿಗೆ ಅನುಗುಣವಾದ ಶರೀರವನ್ನು ಒಡನೆಯೇ ಪ್ರವೇಶಿಸಿ ಹಿಂದಿನ ಜನ್ಮದ ಸುಕೃತಫಲವನ್ನೋ ಅಥವಾ ದುಷ್ಕೃತಫಲವನ್ನೋ ಅನುಭವಿ ಸುತ್ತಾ ಹೋಗುತ್ತದೆ.

**ತತ್ರಾಸ್ಯ ಸ್ವಕೃತಂ ಕರ್ಮ ಛಾಯೇವಾನುಗತಂ ಸದಾ ।**
**ಫಲತ್ಯಥ ಸುಖಾರ್ಹೋ ವಾ ದುಃಖಾರ್ಹೋ ವಾಥ ಜಾಯತೇ ॥೨೮॥**

**ಕೃತಾನ್ತವಿಧಿಸಂಯುಕ್ತಃ ಸ ಜನ್ತುರ್ಲಕ್ಷಣೈಃ ಶುಭೈಃ ।**
**ಅಶುಭೈರ್ವಾ ನಿರಾದಾನೋ ಲಕ್ಷ್ಯತೇ ಜ್ಞಾನದೃಷ್ಟಿಭಿಃ ॥೨೯॥**

ಸ್ಥೂಲಶರೀರದಲ್ಲಿ ಆಚರಿಸಿದ ಕರ್ಮಗಳು ನೆರಳಿನಂತೆ ಜೀವಿಯನ್ನು ಅನುಸರಿಸುತ್ತಾ ಯೋಗ್ಯಸಮಯದಲ್ಲಿ ಫಲಿಸುತ್ತವೆ. ಅದರಿಂದಲೇ ಜೀವನು ತನ್ನ ಕರ್ಮಾಧೀನವಾದ ಸುಖ-ದುಃಖಗಳನ್ನು ಅನುಭವಿಸಲು ಯೋಗ್ಯವಾದ ಜನ್ಮವನ್ನು ಪಡೆಯುತ್ತಾನೆ. ವಿಧಿಯಿಂದ ನಿಯಂತ್ರಿತನಾಗಿ ಜೀವಿಗೆ–ತಾನೆ

ಮಾಡಿರುವ ಕರ್ಮಗಳಿಂದ ಪ್ರಾಪ್ತವಾಗುವ ಸುಖ-ದುಃಖಗಳನ್ನು ತಡೆಯಲು ಖಂಡಿತವಾಗಿಯೂ ಸಾಧ್ಯವಿಲ್ಲವೆಂಬ ವಿಷಯವನ್ನು ಜ್ಞಾನಿಗಳು ಬಹುಸ್ಪಷ್ಟವಾಗಿ ತಿಳಿದಿರುತ್ತಾರೆ. ಲಿಂಗಶರೀರದಲ್ಲಿ ಯಾವನು ತಾದಾತ್ಮ್ಯಾಧ್ಯಾಸವನ್ನು ಮಾಡುವನೋ, ಎಲ್ಲಿಯವರೆಗೆ ಮಾಡುವನೊ–ಅಲ್ಲಿಯವರೆಗೂ ಆ ಜೀವನಿಗೆ ಸುಖ-ದುಃಖಗಳಿಂದ ವಿಮುಕ್ತಿಯಿಲ್ಲ.

ಇದುವರೆಗೂ ಹೇಳಿದುದು ಅವಿವೇಕಿಗಳ ವಿಷಯವಾಯಿತು. ಇನ್ನು ಮುಂದೆ ಜ್ಞಾನಿಗಳು ಯಾರು? ಅವರಿಗೆ ಲಭ್ಯವಾಗುವ ಉತ್ತಮಗತಿಗಳಾವುವು?–ಎಂಬುದನ್ನು ವಿವರವಾಗಿ ಹೇಳುತ್ತೇನೆ, ಕೇಳು :

**ಮನುಷ್ಯಸ್ತಪ್ತತಪಸಃ ಸರ್ವಾಗಮಪರಾಯಣಾಃ ।**
**ಸ್ಥಿರವ್ರತಾಃ ಸತ್ಯಪರಾ ಗುರುಶುಶ್ರೂಷಣೇ ರತಾಃ ॥೮೧॥**

**ಸುಶೀಲಾಃ ಶುಕ್ಲಜಾತೀಯಾಃ ಕ್ಷಾನ್ತಾ ದಾನ್ತಾಃ ಸುತೇಜಸಃ ।**
**ಶುಚಿಯೋನ್ಯನ್ತರಗತಾಃ ಪ್ರಾಯಶಃ ಶುಭಲಕ್ಷಣಾಃ ॥೮೨॥**

**ಜಿತೇನ್ದ್ರಿಯತ್ವಾದ್ವಶಿನಃ ಶುಕ್ಲತ್ವಾನ್ಮನ್ದರೋಗಿಣಃ ।**
**ಅಲ್ಪಾಬಾಧಪರಿತ್ರಾಸಾದ್ಭವನ್ತಿ ನಿರುಪದ್ರವಾಃ ॥೮೩॥**

**ಚ್ಯವನ್ತಂ ಜಾಯಮಾನಂ ಚ ಗರ್ಭಸ್ಥಂ ಚೈವ ಸರ್ವಶಃ ।**
**ಸ್ವಮಾತ್ಮಾನಂ ಪರಂ ಚೈವ ಬುಧ್ಯನ್ತೇ ಜ್ಞಾನಚಕ್ಷುಷಾ ॥೮೪॥**

ಜ್ಞಾನಿಗಳು ಯಾವಾಗಲೂ ತಪಸ್ಸಿನಲ್ಲಿಯೇ ನಿರತರಾಗಿರುತ್ತಾರೆ. ಸಕಲವೇದ-ವೇದಾಂಗಗಳನ್ನೂ ತಿಳಿದವರಾಗಿರುತ್ತಾರೆ. ಎಂತಹ ಪರಿಸ್ಥಿತಿಯಲ್ಲಿಯೂ ಸುಳ್ಳಾಡುವುದಿಲ್ಲ. ಗುರುಶುಶ್ರೂಷಾನಿರತರಾಗಿರುತ್ತಾರೆ. ಸುಶೀಲರಾಗಿಯೂ, ಯೋಗಾಭ್ಯಾಸನಿರತರಾಗಿಯೂ, ನಿತ್ಯತೃಪ್ತರಾಗಿಯೂ, ಜಿತೇಂದ್ರಿಯರಾಗಿಯೂ, ಮಹಾತೇಜಸ್ವಿಗಳಾಗಿಯೂ, ಅಂತಃಶುದ್ಧಿ-ಬಹಿಃಶುದ್ಧಿಯುಳ್ಳವರಾಗಿಯೂ, ಸತ್ಕುಲಪ್ರಸೂತರಾಗಿಯೂ, ಶುಭಲಕ್ಷಣವುಳ್ಳವರಾಗಿಯೂ ಇರುತ್ತಾರೆ. ಅವರು ಜಿತೇಂದ್ರಿಯರಾಗಿರುವುದರಿಂದಲೇ ಈಶ್ವರಪ್ರಾಯರಾಗಿರುತ್ತಾರೆ.

(ಜಿತೇಂದ್ರಿಯತ್ವವೆಂಬುದು ಅದ್ಭುತವಾದ ಸಾಧನೆ. ಜಿತೇಂದ್ರಿಯನಾಗಿರಬೇಕೆಂದು ನಮ್ಮ ಶ್ರುತಿ-ಸ್ಮೃತಿ-ಪುರಾಣಗಳು ಅನವರತವಾಗಿ ಸಾರುತ್ತಿವೆ. ಮನಸ್ಸನ್ನು ಜಯಿಸುವುದೂ, ಇಂದ್ರಿಯಗಳನ್ನು ಜಯಿಸುವುದೂ ಎರಡೂ ಒಂದೇ ಅರ್ಥದಲ್ಲಿರುತ್ತದೆ. ಇಂದ್ರಿಯಗಳನ್ನು ಜಯಿಸುವುದೆಂದರೆ ಮನಸ್ಸನ್ನು ಜಯಿಸುವುದೆಂದೇ ಅರ್ಥವಾಗುತ್ತದೆ. ಇಂದ್ರಿಯಗಳಿಗೆ ಪ್ರಚೋದಕವಾದ ಮನಸ್ಸು ಯಾವಾಗಲೂ ಬಹಳ ಚಂಚಲ ಇದು ತ್ವಕ್-ಚಕ್ಷುಸ್-ಶ್ರೋತ್ರ-ಜಿಹ್ವಾ-ಘ್ರಾಣೇಂದ್ರಿಯಗಳ ಮೂಲಕವಾಗಿ ತನ್ನ ಚಾಪಲ್ಯವನ್ನು ಈಡೇರಿಸಿಕೊಳ್ಳುತ್ತಲೇ ಇರುತ್ತದೆ. ಮನಸ್ಸಿನ ಚಾಪಲ್ಯವನ್ನು ಈಡೇರಿಸುವ ಸಲುವಾಗಿಯೇ ಮಾನವನು ನಾನಾವಿಧವಾದ ಕಷ್ಟಗಳಿಗೆ ಗುರಿಯಾಗುತ್ತಾನೆ. ಕಪಿಯಂತಿರುವ ಈ ಮನಸ್ಸನ್ನು ತಡೆಹಿಡಿಯಬೇಕೆಂಬ ಇಚ್ಛೆಯೇ ಮಾನವನಿಗಿರುವುದಿಲ್ಲ. ಮನಸ್ಸಿನ ಆಶಯವನ್ನು ಪೂರೈಸುವ ಸಲುವಾಗಿ ಮಾನವನು ಎಲ್ಲರಿಗೂ ದಾಸನಾಗುತ್ತಾನೆ. ಇಂದ್ರಿಯಗಳನ್ನು ಪ್ರೇರಣೆಮಾಡದಿರುವ ರೀತಿಯಲ್ಲಿ ಮನಸ್ಸನ್ನು ತಡೆಹಿಡಿಯುವ ಮನುಷ್ಯನಿಗೆ ಪ್ರಪಂಚವೇ ಸ್ವಾಧೀನವಾಗುತ್ತದೆ.

ಈ ಕಾರಣದಿಂದಲೇ ಇಲ್ಲಿ ಜಿತೇಂದ್ರಿಯರನ್ನು ಈಶ್ವರಪ್ರಾಯರೆಂದು ಹೇಳಿದ್ದಾರೆ : **"ನ ತತ್ರ ಶೋಕೋ ನ ಮೃತ್ಯುಃ ಪ್ರಾಪ್ತಸ್ಯ ಯೋಗಾಗ್ನಿಮಯಂ ಶರೀರಮ್"** ಎಂಬ ಶ್ರುತಿವಚನದಂತೆ ಸರ್ವದಾ ಯೋಗಾಭ್ಯಾಸನಿರತರಾಗಿರುವುದರಿಂದ ಹೆಚ್ಚು ರೋಗವಶರಾಗುವುದಿಲ್ಲ. ಇವರು ಯಾವ ವಿಧವಾದ ಭಯವಾಗಲೀ, ದುಃಖವಾಗಲೀ ಇಲ್ಲದೇ ಸರ್ವದಾ ಉಪದ್ರವರಹಿತರಾಗಿರುತ್ತಾರೆ. ಇಂತಹ ಜ್ಞಾನಿಗಳು ತಮ್ಮ ದಿವ್ಯಜ್ಞಾನದಿಂದ ಪ್ರಪಂಚದ ಸಕಲಜೀವರಾಶಿಗಳ ಭೂತ-ಭವಿಷ್ಯದ್ವರ್ತಮಾನ ವಿಷಯಗಳನ್ನೂ ತಿಳಿದುಕೊಳ್ಳಲು ಸಮರ್ಥರಾಗಿರುತ್ತಾರೆ. ಅಲ್ಲದೇ ತಮ್ಮ ಹಿಂದಿನ ಜನ್ಮ, ಈಗ ತಮ್ಮ ಜನ್ಮಕ್ಕೆ ಕಾರಣ ಮತ್ತು ಮುಂದಿನ ಜನ್ಮದಲ್ಲಿ ಮಾಡ ಬೇಕಾದ ಕಾರ್ಯ—ಈ ಎಲ್ಲವನ್ನೂ ಬಹುಸ್ಪಷ್ಟವಾಗಿ ತಿಳಿದಿರುತ್ತಾರೆ.)

**ಋಷಯಸ್ತೇ ಮಹಾತ್ಮಾನಃ ಪ್ರತ್ಯಕ್ಷಾಗಮಬುದ್ಧಯಃ ।**
**ಕರ್ಮಭೂಮಿಮಿಮಾಂ ಪ್ರಾಪ್ಯಪುನರ್ಯಾನ್ತಿ ಸುರಾಲಯಮ್ ॥೮೫॥**

ಶಾಸ್ತ್ರಗಳನ್ನು ಪ್ರತ್ಯಕ್ಷವಾಗಿ ತಿಳಿದಿರುವ ಮಹಾತ್ಮರಾದ ಮಹರ್ಷಿಗಳು ಕರ್ಮಭೂಮಿಯಾದ ಈ ಭೂಲೋಕಕ್ಕೆ ಆಗಮಿಸಿ ತಮ್ಮ ಕಾರ್ಯವನ್ನು ಯಥಾವಿಧಿಯಾಗಿ ಮುಗಿಸಿಕೊಂಡು ಪುನಃ ದೇವಲೋಕಕ್ಕೆ ಹೊರಟು ಹೋಗುತ್ತಾರೆ.

**ಕಿಂಚಿದ್ದೈವಾದ್ಧಠಾತ್ಕಿಂಚಿತ್ಕಿಂಚಿದೇವ ಸ್ವಕರ್ಮಭಿಃ ।**
**ಪ್ರಾಪ್ನುವನ್ತಿ ನರಾ ರಾಜನ್ಮಾ ತೇSಸ್ತ್ವನ್ಯಾ ವಿಚಾರಣಾ ॥೮೬॥**

ಪ್ರಪಂಚದಲ್ಲಿ ಮಾನವರು ದೈವಾನುಗ್ರಹದಿಂದಲೂ, ಅದೃಷ್ಟವಶದಿಂದಲೂ, ಸ್ವಕರ್ಮಗಳಿಂದಲೂ–ಫಲಗಳನ್ನು ಪಡೆಯುತ್ತಾರೆ. ದೈವ, ಅದೃಷ್ಟ, ಸ್ವಕರ್ಮ–ಇವುಗಳ ಹೊರತಾಗಿ ಬೇರಾವ ಕಾರಣಗಳಿಂದಲೂ ಮಾನವನು ಫಲವನ್ನು ಪಡೆಯುವ ಸಾಧ್ಯತೆಯಿಲ್ಲ. ಈ ವಿಷಯದಲ್ಲಿ ನೀನು ಪುನಃ-ಪುನಃ ವಿಚಾರಮಾಡಬೇಕಾದ ಅವಶ್ಯಕತೆಯೇ ಇಲ್ಲ.

**ಇಮಾಮತ್ರೋಪಮಾಂ ಚಾಪಿ ನಿಬೋಧ ವದತಾಂ ವರ ।**
**ಮನುಷ್ಯಲೋಕೇ ಯಚ್ಛ್ರೇಯಃ ಪರಂ ಮನ್ಯೇ ಯುಧಿಷ್ಠಿರ ॥೮೭॥**

ವಾಗ್ಮಿಗಳಲ್ಲಿ ಶ್ರೇಷ್ಠನಾದ ಯುಧಿಷ್ಠಿರನೇ! ಮನುಷ್ಯಲೋಕದಲ್ಲಿ ಯಾವುದು ಅತ್ಯಂತಶ್ರೇಷ್ಠವಾದುದೆಂದು ಭಾವಿಸಿದ್ದೇನೆಯೋ–ಆ ವಿಷಯದಲ್ಲಿ ನಾನೀಗ ಹೇಳಲಿರುವ ಉದಾಹರಣೆಯನ್ನು ಕೇಳುವವನಾಗು.

**ಇಹ ವೈಕಸ್ಯ ನಾಮುತ್ರ ಅಮುತ್ರೈಕಸ್ಯ ನೋ ಇಹ ।**
**ಇಹ ವಾಮುತ್ರ ಚೈಕಸ್ಯ ನಾಮುತ್ರೈಕಸ್ಯ ನೋ ಇಹ ॥೮೮॥**

ಈ ಲೋಕದಲ್ಲೊಬ್ಬನು ಸುಖವಾಗಿರಬಹುದು. ಆದರೆ ಅವನಿಗೆ ಪರಲೋಕದಲ್ಲಿಯೂ ಸುಖಪ್ರಾಪ್ತಿಯಾಗುವುದೆಂದೂ ಅಥವಾ ಸದ್ಗತಿಯು ಸಿಕ್ಕುವುದೆಂದೂ ಹೇಳಲಾಗುವುದಿಲ್ಲ. ಮತ್ತೊಬ್ಬನಿಗೆ ಈ ಲೋಕವು ಬಹಳ ಕಷ್ಟಕರವಾಗಿ ಕಾಣಬಹುದು. ಅಂತಹವನಿಗೆ ಸದ್ಗತಿಯು ಸಿಕ್ಕಿ ಪರಲೋಕದಲ್ಲವನು ಸುಖವಾಗಿರಲು ಸಾಧ್ಯವಿದೆ. ಮತ್ತೆ ಕೆಲವರಿಗೆ ಅವರ ಸತ್ಕರ್ಮಗಳಿಂದಾಗಿ ಇಹಲೋಕ-ಪರಲೋಕಗಳೆರಡರಲ್ಲಿಯೂ ಸುಖವು ಸಿಕ್ಕುತ್ತದೆ. ಇನ್ನೂ ಕೆಲವರಿಗೆ ಅವರ ಕುತ್ಸಿತಕರ್ಮಗಳ ಫಲವಾಗಿ ಇಹ-ಪರಗಳೆರಡರಲ್ಲಿಯೂ ಸೌಖ್ಯವಿಲ್ಲವಾಗುತ್ತದೆ.

ಧನಾನಿ ಯೇಷಾಂ ವಿಪುಲಾನಿ ಸನ್ತಿ
ನಿತ್ಯಂ ರಮನ್ತೇ ಸುವಿಭೂಷಿತಾಙ್ಗಾಃ ।
ತೇಷಾಮಯಂ ಶತ್ರುವರಘ್ನ ಲೋಕೋ
ನಾಸೌ ಸದಾ ದೇಹಸುಖೇ ರತಾನಾಮ್ ॥೮೯॥

ಐಶ್ವರ್ಯವಂತರಾಗಿರುವವರು ಆಹಾರ-ನಿದ್ರಾ-ಮೈಥುನಗಳೇ ಪರಮ ಸುಖವೆಂದು ಭಾವಿಸಿ ಯಾವಾಗಲೂ ಶರೀರಪೋಷಣೆ, ಶರೀರಸೌಂದರ್ಯ, ಸುಖನಿದ್ರೆ–ಇತ್ಯಾದಿಗಳಲ್ಲಿಯೇ ಆಸಕ್ತರಾಗಿದ್ದು ಈ ಲೋಕದಲ್ಲಿ ಸೌಖ್ಯ ದಿಂದಿರುತ್ತಾರೆ. ಆದರೆ ಅಂತಹವರಿಗೆ ಪರಲೋಕದಲ್ಲಿ ಸುಖವಿಲ್ಲ.

ಯೇ ಯೋಗಯುಕ್ತಾಸ್ತಪಸಿ ಪ್ರಸಕ್ತಾಃ
ಸ್ವಾಧ್ಯಾಯಶೀಲಾ ಜರಯನ್ತಿ ದೇಹಾನ್ ।
ಜಿತೇನ್ದ್ರಿಯಾಃ ಪ್ರಾಣಿವಧೇ ನಿವೃತ್ತಾ-
ಸ್ತೇಷಾಮಸೌ ನಾಯಮರಿಘ್ನ ಲೋಕಃ ॥೯೦॥

ಶತ್ರುದಮನನೇ! ತಪಸ್ಸಿನಲ್ಲಿಯೂ–ವೇದಾಧ್ಯಯನದಲ್ಲಿಯೂ ಸರ್ವದಾ ನಿರತರಾಗಿರುವವರೂ, ವ್ರತಾನುಷ್ಠಾನಪರರಾಗಿ ಶರೀರಸೌಖ್ಯ ವನ್ನು ಕಡೆಗಾಣಿಸುವವರೂ, ಜಿತೇಂದ್ರಿಯರೂ, ಪ್ರಾಣಿಹಿಂಸೆಯಿಂದ ನಿವೃತ್ತ ರಾದವರೂ ಆದ ಮಹಾತ್ಮರು ಈ ಲೋಕದಲ್ಲಿ ಯಾವ ವಿಧವಾದ ಸುಖ ವನ್ನೂ ಅನುಭವಿಸುವುದಿಲ್ಲ. ತಮ್ಮ ಕರ್ಮಗಳಿಂದಾಗಿ ಅವರಿಗೆ ಉತ್ತಮ ಲೋಕಗಳು ಲಭಿಸಿ ಅವಸಾನಾನಂತರದಲ್ಲಿ ಅವರು ಪರಮಸುಖವನ್ನೇ ಅನುಭವಿಸುತ್ತಾರೆ.

ಯೇ ಧರ್ಮಮೇವ ಪ್ರಥಮಂ ಚರನ್ತಿ
ಧರ್ಮೇಣ ಲಬ್ಧ್ವಾ ಚ ಧನಾನಿ ಕಾಲೇ ।
ದಾರಾನವಾಪ್ಯ ಕ್ರತುಭಿರ್ಯಜನ್ತೇ
ತೇಷಾಮಯಂ ಚೈವ ಪರಶ್ಚ ಲೋಕಃ ॥೯೧॥

ಉಪನೀತರಾಗಿ ವೇದಾಧ್ಯಯನವನ್ನು ಮಾಡಿ, ಸ್ನಾತಕವ್ರತಗಳನ್ನು ಮುಗಿಸಿಕೊಂಡು ವಿವಾಹಿತರಾಗಿ, ಸ್ವವರ್ಣೋಕ್ತವಾದ ಕರ್ಮಗಳಿಂದ ಧರ್ಮ ಮೂಲವಾದ ಅರ್ಥವನ್ನು ಸಂಪಾದಿಸಿ, ಯಜ್ಞ-ಯಾಗಾದಿಗಳನ್ನು ಮಾಡಿ

ಕಡೆಯಲ್ಲಿ ವಾನಪ್ರಸ್ಥ ಮತ್ತು ಸಂನ್ಯಾಸಾಶ್ರಮಗಳನ್ನು ಯಥಾಕ್ರಮವಾಗಿ ಸ್ವೀಕಾರಮಾಡುವವರು ಇಹ-ಪರಗಳೆರಡರಲ್ಲಿಯೂ ಸೌಖ್ಯವನ್ನು ಪಡೆಯುತ್ತಾರೆ.

**ಯೇ ನೈವ ವಿದ್ಯಾಂ ನ ತಪೋ ನ ದಾನಂ**
**ನ ಚಾಪಿ ಮೂಢಾಃ ಪ್ರಜನೇ ಯತನ್ತಿ ।**
**ನ ಚಾನುಗಚ್ಛನ್ತಿ ಸುಖಾನಿ ಭೋಗಾಂ-**
**ಸ್ತೇಷಾಮಯಂ ನೈವ ಪರಶ್ಚ ಲೋಕಃ ॥೯೨॥**

ವಿದ್ಯಾಭ್ಯಾಸವೂ ಇಲ್ಲದೇ, ತಪಸ್ಸನ್ನೂ ಮಾಡದೇ, ದಾನಗಳನ್ನೂ ಮಾಡದೇ, ಮದುವೆಯೂ ಆಗದೇ ಸಂತಾನಕ್ಕಾಗಿಯೂ ಪ್ರಯತ್ನಿಸದಿರುವ ಮೂಢರಿಗೆ ಯಾವ ವಿಧವಾದ ಸುಖವೂ ಲಭ್ಯವಾಗುವುದಿಲ್ಲ. ಅವರು ಯಾವ ವಿಧವಾದ ಭೋಗಗಳನ್ನೂ ಉಪಭುಂಜಿಸಲಾರರು. ಅಂತಹ ಮೂಢರಿಗೆ ಐಹಿಕ ಮತ್ತು ಆಮುಷ್ಮಿಕ್ರಸೌಖ್ಯಗಳೆರಡೂ ಇಲ್ಲವಾಗುತ್ತವೆ.

ನೀವುಗಳೆಲ್ಲರೂ, ಮಹಾವೀರ್ಯಶಾಲಿಗಳಾಗಿರುವಿರಿ. ದೇವತೆಗಳಿಗೆ ಸಮಾನವಾದ ಪರಾಕ್ರಮವು ನಿಮಗಿರುವುದು. ಸಕಲವೇದ-ವೇದಾಂಗ ಗಳನ್ನೂ ಅಧ್ಯಯನಮಾಡಿರುವಿರಿ. ದೇವತೆಗಳ ಕಾರ್ಯವನ್ನು ಪೂರೈಸುವ ಸಲುವಾಗಿಯೇ ನೀವು ಈ ಭೂಲೋಕದಲ್ಲಿ ಜನ್ಮತಾಳಿದ್ದೀರಿ. ನಿಮ್ಮ ಪರಾ ಕ್ರಮದಿಂದ ಪ್ರಬಲಶತ್ರುಗಳನ್ನೂ ನಿಗ್ರಹಿಸಿ, ತಪೋದಮಾಚಾರಶೀಲರಾಗಿದ್ದು ಯಥಾವಿಧಿಯಾದ ಕರ್ಮಗಳಿಂದ ದೇವರ್ಷಿ-ಪಿತೃಗಳನ್ನು ತೃಪ್ತಿಗೊಳಿಸಿ, ನೀವು ಮಾಡಿರುವ ಶುಭಕರ್ಮಗಳ ಫಲವಾಗಿ ಪುಣ್ಯಪ್ರದವಾದ ಸ್ವರ್ಗಲೋಕವನ್ನೂ ಪಡೆಯುವಿರಿ. ಆದುದರಿಂದ, ಧರ್ಮಜ! ಇಂದಿನ ಈ ಕ್ಲೇಶವನ್ನು ನೆನೆದು ನೀನು ಖಂಡಿತವಾಗಿಯೂ ಹತಾಶನಾಗಬೇಕಾಗಿಲ್ಲ. ನಿನ್ನ ಧರ್ಮನಿಷ್ಠೆಗೆ ಖಂಡಿತವಾಗಿಯೂ ಉತ್ತಮಫಲವೇ ಲಭಿಸುವುದು. ಈ ವಿಷಯವಾಗಿ ನೀನು ಸಂಶಯಪಡುವ ಕಾರಣವಿಲ್ಲ."

೧೮೩ನೆಯ ಅಧ್ಯಾಯವು ಮುಗಿಯಿತು.

೧೮೪ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ತಪಸ್ವಿಗಳ ಮತ್ತು ಸ್ವಧರ್ಮಪರಾಯಣರಾದ ಬ್ರಾಹ್ಮಣರ ಮಹಿಮೆ

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಮಾರ್ಕಂಡೇಯಮಹರ್ಷಿಗಳು ಧರ್ಮರಹಸ್ಯವನ್ನು ಹೇಳಿದನಂತರ ಪಾಂಡುಪುತ್ರನು ಮಾರ್ಕಂಡೇಯರನ್ನು ಪ್ರಾರ್ಥಿಸಿದನು :

"ಮಹರ್ಷಿಗಳೇ! ಬ್ರಾಹ್ಮಣಶ್ರೇಷ್ಠರ ಮಹಿಮೆಯನ್ನು ತಿಳಿಯಲು ಅಪೇಕ್ಷೆಯಾಗಿದೆ. ದಯೆಯಿಟ್ಟು ಹೇಳಿರಿ."

ಯುಧಿಷ್ಠಿರನಿಂದ ಹೀಗೆಂದು ಪ್ರಾರ್ಥಿಸಲ್ಪಟ್ಟ, ಸರ್ವಶಾಸ್ತ್ರವಿಶಾರದ ರಾದ, ಮಹಾತೇಜಸ್ವಿಗಳಾದ, ಮಹಾತಪಸ್ವಿಗಳಾದ ಮಾರ್ಕಂಡೇಯ ಮಹರ್ಷಿಗಳು ಯುಧಿಷ್ಠಿರಾದಿಗಳಿಗೆ ಬ್ರಾಹ್ಮಣರ ಮಹಾತ್ಮ್ಯೆಯನ್ನು ಹೇಳಲು ಉಪಕ್ರಮಿಸಿದರು :

"ಯುಧಿಷ್ಠಿರ! ಹೈಹಯಕುಲೋತ್ಪನ್ನನಾದ, ಶತ್ರುಮರ್ದನನಾದ, ರೂಪಸಂಪನ್ನನಾದ ರಾಜಕುಮಾರನೊಬ್ಬನು ಬೇಟೆಯಾಡುವ ಸಲುವಾಗಿ ಕಾಡಿಗೆ ತೆರಳಿದನು. ಹರಿಣ-ಸಾರಂಗಾದಿ ಮೃಗಗಳನ್ನು ಬೇಟೆಯಾಡಲು ಪೊದೆಗಳಿಂದಲೂ ಹುಲ್ಲಿನಿಂದಲೂ ಆವೃತವಾಗಿ ದಟ್ಟವಾಗಿದ್ದ ಅರಣ್ಯದಲ್ಲಿ ರಾಜಕುಮಾರನು ಸಂಚರಿಸುತ್ತಾ ಜಿಂಕೆಯ ಚರ್ಮವನ್ನು ಹೊದ್ದಿದ್ದ ಋಷಿ ಯೊಬ್ಬನನ್ನು ಮೃಗವೆಂದೇ ಭಾವಿಸಿ ಬಾಣಪ್ರಯೋಗಮಾಡಿ ಕೊಂದು ಬಿಟ್ಟನು. ನಿಶಿತವಾದ ಬಾಣಪ್ರಯೋಗದಿಂದ ಬಾಧಿತನಾದ ಬ್ರಾಹ್ಮಣನ- 'ಅಯ್ಯೋ! ಸತ್ತೆ'–ಎಂಬ ಆಕ್ರಂದನವನ್ನು ಕೇಳಿ ರಾಜೀವಲೋಚನನಾದ ರಾಜಕುಮಾರನು ಋಷಿಯ ಸಮೀಪಕ್ಕೆ ಹೋಗಿ ತಾನು ಮಾಡಿದ ಅಪರಾಧಕ್ಕಾಗಿ ಪಶ್ಚಾತ್ತಾಪಪಟ್ಟು ಅಲ್ಲಿ ಹೆಚ್ಚುಕಾಲ ನಿಲ್ಲದೇ ತನ್ನ ಅಪರಾಧಕ್ಕೆ ಪ್ರಾಯಶ್ಚಿತ್ತವೇನೆಂಬುದನ್ನು ತಿಳಿಯಲು ಪ್ರಖ್ಯಾತರಾದ ಹೈಹಯಮುಖ್ಯಸ್ಥರ ಸಮೀಪಕ್ಕೆ ಹೋಗಿ ಅವರೊಡನೆ ನಡೆದ ವಿದ್ಯಮಾನಗಳೆಲ್ಲವನ್ನೂ ವಿಶದವಾಗಿ ಹೇಳಿದನು. ರಾಜಕುಮಾರನ ಮಾತುಗಳನ್ನು ಕೇಳಿ ಹೈಹಯ ಮುಖ್ಯಸ್ಥರೆಲ್ಲರೂ ಋಷಿಯ ಸಮೀಪಕ್ಕೆ ಬಂದರು. ಕಂದ-ಮೂಲಗಳನ್ನು ತಿಂದು ಜೀವಿಸುತ್ತಾ ತಪಶ್ಚರಣೆಯಲ್ಲಿಯೇ ಸರ್ವದಾ ಆಸಕ್ತನಾಗಿದ್ದ

ಋಷಿಯು ರಾಜಕುಮಾರನ ಬಾಣದ ಆಘಾತಕ್ಕೆ ಗುರಿಯಾಗಿ ಕೆಳಗೆ ಬಿದ್ದಿರುವುದನ್ನು ನೋಡಿ ಬಹಳ ಖಿನ್ನರಾದರು. ಋಷಿಪುತ್ರನು ಯಾರೆಂಬುದನ್ನು ತಿಳಿಯುವ ಸಲುವಾಗಿ ಹೈಹಯರು ಅರಣ್ಯದಲ್ಲಿ ಸುತ್ತಾಡುತ್ತಾ ಕಶ್ಯಪಾತ್ಮಜನಾದ ಅರಿಷ್ಟನೇಮಿಯ ಆಶ್ರಮದ ಸಮೀಪಕ್ಕೆ ಬಂದರು. ನಿಯತವ್ರತನಾದ ಮಹಾತ್ಮನಾದ ಮಹರ್ಷಿಗೆ ಹೈಹಯರು ಅಭಿವಾದನಪೂರ್ವಕವಾಗಿ ನಮಸ್ಕರಿಸಿ ವಿನೀತರಾಗಿ ನಿಂತುಕೊಂಡರು. ಹೈಹಯಮುಖ್ಯರು ಬಂದಿರುವುದನ್ನು ತಿಳಿದ ಮಹರ್ಷಿಯು ಅವರನ್ನು ಯಥಾಯೋಗ್ಯವಾಗಿ ಸತ್ಕರಿಸಲು ಸಾಮಗ್ರಿಗಳನ್ನು ಸಿದ್ಧಪಡಿಸುತ್ತಿದ್ದನು. ಅದನ್ನು ನೋಡಿದ ಹೈಹಯರು ಬದ್ಧಾಂಜಲಿಗಳಾಗಿ ಋಷಿಸತ್ತಮನನ್ನು ಕುರಿತು ಹೇಳಿದರು :

"ಮಹರ್ಷಿಗಳೇ! ನಾವಿಂದು ನಿಮ್ಮಿಂದ ಆತಿಥ್ಯವನ್ನು ಸ್ವೀಕರಿಸಲು ಯೋಗ್ಯರಾಗಿಲ್ಲ. ಬ್ರಾಹ್ಮಣನೊಬ್ಬನನ್ನು ವಧೆಮಾಡಿ ನಾವೆಲ್ಲರೂ ದೋಷಭಾಗಿಗಳಾಗಿದ್ದೇವೆ." ಹೈಹಯರ ಮಾತುಗಳನ್ನು ಕೇಳಿ ಮಹರ್ಷಿಯು ಹೇಳಿದನು : "ರಾಜಪುತ್ರರೇ! ಬ್ರಾಹ್ಮಣನೊಬ್ಬನನ್ನು ನೀವು ಏಕೆ ಕೊಂದಿರಿ? ಆ ಬ್ರಾಹ್ಮಣನು ಯಾರು? ಮತ್ತು ಈಗ ಎಲ್ಲಿ ಸತ್ತುಬಿದ್ದಿದ್ದಾನೆ?–ಎಲ್ಲವನ್ನೂ ವಿಶದವಾಗಿ ಹೇಳಿರಿ. ತಪಸ್ಸಿನ ಬಲವೆಷ್ಟೆಂಬುದನ್ನಾದರೂ ನಾನೀಗ ನಿಮಗೆ ತೋರಿಸಿಕೊಡುತ್ತೇನೆ."

ಹೈಹಯಮುಖ್ಯರು ನಡೆದುದೆಲ್ಲವನ್ನೂ ಋಷಿಗೆ ತಿಳಿಯಪಡಿಸಿ ಅವರನ್ನೂ ಕರೆದುಕೊಂಡು ಋಷಿಪುತ್ರನು ಸತ್ತುಬಿದ್ದಿದ್ದ ಸ್ಥಳಕ್ಕೆ ಹೋದರು. ಆದರೆ ಆ ಸ್ಥಳದಲ್ಲಿ ಋಷಿಕುಮಾರನ ಶರೀರವಿರಲಿಲ್ಲ. ದೇಹವನ್ನು ಹುಡುಕುವ ಸಲುವಾಗಿ ಅರಣ್ಯವೆಲ್ಲವನ್ನೂ ಸುತ್ತಾಡಿದರು. ಎಲ್ಲಿಯೂ ಸಿಕ್ಕದೇ ಇದ್ದುದರಿಂದ ನಾಚಿಕೆಗೊಂಡ ಹೈಹಯರು ಅರಿಷ್ಟನೇಮಿಯ ಆಶ್ರಮಕ್ಕೆ ಹಿಂದಿರುಗಿದರು. ಅವರಿಗೆ ಎಲ್ಲ ವಿಷಯಗಳೂ ಸ್ವಪ್ನದಂತೆಯೇ ಭಾಸವಾಯಿತು. ಹೈಹಯರು ತಲೆತಗ್ಗಿಸಿ ನಿಂತಿರಲಾಗಿ ಅರಿಷ್ಟನೇಮಿಯು ತನ್ನ ಪುತ್ರನನ್ನು ಕರೆದು ಹೈಹಯರ ಮುಂದೆ ನಿಲ್ಲಿಸಿ ಹೇಳಿದನು : "ರಾಜಕುಮಾರರೇ! ನೀವು ಸಂಹರಿಸಿದ ಬ್ರಾಹ್ಮಣಕುಮಾರನು ಇವನೇ ಆಗಿರಬಹುದಲ್ಲವೇ? ತಪೋಬಲದಿಂದ ಕೂಡಿರುವ ಈ ವಟುವು ನನ್ನ ಮಗನಾಗಿರುವನು." ಯುಧಿಷ್ಠಿರ! ಸತ್ತುಬಿದ್ದಿದ್ದ ಬ್ರಾಹ್ಮಣಕುಮಾರನೇ ಅವನಾಗಿ

ದ್ದನು. ಹೈಹಯರಿಗೆ ಅತ್ಯಾಶ್ಚರ್ಯವಾಯಿತು. ಅಂತೆಯೇ ಅವರು ಮಹರ್ಷಿಯನ್ನು ಕೇಳಿದರು : "ಮಹದಾಶ್ಚರ್ಯವಾಗಿದೆ! ಸತ್ತುಹೋಗಿದ್ದ ಇವನು



ಹೇಗೆ ಬದುಕಿದನು? ತಪೋಬಲದಿಂದಲೇ ಇವನು ಪುನಃ ಜೀವಂತನಾಗಲು ಸಾಧ್ಯವಾಯಿತೇ? ಈ ರಹಸ್ಯವನ್ನು ನಾವು ಕೇಳಿ ತಿಳಿದುಕೊಳ್ಳಬೇಕೆಂದಿದ್ದೇವೆ. ನಮಗೆ ಹೇಳಬಹುದಾಗಿದ್ದರೆ ಈ ವಿಷಯವನ್ನು ದಯಮಾಡಿ ಹೇಳಿರಿ."

ಅದಕ್ಕುತ್ತರವಾಗಿ ಅರಿಷ್ಟನೇಮಿಯು ಹೇಳತೊಡಗಿದನು : "ನಾಸ್ಮಾ ಕಂ ಮೃತ್ಯು ಪ್ರಭವತೇ ನೃಪಾಃ । ಮೃತ್ಯುದೇವತೆಯು ನಮ್ಮ ವಿಷಯ

ದಲ್ಲಿ ತನ್ನ ಪ್ರಭಾವವನ್ನು ತೋರಲಾರದು. ಇದಕ್ಕೆ ಕಾರಣವೇನೆಂಬುದನ್ನು ಸಂಕ್ಷಿಪ್ತವಾಗಿಯೂ–ಸ್ಪಷ್ಟವಾಗಿಯೂ ಹೇಳುವೆನು, ಕೇಳಿರಿ :

**ಸತ್ಯಮೇವಾಭಿಜಾನೀಮೋ ನಾನೃತೇ ಕುರ್ಮಹೇ ಮನಃ ।**
**ಸ್ವಧರ್ಮಮನುತಿಷ್ಠಾಮಸ್ತಸ್ಮಾನ್ಮೃತ್ಯುಭಯಂ ನ ನಃ ॥೧೮॥**

ನಮಗೆ ಸತ್ಯವನ್ನು ಹೇಳುವುದೊಂದೇ ಗೊತ್ತು. ಅನೃತವನ್ನು ನಾವು ಆಡುವುದಂತಿರಲಿ ; ಅನೃತವು ನಮ್ಮ ಮನಸ್ಸನ್ನೂ ಪ್ರವೇಶಿಸಲಾರದು. ಅರ್ಥಾತ್ ಸತ್ಯಸಂಧರಾಗಿರುವುದರಿಂದ ಮೃತ್ಯುವಿನ ಭಯವು ನಮಗಿರುವುದಿಲ್ಲ. ಯಾವಾಗಲೂ ನಾವು ಸ್ವಧರ್ಮನಿರತರಾಗಿಯೇ ಇರುವೆವು. ಪರಧರ್ಮಾನುಸರಣೆಯು ಭಯಾವಹವಾದುದು. ಸ್ವಧರ್ಮಾವಲಂಬನೆಯಿಂದ ಎಷ್ಟೇ ಕಷ್ಟ-ಕಾರ್ಪಣ್ಯಗಳುಂಟಾದರೂ ನಾವು ಸ್ವಧರ್ಮದಲ್ಲಿರುವುದೇ ಶ್ರೇಯಸ್ಸೆಂದು ಭಾವಿಸಿ ಸ್ವಧರ್ಮವಿಹಿತವಾದ ಕರ್ತವ್ಯಗಳನ್ನು ಕಾಲ-ಕಾಲಕ್ಕೆ ಮಾಡುತ್ತಿರುತ್ತೇವೆ. ಮೃತ್ಯುವಿನ ಭಯವಿಲ್ಲದಿರುವುದಕ್ಕೆ ಇದೂ ಒಂದು ಕಾರಣವಾಗಿದೆ.

**ಯದ್ಬ್ರಾಹ್ಮಣಾನಾಂ ಕುಶಲಂ ತದೇಷಾಂ ಕಥಯಾಮಹೇ ।**
**ನೈಷಾಂ ದುಶ್ಚರಿತಂ ಬ್ರೂಮಸ್ತಸ್ಮಾನ್ಮೃತ್ಯುಭಯಂ ನ ನಃ ॥೧೯॥**

ಬ್ರಾಹ್ಮಣರಿಗೆ ಕ್ಷೇಮವಾಗುವುದನ್ನು ಮಾತ್ರವೇ ಹೇಳುತ್ತೇವೆ. ಅವರಿಗೆ ಸಂಬಂಧಿಸಿದಂತೆ ಇರುವ ಕೆಟ್ಟ ಚಾಳಿಗಳನ್ನು ಹೇಳುವುದಿಲ್ಲ. ಈ ಕಾರಣದಿಂದ ಇತರರನ್ನು ನಿಂದಿಸುವುದೂ ಇಲ್ಲ. ನಮಗೆ ಮೃತ್ಯುಭಯವಿಲ್ಲದಿರುವುದಕ್ಕೆ ಇದೂ ಒಂದು ಕಾರಣ.

**ಅತಿಥೀನನ್ನಪಾನೇನ ಭೃತ್ಯಾನತ್ಯಶನೇನ ಚ ।**
**ಸಮ್ಭೋಜ್ಯ ಶೇಷಮಶ್ನೀಮಸ್ತಸ್ಮಾನ್ಮೃತ್ಯುಭಯಂ ನ ನಃ ॥೨೦॥**

ಅತಿಥಿಗಳನ್ನು ಯಾವಾಗಲೂ ಉಪಚರಿಸದೇ ಕಳುಹಿಸುವುದಿಲ್ಲ. ಅನ್ನ-ಪಾನಾದಿಗಳನ್ನಿತ್ತು ಅತಿಥಿಸತ್ಕಾರವನ್ನು ಮಾಡುತ್ತೇವೆ. ಭೃತ್ಯರಿಗೂ ಯಥೇಷ್ಟವಾಗಿ ಉಣಬಡಿಸುತ್ತೇವೆ. ಉಳಿದ ವಿಘಸವನ್ನು ನಾವು ಊಟ ಮಾಡುತ್ತೇವೆ. ಈ ಕಾರಣದಿಂದ ನಮಗೆ ಮೃತ್ಯುಭಯವಿಲ್ಲ.

**ಶಾನ್ತಾ ದಾನ್ತಾಃ ಕ್ಷಮಾಶೀಲಾಸ್ತೀರ್ಥದಾನಪರಾಯಣಾಃ ।**
**ತೇಜಸ್ವಿದೇಶವಾಸಾಚ್ಚ ತಸ್ಮಾನ್ಮೃತ್ಯುಭಯಂ ನ ನಃ ।**
**ಪುಣ್ಯದೇಶನಿವಾಸಾಚ್ಚ ತಸ್ಮಾನ್ಮೃತ್ಯುಭಯಂ ನ ನಃ ॥೨೧॥**

ಸರ್ವದಾ ಸಹನಶೀಲರಾಗಿಯೂ, ಜಿತೇಂದ್ರಿಯರಾಗಿಯೂ, ಕ್ಷಮಾಶೀಲರಾಗಿಯೂ ಇರುತ್ತೇವೆ. ಯಾವಾಗಲೂ ತೀರ್ಥಯಾತ್ರೆಗಳನ್ನು ಮಾಡುತ್ತಲೂ ದಾನಮಾಡುತ್ತಲೂ ಇರುತ್ತೇವೆ. ಪವಿತ್ರವಾದ ಗಂಗಾ-ಯಮುನಾ ಮುಂತಾದ ನದಿಗಳ ತೀರಗಳಲ್ಲಿಯೂ ಮತ್ತು ತೇಜಸ್ವಿಗಳಾದ ಮಹಾತಪಸ್ವಿಗಳಿರುವ ಸ್ಥಳಗಳಲ್ಲಿಯೂ ನಾವು ವಾಸಮಾಡುತ್ತೇವೆ. ಈ ಕಾರಣದಿಂದಲೂ ನಮಗೆ ಮೃತ್ಯುವಿನ ಭಯವಿರುವುದಿಲ್ಲ.

ಹೈಹಯರೇ! ನಾನು ನಿಮಗೆ ಸಂಕ್ಷೇಪವಾಗಿ–ನಮಗೆ ಮೃತ್ಯುಭಯವಿಲ್ಲದೇ ಇರುವ ಕಾರಣವನ್ನು-ತಿಳಿಸಿದ್ದೇನೆ. ಪ್ರಸಕ್ತಸಂದರ್ಭದಲ್ಲಿ ನಿಮಗೆ ಬ್ರಾಹ್ಮಣವಧೆಯಿಂದ ಪ್ರಾಪ್ತವಾಗಬೇಕಾಗಿದ್ದ ಪಾಪವು ಸಂಭವಿಸುವುದಿಲ್ಲ. ನೀವೆಲ್ಲರೂ ನಿರ್ಭಯರಾಗಿ ನಿಮ್ಮ ದೇಶಕ್ಕೆ ಪ್ರಯಾಣಮಾಡಿರಿ." ಮಹರ್ಷಿಯ ಅಮೃತಪ್ರಾಯವಾದ ಆ ಮಾತುಗಳನ್ನು ಕೇಳಿ ಪರಮಹೃಷ್ಟರಾದ ಹೈಹಯರಾಜಮುಖ್ಯರು 'ಏವಮಸ್ತು' ಎಂದು ಪ್ರತಿವಚನವನ್ನಿತ್ತು ಮಹರ್ಷಿಗೆ ಪುನಃ ನಮಸ್ಕರಿಸಿ ತಮ್ಮ ತಮ್ಮ ದೇಶಗಳಿಗೆ ಹಿಂದಿರುಗಿದರು. ಯುಧಿಷ್ಠಿರ! ಆದುದರಿಂದ, ಮೃತ್ಯುವಿನ ಭಯವಿಲ್ಲದವನೇ ಬ್ರಾಹ್ಮಣನು. ಸತ್ಯನಿಷ್ಠೆಯಿಂದಲೂ, ಸ್ವಧರ್ಮೋಕ್ತವಾದ ಕರ್ಮಾನುಷ್ಠಾನಗಳಿಂದಲೂ ಬ್ರಾಹ್ಮಣನು ಮೃತ್ಯುವನ್ನು ಜಯಿಸುತ್ತಾನೆ. ಇದೇ ಬ್ರಾಹ್ಮಣನ ಹಿರಿಮೆಯು."

೧೮೪ನೆಯ ಅಧ್ಯಾಯವು ಮುಗಿಯಿತು.

೧೮೫ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಬ್ರಾಹ್ಮಣರ ಮಹಿಮೆಯ ವಿಷಯದಲ್ಲಿ ಅತ್ರಿಮಹರ್ಷಿಯ ಮತ್ತು ಪೃಥುವಿನ ಆಖ್ಯಾನ

ಜನಮೇಜಯ! ಮಾರ್ಕಂಡೇಯರು ಪುನಃ ಯುಧಿಷ್ಠಿರಾದಿಗಳಿಗೆ ಬ್ರಾಹ್ಮಣರ ಮಾಹಾತ್ಮ್ಯದ ವಿಷಯವಾಗಿ ಹೇಳುತ್ತಾರೆ :

"ಯುಧಿಷ್ಠಿರ ! ನೀನು ಬ್ರಾಹ್ಮಣರ ಮಹಾತ್ಮ್ಯದ ವಿಷಯವಾಗಿ ಇನ್ನೂ ಹೆಚ್ಚಿನ ವಿಷಯಗಳನ್ನು ಕೇಳಲಿಚ್ಛಿಸುವೆಯಾ? ಇನ್ನೂ ಕೆಲವು ನಿದರ್ಶನಗಳನ್ನು ಕೊಡುತ್ತೇನೆ. ಹಿಂದೆ ವೈನ್ಯನೆಂಬ ರಾಜರ್ಷಿಯೊಬ್ಬ ನಿದ್ದನು. ಅವನು ಒಮ್ಮೆ ಅಶ್ವಮೇಧಯಜ್ಞವನ್ನು ಮಾಡಲು ಉಪಕ್ರಮಿಸಿದನು. ಅತ್ರಿ ಎಂಬ ಮಹರ್ಷಿಯು ಸಾಮಾನ್ಯವಾಗಿ ಆ ರಾಜನು ಮಾಡುತ್ತಿದ್ದ ಯಜ್ಞಗಳಿಗೆ ದ್ರವ್ಯಸಂಪಾದನಾರ್ಥವಾಗಿ ಹೋಗುತ್ತಿದ್ದನು. ಆದರೆ ಕಾಲಕ್ರಮದಲ್ಲಿ ಯಜ್ಞಗಳಲ್ಲಿ ಆರ್ತ್ವಿಜ್ಯವನ್ನು ವಹಿಸಿ ಹಣಸಂಪಾದಿಸುವುದು ಬೇಡವಾಯಿತು. ಅದರಿಂದ ತಾನು ತಪಸ್ಸುಮಾಡಿ ಅರ್ಜಿಸಿದ ಫಲವೆಲ್ಲವೂ ವ್ಯಯವಾಗಿ ಹೋಗುವುದೆಂದು ಅತ್ರಿಯು ಭಾವಿಸಿದನು. (ಯಜಮಾನನು ಆರ್ತ್ವಿಜ್ಯವನ್ನು ವಹಿಸಿದವರಿಗೆ ಯಥೇಚ್ಛವಾಗಿ ದಕ್ಷಿಣೆಯನ್ನು ಕೊಡುತ್ತಾನೆ. ಆ ದಕ್ಷಿಣೆಯು ಋತ್ವಿಜನು ಅಪೇಕ್ಷಿಸಿದ್ದಕ್ಕಿಂತಲೂ ಹೆಚ್ಚಾಗಿದ್ದರೂ ಋತ್ವಿಜನು ಅನುದಿನವೂ ಮಾಡುವ ಜಪ-ತಪಾದಿಗಳ ಫಲದ ಬಹುಭಾಗವು ಯಜಮಾನನನ್ನು ಸೇರುತ್ತದೆ.) ತಾನು ಮಾಡುತ್ತಿದ್ದ ನಿತ್ಯ-ನೈಮಿತ್ತಿಕ ಕರ್ಮಗಳ ಫಲವೂ ನಾಶವಾಗಿ ಹೋಗುವುದೆಂಬ ಭಾವನೆಯಿಂದ ವೈನ್ಯನ ಯಜ್ಞದಲ್ಲಿ ಆರ್ತ್ವಿಜ್ಯವನ್ನು ವಹಿಸಲು ಇಚ್ಛಿಸದೇ ತನ್ನ ಪತ್ನೀ-ಪುತ್ರರೊಡನೆ ಹೇಳಿದನು : "ನನಗೆ ಈ ರಾಜಧಾನಿಯಲ್ಲಿ ವಾಸಮಾಡುವುದಕ್ಕಿಂತಲೂ ಅರಣ್ಯದಲ್ಲಿ ವಾಸಮಾಡುವುದೇ ಹೆಚ್ಚು ಫಲದಾಯಕವೆಂದು ಕಾಣುತ್ತದೆ. ನಾವೆಲ್ಲರೂ ಅರಣ್ಯಕ್ಕೆ ಹೋಗಿ ಅಲ್ಲಿ ಸಿಕ್ಕುವ ಗೆಡ್ಡೆ-ಗೆಣಸುಗಳಿಂದ ಜೀವನವನ್ನು ನಡೆಸುತ್ತಾ, ಸರ್ವದಾ ತಪಶ್ಚರಣೆಯಲ್ಲಿಯೇ ಕಾಲಕಳೆಯುತ್ತಾ, ನಿರುಪದ್ರವವಾದ ಹೆಚ್ಚು ಸುಖದಾಯಕವಾದ ಫಲವನ್ನು ಪಡೆಯೋಣ. (ಕ್ಷಯರಹಿತವಾದ ಮೋಕ್ಷವನ್ನು ಪಡೆಯಲು ಯತ್ನಿಸೋಣ.)" ಅದಕ್ಕುತ್ತರವಾಗಿ ಅವನ ಪ್ರಿಯಭಾರ್ಯೆಯು ಹೇಳಿದಳು : "ಪತಿದೇವನೇ! ನಮ್ಮ ಮಕ್ಕಳೆಲ್ಲರನ್ನೂ ಅರಣ್ಯಕ್ಕೆ ಕರೆದೊಯ್ಯುವ ಸಾಧ್ಯತೆಯಿಲ್ಲ. ಅವರಿಲ್ಲಿಯೇ ಇದ್ದು ವರ್ಣಾಶ್ರಮಧರ್ಮಗಳ ಪ್ರಕಾರ ಗೃಹಸ್ಥರು ಮಾಡಬೇಕಾದ ಕಾರ್ಯಗಳನ್ನು ಮಾಡಬೇಕಾಗಿದೆ. ಆದರೆ ಇವರನ್ನು ರಿಕ್ತಸ್ಥಿತಿಯಲ್ಲಿ ಬಿಟ್ಟುಹೋಗುವುದೂ ಸರಿಯಲ್ಲ. ನಾವು ಹೊರಟುಹೋದ ಮೇಲೆ ಸ್ವಲ್ಪದಿನಗಳವರೆಗಾದರೂ ಇವರು ಜೀವನವನ್ನು ನಡೆಸಲು ಅನುಕೂಲ

ಮಾಡಿಕೊಟ್ಟು ನಾವು ಕಾಡಿಗೆ ಹೋಗುವುದು ಧರ್ಮವಾಗಿದೆ. ಆದುದರಿಂದ ನೀನೀಗಲೇ ವೈನ್ಯನ ಬಳಿಗೆ ಹೋಗಿ ಐಶ್ವರ್ಯವನ್ನು ಯಾಚಿಸು. ಅಶ್ವಮೇಧಯಜ್ಞದಲ್ಲಿ ದೀಕ್ಷಿತನಾಗಿರುವ ಅವನು ನಿನ್ನ ಯಾಚನೆಯನ್ನು ಖಂಡಿತವಾಗಿಯೂ ತಿರಸ್ಕರಿಸುವುದಿಲ್ಲ. ಅವನು ಕೊಡುವ ಐಶ್ವರ್ಯವನ್ನು ತಂದು ನಿನ್ನ ಮಕ್ಕಳಿಗೂ ಮತ್ತು ನಿನ್ನನ್ನೇ ಅವಲಂಬಿಸಿರುವ ಸೇವಕರಿಗೂ ಹಂಚಿಕೊಟ್ಟು, ಅನಂತರದಲ್ಲಿ ನಿನ್ನ ಇಚ್ಛಾನುಸಾರವಾಗಿ ಹೋಗಬಹುದಾಗಿದೆ.

**ಅನಧೀತ್ಯ ದ್ವಿಜೋ ವೇದಾನನುತ್ಪಾದ್ಯ ಸುತಾನಪಿ ।**
**ಅನಿಷ್ಟ್ವಾ ವಿಧಿವದ್ಯಜ್ಞೈರ್ಮೋಕ್ಷಮಿಚ್ಛನ್ವ್ರಜತ್ಯಧಃ ॥**

ಬ್ರಾಹ್ಮಣನಾದವನು ವರ್ಣಾಶ್ರಮಧರ್ಮಗಳ ಪ್ರಕಾರ ಉಪನೀತನಾಗಿ ವೇದಾಧ್ಯಯನಮಾಡಿ, ಗೃಹಸ್ಥಾಶ್ರಮವನ್ನು ಸ್ವೀಕರಿಸಿ ಮಕ್ಕಳನ್ನು ಪಡೆದು, ವಿಧ್ಯುಕ್ತವಾಗಿ ಯಜ್ಞ-ಯಾಗಾದಿಗಳನ್ನು ಮಾಡಿ ಅನಂತರದಲ್ಲಿ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ಕಾಡಿಗೆ ಹೋಗಿ, ಅಲ್ಲಿ ನಿಯಮಾನುಷ್ಠಾನಗಳಿಂದ ಅನೇಕವರ್ಷಗಳ ಪರ್ಯಂತವಾಗಿ ಕಳೆದು ಆತ್ಮನಲ್ಲಿಯೇ ಮನಸ್ಸು ನ್ಯಾಸಹೊಂದಿದನಂತರ ಸಂನ್ಯಾಸಾಶ್ರಮವನ್ನು ಸ್ವೀಕರಿಸುವುದು ವಿಹಿತವಾಗಿದೆ. ಇದಕ್ಕೆ ವಿರುದ್ಧವಾಗಿ–ಬ್ರಾಹ್ಮಣನಿಗೆ ಹೇಳಲ್ಪಟ್ಟ ಷಟ್ಕರ್ಮಗಳನ್ನು ಮಾಡದೇ ಮೋಕ್ಷವನ್ನು ಪಡೆಯುವೆನೆಂದು ಹೊರಟು ಅದಕ್ಕಾಗಿ ಯತ್ನಿಸುವವನು ಇಹ-ಪರಗಳೆರಡೂ ಇಲ್ಲದೇ ಅಧಃಪತನಕ್ಕೆ ಕಾರಣನಾಗುತ್ತಾನೆ. ಇದು ಶ್ರುತಿ-ಸ್ಮೃತಿಗಳನ್ನು ಸಂಪೂರ್ಣವಾಗಿ ತಿಳಿದಿರುವ ಧರ್ಮವಿದರ ಅಭಿಪ್ರಾಯವಾಗಿರುತ್ತದೆ.

ಪರಮಧಾರ್ಮಿಕಳಾದ ಭಾರ್ಯೆಯು ಹೇಳಿದ ಮಾತುಗಳನ್ನು ಕೇಳಿ ಅತ್ರಿಯು ಹೇಳಿದನು : "ಮಹಾಭಾಗಳೇ! ನೀನು ಹೇಳಿದ ಮಾತುಗಳು ಧರ್ಮಸಮ್ಮತವಾಗಿವೆ. ವೈನ್ಯನೂ ಧರ್ಮಾರ್ಥಗಳಿಂದ ಯುಕ್ತನಾದನು ; ಸತ್ಯಸಂಧನು ; ವ್ರತನಿಷ್ಠನು. ಆದರೆ ಅವನ ಸಮೀಪದಲ್ಲಿರುವ ಅನೇಕ ಬ್ರಾಹ್ಮಣರು ನನ್ನನ್ನು ದ್ವೇಷಿಸುತ್ತಾರೆ. ಈ ವಿಷಯವನ್ನು ನನಗೆ ಗೌತಮನೆಂಬ ಬ್ರಾಹ್ಮಣನೇ ಹೇಳಿದನು. ಅವರ ಸ್ವಭಾವವು ಹೇಗಿರುವುದೆಂದರೆ :

ನಾನೇನಾದರೂ ರಾಜನಿಗೆ ಶುಭಪ್ರದವಾದ ಧರ್ಮಕಾಮಾರ್ಥಗಳ ಪ್ರಾಪಕವಾದ ಮಾತುಗಳನ್ನಾಡಿದೆನೆಂದರೆ–ಅವರು ನನ್ನ ಮಾತಿಗೆ ವಿರುದ್ಧಾರ್ಥ ಮಾಡಿ ನನ್ನನ್ನು ಅವಮಾನಗೊಳಿಸಲೆತ್ನಿಸುವರು. ಈ ಕಾರಣದಿಂದ ನಾನಲ್ಲಿಗೆ ಹೋಗಲು ಹಿಂಜರಿಯುತ್ತಿದ್ದೇನೆ. ಆದರೆ ಈಗ ಪ್ರಾಜ್ಞಳಾದ ನೀನು ಹೇಳುವುದೂ ನನಗೆ ಧರ್ಮಸಮ್ಮತವಾಗಿ ಕಾಣುತ್ತಿದೆ. ಆದುದರಿಂದ ನಿನ್ನ ಮಾತಿನಂತೆ ನಾನೀಗಲೇ ವೈನ್ಯನ ಬಳಿಗೆ ಹೋಗುತ್ತೇನೆ. ಅವನು ನನಗೆ ಅಸಂಖ್ಯಾತವಾದ ಹಸುಗಳನ್ನೂ–ಯಥೇಚ್ಛವಾದ ಐಶ್ವರ್ಯವನ್ನೂ ಕೊಡುತ್ತಾನೆಂಬುದರಲ್ಲಿ ಸಂಶಯವಿಲ್ಲ."

ಅತ್ರಿಯು ಹೀಗೆ ತನ್ನ ಪತ್ನಿಗೆ ಹೇಳಿ ವೈನ್ಯನ ರಾಜಧಾನಿಗೆ ಪ್ರಯಾಣಮಾಡಿದನು. ಕೆಲವು ದಿನಗಳ ಪ್ರಯಾಣಾನಂತರದಲ್ಲಿ ಅತ್ರಿಯು ವೈನ್ಯನ ಯಜ್ಞಮಂಟಪವನ್ನು ಸೇರಿ ಮಂಗಳಯುಕ್ತವಾದ ಅನೇಕ ಶುಭಾಶಿಷಗಳಿಂದ ರಾಜನನ್ನು ಸಂತೃಪ್ತಿಗೊಳಿಸುವ ಆಶಯದಿಂದ ಹೇಳಿದನು.

**ರಾಜನ್ಧನ್ಯಸ್ತ್ವಮೀಶಶ್ಚ ಭುವಿ ತ್ವಂ ಪ್ರಥಮೋ ನೃಪಃ ।**
**ಸ್ತುವನ್ತಿ ತ್ವಾಂ ಮುನಿಗಣಾಸ್ತ್ವದನ್ಯೋ ನಾಸ್ತಿ ಧರ್ಮವಿತ್ ॥೧೩॥**

"ಮಹಾರಾಜ! ನೀನೇ ಧನ್ಯನು. ನೀನು ಈ ಪ್ರಪಂಚಕ್ಕೇ ಈಶ್ವರಪ್ರಾಯನಾಗಿರುವೆ. ಈ ಭೂಮಿಗೇ ಮೊಟ್ಟಮೊದಲನೆಯ ರಾಜನೆಂದೂ, ಪ್ರಜೆಗಳ ಸಂರಕ್ಷಕನೆಂದೂ ಪ್ರಸಿದ್ಧನಾಗಿರುವ ನಿನ್ನನ್ನು ಋಷಿ-ಮಹರ್ಷಿಗಳೂ ನಾನಾವಿಧವಾಗಿ ಸ್ತೋತ್ರಮಾಡುವರು. ಇಂತಹ ಪರಮಧಾರ್ಮಿಕನಾದ ನಿನಗೆ ಮಂಗಳವಾಗಲಿ." ಅತ್ರಿಯ ಮಾತುಗಳನ್ನು ಕೇಳಿದಕೂಡಲೇ ರಾಜನ ಸಮೀಪದಲ್ಲಿಯೇ ಉಪಸ್ಥಿತನಾಗಿದ್ದ ಗೌತಮನು ಅತ್ರಿಯನ್ನು ಮೂದಲಿಸುತ್ತಾ ಹೇಳಿದನು :

**ಮೈವಮತ್ರೇ ಪುನರ್ಬ್ರೂಯಾನ್ನ ತೇ ಪ್ರಜ್ಞಾ ಸಮಾಹಿತಾ ।**
**ಅತ್ರ ನಃ ಪ್ರಥಮಂ ಸ್ಥಾತಾ ಮಹೇನ್ದ್ರೋ ವೈ ಪ್ರಜಾಪತಿಃ ॥೧೫॥**

"ಅತ್ರಿಮುನಿಯೇ! ನೀನು ಇಂತಹ ಅಯುಕ್ತವಾದ ಮಾತುಗಳನ್ನು ಮುಂದೆಂದೂ ಹೇಳಬೇಡ. ಇಲ್ಲಿಗೆ ಸಾಕುಮಾಡು. ನಿನ್ನ ಜ್ಞಾನವೂ ಸ್ವಲ್ಪ

ಮಸುಕಾಗಿರುವಂತೆ ಕಾಣುತ್ತಿದೆ. ನಮ್ಮೆಲ್ಲರಿಗೂ, ಈ ಮೂರು ಲೋಕಗಳಿಗೂ ಮಹೇಂದ್ರನೊಬ್ಬನೇ ಸಂರಕ್ಷಕನು. ಅವನೊಬ್ಬನೇ ಮೂರು ಲೋಕಗಳಿಗೂ ಚಕ್ರವರ್ತಿಯು. ವೇದ-ವೇದಾಂಗಪಾರಂಗತನಾದ ನೀನು ಈ ವಿಷಯವನ್ನು ತಿಳಿದೂ ಹೀಗೆ ಮಾಡನಾಡಬಹುದೇ?"

ಗೌತಮನಾಡಿದ ಮಾತುಗಳನ್ನು ಕೇಳಿ ಅತ್ರಿಯೂ ಸುಮ್ಮನಿರಲಿಲ್ಲ. ಯಥಾಯೋಗ್ಯವಾಗಿಯೇ ಉತ್ತರವನ್ನಿತ್ತನು :

**ಅಯಮೇವ ವಿಧಾತಾ ಹಿ ಯಥೈವೇನ್ದ್ರಃ ಪ್ರಜಾಪತಿಃ ।**
**ತ್ವಮೇವ ಮುಹ್ಯಸೇ ಮೋಹಾನ್ನ ಪ್ರಜ್ಞಾನಂ ತವಾಸ್ತಿ ಹ ॥೧೬॥**

"ಗೌತಮನೇ! ನನ್ನ ಪ್ರಾಜ್ಞತ್ವವನ್ನು ಸಂಶಯಿಸುವ ಕಾರಣವಿಲ್ಲ. ನಾನು ಯಾವ ಕಾರಣದಿಂದಲೂ ಪ್ರಜ್ಞಾಹೀನನಾಗುವುದಿಲ್ಲ. ನಿನ್ನೀ ಮಾತುಗಳನ್ನು ಕೇಳಿದನಂತರ ನೀನೇ ಪ್ರಜ್ಞಾಹೀನನಾಗಿರುವೆಯೆಂದು ನಾನು ನಿರ್ಧರಿಸಬೇಕಾಗಿದೆ. ಇಂದ್ರನು ಯಾವ ರೀತಿಯಲ್ಲಿ ಭುವನತ್ರಯಗಳಿಗೂ ರಾಜನಾಗಿರುವನೋ–ಅದೇ ರೀತಿಯಲ್ಲಿ ಈ ವೈನ್ಯರಾಜನೂ ರಾಜನಾಗಿರುವನು ಮತ್ತು ಪ್ರಜೆಗಳ ಸುಖ-ಕಷ್ಟಗಳಿಗೆ ಕಾರಣಭೂತನಾಗಿರುವನು. ರಾಜನು ಭೂಲೋಕಕ್ಕೆ ಇಂದ್ರನ ಪ್ರತಿನಿಧಿಯೆಂಬ ಧರ್ಮಸೂಕ್ಷ್ಮವನ್ನು ತಿಳಿಯದೇ ನೀನು ಮಾತನಾಡುತ್ತಿರುವೆ."

(ಪಾರಲೌಕಿಕಸುಖವನ್ನು ಅಥವಾ ಉತ್ತಮಲೋಕಗಳನ್ನು ಪಡೆಯಲು ಇಂದ್ರನ ಅನುಗ್ರಹವು ಕಾರಣವಾಗುವುದೇ ಹೊರತು ರಾಜನಿಂದ ಆಗಲಾರದೆಂಬುದು ಗೌತಮನ ಅಭಿಪ್ರಾಯ. ಈ ಲೋಕದಲ್ಲಿ ಜೀವಿಸಿದ್ದಾಗ ಇಂದ್ರನ ಪ್ರೀತ್ಯರ್ಥವಾಗಿ ಯಜ್ಞ-ಯಾಗಾದಿಗಳನ್ನು ಮಾಡಲು, ತಪಸ್ಸನ್ನು ಮಾಡಲು ರಾಜನ ರಕ್ಷಣೆ ಮತ್ತು ಆಶ್ರಯಗಳು ಅತ್ಯಾವಶ್ಯಕವೆಂಬುದು ಅತ್ರಿಯ ಅಭಿಪ್ರಾಯ.) ಪರಲೋಕಪ್ರಾಪ್ತಿಯನ್ನೇ ಪ್ರಧಾನವನ್ನಾಗಿಟ್ಟುಕೊಂಡಿದ್ದ ಗೌತಮನು ಪುನಃ ಅತ್ರಿಗೆ ಹೇಳಿದನು :

**ಜಾನಾಮಿ ನಾಹಂ ಮುಹ್ಯಾಮಿ ತ್ವಮೇವಾತ್ರ ವಿಮುಹ್ಯಸೇ ।**
**ಸ್ತೌಷಿ ತ್ವಂ ದರ್ಶನಪ್ರೇಪ್ಸೂ ರಾಜಾನಂ ಜನಸಂಸದಿ ॥೧೭॥**

**ನ ವೇತ್ಥ ಪರಮಂ ಧರ್ಮಂ ನ ಚಾವೈಷಿ ಪ್ರಯೋಜನಮ್ ।**
**ಬಾಲಸ್ತ್ವಮಸಿ ಮೂಢಶ್ಚ ವೃದ್ಧಃ ಕೇನಾಪಿ ಹೇತುನಾ ॥೧೮॥**

"ಅತ್ರಿಯೇ! ನಾನು ಖಂಡಿತವಾಗಿಯೂ ಮೋಹವಶನಾಗಿಲ್ಲವೆಂಬುದನ್ನು ಖಚಿತವಾಗಿ ತಿಳಿದುಕೊಂಡಿರುವೆನು. ನೀನು ಮಾತ್ರ ಶ್ರುತಿ-ಸ್ಮೃತಿಗಳ ರಹಸ್ಯಗಳನ್ನು ಪೂರ್ಣವಾಗಿ ತಿಳಿದುಕೊಳ್ಳದೇ ಇರುವುದರಿಂದ ಮೋಹಗೊಂಡು ಮಾತನಾಡುತ್ತಿರುವೆ. ರಾಜನನ್ನು ಕಾಣಲು ಅಥವಾ ರಾಜನಿಂದ ಸಂಪತ್ತನ್ನು ಪಡೆಯಲು ಈ ಸಜ್ಜನರ ಸಭೆಯಲ್ಲಿ ನೀನು ರಾಜನನ್ನು ಹೊಗಳುತ್ತಿರುವೆ. ಬ್ರಾಹ್ಮಣನಾದವನಿಗೆ ಶ್ರೇಷ್ಠವಾದ ಧರ್ಮವು ಯಾವುದೆಂಬ ವಿಷಯವೂ ನಿನಗೆ ತಿಳಿಯದು. ತಿಳಿದುಕೊಳ್ಳಲೂ ನೀನೂ ಪ್ರಯತ್ನಪಡುತ್ತಿಲ್ಲ. ಮೂಢನಾದ ನೀನು ಕೇವಲ ಬಾಲಕನಂತೆ ವರ್ತಿಸುತ್ತಿರುವೆ. ಆದರೆ ವಯಸ್ಸಿನಿಂದ ಮಾತ್ರ ನೀನು ವೃದ್ಧನಾಗಿರುವೆ."

ಅತ್ರಿ-ಗೌತಮರಿಬ್ಬರೂ ವೈನ್ಯನ ಯಜ್ಞದಲ್ಲಿ ಭಾಗವಹಿಸಿದ್ದ ಋಷಿಗಳ ಮುಂದೆ ವಾದಮಾಡುತ್ತಿರುವಾಗ–ಋತ್ವಿಜರು ತಮ್ಮ-ತಮ್ಮಲ್ಲಿಯೇ ಮಾತನಾಡಿಕೊಂಡರು : "ವಾದಮಾಡುತ್ತಿರುವ ಈ ಇಬ್ಬರ ಕುಲ-ಗೋತ್ರಗಳೇನು? ಇವರಿಗೆ ಯಜ್ಞಮಂಟಪದೊಳಕ್ಕೆ ಪ್ರವೇಶಾವಕಾಶವನ್ನು ಕೊಟ್ಟವರು ಯಾರು? ಬಹಳ ಗಟ್ಟಿಯಾಗಿ ಕೂಗಾಡುತ್ತಿರುವ ಇವರು ಯಾವ ವಿಷಯವನ್ನು ಕುರಿತು ವಾದಮಾಡುತ್ತಿದ್ದಾರೆ?"

ಈ ವಿಷಯವನ್ನು ಸರಿಯಾಗಿ ತಿಳಿಯುವ ಸಲುವಾಗಿ ಋತ್ವಿಜರ ಮಧ್ಯದಿಂದ ಧರ್ಮಾತ್ಮನಾದ, ಸರ್ವಧರ್ಮಗಳನ್ನೂ ಕೂಲಂಕುಷವಾಗಿ ತಿಳಿದಿದ್ದ ಕಾಶ್ಯಪಮಹರ್ಷಿಯು ಎದ್ದು ವಾದಮಾಡುತ್ತಿರುವ ವಿಷಯವೇನೆಂದು ಇಬ್ಬರನ್ನೂ ಕೇಳಿದನು. ಅದಕ್ಕೆ ಉತ್ತರವಾಗಿ ಗೌತಮನು ಅಲ್ಲಿ ನೆರೆದಿದ್ದ ಮಹರ್ಷಿಗಳೆಲ್ಲರನ್ನೂ ಸಂಬೋಧಿಸಿ ಹೇಳತೊಡಗಿದನು :

**ವೈನ್ಯಂ ವಿಧಾತೇತ್ಯಾಹಾತ್ರಿರತ್ರ ನೌ ಸಂಶಯೋ ಮಹಾನ್ ॥೨೩॥**

"ಇಲ್ಲಿ ನೆರೆದಿರುವ ಬ್ರಾಹ್ಮಣೋತ್ತಮರೇ! ನಮ್ಮ ವಾದದ ವಿಷಯವೇನೆಂಬುದನ್ನು ಸಾವಧಾನವಾಗಿ ಕೇಳಿರಿ. ಈ ಅತ್ರಿಯು ವೈನ್ಯರಾಜನನ್ನೇ 'ವಿಧಾತಾ' 'ಬ್ರಹ್ಮಾ' 'ಇಂದ್ರ' ಎಂದು ಕರೆಯುತ್ತಿದ್ದಾನೆ. ನಮಗೆ

ಅದೃಷ್ಟದಾಯಕನು ವೈನ್ಯರಾಜನೆಂದು ಹೇಳುತ್ತಿರುವನು. ಈ ವಿಷಯದಲ್ಲಿ ನಮ್ಮಿಬ್ಬರಲ್ಲೂ ಸಂಶಯವಿದೆ. ಸಂಶಯನಿವಾರಣೆಯನ್ನು ಮಾಡಿರಿ."

ಯುಧಿಷ್ಠಿರ! ಗೌತಮನ ಮಾತುಗಳನ್ನು ಕೇಳಿದೊಡನೆಯೇ ಋಷಿಗಳೆಲ್ಲರೂ ಸಂಶಯನಿವಾರಣೆಗಾಗಿ ಧರ್ಮಜ್ಞನಾದ ಸನತ್ಕುಮಾರನ ಬಳಿಗೆ ತೆರಳಿದರು. ಅತ್ರಿಯು ತನ್ನ ವಾದವನ್ನೂ,ಗೌತಮನು ತನ್ನ ಪ್ರತಿವಾದವನ್ನೂ ಮಹಾಮಹಿಮನಾದ ಸನತ್ಕುಮಾರನ ಮುಂದೆ ಮಂಡಿಸಿದರು. ಸನತ್ಕುಮಾರರು ಇಬ್ಬರ ವಾದ-ವಿವಾದಗಳನ್ನೂ ಶಾಂತಮನಸ್ಕನಾಗಿ ಕೇಳಿದ ನಂತರ ತನ್ನ ತೀರ್ಪನ್ನು ಈ ರೀತಿಯಾಗಿ ವಿವರಿಸಿ ಹೇಳಿದನು :

**ಬ್ರಹ್ಮಕ್ಷತ್ರೇಣ ಸಹಿತಂ ಕ್ಷತ್ರಂ ಚ ಬ್ರಹ್ಮಣಾ ಸಹ ।**
**ಸಂಯುಕ್ತೌ ದಹತಃ ಶತ್ರೂನ್ವನಾನೀವಾಗ್ನಿಮಾರುತೌ ॥೨೫॥**

**ರಾಜಾ ವೈ ಪ್ರಥಿತೋ ಧರ್ಮಃ ಪ್ರಜಾನಾಂ ಪತಿರೇವ ಚ ।**
**ಸ ಏವ ಶಕ್ರಃ ಶುಕ್ರಶ್ಚ ಸ ಧಾತಾ ಚ ಬೃಹಸ್ಪತಿಃ ॥೨೬॥**

"ಯಜ್ಞೇಶ್ವರನು ವಾಯುವಿನ ಸಹಾಯದಿಂದ ದೊಡ್ಡ-ದೊಡ್ಡ ಕಾಡುಗಳನ್ನೇ ಸುಟ್ಟುಹಾಕುವ ರೀತಿಯಲ್ಲಿ ಬ್ರಹ್ಮ-ಕ್ಷತ್ರತೇಜಸ್ಸುಗಳೆರಡೂ ಪರಸ್ಪರ ಸೇರಿದರೆ-ದುಷ್ಟಶಿಕ್ಷಣ, ತನ್ಮೂಲಕ ಶಿಷ್ಟಪರಿಪಾಲನೆ, ಲೋಕದಲ್ಲಿ ಸುಖ ಶಾಂತಿಗಳು, ಕಾಲ-ಕಾಲಕ್ಕೆ ಮಳೆ-ಬೆಳೆಗಳು ಸಾಧ್ಯವಾಗುವುದೇ ಹೊರತು ಈ ಎರಡು ತೇಜಸ್ಸುಗಳಲ್ಲಿ ಯಾವುದೊಂದೂ ಸ್ವಾತಂತ್ರ್ಯದಿಂದ ಕಾರ್ಯ ಮಾಡಲಾರವು. ಹಾಗೇನಾದರೂ ಮಾಡಲು ಹೊರಟರೆ ಕಾಲಾಂತರದಲ್ಲಿ ಎರಡು ಮಹಾತೇಜಸ್ಸುಗಳೂ ನಾಶವಾಗಿ ಹೋಗುವುವು.

ಕ್ಷತ್ರಿಯನು ನಿಶ್ಚಯವಾಗಿಯೂ ಧರ್ಮಸಂಸ್ಥಾಪನೆಗಾಗಿಯೇ ಈ ಪೃಥ್ವಿಯಲ್ಲಿ ಅವತರಿಸುತ್ತಾನೆ. ಬ್ರಹ್ಮತೇಜಸ್ಸಿನ ಆಶ್ರಯವನ್ನು ಹೊಂದಿದ ಕ್ಷತ್ರಿಯನು ಪ್ರಜೆಗಳಿಗೆ ಒಡೆಯನಾಗುತ್ತಾನೆ. ಪ್ರಜೆಗಳನ್ನು ರಕ್ಷಿಸುವ ಸಾಮರ್ಥ್ಯವುಳ್ಳವನಾಗಿರುವುದರಿಂದ ಇಂದ್ರನಿಗೆ ಸಮಾನನೆನಿಸುತ್ತಾನೆ. ಸಕಲ ರಾಜನೀತಿಯನ್ನೂ ಅವನು ತಿಳಿದಿರುವುದರಿಂದ ಶುಕ್ರನಿಗೆ ಸಮಾನನೆನಿಸುತ್ತಾನೆ. ಹಿತೋಪದೇಶಮಾಡುವ ಸಾಮರ್ಥ್ಯವೂ ಅವನಿಗೆ ಇರುವುದರಿಂದ ರಾಜನು ಬೃಹಸ್ಪತಿಗೂ ಸಮಾನನೆನಿಸುತ್ತಾನೆ. ಈ ಕಾರಣದಿಂದಲೇ ರಾಜ

ನನ್ನು ಪ್ರಜೆಗಳ ಜನಕ ಅಥವಾ ಪ್ರಜೆಗಳ ಅದೃಷ್ಟಕ್ಕೆ ಕಾರಣನೆಂದು ಹೇಳುವುದೂ ಸಾಧುವಾಗಿಯೇ ಇದೆ.

**ಪ್ರಜಾಪತಿರ್ವಿರಾಟ್ಸಮ್ರಾಟ್ ಕ್ಷತ್ರಿಯೋ ಭೂಪತಿರ್ನೃಪಃ ।**
**ಯ ಏಭಿಃ ಸ್ತೂಯತೇ ಶಬ್ದೈಃ ಕಸ್ತಂ ನಾರ್ಚಿತುಮರ್ಹತಿ ॥೨೭॥**

**ಪುರಾಯೋನಿರ್ಯುಧಾಜಿಚ್ಚ ಅಭಿಯಾ ಮುದಿತೋ ಭವಃ ।**
**ಸ್ವರ್ಣೇತಾ ಸಹಜಿದ್ಬಭ್ರುರಿತಿ ರಾಜಾಭಿಧೀಯತೇ ॥೨೮॥**

**ಸತ್ಯಯೋನಿಃ ಪುರಾವಿಚ್ಚ ಸತ್ಯಧರ್ಮಪ್ರವರ್ತಕಃ ।**
**ಅಧರ್ಮಾದೃಷಯೋ ಭೀತಾ ಬಲಂ ಕ್ಷತ್ರೇ ಸಮಾದಧನ್ ॥೨೯॥**

ಆದುದರಿಂದಲೇ ರಾಜನನ್ನು ಪ್ರಜಾಪತಿ, ವಿರಾಟ್, ಸಮ್ರಾಟ್, ಕ್ಷತ್ರಿಯ, ಭೂಪತಿ, ನೃಪ–ಮುಂತಾದ ಶಬ್ದಗಳಿಂದಲೂ ಗೌರವಿಸುತ್ತಾರೆ. ಇಂತಹ ರಾಜನು ಸ್ತೋತ್ರಾರ್ಹನಲ್ಲವೆಂದು ಯಾರು ತಾನೇ ಹೇಳಿಯಾರು? ಪ್ರಜೆಗಳು ಧರ್ಮಶೀಲರಾಗಬೇಕಾದರೆ ರಾಜನೇ ಕಾರಣ. ಆದುದರಿಂದ ರಾಜನನ್ನು ಧರ್ಮಮೂಲನೆಂದೂ ಹೇಳುತ್ತಾರೆ. ಯುದ್ಧಗಳಲ್ಲಿ ಶತ್ರುಗಳನ್ನು ವಿನಾಶಮಾಡುವುದರಿಂದ ಅವನನ್ನು ಉಪದ್ರವನಾಶಕನೆಂದೂ ಹೇಳುತ್ತಾರೆ. ರಾಜನು ಯಾವಾಗಲೂ ನಿರ್ಭಯನಾಗಿಯೂ–ಸದಾ ಹರ್ಷಿತನಾಗಿಯೂ ಇರುತ್ತಾನೆ. ಆದುದರಿಂದಲೇ ಅವನು ಈಶ್ವರನಿಗೆ ಸಮಾನನೆನಿಸಿದ್ದಾನೆ. ಪ್ರಜೆಗಳಿಗೆ ಧರ್ಮಮಾರ್ಗವನ್ನು ನಿರ್ದೇಶನಮಾಡಿ ಅವರನ್ನು ಧರ್ಮಮಾರ್ಗದಲ್ಲಿ ಒಯ್ದು ಕಡೆಗೆ ಅವರು ಉತ್ತಮಲೋಕಗಳನ್ನು ಪಡೆಯಲೂ ರಾಜನೇ ಕಾರಣನಾಗುತ್ತಾನೆ. ರಾಜನು ಸತ್ಯಕ್ಕೆ ಮೂಲ ಸ್ಥಾನನಾಗಿರುವನು. ಪ್ರಜೆಗಳು ಸತ್ಯಸಂಧರಾಗಿರಬೇಕಾದರೆ ರಾಜನೇ ಮೂಲಕಾರಣನಾಗುತ್ತಾನೆ. ಪೂರ್ವಾಪರಗಳನ್ನೂ ರಾಜನು ತಿಳಿದವನಾಗಿರುತ್ತಾನೆ. ಸತ್ಯ-ಧರ್ಮಪ್ರವರ್ತಕನಾಗಿರುತ್ತಾನೆ. ಋಷಿ-ಮಹರ್ಷಿಗಳು ಅಧರ್ಮದ ಪ್ರಾದುರ್ಭಾವವುಂಟಾದೀತೆಂದು ಭಯಪಟ್ಟು ತಮ್ಮ ಬಲವನ್ನು

ಕ್ಷತ್ರಿಯನಲ್ಲಿ ನಿಕ್ಷೇಪಿಸಿರುತ್ತಾರೆ. (ಆದುದರಿಂದಲೇ ಬ್ರಹ್ಮ-ಕ್ಷತ್ರಗಳ ತೇಜಸ್ಸುಗಳು ಒಂದಾಗಿ ಭೂಮಿಯಲ್ಲಿ ಧರ್ಮಸ್ಥಾಪನೆಯಾಯಿತು.)

**ಆದಿತ್ಯೋ ದಿವಿ ದೇವೇಷು ತಮೋ ನುದತಿ ತೇಜಸಾ ।**
**ತಥೈವ ನೃಪತಿರ್ಭೂಮಾವಧರ್ಮಾನ್ನುದತೇ ಭೃಶಮ್ ॥೩೦॥**

**ತತೋ ರಾಜ್ಞಃ ಪ್ರಧಾನತ್ವಂ ಶಾಸ್ತ್ರಪ್ರಾಮಾಣ್ಯದರ್ಶನಾತ್ ।**
**ಉತ್ತರಃ ಸಿದ್ಧ್ಯತೇ ಪಕ್ಷೋ ಯೇನ ರಾಜೇತಿ ಭಾಷಿತಮ್ ॥೩೧॥**

ದೇವತೆಗಳಲ್ಲಿ ಒಬ್ಬನಾದ ಸೂರ್ಯನು ಯಾವ ರೀತಿಯಲ್ಲಿ ತನ್ನ ತೇಜಸ್ಸಿನಿಂದ ಪ್ರಪಂಚದ ಕತ್ತಲೆಯನ್ನು ನಿರ್ಮೂಲನಗೊಳಿಸುವನೋ– ಅದೇ ರೀತಿಯಲ್ಲಿ ರಾಜನು ಈ ಭೂಮಿಯಲ್ಲಿ ಅಧರ್ಮವನ್ನು ನಿರ್ಮೂಲ ಗೊಳಿಸಲು ಸಮರ್ಥನಾಗಿರುತ್ತಾನೆ. ರಾಜನು ಪ್ರಧಾನನೆಂಬುದಕ್ಕೆ, ಇಂದ್ರನಿಗೆ ಸಮಾನನೆಂಬುದಕ್ಕೆ ಮತ್ತು ಪ್ರಜೆಗಳ ಅದೃಷ್ಟದಾಯಕನೆಂಬುದಕ್ಕೆ ಶಾಸ್ತ್ರಪ್ರಾಮಾಣ್ಯವಿದೆ. ಆದುದರಿಂದ ರಾಜನನ್ನು ಹೊಗಳಿರುವ ಪಕ್ಷವು ಸಾಧುವಾದುದೆಂದು ನನ್ನ ಉತ್ತರವಾಗಿದೆ."

ಯುಧಿಷ್ಠಿರ! ಸನತ್ಕುಮಾರನ ತೀರ್ಪನ್ನು ಅಂಗೀಕರಿಸಿ ಎಲ್ಲ ಋತ್ವಿಜರೂ ರಾಜನ ಬಳಿಗೆ ಬಂದು ವೈನ್ಯನಿಗೆ ಎಲ್ಲವನ್ನೂ ಸವಿಸ್ತರವಾಗಿ ಹೇಳಿದರು. ಅತ್ರಿಯ ವಿಷಯದಲ್ಲಿ ರಾಜನು ಪರಮಪ್ರೀತನಾದನು. ಅಂತೆಯೇ ಅತ್ರಿಯನ್ನು ಕುರಿತು ಹೇಳಿದನು: "ಮಹರ್ಷಿಗಳೇ! ನೀವು ನನ್ನನ್ನು ಮಾನವಶ್ರೇಷ್ಠನೆಂದೂ, ದೇವತೆಗಳಿಗೆ ಸಮಾನನೆಂದೂ ಹೇಳಿದಿರಲ್ಲವೇ? ಇದರಿಂದ ನೀವು ಈ ಪ್ರಪಂಚದಲ್ಲಿ ರಾಜತ್ವದ ಮಹತ್ತ್ವವನ್ನು ಪ್ರತಿಪಾದಿಸಿದಂತಾಯಿತು. ಇದರಿಂದ ನಾನು ಸುಪ್ರೀತನಾಗಿದ್ದೇನೆ. ನಿಮಗೆ ಬೇಕಾದ ಸಮಸ್ತವಾದ ಐಶ್ವರ್ಯಗಳನ್ನೂ ಕೊಡಲಿಚ್ಛಿಸಿದ್ದೇನೆ.

ನಾನು ನಿಮಗೆ ಹತ್ತುಕೋಟಿ ಸುವರ್ಣನಾಣ್ಯಗಳನ್ನೂ, ಹತ್ತುಭಾರ ಸುವರ್ಣವನ್ನೂ ಕೊಡುತ್ತೇನೆ. (೨೦೦೦ ಪಲಗಳ ತೂಕಕ್ಕೆ ಒಂದು ಭಾರವೆಂದು ಹೆಸರು.) ನೀವು ಸರ್ವಜ್ಞರೆಂಬುದು ನನ್ನ ಅಭಿಮತವಾಗಿದೆ. ವೈನ್ಯನು ಹೀಗೆ ಹೇಳಿ ಹೇರಳವಾದ ಐಶ್ವರ್ಯವನ್ನು ಅತ್ರಿಗೆ ದಾನವಾಗಿ ಕೊಟ್ಟನು. ಅತ್ರಿಯೂ ಸಹ ನ್ಯಾಯವಾಗಿ ಪ್ರಾಪ್ತವಾದ ಆ ಐಶ್ವರ್ಯವನ್ನೂ

ಮತ್ತು ರಾಜನಿತ್ತ ಸತ್ಕಾರವನ್ನೂ ಸ್ವೀಕರಿಸಿದವನಾಗಿ ತನ್ನ ಮನೆಗೆ ಹಿಂದಿರುಗಿದನು. ಹಿಂದೆ ತನ್ನ ಪತ್ನಿಯು ಹೇಳಿದ್ದ ರೀತಿಯಲ್ಲಿ ತನ್ನ ಮಕ್ಕಳಿಗೂ ಮತ್ತು ತನ್ನ ಸೇವಕರಿಗೂ ಅತುಲೈಶ್ವರ್ಯವನ್ನೂ ಹಂಚಿಕೊಟ್ಟು ಜಿತೇಂದ್ರಿಯನಾದ ಅತ್ರಿಯು ತಪಶ್ಚರಣೆಮಾಡಲು ಪತ್ನಿಯೊಡನೆ ಕಾಡಿಗೆ ಹೊರಟು ಹೋದನು."

ಗಲಆನೆಯ ಅಧ್ಯಾಯವು ಮುಗಿಯಿತು.

೧೮೬ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಪರ್ವ (ಮುಂದುವರಿದಿದೆ.)

## ತಾರ್ಕ್ಷ್ಯಮುನಿ ಮತ್ತು ಸರಸ್ವತೀದೇವಿಯರ ಸಂವಾದ

ಮಾರ್ಕಂಡೇಯರು ಪ್ರವಚನವನ್ನು ಮುಂದುವರಿಸಿ ಯುಧಿಷ್ಠಿರನಿಗೆ ಹೇಳುತ್ತಾರೆ :

"ಯುಧಿಷ್ಠಿರ! ತಾರ್ಕ್ಷ್ಯಮಹರ್ಷಿಯಿಂದ ಪ್ರಾರ್ಥಿತಳಾದ ಸರಸ್ವತಿಯು ಧರ್ಮದ ವಿಷಯವಾಗಿ ಏನು ಹೇಳಿದಳೆಂಬುದನ್ನು ಹೇಳುವೆನು, ಕೇಳು. ಒಮ್ಮೆ ತಾರ್ಕ್ಷ್ಯಮಹರ್ಷಿಯು ಸರಸ್ವತೀದೇವಿಯನ್ನು ಪ್ರಶ್ನಿಸಿದನು :

**ಕಿಂ ನು ಶ್ರೇಯಃ ಪುರುಷಸ್ಯೇಹ ಭದ್ರೇ**
**ಕಥಂ ಕುರ್ವನ್ನ ಚ್ಯವತೇ ಸ್ವಧರ್ಮಾತ್ ।**
**ಆಚಕ್ಷ್ವ ಮೇ ಚಾರುಸರ್ವಾಙ್ಗಿ ಕುರ್ಯಾಂ**
**ತ್ವಯಾ ಶಿಷ್ಟೋನ ಚ್ಯವೇಯಂ ಸ್ವಧರ್ಮಾತ್ ॥೨॥**

**ಕಥಂ ವಾಗ್ನಿಂ ಜುಹುಯಾಂ ಪೂಜಯೇ ವಾ**
**ಕಸ್ಮಿನ್ಕಾಲೇ ಕೇನ ಧರ್ಮೋನ ನಶ್ಯೇತ್ ।**
**ಏತತ್ಸರ್ವಂ ಸುಭಗೇ ಪ್ರಬ್ರವೀಹಿ**
**ಯಥಾ ಲೋಕಾನ್ವಿರಜಾಃ ಸಂಚರೇಯಮ್ ॥೩॥**

"ಶೋಭನಳೇ! ಮಾನವನು ಈ ಪ್ರಪಂಚದಲ್ಲಿ ಮಾಡಬೇಕಾಗಿರುವ ಕರ್ತವ್ಯಗಳೇನು? ಸ್ವಧರ್ಮಕ್ಕೆ ಚ್ಯುತಿಯುಂಟಾಗದ ರೀತಿಯಲ್ಲಿ ಹೇಗೆ ವರ್ತಿಸಬೇಕು? ಅಗ್ನಿಹೋತ್ರವನ್ನು ಹೇಗೆ ಮಾಡಬೇಕು? ದೇವತೆಗಳನ್ನು ಪೂಜಿಸುವ ಕಾಲ-ವಿಧಾನಗಳಾವುವು? ಇವುಗಳೆಲ್ಲವನ್ನೂ ವಿಶದವಾಗಿ

ಹೇಳು. ನಿನ್ನಿಂದ ಉಪದಿಷ್ಟನಾಗಿ ನಾನು ಯಥೋಪದಿಷ್ಟವಾದ ಕರ್ಮಗಳನ್ನು ಸಕಾಲದಲ್ಲಿ ಮಾಡುತ್ತಾ ರಜೋಗುಣರಹಿತನಾಗಿ ಪುಣ್ಯಲೋಕಗಳಲ್ಲಿ ಸಂಚರಿಸುವೆನು.(ಐಹಿಕಾಮುಷ್ಮಿಕಫಲಗಳನ್ನು ಪಡೆಯುವೆನು.)"



ಯುಧಿಷ್ಠಿರ! ತಾರ್ಕ್ಷ್ಯನಿಗೆ ಈ ವಿಷಯವನ್ನು ತಿಳಿದುಕೊಳ್ಳಬೇಕೆಂಬ ಆಸಕ್ತಿಯು ಬಹಳವಾಗಿದ್ದಿತು ಮತ್ತು ವಿಷಯಗಳನ್ನು ಗ್ರಹಿಸುವ ಸೂಕ್ಷ್ಮ ಬುದ್ಧಿಯೂ ಅವನಿಗಿದ್ದಿತು. ಅದನ್ನರಿತ ಸರಸ್ವತಿಯು ಧರ್ಮಾತ್ಮನಾದ ತಾರ್ಕ್ಷ್ಯನನ್ನು ಕುರಿತು ಧರ್ಮಯುಕ್ತವಾಗಿಯೂ, ಹಿತಕರವಾಗಿಯೂ ಇರುವ ಈ ಮಾತುಗಳನ್ನು ಹೇಳಿದಳು :

**ಯೋ ಬ್ರಹ್ಮ ಜಾನಾತಿ ಯಥಾಪ್ರದೇಶಂ**
**ಸ್ವಾಧ್ಯಾಯನಿತ್ಯಃ ಶುಚಿರಪ್ರಮತ್ತಃ ।**
**ಸ ವೈ ಪಾರಂ ದೇವಲೋಕಸ್ಯ ಗನ್ತಾ**
**ಸಹಾಮರೈಃ ಪ್ರಾಪ್ನುಯಾತ್ಪ್ರೀತಿಯೋಗಮ್ ॥೫॥**

"ಮಹಾಮುನಿಯೇ! ಯಾವನು, ನಿರ್ದಿಷ್ಟಪ್ರದೇಶವನ್ನತಿಕ್ರಮಿಸಿರುವ (ಪ್ರಪಂಚದ ಎಲ್ಲ ಭಾಗಗಳಲ್ಲಿಯೂ ಎಲ್ಲ ವಸ್ತುಗಳಲ್ಲಿಯೂ ನಾನಾ ವಿಧವಾದ ಅವತಾರಗಳಿಂದ ಮತ್ತು ರೂಪಗಳಿಂದ ಪ್ರಾದುರ್ಭೂತನಾಗಿರುವ) ಬ್ರಹ್ಮನನ್ನು ಅವನ ಸ್ಥಾನವಿಶೇಷದೊಡನೆ ಅರಿತಿರುವನೋ, ವೇದಾಧ್ಯಯನ ನಿರತನಾಗಿರುವನೋ, ಪ್ರಣವಜಪವನ್ನು ಸದಾಕಾಲದಲ್ಲಿಯೂ ಮಾಡುತ್ತಿರುವನೋ, ಅಂತಃಶುದ್ಧಿ-ಬಹಿಃಶುದ್ಧಿಗಳಿಂದ ಕೂಡಿರುವನೋ ಮತ್ತು ಅಪ್ರಮತ್ತನಾಗಿರುವನೋ–ಅಂತಹವನು ಮಾತ್ರವೇ ದೇವಲೋಕದ ಎಲ್ಲೆಯನ್ನೂ ದಾಟಿಹೋಗಿ ದೇವತೆಗಳೊಡನೆ ಸೇರಿ ತಾನೂ ಅಮರನಾಗಿ ದೇವತೆಗಳ ಪ್ರೀತಿಗೆ ಪಾತ್ರನಾಗುತ್ತಾನೆ.

**ತತ್ರ ಸ್ಮ ರಮ್ಯಾ ವಿಪುಲಾ ವಿಶೋಕಾಃ**
**ಸುಪುಷ್ಪಿತಾಃ ಪುಷ್ಕರಿಣ್ಯಃ ಸುಪುಣ್ಯಾಃ ।**
**ಅಕರ್ದಮಾ ಮೀನವತ್ಯಃ ಸುತೀರ್ಥಾ**
**ಹಿರಣ್ಮಯೈರಾವೃತಾಃ ಪುಣ್ಡರೀಕೈಃ ॥೬॥**

ಆ ದೇವಲೋಕದಲ್ಲಿ ಸಂತೋಷದಾಯಕವಾದ, ಪುಷ್ಪಭರಿತವಾದ ವೃಕ್ಷಗಳಿಂದ ಪರಿವೃತವಾದ, ಪುಣ್ಯಪ್ರದವಾದ ಅನೇಕಸರೋವರಗಳಿವೆ. ಅವುಗಳ ನೀರು ಕೆಸರಿಲ್ಲದೇ ಬಹಳ ಪರಿಶುದ್ಧವಾಗಿದ್ದು ಅನೇಕವಿಧವಾದ ಮೀನುಗಳಿಂದ ಕೂಡಿರುತ್ತದೆ. ಸ್ವರ್ಣಮಯವಾದ ಶ್ವೇತಕಮಲಪುಷ್ಪಗಳಿಂದ ಆ ಸರೋವರಗಳು ಆವೃತವಾಗಿವೆ. ಅವುಗಳ ದರ್ಶನಮಾತ್ರದಿಂದಲೇ ಸಕಲ ವಿಧವಾದ ಆಯಾಸಗಳೂ ಪರಿಹಾರವಾಗುತ್ತವೆ.

**ತಾಸಾಂ ತೀರೇಷ್ವಾಸತೇ ಪುಣ್ಯಭಾಜೋ**
**ಮಹೀಯಮಾನಾಃ ಪೃಥಗಪ್ಸರೋಭಿಃ ।**

**ಸುಪುಣ್ಯಗನ್ಧಾಭಿರಲಂಕೃತಾಭಿ-**
**ರ್ಹಿರಣ್ಯವರ್ಣಾಭಿರತೀವ ಹೃಷ್ಟಾಃ ॥೭॥**

ಅಂತಹ ಸರೋವರಗಳ ತೀರಗಳಲ್ಲಿ ಪುಣ್ಯವಂತರಾದವರು ಪರಮ ಹೃಷ್ಟರಾಗಿ–ಸ್ವರ್ಣಮಯವಾದ ಆಭರಣಗಳಿಂದ ಅಲಂಕೃತರಾದ, ಪವಿತ್ರವಾದ ಸುಗಂಧದ್ರವ್ಯಗಳಿಂದ ಸುವಾಸಿತರಾದ, ಸುವರ್ಣದ ಕಾಂತಿಯಿಂದ ಬೆಳಗುತ್ತಿರುವ ಅಪ್ಸರೆಯರೊಡನೆ ಆನಂದಿಸುತ್ತಿರುತ್ತಾರೆ.

**ಪರಂ ಲೋಕಂ ಗೋಪ್ರದಾಸ್ತ್ವಾಪ್ನುವನ್ತಿ**
**ದತ್ತ್ವಾನಡ್ವಾಹಂ ಸೂರ್ಯಲೋಕಂ ವ್ರಜನ್ತಿ ।**
**ವಾಸೋ ದತ್ತ್ವಾ ಚಾನ್ದ್ರಮಸಂ ತು ಲೋಕಂ**
**ದತ್ತ್ವಾ ಹಿರಣ್ಯಮಮರತ್ವಮೇತಿ ॥೮॥**

ಈ ಭೂಲೋಕದಲ್ಲಿ ಸತ್ಪಾತ್ರನಾದವನಿಗೆ ಗೋದಾನವನ್ನು ಮಾಡಿದರೆ ಉತ್ತಮಲೋಕಗಳು ಪ್ರಾಪ್ತವಾಗುತ್ತವೆ. ಎತ್ತನ್ನು ದಾನಮಾಡಿದವನು ಸೂರ್ಯಲೋಕಕ್ಕೆ ಹೋಗುತ್ತಾನೆ. ವಸ್ತ್ರದಾನಮಾಡಿದವನು ಚಂದ್ರಲೋಕಕ್ಕೆ ಹೋಗುತ್ತಾನೆ. ಸುವರ್ಣವನ್ನು ದಾನಮಾಡಿದವನಿಗೆ ಅಮರತ್ವವು ಪ್ರಾಪ್ತವಾಗುತ್ತದೆ.

**ಧೇನುಂ ದತ್ತ್ವಾ ಸುಪ್ರಭಾಂ ಸುಪ್ರದೋಹಾಂ**
**ಕಲ್ಯಾಣವತ್ಸಾಮಪಲಾಯಿನೀಂ ಚ ।**
**ಯಾವನ್ತಿ ರೋಮಾಣಿ ಭವನ್ತಿ ತಸ್ಯಾ-**
**ಸ್ತಾವದ್ವರ್ಷಾಣ್ಯಾಸತೇ ದೇವಲೋಕೇ ॥೯॥**

ಸುಲಕ್ಷಣವಾದ, ಚೆನ್ನಾಗಿ ಹಾಲುಕೊಡುವ, ಕರುವಿನೊಡನೆ ಕೂಡಿರುವ, ತುಂಟಹಸುವಿನಂತೆ ಓಡಿಹೋಗದಿರುವ, ಬಹಳ ಸಾಧುವಾದ ಧೇನುವನ್ನು ದಾನಮಾಡಿದವನು–ಆ ಧೇನುವಿನ ಶರೀರದಲ್ಲಿ ಎಷ್ಟು ರೋಮಗಳಿರುವುವೋ ಅಷ್ಟುವರ್ಷಗಳ ಕಾಲ ದೇವಲೋಕದಲ್ಲಿರುತ್ತಾನೆ.

**ಅನಡ್ವಾಹಂ ಸುವ್ರತಂ ಯೋ ದದಾತಿ**
**ಹಲಸ್ಯ ವೋಢಾರಮನನ್ತವೀರ್ಯಮ್ ।**

ಧುರನ್ಧರಂ ಬಲವನ್ತಂ ಯುವಾನಂ
ಪ್ರಾಪ್ನೋತಿ ಲೋಕನ್ದಶ ಧೇನುದಸ್ಯ ||೧೦||

ನೇಗಿಲನ್ನೂ–ಗಾಡಿಯನ್ನೂ ಎಳೆಯಲು ಸಮರ್ಥವಾದ, ಬಹುಭಾರವನ್ನು ಹೊರಲು ಶಕ್ತಿಯಿರುವ, ಬಲಿಷ್ಠವಾದ, ತಾರುಣ್ಯದಿಂದ ಕೂಡಿರುವ, ಸುಲಕ್ಷಣವಾದ ಹೋರಿಯನ್ನು ದಾನವಾಗಿ ಕೊಡುವವನಿಗೆ ಹತ್ತು ಹಸುಗಳನ್ನು ದಾನಮಾಡುವುದರಿಂದುಂಟಾಗುವ ಮಹಾಪುಣ್ಯವು ಲಭ್ಯವಾಗುತ್ತದೆ.

ದದಾತಿ ಯೋ ವೈ ಕಪಿಲಾಂ ಸಚೈಲಾಂ
ಕಾಂಸ್ಯೋಪದೋಹಾಂ ದ್ರವಿಣೈರುತ್ತರೀಯೈಃ |
ತೈಸ್ತೈರ್ಗುಣೈಃ ಕಾಮದುಹಾಥ ಭೂತ್ವಾ
ನರಂ ಪ್ರದಾತಾರಮುಪೈತಿ ಸಾ ಗೌಃ ||೧೧||

ಕರುವಿನಿಂದ ಕೂಡಿದ ಕಪಿಲವರ್ಣದ ಹಸುವನ್ನು ಹಾಲು ಕರೆಯುವ ಕಂಚಿನಪಾತ್ರೆ ಮತ್ತು ಉತ್ತರೀಯಗಳನ್ನು ದಕ್ಷಿಣೆಯ ಸಮೇತವಾಗಿ–ದಾನ ಮಾಡಿದರೆ–ದಾನಮಾಡಿದ ಹಸುವೇ ಕಾಮಧೇನುವಿನ ರೂಪದಲ್ಲಿ ದಾನ ಕೊಟ್ಟವನ ಬಳಿಗೆ ಬಂದು ಸಕಲೇಷ್ಟಾರ್ಥಗಳನ್ನೂ ಅನುಗ್ರಹಿಸುತ್ತದೆ. ಗೋದಾನದ ಫಲವು ಅಷ್ಟಿಷ್ಟಲ್ಲ.

ಯಾವನ್ತಿ ರೋಮಾಣಿ ಭವನ್ತಿ ಧೇನ್ವಾ-
ಸ್ತಾವತ್ಫಲಂ ಭವತಿ ಗೋಪ್ರದಾನೇ |
ಪುತ್ರಾಂಶ್ಚ ಪೌತ್ರಾಂಶ್ಚ ಕುಲಂ ಚ ಸರ್ವ-
ಮಾಸಪ್ತಮಂ ತಾರಯತೇ ಪರತ್ರ ||೧೨||

ಅವನು ದಾನಮಾಡುವ ಹಸುವಿನ ದೇಹದಲ್ಲಿ ಎಷ್ಟು ರೋಮಗಳಿರುವುವೋ–ಅಷ್ಟು ವಿಧವಾದ ಫಲಗಳನ್ನೇ ದಾನಕೊಟ್ಟವನು ಪಡೆಯುತ್ತಾನೆ. ಪುತ್ರ-ಪೌತ್ರರೇ ಆದಿಯಾಗಿ ಎಲ್ಲರೂ ಆ ಗೋದಾನದ ಫಲವನ್ನು ಪಡೆಯುತ್ತಾರೆ. ದಾನಕೊಟ್ಟವನ ಮುಂದಿನ ಏಳು ತಲೆಮಾರಿನವರು ಆ ಮಹಾದಾನದಿಂದ ಸದ್ಗತಿಯನ್ನು ಹೊಂದುತ್ತಾರೆ.

ಸದಕ್ಷಿಣಾಂ ಕಾಞ್ಚನಚಾಕುಶೃಙ್ಗೀಂ
ಕಾಂಸ್ಯೋಪದೋಹಾಂ ದ್ರವಿಣೈರುತ್ತರೀಯೈಃ ।
ಧೇನುಂ ತಿಲಾನಾಂ ದದತೋ ದ್ವಿಜಾಯ
ಲೋಕಾ ವಸೂನಾಂ ಸುಲಭಾ ಭವನ್ತಿ ॥೧೩॥

ಎಳ್ಳಿನಲ್ಲಿ ಹಸುವನ್ನು ಮಾಡಿ ಅದಕ್ಕೆ ಸುವರ್ಣಮಯವಾದ ಎರಡು ಶೃಂಗಗಳನ್ನು ತೊಡಿಸಿ ಉತ್ತರೀಯ ಮತ್ತು ಹಾಲುಕರೆಯುವ ಕಂಚಿನ ಪಾತ್ರೆಯೊಡನೆ ದಕ್ಷಿಣಾಸಹಿತವಾಗಿ ಸತ್ಪಾತ್ರನಾದ ಬ್ರಾಹ್ಮಣನಿಗೆ ದಾನ ಮಾಡುವುದರಿಂದ ವಸುಗಳ ಲೋಕಗಳು ಸುಲಭವಾಗಿ ದೊರಕುತ್ತವೆ.

ಸ್ವಕರ್ಮಭಿರ್ದಾನವಸಂನಿರುದ್ಧೇ
ತೀವ್ರಾನ್ಧಕಾರೇ ನರಕೇ ಸಮ್ಪತನ್ತಮ್ ।
ಮಹಾರ್ಣವೇ ನೌರಿವ ವಾತಯುಕ್ತಾ
ದಾನಂ ಗವಾಂ ತಾರಯತೇ ಪರತ್ರ ॥೧೪॥

ಮಹಾಸಾಗರದಲ್ಲಿ ಮುಳುಗಿಹೋಗುತ್ತಿರುವ ಮನುಷ್ಯನನ್ನು ಅನುಕೂಲವಾದ ವಾಯುವಿನ ಪ್ರೇರಣೆಯಿಂದ ಸಂಚರಿಸುತ್ತಿರುವ ನಾವೆಯು ಪಾರುಮಾಡುವಂತೆ–ತನ್ನ ಕರ್ಮಗಳ ಫಲದಿಂದ ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯಗಳೆಂಬ ಆರು ಮಂದಿ ದಾನವರಿಂದ ಆಕ್ರಾಂತನಾದ, ತನ್ನ ದುಷ್ಕರ್ಮಗಳಿಂದ ಘೋರವಾದ ನರಕದಲ್ಲಿ ಬಿದ್ದು ಪರಿತಪಿಸುತ್ತಿರುವ ಮಾನವನನ್ನು–ಅವನ ವಂಶೀಯನೊಬ್ಬನು ಸತ್ಪಾತ್ರನಲ್ಲಿ ಮಾಡುವ ಗೋದಾನವು ಕ್ಷಣಮಾತ್ರದಲ್ಲಿ ಮಹಾನರಕದಿಂದ ಪಾರುಮಾಡುತ್ತದೆ.

ಯೋ ಬ್ರಾಹ್ಮದೇಯಾಂ ತು ದದಾತಿ ಕನ್ಯಾಂ
ಭೂಮಿಪ್ರದಾನಂ ಚ ಕರೋತಿ ವಿಪ್ರೇ ।
ದದಾತಿ ದಾನಂ ವಿಧಿನಾ ಚ ಯಶ್ಚ
ಸ ಲೋಕಮಾಪ್ನೋತಿ ಪುರಂದರಸ್ಯ ॥೧೫॥

ಬ್ರಾಹ್ಮವಿವಾಹಪದ್ಧತಿಯಂತೆ ಯಾವನು ಸಾಲಂಕೃತಳಾದ ಕನ್ಯೆಯನ್ನು ಉದಕಧಾರಾಪೂರ್ವಕವಾಗಿ ಬ್ರಾಹ್ಮಣನಿಗೆ ದಾನಮಾಡುತ್ತಾ

ನೆಯೋ ಮತ್ತು ಭೂದಾನವನ್ನೂ, ಇನ್ನೂ ಅನೇಕವಿಧವಾದ ದಾನಗಳನ್ನೂ ಕನ್ಯಾದಾನದ ಕಾಲದಲ್ಲಿ ಮಾಡುತ್ತಾನೆಯೋ–ಅವನು ಅವಸಾನಾನಂತರದಲ್ಲಿ ಇಂದ್ರಲೋಕವನ್ನು ಪಡೆಯುತ್ತಾನೆ.

**ಯಃ ಸಪ್ತವರ್ಷಾಣಿ ಜುಹೋತಿ ತಾರ್ಕ್ಷ್ಯ**
**ಹವ್ಯಂ ತ್ವಗ್ನೌ ನಿಯತಃ ಸಾಧುಶೀಲಃ ।**
**ಸಪ್ತಾವರಾನ್ಸಪ್ತ ಪೂರ್ವಾನ್ಪುನಾತಿ**
**ಪಿತಾಮಹಾನಾತ್ಮನಾ ಕರ್ಮಭಿಃ ಸ್ವೈಃ ॥೧೬॥**

ಯಾವನು ಸಾಧುಶೀಲನಾಗಿದ್ದು ಏಳು ವರ್ಷಗಳ ಕಾಲ ಅಗ್ನಿಹೋತ್ರ-ವೈಶ್ವದೇವಾದಿಗಳಿಂದ ಯಜ್ಞೇಶ್ವರನನ್ನು ಆರಾಧಿಸುವನೋ–ಅವನು ಪಿತೃ-ಪಿತಾಮಹ-ಪ್ರಪಿತಾಮಹಾದಿ ಹಿಂದಿನ ಏಳು ತಲೆಮಾರಿನವರನ್ನೂ, ಪುತ್ರ-ಪೌತ್ರ-ಪ್ರಪೌತ್ರಾದಿ ಮುಂದಿನ ಏಳು ತಲೆಮಾರಿನವರನ್ನೂ ಪಾವನರನ್ನಾಗಿ ಮಾಡುತ್ತಾನೆ.”

ದಾನದ ವಿಷಯವಾಗಿಯೂ–ಅಗ್ನಿಪರಿಚರ್ಯೆಯ ವಿಷಯವಾಗಿಯೂ ಸರಸ್ವತಿಯು ಹೇಳಿದ ಮಾತುಗಳನ್ನು ಕೇಳಿ ಪುಲಕಿತನಾದ ತಾರ್ಕ್ಷ್ಯನು ಪುನಃ ಕೇಳಿದನು :

**ಕಿಮಗ್ನಿಹೋತ್ರಸ್ಯ ವ್ರತಂ ಪುರಾಣ-**
**ಮಾಚಕ್ಷ್ವ ಮೇ ಪೃಚ್ಛತಶ್ಚಾನುರೂಪೇ ।**
**ತ್ವಯಾನುಶಿಷ್ಟೋಽಹಮಿಹಾದ್ಯ ವಿದ್ಯಾಂ**
**ಯದಗ್ನಿಹೋಽತ್ರಸ್ಯ ವ್ರತಂ ಪುರಾಣಮ್ ॥೧೭॥**

“ದೇವಿ! ಅಗ್ನಿಹೋತ್ರವನ್ನು ಹೇಗೆ ಮಾಡಬೇಕು? ಅದರ ವ್ರತಾನುಷ್ಠಾನಗಳೇನು? ವೇದಗಳಲ್ಲಿ ಅಗ್ನಿಹೋತ್ರದ ವಿಷಯವಾಗಿ ಏನೆಂದು ಹೇಳಿದೆ? ಎಲ್ಲವನ್ನೂ ಉಪದೇಶಿಸುವವಳಾಗು. ಈ ಮಹಾವಿದ್ಯೆಯ ಉಪದೇಶವನ್ನು ನಿನ್ನಿಂದ ಪಡೆದು ನಾನೂ ಪುರಾತನವಾದ ವೇದಪ್ರತಿಪಾದ್ಯವಾದ ಅಗ್ನಿಹೋತ್ರವ್ರತವನ್ನು ಮಾಡಬೇಕೆಂದಿದ್ದೇನೆ.”

ಸರಸ್ವತಿಯು ಹೇಳುತ್ತಾಳೆ :

**ನ ಚಾಶುಚಿರ್ನಾಪ್ಯನಿರ್ಣಿಕ್ತಪಾಣಿ-**
**ರ್ನಾಬ್ರಹ್ಮವಿಜ್ಜುಹುಯಾನ್ನಾವಿಪಶ್ಚಿತ್ ।**

**ಬುಭುತ್ಸವಃ ಶುಚಿಕಾಮಾ ಹಿ ದೇವಾ**
**ನಾಶ್ರದ್ದಧಾನಾದ್ಧಿ ಹವಿರ್ಜುಷನ್ತಿ ॥೧೮॥**

"ತಾರ್ಕ್ಷ್ಯಮುನಿಯೇ! ಅಶುಚಿಯಾದವನೂ, ಕೈ-ಕಾಲುಗಳನ್ನು ತೊಳೆಯದವನೂ, ಶುದ್ಧಾಚಮನವನ್ನೂ ಮಾಡದವನೂ, ವೇದಾಧ್ಯಯನವನ್ನು ಮಾಡದವನೂ, ವೇದ-ವೇದಾಂಗಗಳ ಅರ್ಥವನ್ನು ತಿಳಿಯದವನೂ– ಅಗ್ನಿಹೋತ್ರವನ್ನು ಮಾಡಕೂಡದು. ಹವಿಃಶೇಷವನ್ನು ಭುಂಜಿಸಲು ಇಚ್ಛೆಯುಳ್ಳವರೂ, ಸರ್ವದಾ ಶುಚಿಯಾಗಿಯೇ ಇರಬೇಕೆಂಬ ಅಭಿಲಾಷೆಯುಳ್ಳವರೂ ಪರಮಶ್ರದ್ಧೆಯಿಂದ ಕೂಡಿದವರಾಗಿ ಅಗ್ನಿಹೋತ್ರದ ಮೂಲಕ ದೇವತೆಗಳನ್ನು ತೃಪ್ತಿಪಡಿಸುತ್ತಾರೆ.

**ನಾಶ್ರೋತ್ರಿಯಂ ದೇವಹವ್ಯೇ ನಿಯುಞ್ಜ್ಯಾ-**
**ನ್ಮೋಘಂ ಪುರಾ ಸಿಞ್ಚತಿ ತಾದೃಶೋ ಹಿ ।**
**ಅಪೂರ್ವಮಶ್ರೋತ್ರಿಯಮಾಹ ತಾರ್ಕ್ಷ್ಯ**
**ನ ವೈ ತಾದೃಗ್ಜುಹುಯಾದಗ್ನಿ ಹೋತ್ರಮ್ ॥೧೯॥**

ದೇವತಾಪ್ರೀತ್ಯರ್ಥವಾಗಿ ಹೋಮಮಾಡಲು ಶ್ರೋತ್ರಿಯನಲ್ಲದವನನ್ನು ಆಚಾರ್ಯನನ್ನಾಗಿ ನಿಯೋಜಿಸಬಾರದು. ಕುಲ-ಗೋತ್ರಗಳಿಲ್ಲದವನು ಅಥವಾ ಕುಲ-ಗೋತ್ರಗಳನ್ನು ತಿಳಿಯದವನು ಹೋಮಮಾಡಿದ್ದೇ ಆದರೆ ಅಗ್ನಿಹೋತ್ರವು ನಿಷ್ಫಲವಾಗುತ್ತದೆ. ಅಜ್ಞಾತಕುಲಶೀಲನನ್ನು ಅಶ್ರೋತ್ರಿಯನೆಂದು ಹೇಳುತ್ತಾರೆ. ಆದುದರಿಂದ ಅಂತಹವನೆಂದಿಗೂ ಅಗ್ನಿಹೋತ್ರವನ್ನು ಮಾಡಬಾರದು.

**ಕೃಶಾಶ್ಚ ಯೇ ಜುಹ್ವತಿ ಶ್ರದ್ದಧಾನಾಃ**
**ಸತ್ಯವ್ರತಾ ಹುತಶಿಷ್ಟಾಶಿನಶ್ಚ ।**
**ಗವಾಂ ಲೋಕಂ ಪ್ರಾಪ್ಯ ತೇ ಪುಣ್ಯಗನ್ಧಂ**
**ಪಶ್ಯನ್ತಿ ದೇವಂ ಪರಮಂ ಚಾಪಿ ಸತ್ಯಮ್ ॥೨೦॥**

ಅಹಂಕಾರರಹಿತರಾಗಿ ಸರ್ವದಾ ವ್ರತಾನುಷ್ಠಾನಗಳಲ್ಲಿಯೇ ಇದ್ದು ಕೃಶರಾಗಿರುವ, ಸತ್ಯವ್ರತರಾದ ಯಾರು ಅಗ್ನಿಹೋತ್ರವನ್ನು ಶ್ರದ್ಧೆಯಿಂದ

ಮಾಡುತ್ತಾ ಹುತಶೇಷವನ್ನು ಭುಂಜಿಸುತ್ತಾರೆಯೋ–ಅವರು ಬ್ರಹ್ಮಲೋಕಕ್ಕೆ ಸಮೀಪದಲ್ಲಿರುವ ಪುಣ್ಯಗಂಧಯುಕ್ತವಾದ ಗೋಲೋಕವನ್ನು ಪಡೆಯುತ್ತಾರೆ. ಅಲ್ಲಿಂದಲೇ ಅವರು ಪರಬ್ರಹ್ಮನನ್ನೂ ಕಾಣುವರಲ್ಲದೇ–ಅನುಕ್ರಮವಾಗಿ ಸತ್ಯಲೋಕವನ್ನೂ ಸೇರುತ್ತಾರೆ."

ಸರಸ್ವತಿಯ ಮಾತುಗಳನ್ನು ಕೇಳಿ ತಾರ್ಕ್ಷ್ಯನು ಪುನಃ ಬದ್ಧಾಂಜಲಿಯಾಗಿ ಕೇಳುತ್ತಾನೆ :

**ಕ್ಷೇತ್ರಜ್ಞಭೂತಾಂ ಪರಲೋಕಭಾವೇ**
**ಕರ್ಮೋದಯೇ ಬುದ್ಧಿ ಮತಿಪ್ರವಿಷ್ಟಾಮ್ ।**
**ಪ್ರಜ್ಞಾಂ ಚ ದೇವೀಂ ಸುಭಗೇ ವಿಮೃಶ್ಯ**
**ಪೃಚ್ಛಾಮಿ ತ್ವಾಂ ಕಾ ಹ್ಯಸಿ ಚಾರುರೂಪೇ ॥೨೧॥**

"ದೇವಿ! ಆತ್ಮಸ್ವರೂಪ ಮತ್ತು ಕರ್ಮಫಲ–ಇವುಗಳ ನಿರ್ಣಯದಲ್ಲಿ ಅತಿಬುದ್ಧಿಶಾಲಿನಿಯಾದ ನಿನ್ನನ್ನು ಪರಮಾತ್ಮಸ್ವರೂಪಳೆಂದೂ–ಪ್ರಜ್ಞಾಸ್ವರೂಪಳೆಂದೂ ನಿಶ್ಚಯಿಸಿರುವ ನಾನು, ವಾಸ್ತವಿಕವಾಗಿ ನೀನಾರೆಂಬುದನ್ನು ತಿಳಿಯಲು ಉತ್ಸುಕನಾಗಿದ್ದೇನೆ."

ಸರಸ್ವತೀ :

**ಅಗ್ನಿಹೋತ್ರಾದಹಮಭ್ಯಾಗತಾಸ್ಮಿ**
**ವಿಪ್ರರ್ಷಭಾಣಾಂ ಸಂಶಯಚ್ಛೇದನಾಯ ।**
**ತ್ವತ್ಸಂಯೋಗಾದಹಮೇತಮಬ್ರುವಂ**
**ಭಾವೇ ಸ್ಥಿತಾ ತಥ್ಯಮರ್ಥಂ ಯಥಾವತ್ ॥೨೨॥**

"ವತ್ಸ! ಪರಾಪರಾವಿದ್ಯಾಸ್ವರೂಪಳಾದ ನಾನು ವಿಪ್ರಶ್ರೇಷ್ಠರ ಸಂಶಯನಿವಾರಣೆಗಾಗಿ ಅಗ್ನಿಹೋತ್ರದಿಂದಲೇ ಆವಿರ್ಭವಿಸಿ ಬಂದಿರುವೆನು. ನಿನ್ನ ಪ್ರಾರ್ಥನೆಯಂತೆ ನಿನ್ನ ಸಮೀಪಕ್ಕೆ ಬಂದಿರುವ ನಾನು ಪರಬ್ರಹ್ಮಭಾವದಲ್ಲಿದ್ದು ಸತ್ಯಾರ್ಥವನ್ನು ಹೇಗಿದೆಯೋ ಹಾಗೆಯೇ ಉಪದೇಶಮಾಡಿರುತ್ತೇನೆ."

ಸರಸ್ವತಿಯ ಮಾತುಗಳನ್ನು ಕೇಳಿ ಪುಳಕಿತನಾದ ತಾರ್ಕ್ಷ್ಯನು ಪುನಃ ಹೇಳಿದನು :

**ನ ಹಿ ತ್ವಯಾ ಸದೃಶೀ ಕಾಚಿದಸ್ತಿ**
**ವಿಭ್ರಾಜಸೇ ಹ್ಯತಿಮಾತ್ರಂ ಯಥಾ ಶ್ರೀಃ ।**
**ರೂಪಂ ಚ ತೇ ದಿವ್ಯಮನನ್ತಕಾನ್ತಿ**
**ಪ್ರಜ್ಞಾಂ ಚ ದೇವೀಂ ಸುಭಗೇ ಬಿಭರ್ಷಿ ॥೨೩॥**

"ದೇವಿ! ನಿನಗೆ ಸಮಾನರಾದವರು ಬೇರೊಬ್ಬರಿಲ್ಲ. ಲಕ್ಷ್ಮಿಯೋಪಾದಿಯಲ್ಲಿ ಉಜ್ವಲವಾದ ಕಾಂತಿಯಿಂದಲೇ ಪ್ರಕಾಶಮಾನಳಾಗಿರುವೆ. ನಿನ್ನ ರೂಪವು ದಿವ್ಯವಾದುದು. ನಿನ್ನ ಕಾಂತಿಯೂ ಅಪರಿಮಿತವಾದುದು. ಪ್ರಜ್ಞಾದೇವಿಯನ್ನೂ ನಿನ್ನಲ್ಲಿಯೇ ಐಕ್ಯಗೊಳಿಸಿರುವೆ."

ಯುಧಿಷ್ಠಿರ! ತಾರ್ಕ್ಷ್ಯನ ವಿಷಯದಲ್ಲಿ ಸುಪ್ರೀತಳಾದ ಸರಸ್ವತಿಯು ಪುನಃ ತಾನಾರೆಂಬುದನ್ನು ಹೇಳುತ್ತಾಳೆ :

**ಶ್ರೇಷ್ಠಾನಿ ಯಾನಿ ದ್ವಿಪದಾಂ ವರಿಷ್ಠ**
**ಯಜ್ಞೇಷು ವಿದ್ವನ್ನುಪಪಾದಯನ್ತಿ ।**
**ತೈರೇವ ಚಾಹಂ ಸಮ್ಪ್ರವೃದ್ಧಾ ಭವಾಮಿ**
**ಚಾಪ್ಯಾಯಿತಾ ರೂಪವತೀ ಚ ವಿಪ್ರ ॥೨೪॥**

"ಮಾನವಶ್ರೇಷ್ಠನೇ! ಯಜ್ಞಗಳಲ್ಲಿ ಶ್ರೇಷ್ಠವಾದ ಅಥವಾ ಪ್ರಧಾನ ಭೂತಗಳಾದ ಕರ್ಮಗಳು ಯಾವುಗಳಿವೆಯೋ–ಅವುಗಳೇ ನಾನು. ಯಜ್ಞ ಕರ್ಮಗಳಿಂದಲೇ ನಾನು ಪ್ರವೃದ್ಧಿಹೊಂದುತ್ತಿರುವೆನು ಮತ್ತು ತೃಪ್ತಳಾಗಿರುವೆನು. ಈ ಕಾರಣದಿಂದಲೇ ನಾನು ರೂಪವತಿಯೂ ಆಗಿರುವೆನು.

(ಇಲ್ಲಿ ಭಗವಂತನ ವಾಕ್ಯವನ್ನು ಸ್ಮರಿಸಬಹುದಾಗಿದೆ.

**ಅಹಂ ಕ್ರತುರಹಂ ಯಜ್ಞಃ ಸ್ವಧಾಹಮಹಮೌಷಧಮ್ ।**
**ಮನ್ತ್ರೋಽಹಮಹಮೇವಾಜ್ಯಮಹಮಗ್ನಿರಹಂ ಹುತಮ್ ॥**

ಭಗವದ್ಗೀತಾ : ಅಧ್ಯಾಯ ೯ ಶ್ಲೋಕ ೧೬

ಈ ಅಭಿಪ್ರಾಯವನ್ನೇ ಸರಸ್ವತಿಯು ತಾರ್ಕ್ಷ್ಯನಿಗೆ ಹೇಳಿದ್ದಾಳೆ.)

**ಯಚ್ಚಾಪಿ ದ್ರವ್ಯಮುಪಯುಜ್ಯತೇ ಹ**
**ವಾನಸ್ಪತ್ಯಮಾಯಸಂ ಪಾರ್ಥಿವಂ ವಾ ।**

**ದಿವ್ಯೇನ ರೂಪೇಣ ಚ ಪ್ರಜ್ಞಯಾ ಚ**
**ತೇನೈವ ಸಿದ್ಧಿರಿತಿ ವಿದ್ಧಿ ವಿದ್ವನ್ ॥೨೫॥**

ವಿದ್ವಾಂಸನೇ! ಸಮಿತ್ತ್ರುವಾದಿ ವನಸ್ಪತಿಗಳಿಂದಲೂ, ಸ್ವರ್ಣ-ರಜತಾದಿ ತೈಜಸ ದ್ರವ್ಯಗಳಿಂದಲೂ, ವ್ರೀಹಿ-ಯವಾದಿ ಪಾರ್ಥಿವದ್ರವ್ಯಗಳಿಂದಲೂ ಹೋಮಮಾಡುವಾಗ, ನನ್ನ ಈ ದಿವ್ಯರೂಪವನ್ನೂ ಪ್ರಜ್ಞಾಸ್ವರೂಪವನ್ನೂ ಸ್ಮರಿಸಿ ಮತ್ತು ನಾನು ಹೇಳಿದಂತೆ ಅಗ್ನಿಹೋತ್ರಕ್ಕೆ ಪ್ರಧಾನವಾದ ಅಂಗಗಳೇ ನಾನೆಂಬ ನಿಶ್ಚಯಬುದ್ಧಿಯಿಂದ ಅಗ್ನಿಹೋತ್ರವನ್ನು ಮಾಡಿದರೆ ನಿನಗೆ ಸಕಲೇಷ್ಟಾರ್ಥಗಳ ಸಿದ್ಧಿಯೂ ಉಂಟಾಗುತ್ತದೆ.”

ತಾರ್ಕ್ಷ್ಯನಿಗೆ ಸಂಶಯಗಳಿನ್ನೂ ಪರಿಹಾರವಾಗಲಿಲ್ಲ. ಪುನಃ ಸರಸ್ವತಿಯನ್ನು ಪ್ರಶ್ನಿಸುತ್ತಾನೆ :

**ಇದಂ ಶ್ರೇಯಃ ಪರಮಂ ಮನ್ಯಮಾನಾ**
**ವ್ಯಾಯಚ್ಛನ್ತೇ ಮುನಯಃ ಸಮ್ಪ್ರತೀತಾಃ ।**
**ಆಚಕ್ಷ್ವ ಮೇ ತಂ ಪರಮಂ ವಿಶೋಕಂ**
**ಮೋಕ್ಷಂ ಪರಂ ಯಂ ಪ್ರವಿಶನ್ತಿ ಧೀರಾಃ ।**
**ಸಾಂಖ್ಯಾ ಯೋಗಾಃ ಪರಮಂ ಯಂ ವಿದನ್ತಿ**
**ಪರಂ ಪುರಾಣಂ ತಮಹಂ ನ ವೇದ್ಮಿ ॥೨೬॥**

“ತಾಯೇ! ಜಿತೇಂದ್ರಿಯರಾದ ಮಹರ್ಷಿಗಳು ಮೋಕ್ಷಸಾಧನೆಯೇ ಪರಮೋತ್ಕೃಷ್ಟವೆಂದು ಅದಕ್ಕಾಗಿ ನಿರಂತರವಾಗಿ ಪ್ರಯತ್ನಿಸುತ್ತಿರುವರು. ಜಿತೇಂದ್ರಿಯರಾದ ಮತ್ತು ಧೀರರಾದ ಮಹರ್ಷಿಗಳಿಂದ ಸಾಧಿಸಲ್ಪಡುವ, ಶೋಕರಹಿತವಾದ, ಅತ್ಯಂತಶ್ರೇಷ್ಠವಾದ ಅಂತಹ ಮೋಕ್ಷದ ವಿಷಯವನ್ನು ಉಪದೇಶಿಸು. ಸಾಂಖ್ಯಶಾಸ್ತ್ರ-ಯೋಗಶಾಸ್ತ್ರಗಳು ಯಾವನನ್ನು ಪುರಾಣ ಪುರುಷನೆಂದೂ, ಶ್ರೇಷ್ಠನೆಂದೂ ಸಾರುತ್ತವೆಯೋ–ಅಂತಹ ಪರಬ್ರಹ್ಮನನ್ನು ನಾನು ತಿಳಿಯದವನಾಗಿದ್ದೇನೆ.”

ಸರಸ್ವತೀ :

**ತಂ ವೈ ಪರಂ ವೇದವಿದಃ ಪ್ರಪನ್ನಾಃ**
**ಪರಂ ಪರೇಭ್ಯಃ ಪ್ರಥಿತಂ ಪುರಾಣಮ್ ।**

ಸ್ವಾಧ್ಯಾಯವನ್ತೋ ವ್ರತಪುಣ್ಯಯೋಗ್ಯೈ-
ಸ್ತಪೋಧನಾ ವೀತಶೋಕಾ ವಿಮುಕ್ತಾಃ ॥೨೭॥

"ಬ್ರಾಹ್ಮಣೋತ್ತಮನೇ! "ನಾವೇದವಿನ್ಮನುತೇ ತಂ ಬೃಹನ್ತಮ್" ಎಂಬ ಶ್ರುತ್ಯುಕ್ತಿಗೆ ಅನುಸಾರವಾಗಿ ವೇದ-ವೇದಾಂಗಗಳನ್ನು ತಿಳಿಯದವರು ಆ ಪರಾತ್ಪರಬ್ರಹ್ಮವಸ್ತುವನ್ನು ತಿಳಿಯಲು ಅಸಮರ್ಥರಾಗುತ್ತಾರೆ. ವೇದವಿದರು ತಿಳಿಯುತ್ತಾರೆ. ವೇದವಿದರಾಗಿರುವುದು ಮಾತ್ರವಲ್ಲ. ಅವರು ಪ್ರಪನ್ನರಾಗಿಯೂ ಇರಬೇಕು. "ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ" ಎಂಬ ಪ್ರಸನ್ನತೆಯೂ ಅವರಲ್ಲಿರಬೇಕು. ಸರ್ವದಾ ಅಧ್ಯಯನ-ಅಧ್ಯಾಪನಾದಿಗಳಲ್ಲಿಯೇ ನಿರತರಾಗಬೇಕು. ವ್ರತನಿಷ್ಠರಾಗಿರಬೇಕು. ಜಪ-ತಪಾದಿಗಳನ್ನು ಅನವರತವಾಗಿ ಮಾಡುತ್ತಿರಬೇಕು. ಚಿತ್ತವೃತ್ತಿಯ ನಿರೋಧಕರಾಗಬೇಕು. ಹೀಗಿರುವ ಶೋಕರಹಿತರಾದ ತಪೋಧನರು ಪರಮಶ್ರೇಷ್ಠನಾದ, ಸನಾತನನಾದ, ಸಚ್ಚಿದಾನಂದಸ್ವರೂಪನಾದ ಪರಮಾತ್ಮನನ್ನು ಹೃದಯಾಕಾಶದಲ್ಲಿ ಕಾಣಲು ಸಮರ್ಥರಾಗುತ್ತಾರೆ.

ತಸ್ಯಾಥ ಮಧ್ಯೇ ವೇತಸಃ ಪುಣ್ಯಗನ್ಧಃ
ಸಹಸ್ರಶಾಖೋ ವಿಪುಲೋ ವಿಭಾತಿ ।
ತಸ್ಯ ಮೂಲಾತ್ಸರಿತಃ ಪ್ರಸ್ರವನ್ತಿ
ಮಧೂದಕಪ್ರಸ್ರವಣಾಃಸುಪುಣ್ಯಾಃ ॥೨೮॥

ಚಿದಾತ್ಮನ ಮಧ್ಯದಲ್ಲಿ ಪುಣ್ಯಗಂಧಯುಕ್ತವಾದ ಸಾವಿರಾರು ಶಾಖೆಗಳಿಂದ ಕೂಡಿದ ವಿಪುಲವಾದ ವೇತಸವೃಕ್ಷವು ಪ್ರಕಾಶಮಾನವಾಗಿರುತ್ತದೆ. ಆ ವೇತಸವೃಕ್ಷಮೂಲದಿಂದ ಮಧುವಿಗೆ ಸಮಾನವಾದ ನೀರಿನಿಂದ ಕೂಡಿರುವ ನದಿಗಳು ಪ್ರವಹಿಸುತ್ತವೆ. (ಚಿದಾತ್ಮನ ಮಧ್ಯದಲ್ಲಿ ಬೀಜಾಂಕುರಸಹಿತವಾದ ವೇತಸದಂತೆ–ಬ್ರಹ್ಮಾಂಡವೆಂಬ ವೃಕ್ಷದ ಬೀಜವಿರುತ್ತದೆ. ಈ ಬ್ರಹ್ಮಾಂಡ ಬೀಜವು ಧರ್ಮ-ಜ್ಞಾನ-ವೈರಾಗ್ಯೈಶ್ವರ್ಯಗಂಧಗಳಿಂದ ಯುಕ್ತವಾಗಿರುತ್ತದೆ. ಈ ಬ್ರಹ್ಮಾಂಡದ ವೃಕ್ಷದಲ್ಲಿ ಅನಂತಶಾಖೆಗಳೋಪಾದಿಯಲ್ಲಿ ಸಾವಿರಾರು ಭೋಗಸ್ಥಾನಗಳಿರುತ್ತವೆ. ಚಿದ್ವಸ್ತುವಿನಲ್ಲಿ ಇಂತಹ ಬ್ರಹ್ಮಾಂಡವೃಕ್ಷವು ಪ್ರಕಾಶಿಸುತ್ತಿರುತ್ತದೆ. ವೃಕ್ಷದ ಮೂಲದಿಂದ ಅವಿದ್ಯಾರೂಪವಾದ ಭೋಗ

ವಾಸನಾರೂಪವಾದ ನದಿಗಳು ಪ್ರವಹಿಸುತ್ತವೆ. ವೇತಸವೆಂದರೆ : ನೀರಿನಲ್ಲಿ ಬೆಳೆಯುವ ಜೊಂಡು ಅಥವಾ ಬೆತ್ತ.)

**ಶಾಖಾಂ ಶಾಖಾಂ ಮಹಾನದ್ಯಃ ಸಂಯಾನ್ತಿ ಸಿಕತಾಶಯಾಃ ।**
**ಧಾನಾಪೂಪಾ ಮಾಂಸಶಾಕಾಃ ಸದಾ ಪಾಯಸಕರ್ದಮಾಃ ॥೨೯॥**

ವೇತಸವೃಕ್ಷದ ಶಾಖೆಗಳಿಂದ ಹೊರಡುವ ಮಹಾನದಿಗಳು ಮರಳಿನ ಮೇಲೆ ಪ್ರವಹಿಸುತ್ತವೆ. ಈ ಪ್ರವಾಹಗಳಲ್ಲಿ ಹುರಿದ ಕಾಳುಗಳದ್ದೇ ಒಂದು ಪ್ರವಾಹ. ಅಪೂಪಗಳದ್ದೇ ಒಂದು ಪ್ರವಾಹ. ಮಾಂಸ-ಪಾಯಸ-ತರ ಕಾರಿಗಳ ಪ್ರತ್ಯೇಕ ಪ್ರವಾಹಗಳಿರುತ್ತವೆ. (ಇದೊಂದು ಸಂಸಾರವೃಕ್ಷ-ವೃಕ್ಷದಲ್ಲಿ ಸಾವಿರಾರು ಶಾಖೆಗಳಿರುತ್ತವೆ. ಆ ಶಾಖೆಗಳಿಂದ ವಾಸನಾರೂಪವಾದ ನದಿಗಳು ಪ್ರವಹಿಸುತ್ತಿರುತ್ತವೆ. ಕರ್ಮಸಂಬಂಧವಾದ ವಾಸನೆಗಳೊಡನೆ ಆ ನದಿಗಳಲ್ಲಿ ಬಿದ್ದ ಮಾನವರನ್ನು ಆ ನದಿಗಳು ಒಯ್ಯುತ್ತಿರುತ್ತವೆ. ಮನುಷ್ಯರನ್ನು ಒಯ್ಯುವ ಆ ನದಿಗಳಿಗೆ ಪುತ್ರ-ಪೌತ್ರರೂಪವಾಗಿರುವ ಮರಳು ಆಧಾರವಾಗಿರುತ್ತದೆ. ಪುಣ್ಯಯುಕ್ತವಾದ ಮಧುಪ್ರಸ್ರವಣಗಳು ತಮ್ಮ ಪ್ರವಾಹದಲ್ಲಿ ಪುಣ್ಯವೇ ಪೂರ್ವವಾಸನೆಯಾಗಿ ಉಳ್ಳ ಮಾನವನನ್ನು ಒಯ್ದು ಸ್ವರ್ಗಫಲವನ್ನು ಕೊಡುತ್ತವೆ. ಹುರಿದ ಕಾಳಿನ ಪ್ರವಾಹವು ವಿಷಯಸುಖಗಳನ್ನು ಮಾತ್ರವೇ ಕೊಡುತ್ತದೆ. ಅಪೂಪಪ್ರವಾಹಗಳು ಅದ ರಲ್ಲಿರುವ ಛಿದ್ರಗಳಂತೆ ಸಂಸಾರದಲ್ಲಿ ವೈವಿಧ್ಯಗಳನ್ನುಂಟುಮಾಡುತ್ತವೆ. ಮಾಂಸಪ್ರವಾಹಗಳು ಹಿಂಸಾಮಯವಾದ ಜೀವನವನ್ನು ಕಲ್ಪಿಸುತ್ತವೆ. ಪಾಯಸಪ್ರವಾಹಗಳು ಭೋಗಜೀವನವನ್ನು ಕಲ್ಪಿಸುತ್ತವೆ. ಕೆಸರಿನ ಪ್ರವಾಹಗಳು ಕಲ್ಮಷಯುಕ್ತವಾದ ಜೀವನವನ್ನು ಕಲ್ಪಿಸುತ್ತವೆ. ಪ್ರಪಂಚದಲ್ಲಿ ಎಷ್ಟು ವಿಧವಾದ ಜೀವನಗಳಿವೆಯೋ–ಅಷ್ಟುವಿಧವಾದ ಜೀವನಪ್ರವಾಹ ಗಳೂ ವೇತಸವೃಕ್ಷದ (ಸಂಸಾರವೃಕ್ಷದ) ಶಾಖೆಗಳಿಂದ ಉತ್ಪನ್ನವಾಗುತ್ತವೆ.) ಇದು ಚಿದಾತ್ಮನ ಮಧ್ಯದಲ್ಲಿರುವ ಬ್ರಹ್ಮಾಂಡಬೀಜದ ಅಥವಾ ಸಂಸಾರವೃಕ್ಷದ ವಿಷಯವಾಯಿತು. ಚಿದಾತ್ಮನ ವಿಷಯವನ್ನು ಹೇಳುತ್ತೇನೆ :

**ಯಸ್ಮಿನ್ನಗ್ನಿಮುಖಾ ದೇವಾಃ ಸೇನ್ದ್ರಾಃ ಸಹಮರುದ್ಗಣಾಃ ।**
**ಈಜಿರೇ ಕ್ರತುಭಿಃ ಶ್ರೇಷ್ಠೈಸ್ತತ್ಪದಂ ಪರಮಂ ಮಮ ॥೩೦॥**

ಯಾವ ಪರಮಪದದ ಪ್ರಾಪ್ತಿಗಾಗಿ ಅಗ್ನಿಮುಖರಾದ, ಸಪ್ತಮರುತ್ತುಗಳಿಂದೊಡಗೂಡಿದ ಇಂದ್ರಾದಿ ದೇವತೆಗಳು ಪರಮೋತ್ಕೃಷ್ಟವಾದ ಯಾಗಗಳನ್ನು ಮಾಡಿದರೋ–ಆ ಪರಮಪದವೇ ನಾನಾಗಿದ್ದೇನೆ. (ಅಗ್ನಿಯೇ ಮೊದಲಾದವರು ಯೋಗಯಜ್ಞದಿಂದ ವಿದ್ಯಾರೂಪವಾದ, ಪರಮೋತ್ಕೃಷ್ಟವಾದ, ಜ್ಞಾತೃ-ಜ್ಞಾನ-ಜ್ಞೇಯಭಾವಶೂನ್ಯವಾದ ನನ್ನ ಸ್ಥಾನವನ್ನು ಪಡೆ ಯಲು ಯತ್ನಿಸುತ್ತಾರೆ.)"

೧೮೬ನೆಯ ಅಧ್ಯಾಯವು ಮುಗಿಯಿತು.

೧೮೭ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ವೈವಸ್ವತಮನುವಿನ ಚರಿತ್ರೆ : ಮಹಾವಿಷ್ಣುವಿನ ಮತ್ಸ್ಯಾವತಾರದ ಕಥೆ

ಜನಮೇಜಯ! ತಾರ್ಕ್ಷ್ಯನಿಗೆ ಸರಸ್ವತಿಯು ಮಾಡಿದ ಉಪದೇಶವನ್ನು ಕೇಳಿದನಂತರ ಪಾಂಡುಪುತ್ರನಾದ ಯುಧಿಷ್ಠಿರನು ವಿವಸ್ವತನ ಮಗನಾದ ಮನುವಿನ ಚರಿತವನ್ನು ಹೇಳಬೇಕೆಂದು ಮಾರ್ಕಂಡೇಯಮಹರ್ಷಿಗಳನ್ನು ಪ್ರಾರ್ಥಿಸಿದನು.

ಮಾರ್ಕಂಡೇಯರು ಮುಗುಳ್ನಗೆಯನ್ನು ಬೀರುತ್ತಾ ಪ್ರವಚನವನು ಪ್ರಾರಂಭಿಸಿದರು :

**ವಿವಸ್ವತಃ ಸುತೋ ರಾಜನ್ಮಹರ್ಷಿಃ ಸುಪ್ರತಾಪವಾನ್ ।**
**ಬಭೂವ ನರಶಾರ್ದೂಲ ಪ್ರಜಾಪತಿಸಮದ್ಯುತಿಃ ॥೨॥**

**ಓಜಸಾ ತೇಜಸಾ ಲಕ್ಷ್ಮ್ಯಾ ತಪಸಾ ಚ ವಿಶೇಷತಃ ।**
**ಅತಿಚಕ್ರಾಮ ಪಿತರಂ ಮನುಃ ಸ್ವಂ ಚ ಪಿತಾಮಹಮ್ ॥೩॥**

"ನರಶ್ರೇಷ್ಠನೇ! ವಿವಸ್ವತನ (ಸೂರ್ಯನ) ಮಗನಾದ, ಮಹರ್ಷಿಯಾದ ಮನುವು ಬ್ರಹ್ಮನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದು ಮಹಾಪ್ರತಾಪಶಾಲಿಯಾಗಿಯೂ ಇದ್ದನು. ಓಜಸ್ಸಿನಿಂದಲೂ, ತೇಜಸ್ಸಿನಿಂದಲೂ, ಕಾಂತಿಯಿಂದಲೂ, ತಪಸ್ಸಿನಿಂದಲೂ–ಅವನು ತನ್ನ ತಂದೆ-ತಾತಂದಿರನ್ನೂ ಮೀರಿಸಿದ್ದನು.

ಮಹರ್ಷಿಯಾದ ಮನುವು ವಿಶಾಲಾ ಎಂಬ ಅರಣ್ಯದಲ್ಲಿದ್ದ ಬದರೀ ವೃಕ್ಷದ ಬಳಿಯಲ್ಲಿ ಕೈಗಳೆರಡನ್ನೂ ಮೇಲಕ್ಕೆತ್ತಿ–ಒಂದೇ ಕಾಲಿನಲ್ಲಿ ನಿಂತು, ತಲೆಯನ್ನು ತಗ್ಗಿಸಿ, ತನ್ನೆರಡು ಕಣ್ಣುಗಳನ್ನೂ ನಾಸಾಗ್ರದಲ್ಲಿ ದೃಢವಾಗಿ ನಿಲ್ಲಿಸಿ ಹತ್ತುಸಾವಿರ ವರ್ಷಗಳ ಕಾಲ ಘೋರವಾದ ತಪಸ್ಸನ್ನು ಮಾಡಿದನು. ಒಂದು ದಿನ ಆ ಮನುಮಹರ್ಷಿಯು ಚೀರಿಣೀನದಿಯ ದಡದಲ್ಲಿ ತೋಯ್ದುಬಟ್ಟೆಯನ್ನುಟ್ಟು ಜಟಾಧಾರಿಯಾಗಿ ತಪಸ್ಸುಮಾಡುತ್ತಿರುವಾಗ ನದಿಯಲ್ಲಿದ್ದ ಪುಟ್ಟಮೀನೊಂದು ಮನುವನ್ನು ಸಂಬೋಧಿಸಿ ಹೇಳಿತು : “ಪೂಜ್ಯನೇ! ನಾನೊಂದು ಕ್ಷುದ್ರವಾದ ಮೀನಾಗಿದ್ದೇನೆ. ನಾನಿಲ್ಲಿ ಬಲಿಷ್ಠರಿಂದ ಭಯಪಡುತ್ತಿದ್ದೇನೆ. ನನ್ನ ಜಾತಿಗೆ ಸೇರಿದ ದೊಡ್ಡ-ದೊಡ್ಡ ಮತ್ಸ್ಯಗಳಿಂದ ಭಯಪಡುತ್ತಿರುವ ನನ್ನನ್ನು ಸಂರಕ್ಷಿಸುವುದು ನಿನ್ನ ಕರ್ತವ್ಯವಾಗಿದೆ.

**ದುರ್ಬಲಂ ಬಲವನ್ತೋ ಹಿ ಮತ್ಸ್ಯಾ ಮತ್ಸ್ಯಂ ವಿಶೇಷತಃ ।**
**ಆಸ್ವದನ್ತಿ ಸದಾ ವೃತ್ತಿರ್ವಿಹಿತಾ ನಃ ಸನಾತನೀ ॥೮॥**

ಬಲಹೀನವಾದ ಸಣ್ಣ-ಸಣ್ಣ ಮೀನುಗಳನ್ನು ಬಲಿಷ್ಠವಾದ ಮತ್ತು ದೊಡ್ಡದಾದ ಮೀನುಗಳು ನುಂಗಿಬಿಡುತ್ತವೆ. ಈ ವೃತ್ತಿಯು ನಮ್ಮಲ್ಲಿ ಸನಾತನಕಾಲದಿಂದಲೂ (ಬಹಳ ಹಿಂದಿನಿಂದಲೂ) ನಡೆದುಕೊಂಡು ಬಂದಿರುವ ಪದ್ಧತಿಯಾಗಿದೆ. ಆದುದರಿಂದ ಭಯವೆಂಬ ಘೋರಸಮುದ್ರದಲ್ಲಿ ಮುಳುಗಿಹೋಗಿರುವ ನನ್ನನ್ನು ಉದ್ಧರಿಸಲು ನೀನು ಸಮರ್ಥನಾಗಿರುವೆ. ‘ಈ ಚಿಕ್ಕ ಜಂತುವಿನಿಂದ ನನಗೇನಾಗಬೇಕಾಗಿದೆ’? ಎಂದು ಉದಾಸೀನ ಮಾಡಬೇಡ. ನೀನು ಮಾಡುವ ಉಪಕಾರಕ್ಕೆ ನಾನೂ ನಿನಗೆ ಪ್ರತ್ಯುಪಕಾರವನ್ನು ಕಾಲಾಂತರದಲ್ಲಿ ಮಾಡಿಯೇನು.”

ಯುಧಿಷ್ಠಿರ! ಪುಟ್ಟಮೀನಿನ ಮಾತುಗಳನ್ನು ಕೇಳಿದೊಡನೆಯೇ ವೈವಸ್ವತಮನುವು ದಯಾರ್ದ್ರಹೃದಯನಾಗಿ ಆ ಮೀನನ್ನು ಜಲಸಮೇತವಾಗಿ ಬೊಗಸೆಯಲ್ಲಿಯೇ ಮೇಲೆತ್ತಿ ತನ್ನ ಸಮೀಪದಲ್ಲಿದ್ದ, ನೀರಿನಿಂದ ತುಂಬಿದ್ದ ಮಣ್ಣಿನ ಪಾತ್ರೆಯೊಂದರಲ್ಲಿ ಜೋಪಾನವಾಗಿಟ್ಟು–ತನ್ನ ಮಗುವನ್ನು ಕಾಪಾಡುವ ರೀತಿಯಲ್ಲಿ–ಬಹಳ ಎಚ್ಚರಿಕೆಯಿಂದಲೂ, ಆದರಪೂರ್ವಕ

ವಾಗಿಯೂ ಅದನ್ನು ಸಂರಕ್ಷಿಸುತ್ತಿದ್ದನು. ಹಲವಾರು ವರ್ಷಗಳು ಕಳೆದ ನಂತರ ಚಂದ್ರನ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ ಆ ಮೀನು ಆ ಪಾತ್ರೆಯಷ್ಟೇ ದೊಡ್ಡದಾಗಿ ಬೆಳೆಯಿತು. ನಿಂತಲ್ಲಿಯೇ ನಿಲ್ಲಬೇಕಾಗಿತ್ತೇ ಹೊರತು ಅತ್ತಿತ್ತ ಓಡಾಡಲೂ ಆ ಮೀನಿಗೆ ಸಾಧ್ಯವಾಗುತ್ತಿರಲಿಲ್ಲ. ಒಂದು ದಿನ ತನ್ನ ಯೋಗ-ಕ್ಷೇಮವನ್ನು ವಿಚಾರಿಸಲು ಬಂದ ಮನುವನ್ನು ಕುರಿತು ಮತ್ಸ್ಯವು ಹೇಳಿತು :



"ಮಹಾತ್ಮನೇ! ನನ್ನನ್ನು ಬೇರೊಂದು ಸ್ಥಳಕ್ಕೆ ಕರೆದೊಯ್ಯುವುದು ಸಾಧುವಾಗಿದೆ. ಈ ಸಣ್ಣ ಪಾತ್ರೆಯಲ್ಲಿ ನಾನು ಹೆಚ್ಚು ಕಾಲ ಜೀವಿಸಿರಲಾರೆನು."

ಮೀನಿನ ಮಾತನ್ನು ಕೇಳಿ ಕರುಣಾಮಯನಾದ ಮನುವು ಪಾತ್ರೆಯ ಸಮೇತವಾಗಿ ಮತ್ಸ್ಯವನ್ನು ಎತ್ತಿಕೊಂಡು ಹೋಗಿ ಒಂದು ದೊಡ್ಡ ಬಾವಿಯಲ್ಲಿ ಬಿಟ್ಟುಬಿಟ್ಟನು.

ಆ ಬಾವಿಯಲ್ಲಿ ಆ ಮೀನು ಅನೇಕವರ್ಷಗಳವರೆಗೆ ಸುಖವಾಗಿ ಬೆಳೆಯಿತು. ಅನಂತರದಲ್ಲಿ ಎರಡು ಯೋಜನಗಳಷ್ಟು ಉದ್ದವೂ, ಒಂದು ಯೋಜನದಷ್ಟು ಅಗಲವೂ ಇದ್ದ ಬಾವಿಯೂ ಆ ಮತ್ಸ್ಯಕ್ಕೆ ವಾಸಮಾಡಲು ಚಿಕ್ಕದಾಗಿ ಪರಿಣಮಿಸಿತು. ಯಥೇಚ್ಛವಾಗಿ ಅತ್ತಲಿತ್ತ ಓಡಾಡಲು ಅದಕ್ಕೆ ಸಾಧ್ಯವಾಗುತ್ತಿರಲಿಲ್ಲ. ಮತ್ತೊಂದು ದಿನ ಮನುವನ್ನು ಕುರಿತು ಮತ್ಸ್ಯವು ಪುನಃ ಹೇಳಿತು : "ಪೂಜ್ಯನೇ! ನಾನು ಇಲ್ಲಿಯೂ ಹೆಚ್ಚು ಕಾಲ ಜೀವಿಸಿರ ಲಾರೆನು. ನಾನು ಓಡಾಡಲು ಈ ಬಾವಿಯಲ್ಲಿ ಅವಕಾಶವಿಲ್ಲವಾಗಿದೆ. ಆದುದರಿಂದ ನನ್ನನ್ನು ಸಮುದ್ರರಾಜನ ಪತ್ನಿಯಾದ ಗಂಗಾನದಿಗೆ ಕರೆದುಕೊಂಡು ಹೋಗಿ ಅಲ್ಲಿ ಬಿಟ್ಟುಬಿಡು. ಅಲ್ಲಿಯಾದರೂ ನಾನು ಸುಖವಾಗಿರುವೆನು. ಅಥವಾ ನಿನಗೆ ಸರಿಕಾಣುವ ಬೇರೆಲ್ಲಿಗಾದರೂ ಬಿಟ್ಟುಬಿಡು. ಏಕೆಂದರೆ : ನಿನ್ನ ಆದೇಶದಂತೆ ನಡೆಯುವುದು ನನಗೆ ಯೋಗ್ಯವಾಗಿದೆ. ನನ್ನ ಈ ಬೆಳವಣಿಗೆಯು ನಿನ್ನ ಅನುಗ್ರಹದಿಂದಲೇ ಆಗಿರುವುದಲ್ಲವೇ?"

ಭಗವಂತನಾದ, ಜಿತೇಂದ್ರಿಯನಾದ, ನಾಶರಹಿತನಾದ ಮನುವು ಮತ್ಸ್ಯದ ಮಾತುಗಳನ್ನು ಕೇಳಿ ತನ್ನ ತಪೋಬಲದಿಂದ ಆ ದೊಡ್ಡಮೀನನ್ನು ಎತ್ತಿಕೊಂಡು ಬಹುವಿಶಾಲವಾದ ಪಾತ್ರದಿಂದ ಕೂಡಿದ್ದ ಗಂಗಾನದಿಯಲ್ಲಿ ಬಿಟ್ಟುಬಿಟ್ಟನು.

ಆ ಮತ್ಸ್ಯವು ಗಂಗಾನದಿಯಲ್ಲಿಯೂ ಅನೇಕವರ್ಷಗಳ ಪರ್ಯಂತ ವಾಗಿ ಬೆಳೆಯಿತು. ಕಾಲಕ್ರಮದಲ್ಲಿ ಆ ಮತ್ಸ್ಯಕ್ಕೆ ಗಂಗಾನದಿಯೂ ಚಿಕ್ಕದಾಗಿ ಪರಿಣಮಿಸಿತು. ಅಂತೆಯೇ ತನ್ನ ಯೋಗಕ್ಷೇಮವನ್ನು ವಿಚಾರಿಸಲು ಬಂದ ಮನುವಿಗೆ ಪುನಃ ಮತ್ಸ್ಯವು ಹೇಳಿತು :

"ತಂದೆಯೇ! ನನ್ನ ಈ ಮಹಾಶರೀರದಿಂದಾಗಿ ಈ ಗಂಗಾನದಿಯಲ್ಲಿ ನಾನು ಇನ್ನು ಮುಂದೆ ವಿಹರಿಸಿಕೊಂಡಿರಲಾರೆನು. ಆದುದರಿಂದ ನೀನು

ದಯಮಾಡಿ ಈ ಕೂಡಲೇ ನನ್ನನ್ನು ಸಮುದ್ರದಲ್ಲಿ ಬಿಟ್ಟುಬಿಡು. ಸಾವಕಾಶ ಮಾಡಬೇಡ."

ಮತ್ಸ್ಯದ ಅಭಿಲಾಷೆಯಂತೆ ಮನುವು ಆ ಮೀನನ್ನು ಸಮುದ್ರಕ್ಕೆ ಬಿಟ್ಟುಬಿಟ್ಟನು. ಮತ್ಸ್ಯವು ಬಹಳ ದೊಡ್ಡದಾಗಿದ್ದರೂ ಮನುವು ತನ್ನ ತಪೋಬಲದಿಂದ ಅತಿಸುಲಭವಾಗಿಯೇ ಅದನ್ನು ಸಮುದ್ರಕ್ಕೆ ಒಯ್ದನು. ಆ ಮತ್ಸ್ಯದ ಸ್ಪರ್ಶ ಮತ್ತು ವಾಸನೆಗಳು ಮನುವಿಗೆ ಬಹಳ ಹಿತಕರವಾ ಗಿದ್ದುವು.

ತನ್ನನ್ನು ಸಮುದ್ರಕ್ಕೆ ಬಿಟ್ಟನಂತರ ಮನುವನ್ನು ಕುರಿತು ಮತ್ಸ್ಯವು ಮುಗುಳ್ನಗೆಯೊಡನೆ ಹೇಳಿತು :

"ಪೂಜ್ಯನೇ! ನೀನು ನನ್ನ ರಕ್ಷಣೆಯನ್ನು ಬಹಳ ಜಾಗರೂಕತೆ ಯಿಂದಲೂ, ಆದರದಿಂದಲೂ, ಶ್ರದ್ಧೆಯಿಂದಲೂ ಮಾಡಿರುವೆ. ಕಾಲವು ಪ್ರಾಪ್ತವಾದಾಗ ನೀನೇನು ಮಾಡಬೇಕೆಂಬ ವಿಷಯವನ್ನು ಹೇಳುವೆನು. ಸಾವಧಾನಚಿತ್ತನಾಗಿ ಕೇಳು :

**ಅಚಿರಾದ್ಭಗವನ್ಭೌಮಮಿದಂ ಸ್ಥಾವರಜಙ್ಗಮಮ್ ।**
**ಸರ್ವಮೇವ ಮಹಾಭಾಗ ಪ್ರಲಯಂ ವೈ ಗಮಿಷ್ಯತಿ ॥೨೮॥**

**ಸಮ್ಪ್ರಕ್ಷಾಲನಕಾಲೋಽಯಂ ಲೋಕಾನಾಂ ಸಮುಪಸ್ಥಿತಃ ।**
**ತಸ್ಮಾತ್ತ್ವಾಂ ಬೋಧಯಾಮ್ಯದ್ಯ ಯತ್ತೇ ಹಿತಮನುತ್ತಮಮ್ ॥೨೯॥**

ಇನ್ನು ಸ್ವಲ್ಪ ಕಾಲದಲ್ಲಿಯೇ ಸ್ಥಾವರ-ಜಂಗಮಗಳಿಂದ ಕೂಡಿರುವ ಈ ಭೂಮಿಯಲ್ಲಿ ಪ್ರಳಯವು ಸಂಭವಿಸುತ್ತದೆ. ಪ್ರಳಯವೆಂದರೆ ಸಕಲ ಲೋಕಗಳನ್ನೂ ಪ್ರಕ್ಷಾಲನಮಾಡುವ ಕಾಲವಾಗುತ್ತದೆ. ಆದುದರಿಂದ ಆ ಸಮಯದಲ್ಲಿ ನಿನಗೆ ಹಿತವನ್ನುಂಟುಮಾಡುವ ಸಲುವಾಗಿ ನಾನು ನಿನಗಿದನ್ನು ಬೋಧಿಸುತ್ತಿದ್ದೇನೆ.

**ತ್ರಸಾನಾಂ ಸ್ಥಾವರಾಣಾಂ ಚ ಯಚ್ಚೇಙ್ಗಂ ಯಚ್ಚ ನೇಙ್ಗತಿ ।**
**ತಸ್ಯ ಸರ್ವಸ್ಯ ಸಮ್ಪ್ರಾಪ್ತಃ ಕಾಲಃ ಪರಮದಾರುಣಃ ॥೩೦॥**

**ನೌಶ್ಚ ಕಾರಯಿತವ್ಯಾ ತೇ ದೃಢಾ ಯುಕ್ತವಟಾರಕಾ ।**
**ತತ್ರ ಸಪ್ತರ್ಷಿಭಿಃ ಸಾರ್ಧಮಾರೋಹೇಥಾ ಮಹಾಮುನೇ ॥೩೧॥**

**ಬೀಜಾನಿ ಚೈವ ಸರ್ವಾಣಿ ಯಥೋಕ್ತಾನಿ ದ್ವಿಜೈಃ ಪುರಾ ।**
**ತಸ್ಯಮಾರೋಹಯೇರ್ನಾವಿ ಸುಸಂಗುಪ್ತಾನಿ ಭಾಗಶಃ ॥೩೨॥**

**ನೌಸ್ಥಶ್ಚ ಮಾಂ ಪ್ರತೀಕ್ಷೇಥಾಸ್ತತೋ ಮುನಿಜನಪ್ರಿಯ ।**
**ಆಗಮಿಷ್ಯಾಮ್ಯಹಂ ಶೃಙ್ಗೀ ವಿಜ್ಞೇಯಸ್ತೇನ ತಾಪಸ ॥೩೩॥**

**ಏವಮೇತತ್ತ್ವಯಾ ಕಾರ್ಯಮಾಪೃಷ್ಟೋಽಸಿ ವ್ರಜಾಮ್ಯಹಮ್ ।**
**ತಾ ನ ಶಕ್ಯಾ ಮಹತ್ಯೋ ವೈ ಆಪಸ್ತರ್ತುಂ ಮಯಾ ವಿನಾ ॥೩೪॥**

**ನಾಭಿಶಙ್ಕ್ಯಮಿದಂ ಚಾಪಿ ವಚನಂ ಮೇ ತ್ವಯಾ ವಿಭೋ ।**
**ಏವಂ ಕರಿಷ್ಯ ಇತಿ ತಂ ಸ ಮತ್ಸ್ಯಂ ಪ್ರತ್ಯಭಾಷತ ॥೩೫॥**

ಸ್ಥಾವರ-ಜಂಗಮಗಳಿಗೂ (ಚರಾಚರಪ್ರಾಣಿಗಳಿಗೂ) ಅತ್ಯಲ್ಪ ಸಮಯದಲ್ಲಿಯೇ ಸರ್ವವಿನಾಶವುಂಟಾಗುತ್ತದೆ. ಪ್ರಪಂಚದಲ್ಲಿ ಸ್ಥಾವರ-ಜಂಗಮಗಳೇ ಆದಿಯಾಗಿ ಯಾವುದೊಂದು ವಸ್ತುವೂ ಉಳಿಯುವುದಿಲ್ಲ. ಪ್ರಳಯಕಾಲವು ಅಂತಹ ದಾರುಣಮಯವಾಗಿರುವುದು. ನೀನು ಆ ಸಮಯದಲ್ಲಿ ಸುಭದ್ರವಾದ ಒಂದು ನಾವೆಯನ್ನು ಸಿದ್ಧಗೊಳಿಸಬೇಕು. ಅದಕ್ಕೆ ಒಂದು ಹಗ್ಗವನ್ನು ಕಟ್ಟಿರಬೇಕು. ಆ ನಾವೆಯಲ್ಲಿ ನಿನ್ನೊಡನೆ ಸಪ್ತರ್ಷಿಗಳೂ ಇರಬೇಕು. ಬ್ರಾಹ್ಮಣರಿಂದ ಈ ಮೊದಲೇ ಹೇಳಲ್ಪಟ್ಟಿರುವ ಸರ್ವ ಪ್ರಕಾರವಾದ ಬೀಜಗಳನ್ನೂ ಆ ನೌಕೆಯಲ್ಲಿ ಪ್ರತ್ಯೇಕವಾಗಿಟ್ಟು ಜೋಪಾನ ವಾಗಿ ಕಾಪಾಡಬೇಕು. ಇಷ್ಟು ಸಿದ್ಧತೆಗಳನ್ನು ನೀನು ಮಾಡಿಕೊಂಡು ನನಗಾಗಿ ಕಾಯುತ್ತಿರು. ನಾನು ನಿನ್ನ ಸಮೀಪಕ್ಕೆ ಬರುವೆನು. ಆ ಸಮಯದಲ್ಲಿ ನನ್ನ ತಲೆಯಲ್ಲಿ ಕೊಂಬಿರುತ್ತದೆ. ಕೊಂಬಿನಿಂದ ಕೂಡಿರುವ ನನ್ನನ್ನು ನೀನು ಆ ಸಮಯದಲ್ಲಿ ಗುರುತಿಸಲು ಸಾಧ್ಯವಾಗುವುದು. ನಾನಿನ್ನು ಸಮುದ್ರದ ಮಧ್ಯಕ್ಕೆ ಹೋಗುತ್ತೇನೆ. ನೀನು ಮಾತ್ರ ನಾನು ಹೇಳಿದುದಕ್ಕೆ ಸ್ವಲ್ಪವೂ ವ್ಯತ್ಯಾಸವಾಗದ ರೀತಿಯಲ್ಲಿ ನಡೆದುಕೊ. ನನ್ನ ಸಹಕಾರವಿಲ್ಲದೇ ಮುಂದೆ ಉಂಟಾಗಲಿರುವ ಪ್ರಳಯದ ಪ್ರವಾಹವನ್ನು ನೀನು ಖಂಡಿತವಾಗಿಯೂ ದಾಟಲಾರೆ. ವಿಭುವೇ! ನಾನು ಹೇಳಿದ ಮಾತುಗಳಲ್ಲಿ ಸಂಶಯಪಡುವ ಕಾರಣವಿಲ್ಲ.”

ಮತ್ಸ್ಯದ ಆ ಮಾತಿಗೆ ಉತ್ತರವಾಗಿ ಮನುವು ಹೇಳಿದನು : 'ನೀನು ಹೇಳಿದಂತೆಯೇ ಎಲ್ಲವನ್ನೂ ಮಾಡುವೆನು.'

(ಸಪ್ತರ್ಷಿಭಿಃ-ಎಂಬುದಕ್ಕೆ ಪ್ರಾಣೇಂದ್ರಿಯಗಳೆಂದೂ, ಬೀಜಾನಿ–ಎಂಬುದಕ್ಕೆ ಅಗೋಚರವಾದ ಕರ್ಮಫಲಗಳೆಂದೂ, ಮಾಂ–ಎಂಬುದಕ್ಕೆ ಅಂತರಾತ್ಮನೆಂದೂ, ಶೃಙ್ಗೀ–ಎಂಬುದಕ್ಕೆ ಶೃಣಾತಿ ಹಿನಸ್ತಿ, ಜೀವೋಪಾ ಧೀನ್ ಬಾಧತೇ ಇತಿ ಶೃಙ್ಗಃ–ಜೀವೋಪಾಧಿಗಳನ್ನು ಹೋಗಲಾಡಿಸುವುದು ಶೃಙ್ಗ–ಅಂತಹ ಜೀವೋಪಾಧಿಗಳನ್ನು ಹೋಗಲಾಡಿಸುವ ಸಾಮರ್ಥ್ಯವಿರು ವವನು ಶೃಙ್ಗೀ–ಪರಮಾತ್ಮ. ಹೀಗೆ ಅರ್ಥಮಾಡಿ ಮತ್ಸ್ಯರೂಪಿಯಾದ ಪರಮಾತ್ಮನು ಮನುವಿಗೆ ಆತ್ಮಬೋಧನೆಯನ್ನು ಮಾಡಿದನೆಂದು ವ್ಯಾಖ್ಯಾನ ಕಾರರು ಅರ್ಥಮಾಡಿದ್ದಾರೆ.)

ಯುಧಿಷ್ಠಿರ! ಈ ರೀತಿಯಾಗಿ ಮತ್ಸ್ಯ-ಮನುಗಳು ಪರಸ್ಪರವಾಗಿ ಮಾತನಾಡಿದನಂತರ ತಮ್ಮ ತಮ್ಮ ಸ್ಥಳಗಳಿಗೆ ಹೊರಟುಹೋದರು. ಮತ್ಸ್ಯವು ಹೇಳಿದಂತೆ ಕೇವಲ ಕೆಲವು ವರ್ಷಗಳಲ್ಲಿಯೇ ಘೋರಪ್ರಳಯ ವಾಯಿತು. ಪ್ರಪಂಚವೆಲ್ಲವೂ ಜಲಮಯವಾಯಿತು. ಇತ್ತಲಾಗಿ ಮನುವು ಮತ್ಸ್ಯವು ಹೇಳಿದಂತೆ ಜೀವಕೋಟಿಯ ನಾನಾವಿಧಗಳಾದ ಬೀಜಗಳನ್ನು ಸಂಗ್ರಹಿಸಿದನು. ಭೋರ್ಗರೆಯುತ್ತಿದ್ದ ಸಮುದ್ರದಲ್ಲಿ ಒಂದು ಸುಭದ್ರನಾವೆ ಯನ್ನೂ ಸಿದ್ಧಗೊಳಿಸಿ. ಅದರಲ್ಲಿ ಆ ಬೀಜಗಳನ್ನು ಪ್ರತ್ಯೇಕ-ಪ್ರತ್ಯೇಕವಾ ಗಿಟ್ಟು, ಸಪ್ತರ್ಷಿಗಳೊಡನೆ ನಾವೆಯಲ್ಲಿ ಕುಳಿತು, ಸಮುದ್ರಮಧ್ಯದಲ್ಲಿದ್ದ ಮತ್ಸ್ಯವನ್ನು ನೆನೆದನು. ಮತ್ಸ್ಯವೂ ಮನುವು ಸ್ಮರಿಸಿದೊಡನೆಯೇ ಶೃಂಗ ಯುಕ್ತವಾಗಿ ಅವನ ಸಮೀಪಕ್ಕೆ ಬಂದಿತು. ಹಿಂದೆಯೇ ಹೇಳಿದ್ದಂತೆ ಕೊಂಬಿ ನಿಂದ ಕೂಡಿ ಬೆಟ್ಟದೋಪಾದಿಯಲ್ಲಿ ಮೇಲಕ್ಕೆ ಬಂದ ಮೀನಿನ ಕೊಂಬಿನ ತುದಿಗೆ ಮನುವು ನೌಕೆಗೆ ಕಟ್ಟಿದ್ದ ಹಗ್ಗವನ್ನು ಕಟ್ಟಿದನು. ತನ್ನ ಕೊಂಬಿಗೆ ಕಟ್ಟಿದ್ದ ಹಗ್ಗದ ಮೂಲಕ ನಾವೆಯನ್ನು ಆ ಮತ್ಸ್ಯವು ಲವಣಸಮುದ್ರದ ಮಧ್ಯಭಾಗಕ್ಕೆ ಸೆಳೆದುಕೊಂಡು ಹೋಯಿತು. ಮತ್ಸ್ಯವು ಆ ನಾವೆಯನ್ನು ಸಮುದ್ರಮಧ್ಯದಲ್ಲಿ ಸೆಳೆದುಕೊಂಡು ಹೋಗುತ್ತಿದ್ದಾಗ ಅಲೆಗಳಿಗೆ ಸಿಕ್ಕಿದ ಆ ನಾವೆಯು ಮದಿಸಿದ ಹೆಂಗಸಿನಂತೆ ಅಲೆಗಳೊಡನೆ ನೃತ್ಯವಾಡುತ್ತಿರು

ವಂತೆಯೂ, ಗರ್ಜಿಸುತ್ತಿರುವಂತೆಯೂ ಕಾಣುತ್ತಿದ್ದಿತು. ಎತ್ತ ನೋಡಿದರೂ ಭೂಭಾಗವೇ ಕಾಣುತ್ತಿರಲಿಲ್ಲ. ಎಲ್ಲವೂ ಜಲಮಯವಾಗಿಯೇ ಇದ್ದುದರಿಂದ ಯಾವ ದಿಕ್ಕು ಎಲ್ಲಿದೆಯೆಂಬುದೂ ತಿಳಿಯುತ್ತಿರಲಿಲ್ಲ. ಆ ಜಲರಾಶಿಯು ದಿಗಂತದವರೆಗೂ ವ್ಯಾಪಿಸಿತ್ತಲ್ಲದೇ ಭೂ-ಸ್ವರ್ಗಗಳನ್ನೂ ಒಂದು ಮಾಡಿದ್ದಿತು. ಮತ್ಸ್ಯದ ರಕ್ಷಣೆಯಲ್ಲಿ ನೌಕೆಯಲ್ಲಿದ್ದ ಮನು ಮತ್ತು ಸಪ್ತರ್ಷಿಗಳ ಹೊರತಾಗಿ ಮತ್ತಾಲ್ಲಿರಲಿಲ್ಲ. ಮತ್ಸ್ಯವು ಬಹಳ ಜಾಗರೂಕತೆಯಿಂದ



ನೌಕೆಯನ್ನು ಕಾಪಾಡುತ್ತಾ ಅನೇಕವರ್ಷಗಳ ಪರ್ಯಂತವಾಗಿ ಜಲ ರಾಶಿಯ ಸುತ್ತಲೂ ಸೆಳೆದುಕೊಂಡು ಹೋಗುತ್ತಲೇ ಇದ್ದಿತು. ಕಾಲಕ್ರಮ

ದಲ್ಲಿ ಜಲರಾಶಿಯ ಮಟ್ಟವು ಸ್ವಲ್ಪ ಸ್ವಲ್ಪ ಕಡಿಮೆಯಾಗುತ್ತಾ ಬಂದು ಹಿಮವತ್ಪರ್ವತದ ಶಿಖರವು ಕಾಣಿಸಿಕೊಂಡಿತು. ಆ ಸಮಯಕ್ಕೆ ಸರಿಯಾಗಿ ಮತ್ಸ್ಯವು ಮನುವಿನ ನೌಕೆಯನ್ನು ಶಿಖರದ ಸಮೀಪಕ್ಕೆ ಸೆಳೆದು ತಂದಿತು. ನೌಕೆಯಲ್ಲಿದ್ದ ಮನುವನ್ನೂ ಮತ್ತು ಸಪ್ತರ್ಷಿಗಳನ್ನೂ ಕುರಿತು ಹೇಳಿತು :

**ಅಸ್ಮಿನ್ಹಿಮವತಃ ಶೃಙ್ಗೇ ನಾವಂ ಬಧ್ನೀತ ಮಾ ಚಿರಮ್ ।**

"ನೌಕೆಯನ್ನು ಹಿಮವತ್ಪರ್ವತದ ಈ ಶಿಖರಕ್ಕೆ ಶೀಘ್ರವಾಗಿ ಬಂಧಿಸಿರಿ."

**ಸಾ ಬದ್ಧಾ ತತ್ರ ತೈಸ್ತೂರ್ಣಮೃಷಿಭಿರ್ಭರತರ್ಷಭ ॥೪೯॥**

**ನೌರ್ಮತ್ಸ್ಯಸ್ಯ ವಚಃ ಶ್ರುತ್ವಾ ಶೃಙ್ಗೇ ಹಿಮವತಸ್ತದಾ ।**
**ತಚ್ಚ ನೌಬನ್ಧನಂ ನಾಮ ಶೃಙ್ಗಂ ಹಿಮವತಃ ಪರಮ್ ॥೫೦॥**

**ಖ್ಯಾತಮದ್ಯಾಪಿ ಕೌನ್ತೇಯ ತದ್ವಿದ್ಧಿ ಭರತರ್ಷಭ ॥೫೧॥**

ಭರತಶ್ರೇಷ್ಠನೇ! ಮೀನಿನ ಮಾತಿನಂತೆಯೇ ನೌಕೆಯ ಹಗ್ಗವನ್ನು ಮತ್ಸ್ಯಶೃಂಗದಿಂದ ತೆಗೆದು ಹಿಮವತ್ಪರ್ವತದ ಆ ಶಿಖರಕ್ಕೆ ಮನುವು ಬಿಗಿ ದನು. ಈ ಕಾರಣದಿಂದಲೇ ಹಿಮವತ್ಪರ್ವತದಲ್ಲಿರುವ ಆ ಶಿಖರವನ್ನು 'ನೌಬಂಧನ'ವೆಂಬ ಹೆಸರಿನಿಂದಲೇ ಈಗಲೂ ಕರೆಯುತ್ತಾರೆ.

ಅನಂತರದಲ್ಲಿ ಮತ್ಸ್ಯವು ಸಪ್ತರ್ಷಿಗಳನ್ನೂ ಮತ್ತು ಮನುವನ್ನೂ ಉದ್ದೇಶಿಸಿ ಹೇಳಿತು :

**ಅಹಂ ಪ್ರಜಾಪತಿರ್ಬ್ರಹ್ಮಾ ಮತ್ಪರಂ ನಾಧಿಗಮ್ಯತೇ ।**
**ಮತ್ಸ್ಯರೂಪೇಣ ಯೂಯಂ ಚ ಮಯಾಸ್ಮಾನ್ಮೋಕ್ಷಿತಾ ಭಯಾತ್ ॥೫೨॥**

**ಮನುನಾ ಚ ಪ್ರಜಾಃ ಸರ್ವಾಃ ಸದೇವಾಸುರಮಾನುಷಾಃ ।**
**ಸ್ರಷ್ಟವ್ಯಾಃ ಸರ್ವಲೋಕಾಶ್ಚ ಯಚ್ಚೇಙ್ಗಂ ಯಚ್ಚ ನೇಙ್ಗತಿ ॥೫೩॥**

**ತಪಸಾ ಚಾಪಿ ತ್ರಿವ್ರೇಣ ಪ್ರತಿಭಾಸ್ಯ ಭವಿಷ್ಯತಿ ।**
**ಮತ್ಪ್ರಸಾದಾತ್ಪ್ರಜಾಸರ್ಗೇನ ಚ ಮೋಹಂ ಗಮಿಷ್ಯತಿ ॥೫೪॥**

“ಮಹರ್ಷಿಗಳೇ! ನಾನೇ ಸಕಲಚರಾಚರಗಳಿಗೂ ನಾಯಕನು. ನಾನೇ ಬ್ರಹ್ಮನು. ನನಗಿಂತಲೂ ಶ್ರೇಷ್ಠರು ಮತ್ತಾರೂ ಇರುವುದಿಲ್ಲ. ಮತ್ಸ್ಯರೂಪಿಯಾದ ನನ್ನಿಂದ ನೀವು ಈ ಮಹಾಭಯದಿಂದ ಪಾರುಮಾಡಲ್ಪಟ್ಟಿರುವಿರಿ. ನಿಮ್ಮನ್ನು ಸಂರಕ್ಷಿಸುವ ಸಲುವಾಗಿಯೇ ನಾನು ಮತ್ಸ್ಯರೂಪವನ್ನು ಧರಿಸಿ ಈ ಮಹಾಪ್ರಲಯದ ಭಯದಿಂದ ನಿಮ್ಮನ್ನೂ–ಈ ಬೀಜರಾಶಿಯನ್ನೂ ಸಂರಕ್ಷಿಸಿರುತ್ತೇನೆ. ಈ ಬೀಜಗಳ ಮೂಲಕವಾಗಿ ಮನುವು ಪುನಃ ದೇವ-ದಾನವ-ರಾಕ್ಷಸ-ಗಂಧರ್ವಾಪ್ಸರೆಯರನ್ನೂ, ಸ್ಥಾವರ-ಜಂಗಮಾತ್ಮಕವಾದ ಚರಾಚರಗಳನ್ನೂ ಸೃಷ್ಟಿಮಾಡುತ್ತಾನೆ. ಸೃಷ್ಟಿಮಾಡುವ ಈ ಸಾಮರ್ಥ್ಯವನ್ನು ಮಹತ್ತರವಾದ ತಪಸ್ಸಿನಿಂದ ಮನುವು ಪಡೆಯುತ್ತಾನೆ. ನನ್ನ ಅನುಗ್ರಹದಿಂದಾಗಿ ಇವನು ಪ್ರಜೆಗಳ ಸೃಷ್ಟಿಕಾಲದಲ್ಲಿ ಮೋಹಪರವಶನಾಗುವುದಿಲ್ಲ.”

ಮತ್ಸ್ಯವು ಹೀಗೆ ಹೇಳಿ ಅದೃಶ್ಯವಾಯಿತು. ಅನಂತರದಲ್ಲಿ ವೈವಸ್ವತಮನುವು ಒಡನೆಯೇ ಪ್ರಪಂಚದ ಸೃಷ್ಟಿಗೆ ಉಪಕ್ರಮಿಸಿದನು. ಮತ್ಸ್ಯವು ಹೇಳಿದಂತೆ ತಪಸ್ಸನ್ನು ಮಾಡದೇ ಸೃಷ್ಟಿಯ ಕಾರ್ಯವನ್ನು ಉಪಕ್ರಮಿಸಿದುದರಿಂದ ಅವನು ಮೋಹಪರವಶನಾದನು. ಸೃಷ್ಟಿಕಾರ್ಯವು ಮುಂದುವರಿಯಲಿಲ್ಲ. ಆಗ ಅವನು ಮತ್ಸ್ಯದ ಮಾತನ್ನು ನೆನೆದು ಅತ್ಯಂತ ಘೋರವಾದ ತಪಸ್ಸಿನಲ್ಲಿ ನಿರತನಾದನು. ಅನೇಕಸಹಸ್ರವರ್ಷಗಳ ಕಾಲ ಘೋರವಾದ ತಪಸ್ಸನ್ನು ಮಾಡಿದನಂತರ ಮನುವು ಸೃಷ್ಟಿಯನ್ನು ಸುವ್ಯವಸ್ಥಿತವಾಗಿ ಯಥೋಪದಿಷ್ಟವಾಗಿ ಮಾಡಲು ಉಪಕ್ರಮಿಸಿದನು.

**ಇತ್ಯೇತನ್ಮಾತ್ಸ್ಯಕಂ ನಾಮ ಪುರಾಣಂ ಪರಿಕೀರ್ತಿತಮ್ ।**
**ಆಖ್ಯಾನಮಿದಮಾಖ್ಯಾತಂ ಸರ್ವಪಾಪಹರಂ ಮಯಾ ॥೫೭॥**

**ಯ ಇದಂ ಶೃಣುಯಾನ್ನಿತ್ಯಂ ಮನೋಶ್ಚರಿತಮಾದಿತಃ ।**
**ಸ ಸುಖೀ ಸರ್ವಪೂರ್ಣಾರ್ಥಃ ಸರ್ವಲೋಕಮಿಯಾನ್ನರಃ ॥೫೮॥**

ಯುಧಿಷ್ಠಿರ! ಈ ರೀತಿಯಲ್ಲಿ ಮತ್ಸ್ಯಪುರಾಣವು ಕೀರ್ತಿತವಾಗಿದೆ. ನನ್ನಿಂದ ಹೇಳಲ್ಪಟ್ಟ ಈ ಆಖ್ಯಾನವು ಸರ್ವಪಾಪಹರವಾದುದು. ಯಾವನು ಈ ಮನುವಿನ ಚರಿತ್ರೆಯನ್ನು ಮೊದಲಿನಿಂದಲೂ ಶ್ರದ್ಧಾನ್ವಿತನಾಗಿ ತದೇಕ

ಚಿತ್ತನಾಗಿ ಕೇಳುತ್ತಾನೆಯೋ-ಅವನು ಈ ಲೋಕದಲ್ಲಿ ತನ್ನ ಮನಸ್ಸಿನ ಕಾಮನೆಗಳೆಲ್ಲವನ್ನೂ ಪಡೆದುಕೊಂಡು ಸುಖವಾಗಿದ್ದು, ಅವಸಾನಾಂತರದಲ್ಲಿ ಸಕಲವಿಧವಾದ ಉತ್ತಮಲೋಕಗಳನ್ನೂ ಪಡೆದುಕೊಳ್ಳಲು ಸಮರ್ಥನಾಗುತ್ತಾನೆ."

೧೮೭ನೆಯ ಅಧ್ಯಾಯವು ಮುಗಿಯಿತು.

೧೮೮ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಪರ್ವ (ಮುಂದುವರಿದಿದೆ.)

## ನಾಲ್ಕು ಯುಗಗಳ ವರ್ಷಗಳ ಸಂಖ್ಯೆ: ಕಲಿಯುಗದ ಪ್ರಭಾವರ್ಣನೆ: ಪ್ರಲಯಕಾಲದ ದೃಶ್ಯ: ಮಾರ್ಕಂಡೇಯರಿಗೆ ಬಾಲಮುಕುಂದನ ದರ್ಶನ: ಮಾರ್ಕಂಡೇಯರು ಭಗವಂತನ ಉದರದಲ್ಲಿ ಪ್ರವೇಶಿಸಿ ಅಖಂಡಬ್ರಹ್ಮಾಂಡವನ್ನೇ ಅಲ್ಲಿ ಕಂಡುದು: ಹೊರಕ್ಕೆ ಬಂದು ಬಾಲಮುಕುಂದನನ್ನು ಸ್ತುತಿಸಿದುದು

ಜನಮೇಜಯ! ಮಾರ್ಕಂಡೇಯರು ಮತ್ಸ್ಯೋಪಾಖ್ಯಾನವನ್ನು ಹೇಳಿದ ನಂತರದಲ್ಲಿ ವಿನೀತನಾಗಿದ್ದ ಯುಧಿಷ್ಠಿರನು ಮಾರ್ಕಂಡೇಯರನ್ನು ಸ್ತುತಿಸಿದನು:

ಯುಧಿಷ್ಠಿರನು ಮಾಡಿದ ಮಾರ್ಕಣ್ಡೇಯಸ್ತೋತ್ರ :

**ನೈಕೇ ಯುಗಸಹಸ್ರಾನ್ತಾಸ್ತ್ವಯಾ ದೃಷ್ಟಾ ಮಹಾಮುನೇ ।**
**ನ ಚಾಪೀಹ ಸಮಃ ಕಶ್ಚಿದಾಯುಷ್ಮಾನ್ನಶ್ಯತೇ ತವ ॥೨॥**

**ವರ್ಜಯಿತ್ವಾ ಮಹಾತ್ಮಾನಂ ಬ್ರಹ್ಮಾಣಂ ಪರಮೇಷ್ಠಿನಮ್ ।**
**ನ ತೇಽಸ್ತಿ ಸದೃಶಃ ಕಶ್ಚಿದಾಯುಷಾ ಬ್ರಹ್ಮವಿತ್ತಮ ॥೩॥**

**ಅನನ್ತರಿಕ್ಷೇ ಲೋಕೇಽಸ್ಮಿನ್ದೇವದಾನವವರ್ಜಿತೇ ।**
**ತ್ವಮೇವ ಪ್ರಲಯೇ ವಿಪ್ರ ಬ್ರಹ್ಮಾಣಮುಪತಿಷ್ಠಸೇ ॥೪॥**

**ಪ್ರಲಯೇ ಚಾಪಿ ನಿರ್ವೃತ್ತೇ ಪ್ರಬುದ್ಧೇ ಚ ಪಿತಾಮಹೇ ।**
**ತ್ವಮೇಕಃ ಸೃಜ್ಯಮಾನಾನಿ ಭೂತಾನೀಹ ಪ್ರಪಶ್ಯಸಿ ॥೫॥**

**ಚತುರ್ವಿಧಾನಿ ವಿಪ್ರರ್ಷೇ ಯಥಾವತ್ಪರಮೇಷ್ಠಿನಾ ।**
**ವಾಯುಭೂತಾ ದಿಶಃ ಕೃತ್ವಾ ವಿಕ್ಷಿಪ್ಯಾಪಸ್ತತಸ್ತತಃ ॥೬॥**

ತ್ವಯಾ ಲೋಕಗುರುಃ ಸಾಕ್ಷಾತ್ಸರ್ವಲೋಕಪಿತಾಮಹಃ ।
ಆರಾಧಿತೋ ದ್ವಿಜಶ್ರೇಷ್ಠ ತತ್ಪರೇಣ ಸಮಾಧಿನಾ ॥೭॥

ಸ್ವಪ್ರಮಾಣಮಥೋ ವಿಪ್ರ ತ್ವಯಾ ಕೃತಮನೇಕಶಃ ।
ಘೋರೇಣಾವಿಶ್ಯ ತಪಸಾ ವೇಧಸೋ ನಿರ್ಜಿತಾಸ್ತ್ವಯಾ ॥೮॥

ನಾರಾಯಣಾಙ್ಕಪ್ರಖ್ಯಸ್ತ್ವಂ ಸಾಮ್ಪರಾಯೇಽತಿಪಠ್ಯಸೇ ।
ಭಗವಾನನೇಕಶಃ ಕೃತ್ವಾ ತ್ವಯಾ ವಿಷ್ಣೋಶ್ಚ ವಿಶ್ವಕೃತ್ ॥೯॥

ಕರ್ಣಿಕೋದ್ಧರಣಂ ದಿವ್ಯಂ ಬ್ರಹ್ಮಣಃ ಕಾಮರೂಪಿಣಃ ।
ರತ್ನಾಲಂಕಾರಯೋಗಾಭ್ಯಾಂ ದೃಗ್ಭ್ಯಾಂ ದೃಷ್ಟಸ್ತ್ವಯಾ ಪುರಾ ॥೧೦॥

ತಸ್ಮಾತ್ತವಾನ್ತಕೋ ಮೃತ್ಯುರ್ಜರಾ ವಾ ದೇಹನಾಶಿನೀ ।
ನ ತ್ವಾಂ ವಿಶತಿ ವಿಪ್ರರ್ಷೇ ಪ್ರಸಾದಾತ್ಪರಮೇಷ್ಠಿನಃ ॥೧೧॥

ಯದಾ ನೈವ ರವಿರ್ನಾಗ್ನಿರ್ನ ವಾಯುರ್ನ ಚ ಚನ್ದ್ರಮಾಃ ।
ನೈವಾನ್ತರಿಕ್ಷಂ ನೈವೋರ್ವೀ ಶೇಷಂ ಭವತಿ ಕಿಂಚನ ॥೧೨॥

ತಸ್ಮಿನ್ನೇಕಾರ್ಣವೇ ಲೋಕೇ ನಷ್ಟೇ ಸ್ಥಾವರಜಙ್ಗಮೇ ।
ನಷ್ಟೇ ದೇವಾಸುರಗಣೇ ಸಮುತ್ಪನ್ನಮಹೋರಗೇ ॥೧೩॥

ಶಯಾನಮಮಿತಾತ್ಮನಂ ಪದ್ಮೋತ್ಪಲನಿಕೇತನಮ್ ।
ತ್ವಮೇಕಃ ಸರ್ವಭೂತೇಶಂ ಬ್ರಹ್ಮಾಣಮುಪತಿಷ್ಠಸಿ ॥೧೪॥

ಏತತ್ಪ್ರತ್ಯಕ್ಷತಃ ಸರ್ವಂ ಪೂರ್ವಂ ವೃತ್ತಂ ದ್ವಿಜೋತ್ತಮ ।
ತಸ್ಮಾದಿಚ್ಛಾಮ್ಯಹಂ ಶ್ರೋತುಂ ಸರ್ವಹೇತ್ವಾತ್ಮಿಕಾಂ ಕಥಾಮ್ ॥೧೫॥

ಅನುಭೂತಂ ಹಿ ಬಹುಶಸ್ತ್ವಯೈಕೇನ ದ್ವಿಜೋತ್ತಮ ।
ನ ತೇಽಸ್ತ್ಯವಿದಿತಂ ಕಿಂಚಿತ್ಸರ್ವಲೋಕೇಷು ನಿತ್ಯದಾ ॥೧೬॥

“ಮಹರ್ಷಿಯೇ! ನೀನು ಕೇವಲ ಒಂದು ಸಹಸ್ರಯುಗಗಳು ಕಳೆದಿರುವುದನ್ನು ಮಾತ್ರವೇ ನೋಡಿರುವುದಿಲ್ಲ. ಅನೇಕಸಹಸ್ರಯುಗಗಳು ಕಳೆದು

ಹೋದುದನ್ನೂ ನೀನು ಪ್ರತ್ಯಕ್ಷವಾಗಿ ನೋಡಿರುವೆ. ಈ ಭುವನತ್ರಯಗಳಲ್ಲಿಯೂ ನಿನ್ನಂತಹ ದೀರ್ಘಾಯುಷ್ಮಂತನು ಮತ್ತಾರೂ ಇರುವುದಿಲ್ಲ. ಪರಮೇಷ್ಠಿಯಾದ, ಪಿತಾಮಹನಾದ ಬ್ರಹ್ಮನೊಬ್ಬನನ್ನುಳಿದು ಮತ್ತಾರೂ ನಿನ್ನಷ್ಟು ದೀರ್ಘಕಾಲ ಜೀವಿಸಿರುವುದಿಲ್ಲ. ಸ್ವರ್ಗ-ಮರ್ತ್ಯ-ಪಾತಾಳ ಗಳೊಂದೂ ಇಲ್ಲದಾಗ–ಅಂತರಿಕ್ಷವಾಗಲೀ ಲೋಕಗಳಾಗಲೀ ಇಲ್ಲದಾಗ–ಭುವನತ್ರಯಗಳೂ ದೇವ-ದಾನವ-ಮಾನವ-ಗಂಧರ್ವ-ಯಕ್ಷ-ರಾಕ್ಷಸ-ಪಿಶಾಚ-ನಾಗರುಗಳಿಂದಲೂ ವರ್ಜಿತವಾದಾಗ–ಸಕಲಭುವನಗಳೂ ಜಲಮಯವಾಗಿ ಪರಬ್ರಹ್ಮನೊಬ್ಬನೇ ಆಲದೆಲೆಯ ಮೇಲೆ ಮಲಗಿ ತೇಲುತ್ತಿರುವ ಸಮಯದಲ್ಲಿ ನೀನೊಬ್ಬನು ಮಾತ್ರವೇ ಉಳಿದಿದ್ದು ಆ ಮಹಾಪುರುಷನನ್ನು ಆರಾಧಿಸುವೆ. ಪ್ರಲಯಕಾಲವು ಮುಗಿದು ಪ್ರಜಾಪತಿಬ್ರಹ್ಮನು ಪರಮಾತ್ಮನ ನಾಭಿಕಮಲದಿಂದ ಉದಯಿಸಿ ಸೃಷ್ಟಿಕಾರ್ಯವನ್ನು ಪ್ರಾರಂಭಿಸುವಾಗ ನೀನೊಬ್ಬನೇ ಸಾಕ್ಷಿಭೂತನಾಗಿದ್ದು ಈ ಅಖಂಡಬ್ರಹ್ಮಾಂಡದ ಪುನಃಸೃಷ್ಟಿಯನ್ನೂ ವೀಕ್ಷಿಸುವೆ. ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜಗಳೆಂಬ ನಾಲ್ಕು ವಿಧಗಳಾದ ಬ್ರಹ್ಮಸೃಷ್ಟಿಯನ್ನೂ ನೀನು ಪ್ರತ್ಯಕ್ಷವಾಗಿ ಕಾಣುವೆ. ನಾಲ್ಕು ದಿಕ್ಕುಗಳನ್ನೂ ವಾಯುಮಯವನ್ನಾಗಿ ಮಾಡುವ ಮತ್ತು ನೀರನ್ನು ಆಯಾ ಸ್ಥಳಗಳಲ್ಲಿ ಪ್ರತಿಷ್ಠಿಸುವ ಸೃಷ್ಟಿವೈಚಿತ್ರ್ಯವನ್ನೂ ನೀನು ಅವಲೋ ಕಿಸುವೆ. ದ್ವಿಜಶ್ರೇಷ್ಠನೇ! ನೀನು ಸಮಾಧಿಸ್ಥಿತಿಯಲ್ಲಿ ತತ್ಪರನಾಗಿದ್ದು ಸರ್ವ ಲೋಕಪಿತಾಮಹನಾದ, ಲೋಕಗುರುವಾದ ಪರಬ್ರಹ್ಮನನ್ನು ಆರಾಧಿಸುವೆ. ಹಿಂದೆ ಹೇಳಿದ ರೀತಿಯಲ್ಲಿ ನೀನು ಪ್ರಳಯಾನಂತರ ಚತುರ್ಮುಖಬ್ರಹ್ಮನಿಂದ ಮಾಡಲ್ಪಡುವ ವಿಶ್ವಸೃಷ್ಟಿಯನ್ನು ಅನೇಕ ಬಾರಿ ನೋಡಿರುವೆ.

ನೀನು ಮಾಡಿರುವ ಘೋರತಪಸ್ಸಿನಿಂದ ವಿಶ್ವದ ಸೃಷ್ಟಿಯನ್ನು ಮಾಡುವ ಬ್ರಹ್ಮರೂ ಜಯಿಸಲ್ಪಟ್ಟಿದ್ದಾರೆ. ನೀನು ನಾರಾಯಣಾಂಕಸ್ಥನೆಂದೂ-ಶ್ರೀಮನ್ನಾರಾಯಣನ ಪರಮಭಕ್ತನೆಂದೂ ಪ್ರಸಿದ್ಧನಾಗಿರುವೆ. ಯೋಗಿಗಳ ಮತ್ತು ಭಗವದ್ಭಕ್ತರ ಹೃದಯಕಮಲಗಳಲ್ಲಿ ಮಾತ್ರವೇ ಗೋಚರನಾಗುವ ಶ್ರೀಮನ್ನಾರಾಯಣನನ್ನು ನೀನು ಇದುವರೆಗೆ ಅನೇಕಬಾರಿ ವೈರಾಗ್ಯದಿಂದಲೂ ಅಭ್ಯಾಸ ಬಲದಿಂದಲೂ ಹೃದಯದಲ್ಲಿರುವ ಪುಂಡರೀಕವನ್ನರಳಿಸಿ ಅದರಲ್ಲಿರುವ ವೇದಸಾರನಾದ ಜ್ಯೋತಿಸ್ವರೂಪನಾದ ಆ ಪರಮಾತ್ಮನನ್ನು ಸಂದರ್ಶಿಸಿರುವೆ.

ಪರಮೇಷ್ಠಿಯ ಅನುಗ್ರಹದಿಂದಲೂ ಮತ್ತು ನಿನ್ನ ವೈರಾಗ್ಯ-ಯೋಗಾಭ್ಯಾಸ ಗಳಿಂದಲೂ ದೇಹನಾಶಕಗಳಾದ ಮೃತ್ಯುವಾಗಲೀ, ಮುಪ್ಪಾಗಲೀ ನಿನ್ನ ಬಳಿಗೆ ಸುಳಿಯಲಾರವು. ಯಾವ ಸಮಯದಲ್ಲಿ ಸೂರ್ಯ, ಚಂದ್ರ, ಅಗ್ನಿ, ವಾಯು ಅಂತರಿಕ್ಷ, ಭೂಮಿ–ಇವುಗಳಾವುವೂ ಇರುವುದಿಲ್ಲವೋ, ಅಖಂಡ ಬ್ರಹ್ಮಾಂಡವೂ ಜಲಮಯವಾಗಿರುವುದೋ, ಸ್ಥಾವರ-ಜಂಗಮಗಳೂ, ದೇವಾಸುರರೂ, ನಾಗ-ಮಹಾನಾಗಗಳೂ ವಿನಷ್ಟರಾಗಿ ಹೋಗಿರುವರೋ– ಅಂತಹ ಸಮಯದಲ್ಲಿ ಪದ್ಮೋತ್ಪಲನಿಕೇತನವಾಗಿ ಶಾಂತನಾಗಿ ಮಲಗಿರುವ, ಸರ್ವಭೂತಗಳಿಗೂ ಈಶನಾದ, ಪರಬ್ರಹ್ಮಸ್ವರೂಪನಾದ, ಮಹಾತ್ಮನಾದ ಶ್ರೀಮನ್ನಾರಾಯಣನನ್ನು ನೀನೊಬ್ಬನೇ ಸೇವೆಮಾಡುವೆ. ಈ ದೃಶ್ಯಗಳೆಲ್ಲ ವನ್ನೂ ನೀನು ಅನೇಕಬಾರಿ ನೋಡಿರುವೆ. ಯಾರಿಂದಲೂ ಕೇಳಲು ಸಾಧ್ಯ ವಾಗದ ಅನೇಕ ದೃಶ್ಯಗಳನ್ನು ನೀನು ನೋಡಿರುವೆ. ನಿನಗೆ ತಿಳಿಯದಿರುವ ವಿಷಯವಾಗಲಿ, ನೀನು ಕಾಣದ ದೃಶ್ಯವಾಗಲಿ ಈ ಮೂರು ಲೋಕಗಳ ಲ್ಲಿಯೂ ಇರುವುದಿಲ್ಲ. ಆದುದರಿಂದಲೇ ನಾನು ಈ ಪರಮತತ್ತ್ವವನ್ನು ನಿನ್ನಿಂದಲೇ ಕೇಳಿ ತಿಳಿದುಕೊಳ್ಳಬೇಕೆಂಬ ಆಶಯದಿಂದಿರುತ್ತೇನೆ.”

ಅದಕ್ಕುತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ :

“ಯುಧಿಷ್ಠಿರ! ವೇದಾಂತವೇದ್ಯನಾದ ಸ್ವಯಂಭುವಿಗೆ ನಮಸ್ಕರಿಸಿ ನಿನ್ನ ಮನೋಭಿಲಷಿತವನ್ನು ಹೇಳುತ್ತೇನೆ :

ಪುರುಷಾಯ ಪುರಾಣಾಯ ಶಾಶ್ವತಾಯಾವ್ಯಯಾಯ ಚ ।
ಅವ್ಯಕ್ತಾಯ ಸುಸೂಕ್ಷ್ಮಾಯ ನಿರ್ಗುಣಾಯ ಗುಣಾತ್ಮನೇ ॥೧೮॥

ಸ ಏಷ ಪುರುಷವ್ಯಾಘ್ರ ಪೀತವಾಸಾ ಜನಾರ್ದನಃ ।
ಏಷ ಕರ್ತಾ ವಿಕರ್ತಾ ಚ ಭೂತಾತ್ಮಾ ಭೂತಕೃತ್ಪ್ರಭುಃ ॥೧೯॥

ಅಚಿನ್ತ್ಯಂ ಮಹದಾಶ್ಚರ್ಯಂ ಪವಿತ್ರಮಿತಿ ಚೋಚ್ಯತೇ ।
ಅನಾದಿನಿಧನಂ ಭೂತಂ ವಿಶ್ವಮವ್ಯಯಮಕ್ಷಯಮ್ ।
ಏಷ ಕರ್ತಾ ನ ಕ್ರಿಯತೇ ಕಾರಣಂ ಚಾಪಿ ಪೌರುಷೇ ॥೨೦॥

ಯದ್ಯೇಷಾ ಪುರುಷೋ ವೇದ ವೇದಾ ಅಪಿ ನ ತಂ ವಿದುಃ ।
ಸರ್ವಮಾಶ್ಚರ್ಯಮೇವೈತನ್ನಿವೃತ್ತಂ ರಾಜಸತ್ತಮ ॥೨೧॥

“ಪುರಾಣಪುರುಷನಾದ, ಶಾಶ್ವತನಾದ, ವ್ಯಯರಹಿತನಾದ, ಅವ್ಯಕ್ತನಾದ, ಬಹುಸೂಕ್ಷ್ಮರೂಪಿಯಾದ, ಗುಣರಹಿತನಾದ, ಗುಣಗಳೇ ಆತ್ಮವಾಗಿ ಉಳ್ಳ ಸ್ವಯಂಭುವಿಗೆ ನಮಸ್ಕರಿಸುತ್ತೇನೆ. ಪುರುಷವ್ಯಾಘ್ರನೇ! ಪೀತಾಂಬರವನ್ನು ಧರಿಸಿ ನಮ್ಮ ಮುಂದೆ ಉಪಸ್ಥಿತನಾಗಿರುವ ಈ ಜನಾರ್ದನನೇ ಸ್ವಯಂಭುವು. ಕರ್ತೃವೂ ಇವನೇ. ಅನೇಕಾನೇಕರೂಪಗಳನ್ನು ಧರಿಸಿರುವ ಮಹದ್ಬ್ರಹ್ಮನೂ ಇವನೇ. ಪ್ರಪಂಚದಲ್ಲಿರುವ ಚರಾಚರಪ್ರಾಣಿಗಳ ಹೃದಯಕಮಲಗಳಲ್ಲಿರತಕ್ಕವನೂ ಇವನೇ. ಚರಾಚರಪ್ರಾಣಿಗಳನ್ನು ರಕ್ಷಣೆ ಮಾಡುವವನೂ ಇವನೇ. ಇವುಗಳೆಲ್ಲಕ್ಕೂ ಪ್ರಭುವೂ ಇವನೇ ಆಗಿರುವನು. ಊಹಿಸಲೂ ಸಾಧ್ಯವಾಗದಂತಹ ಅಪಾರಪ್ರಭಾವವುಳ್ಳವನಿವನು. ಮಹಾಶ್ಚರ್ಯಕರವಾದ ಪ್ರವೃತ್ತಿಯುಳ್ಳವನು ಮತ್ತು ಪರಮಪವಿತ್ರನು–ಎಂದು ಶ್ರುತಿಗಳು ಸಾರುತ್ತವೆ. ಈ ಮಹದ್ಭೂತವು ಆದಿ-ಮಧ್ಯಾಂತರಹಿತ ವಾದುದು. ಎಲ್ಲಕ್ಕೂ ಇವನೇ ಕಾರಣನು. ಕರ್ತೃವು. ಇವನಿಗೆ ಕರ್ತನಾರೂ ಇಲ್ಲ. ಸಕಲವಿಧವಾದ ಶಕ್ತಿಗೂ ಇವನೇ ಕಾರಣನು. ಕರಣ, ಕಾರಣ, ಕರ್ತೃ, ವಿಕರ್ತೃ–ಇವುಗಳಿಷ್ಟೂ ಈ ಒಬ್ಬನೇ ಆಗಿರುವನು. ಇವನು ಸರ್ವಜ್ಞನು. ವೇದಗಳೂ ಇವನ ಸರ್ವಗುಣಗಳನ್ನೂ ತಿಳಿಯಲಾರವು. ಪರಮಾತ್ಮನಿಂದ ನಿಷ್ಪನ್ನವಾದ ಈ ಜಗತ್ತು ಪರಮಾತ್ಮನಲ್ಲಿಯೇ ಲೀನವಾಗಿ ಹೋಗುವುದು. ಪುನಃ ಈ ಜಗತ್ತು ಪರಮಾತ್ಮನಿಂದಲೇ ಪ್ರಾದುರ್ಭಾವವಾಗುವುದು. ಸೃಷ್ಟಿ-ಸ್ಥಿತಿ-ಲಯಗಳ ಈ ವೈಚಿತ್ರ್ಯವು ನಿಶ್ಚಯವಾಗಿಯೂ ಅತ್ಯಾಶ್ಚರ್ಯಕರವಾದುದು ಮತ್ತು ಅತ್ಯದ್ಭುತವಾದುದು.

ಜಗತ್ತಿನ ಮಹಾಪ್ರಳಯದ ನಂತರ ವಿಶ್ವಸೃಷ್ಟಿಯಾಗುತ್ತದೆ.

**ಚತ್ವಾರ್ಯಾಹುಃ ಸಹಸ್ರಾಣಿ ವರ್ಷಾಣಾಂ ತತ್ಕೃತಂ ಯುಗಮ್ ।**
**ತಸ್ಯ ತಾವಚ್ಛತೀ ಸಂಧ್ಯಾ ಸಂಧ್ಯಾಂಶಶ್ಚ ತಥಾವಿಧಃ ॥೨೨॥**

ಮೊದಲು ಕೃತಯುಗವು ಪ್ರಾರಂಭವಾಗುತ್ತದೆ. ಆ ಯುಗವು ನಾಲ್ಕು ಸಾವಿರ ದಿವ್ಯವರ್ಷಗಳ ಪರ್ಯಂತವಾಗಿರುವುದೆಂದು ಹೇಳುತ್ತಾರೆ. ನಾಲ್ಕು ಸಾವಿರ ವರ್ಷಗಳ ಜೊತೆಗೆ ನಾನೂರು ವರ್ಷಗಳು ಸಂಧ್ಯೆಯೆಂದೂ-ನಾನೂರು ವರ್ಷಗಳು ಸಂಧ್ಯಾಂಶಗಳೆಂದೂ ಹೇಳಲ್ಪಟ್ಟಿದೆ. (ಯುಗವು ಕಳೆ

ದಂತೆಲ್ಲಾ ಸಂಧ್ಯಾಂಶಗಳೂ-ಯುಗಧರ್ಮಗಳೂ ಕ್ಷಯಿಸುತ್ತಾ ಹೋಗು ವುವು. ಸಂಧ್ಯಾಕಾಲವೆಂದು ಉಕ್ತವಾಗಿರುವ ಕೃತಯುಗದ ನಾಲ್ಕು ನೂರು ವರ್ಷಗಳಲ್ಲಿ ತ್ರೇತಾಯುಗದ ಧರ್ಮವು ಸ್ವಲ್ಪವಾಗಿ ಬೆರೆಯುತ್ತಾ ಹೋಗು ವುದು. ತ್ರೇತಾಯುಗದ ಸಂಧ್ಯೆಯಲ್ಲಿ ದ್ವಾಪರಯುಗದ ಧರ್ಮವು ಬೆರೆಯು ವುದು. ದಿನದಲ್ಲಿ ಎರಡು ಸಂಧ್ಯೆಗಳಿರುವಂತೆ ಈ ಯುಗಗಳನ್ನೇ ಹಗಲನ್ನಾಗಿ ಪರಿಗಣಿಸಿ ಕೃತಯುಗದಲ್ಲಿ ಹಗಲಿನ ಪರಿಮಾಣವು ನಾಲ್ಕುಸಾವಿರ ವರ್ಷ ಗಳೆಂದೂ ಮತ್ತು ಪ್ರಾತಃಸಂಧ್ಯಾಕಾಲವು ನಾನೂರು ವರ್ಷಗಳೆಂದೂ- ಸಾಯಂಸಂಧ್ಯಾಕಾಲವು ನಾನೂರು ವರ್ಷಗಳೆಂದೂ ಹೇಳುತ್ತಾರೆ. ಒಟ್ಟಿನಲ್ಲಿ ಕೃತಯುಗದ ಒಟ್ಟು ವರ್ಷಗಳು ೪,೮೦೦. ತ್ರೇತಾ-೩,೬೦೦ ವರ್ಷಗಳು. ದ್ವಾಪರ-೨,೪೦೦ ವರ್ಷಗಳು. ಕಲಿ-೧,೨೦೦ ವರ್ಷಗಳು.)

**ತ್ರೀಣಿ ವರ್ಷಸಹಸ್ರಾಣಿ ತ್ರೇತಾಯುಗಮಿಹೋಚ್ಯತೇ ।**
**ತಸ್ಯ ತಾವಚ್ಛತೀ ಸಂಧ್ಯಾ ಸಂಧ್ಯಾಂಶಶ್ಚ ತತಃ ಪರಮ್ ॥೨೩॥**

ತ್ರೇತಾಯುಗವು ಮೂರು ಸಾವಿರ ದಿವ್ಯವರ್ಷಗಳ ಪರ್ಯಂತವಾಗಿ ರುವುದೆಂದು ಹೇಳುತ್ತಾರೆ. ಈ ಯುಗದ ಸಂಧ್ಯಾಕಾಲವು ಮುನ್ನೂರು ವರ್ಷಗಳು ಮತ್ತು ಸಂಧ್ಯಾಂಶವು ಮುನ್ನೂರು ವರ್ಷಗಳು.

**ತಥಾ ವರ್ಷಸಹಸ್ರೇ ದ್ವೇ ದ್ವಾಪರಂ ಪರಿಮಾಣತಃ ।**
**ತಸ್ಯಾಪಿ ದ್ವಿಶತೀ ಸಂಧ್ಯಾ ಸಂಧ್ಯಾಂಶಶ್ಚ ತಥಾವಿಧಃ ॥೨೪॥**

ಅದಕ್ಕೆ ಮುಂದಿನ ಯುಗವೇ ದ್ವಾಪರ. ಈ ಯುಗದ ಕಾಲಮಾನ ಎರಡು ಸಾವಿರ ದಿವ್ಯವರ್ಷಗಳು. ಈ ಯುಗದ ಸಂಧ್ಯಾಕಾಲವು ಇನ್ನೂರು ವರ್ಷಗಳು. ಸಂಧ್ಯಾಂಶವು ಇನ್ನೂರು ವರ್ಷಗಳು. ಇದರ ಮುಂದಿನ ಯುಗವೇ ಕಲಿ.

**ಸಹಸ್ರಮೇಕಂ ವರ್ಷಾಣಾಂ ತತಃ ಕಲಿಯುಗಂ ಸ್ಮೃತಮ್ ।**
**ತಸ್ಯ ವರ್ಷಶತಂ ಸಂಧಿಃ ಸಂಧ್ಯಾಂಶಶ್ಚ ತತಃ ಪರಮ್ ॥೨೫॥**

ಕಲಿಯುಗವು ಒಂದು ಸಾವಿರ ದಿವ್ಯವರ್ಷಪರ್ಯಂತವಾಗಿರುತ್ತದೆ. ಆ

ಯುಗದ ಸಂಧ್ಯಾಕಾಲವು ನೂರು ವರ್ಷಪರ್ಯಂತವಾಗಿಯೂ–ಸಂಧ್ಯಾಂಶವು ನೂರುವರ್ಷಪರ್ಯಂತವಾಗಿಯೂ ಇರುತ್ತದೆ.

**ಸಂಧಿಸಂಧ್ಯಾಂಶಯೋಸ್ತುಲ್ಯಂ ಪ್ರಮಾಣಮುಪಧಾರಯ ॥೨೬॥**

ಸಂಧಿ-ಸಂಧ್ಯಾಂಶಗಳ ಪರಿಮಾಣವು ಏಕರೀತಿಯಲ್ಲಿರುತ್ತದೆ. (ಇಲ್ಲಿ ಸಂಧ್ಯಾ ಎಂದರೆ ನಿರ್ದಿಷ್ಟಯುಗದ ಸಂಧ್ಯಾಕಾಲ. ಕೃತಯುಗದ ನಾಲ್ಕು ಸಾವಿರ ವರ್ಷಗಳನ್ನು ಒಂದು ಹಗಲನ್ನಾಗಿ ಭಾವಿಸಿದರೆ–ಇದರಲ್ಲಿ ಪ್ರಾತಃ ಸಂಧ್ಯೆ ನಾಲ್ಕುನೂರು ವರ್ಷಗಳು. ಸಂಧ್ಯಾಂಶ ಅಥವಾ ಯುಗದ ಕಡೆಯ ಭಾಗ (ದಿನದ ಕಡೆಯ ಭಾಗದಲ್ಲಿ ಸಾಯಂಸಂಧ್ಯೆಯು ಬರುವಂತೆ) ನಾಲ್ಕು ನೂರು ವರ್ಷಗಳು. ಕೃತಯುಗದ ಸಂಧ್ಯಾಂಶದ ನಾಲ್ಕುನೂರು ವರ್ಷಗಳು ತ್ರೇತಾಯುಗದ ಸಂಧ್ಯೆಯ ಮುನ್ನೂರು ವರ್ಷಗಳಿಗೆ ಸಮನಾದುದು. ಅರ್ಥಾತ್ ಏಳು ನೂರು ವರ್ಷಗಳು ಬದಲಾಗುವ ವಾತಾವರಣದಿಂದ ಕೂಡಿರುತ್ತವೆ. ಇದರಂತೆಯೇ ತ್ರೇತಾಯುಗದ ಸಂಧ್ಯಾಂಶವು ಮುನ್ನೂರು ವರ್ಷಗಳು ಮತ್ತು ದ್ವಾಪರಯುಗದ ಸಂಧ್ಯೆಯು ಇನ್ನೂರು ವರ್ಷಗಳು–ಒಟ್ಟು ಐದುನೂರು ವರ್ಷಗಳು ಇದೇ ವಿಧವಾದ ವಾತಾವರಣದಿಂದ ಕೂಡಿರುತ್ತವೆ. ಪುನಃ ದ್ವಾಪರಯುಗದ ಸಂಧ್ಯಾಂಶವು ಇನ್ನೂರು ವರ್ಷಗಳು ಮತ್ತು ಕಲಿಯುಗದ ಸಂಧ್ಯೆಯ ನೂರು ವರ್ಷಗಳು–ಒಟ್ಟು ಮುನ್ನೂರು ವರ್ಷಗಳು ಇದೇ ವಿಧವಾದ ವಾತಾವರಣವನ್ನು ಹೊಂದಿರುತ್ತವೆ. ಕಲಿಯುಗದ ಸಂಧ್ಯಾಂಶವು ನೂರು ವರ್ಷಗಳು ಕಳೆದೊಡನೆಯೇ ಪ್ರಳಯವಾಗುತ್ತದೆ. ಆದುದರಿಂದ ಕಲಿಯುಗದ ಸಂಧ್ಯಾಂಶಕ್ಕೂ ಕೃತಯುಗದ ಸಂಧ್ಯೆಗೂ ಸಂಬಂಧವಿರುವುದಿಲ್ಲ.)

**ಕ್ಷೀಣೇ ಕಲಿಯುಗೇ ಚೈವ ಪ್ರವರ್ತೇತ ಕೃತಂ ಯುಗಮ್ ।**
**ಏಷಾ ದ್ವಾದಶಸಾಹಸ್ರೀ ಯುಗಾಖ್ಯಾ ಪರಿಕೀರ್ತಿತಾ ॥೨೭॥**

ಯುಧಿಷ್ಠಿರ! ಕಲಿಯುಗವು ಮುಗಿದನಂತರ ಪುನಃ ಕೃತಯುಗವು ಆರಂಭವಾಗುತ್ತದೆ. ಈ ರೀತಿಯಾಗಿ ಚತುರ್ಯುಗಗಳೂ ಒಂದು ಬಾರಿ ಮುಗಿಯಲು ಹನ್ನೆರಡು ಸಾವಿರ ದಿವ್ಯವರ್ಷಗಳಾಗುತ್ತವೆ. ಇದಕ್ಕೆ ಯುಗ ಚಕ್ರವೆಂದು ಹೆಸರು. ಅಂದರೆ ಈ ಯುಗಚಕ್ರವು ಒಂದು ಬಾರಿ ತಿರುಗ ಬೇಕಾದರೆ ಹನ್ನೆರಡು ಸಾವಿರ ದಿವ್ಯವರ್ಷಗಳಾಗುತ್ತವೆ.

**ಏತತ್ಸಹಸ್ರಪರ್ಯನ್ತಮಹೋ ಬ್ರಾಹ್ಮಮುದಾಹೃತಮ್ ।**
**ವಿಶ್ವಂ ಹಿ ಬ್ರಹ್ಮಭವನೇ ಸರ್ವತಃ ಪರಿವರ್ತತೇ ॥೨೮॥**
**ಲೋಕಾನಾಂ ಮನುಜವ್ಯಾಘ್ರ ಪ್ರಲಯಂ ತಂ ವಿದುರ್ಬುಧಾಃ ।**

ಇಂತಹ ಯುಗಚಕ್ರವು ಒಂದು ಸಾವಿರ ಬಾರಿ ತಿರುಗಿದರೆ ಬ್ರಹ್ಮನಿಗೆ ಒಂದು ಹಗಲಾಗುತ್ತದೆ. ಅಂದರೆ ೧,೨೦,೦೦,೦೦೦ (ಒಂದುಕೋಟಿ ಇಪ್ಪತ್ತು ಲಕ್ಷ) ವರ್ಷಗಳು. ಅಖಂಡಬ್ರಹ್ಮಾಂಡವೂ ಬ್ರಹ್ಮನಲ್ಲಿ ಐಕ್ಯವಾಗಿ ಹೋದಾಗ ಪ್ರಪಂಚದಲ್ಲಿ ಯಾವುದೊಂದು ವಸ್ತುವೂ ಇಲ್ಲವಾದಾಗ–ಸಕಲವೂ ಜಲ ಮಯವಾಗಿರುವಾಗ–ವಿದ್ವಾಂಸರು ಅದನ್ನು ಪ್ರಳಯಕಾಲ ವೆನ್ನುತ್ತಾರೆ.

**ಅಲ್ಪಾವಶಿಷ್ಟೇ ತು ತದಾ ಯುಗಾನ್ತೇ ಭರತರ್ಷಭ ।**
**ಸಹಸ್ರಾನ್ತೇ ನರಾಃ ಸರ್ವೇ ಪ್ರಾಯಶೋಽನೃತವಾದಿನಃ ॥೨೯॥**

**ಯಜ್ಞಪ್ರತಿನಿಧಿಃ ಪಾರ್ಥ ದಾನಪ್ರತಿನಿಧಿಸ್ತಥಾ ।**
**ವ್ರತಪ್ರತಿನಿಧಿಶ್ಚೈವ ತಸ್ಮಿನ್ಕಾಲೇ ಪ್ರವರ್ತತೇ ॥೩೦॥**

ಒಂದು ಸಾವಿರ ಚತುರ್ಯುಗಗಳು ಮುಗಿಯಲು ಸ್ವಲ್ಪಕಾಲ ಉಳಿದಿರುವಾಗ–ಅಂದರೆ ಕಲಿಯುಗದ ಅಂತ್ಯಭಾಗದಲ್ಲಿ ಜನರು ಅನೃತಭಾಷಿಗಳಾಗುತ್ತಾರೆ. ಆ ಕಾಲದಲ್ಲಿ ಯಜ್ಞಗಳನ್ನಾಗಲೀ, ದಾನಗಳನ್ನಾಗಲೀ, ವ್ರತಗಳನ್ನಾಗಲೀ–ಪ್ರತಿನಿಧಿಗಳ ಮೂಲಕವಾಗಿ ಮಾಡಿಸುತ್ತಾರೆಯೇ ಹೊರತು ಯಜಮಾನನಾದವನೇ ಅವುಗಳನ್ನು ಮಾಡುವುದಿಲ್ಲ. ಯಜಮಾನನಾದವನು ಬೇರೊಬ್ಬರ ಮೂಲಕ ಆ ಕ್ರಿಯೆಗಳನ್ನು ಮಾಡಿಸಿ ಪ್ರತಿನಿಧಿಗೂ ಅಷ್ಟಿಷ್ಟು ದಕ್ಷಿಣೆಯನ್ನು ಕೊಟ್ಟುಬಿಡುತ್ತಾನೆ. ಯಜ್ಞ-ದಾನ-ತಪಸ್ಸುಗಳನ್ನು ಪ್ರಧಾನ ವಿಧಿ-ನಿಯಮಗಳಂತೆ ಆಚರಿಸದೇ ಗೌಣವಿಧಿಯಿಂದ ಪ್ರತಿನಿಧಿ ರೂಪವಾಗಿ ಸೂಕ್ಷ್ಮರೂಪದಲ್ಲಿ ಮಾಡಿ ಮುಗಿಸಿಬಿಡುತ್ತಾರೆ.

**ಬ್ರಾಹ್ಮಣಾಃ ಶೂದ್ರಕರ್ಮಾಣಸ್ತಥಾ ಶೂದ್ರಾ ಧನಾರ್ಜಕಾಃ ।**
**ಕ್ಷತ್ರಧರ್ಮೇಣ ವಾಪ್ಯತ್ರ ವರ್ತಯನ್ತಿ ಗತೇ ಯುಗೇ ॥೩೧॥**

ಬ್ರಾಹ್ಮಣರು ಶೂದ್ರರಿಗೆ ಉಚಿತವಾದ ಕರ್ಮಗಳನ್ನು ಮಾಡುತ್ತಾರೆ.

ಶೂದ್ರರು ವೈಶ್ಯರಂತೆ ಧನಾರ್ಜನೆಯಲ್ಲಿ ಪ್ರವೃತ್ತರಾಗುತ್ತಾರೆ ಮತ್ತು ಕ್ಷತ್ರಿಯಧರ್ಮವನ್ನು ಅನುಸರಿಸುತ್ತಾ ರಾಜ್ಯಭಾರವನ್ನೂ ನಡೆಸುವವರೂ ಆಗುತ್ತಾರೆ.

**ನಿವೃತ್ತಯಜ್ಞಸ್ವಾಧ್ಯಾಯಾ ದಣ್ಡಾಜಿನವಿವರ್ಜಿತಾಃ ।**
**ಬ್ರಾಹ್ಮಣಾಃ ಸರ್ವಭಕ್ಷಾಶ್ಚ ಭವಿಷ್ಯನ್ತಿ ಕಲೌ ಯುಗೇ ॥೩೨॥**

**ಅಜಪಾ ಬ್ರಾಹ್ಮಣಾಸ್ತಾತ ಶೂದ್ರಾ ಜಪಪರಾಯಣಾಃ ।**
**ವಿಪರೀತೇ ತದಾ ಲೋಕೇ ಪೂರ್ವರೂಪಂ ಕ್ಷಯಸ್ಯ ತತ್ ॥೩೩॥**

ಬ್ರಾಹ್ಮಣರು ಯಜ್ಞ-ಯಾಗಾದಿಗಳನ್ನು ಮಾಡುವುದಿಲ್ಲ. ವೇದಾಧ್ಯಯನಾಧ್ಯಾಪನಾದಿಗಳನ್ನು ಮಾಡುವುದಿಲ್ಲ. ಆಯಾ ಆಶ್ರಮಕ್ಕೆ ಯುಕ್ತವಾದ ದಂಡವನ್ನಾಗಲೀ–ಕೃಷ್ಣಾಜಿನವನ್ನಾಗಲೀ ಧಾರಣೆಮಾಡುವುದಿಲ್ಲ. ಅಭಕ್ಷ್ಯಭಕ್ಷ್ಯಗಳನ್ನು ತಿನ್ನುತ್ತಾರೆ. ಅಪೇಯವಾದುದನ್ನು ಪಾನಮಾಡುತ್ತಾರೆ. ಬ್ರಾಹ್ಮಣರು ಜಪ-ತಪಾದಿಗಳನ್ನು ಮಾಡುವುದಿಲ್ಲ. ಬ್ರಾಹ್ಮಣರಲ್ಲದವರು ಜಪ-ತಪಾದಿಗಳನ್ನು ಮಾಡಲು ಉಪಕ್ರಮಿಸುತ್ತಾರೆ. ಲೋಕದಲ್ಲಿ ಈ ವಿಧವಾದ ವೈಪರೀತ್ಯವುಂಟಾಗುವುದು ಪ್ರಳಯಕ್ಕೆ ಸೂಚಕವಾಗಿರುತ್ತದೆ.

**ಬಹವೋ ಮ್ಲೇಚ್ಛರಾಜಾನಃ ಪೃಥಿವ್ಯಾಂ ಮನುಜಾಧಿಪ ।**
**ಮೃಷಾನುಶಾಸಿನಃ ಪಾಪಾ ಮೃಷಾವಾದಪರಾಯಣಾಃ ॥೩೪॥**

**ಆನ್ಧ್ರಾಃ ಶಕಾಃ ಪುಲಿನ್ದಾಶ್ಚ ಯವನಾಶ್ಚ ನರಾಧಿಪಾಃ ।**
**ಕಾಮ್ಬೋಜಾ ಬಾಹ್ಲಿಕಾಃ ಶೂರಾಸ್ತಥಾಭೀರಾ ನರೋತ್ತಮ ॥೩೫॥**

**ನ ತದಾ ಬ್ರಾಹ್ಮಣಃ ಕಶ್ಚಿತ್ಸ್ವಧರ್ಮಮುಪಜೀವತಿ ॥೩೬॥**

ಆ ಕಾಲದಲ್ಲಿ ವೇದನಿಂದಕರಾದ ಅನೇಕಮ್ಲೇಚ್ಛರು ರಾಜ್ಯಗಳನ್ನಾಳುತ್ತಾರೆ. ಸುಳ್ಳಿನ ಆಧಾರದ ಮೇಲೆಯೇ ಅವರು ರಾಜ್ಯವನ್ನಾಳುತ್ತಾರೆ ಮತ್ತು ಅವರು ಯಾವಾಗಲೂ ಸುಳ್ಳುಹೇಳುವುದರಲ್ಲಿಯೇ ನಿರತರಾಗಿರುತ್ತಾರೆ. ಆಂಧ್ರರು, ಶಕರು, ಪುಲಿಂದರು, ಯಮನರು, ಕಾಂಬೋಜರು, ಶೂರರಾದ ಬಾಹ್ಲಿಕರು, ಆಭೀರರು–ಇವರೇ ಮುಂತಾದವರು ರಾಜ್ಯವಾಳುತ್ತಿರುತ್ತಾರೆ. ಸ್ವಧರ್ಮಯುಕ್ತವಾದ ಯಜನ-ಯಾಜನ, ಅಧ್ಯಯನ-ಅಧ್ಯಾಪನ, ದಾನ-ಪ್ರತಿಗ್ರಹಗಳೆಂಬ ಷಟ್ಕರ್ಮಗಳಲ್ಲಿ ನಿರತನಾಗಿರುವ ಒಬ್ಬ ಬ್ರಾಹ್ಮಣನೂ ಆ ಕಾಲದಲ್ಲಿರುವುದಿಲ್ಲ.

**ಕ್ಷತ್ರಿಯಾಶ್ಚಾಪಿ ವೈಶ್ಯಾಶ್ಚ ವಿಕರ್ಮಸ್ಥಾ ನರಾಧಿಪ ।**
**ಅಲ್ಪಾಯುಷಃ ಸ್ವಲ್ಪಬಲಾಃ ಸ್ವಲ್ಪವೀರ್ಯಪರಾಕ್ರಮಾಃ ॥೩೭॥**

**ಅಲ್ಪಸಾರಾಲ್ಪದೇಹಾಶ್ಚ ತಥಾ ಸತ್ಯಾಲ್ಪಭಾಷಿಣಃ ।**
**ಬಹುಶೂನ್ಯಾ ಜನಪದಾ ಮೃಗವ್ಯಾಲಾವೃತಾ ದಿಶಃ ॥೩೮॥**

ಕ್ಷತ್ರಿಯ-ವೈಶ್ಯರೂ ತಮ್ಮ ತಮ್ಮ ವರ್ಣಾಶ್ರಮಧರ್ಮಗಳಿಗೆ ವಿರೋಧವಾದ ಕಾರ್ಯಗಳನ್ನೇ ಮಾಡುತ್ತಾರೆ. ಆ ಕಾಲದಲ್ಲಿ ಮಾನವರು ಅಲ್ಪಾಯುಗಳಾಗಿಯೂ, ಅಲ್ಪಬಲರಾಗಿಯೂ, ಅಲ್ಪವೀರ್ಯರಾಗಿಯೂ ಪರಾಕ್ರಮರಹಿತರಾಗಿಯೂ, ಸತ್ವರಹಿತರಾಗಿಯೂ, ಅಲ್ಪದೇಹವುಳ್ಳವರಾಗಿಯೂ, ಕಿಂಚಿನ್ಮಾತ್ರ ಸತ್ಯಭಾಷಿಗಳಾಗಿಯೂ (ಆಕಸ್ಮಿಕವಾಗಿ ನಿಜ ಹೇಳುವವರಾಗಿಯೂ) ಇರುತ್ತಾರೆ. ದೇಶಗಳೆಲ್ಲವೂ ಜನಶೂನ್ಯವಾಗುತ್ತವೆ. ದಿಕ್ಕು-ದಿಕ್ಕುಗಳಲ್ಲಿಯೂ ದುಷ್ಟಮೃಗಗಳೂ, ದುಷ್ಟಜಂತುಗಳೂ ಅಸಂಖ್ಯಾತವಾಗಿರುತ್ತವೆ.

**ಯುಗಾನ್ತೇ ಸಮುಪ್ರಾಪ್ತೇ ವೃಥಾ ಚ ಬ್ರಹ್ಮವಾದಿನಃ ।**
**ಭೋವಾದಿನಸ್ತಥಾ ಶೂದ್ರಾ ಬ್ರಾಹ್ಮಣಾಶ್ಚಾರ್ಯವಾದಿನಃ ॥೩೯॥**

ಬ್ರಹ್ಮನಿಷ್ಠೆಯುಳ್ಳವರಿಗಿಂತಲೂ ಬ್ರಹ್ಮವಾದಿಗಳೇ ಆ ಯುಗದಲ್ಲಿ ಹೆಚ್ಚಾಗಿರುತ್ತಾರೆ. (ವೇದಾಂತಪ್ರವಚನವೂ ಧನಾರ್ಜನೆಯಲ್ಲಿ ಪರ್ಯವಸಾನಹೊಂದುತ್ತದೆ. ವೇದಾಂತಪ್ರವಚನವನ್ನು ಮಾಡುವವರೇ ಹೆಚ್ಚುತ್ತಾರೆ. ಹೇಳಿದಂತೆ ಅನುಷ್ಠಾನಮಾಡುವವರು ಒಬ್ಬರಾದರೂ ಇರುವುದಿಲ್ಲ.) ಶೂದ್ರರು ಬ್ರಾಹ್ಮಣರನ್ನು 'ಭೋ' (ಲೋ!) ಎಂದೂ–ಬ್ರಾಹ್ಮಣರು ಶೂದ್ರರನ್ನು 'ಆರ್ಯ!' (ಪೂಜ್ಯನೇ!) ಎಂದೂ ಸಂಬೋಧನೆ ಮಾಡುತ್ತಾರೆ.

**ಯುಗಾನ್ತೇ ಮನುಜವ್ಯಾಘ್ರ ಭವನ್ತಿ ಬಹುಜನ್ತವಃ ।**
**ನ ತಥಾ ಘ್ರಾಣಯುಕ್ತಾಶ್ಚ ಸರ್ವಗನ್ಧಾ ವಿಶಾಮ್ಪತೇ ॥೪೦॥**

ಯುಗದ ಅಂತ್ಯಕಾಲದಲ್ಲಿ ಪ್ರಾಣಿಗಳ ಸಂಖ್ಯೆಯೂ ಬಹಳ ಹೆಚ್ಚುತ್ತದೆ. ಸ್ವಾಭಾವಿಕವಾಗಿಯೇ ಸುಗಂಧವಿರುವ ಚಂದನಾದಿಗಳಲ್ಲಿ ಸುಗಂಧವಿರುವುದಿಲ್ಲ. (ಹೋಮಮಾಡುವುದರಿಂದ ಉಂಟಾಗುವ ವಾಸನೆಯು ನಮಗೆ ಈಗ ಹಿತಕರವಾಗಿರುವಂತೆ ಅಂದಿನ ಜನರಿಗೆ ಹಿತಕರವಾಗುವುದಿಲ್ಲ.)”

ಮಾರ್ಕಂಡೇಯರು ಮುಂದುವರಿದು ಹೇಳುತ್ತಾರೆ :

**ರಸಾಶ್ಚ ಮನುಜವ್ಯಾಘ್ರ ನ ತಥಾ ಸ್ವಾದುಯೋಗಿನಃ ।**

"ಧರ್ಮಜ! ನಾವೀಗ ಉಪಭುಂಜಿಸುವ-ರಸಯುಕ್ತವಾದ ಹಾಲು, ಹಣ್ಣು ಮುಂತಾದ ಆಹಾರಗಳು ಆ ಸಮಯದಲ್ಲಿ ಅಷ್ಟು ರುಚಿಕರ ವಾಗಿರುವುದಿಲ್ಲ.

**ಬಹುಪ್ರಜಾ ಹ್ರಸ್ವದೇಹಾಃ ಶೀಲಾಚಾರವಿವರ್ಜಿತಾಃ ।**
**ಮುಖೇ ಭಗಾಃ ಸ್ತ್ರಿಯೋ ರಾಜನ್ಭವಿಷ್ಯನ್ತಿ ಯುಗಕ್ಷಯೇ ॥೪೧॥**

ಕಲಿಯುಗದ ಅಂತ್ಯದಲ್ಲಿ ಹೆಂಗಸರು ಯಾವಾಗಲೂ ಬಾಯಲ್ಲಿ ಅಶ್ಲೀಲಕರವಾದ ಮಾತುಗಳನ್ನೇ ಆಡುತ್ತಾ ಪುರುಷರ ಕಾಮವನ್ನು ಉದ್ದೀ ಪನಗೊಳಿಸುತ್ತಾರೆ. ಅವರು ಬಹುಪುತ್ರವತಿಯರಾಗಿಯೂ, ಕುಬ್ಜೆಯ ರಾಗಿಯೂ, ಶೀಲಾಚಾರವರ್ಜಿತರಾಗಿಯೂ ಇರುತ್ತಾರೆ.

**ಅಟ್ಟಶೂಲಾಃ ಜನಪದಾ ಶಿವಶೂಲಾಶ್ಚತುಷ್ಪಥಾಃ ।**
**ಕೇಶಶೂಲಾಃ ಸ್ತ್ರಿಯೋ ರಾಜನ್ಭವಿಷ್ಯನ್ತಿ ಯುಗಕ್ಷಯೇ ॥೪೨॥**

ಅಟ್ಟಶೂಲಾಃ = ಜನರೆಲ್ಲರೂ ಅನ್ನಸಂಬಂಧವಾದ ರೋಗಗಳಿಗೆ ತುತ್ತಾಗುತ್ತಾರೆ. (ಅಟ್ಟಮನ್ನಂ ಸಮಾಖ್ಯಾತಂ ಶೂಲಂ ತದ್ವಿಕ್ರಯಂ ವಿದುಃ ಎಂಬ ವಚನದಂತೆ ಅಟ್ಟಶಬ್ದಕ್ಕೆ ಅನ್ನವೆಂದೂ ಶೂಲಶಬ್ದಕ್ಕೆ ವಿಕ್ರಯವೆಂದೂ ಅರ್ಥವನ್ನು ಮಾಡಿ 'ಕಲಿಯುಗಾಂತ್ಯದಲ್ಲಿ ಅನ್ನವನ್ನು ಮಾರುವ ಜನರಿರುತ್ತಾರೆ' ಎಂದೂ ಅರ್ಥಮಾಡಬಹುದಾಗಿದೆ.) ಶಿವಶೂಲಾಃ = ವಿಟಪುರುಷರಿಂದಲೂ ವೇಶ್ಯಾಸ್ತ್ರೀಯರಿಂದಲೂ ನಾಲ್ಕು ರಸ್ತೆಗಳು ಕೂಡುವ ಸ್ಥಳಗಳು ತುಂಬಿಹೋಗುತ್ತವೆ. ಅಥವಾ ವೇದಃ ಶಿವಃ ಶಿವೋ ವೇದಃ ಎಂದು ಇರುವುದರಿಂದ ಶಿವಶಬ್ದಕ್ಕೆ ವೇದವೆಂದು ಅರ್ಥವಾಗುತ್ತದೆ. ಶಿವಶೂಲಾಃ **ಚತುಷ್ಪಥಾಃ**= ವೇದವನ್ನು ಮಾರುವ ಬ್ರಾಹ್ಮಣರಿಂದ ನಾಲ್ಕು ಬೀದಿಗಳು ಸೇರುವ ಚೌಕಗಳು ತುಂಬಿರುತ್ತವೆ-ಎಂದೂ ಅರ್ಥಮಾಡಬಹುದು. **ಕೇಶಶೂಲಾಃ ಸ್ತ್ರಿಯಃ**= ಕೈಹಿಡಿದ ಗಂಡನನ್ನು ದ್ವೇಷಿಸುತ್ತಾ ಸ್ತ್ರೀ ಸ್ವಭಾವವಾದ ಲಜ್ಜೆಯನ್ನೂ ಬಿಟ್ಟು ತಿರುಗಾಡುವ ಸ್ತ್ರೀಯರಿರುತ್ತಾರೆ. ಅಥವಾ ಕೇಶೋ ಭಗಂ ಸಮಾಖ್ಯಾತಂ ಎಂಬ ವಚನದಂತೆ ಶರೀರವನ್ನು ವಿಕ್ರಯಿಸಿಕೊಳ್ಳುವ ಸ್ತ್ರೀಯರು ಕಲಿಯುಗದ ಅಂತ್ಯದಲ್ಲಿ ಹೆಚ್ಚಾಗುತ್ತಾರೆ.

**(ಅಟ್ಟಂ ಭುಕ್ತೇ ಚ ಶುಷ್ಕೇ ಚ ಶೂಲಂ ಸ್ಯಾದ್ರೋಗ ಆಯುಧೇ ।**
**ಯೋಗೇ ಶೂಲಾ ತು ಪಣ್ಯಸ್ತ್ರೀ ಶಿವಂ ಕ್ಷೇಮೇ ಜಲೇ ಸುಖೇ ॥**

**ಚತುಷ್ಪಥಶ್ಚತುರ್ಮಾರ್ಗೇ ಸಂಗಮೇ ಬ್ರಾಹ್ಮಣೇಽಪಿ ಚ ।**
**ಕೇಶಃ ಸ್ಯಾತ್ಪುಂಸಿ ವರುಣೇ ಹ್ರೀಬೇರೇ ಕುಂತಲೇಽಪಿ ಚ ॥**

ಈ ಮೇದಿನೀಕೋಶವು ಮೇಲಿನ ಅರ್ಥಕ್ಕೆ ಆಧಾರವನ್ನು ಕೊಡುವುದಾಗಿದೆ.) (ಹ್ರೀಬೇರಂ-ಲಜ್ಜಾಮೂಲಂ-ಶೀಲಂ)

**ಅಲ್ಪಕ್ಷೀರಾಸ್ತಥಾ ಗಾವೋ ಭವಿಷ್ಯನ್ತಿ ಜನಾಧಿಪ ।**
**ಅಲ್ಪಪುಷ್ಪಫಲಾಶ್ಚಾಪಿ ಪಾದಪಾ ಬಹುವಾಯಸಾಃ ॥೪೩॥**

ಹಾಗೆಯೇ ಹಸುಗಳೂ ಆ ಕಾಲದಲ್ಲಿ ಹೆಚ್ಚು ಹಾಲನ್ನು ಕೊಡುವುದಿಲ್ಲ. ಮರಗಳಲ್ಲಿ ಫಲ-ಪುಷ್ಪಗಳು ವರ್ಷ-ವರ್ಷಕ್ಕೂ ಕಡಿಮೆಯಾಗುತ್ತಾ ಹೋಗುತ್ತವೆ. ಕಾಗೆಗಳ ಸಂಖ್ಯೆಯು ದಿನ-ದಿನಕ್ಕೂ ಹೆಚ್ಚುತ್ತಾ ವೃಕ್ಷಗಳನ್ನು ಆವರಿಸಿಕೊಂಡಿರುತ್ತವೆ.

**ಬ್ರಹ್ಮವಧ್ಯಾನುಲಿಪ್ತಾನಾಂ ತಥಾ ಮಿಥ್ಯಾಭಿಶಂಸಿನಾಮ್ ।**
**ನೃಪಾಣಾಂ ಪೃಥಿವೀಪಾಲ ಪ್ರತಿಗೃಹ್ಣನ್ತಿ ವೈ ದ್ವಿಜಾಃ ॥೪೪॥**

**ಲೋಭಮೋಹಪರೀತಾಶ್ಚ ಮಿಥ್ಯಾಧರ್ಮಧ್ವಜಾವೃತಾಃ ।**
**ಭಿಕ್ಷಾರ್ಥಂ ಪೃಥಿವೀಪಾಲ ಚರ್ಯ್ಯಾರ್ಯನ್ತೇ ದ್ವಿಜೈರ್ದಿಶಃ ॥೪೫॥**

ಬ್ರಹ್ಮಹತ್ಯಾ ಪಾಪಯುಕ್ತರಾದ, ಸರ್ವದಾ ಸುಳ್ಳನ್ನೇ ಹೇಳುವ ರಾಜರಿಂದ ಬ್ರಾಹ್ಮಣರು ದಾನವನ್ನು ತೆಗೆದುಕೊಳ್ಳುತ್ತಾರೆ. ಲೋಭ-ಮೋಹಗಳಿಂದ ಕಲುಷಿತರಾದ ಬ್ರಾಹ್ಮಣರು ಧರ್ಮದ ಸೋಗುಹಾಕಿಕೊಂಡು ಕಪಟ ವೇಷಧಾರಿಗಳಾಗಿ ಯಾವ ವಿಧವಾದ ಅನುಷ್ಠಾನಗಳನ್ನೂ ಮಾಡದೇ ಧನಾಕಾಂಕ್ಷೆಯಿಂದ ತುಂಬಿರುತ್ತಾರೆ. ಅವರು ಜನರಿಗೆ ಉಪದ್ರವಕೊಡುತ್ತಾ ಭಿಕ್ಷುಗಳಂತೆ ಎಲ್ಲ ದಿಕ್ಕುಗಳಲ್ಲಿಯೂ ಸಂಚರಿಸುತ್ತಾರೆ.

**ಕರಭಾರಭಯಾದ್ಭೀತಾ ಗೃಹಸ್ಥಾಃ ಪರಿಮೋಷಕಾಃ ।**
**ಮುನಿಚ್ಛದ್ಮಾಕೃತಿಚ್ಛನ್ನಾ ವಾಣಿಜ್ಯಮುಪಜೀವಿನಃ ।**
**ಮಿಥ್ಯಾ ಚ ನಖರೋಮಾಣಿ ಧಾರಯನ್ತಿ ತದಾ ದ್ವಿಜಾಃ ॥೪೬॥**

ಸರ್ಕಾರದವರು ವಿಧಿಸುವ ತೆರಲು ಅಸಾಧ್ಯವಾದ ತೆರಿಗೆಗಳಿಂದ ಭೀತ ರಾದ ಗೃಹಸ್ಥರು ತೆರಿಗೆಗಳನ್ನು ತಪ್ಪಿಸಿಕೊಳ್ಳಲು ಕಳ್ಳಲೆಕ್ಕಗಳನ್ನಿಟ್ಟು ಸರ್ಕಾರಕ್ಕೆ ಮೋಸಮಾಡುತ್ತಾರೆ. ಮತ್ತೆ ಕೆಲವರು ಋಷಿಗಳ ವೇಷವನ್ನು ಧರಿಸಿದವರಾಗಿ ಸದಾಚಾರರಹಿತರಾಗಿ ನೀಳವಾದ ಗಡ್ಡವನ್ನೂ, ತಲೆಗೂದಲನ್ನೂ, ಉಗುರು ಗಳನ್ನೂ ಬೆಳೆಸಿಕೊಂಡು 'ಭವಿಷ್ಯ'ವನ್ನು ಹೇಳುವ ಸೋಗಿನಲ್ಲಿ ಒಂದು ದೊಡ್ಡ ವ್ಯಾಪಾರವನ್ನೇ ನಡೆಸುತ್ತಾರೆ.

**ಅರ್ಥಲೋಭಾನ್ನರವ್ಯಾಘ್ರ ತಥಾ ಚ ಬ್ರಹ್ಮಚಾರಿಣಃ ॥೪೭॥**

**ಆಶ್ರಮೇಷು ವೃಥಾಚಾರಾಃ ಪಾನಪಾ ಗುರುತಲ್ಪಗಾಃ ।**
**ಇಹ ಲೌಕಿಕಮೀಹನ್ತೇ ಮಾಂಸಶೋಣಿತವರ್ಧನಮ್ ॥೪೮॥**

ಐಶ್ವರ್ಯದ ದುರಾಶೆಯಿಂದ ಅನೇಕಬ್ರಹ್ಮಚಾರಿಗಳು ಸಂನ್ಯಾಸಿಗಳಾ ಗುತ್ತಾರೆ. ಯಾವ ವಿಧವಾದ ತ್ಯಾಗಬುದ್ಧಿಯೂ ಇಲ್ಲದೇ ಪೂರ್ವಜನ್ಮದ ಒಳ್ಳೆಯ ಸಂಸ್ಕಾರವಿಲ್ಲದೇ ಧನಾರ್ಜನೆಗಾಗಿಯೇ ಸಂನ್ಯಾಸಿಗಳ ವೇಷ ಧರಿಸುವ ಅವರು ಮಾಡದ ಅಕಾರ್ಯಗಳಿಲ್ಲ. ತುರೀಯಾಶ್ರಮಕ್ಕೆ ಬಹು ವಿರುದ್ಧವಾದ ದುಷ್ಕಾರ್ಯಗಳನ್ನೇ ಮಾಡುತ್ತಾರೆ. ಮದ್ಯಪಾನಮಾಡಲೂ ಅವರು ಹೇಸುವುದಿಲ್ಲ. ಗುರುಭಾರ್ಯಾಸಮಾಗಮವನ್ನೂ ಅವರು ಮಾಡಿ ಬಿಡುವರು. ಐಹಿಕಸುಖವೇ ಶ್ರೇಷ್ಠವಾದುದೆಂದೂ ಯಾವ ವಿಧಾನದಿಂದ ಲಾದರೂ ಐಹಿಕಸುಖವನ್ನು ಮನಬಂದಂತೆ ಅನುಭವಿಸಬೇಕೆಂದೂ ಅವರು ಕಾತರರಾಗಿರುವರು. ರಕ್ತ-ಮಾಂಸಗಳ ಅಭಿವೃದ್ಧಿಗಾಗಿ ಅಭಕ್ಷ್ಯಭೋಜನ-ಅಪೇಯಪಾನಗಳನ್ನೂ ಮಾಡುವರು. ಅಂತಹ ಕಪಟಸಂನ್ಯಾಸಿಗಳ ಸುತ್ತಲೂ ಕಪಟಿಗಳಾದ ಭಕ್ತರೂ ಇರುತ್ತಾರೆ. (ಬ್ರಹ್ಮಚಾರಿಗಳು ಗುರುಗಳು ಆಶ್ರಮ ದಲ್ಲಿ ಇದ್ದುಕೊಂಡು ಅಕಾರ್ಯಗಳಲ್ಲಿ ತೊಡಗುತ್ತಾರೆ.)

**ಬಹುಪಾಷಣ್ಡಸಂಕೀರ್ಣಾಃ ಪರಾನ್ನಗುಣವಾದಿನಃ ।**
**ಆಶ್ರಮಾ ಮನುಜವ್ಯಾಘ್ರ ಭವಿಷ್ಯನ್ತಿ ಯುಗಕ್ಷಯೇ ॥೪೯॥**

ನರಶ್ರೇಷ್ಠನೇ! ಕಲಿಯುಗದ ಅಂತ್ಯದಲ್ಲಿ ಆಶ್ರಮಗಳೆಂಬ ಹೆಸರನ್ನು ಪಡೆದಿರುವ ಸ್ಥಳಗಳೆಲ್ಲವೂ ಅಂತಹ ಕಪಟಸಂನ್ಯಾಸಿಗಳಿಂದಲೇ ತುಂಬಿ

ಹೋಗುತ್ತವೆ. ಈಗ ನಾವು ಪರಾನ್ನವು ನಿಷಿದ್ಧವೆಂದು ಹೇಳುವೆವು. ಯುಗಾಂತ್ಯದಲ್ಲಿ ಪರಾನ್ನವೇ ಅಥವಾ ಪರಾಶ್ರಯವೇ ಶ್ರೇಷ್ಠವೆಂದು ನಿರ್ಧಾರ ಮಾಡಿ ಹೇಳುತ್ತಾರೆ.

**ಯಥರ್ತುವರ್ಷೀ ಭಗವಾನ್ನ ತಥಾ ಪಾಕಶಾಸನಃ ।**
**ನ ಚಾಪಿ ಸರ್ವಬೀಜಾನಿ ಸಮ್ಯಗ್ರೋಹನ್ತಿ ಭಾರತ ॥೫೦॥**

ಎಲ್ಲ ರೀತಿಯ ಅಧರ್ಮಗಳ ಪ್ರಾದುರ್ಭಾವದಿಂದಾಗಿ ಇಂದ್ರನು ಕಾಲ ಕಾಲಕ್ಕೆ ಮಳೆಗರೆಯುವುದಿಲ್ಲ. ಹಾಕಿದ ಎಲ್ಲ ಬೀಜಗಳೂ ಹುಟ್ಟುವುದಿಲ್ಲ. ಹುಟ್ಟಿದರೂ ಹುಲುಸಾಗಿ ಬೆಳೆಯುವುದಿಲ್ಲ.

**ಹಿಂಸಾಭಿರಾಮಶ್ಚ ಜನಸ್ತಥಾ ಸಮ್ಪದ್ಯತೇಽಶುಚಿಃ ।**
**ಅಧರ್ಮಫಲಮತ್ಯರ್ಥಂ ತದಾ ಭವತಿ ಚಾನಘ ॥೫೧॥**

ಜನರಲ್ಲಿ ಶುಚಿತ್ವವೆಂಬುದೇ ಇರುವುದಿಲ್ಲ. ಪರರನ್ನು ಹಿಂಸೆಮಾಡಿ ಯಾದರೂ ತಾವು ಸುಖವಾಗಿ ಜೀವಿಸಬೇಕೆಂದು ಜನರು ಯತ್ನಿಸುತ್ತಾರೆ. ಜನರೆಲ್ಲರೂ ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯಗಳಿಗೆ ಪರವಶರಾಗುತ್ತಾರೆ. ಆ ಸಮಯದಲ್ಲಿ ಪ್ರಪಂಚವೆಲ್ಲವೂ ಅಧರ್ಮಯುಕ್ತ ವಾಗಿಯೂ, ಪಾಪಭೂಯಿಷ್ಠವಾಗಿಯೂ ಇರುತ್ತದೆ.

**ತದಾ ಚ ಪೃಥಿವೀಪಾಲ ಯೋ ಭವೇದ್ಧರ್ಮಸಂಯುತಃ ।**
**ಅಲ್ಪಾಯುಃ ಸ ಹಿ ಮನ್ತವ್ಯೋ ನ ಹಿ ಧರ್ಮೋಽಸ್ತಿ ಕಶ್ಚನ ॥೫೨॥**

ಪಾಪಭೂಯಿಷ್ಠವಾದ ಆ ಸಮಯದಲ್ಲಿ ಲಕ್ಷಕ್ಕೋ-ಕೋಟಿಗೋ ಒಬ್ಬ ಧರ್ಮಾತ್ಮನು ಹುಟ್ಟಿದರೂ ಅವನು ಅಲ್ಪಾಯುವಾಗುತ್ತಾನೆ. ಧರ್ಮಾತ್ಮ ನಾದವನಿಗೆ–ಧರ್ಮಮಾರ್ಗದಲ್ಲಿಯೇ ನಡೆಯಬೇಕೆಂದು ಇಚ್ಛಿಸುವವನಿಗೆ– ಆ ಸಮಯದಲ್ಲಿ ಹೆಚ್ಚುಕಾಲ ಬದುಕುವ ಸಾಧ್ಯತೆಯೇ ಇರುವುದಿಲ್ಲ. ಯಾವ ವಿಧದಲ್ಲಿಯೂ, ಯಾವ ರೂಪದಲ್ಲಿಯೂ, ಯಾವುದರಲ್ಲಿಯೂ ಧರ್ಮವು ಉಳಿಯುವುದಿಲ್ಲ.

**ಭೂಯಿಷ್ಠಂ ಕೂಟಮಾನೈಶ್ಚ ಪಣ್ಯಂ ವಿಕ್ರೀಣತೇ ಜನಾಃ ।**
**ವಣಿಜಶ್ಚ ನರವ್ಯಾಘ್ರ ಬಹುಮಾಯಾ ಭವನ್ತ್ಯುತ ॥೫೩॥**

ವ್ಯಾಪಾರಿಗಳು ತೂಕದಲ್ಲಿಯೂ, ಅಳತೆಯಲ್ಲಿಯೂ ಗ್ರಾಹಕರಿಗೆ

ಮೋಸ ಮಾಡುತ್ತಾರೆ. ವ್ಯಾಪಾರಿಗಳು ಬಹಳ ಮೋಸಗಾರರಾಗುತ್ತಾರೆ ದ್ರೋಹ ಮಾಡದೇ ವ್ಯಾಪಾರಮಾಡುವುದು ಸಾಧ್ಯವೇ ಇಲ್ಲವೆಂಬ ನಿರ್ಧಾರಕ್ಕೆ ಬಂದಿರುತ್ತಾರೆ. ಇದಕ್ಕೆ ಕಾರಣವಿಷ್ಟೇ, ಯುಧಿಷ್ಠಿರ!

**ಧರ್ಮಿಷ್ಠಾಃ ಪರಿಹೀಯನ್ತೇ ಪಾಪೀಯಾನ್ವರ್ಧತೇ ಜನಃ ।**
**ಧರ್ಮಸ್ಯ ಬಲಹಾನಿಃ ಸ್ಯಾದಧರ್ಮಶ್ಚ ಬಲೀ ತಥಾ ॥೫೪॥**

ಧರ್ಮಮಾರ್ಗದಲ್ಲಿ ಹೋಗಲು ಯತ್ನಿಸುವವರಿಗೆ ಏಳಿಗೆಯೇ ಇರುವುದಿಲ್ಲ. ಅಂತಹವರು ಇಹದಲ್ಲಿ ಬಹುದಾರುಣವಾದ ಕಷ್ಟ-ನಷ್ಟಗಳನ್ನೇ ಅನುಭವಿಸುತ್ತಾರೆ. ಬೆಂದು-ಬೇಸತ್ತು, ಕೊರಗಿ-ಸೊರಗಿ ಸಾಯುತ್ತಾರೆ. ಮೋಸಗಾರರಾದ ಪಾಪಕರ್ಮಿಗಳು ಅಭಿವೃದ್ಧಿಯನ್ನು ಹೊಂದುತ್ತಾರೆ. ಕ್ಷಣಮಾತ್ರದಲ್ಲಿ ಐಶ್ವರ್ಯವಂತರಾಗಿ ಸಕಲವಿಧವಾದ ಕಾಮೋಪ ಭೋಗಗಳನ್ನೂ ಅವರು ಅನುಭವಿಸುತ್ತಾರೆ. ಆ ಕಾರಣದಿಂದಲೇ ಧರ್ಮದ ಗ್ಲಾನಿಯೂ, ಅಧರ್ಮದ ಅಭಿವೃದ್ಧಿಯೂ ಯುಗಾಂತ್ಯದಲ್ಲಿ ಉಂಟಾಗುತ್ತದೆ.

**ಅಲ್ಪಾಯುಷೋ ದರಿದ್ರಾಶ್ಚ ಧರ್ಮಿಷ್ಠಾ ಮಾನವಾಸ್ತಥಾ ।**
**ದೀರ್ಘಾಯುಷಃ ಸಮೃದ್ಧಾಶ್ಚ ವಿಧರ್ಮಾಣೋ ಯುಗಕ್ಷಯೇ ॥೫೫॥**

ಯುಧಿಷ್ಠಿರ! ನಾನು ಹಿಂದೆಯೇ ಹೇಳಿದಂತೆ ಧರ್ಮಿಷ್ಠರಾದವರು ಅಥವಾ ಧರ್ಮಮಾರ್ಗದಲ್ಲಿಯೇ ಇರಬೇಕೆಂದು ಪ್ರಯತ್ನಿಸುವವರು ದರಿದ್ರ ರಾಗುತ್ತಾರೆ. ಹೇರಳವಾದ ಸಂಪಾದನೆಯು ಅಧರ್ಮಮಾರ್ಗದಿಂದಲೇ ಸಾಧ್ಯವಾಗುವುದು. ದರಿದ್ರವಾದ ಧಾರ್ಮಿಕರು ಹೆಚ್ಚುಕಾಲ ಬದುಕುವುದೂ ಇಲ್ಲ. ಧರ್ಮಮಾರ್ಗದಲ್ಲಿಯೇ ಇರಬೇಕೆಂದು ನಿಶ್ಚಯಿಸಿ ಪ್ರಯತ್ನಿಸು ವವರು ದಟ್ಟ ದರಿದ್ರರಾಗಿ ಹೊಟ್ಟೆಗಿಲ್ಲದೆಯೇ ಸತ್ತುಹೋಗಬಹುದು ಅಥವಾ ಜೀವನವನ್ನು ಮುಂದುವರಿಸಲಾಗದೆ ಪ್ರಾಣತ್ಯಾಗವನ್ನೂ ಮಾಡಿಕೊಳ್ಳ ಬಹುದು. ಧರ್ಮಾತ್ಮರಾದವರ ಅವಸ್ಥೆಯು ಹೀಗಾಗುತ್ತದೆ. ಅಧರ್ಮಿಗಳಾ ದವರು ಯಾವ ವಿಧವಾದ ವಿವೇಚನೆಯೂ ಇಲ್ಲದೇ ಹಣಗಳಿಸಿ ದೀರ್ಘಾ ಯುಷ್ಮಂತರಾಗಿಯೂ ಇರುತ್ತಾರೆ ಮತ್ತು ಸಂಪತ್ಸಮೃದ್ಧಿಯನ್ನು ಪಡೆದು ಸಕಲವಿಧವಾದ ಕಾಮೋಪಭೋಗಗಳನ್ನೂ ಅನುಭವಿಸುತ್ತಾರೆ.

**ನಗರಾಣಾಂ ವಿಹಾರೇಷು ವಿಧರ್ಮಾಣೋ ಯುಗಕ್ಷಯೇ ।**
**ಅಧರ್ಮಿಷ್ಠೈರುಪಾಯೈಶ್ಚ ಪ್ರಜಾ ವ್ಯವಹರನ್ತ್ಯುತ ॥೫೬॥**

ಧನಾಂಧರಾದ ಅವರು ಕಾಮಾಚಾರಗಳನ್ನು ರಹಸ್ಯವಾಗಿಯೂ ನಡೆಸುವುದಿಲ್ಲ. ನಗರಗಳ ಉದ್ಯಾನವನಗಳಲ್ಲಿ ಬಹಿರಂಗವಾಗಿಯೇ ನಾನಾವಿಧವಾದ ಅಧರ್ಮಯುಕ್ತವಾದ ಉಪಾಯಗಳಿಂದ ಕಾಮುಕ-ಕಾಮಿನಿಯರು ಸೇರಿ ಕಾಮಚಾರಗಳಲ್ಲಿ ಆಸಕ್ತರಾಗುತ್ತಾರೆ. ಅಧರ್ಮದ ಉಪಾಯಗಳಿಂದಲೇ ಜನರು ವ್ಯವಹಾರಗಳನ್ನು ನಡೆಸುತ್ತಿರುತ್ತಾರೆ.

**ಸಂಚಯೇನ ತಥಾಲ್ಪೇನ ಭವನ್ತ್ಯಾಢ್ಯಮದಾನ್ವಿತಾಃ ।**
**ಧನಂ ವಿಶ್ವಾಸತೋ ನ್ಯಸ್ತಂ ಮಿಥೋ ಭೂಯಿಷ್ಠಶೋ ನರಾಃ ॥೫೭॥**

**ಹರ್ತುಂ ವ್ಯವಸಿತಾ ರಾಜನ್ಪಾಪಾಚಾರಸಮನ್ವಿತಾಃ ।**
**ನೈತದಸ್ತೀತಿ ಮನುಜಾ ವರ್ತನ್ತೇ ನಿರಪತ್ರಪಾಃ ॥೫೮॥**

ಅಲ್ಪಧನವು ಒಬ್ಬನ ಬಳಿಯಲ್ಲಿ ಸೇರಿದರೂ ಒಡನೆಯೇ ತಾನೇ ಧನಾಢ್ಯನೆಂದು ದುರಭಿಮಾನಿಯೂ, ದುರಹಂಕಾರಿಯೂ ಆಗುತ್ತಾನೆ. ನಂಬಿಕೆಯಿಂದ ನ್ಯಾಸವಾಗಿಟ್ಟ ನಿಧಿಗಳನ್ನೂ ನುಂಗಿಹಾಕಲು ಆಗಿನ ಕಾಲದಲ್ಲಿ ಜನರು ಹಿಂಜರಿಯುವುದಿಲ್ಲ. 'ನಮ್ಮ ಬಳಿಯಲ್ಲಿ ಯಾವ ಧನವೂ ನ್ಯಾಸವಾಗಿ ಇಡಲ್ಪಟ್ಟಿಲ್ಲ'–ಎಂದೇ ಆ ಪಾಪಾತ್ಮರು ನಾಚಿಕೆಯಿಲ್ಲದೇ ಘೋಷಿಸಿಬಿಡುತ್ತಾರೆ. ಯುಧಿಷ್ಠಿರ! ಈಗ ನಾವು ಪರರ ಸ್ವತ್ತನ್ನು ವಿಷ ಸಮಾನವನ್ನಾಗಿ ಪರಿಗಣಿಸಿದರೆ–ಕಲಿಯುಗಾಂತ್ಯದಲ್ಲಿ ಪರಸ್ವತ್ತಿನ ಅಪ ಹಾರಕ್ಕಾಗಿಯೇ ಜನರು ಸರ್ವದಾ ಹೊಂಚುಹಾಕುತ್ತಿರುತ್ತಾರೆ.

**ಪುರುಷಾದಾನಿ ಸತ್ತ್ವಾನಿ ಪಕ್ಷಿಣೋಽಥ ಮೃಗಾಸ್ತಥಾ ।**
**ನಗರಾಣಾಂ ವಿಹಾರೇಷು ಚೈತ್ಯೇಷ್ವಪಿ ಚ ಶೇರತೇ ॥೫೯॥**

ಆ ಕಾಲದಲ್ಲಿ ನರಭಕ್ಷಕಗಳಾದ ಹುಲಿ-ಕರಡಿ-ಸಿಂಹಗಳೂ, ಗೂಬೆಯೇ ಮೊದಲಾದ ಪಕ್ಷಿಗಳೂ, ನಾಯಿ-ನರಿ ಮುಂತಾದ ಪ್ರಾಣಿಗಳೂ ಉದ್ಯಾನವನಗಳಲ್ಲಿಯೂ, ದೇವಾಗಾರಗಳಲ್ಲಿಯೂ ಸ್ವೇಚ್ಛೆಯಿಂದ ಸಂಚರಿಸುತ್ತವೆ.

**ಸಪ್ತವರ್ಷಾಷ್ಟವರ್ಷಾಶ್ಚ ಸ್ತ್ರಿಯೋ ಗರ್ಭಧರಾ ನೃಪ ।**
**ದಶದ್ವಾದಶವರ್ಷಾಣಾಂ ಪುಂಸಾಂ ಪುತ್ರಃ ಪ್ರಜಾಯತೇ ॥೬೦॥**

ಏಳೆಂಟು ವಯಸ್ಸಿನ ಹೆಣ್ಣುಮಕ್ಕಳೇ ಗರ್ಭವನ್ನು ಧರಿಸುತ್ತಾರೆ. (ಕಾಮಾತುರರಾಗುತ್ತಾರೆ). ಹತ್ತು-ಹನ್ನೆರಡು ವಯಸ್ಸಿನ ಗಂಡುಮಕ್ಕಳು ಪುತ್ರವಂತರಾಗುತ್ತಾರೆ. (ಕಾಮಚಾರಿಗಳಾಗುತ್ತಾರೆ.)

**ಭವನ್ತಿ ಷೋಡಶೇ ವರ್ಷೇ ನರಾಃ ಪಲಿತಿನಸ್ತಥಾ ।**
**ಆಯುಃಕ್ಷಯೋ ಮನುಷ್ಯಾಣಾಂ ಕ್ಷಿಪ್ರಮೇವ ಪ್ರಪದ್ಯತೇ ॥೬೧॥**

ಹದಿನಾರನೆಯ ವಯಸ್ಸಿಗೆಲ್ಲಾ ಮನುಷ್ಯರಿಗೆ ಕೂದಲು ಬೆಳ್ಳಗಾಗುತ್ತವೆ. ಅವರ ಆಯುಷ್ಯವೂ ಬಹಳ ಬೇಗ ಕ್ಷಯಿಸಿ ಹೋಗುತ್ತದೆ.

**ಕ್ಷೀಣಾಯುಷೋ ಮಹಾರಾಜ ತರುಣಾ ವೃದ್ಧಶೀಲಿನಃ ।**
**ತರುಣಾನಾಂ ಚ ಯಚ್ಛೀಲಂ ತದ್ವೃದ್ಧೇಷು ಪ್ರಜಾಯತೇ ॥೬೨॥**

ನಿರ್ವೀರ್ಯರಾದ ತರುಣರು ವೃದ್ಧರಂತೆ ಮಾತನಾಡುತ್ತಾರೆ. ಆಗಿನ ಕಾಲದಲ್ಲಾಗುವ ಮತ್ತೊಂದು ವೈಪರೀತ್ಯವೇನೆಂದರೆ : ವೃದ್ಧರು ತರುಣ ರಂತಾಗುತ್ತಾರೆ. ವಯಸ್ಸು ಕಳೆದಂತೆಲ್ಲಾ ಅವರಿಗೆ ಸ್ತ್ರೀವ್ಯಾಮೋಹ-ಧನ ದಾಹ-ಜಿಹ್ವಾಚಾಪಲ್ಯಗಳು ಹೆಚ್ಚುತ್ತಿರುತ್ತವೆ.

**ವಿಪರೀತಾಸ್ತದಾ ನಾರ್ಯೋ ವಞ್ಚಯಿತ್ವಾರ್ಹತಃ ಪತೀನ್ ।**
**ವ್ಯುಚ್ಚರನ್ತ್ಯಪಿ ದುಃಶೀಲಾ ದಾಸೈಃ ಪಶುಭಿರೇವ ಚ ॥೬೩॥**

ಸ್ತ್ರೀಯರ ಸ್ವಬಾವವಂತೂ ಅತಿಯಾಗಿ ವೈಪರೀತ್ಯವನ್ನು ಹೊಂದು ವುದು, ಯುಧಿಷ್ಠಿರ! ಒಳ್ಳೆಯ ಶೀಲವಾಗಲೀ, ಒಳ್ಳೆಯ ಸ್ವಭಾವವಾಗಲೀ– ಅವರಿಗಿರುವುದಿಲ್ಲ. ಸ್ತ್ರೀಯೋಗ್ಯವಾದ ಲಜ್ಜೆಯನ್ನೇ ಸಂಪೂರ್ಣವಾಗಿ ತ್ಯಾಗಮಾಡುತ್ತಾರೆ. ದುಶ್ಶೀಲೆಯರಾದ ಅವರು ತಮ್ಮ ಯೋಗ್ಯಪತಿಗಳನ್ನೂ ವಂಚಿಸಿ ಭೃತ್ಯರೊಡನೆಯೂ, ಕೆಲವು ಸಮಯಗಳಲ್ಲಿ ಪ್ರಾಣಿಗಳೊಡನೆಯೂ ಏಕಾಂತದಲ್ಲಿ ಸೇರಿ ತಮ್ಮ ಕಾಮೇಚ್ಛೆಯನ್ನು ಪೂರೈಸಿಕೊಳ್ಳುತ್ತಾರೆ.

**ವೀರಪತ್ನ್ಯಸ್ತಥಾ ನಾರ್ಯಃ ಸಂಶ್ರಯನ್ತಿ ನರಾನ್ನೃಪ ।**
**ಭರ್ತಾರಮಪಿ ಜೀವನ್ತಮನ್ಯಾನ್ವ್ಯಭಿಚರನ್ತ್ಯುತ ॥೬೪॥**

ವೀರರ, ಜನನಾಯಕರ, ದೊಡ್ಡ ದೊಡ್ಡ ಅಧಿಕಾರಿಗಳ ಪತ್ನಿಯರೂ

ಪತಿಯು ಜೀವಿಸಿರುವಾಗಲೇ ಬೇರೊಬ್ಬನನ್ನು ಉಪಪತಿಯನ್ನಾಗಿ ಇಟ್ಟು ಕೊಂಡು ವ್ಯಭಿಚಾರಜೀವನವನ್ನು ನಡೆಸುತ್ತಾರೆ. ಇವುಗಳಿಷ್ಟೂ ಯುಗಾಂತ್ಯದಲ್ಲಿ ಈ ಪ್ರಪಂಚದಲ್ಲಿ ನಡೆಯುವ ಕ್ರಿಯೆಗಳಾಗಿವೆ, ಯುಧಿಷ್ಠಿರ!

**ತಸ್ಮಿನ್ಯುಗಸಹಸ್ರಾನ್ತೇ ಸಮ್ಪ್ರಾಪ್ತೇ ಚಾಯುಷಃ ಕ್ಷಯೇ ।**
**ಅನಾವೃಷ್ಟಿರ್ಮಹಾರಾಜ ಜಾಯತೇ ಬಹುವಾರ್ಷಿಕೀ ॥೬೫॥**

**ತತಸ್ತಾನ್ಯಲ್ಪಸಾರಾಣಿ ಸತ್ತ್ವಾನಿ ಕ್ಷುಧಿತಾನಿ ವೈ ।**
**ಪ್ರಲಯಂ ಯಾನ್ತಿ ಭೂಯಿಷ್ಠಂ ಪೃಥಿವ್ಯಾಂ ಪೃಥಿವೀಪತೇ ॥೬೬॥**

ಮಹಾರಾಜ! ಈ ಪ್ರಕಾರವಾಗಿ ಆಯುಃಕ್ಷೀಣಕರವಾದ ಸಹಸ್ರ ಚತುರ್ಯುಗಗಳ ಅಂತಿಮಭಾಗವೂ ಕಳೆಯಲಾಗಿ, ಅನೇಕವರ್ಷಗಳ ಕಾಲ ಮಳೆಯೇ ಆಗುವುದಿಲ್ಲ. ವೀರಕ್ಷಾಮವುಂಟಾಗುತ್ತದೆ. ಅಲ್ಪಬಲವುಳ್ಳ ಪ್ರಾಣಿಗಳು ಹೊಟ್ಟೆಗಿಲ್ಲದೇ ಹಸಿವಿನಿಂದ ಬಳಲುತ್ತಾ ಲಕ್ಷೋಪಲಕ್ಷಸಂಖ್ಯೆಯಲ್ಲಿ ಸಾಯುತ್ತವೆ.

**ತತೋ ದಿನಕರೈರ್ದೀಪ್ತೈಃ ಸಪ್ತಭಿರ್ಮನುಜಾಧಿಪ ।**
**ಪೀಯತೇ ಸಲಿಲಂ ಸರ್ವಂ ಸಮುದ್ರೇಷು ಸರಿತ್ಸು ಚ ॥೬೭॥**

**ಯಚ್ಚ ಕಾಷ್ಠಂ ತೃಣಂ ಚಾಪಿ ಶುಷ್ಕಂ ಚಾರ್ದ್ರಂ ಚ ಭಾರತ ।**
**ಸರ್ವಂ ತದ್ಭಸ್ಮಸಾದ್ಭೂತಂ ದೃಶ್ಯತೇ ಭರತರ್ಷಭ ॥೬೮॥**

ಕಾಲಕ್ರಮದಲ್ಲಿ ಸಪ್ತಸೂರ್ಯರು ಏಕಕಾಲದಲ್ಲಿ ಉದಯಿಸಿ ಪ್ರಪಂಚದ ನದೀ-ಸರೋವರ-ಸಮುದ್ರಗಳಲ್ಲಿರುವ ನೀರೆಲ್ಲವನ್ನೂ ಸಂಪೂರ್ಣವಾಗಿ ಶೋಷಿಸಿಬಿಡುತ್ತಾರೆ. ಪ್ರಪಂಚದಲ್ಲಿರುವ ಲತಾ-ವೃಕ್ಷ-ತೃಣ-ಕಾಷ್ಠಗಳು ಸಪ್ತಸೂರ್ಯರ ಅಮಿತವಾದ ಬೇಗೆಯಿಂದಾಗಿ ಸುಟ್ಟು ಭಸ್ಮವಾಗಿ ಹೋಗುತ್ತವೆ.

**ತತಃ ಸಂವರ್ತಕೋ ವಹ್ನಿರ್ವಾಯುನಾ ಸಹ ಭಾರತ ।**
**ಲೋಕಮಾವಿಶತೇ ಪೂರ್ವಮಾದಿತ್ಯೈರುಪಶೋಭಿತಮ್ ॥೬೯॥**

**ತತಃ ಸ ಪೃಥಿವೀಂ ಭಿತ್ತ್ವಾ ಪ್ರವಿಶ್ಯ ಚ ರಸಾತಲಮ್ ।**
**ದೇವದಾನವಯಕ್ಷಾಣಾಂ ಭಯಂ ಜನಯತೇ ಮಹತ್ ॥೭೦॥**

**ನಿರ್ದಹನ್ನಾಗಲೋಕಂ ಚ ಯಚ್ಚ ಕಿಂಚಿತ್ ಕ್ಷಿತಾವಿಹ ।**
**ಅಧಸ್ತಾತ್ಪೃಥಿವೀಪಾಲ ಸರ್ವಂ ನಾಶಯತೇ ಕ್ಷಣಾತ್ ॥೭೦॥**

ಅನಂತರದಲ್ಲಿ ವಾಯುವಿನಿಂದ ಪೋಷಿತವಾದ ಸಂವರ್ತಕವೆಂಬ ಅಗ್ನಿಯೂ ಮೊದಲೇ ಸಪ್ತಸೂರ್ಯರಿಂದ ಶೋಷಿತವಾದ ಜಗತ್ತನ್ನು ಸಂಪೂರ್ಣವಾಗಿ ಭಸ್ಮಮಾಡುತ್ತಾ ಹೋಗುತ್ತದೆ. ಯುಧಿಷ್ಠಿರ! ಆ ಸಂವರ್ತಕಾಗ್ನಿಯು ಭೂಲೋಕವನ್ನು ಸಂಪೂರ್ಣವಾಗಿ ಭಸ್ಮಮಾಡಿದನಂತರ ಭೂಮಿಯನ್ನು ಭೇದಿಸಿಕೊಂಡು ರಸಾತಲಕ್ಕೆ ಹೋಗಿ ದೇವ-ದಾನವ-ಯಕ್ಷರಿಗೆ ಮಹತ್ತರವಾದ ಭಯವನ್ನುಂಟುಮಾಡುತ್ತದೆ. ಭೂಲೋಕವನ್ನು ಭಸ್ಮಮಾಡಿದಂತೆಯೇ ನಾಗಲೋಕವನ್ನೂ ಆ ಪ್ರಳಯಾಗ್ನಿಯು ಕ್ಷಣಕಾಲದಲ್ಲಿ ಭಸ್ಮಮಾಡಿಬಿಡುತ್ತದೆ.

**ತತೋ ಯೋಜನವಿಂಶಾಂನಾಂ ಸಹಸ್ರಾಣಿ ಶತಾನಿ ಚ ।**
**ನಿರ್ದಹತ್ಯಶಿವೋ ವಾಯುಃ ಸ ಚ ಸಂವರ್ತಕೋಽನಲಃ ॥೭೨॥**

ಅನಂತರದಲ್ಲಿ ಆ ಸಂವರ್ತಿಕವೆಂಬ ಅಗ್ನಿಯು ಅಮಂಗಳಕರವಾದ ಪ್ರಳಯಮಾರುತದಿಂದ ಕೂಡಿ ಇತರ ಲೋಕಗಳನ್ನೂ ಪ್ರವೇಶಿಸಿ ದಹನಮಾಡುತ್ತಾ ಇಪ್ಪತ್ತೆರಡು ಸಾವಿರ ಯೋಜನ ವಿಸ್ತೀರ್ಣವುಳ್ಳ ಬ್ರಹ್ಮಾಂಡವನ್ನೂ ಸಂಪೂರ್ಣವಾಗಿ ವಿನಾಶಮಾಡುತ್ತದೆ.

**ಸದೇವಾಸುಗನ್ಧರ್ವಂ ಸಯಕ್ಷೋರಗರಾಕ್ಷಸಮ್ ।**
**ತತೋ ದಹತಿ ದೀಪ್ತಃ ಸ ಸರ್ವಮೇವ ಜಗದ್ವಿಭುಃ ॥೭೩॥**

ದೇವತೆಗಳು, ಅಸುರರು, ಗಂಧರ್ವರು, ಯಕ್ಷರು, ಉರಗರು, ರಾಕ್ಷಸರು–ಇವರೆಲ್ಲರನ್ನೂ ತೇಜೋವಂತನಾದ ಯಜ್ಞೇಶ್ವರನು ಭಸ್ಮಾವಶೇಷರನ್ನಾಗಿ ಮಾಡಿಬಿಡುತ್ತಾನೆ.

**ತತೋ ಗಜಕುಲಪ್ರಖ್ಯಾಸ್ತಡಿನ್ಮಾಲಾವಿಭೂಷಿತಾಃ ।**
**ಉತ್ತಿಷ್ಠನ್ತಿ ಮಹಾಮೇಘಾ ನಭಸ್ಯದ್ಭುತದರ್ಶನಾಃ ॥೭೪॥**

**ಕೇಚಿನ್ನೀಲೋತ್ಪಲಶ್ಯಾಮಾಃ ಕೇಚಿತ್ಕುಮುದಸಂನಿಭಾಃ ।**
**ಕೇಚಿತ್ಕಿಞ್ಜಲ್ಕಸಂಕಾಶಾಃ ಕೇಚಿತ್ಪೀತಾಃ ಪಯೋಧರಾಃ ॥೭೫॥**

**ಕೇಚಿದ್ಧಾರಿದ್ರಸಂಕಾಶಾಃ ಕಾರಣ್ಡವನಿಭಾಸ್ತಥಾ ।**
**ಕೇಚಿತ್ಕಮಲಪತ್ರಾಭಾಃಕೇಚಿದ್ಧಿಙ್ಗುಲಸಪ್ರಭಾಃ ॥೭೬॥**

**ಕೇಚಿತ್ಪುರವರಾಕಾರಾಃ ಕೇಚಿದ್ಗಜಕುಲೋಪಮಾಃ ।**
**ಕೇಚಿದಞ್ಜನಸಂಕಾಶಾಃಕೇಚಿನ್ಮಕರಸನ್ನಿಭಾಃ ॥೭೭॥**

ಸಕಲಭುವನಗಳೂ ಅಗ್ನಿಯಿಂದ ವಿನಾಶಿತವಾದನಂತರ–ಆನೆಗಳ ಗುಂಪಿನೋಪಾದಿಯಲ್ಲಿ ಪರಮಾದ್ಭುತವಾದ ಕೃಷ್ಣವರ್ಣದ ಮೇಘಗಳು ಉದಯಿಸುತ್ತವೆ. ಆ ಮೋಡಗಳಲ್ಲಿ ಕೆಲವು ನೀಲಕಮಲಗಳ ಬಣ್ಣದಿಂದ ಕೂಡಿರುತ್ತವೆ. ಮತ್ತೆ ಕೆಲವು ಕನ್ನೈದಿಲೆಗಳಂತೆಯೂ, ಮತ್ತೆ ಕೆಲವು ಕಮಲಪುಷ್ಪಗಳ ಕೇಸರದ ಬಣ್ಣದಿಂದ ಕೂಡಿಯೂ, ಮತ್ತೆ ಕೆಲವು ಶ್ವೇತ ವರ್ಣದಿಂದಲೂ, ಮತ್ತೆ ಕೆಲವು ಹಳದಿಬಣ್ಣದಿಂದಲೂ, ಮತ್ತೆ ಕೆಲವು ಕಾರಂಡವಪಕ್ಷಿಗಳ ಬಣ್ಣದಿಂದ ಕೂಡಿದುವುಗಳಾಗಿಯೂ, ಕೆಲವು ಕಮಲ ಪತ್ರಗಳಂತೆಯೂ, ಮತ್ತೆ ಕೆಲವು ಸಿಂಧೂರದಂತೆ ಕೆಂಪಾಗಿಯೂ ಇರುತ್ತವೆ. ಕೆಲವು ಮೋಡಗಳು ದೊಡ್ಡ-ದೊಡ್ಡ ಪಟ್ಟಣಗಳಷ್ಟೇ ದೊಡ್ಡದಾಗಿರುತ್ತವೆ. ಇನ್ನೂ ಕೆಲವು ಆನೆಗಳ ಗುಂಪನ್ನು ಹೋಲುತ್ತಾ ಕಾಡಿಗೆಯಂತೆ ಕಪ್ಪಾಗಿಯೂ, ಮತ್ತೆ ಕೆಲವು ಮೊಸಳೆಯ ಆಕಾರದಲ್ಲಿಯೂ ಮತ್ತೆ ಕೆಲವು ತಿಮಿ-ತಿಮಿಂಗಿಲಗಳ ಆಕಾರದಲ್ಲಿಯೂ ಇರುತ್ತವೆ.

ಯುಧಿಷ್ಠಿರ! ಆ ಮೋಡಗಳು ನೋಡಲು ಕೂಡ ಬಹಳ ಭಯಂಕರ ವಾಗಿರುತ್ತವೆ. ಮಿಂಚಿನಿಂದ ಕೂಡಿದುವುಗಳಾಗಿ ಕ್ಷಣ-ಕ್ಷಣಕ್ಕೂ ಘೋರವಾಗಿ ಶಬ್ದ ಮಾಡುತ್ತಿರುತ್ತವೆ. ಆ ಮೋಡಗಳು ಗುಡುಗು-ಸಿಡಿಲು ಗಳಗರ್ಜನೆಗಳೊ ಡನೆ ಮಳೆಗರೆಯಲು ಪ್ರಾರಂಭಿಸಿ ಕ್ಷಣಮಾತ್ರದಲ್ಲಿ ಪರ್ವತಗಳಿಂದೊಡ ಗೂಡಿದ ಈ ಭೂಮಿಯನ್ನೇ ಜಲಮಯವನ್ನಾಗಿ ಮಾಡಿಬಿಡುತ್ತವೆ. ಪರ ಮೇಷ್ಠಿಯಿಂದ ಪ್ರೇರಿತವಾದ ಆ ಮೇಘಗಳು ಸತತವಾಗಿ ಮಳೆಯನ್ನು ಸುರಿ ಸುತ್ತಾ ಸರ್ವವ್ಯಾಪಿಯಾಗಿ ದಹನಮಾಡುವ ಸಂವರ್ತಕಾಗ್ನಿಯನ್ನು ಶಾಂತ ಗೊಳಿಸುತ್ತವೆ. ಅದೇ ಪ್ರಕಾರವಾಗಿ ಆ ಮೋಡಗಳು ಹನ್ನೆರಡು ವರ್ಷಗಳ ಪರ್ಯಂತವಾಗಿ ಮಳೆಗರೆಯುತ್ತವೆ. ಸತತವಾದ ಆ ಮಹಾವರ್ಷದಿಂದಾಗಿ ಸಮುದ್ರವು ತನ್ನ ಎಲ್ಲೆಯನ್ನು ಮೀರಿ ಮೇಲೆ ಹರಿಯುತ್ತದೆ. ಪರ್ವತಗಳೂ

ಛಿದ್ರ-ವಿಚ್ಛಿದ್ರವಾಗಿ ಹೋಗುತ್ತವೆ. ಅಖಂಡಭೂಮಂಡಲವೇ ನೀರಿನಲ್ಲಿ ಸಂಪೂರ್ಣವಾಗಿ ಮುಳುಗಿಹೋಗುತ್ತದೆ. ಅನಂತರದಲ್ಲಿ ಚಂಡಮಾರುತವು ಹುಟ್ಟಿ ಮಹತ್ತರವಾದ ಆ ಮೇಘಗಳನ್ನು ಕ್ಷಣಮಾತ್ರದಲ್ಲಿ ವಿನಾಶಗೊಳಿಸುತ್ತದೆ. ಪದ್ಮಾಲಯನಾದ, ಪರಮಪುರುಷನಾದ, ದೇವದೇವನಾದ ಸ್ವಯಂಭುವು ಘೋರವಾದ ಆ ಬಿರುಗಾಳಿಯನ್ನು ಕುಡಿದು ನಿದ್ರಿಸುತ್ತಾನೆ. ಆ ಸಮಯದಲ್ಲಿ ಪ್ರಪಂಚವೆಲ್ಲವೂ ಅಖಂಡಸಮುದ್ರರೂಪವಾಗಿ ಕಾಣುತ್ತಿರುತ್ತದೆ. ಸ್ಥಾವರ-ಜಂಗಮಗಳಾವುವೂ ಇರುವುದಿಲ್ಲ. ದೇವಾಸುರರಾಗಲೀ, ಯಕ್ಷ-ರಾಕ್ಷಸರಾಗಲೀ ಇರುವುದಿಲ್ಲ. ಮನುಷ್ಯರಾಗಲೀ, ಶ್ವಾಪದಗಳಾಗಲೀ, ವೃಕ್ಷಗಳಾಗಲೀ ಯಾವುವೂ ಇರುವುದಿಲ್ಲ. ಆಕಾಶವೂ ಇರುವುದಿಲ್ಲ. ಅಂತಹ ಸಂದರ್ಭದಲ್ಲಿ ನಾನೊಬ್ಬನು ಮಾತ್ರ ಭ್ರಾಂತನಾಗಿ ಅತ್ತಲಿತ್ತ ತಿರುಗುತ್ತಿದ್ದೆನು. ಜಲರಾಶಿಯ ಮಧ್ಯದಲ್ಲಿ ತಿರುಗಾಡುತ್ತಿದ್ದ ನಾನು ಯಾವುದೊಂದು ಪ್ರಾಣಿಯನ್ನೂ ಕಾಣದೇ ದುಃಖಿತನಾದೆನು. ಆ ನೀರಿನಲ್ಲಿಯೇ ಸತತವಾಗಿ ಸುತ್ತಾಡುತ್ತಾ ಕಾಲಕಳೆಯುತ್ತಿರುವಾಗ ಒಮ್ಮೆ ನಾನು ಒಂದೆಡೆಯಲ್ಲಿ ವಿಶಾಲವಾದ ಆಲದ ಮರವನ್ನು ಕಂಡೆನು. ಆ ಮಹಾವೃಕ್ಷದಲ್ಲಿ ವಿಶಾಲವಾದ ಅನೇಕ ಶಾಖೆಗಳಿದ್ದುವು. ಆ ರೆಂಬೆಗಳ ಮಧ್ಯದಲ್ಲಿ ದೇವನಿರ್ಮಿತವಾದ ಒಂದು ಮಂಚವಿದ್ದಿತು. ಆ ಮಂಚದ ಮೇಲೆ ದಿವ್ಯಾಂಬರಗಳು ಹಾಸಲ್ಪಟ್ಟಿದ್ದುವು. ಅಂತಹ ದಿವ್ಯಮಂಚದ ಮೇಲೆ ಚಂದ್ರ ಮತ್ತು ಕಮಲಗಳಿಗೆ ಸಮಾನವಾದ ಮುಖಕಾಂತಿಯಿಂದ ಕೂಡಿದ, ವಿಕಸಿತವಾದ ಪದ್ಮದಳಗಳಂತೆ ವಿಶಾಲವಾದ ಕಣ್ಣುಗಳಿಂದ ಕೂಡಿರುವ ಬಾಲಕನೊಬ್ಬನು ಮಲಗಿರುವುದನ್ನು ಕಂಡೆನು. ಆ ಬಾಲಕನನ್ನು ನೋಡಿದೊಡನೆಯೇ ನನ್ನ ಹೃದಯವು ಆನಂದದಿಂದ ಉಬ್ಬಿಹೋಯಿತು. ಆಗ ನಾನು ನನ್ನನ್ನೇ ಪ್ರಶ್ನೆಮಾಡಿಕೊಂಡೆನು :

**ಕಥಂ ತ್ವಯಂ ಶಿಶುಃ ಶೇತೇ ಲೋಕೇ ನಾಶಮುಪಾಗತೇ ॥೯೩॥**

'ಲೋಕವೆಲ್ಲವೂ ನಾಶವಾಗಿ ಹೋಗಿರುವಾಗ ಈ ಮಗುವು ಇಲ್ಲಿ ಹೇಗೆ (ಏತಕ್ಕಾಗಿ) ಮಲಗಿದೆ?'

ಯುಧಿಷ್ಠಿರ! ನಾನು ಹಿಂದೆ ಇಂತಹ ಅನೇಕಸನ್ನಿವೇಶಗಳನ್ನು ಕಂಡಿರುವೆನು. ನನಗೆ ಭೂತ-ಭವಿಷ್ಯದ್ವರ್ತಮಾನಗಳೆಲ್ಲವೂ ತಿಳಿದಿರುತ್ತವೆ.

ಸದಾ ತಪಸ್ಸಿನಲ್ಲಿ ನಿರತನಾಗಿರುತ್ತೇನೆ. ಧ್ಯಾನಯೋಗದಲ್ಲಿಯೂ ಇರುತ್ತೇನೆ. ಆದರೂ ಆ ಶಿಶುವು ಹೇಗೆ ಹುಟ್ಟಿತೆಂಬುದನ್ನು ನನಗೆ ತಿಳಿಯಲು ಸಾಧ್ಯ ವಾಗಲಿಲ್ಲ.

**ಅತಸೀಪುಷ್ಪವರ್ಣಾಭಃ ಶ್ರೀವತ್ಸಕೃತಭೂಷಣಃ |**
**ಸಾಕ್ಷಾಲ್ಲಕ್ಷ್ಮ್ಯಾ ಇವಾವಾಸಃ ಸ ತದಾ ಪ್ರತಿಭಾತಿ ಮೇ ||೯೫||**



ಅಗಸೆಯ ಹೂವಿನ ಕಾಂತಿಯಂತೆ ಕಾಂತಿಮಂತನಾಗಿದ್ದ, ಶ್ರೀವತ್ಸ ವೆಂಬ ಮಚ್ಚೆಯನ್ನು ಎದೆಯಲ್ಲಿ ಧರಿಸಿದ್ದ ಆ ಬಾಲಕನು ನನಗೆ ಲಕ್ಷ್ಮಿಗೆ ನಿವಾಸಸ್ಥಾನನಾಗಿರುವಂತೆಯೇ ಪ್ರಕಾಶಿಸಿದನು. ಪದ್ಮಲೋಚನನಾದ,

ಶ್ರೀವತ್ಸಾಂಕನಾದ, ತೇಜಃಪುಂಜನಾಗಿದ್ದ ಆ ಬಾಲಕನು ಕರ್ಣಾನಂದಕರವಾದ ಈ ಮಾತುಗಳಿಂದ ನನ್ನನ್ನು ಸಂತೈಸಿದನು :

**ಜಾನಾಮಿ ತ್ವಾಂ ಪರಿಶ್ರಾನ್ತಂ ತತೋ ವಿಶ್ರಾಮಕಾಂಕ್ಷಿಣಮ್ ।**
**ಮಾರ್ಕಣ್ಡೇಯ ಇಹಾಸ್ಸ್ವ ತ್ವಂ ಯಾವದಿಚ್ಛಸಿ ಭಾರ್ಗವ ॥೯೭॥**

"ಭೃಗುವಂಶೋತ್ಪನ್ನನಾದ ಮಾರ್ಕಂಡೇಯನೇ! ನೀನು ಬಹಳವಾಗಿ ಬಳಲಿರುವೆಯೆಂಬುದನ್ನೂ ಮತ್ತು ವಿಶ್ರಾಂತಿಯನ್ನು ಅಪೇಕ್ಷಿಸುತ್ತಿರುವೆ ಯೆಂಬುದನ್ನೂ ನಾನು ಬಲ್ಲೆನು. ಇಲ್ಲಿಯೇ ನೀನು ನಿನಗಿಚ್ಛೆಯಿದ್ದಷ್ಟು ದಿನಗಳು ವಿಶ್ರಮಿಸಿಕೊಳ್ಳಬಹುದು. ನನ್ನ ಶರೀರದ ಮಧ್ಯದಲ್ಲಿಯೇ ನಿನಗೆ ವಿಶ್ರಮಿಸಿಕೊಳ್ಳಲು ಸ್ಥಳಮಾಡಿಕೊಡುತ್ತೇನೆ. ನನ್ನ ಶರೀರದಲ್ಲಿ ಪ್ರವೇಶಿಸಿ ನೀನು ವಿಶ್ರಾಂತಿಸುಖವನ್ನು ಪಡೆಯುವವನಾಗು. ನಾನು ನಿನ್ನ ವಿಷಯದಲ್ಲಿ ಸುಪ್ರೀತನಾಗಿರುವೆನು."

'ಬಾಲಕನೊಬ್ಬನು ನನ್ನನ್ನು ಅನುಗ್ರಹಿಸಬೇಕಾಯಿತೇ? ಇವನು ನನಗೆ ಆಶ್ರಯವನ್ನು ಕೊಡಬೇಕಾಯಿತೇ? ದೀರ್ಘತಪಸ್ಸಿನ, ದೀರ್ಘಾ ಯುಷ್ಯದ ಅಥವಾ ಈ ಮನುಷ್ಯತ್ವದ ಪ್ರಯೋಜನವಾದರೂ ಏನಿದೆ?' ಎಂಬ ಖೇದವು ನನ್ನ ಮನಸ್ಸಿನಲ್ಲುಂಟಾಯಿತು.

ನಾನು ಹೀಗೆ ಯೋಚಿಸುತ್ತಿರುವಾಗಲೇ ಆ ಬಾಲಕನು ತನ್ನ ಬಾಯನ್ನು ವಿಶಾಲವಾಗಿ ತೆರೆದನು. ನಾನು ನನ್ನ ಪ್ರಯತ್ನವಿಲ್ಲದೆಯೇ ದೈವಯೋಗದಿಂದಲೇ ಅವನ ಬಾಯೊಳಗೆ ಪ್ರವೇಶಿಸಿದೆನು.

ನನ್ನ ಗತಿಯು ನನ್ನ ಸ್ವಾಧೀನದಲ್ಲಿರಲಿಲ್ಲ. ಆ ಬಾಲಕನೇ ನನ್ನನ್ನು ತನ್ನ ಬಾಯೊಳಗೆ ಸೆಳೆದುಕೊಂಡನೆಂದಾದರೂ ಹೇಳಬಹುದು. ಯುಧಿಷ್ಠಿರ! ಆ ಶಿಶುವಿನ ಬಾಯಿಯ ಮೂಲಕವಾಗಿ ಉದರವನ್ನು ಪ್ರವೇಶಿಸಿದ ನಾನು ಪರಮಾದ್ಭುತವಾದ ದೃಶ್ಯಗಳನ್ನು ಕಂಡೆನು. ಆಲದೆಲೆಯ ಮೇಲಾಡುತ್ತಿದ್ದ ಮಗುವಿನ ಹೊಟ್ಟೆಯಲ್ಲಿ ಬ್ರಹ್ಮಾಂಡವನ್ನೇ ಕಂಡೆನು. ಧರ್ಮಪುತ್ರನೇ! ಅಗ್ರಹಾರ, ಗ್ರಾಮ, ಪಟ್ಟಣ, ರಾಜಧಾನೀ, ಅನೇಕಾನೇಕದೇಶಗಳು, ಗಿರಿ-ದುರ್ಗ-ಪರ್ವತಗಳು-ಎಲ್ಲವನ್ನೂ ನಾನು ಅಲ್ಲಿ ಸಂದರ್ಶಿಸಿದೆನು. ಗಂಗಾ, ಶತದ್ರು, ಸೀತಾ, ಯಮುನಾ, ಕೌಶಿಕೀ, ಚರ್ಮಣ್ವತೀ, ವೇತ್ರವತೀ,

ಚಂದ್ರಭಾಗಾ, ಸರಸ್ವತೀ, ಸಿಂಧು, ವಿಪಾಶಾ, ಗೋದಾವರೀ, ವಸ್ವೋಕಸಾರಾ, ನಲಿನೀ, ನರ್ಮದಾ, ತಾಮ್ರಪರ್ಣೀ, ವೇಣಾ, ಸುವೇಣಾ, ಕೃಷ್ಣವೇಣಾ, ಇರಾಮಾ, ಮಹಾನದೀ, ವಿತಸ್ತಾ, ಕಾವೇರೀ, ಶೋಣಾ, ವಿಶಲ್ಯಾಕಿಂಪುನಾ–ಮೊದಲಾದ ಈ ಪೃಥ್ವಿಯಲ್ಲಿ ಶುಭಜಲದಿಂದ ಕೂಡಿದ್ದ ನದೀ-ನದಗಳನ್ನೆಲ್ಲವನ್ನೂ ಆ ಶಿಶುವಿನ ಉದರದಲ್ಲಿಯೇ ಸಂದರ್ಶಿಸಿದೆನು. ಇಷ್ಟುಮಾತ್ರವಲ್ಲ ; ತಿಮಿ-ತಿಮಿಂಗಿಲಗಳಿಂದಲೂ, ಮೊಸಳೆ-ಮೀನುಗಳಿಂದಲೂ, ಮಹಾರತ್ನಗಳಿಂದಲೂ ಕೂಡಿದ್ದ ಸಮುದ್ರಗಳನ್ನು ಕಂಡೆನು. ಆ ಶಿಶುವಿನ ಉದರದಲ್ಲಿ ಅಂತರಿಕ್ಷವೂ ಇದ್ದಿತು. ಅಲ್ಲಿ ಸೂರ್ಯ-ಚಂದ್ರರೂ ವಿರಾಜಿಸುತ್ತಿದ್ದರು. ಯಜ್ಞೇಶ್ವರನಿಗೆ ಮತ್ತು ಸೂರ್ಯನಿಗೆ ಸಮಾನವಾದ ಕಾಂತಿಯಿಂದ ಆ ಆಕಾಶವು ಬೆಳಗುತ್ತಲಿದ್ದಿತು. ಭೂಮಿಯ ನಾನಾ ಕಡೆಗಳಲ್ಲಿ ಉದ್ಯಾನವನಗಳೂ, ಘೋರಾರಣ್ಯಗಳೂ ಇದ್ದುದನ್ನು ನಾನು ಕಂಡೆನು. ಇಷ್ಟುಮಾತ್ರವಲ್ಲ ; ಯಜ್ಞ-ಯಾಗಾದಿಗಳಲ್ಲಿ ನಿರತರಾಗಿದ್ದ ಬ್ರಾಹ್ಮಣರನ್ನೂ–ಇತರವರ್ಣದವನ್ನು ಸಂರಕ್ಷಿಸುತ್ತಿದ್ದ, ದುಷ್ಟಶಿಕ್ಷಣ-ಶಿಷ್ಟಪರಿಪಾಲನೆಗಳನ್ನು ಮಾಡುತ್ತಿದ್ದ ಕ್ಷತ್ರಿಯರನ್ನೂ, ಕೃಷಿ-ವಾಣಿಜ್ಯಗಳಲ್ಲಿ ನಿರತರಾಗಿದ್ದ ವೈಶ್ಯರನ್ನೂ, ದ್ವಿಜರ ಶುಶ್ರೂಷೆಯಲ್ಲಿಯೇ ಸರ್ವದಾ ನಿರತರಾಗಿದ್ದ ಶೂದ್ರರನ್ನೂ ನಾನು ಶಿಶುವಿನ ಹೊಟ್ಟೆಯಲ್ಲಿದ್ದ ಆ ಬ್ರಹ್ಮಾಂಡದಲ್ಲಿ ಕಂಡೆನು. ಅವನ ಇಚ್ಛೆಯಂತೆ ನಾನು ಆ ಶಿಶುವಿನ ಹೊಟ್ಟೆಯಲ್ಲಿಯೇ ಸಂಚರಿಸುತ್ತಿದ್ದಾಗ ಹಿಮವತ್ಪರ್ವತವನ್ನೂ ಹೇಮಕೂಟವನ್ನೂ ಸಂದರ್ಶಿಸಿದೆನು. ಅನಂತರ ನಿಷಧಪರ್ವತವನ್ನೂ, ಬೆಳ್ಳಿಯಿಂದ ಆವೃತವಾಗಿದ್ದ ಶ್ವೇತಪರ್ವತವನ್ನೂ, ಗಂಧಮಾದನಪರ್ವತವನ್ನೂ, ಮಂದರಪರ್ವತವನ್ನೂ, ನೀಲಪರ್ವತವನ್ನೂ, ಕನಕಪರ್ವತವೆಂದು ಪ್ರಸಿದ್ಧವಾಗಿರುವ ಮೇರುಪರ್ವತವನ್ನೂ, ಮಹೇಂದ್ರಪರ್ವತವನ್ನೂ, ವಿಂಧ್ಯಪರ್ವತವನ್ನೂ, ಮಲಯಪರ್ವತವನ್ನೂ, ಪಾರಿಯಾತ್ರಪರ್ವತವನ್ನೂ ಮತ್ತು ಇವುಗಳಲ್ಲದೇ ವಜ್ರ-ವೈಡೂರ್ಯಾದಿ ನವರತ್ನಗಳಿಂದ ಅಲಂಕೃತವಾಗಿದ್ದ ಇನ್ನೂ ಅನೇಕ ಗಿರಿ-ದುರ್ಗ-ಪರ್ವತಗಳನ್ನೂ ನಾನಲ್ಲಿ ಸಂದರ್ಶಿಸಿದೆನು. ಆ ಪರ್ವತಗಳ ಗುಹೆಗಳಲ್ಲಿಯೂ ಮತ್ತು ಅದರ ಸಮೀಪದಲ್ಲಿದ್ದ ಅರಣ್ಯಗಳಲ್ಲಿಯೂ ಸಂಚರಿ

ಸುತ್ತಿದ್ದ ವ್ಯಾಘ್ರ-ವರಾಹ-ಸಿಂಹ-ಶಾರ್ದೂಲಾದಿ ಅನೇಕಾನೇಕ ದುಷ್ಟಮೃಗಗಳನ್ನೂ ನಾನಲ್ಲಿ ಕಂಡೆನು. ಹಸುಗಳು, ಜಿಂಕೆಗಳು ಇನ್ನೂ ಅನೇಕ ಸಾಧು ಮೃಗಗಳು ಆ ಬಾಲಕನ ಉದರಪ್ರಪಂಚದಲ್ಲಿದ್ದುವು. ಅವನ ಇಚ್ಛೆಯಂತೆ ನಾನು ಮುಂದೆ-ಮುಂದೆ ಹೋಗುತ್ತಿದ್ದಾಗ–ದೇವತೆಗಳನ್ನೂ ದೇವ ಪ್ರಮುಖನಾದ ಇಂದ್ರನನ್ನೂ ಅಲ್ಲಿಯೇ ಕಂಡೆನು. ಸಾಧ್ಯ-ರುದ್ರಾದಿತ್ಯರೂ, ಗುಹ್ಯರೂ, ಪಿತೃದೇವತೆಗಳೂ, ಸರ್ಪಾಧಿದೇವತೆಗಳೂ, ನಾಗದೇವತೆಗಳೂ, ಸುಪರ್ಣರೂ, ವಸುಗಳೂ, ಅಶ್ವಿನೀದೇವತೆಗಳೂ–ಇವರೇ ಮೊದಲಾದ ಇನ್ನೂ ಅನೇಕ ಕೋಟಿ ದೇವತೆಗಳೂ ಇಂದ್ರನ ಜೊತೆಯಲ್ಲಿಯೇ ನನ್ನ ಕಣ್ಣಿಗೆ ಗೋಚರರಾದರು. ಗಂಧರ್ವಾಪ್ಸರೆಯರೂ, ದೈತ್ಯ-ಯಕ್ಷ-ರಾಕ್ಷಸ-ಕಿನ್ನರ-ಕಿಂಪುರುಷರೂ, ಋಷಿ-ಮಹರ್ಷಿಗಳೂ, ಸಿಂಹಿಕೆಯ ಮಕ್ಕಳೂ, ದೇವತೆಗಳ ಶತ್ರುಗಳೂ ಆ ಶಿಶುವಿನ ಉದರಪ್ರಪಂಚದಲ್ಲಿಯೇ ಉಪಸ್ಥಿತರಾಗಿದ್ದು ನನ್ನ ದೃಷ್ಟಿಗೆ ಗೋಚರರಾದರು.

ಹೆಚ್ಚೇನು ಹೇಳಲಿ, ಯುಧಿಷ್ಠಿರ! ಪ್ರಳಯದ ಮೊದಲು ಮೂರು ಲೋಕಗಳಲ್ಲಿಯೂ ಇದ್ದ ಸಕಲಚರಾಚರಪ್ರಾಣಿಗಳೆಲ್ಲವನ್ನೂ ನಾನು ಆ ಶಿಶುವಿನ ಹೊಟ್ಟೆಯಲ್ಲಿಯೇ ಕಂಡೆನು. ಅಲ್ಲಿಯೇ ನನ್ನ ಉಪಾಹಾರಕ್ಕಾಗಿ ನಾನು ಅಪೇಕ್ಷಿಸಿದಾಗ ಉತ್ತಮವಾದ ಫಲಗಳೂ ಸಿಕ್ಕುತ್ತಿದ್ದುವು. ಕಂದ-ಮೂಲ-ಫಲಗಳನ್ನು ತಿನ್ನುತ್ತಾ ಅವನ ಸಂಕಲ್ಪದಂತೆ ನಾನು ತ್ರಿಭುವನಗಳೆಲ್ಲವನ್ನೂ ಅಲೆದಾಡುತ್ತಾ ನೂರಾರು ವರ್ಷಗಳ ಕಾಲ ಅಲ್ಲಿಯೇ ಕಳೆದು ಬಿಟ್ಟೆನು, ಎಷ್ಟೇ ಸುತ್ತಾಡಿದರೂ ನನಗೆ ಆ ಹೊಟ್ಟೆಯ ವಿಸ್ತಾರವೆಷ್ಟಿರಬಹುದೆಂಬುದರ ಕಲ್ಪನೆಯೂ ಉಂಟಾಗಲಿಲ್ಲ. ಒಂದೇ ದಿಕ್ಕನ್ನು ಹಿಡಿದು ಎಷ್ಟುದೂರ ನಡೆದರೂ ಆ ಹೊಟ್ಟೆಯ ತುದಿಯು ಸಿಕ್ಕುತ್ತಿರಲಿಲ್ಲ. ಹೇಗಾದರೂ ಮಾಡಿ ಹೊಟ್ಟೆಯಿಂದ ಹೊರಬೀಳಬೇಕೆಂದು ಮನಸ್ಸು ಕಾತರಿಸುತ್ತಿದ್ದಿತು. ಸುತ್ತಿ-ಸುತ್ತಿ ಬಳಲಿ-ಬೆಂಡಾಗಿ ನಾನು ಅಲ್ಲಿಂದ ಹೊರಗೆ ಬರು ವುದೂ ಅವನ ಸಂಕಲ್ಪಕ್ಕೆ ಸೇರಿದ್ದೆಂದು ನಿಶ್ಚಯಿಸಿ ಅನ್ಯಥಾ ವಿಧಿಯಿಲ್ಲದೇ ನಾನು ಸುಮ್ಮನಿರಬೇಕಾಯಿತು. ಶಿಶುರೂಪನಾಗಿದ್ದ, ವರೇಣ್ಯನಾದ, ದೇವದೇವನಾದ ಪರಮಪುರುಷನೇ ಅನನ್ಯಶರಣ್ಯನೆಂದು ಮನಸ್ಸಿನಿಂದಲೇ ಚಿಂತಿಸಿ ಅನನ್ಯಭಕ್ತಿಯಿಂದ ಪ್ರಾರ್ಥಿಸಿದೆನು. ಮರುಕ್ಷಣದಲ್ಲಿಯೇ ನಾನು

ಶಿಶುರೂಪನಾಗಿದ್ದ ಪುರುಷೋತ್ತಮನ ಹೊಟ್ಟೆಯಿಂದ–ಅವನು ತೇಗಿದಾಗ ಹೊರಬಂದ ವಾಯುವಿನ ಮೂಲಕವಾಗಿ–ಹೊರಕ್ಕೆ ತಳ್ಳಲ್ಪಟ್ಟೆನು. ಹೊರಕ್ಕೆ ಬಂದಮೇಲೆ ಪುನಃ ನಾನು ಆಲದ ಮರದ ರೆಂಬೆಯ ಮಧ್ಯದಲ್ಲಿ ಮಲಗಿದ್ದ ಶ್ರೀವತ್ಸಾಂಕಿತನಾದ ಆ ಮುದ್ದುಮಗುವನ್ನು ಕಂಡೆನು. ನಿಶ್ಚಯವಾಗಿಯೂ ಧರ್ಮಜ! ಆ ಪುಟ್ಟ ಮಗುವು ಈ ಮೂರು ಲೋಕಗಳನ್ನೂ ನುಂಗಿ ತನ್ನ ಹೊಟ್ಟೆಯಲ್ಲಿ ಯಥಾವತ್ತಾಗಿ ಅಡಗಿಸಿಕೊಂಡಿದ್ದಿತು. ಶ್ರೀವತ್ಸಾಂಕಿತನಾದ, ಪೀತಾಂಬರವನ್ನು ಧರಿಸಿದ್ದ ಆ ಬಾಲಕನು ನನ್ನ ವಿಷಯದಲ್ಲಿ ಬಹಳ ಅಕ್ಕರೆಯನ್ನು ತೋರುತ್ತಾ ನನ್ನನ್ನು ಕುರಿತು ಹೇಳಿದನು : "ಮಾರ್ಕಂಡೇಯ! ನನ್ನ ಶರೀರದಲ್ಲಿ ಬಹಳ ಕಾಲವಿದ್ದ ನಿನಗೆ ಆಯಾಸಪರಿಹಾರವಾಗಿರಬಹುದಲ್ಲವೇ? ಮಹರ್ಷಿಯೇ! ನಿನ್ನೊಡನೆ ಒಂದೆರಡು ಮಾತುಗಳನ್ನಾಡಬೇಕೆಂದಿರುವೆನು."

ಆ ಬಾಲಕನು ಹೀಗೆ ನನ್ನೊಡನೆ ಹೇಳಿದ ಮರುಕ್ಷಣದಲ್ಲಿಯೇ ನನ್ನ ಹೃದಯದಲ್ಲಿ ಜ್ಯೋತಿಯೊಂದನ್ನು ಕಂಡುಕೊಂಡೆನು. ಪ್ರಪಂಚವೆಲ್ಲವೂ ಮಾಯಾಮಯವಾಗಿ ಕಂಡಿತು. ಪರಮಾದ್ಭುತವಾದ ದಿವ್ಯಜ್ಞಾನವನ್ನು ಆ ಬಾಲಕನ ಅನುಗ್ರಹದಿಂದ ಪಡೆದೆನೆಂಬ ಭಾವನೆಯು ನನಗುಂಟಾಯಿತು. ಮಗುವಿನ ಪರಮಾದ್ಭುತಶಕ್ತಿಯನ್ನೂ, ಅಪರಿಮಿತಪ್ರಭಾವವನ್ನೂ ನೋಡಿ ಬಹುವಯಸ್ಕನೆಂಬ ಮತ್ತು ಬಹುತಪಃಶೀಲನೆಂಬ ದುರಭಿಮಾನವನ್ನೂ ಸಂಪೂರ್ಣವಾಗಿ ತೊಡೆದುಹಾಕಿ–ನಯನಮನೋಹರವಾಗಿದ್ದ, ಬಹು ಮೃದುವಾಗಿಯೂ, ಸುಪ್ರತಿಷ್ಠಿತವಾಗಿಯೂ ಇದ್ದ, ಕಮಲಪುಷ್ಪದಳಗಳಂತೆ ಕೆಂಪಾಗಿದ್ದ ಮತ್ತು ಸುಮನೋಹರವಾದ ಪುಟ್ಟ-ಪುಟ್ಟ ಬೆರಳುಗಳಿಂದ ಕೂಡಿದ್ದ ಆ ಬಾಲಕನ ಎರಡು ಪಾದಕಮಲಗಳನ್ನೂ ನಾನು ಬಹಳ ಭಕ್ತಿಯಿಂದ ನನ್ನ ಅಂಜಲಿಪುಟದಿಂದ ಹಿಡಿದು ಮೇಲೆತ್ತಿ ತಲೆಯಲ್ಲಿಟ್ಟುಕೊಂಡೆನು. ಆ ಶಿಶುವಿನ ಪಾದಗಳನ್ನು ನನ್ನ ತಲೆಯ ಮೇಲಿಟ್ಟುಕೊಂಡೊಡನೆಯೇ ನನಗುಂಟಾದ ಸುಖವು ಅನಿರ್ವಾಚ್ಯವಾಗಿದ್ದಿತು, ಯುಧಿಷ್ಠಿರ! ಬ್ರಹ್ಮಾನಂದದಲ್ಲಿ ನಾನು ಮುಳುಗಿಬಿಟ್ಟೆನು. ನನ್ನ ಕಣ್ಣುಗಳಿಂದ ಆನಂದ ಬಾಷ್ಪಗಳು ಧಾರಾಕಾರವಾಗಿ ಹರಿಯತೊಡಗಿದುವು. ಅದೇ ಸ್ಥಿತಿಯಲ್ಲಿಯೇ ಯಾವಾಗಲೂ ಇರಬೇಕೆನ್ನಿಸಿತು. ಧರ್ಮಜ! ಸ್ವಲ್ಪ ಹೊತ್ತಾದನಂತರದಲ್ಲಿ

ಅವನ ಇಚ್ಛೆಯಂತೆಯೇ ನಾನು ಆ ಸುಮನೋಹರವಾದ ಪಾದಕಮಲ ಗಳನ್ನು ಬಹಳ ಚೋಪಾನವಾಗಿ ಹಿಂದಿದ್ದ ಸ್ಥಳದಲ್ಲಿಯೇ ಇಟ್ಟು ಕಿಲ-ಕಿಲನೆ ನಗುತ್ತಿದ್ದ ಶಿಶುವಿನ ಮುಖಕಮಲವನ್ನು ನೋಡಿ ಕೈಜೋಡಿಸಿಕೊಂಡು ನಿಂತುಕೊಂಡೆನು. ಧರ್ಮಜ! ಕಮಲದಳಗಳಂತೆ ವಿಶಾಲವಾದ ನೇತ್ರ ಯುಗಳವನ್ನು ಹೊಂದಿದ್ದ ಆ ಶಿಶುವೇ ಸರ್ವಪ್ರಾಣಿಗಳ ಆತ್ಮದಲ್ಲಿಯೂ ಉಪಸ್ಥಿತವಾಗಿರುವುದು. ಯುಧಿಷ್ಠಿರ! ಅಂತಹ ಪರಾತ್ಪರನಾದ ಪರಮ ಪುರುಷನಿಗೆ ನಾನು ಬದ್ಧಾಂಜಲಿಯಾಗಿ ನಮಸ್ಕರಿಸಿ ಪ್ರಾರ್ಥಿಸಿದೆನು.

ಜ್ಞಾತುಮಿಚ್ಛಾಮಿ ದೇವ ತ್ವಾಂ ಮಾಯಾಂ ಚೈತಾಂ
ತವೋತ್ತಮಾಮ್ ॥೧೩೫॥

ಅಸ್ಯೇನಾನುಪ್ರವಿಷ್ಟೋಽಹಂ ಶರೀರೇ ಭಗವಂಸ್ತವ ।
ದೃಷ್ಟವಾನಖಿಲಾನ್ಸರ್ವಾನ್ಸಮಸ್ತಾಂಜಠರೇ ಹಿ ತೇ ॥೧೩೬॥

ತವ ದೇವ ಶರೀರಸ್ಥಾ ದೇವದಾನವರಾಕ್ಷಸಾಃ ।
ಯಕ್ಷಗನ್ಧರ್ವನಾಗಾಶ್ಚ ಜಗತ್ ಸ್ಥಾವರಜಙ್ಗಮಮ್ ॥೧೩೭॥

ತ್ವತ್ಪ್ರಸಾದಾಚ್ಚ ಮೇ ದೇವ ಸ್ಮೃತಿರ್ನ ಪರಿಹೀಯತೇ ।
ದ್ರುತಮನ್ತಃಶರೀರೇ ತೇ ಸತತಂ ಪರಿವರ್ತಿನಃ ॥೧೩೮॥

ನಿರ್ಗತೋಽಹಮಕಾಮಸ್ತು ಇಚ್ಛಯಾ ತೇ ಮಹಾಪ್ರಭೋ ।
ಇಚ್ಛಾಮಿ ಪುಣ್ಡರೀಕಾಕ್ಷ ಜ್ಞಾತುಂ ತ್ವಾಹಮನಿನ್ದಿತಮ್ ॥೧೩೯॥

ಇಹ ಭೂತ್ವಾ ಶಿಶುಃ ಸಾಕ್ಷಾತ್ಕಿಂ ಭವಾನವತಿಷ್ಠತೇ ।
ಪೀತ್ವಾ ಜಗದಿದಂ ಸರ್ವಮೇತದಾಖ್ಯಾತುಮರ್ಹಸಿ ॥೧೪೦॥

ಕಿಮರ್ಥಂ ಚ ಜಗತ್ಸರ್ವಂ ಶರೀರಸ್ಥಂ ತವಾನಘ ।
ಕಿಯನ್ತಂ ಚ ತ್ವಯಾ ಕಾಲಮಿಹ ಸ್ಥೇಯಮರಿಂದಮ ॥೧೪೧॥

ಏತದಿಚ್ಛಾಮಿ ದೇವೇಶ ಶ್ರೋತುಂ ಬ್ರಾಹ್ಮಣಕಾಮ್ಯಯಾ ।
ತ್ವತ್ತಃ ಕಮಲಪತ್ರಾಕ್ಷ ವಿಸ್ತರೇಣ ಯಥಾತಥಮ್ ।
ಮಹದ್ಧ್ಯೇತದಚಿನ್ತ್ಯಂ ಚ ಯದಹಂ ದೃಷ್ಟವಾನ್ಪ್ರಭೋ ॥೧೪೨॥

"ದೇವದೇವನೇ! ನೀನಾರೆಂಬುದನ್ನು ತಿಳಿಯಲು ಉತ್ಸುಕನಾಗಿದ್ದೇನೆ

ಮತ್ತು ಈ ನಿನ್ನ ಪರಮಾದ್ಭುತವಾದ ಮಾಯೆಯ ಸ್ವರೂಪವೇನೆಂಬುದನ್ನೂ ತಿಳಿಯಲು ಆಶಿಸಿದ್ದೇನೆ. ಪೂಜ್ಯನೇ! ನಿನ್ನ ಇಚ್ಛೆಯಂತೆ ಅಥವಾ ನಿನ್ನ ನಿರ್ದೇಶದಂತೆ ನಿನ್ನ ಬಾಯೊಳಗೆ ಪ್ರವೇಶಿಸಿ ನಿನ್ನ ಹೊಟ್ಟೆಯನ್ನು ಸೇರಿದ ನಾನು ಅನಂತವಿಸ್ತಾರವುಳ್ಳ ನಿನ್ನ ಉದರದಲ್ಲಿ ಸಕಲಭುವನಗಳನ್ನೂ ಕಂಡೆನು. ನಿನ್ನ ಹೊಟ್ಟೆಯಲ್ಲಿ ದೇವ-ದಾನವ-ಯಕ್ಷ-ರಾಕ್ಷಸರೂ, ಗಂಧರ್ವಾಪ್ಸರ-ನಾಗರೂ ಇದ್ದರು. ಸಕಲಚರಾಚರಗಳೂ, ಸ್ಥಾವರ-ಜಂಗಮಗಳೂ ನಿನ್ನ ಉದರದಲ್ಲಿ ಅಡಗಿದ್ದುವು. ಮಹಾಪ್ರಭುವೇ! ನಿನ್ನ ಕರುಣೆಯಿಂದಲೇ ನಾನು ನಿನ್ನ ಉದರದಲ್ಲಿದ್ದ ಪ್ರಪಂಚವನ್ನೆಲ್ಲಾ ಬಹುವೇಗವಾಗಿ ಸುತ್ತಾಡಿದೆನು. ಒಂದಾದ ಮೇಲೆ ಮತ್ತೊಂದು ಲೋಕವು ಸಿಕ್ಕುತ್ತಿದ್ದಿತೇ ಹೊರತು ಅದಕ್ಕೆ ಅಂತ್ಯವೇ ಇರಲಿಲ್ಲ. ನಿನ್ನ ಅನುಗ್ರಹದಿಂದಲೇ ನನಗೆ ಯಾವ ವಿಧವಾದ ವಿಸ್ಮರಣೆಯೂ ಉಂಟಾಗಿರುವುದಿಲ್ಲ. ನಿನ್ನ ಪ್ರಭಾವದಿಂದಲೇ ನಾನು ನಿನ್ನ ಹೊಟ್ಟೆಯಿಂದ ಹೊರಬಂದೆನು. ನನಗೆ ಅಲ್ಲಿಂದ ಹೊರಬರುವ ಮಾರ್ಗವೇ ತಿಳಿದಿರಲಿಲ್ಲ. ನಾನು ಹೊರಬಂದನಂತರ, ನಿನ್ನ ಅನುಗ್ರಹದಿಂದ ನಾನು ಪಡೆದ ಜ್ಞಾನಾನುಭವವು ಅನಿರ್ವಚನೀಯವಾಗಿದೆ. ಪುಂಡರೀಕಾಕ್ಷನೇ! ನಿಷ್ಕಳಂಕವಾದ ನಿರುಪಾಧಿಕವಾದ ನಿನ್ನ ನಿಜಸ್ವರೂಪವೇನೆಂಬುದನ್ನು ತಿಳಿಯಲು ಆಸಕ್ತನಾಗಿದ್ದೇನೆ. ಸಕಲಜಗತ್ತನ್ನೂ ನುಂಗಿ ಏನೂ ತಿಳಿಯದನೋ—ಎಂಬಂತೆ ಶಿಶುವಿನ ರೂಪವನ್ನು ಧರಿಸಿ ನೀರಿನಲ್ಲಿ ಪವಡಿ ಸಿರುವುದರ ಕಾರಣವಾದರೂ ಏನು? ಇವುಗಳೆಲ್ಲವನ್ನೂ ದಯಮಾಡಿ ಹೇಳು, ದೇವ! ಈ ಸಕಲಭುವನಗಳೂ ನಿನ್ನ ಹೊಟ್ಟೆಯಲ್ಲೇಕೆ ಅಡಗಿವೆ? ನೀನು ಇನ್ನೂ ಎಷ್ಟು ವರ್ಷಗಳ ಪರ್ಯಂತವಾಗಿ ಇಲ್ಲಿಯೇ ಪವಡಿಸಿರುವೆ? ಬ್ರಾಹ್ಮಣನಾದವನಿಗೆ ಇಂತಹ ವಿಷಯಗಳಲ್ಲಿ ಹೆಚ್ಚು ಆಸಕ್ತಿಯಿರುವುದು ಸಹಜವಾಗಿಯೇ ಇದೆ. ಈ ಕಾರಣದಿಂದಲೇ ನಾನಿಂದು ನಿನ್ನನ್ನು ಪ್ರಶ್ನಿಸು ತ್ತಿದ್ದೇನೆ. ಕಮಲದಳನೇತ್ರನೇ! ನೀನು ಈ ವಿಷಯಗಳೆಲ್ಲವನ್ನೂ ನನಗೆ ಯಥಾವತ್ತಾಗಿ ವಿಸ್ತಾರವಾಗಿ ಹೇಳುವವನಾಗು. ನಾನು ನಿನ್ನ ಹೊಟ್ಟೆಯಲ್ಲಿ ಕಂಡ ದೃಶ್ಯವು ಪರಮಾದ್ಭುತವಾದುದು ಮತ್ತು ಅಚಿಂತ್ಯವಾದುದು."

ಯುಧಿಷ್ಠಿರ! ನನ್ನ ಮಾತುಗಳನ್ನು ಕೇಳಿ ಶ್ರೀಮಂತನಾದ, ದ್ಯುತಿ

ಮಂತನಾದ, ದೇವದೇವನಾದ, ವಾಗ್ಮಿಗಳಲ್ಲಿ ಶ್ರೇಷ್ಠನಾದ ಆ ಬಾಲನು ಮುಗುಳ್ನಗೆಯನ್ನು ಬೀರುತ್ತಾ ಹೇಳತೊಡಗಿದನು.

೧೮೮ನೆಯ ಅಧ್ಯಾಯವು ಮುಗಿಯಿತು.

೧೮೯ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಬಾಲಮುಕುಂದನು ಮಾರ್ಕಂಡೇಯರಿಗೆ ತನ್ನ ಸ್ವರೂಪವನ್ನು ಪರಿಚಯಮಾಡಿಕೊಟ್ಟುದು : ಮಾರ್ಕಂಡೇಯರಿಂದ ಶ್ರೀಕೃಷ್ಣನ ಮಹಿಮಾಗಾನ ಮತ್ತು ಶ್ರೀಕೃಷ್ಣನಲ್ಲಿ ಪಾಂಡವರ ಶರಣಾಗತಿ

ಯುಧಿಷ್ಠಿರ! ಆಲದ ಮರದ ಮಧ್ಯದಲ್ಲಿದ್ದ ಪವಡಿಸಿದ್ದ, ಶಿಶುರೂಪನಾಗಿದ್ದ ಪರಮಾತ್ಮನು ನನ್ನನ್ನು ಕುರಿತು ಹೀಗೆಂದು ಹೇಳಿದನು :

(ಈ ಅಧ್ಯಾಯದಲ್ಲಿ ಭಗವದ್ರಹಸ್ಯವಿರುವುದರಿಂದಲೂ ಮತ್ತು ಇದು ಸಾಕ್ಷಾತ್ ಭಗವದ್ಗೀತೆಯೇ ಆಗಿರುವುದರಿಂದಲೂ ಈ ಅಧ್ಯಾಯವನ್ನು ಯಥಾವತ್ತಾಗಿಯೇ ಕೊಟ್ಟು ಅನುವಾದಮಾಡಲಾಗಿದೆ.)

**ಕಾಮಂ ದೇವಾ ಅಪಿ ನ ಮಾಂ ವಿಪ್ರ ಜಾನನ್ತಿ ತತ್ತ್ವತಃ ।**
**ತ್ವತ್ಪ್ರೀತಾ ತು ಪ್ರವಕ್ಷ್ಯಾಮಿ ಯಥೇದಂ ವಿಸೃಜಾಮ್ಯಹಮ್ ॥೧॥**

“ಬ್ರಾಹ್ಮಣೋತ್ತಮನೇ! ದೇವತೆಗಳೂ ಕೂಡ ನನ್ನ ನಿಜಸ್ವರೂಪವೇನೆಂಬುದನ್ನು ತತ್ತ್ವಶಃ ತಿಳಿದವರಾಗಿಲ್ಲ. ನಾನು ನಿನ್ನ ವಿಷಯದಲ್ಲಿ ಸುಪ್ರೀತನಾಗಿರುವೆನು. ನಾನು ಈ ವಿಶ್ವವನ್ನು ಹೇಗೆ ಸೃಷ್ಟಿಸುವೆನೆಂಬ ರಹಸ್ಯವನ್ನು ಹೇಳುವೆನು.

**ಪಿತೃಭಕ್ತೋಽಸಿ ವಿಪ್ರರ್ಷೇ ಮಾಂ ಚೈವ ಶರಣಂ ಗತಃ ।**
**ತತೋ ದೃಷ್ಟೋಽಸ್ಮಿ ತೇ ಸಾಕ್ಷಾದ್ಬ್ರಹ್ಮಚರ್ಯಂ ಚ ತೇ ಮಹತ್ ॥೨॥**

ನೀನು ಪಿತೃಭಕ್ತನಾಗಿರುವುದರಿಂದಲೂ, ಮಹಾತಪಸ್ವಿಯಾಗಿರುವುದರಿಂದಲೂ, ಬ್ರಹ್ಮಚರ್ಯವ್ರತವನ್ನು ಅನುಷ್ಠಾನಮಾಡುತ್ತಿರುವುದರಿಂದಲೂ ಮತ್ತು ನನ್ನನ್ನೇ ಮೊರೆಹೊಕ್ಕಿರುವುದರಿಂದಲೂ–ನಿನಗೆ ನಾನೀ ರಹಸ್ಯವನ್ನು ಹೇಳುತ್ತೇನೆ.

**ಅಪಾಂ ನಾರಾ ಇತಿ ಪುರಾ ಸಂಜ್ಞಾಕರ್ಮ ಕೃತಂ ಮಯಾ ।**
**ತೇನ ನಾರಾಯಣೋಽಪ್ಯುಕ್ತೋ ಮಮ ತತ್ತ್ವಯನಂ ಸದಾ ॥೩॥**

ಹಿಂದೊಮ್ಮೆ ನಾನು ಈ ಜಲರಾಶಿಯನ್ನು "ನಾರಾ" ಎಂದು ಕರೆದೆನು. ನನಗೆ ಸರ್ವಕಾಲದಲ್ಲಿಯೂ ಈ ನೀರೇ ಆಶ್ರಯಸ್ಥಾನವಾಗಿರುವುದರಿಂದ ಅಥವಾ ನಾನು ಸೃಷ್ಟಿಸಿದ ನೀರನ್ನೇ ನಾನು ನನ್ನ ಸ್ಥಾನವನ್ನಾಗಿ ಮಾಡಿಕೊಂಡ ಕಾರಣ (ತತ್ಸೃಷ್ಟ್ವಾ । ತದೇವಾನುಪ್ರಾವಿಶತ್) ನಾನು ನಾರಾಯಣನಾದೆನು.

**ಅಹಂ ನಾರಾಯಣೋ ನಾಮ ಪ್ರಭವಃ ಶಾಶ್ವತೋಽವ್ಯಯಃ ।**
**ವಿಧಾತಾ ಸರ್ವಭೂತಾನಾಂ ಸಂಹರ್ತಾ ಚ ದ್ವಿಜೋತ್ತಮ ॥೪॥**

ಪ್ರಪಂಚದ ವಿಶಿಷ್ಟವಸ್ತುಗಳನ್ನೂ ಸೃಷ್ಟಿಸುವ 'ನಾರಾಯಣ' ಎಂಬು ವನು ನಾನೇ ಆಗಿರುವೆನು. ನಾನು ಶಾಶ್ವತನು. ನಾಶರಹಿತನು. ಸಕಲ ಚರಾಚರಾತ್ಮಕವಾದ ಸ್ಥಾವರ-ಜಂಗಮಗಳನ್ನು ಸೃಷ್ಟಿಮಾಡುವವನೂ, ರಕ್ಷಣೆಮಾಡುವವನೂ, ವಿನಾಶಮಾಡುವವನೂ ನಾನೇ ಆಗಿರುವೆನು.

**ಅಹಂ ವಿಷ್ಣುರಹಂ ಬ್ರಹ್ಮಾ ಶಕ್ರಶ್ಚಾಹಂ ಸುರಾಧಿಪಃ ।**
**ಅಹಂ ವೈಶ್ರವಣೋ ರಾಜಾ ಯಮಃ ಪ್ರೇತಾಧಿಪಸ್ತಥಾ ॥೫॥**

**ಅಹಂ ಶಿವಶ್ಚ ಸೋಮಶ್ಚ ಕಶ್ಯಪೋಽಥ ಪ್ರಜಾಪತಿಃ ।**
**ಅಹಂ ಧಾತಾ ವಿಧಾತಾ ಚ ಯಜ್ಞಶ್ಚಾಹಂ ದ್ವಿಜೋತ್ತಮ ॥೬॥**

ನಾನೇ ಬ್ರಹ್ಮ; ನಾನೇ ವಿಷ್ಣು; ನಾನೇ ದೇವಾಧಿಪನಾದ ಇಂದ್ರ. ಕುಬೇರನೂ, ಯಮನೂ ಮತ್ತು ಶಿವನೂ ನಾನೇ ಆಗಿರುತ್ತೇನೆ. ಸೋಮ, ಕಶ್ಯಪ, ಪ್ರಜಾಪತಿ, ಧಾತಾ, ವಿಧಾತಾ-ಇವರುಗಳೂ ನನ್ನ ಅಂಶದಿಂದಲೇ ಹುಟ್ಟಿದವರಾಗಿದ್ದಾರೆ. ಯಜ್ಞವೂ, ಯಜ್ಞದ್ರವ್ಯವೂ, ಯಜ್ಞಮಾಡುವವನೂ (ಯಜಮಾನನೂ) ನಾನೇ ಆಗಿರುತ್ತೇನೆ.

**ಅಗ್ನಿರಾಸ್ಯಂ ಕ್ಷಿತಿಃ ಪಾದೌ ಚನ್ದ್ರಾದಿತ್ಯೌ ಚ ಲೋಚನೇ ।**
**ದ್ಯೌರ್ಮೂರ್ಧಾ ಖಂ ದಿಶಃ ಶ್ರೋತ್ರೇ ತಥಾಪಃ ಸ್ವೇದಸಮ್ಭವಾಃ ॥೭॥**

**ಸದಿಶಂ ಚ ನಭಃ ಕಾಯೋ ವಾಯುರ್ಮನಸಿ ಮೇ ಸ್ಥಿತಃ ।**
**ಮಯಾ ಕ್ರತುಶತೈರಿಷ್ಟಂ ಬಹುಭಿಃ ಸ್ವಾಪ್ತದಕ್ಷಿಣೈಃ ॥೮॥**

ಅಗ್ನಿಯೇ ನನಗೆ ಮುಖವು. ಈ ಭೂಮಿಯೇ ನನ್ನ ಕಾಲುಗಳು. ಸೂರ್ಯ-ಚಂದ್ರರೇ ನನ್ನ ಕಣ್ಣುಗಳು. ಸ್ವರ್ಗಲೋಕವೇ ನನ್ನ ಶಿರಸ್ಸು. ಆಕಾಶ ಮತ್ತು ದಶದಿಕ್ಕುಗಳೇ ನನ್ನ ಕಿವಿಗಳು. ನನ್ನ ಬೆವರಿನಿಂದಲೇ ಈ ಅಪಾರವಾದ ಜಲರಾಶಿಯು ಹುಟ್ಟಿರುವುದು. ಭೂಮ್ಯಾಕಾಶಗಳನ್ನು ಆವರಿಸಿ ನನ್ನ ಶರೀರವಿದೆ. ವಾಯುವೇ ನನ್ನ ಮನಸ್ಸು. ನಾನು ಬಹುದಕ್ಷಿಣಾಕವಾದ ನೂರಾರು ಯಜ್ಞಗಳನ್ನು ಮಾಡಿರುವೆನು.

**ಯಜನ್ತೇ ವೇದವಿದುಷೋ ಮಾಂ ದೇವಯಜನೇ ಸ್ಥಿತಮ್ ।**
**ಪೃಥಿವ್ಯಾಂ ಕ್ಷತ್ರಿಯೇನ್ದ್ರಾಶ್ಚ ಪಾರ್ಥಿವಾಃ ಸ್ವರ್ಗಕಾಂಕ್ಷಿಣಃ ॥೯॥**

**ಯಜನ್ತೇ ಮಾಂ ತಥಾ ವೈಶ್ಯಾಃ ಸ್ವರ್ಗಲೋಕಜಿಗೀಷಯಾ ।**
**ಚತುಃಸಮುದ್ರಪರ್ಯನ್ತಾಂ ಮೇರುಮನ್ದರಭೂಷಣಾಮ್ ।**
**ಶೇಷೋ ಭೂತ್ವಾಹಮೇವೈತಾಂ ಧಾರಯಾಮಿ ವಸುಂಧರಾಮ್ ॥೧೦॥**

ದೇವತೆಗಳು ಮಾಡುವ ಯಾಗಗಳಲ್ಲಿ ನಾನು ಉಪಸ್ಥಿತನಾಗಿರುವೆನು. ವೇದವಿದರಾದ ಯಾಜಕರು ಯಜ್ಞಗಳಲ್ಲಿ ನನ್ನ ಪ್ರೀತ್ಯರ್ಥವಾಗಿ ಆಹುತಿ ಗಳನ್ನು ಕೊಡುತ್ತಾರೆ. ಭೂಲೋಕದಲ್ಲಿಯೂ ಕ್ಷತ್ರಿಯರು ಮತ್ತು ವೈಶ್ಯರು ಸ್ವರ್ಗಪ್ರಾಪ್ತಿಗಾಗಿ ಯಜ್ಞಮಾಡಿ ತನ್ಮೂಲಕ ನನ್ನ ಅನುಗ್ರಹವನ್ನು ಪಡೆಯು ತ್ತಾರೆ. ಚತುಸ್ಸಾಗರಪರ್ಯಂತವಾದ, ಮೇರು-ಮಂದರಪರ್ವತಗಳಿಂದ ಶೋಭಾಯಮಾನವಾಗಿರುವ ಈ ಭೂಮಿಯನ್ನು ನಾನೇ ಶೇಷರೂಪವನ್ನು ಧರಿಸಿ ಹೊತ್ತುಕೊಂಡಿರುವೆನು.

**ವಾರಾಹಂ ರೂಪಮಾಸ್ಥಾಯ ಮಯೇಯಂ ಜಗತೀ ಪುರಾ ।**
**ಮಜ್ಜಮಾನಾ ಜಲೇ ವಿಪ್ರ ವೀರ್ಯೇಣಾಸೀತ್ಸಮುದ್ಧೃತಾ ॥೧೧॥**

ವಿಪ್ರನೇ! ಹಿಂದೊಮ್ಮೆ ನೀರಿನಲ್ಲಿ ಮುಳುಗಿಹೋಗುವುದರಲ್ಲಿದ್ದ ಈ ಭೂಮಿಯನ್ನು ವರಾಹರೂಪವನ್ನು ಧರಿಸಿ ನನ್ನ ವೀರ್ಯ-ಪರಾಕ್ರಮಗಳಿಂದ ಮೇಲಕ್ಕೆತ್ತಿದ್ದೆನು.

**ಅಗ್ನಿಶ್ಚ ವಡವಾವಕ್ತ್ರೋ ಭೂತ್ವಾಹಂ ದ್ವಿಜಸತ್ತಮ ।**
**ಪಿಬಾಮ್ಯಪಃ ಸದಾ ವಿದ್ವಂಸ್ತಾಶ್ಚೈವಂ ವಿಸೃಜಾಮ್ಯಹಮ್ ॥೧೨॥**

ನಾನು ಸಮುದ್ರದಲ್ಲಿ ವಡವಾಮುಖನಾದ ಅಗ್ನಿಯಾಗಿದ್ದುಕೊಂಡು ನೀರನ್ನು ಕುಡಿಯುತ್ತಿರುತ್ತೇನೆ ಮತ್ತು ಮತ್ತೊಂದು ಮುಖದಿಂದ ವಿಸರ್ಜಿಸುತ್ತಲೂ ಇರುತ್ತೇನೆ.

**ಬ್ರಹ್ಮಂ ವಕ್ತ್ರಂ ಭುಜೌ ಕ್ಷತ್ರಮೂರೂ ಮೇ ಸಂಸ್ಥಿತಾ ವಿಶಃ ।**
**ಪಾದೌ ಶೂದ್ರಾ ಭವನ್ತೀಮೇ ವಿಕ್ರಮೇಣ ಕ್ರಮೇಣ ಚ ॥೧೩॥**

ಬ್ರಹ್ಮನು ಅಥವಾ ಬ್ರಾಹ್ಮಣರೇ ನನ್ನ ಮುಖ. ಕ್ಷತ್ರಿಯರೇ ನನ್ನೆರಡು ಭುಜಗಳು. ವೈಶ್ಯರು ನನ್ನ ತೊಡೆಗಳ ರೂಪದಲ್ಲಿದ್ದಾರೆ. ಶೂದ್ರರು ನನ್ನ ಪಾದರೂಪರಾಗಿದ್ದಾರೆ. ನನ್ನ ಸಾಮರ್ಥ್ಯದಿಂದ ಇವರೆಲ್ಲರ ಪ್ರಾದುರ್ಭಾವವಾಗುತ್ತದೆ.

**(ಬ್ರಾಹ್ಮಣೋಽಸ್ಯ ಮುಖಮಾಸೀತ್ । ಬಾಹೂ ರಾಜನ್ಯಃ ಕೃತಃ ।**
**ಊರೂ ತದಸ್ಯ ಯದ್ವೈಶ್ಯಃ । ಪದ್ಭ್ಯಾ ಶೂದ್ರೋ ಅಜಾಯತ**

ಎಂಬ ಪುರುಷಸೂಕ್ತದ ಮಂತ್ರಾರ್ಥವನ್ನೇ ಈ ಶ್ಲೋಕದ ಮೂಲಕ ಬಾಲಮುಕುಂದನು ಪ್ರತಿಪಾದಿಸಿದ್ದಾನೆ.)

**ಋಗ್ವೇದಃ ಸಾಮವೇದಶ್ಚ ಯಜುರ್ವೇದೋಽಪ್ಯಥರ್ವಣಃ ।**
**ಮತ್ತಃ ಪ್ರಾದುರ್ಭವನ್ತ್ಯೇತೇ ಮಾಮೇವ ಪ್ರವಿಶನ್ತಿ ಚ ॥೧೪॥**

ಋಗ್ಯಜುಸ್ಸಾಮಾಥರ್ವಣವೇದಗಳೂ ಸಹ ನನ್ನಿಂದಲೇ ಹುಟ್ಟುವುವು ಮತ್ತು ಕಾಲಾಂತರದಲ್ಲಿ ನನ್ನನ್ನೇ ಸೇರುವುವು.

**ಯತಯಃ ಶಾನ್ತಿಪರಮಾ ಯತಾತ್ಮಾನೋ ಬುಭುತ್ಸವಃ ।**
**ಕಾಮಕ್ರೋಧದ್ವೇಷಮುಕ್ತಾ ನಿಃಸಙ್ಗಾ ವೀತಕಲ್ಮಷಾಃ ॥೧೫॥**

**ಸತ್ತ್ವಸ್ಥಾ ನಿರಹಙ್ಕಾರಾ ನಿತ್ಯಮಧ್ಯಾತ್ಮಕೋವಿದಾಃ ।**
**ಮಾಮೇವ ಸತತಂ ವಿಪ್ರಾಶ್ಚಿನ್ತಯನ್ತ ಉಪಾಸತೇ ॥೧೬॥**

ಸರ್ವದಾ ತಪಸ್ಸಿನಲ್ಲಿಯೇ ನಿರತರಾಗಿರುವ, ಶಾಂತಿಪ್ರಧಾನರಾದ, ಜಿತೇಂದ್ರಿಯರಾದ, ಬ್ರಹ್ಮಾನಂದಸುಖವನ್ನು ಅನುಭವಿಸಲು ಸರ್ವಕಾಲ

ದಲ್ಲಿಯೂ ಅಪೇಕ್ಷಿಸುವ, ಕಾಮ-ಕ್ರೋಧ-ದ್ವೇಷಾಸೂಯೆಗಳನ್ನು ದೂರ ಮಾಡಿರುವ, ಪ್ರಾಪಂಚಿಕಸೌಖ್ಯದಲ್ಲಿ ಸ್ವಲ್ಪವೂ ಲಕ್ಷ್ಯವಿಲ್ಲದಿರುವ, ನಿಷ್ಕಳಂಕ ರಾದ, ಧರ್ಮಸತ್ತ್ವರಾದ, ಅಹಂಕಾರರಹಿತರಾದ, ಯಾವಾಗಲೂ ಅಧ್ಯಾತ್ಮ ಚಿಂತನೆಯಲ್ಲಿಯೇ ನಿರತರಾಗಿರುವ ಬ್ರಾಹ್ಮಣರು ನನ್ನನ್ನೇ ಧ್ಯಾನಮಾಡುತ್ತಾ ಉಪಾಸನೆಮಾಡುತ್ತಾರೆ.

**ಅಹಂ ಸಂವರ್ತಕೋ ವಹ್ನಿರಹಂ ಸಂವರ್ತಕೋಽನಲಃ ।**
**ಅಹಂ ಸಂವರ್ತಕಃ ಸೂರ್ಯಸ್ತ್ವಹಂ ಸಂವರ್ತಕೋಽನಿಲಃ ॥೧೮॥**

ಮಹರ್ಷಿಯೇ! ಸಂವರ್ತಕವೆಂಬ (ಪ್ರಳಯಕಾಲದ) ಅಗ್ನಿಯೂ ಮತ್ತು ಸಂವರ್ತಕವೆಂಬ ಅನಲನೂ ನಾನೇ ಆಗಿರವೆನು. ಸಂವರ್ತಕವೆಂಬ ಸೂರ್ಯನೂ–ಸಂವರ್ತಕವೆಂಬ ವಾಯುವೂ ನಾನೇ ಆಗಿರುವೆನು.

**ತಾರಾರೂಪಾಣಿ ದೃಶ್ಯನ್ತೇ ಯಾನ್ಯೇತಾನಿ ನಭಸ್ತಲೇ ।**
**ಮಮ ವೈ ರೋಮಕೂಪಾಣಿ ವಿದ್ಧಿ ತ್ವಂ ದ್ವಿಜಸತ್ತಮ ॥೧೯॥**

ಬ್ರಾಹ್ಮಣೋತ್ತಮನೇ! ಆಕಾಶದಲ್ಲಿ ಕಾಣುವ ಕೋಟ್ಯನುಕೋಟಿ ನಕ್ಷತ್ರಗಳೇ ನನ್ನ ರೋಮಕೂಪಗಳೆಂದು ತಿಳಿ.

**ರತ್ನಾಕರಾಃ ಸಮುದ್ರಾಶ್ಚ ಸರ್ವ ಏವ ಚತುರ್ದಿಶಮ್ ।**
**ವಸನಂ ಶಯನಂ ಚೈವ ನಿಲಯಂ ಚೈವ ವಿದ್ಧಿ ಮೇ ।**
**ಮಯ್ಯೈವ ಸುವಿಭಕ್ತಾಸ್ತೇ ದೇವಕಾರ್ಯಾರ್ಥಸಿದ್ಧಯೇ ॥೨೦॥**

ರತ್ನರಾಶಿಗಳನ್ನು ಹೊಂದಿರುವ ಸಮುದ್ರಗಳೂ, ನಾಲ್ಕು ದಿಕ್ಕುಗಳೂ– ನನ್ನ ಬಟ್ಟೆ, ಹಾಸಿಗೆ ಮತ್ತು ನಾನು ವಾಸಿಸುವ ಸ್ಥಳಗಳೆಂದು ತಿಳಿ. ದೇವ ಕಾರ್ಯಸಿದ್ಧಿಗಾಗಿ ನಾನೇ ಇವುಗಳನ್ನು ವಿಭಜನೆಮಾಡಿರುವೆನು.

**ಕಾಮಂ ಕ್ರೋಧಂ ಚ ಹರ್ಷಂ ಚ ಭಯಂ ಮೋಹಂ ತಥೈವ ಚ ।**
**ಮಮೈವ ವಿದ್ಧಿ ರೋಮಾಣಿ ಸರ್ವಾಣ್ಯೇತಾನಿ ಸತ್ತಮ ॥೨೧॥**

ಕಾಮ, ಕ್ರೋಧ, ಹರ್ಷ, ಭಯ, ಮೋಹ–ಇವುಗಳೂ ನನ್ನಿಂದಲೇ ಪ್ರಾದುರ್ಭಾವಹೊಂದಿವೆ. ಇವೆಲ್ಲವೂ ನನ್ನ ರೋಮಗಳೆಂದು ತಿಳಿಯುವವ ನಾಗು.

**ಪ್ರಾಪ್ನುವನ್ತಿ ನರಾ ವಿಪ್ರ ಯತ್ಕೃತ್ವಾ ಕರ್ಮ ಶೋಭನಮ್ ।**
**ಸತ್ಯಂ ದಾನಂ ತಪಶ್ಚೋಗ್ರಮಹಿಂಸಾ ಚೈವ ಜನ್ತುಷು ॥೨೨॥**

ನನ್ನ ಈ ಅನಂತಾನಂತವಾದ ಶರೀರದಲ್ಲಿ ವಾಸಮಾಡುವ ಮನುಷ್ಯರು ಸತ್ಯ, ದಾನ, ತಪಸ್ಸು, ಅಹಿಂಸೆ–ಮುಂತಾದ ಸನ್ಮಾರ್ಗಾವಲಂಬಿಗಳಾಗಿದದು ಉತ್ತಮಲೋಕಗಳನ್ನು ಪಡೆಯುವ ವ್ಯವಸ್ಥೆಯನ್ನು ನಾನೇ ಮಾಡಿರುತ್ತೇನೆ.

**ಯದ್ವಿಧಾನೇನ ವಿಹಿತಾ ಮಮ ದೇಹವಿಹಾರಿಣಃ ।**
**ಮಯಾವಿಭೂತವಿಜ್ಞಾನಾ ವಿಚೇಷ್ಟನ್ತೇ ನ ಕಾಮತಃ ॥೨೩॥**

ಮಹರ್ಷಿಯೇ! ಮಾನವರು ಅನಂತಾನಂತವಾದ ಈ ನನ್ನ ಶರೀರ ದಲ್ಲಿ ನನ್ನ ಸಂಕಲ್ಪದಂತೆ ತಿರುಗಾಡುತ್ತಿರುತ್ತಾರೆ. ತಮ್ಮ ಇಚ್ಛಾನುಸಾರವಾಗಿ ಅವರು ತಿರುಗಾಡುವಂತಿಲ್ಲ. ನನ್ನ ಸಂಕಲ್ಪಾನುಸಾರವಾಗಿಯೇ ಅವರ ಐಹಿಕ-ಪಾರಲೌಕಿಕವ್ಯಾಪಾರಗಳು ನಡೆಯುತ್ತಿರುತ್ತವೆ.

**ಸಮ್ಯಗ್ವೇದಮಧೀಯಾನಾ ಯಜನ್ತೇ ವಿವಿಧೈರ್ಮಖೈಃ ।**
**ಶಾನ್ತಾತ್ಮಾನೋ ಜಿತಕ್ರೋಧಾಃ ಪ್ರಾಪ್ನುವನ್ತಿ ದ್ವಿಜಾತಯಃ ॥೨೪॥**

ಸಾಂಗೋಪಾಂಗವಾಗಿ ವೇದಾಧ್ಯಯನವನ್ನು ಮಾಡಿ ಅನೇಕಾನೇಕ ಯಜ್ಞ-ಯಾಗಾದಿಗಳ ಮೂಲಕ ನನ್ನನ್ನು ಆರಾಧಿಸುವ, ಶಾಂತಾತ್ಮರಾದ ಕೋಪವನ್ನು ಜಯಿಸಿರುವ ದ್ವಿಜರಿಗೆ ಮಾತ್ರವೇ ನನ್ನ ಇರುವಿಕೆಯೂ– ನನ್ನನ್ನು ಪಡೆಯುವ ಮಾರ್ಗವೂ ತಿಳಿದಿರುತ್ತದೆ. ಇವರೇ ನನ್ನ ಪರಮಪದವನ್ನು ಸೇರಬಲ್ಲರು.

**ಪ್ರಾಪ್ತುಂ ನ ಶಕ್ಯೋ ಯೋ ವಿದ್ವನ್ನರೈರ್ದುಷ್ಕೃತಕರ್ಮಭಿಃ ।**
**ಲೋಭಾಭಿಭೂತೈಃಕೃಪಣೈರನಾರ್ಯೈರಕೃತಾತ್ಮಭಿಃ ॥೨೫॥**

ದುಷ್ಕಾರ್ಯಗಳಲ್ಲಿ ಪ್ರವೃತ್ತರಾದ, ವಿದ್ಯಾಹೀನರಾದ, ಕೃಪಣರಾದ ಮತ್ತು ಲೋಭಿಗಳಾದ ಅನಾರ್ಯರಿಗೆ ನಾನು ಸಿಕ್ಕತಕ್ಕವನಲ್ಲ.

**ತಂ ಮಾಂ ಮಹಾಫಲಂ ವಿದ್ಧಿ ನರಾಣಾಂ ಭಾವಿತಾತ್ಮನಾಮ್ ।**
**ಸುದುಷ್ಪ್ರಾಪಂ ವಿಮೂಢಾನಾಂ ಮಾರ್ಗಂ ಯೋಗೈರ್ನಿಷೇವಿತಮ್ ॥**

ಯೋಗಮಾರ್ಗಾನುಸಾರಿಗಳಾದ ಮಹಾತ್ಮರುಗಳಿಂದ ಪಡೆಯಬಹು

ದಾದ ಮತ್ತು ಮೂಢಾತ್ಮರಿಂದ ಪಡೆಯಲಾಗದ ಈ ಫಲವನ್ನು ಮಹಾ ಫಲವೆಂದು ಭಾವಿಸು.

**ಯದಾ ಯದಾ ಚ ಧರ್ಮಸ್ಯ ಗ್ಲಾನಿರ್ಭವತಿ ಸತ್ತಮ ।**
**ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥೨೭॥**

ಮುನಿಶ್ರೇಷ್ಠನೇ! ಯಾವ ಯಾವ ಕಾಲಗಳಲ್ಲಿ ಧರ್ಮಕ್ಕೆ ನಾಶ ವುಂಟಾಗಿ ಅಧರ್ಮದ ಅಭ್ಯುದಯವಾಗುತ್ತದೆಯೋ–ಆಯಾ ಸಮಯ ಗಳಲ್ಲಿ ಅಧರ್ಮವನ್ನು ನಿರ್ಮೂಲಗೊಳಿಸಲು ಮತ್ತು ಧರ್ಮಸಂಸ್ಥಾಪನೆ ಯನ್ನು ಮಾಡಲು ನಾನು ನಾನಾವಿಧವಾದ ರೂಪಗಳನ್ನು ಧರಿಸಿ ಪೃಥ್ವಿಯಲ್ಲಿ ಅವತರಿಸುತ್ತೇನೆ.

**ದೈತ್ಯಾ ಹಿಂಸಾನುರಕ್ತಾಶ್ಚ ಅವಧ್ಯಾಃ ಸುರಸತ್ತಮೈಃ ।**
**ರಾಕ್ಷಸಾಶ್ಚಾಪಿ ಲೋಕೇಽಸ್ಮಿನ್ಯದೋತ್ಪತ್ಸ್ಯನ್ತಿ ದಾರುಣಾಃ ॥೨೮॥**

**ತದಾಹಂ ಸಮ್ಪ್ರಸೂಯಾಮಿ ಗೃಹೇಷು ಶುಭಕರ್ಮಣಾಮ್ ।**
**ಪ್ರವಿಷ್ಟೋ ಮಾನುಷಂ ದೇಹಂ ಸರ್ವಂ ಪ್ರಶಮಯಾಮ್ಯಹಮ್ ॥೨೯॥**

ಸತ್ಪುರುಷರಿಗೆ ಸದಾ ಹಿಂಸೆಯನ್ನು ಕೊಡುವ, ದೇವತೆಗಳಿಂದಲೂ ಸಂಹರಿಸಲು ಸಾಧ್ಯರಾಗದ, ದಾರುಣರಾದ, ದುಷ್ಟರಾದ ರಾಕ್ಷಸರ ಹಾವ ಳಿಯು ಈ ಪೃಥ್ವಿಯಲ್ಲಿ ಎಂದು ಹೆಚ್ಚುವುದೋ–ಅಂತಹ ಸಮಯದಲ್ಲಿ ನಾನು ಸದಾಚಾರಸಂಪನ್ನರಾದವರ ಮನೆಗಳಲ್ಲಿ ಮನುಷ್ಯನಾಗಿ ಅವತರಿಸಿ ಆ ರಾಕ್ಷಸರನ್ನು ನಿರ್ಮೂಲಮಾಡುತ್ತೇನೆ.

**ಸೃಷ್ಟ್ವಾ ದೇವಮನುಷ್ಯಾಂಸ್ತು ಗನ್ಧರ್ವೋರಗರಾಕ್ಷಸಾನ್ ।**
**ಸ್ಥಾವರಾಣಿ ಚ ಭೂತಾನಿ ಸಂಹರಾಮ್ಯಾತ್ಮಮಾಯಯಾ ॥೩೦॥**

ಮಹರ್ಷಿಯೇ! ನನ್ನ ಮಾಯೆಯಿಂದ ದೇವ-ದಾನವ-ಗಂಧರ್ವೋರಗ ರಾಕ್ಷಸರನ್ನೂ, ಸ್ಥಾವರ-ಜಂಗಮಗಳನ್ನೂ ಸೃಷ್ಟಿಮಾಡಿ–ಪುನಃ ನಾನು ಪ್ರಳಯಕಾಲದಲ್ಲಿ ನನ್ನ ಅದೇ ಮಾಯೆಯಿಂದ ಸಂಹಾರವನ್ನೂ ಮಾಡುತ್ತೇನೆ.

**ಕರ್ಮಕಾಲೇ ಪುನರ್ದೇಹಮನುವಿಚಿನ್ತ್ಯ ಸೃಜಾಮ್ಯಹಮ್ ।**
**ಆವಿಶ್ಯ ಮಾನುಷಂ ದೇಹಂ ಮರ್ಯಾದಾಬನ್ಧಕಾರಣಾತ್ ॥೩೧॥**

ಪ್ರಪಂಚದಲ್ಲಿ ಶಾಂತಿಯನ್ನೂ, ಧರ್ಮವನ್ನೂ ಸ್ಥಾಪಿಸುವ ಸಲುವಾಗಿ

ನಾನು ಆಗಿಂದಾಗ್ಗೆ ಮನುಷ್ಯನಾಗಿ ಅವತರಿಸುತ್ತೇನೆ. ಪ್ರಪಂಚದ ಪ್ರಳಯ ಕಾಲದಲ್ಲಿ ಅಂಚಿತ್ಯವಾದ ವಿರಾಡ್ರೂಪವನ್ನು ಧರಿಸುತ್ತೇನೆ.

**ಶ್ವೇತಃ ಕೃತಯುಗೇ ವರ್ಣಃ ಪೀತಸ್ತ್ರೇತಾಯುಗೇ ಮಮ ।**
**ರಕ್ತೋ ದ್ವಾಪರಮಾಸಾದ್ಯ ಕೃಷ್ಣಃ ಕಲಿಯುಗೇ ತಥಾ ॥೩೨॥**

ಮಾರ್ಕಂಡೇಯಮುನಿಯೇ! ಕೃತಯುಗದಲ್ಲಿ ನನ್ನ ಬಣ್ಣವು ಬಿಳಿಯ ದಾಗಿರುವುದು. ತ್ರೇತಾಯುಗದಲ್ಲಿ ನನ್ನ ಶರೀರವು ಹಳದಿಯ ಬಣ್ಣಕ್ಕೆ ತಿರುಗುವುದು. ದ್ವಾಪರದಲ್ಲಿ ನಾನು ಕೆಂಪುಛಾಯೆಯಿಂದ ಕೂಡಿರುವೆನು. ಕಲಿಯುಗದಲ್ಲಿ ನನ್ನ ಬಣ್ಣವು ಕಪ್ಪಾಗಿರುವುದು.

**ತ್ರಯೋ ಭಾಗಾ ಹ್ಯಧರ್ಮಸ್ಯ ತಸ್ಮಿನ್ಕಾಲೇ ಭವನ್ತಿ ಚ ।**
**ಅನ್ತಕಾಲೇ ಚ ಸಮ್ಪ್ರಾಪ್ತೇ ಕಾಲೋ ಭೂತ್ವಾತಿದಾರುಣಃ ।**
**ತ್ರೈಲೋಕ್ಯಂ ನಾಶಯಾಮ್ಯೇಕಃ ಕೃತ್ಸ್ನಂ ಸ್ಥಾವರಜಙ್ಗಮಮ್ ॥**

ನಾಲ್ಕು ಪಾದಗಳಿರುವ ಧರ್ಮದಲ್ಲಿ ಒಂದು ಪಾದ (ಕಾಲುಭಾಗ) ಧರ್ಮವು ಮಾತ್ರವೇ ಕಲಿಯುಗದಲ್ಲಿ ಉಳಿದಿರುವುದು. ಯುಗಾಂತ್ಯವು ಪ್ರಾಪ್ತವಾದೊಡನೆಯೇ ನಾನು ಘೋರಮೃತ್ಯುವಿನ ರೂಪವನ್ನು ಧರಿಸಿದವ ನಾಗಿ ಸ್ಥಾವರ-ಜಂಗಮಗಳಿಂದ ಕೂಡಿರುವ ಈ ಮೂರು ಲೋಕಗಳನ್ನೂ ವಿಧ್ವಂಸಗೊಳಿಸುವೆನು.

**ಅಹಂ ತ್ರಿವರ್ತ್ಮಾ ವಿಶ್ವಾತ್ಮಾ ಸರ್ವಲೋಕಸುಖಾವಹಃ ।**
**ಆವಿರ್ಭೂಃ ಸರ್ವಗೋಽನನ್ತೋ ಹೃಷಿಕೇಶ ಉರುಕ್ರಮಃ ॥೩೪॥**

ಮೂರೇ ಮೂರು ಹೆಜ್ಜೆಗಳಿಂದ ನಾನು ಸ್ವರ್ಗ-ಮರ್ತ್ಯ-ಪಾತಾಳ ಗಳನ್ನು ಆವರಿಸಿಬಿಡುವೆನು. ಆದುದರಿಂದ ನನ್ನನ್ನು 'ತ್ರಿವರ್ತ್ಮಾ' ಎಂದೂ ಹೇಳುತ್ತಾರೆ. ನಾನು ಈ ವಿಶ್ವಕ್ಕೆಲ್ಲಾ ಆತ್ಮರೂಪನಾಗಿರುತ್ತೇನೆ. ಸರ್ವಲೋಕಕ್ಕೂ ಸುಖದಾಯಕನಾಗಿರುತ್ತೇನೆ. ಈ ಪ್ರಪಂಚವನ್ನೆಲ್ಲಾ ಆವರಿಸಿದ್ದೇನೆ. ನನಗೆ ಎಲ್ಲೆಯೆಂಬುದೇ ಇಲ್ಲ. ಎಲ್ಲೆಡೆಗಳಲ್ಲಿಯೂ ನಾನೇ ಇದ್ದೇನೆ. ಇದರಿಂದಲೇ ನಾನು ಅಂತ್ಯವಿಲ್ಲದವನೆಂದೂ ಯೋಗಿ ಗಳಿಂದ ಕರೆಯಲ್ಪಟ್ಟಿದ್ದೇನೆ. ನಾನು ಬುದ್ಧಿಗೂ ಒಡೆಯನಾಗಿರುವೆನು.

ನಾನು ಅನಂತನಾಗಿರುವಂತೆಯೇ ಅತಿಹ್ರಸ್ವನಾದ ವಾಮನನಾಗಿಯೂ ಇರುವೆನು.

**ಕಾಲಚಕ್ರಂ ನಯಾಮ್ಯೇಕೋ ಬ್ರಹ್ಮನ್ನಹಮರೂಪಕಮ್ ।**
**ಶಮನಂ ಸರ್ವಭೂತಾನಾಂ ಸರ್ವಲೋಕಕೃತೋದ್ಯಮಮ್ ।**
**ಏವಂ ಪ್ರಣಿಹಿತಃ ಸಮ್ಯಙ್ಮಮಾತ್ಮಾ ಮುನಿಸತ್ತಮ ॥೩೫॥**

ಋಷಿಶ್ರೇಷ್ಠನೇ! ರೂಪರಹಿತವಾದ ಕಾಲಚಕ್ರವನ್ನು ನಾನೊಬ್ಬನೇ ಸರ್ವಕಾಲಗಳಲ್ಲಿಯೂ ತಿರುಗಿಸುತ್ತಿರುತ್ತೇನೆ. ಸಕಲಪ್ರಾಣಿಗಳನ್ನೂ ಯುಗಾಂತ್ಯದಲ್ಲಿ ವಿನಾಶಗೊಳಿಸುವುದು–ಪುನಃ ಸರ್ವಪ್ರಾಣಿಗಳನ್ನೂ ಸೃಷ್ಟಿಸುವುದು–ಇದೇ ನನ್ನ ಕಾರ್ಯವಾಗಿದೆ. ಸರ್ವಪ್ರಾಣಿಗಳ ಹೃದಯಗಳಲ್ಲಿಯೂ ನಾನು ಆತ್ಮರೂಪವಾಗಿ ಕುಳಿತೇ ಇದ್ದೇನೆ.

**ಸರ್ವಭೂತೇಷು ವಿಪ್ರೇನ್ದ್ರ ನ ಚ ಮಾಂ ವೇತ್ತಿ ಕಶ್ಚನ ।**
**ಸರ್ವಲೋಕೇ ಚ ಮಾಂ ಭಕ್ತಾಃ ಪೂಜಯನ್ತಿ ಚ ಸರ್ವಶಃ ॥೩೬॥**

ನಾನಿಷ್ಟೊಂದು ಕಾರ್ಯಮಾಡುತ್ತಿದ್ದರೂ, ಪ್ರಾಣಿಗಳ ಹೃದಯದಲ್ಲಿಯೇ ಉಪಸ್ಥಿತನಾಗಿದ್ದರೂ–ನಾನಾರೆಂಬುದು ಯಾರಿಗೂ ತಿಳಿಯದಾಗಿದೆ. ಎಲ್ಲ ಲೋಕಗಳಲ್ಲಿಯೂ ಭಕ್ತರು ನನ್ನ ಅನೇಕವಿಧವಾದ ರೂಪಗಳನ್ನಿಟ್ಟುಕೊಂಡು ಪೂಜಿಸುತ್ತಾರೆ.

**ಯಚ್ಚ ಕಿಂಚಿತ್ತ್ವಯಾ ಪ್ರಾಪ್ತಂ ಮಯಿ ಕ್ಲೇಶಾತ್ಮಕಂ ದ್ವಿಜ ।**
**ಸುಖೋದಯಾಯ ತತ್ಸರ್ವಂ ಶ್ರೇಯಸೇ ಚ ತವಾನಘ ॥೩೭॥**

ವಿಪ್ರೇಂದ್ರನೇ! ನನ್ನ ಹೊಟ್ಟೆಯಲ್ಲಿದ್ದಾಗ ನೀನು ಏನಾದರೂ ಅಲ್ಪ- ಸ್ವಲ್ಪ ಕ್ಲೇಶವನ್ನನುಭವಿಸಿದ್ದರೆ-ಅದು ನಿನ್ನ ಸುಖಕ್ಕಾಗಿ ಮತ್ತು ಶ್ರೇಯಸ್ಸಿಗಾಗಿ–ಎಂದು ತಿಳಿ. ಅದರಿಂದ ನಿನಗೆ ಉತ್ತಮಸುಖವೂ ಮತ್ತು ಶ್ರೇಯಸ್ಸೂ ಲಭ್ಯವಾಗುತ್ತದೆ.

**ಯಚ್ಚ ಕಿಂಚಿತ್ತ್ವಯಾ ಲೋಕೇ ದೃಷ್ಟಂ ಸ್ಥಾವರಜಙ್ಗಮಮ್ ॥೩೮॥**

**ವಿಹಿತಃ ಸರ್ವಥೈವಾಸೌ ಮಮಾತ್ಮಾ ಭೂತಭಾವನಃ ।**
**ಅರ್ಧಂ ಮಮ ಶರೀರಸ್ಯ ಸರ್ವಲೋಕಪಿತಾಮಹಃ ॥೩೯॥**

ಲೋಕಪ್ರಳಯವಾಗುವ ಮೊದಲು ನೀನು ಈ ಲೋಕಗಳಲ್ಲಿ ಯಾವ ಯಾವ ವಸ್ತುಗಳನ್ನು ನೋಡಿದೆಯೋ–ಅವುಗಳೆಲ್ಲವೂ ಈಗ ಬೀಜರೂಪ ದಲ್ಲಿ ನನ್ನ ಹೊಟ್ಟೆಯೊಳಗೆ ಅಡಗಿವೆ. ಚತುರ್ಮುಖನು ನನ್ನ ಶರೀರದ ಅರ್ಧಭಾಗದಿಂದ ಹುಟ್ಟಿ ಬೀಜರೂಪವಾಗಿ ನನ್ನ ಹೊಟ್ಟೆಯಲ್ಲಿರುವ ಸ್ಥಾವರ-ಜಂಗಮಗಳನ್ನು ಪುನಃ ಸೃಷ್ಟಿಸುತ್ತಾನೆ.

**ಅಹಂ ನಾರಾಯಣೋ ನಾಮ ಶಙ್ಖಚಕ್ರಗದಾಧರಃ ।**
**ಯಾವದ್ಯುಗಾನಾಂ ವಿಪ್ರರ್ಷೇ ಸಹಸ್ರಪರಿವರ್ತನಾತ್ ॥೪೦॥**

**ತಾವತ್ಸ್ವಪಿಮಿ ವಿಶ್ವಾತ್ಮಾ ಸರ್ವಭೂತಾನಿ ಮೋಹಯನ್ ।**
**ಏವಂ ಸರ್ವಮಹಂ ಕಾಲಮಿಹಾಸ್ಸೇ ಮುನಿಸತ್ತಮ ।**
**ಅಶಿಶುಃ ಶಿಶುರೂಪೇಣ ಯಾವದ್ಬ್ರಹ್ಮಾ ನ ಬುಧ್ಯತೇ ॥೪೧॥**

ಶಂಖ-ಚಕ್ರ-ಗದಾಧಾರಿಯಾದ, ವಿಶ್ವಾತ್ಮನಾದ ನಾರಾಯಣನೇ ನಾನು. ಬ್ರಹ್ಮರ್ಷಿಯೇ! ಸಹಸ್ರಚತುರ್ಯುಗಗಳ ಅಂತ್ಯದಲ್ಲಿ ಮಹಾ ಪ್ರಳಯವಾಗುವವರೆಗೂ ಸರ್ವಪ್ರಾಣಿಗಳನ್ನೂ ಮಹಾಮಾಯೆಯಿಂದ ಮೋಹಗೊಳಿಸುತ್ತಾ ನೀರಿನಲ್ಲಿ ಮಲಗಿರುತ್ತೇನೆ. ನಾನು ಶಿಶುವಲ್ಲದಿದ್ದರೂ ಬ್ರಹ್ಮನು ಎಚ್ಚರಗೊಳ್ಳುವವರೆಗೂ ಶಿಶುರೂಪದಲ್ಲಿಯೇ ಇಲ್ಲಿರುವೆನು.

**ಮಯಾ ಚ ದತ್ತೋ ವಿಪ್ರಾಗ್ರ್ಯ ವರಸ್ತೇ ಬ್ರಹ್ಮರೂಪಿಣಾ ।**
**ಅಸಕೃತ್ಪರಿತುಷ್ಟೇನ ವಿಪ್ರರ್ಷಿಗಣಪೂಜಿತ ॥೪೨॥**

ಬ್ರಹ್ಮರ್ಷಿಗಳಿಂದಲೂ ವಿಪ್ರರ್ಷಿಗಳಿಂದಲೂ ಪೂಜಿತನಾದ ಬ್ರಾಹ್ಮಣ ಶ್ರೇಷ್ಠನೇ! ನಿನ್ನ ವಿಷಯದಲ್ಲಿ ಸಂತುಷ್ಟನಾದ ನಾನೇ ಬ್ರಹ್ಮನ ರೂಪದಿಂದ ನಿನಗೆ ಅನೇಕವರಗಳನ್ನು ಅನುಗ್ರಹಿಸಿದ್ದೇನೆ.

ಪ್ರಪಂಚದ ಸ್ಥಾವರ-ಜಂಗಮಗಳು ನಷ್ಟವಾಗಿ ಹೋದುದನ್ನೂ, ಅನಂತರ ಪ್ರಾದುರ್ಭೂತವಾದ ಈ ಅಪಾರಜಲರಾಶಿಯನ್ನೂ ಕಂಡು ಕಳವಳ ಪಡುತ್ತಿದ್ದೆಯಲ್ಲವೇ? ಇದನ್ನು ತಿಳಿದ ನಾನು ನನ್ನ ಹೊಟ್ಟೆಯೊಳಗೆ ಪ್ರವೇಶಿ ಸಲು ಹೇಳಿ ಅಲ್ಲಿದ್ದ ಸಕಲಲೋಕಗಳ ಸ್ಥಾವರ-ಜಂಗಮಗಳನ್ನೂ ನಿನಗೆ ತೋರಿಸಿದೆನು.

**ದೃಷ್ಟ್ವಾ ಲೋಕಂ ಸಮಸ್ತಂ ಚ ವಿಸ್ಮಿತೋ ನಾವಬುಧ್ಯಸೇ ।**
**ತತೋಽಸಿ ವಕ್ತ್ರಾದ್ವಿಪ್ರರ್ಷೇ ದ್ರುತಂ ನಿಃಸಾರಿತೋ ಮಯಾ ॥೪೫॥**

ನನ್ನ ಹೊಟ್ಟೆಯೊಳಗೆ ಯಥಾಪೂರ್ವವಾಗಿದ್ದ ಸ್ಥಾವರ-ಜಂಗಮಗಳೆಲ್ಲವನ್ನೂ ನೀನು ನೋಡಿ ಬಹಳವಾಗಿ ವಿಸ್ಮಿತನಾಗಿದ್ದೆ. ಎಷ್ಟು ದೂರಪ್ರಯಾಣಮಾಡಿದರೂ ನಿನಗೆ ಉದರದ ಅಂತವೇ ತಿಳಿಯದಾಯಿತು. ಮುಂದೇನು ಮಾಡಬೇಕೆಂಬುದೂ ನಿನಗೆ ತೋರಲಿಲ್ಲ. ಆ ಸಮಯದಲ್ಲಿ ಪುನಃ ನಾನು ನಿನ್ನನ್ನು ನನ್ನ ಮುಖದ ಮೂಲಕವಾಗಿ ಹೊರಗೆ ತಂದು ಬಿಟ್ಟೆನು.

**ಆಖ್ಯಾತಸ್ತೇ ಮಯಾ ಚಾತ್ಮಾ ದುರ್ಜ್ಞೇಯೋ ಹಿ ಸುರಾಸುರೈಃ ॥**

**ಯಾವತ್ಸ ಭಗವಾನ್ಬ್ರಹ್ಮಾ ನ ಬುಧ್ಯೇತ ಮಹಾತಪಾಃ ।**
**ತಾವತ್ತ್ವಮಿಹ ವಿಪ್ರರ್ಷೇ ವಿಸ್ರಬ್ಧಶ್ಚರ ವೈ ಸುಖಮ್ ॥೪೬॥**

ಈಗ ನಾನು ನಿನ್ನ ಆಶಯದಂತೆ ಸುರಾಸುರರಿಂದಲೂ ತಿಳಿಯಲು ಅಸಾಧ್ಯವಾದ ನನ್ನ ಆತ್ಮಸ್ವರೂಪವನ್ನು ನಿನಗೆ ವಿವರವಾಗಿ ಹೇಳಿರುವೆನು. ಎಂದಿನವರೆಗೆ ಮಹಾತಪಸ್ವಿಯಾದ ಬ್ರಹ್ಮನು ನನ್ನ ನಾಭಿಕಮಲದಿಂದ ಉದಯಿಸುವುದಿಲ್ಲವೋ-ಅಂದಿನವರೆಗೂ (ನನ್ನ ನಾಭಿಕಮಲದಿಂದ ಬ್ರಹ್ಮನ ಪ್ರಾದುರ್ಭಾವವಾಗುವವರೆಗೂ) ನೀನು ಇಲ್ಲಿಯೇ ಸುಖವಾಗಿರಬಹುದು.

**ತತೋ ವಿಬುದ್ಧೇ ತಸ್ಮಿಂಸ್ತು ಸರ್ವಲೋಕಪಿತಾಮಹೇ ।**
**ಏಕೀಭೂತೋ ಹಿ ಸ್ರಕ್ಷ್ಯಾಮಿ ಶರೀರಾಣಿ ದ್ವಿಜೋತ್ತಮ ॥೪೭॥**

ಬ್ರಾಹ್ಮಣೋತ್ತಮನೇ! ಸರ್ವಲೋಕಪಿತಾಮಹನಾದ ಬ್ರಹ್ಮನು ಹುಟ್ಟಿದೊಡನೆಯೇ ನಾನು ಅವನೊಡನೆ ಏಕೀಭೂತನಾಗಿ ಪುನಃ ಶರೀರಗಳನ್ನು ಸೃಷ್ಟಿಮಾಡುವೆನು.

**ಆಕಾಶಂ ಪೃಥಿವೀಂ ಜ್ಯೋತಿರ್ವಾಯುಂ ಸಲಿಲಮೇವ ಚ ।**
**ಲೋಕೇ ಯಚ್ಚ ಭವೇಚ್ಛೇಷಮಿಹ ಸ್ಥಾವರಜಙ್ಗಮಮ್ ॥೪೮॥**

ಜಲ, ಪೃಥಿವೀ, ತೇಜಸ್ಸು, ವಾಯು, ಆಕಾಶಗಳೆಂಬ ಪಂಚಭೂತಗಳನ್ನೂ ಸೃಷ್ಟಿಸುತ್ತೇನೆ. ಪ್ರಪಂಚದಲ್ಲಿ ಹಿಂದೆ ಯಾವ ಸ್ಥಾವರ-ಜಂಗಮ

ಗಳಿದ್ದುವೋ ಅವುಗಳೆಲ್ಲವನ್ನೂ ಯಥಾಪೂರ್ವಕವಾಗಿಯೇ ಸೃಷ್ಟಿಮಾಡುತ್ತೇನೆ."

ಧರ್ಮರಾಜ! ಆ ಶಿಶುವು ನನ್ನೊಡನೆ ಹೀಗೆ ಹೇಳಿ ಮರುಕ್ಷಣದಲ್ಲಿಯೇ ನನ್ನ ದೃಷ್ಟಿಗೆ ಅಗೋಚರವಾಯಿತು.

ಸ್ವಲ್ಪಕಾಲ ಕಳೆದನಂತರದಲ್ಲಿ ಆ ಲೋಕೋತ್ತರವಾದ ಶಿಶುವು ಹೇಳಿದಂತೆಯೇ ಬ್ರಹ್ಮನು ಉದಯಿಸಿ ಚಿತ್ರ-ವಿಚಿತ್ರವಾದ ಈ ಸೃಷ್ಟಿಯನ್ನು ಮಾಡಲು ಉಪಕ್ರಮಿಸಿದನು. ಸರ್ವಧರ್ಮಗಳನ್ನೂ ತಿಳಿದಿರುವವರಲ್ಲಿ ಶ್ರೇಷ್ಠನಾದ ಯುಧಿಷ್ಠಿರನೇ! ಯುಗಾಂತ್ಯದಲ್ಲಿ ನಡೆದ ಆ ಪರಮಾದ್ಭುತವಾದ ವಿಷಯವನ್ನು ನಾನು ಪ್ರತ್ಯಕ್ಷವಾಗಿ ಕಂಡೆನು.

**ಯಃ ಸ ದೇವೋ ಮಯಾ ದೃಷ್ಟಃ ಪುರಾ ಪದ್ಮಾಯತೇಕ್ಷಣಃ ।**
**ಸ ಏಷ ಪುರುಷವ್ಯಾಘ್ರ ಸಮ್ಬನ್ಧೀ ತೇ ಜನಾರ್ದನಃ ॥೫೨॥**

ಪುರುಷವ್ಯಾಘ್ರನೇ! ಅಂದು ನಾನು ನೋಡಿದ್ದ, ಪದ್ಮದಂತೆ ವಿಶಾಲವಾದ ಕಣ್ಣುಗಳಿಂದ ಕೂಡಿದ್ದ ಆ ದೇವದೇವನೇ–ನಿನ್ನ ಸಂಬಂಧಿಯಾಗಿ ನಿನ್ನ ಸಮೀಪದಲ್ಲಿ ಉಪಸ್ಥಿತನಾಗಿರುವ ಪರಮಪುರುಷನಾದ ಈ ಜನಾರ್ದನನು.

**ಅಸ್ಯೈವ ವರದಾನಾದ್ಧಿ ಸ್ಮೃತಿರ್ನ ಪ್ರಜಹಾತಿ ಮಾಮ್ ।**
**ದೀರ್ಘಮಾಯುಶ್ಚ ಕೌನ್ತೇಯ ಸ್ವಚ್ಛನ್ದಮರಣಂ ಮಮ ॥೫೩॥**

ಅಂದು ಈ ಮಹಾನುಭಾವನು ಕೊಟ್ಟಿದ್ದ ವರದಾನದಿಂದಲೇ ಅಂದು ನಡೆದುದೆಲ್ಲವೂ (ಕೈಯ್ಯಲ್ಲಿರುವ ಎಲಚಿಹಣ್ಣಿನಂತೆ) ನನ್ನ ಸ್ಮೃತಿಪಥದಲ್ಲಿ ಯಥಾವತ್ತಾಗಿ ಉಳಿದಿವೆ. ನನಗೆ ದೀರ್ಘಾಯುಷ್ಯವೂ ಮತ್ತು ಇಚ್ಛಾಮರಣವೂ ಈ ಮಹಾನುಭಾವನ ವರದಾನದಿಂದಲೇ ಲಭ್ಯವಾಗಿರುವುದು.

**ಸ ಏಷ ಕೃಷ್ಣೋ ವಾರ್ಷ್ಣೇಯಃ ಪುರಾಣಪುರುಷೋ ವಿಭುಃ ।**
**ಆಸ್ತೇ ಹರಿರಚಿನ್ತ್ಯಾತ್ಮಾ ಕ್ರೀಡನ್ನಿವ ಮಹಾಭುಜಃ ॥೫೪॥**

ವೃಷ್ಣಿವಂಶದಲ್ಲಿ ಹುಟ್ಟಿರುವ ಈ ಕೃಷ್ಣನೇ ಅಂದು ನನಗೆ ಸಂದರ್ಶನ

ವನ್ನಿತ್ತ ವಿಭುವಾದ ಶ್ರೀಮನ್ನಾರಾಯಣನು. ಅಚಿಂತ್ಯಾತ್ಮನಾದ ಶ್ರೀಹರಿಯು ಇಂದು ಧರ್ಮೋದ್ಧಾರಕ್ಕಾಗಿ ಅವತರಿಸಿ ಸಾಮಾನ್ಯಮಾನವನಂತೆಯೇ ನಮ್ಮೊಂದಿಗೆ ಕ್ರೀಡಿಸುತ್ತಿರುವನೋ ಎಂಬಂತಿದ್ದಾನೆ.

**ಏಷ ಧಾತಾ ವಿಧಾತ ಚ ಸಂಹರ್ತಾ ಚೈವ ಶಾಶ್ವತಃ ।**
**ಶ್ರೀವತ್ಸವಕ್ಷಾ ಗೋವಿನ್ದಃ ಪ್ರಜಾಪತಿಪತಿಃ ಪ್ರಭುಃ ॥೫೫॥**

ಇವನೇ ಧಾತೃ ; ಇವನೇ ವಿಧಾತೃ ; ವಿಶ್ವದ ಸೃಷ್ಟಿಕರ್ತನೂ ಇವನೇ. ಸಂಹಾರಕನೂ ಇವನೇ ಆಗಿರುವನು. ಇವನು ಶಾಶ್ವತನು. ಇವನಿಗೆ ಜರಾ-ಮರಣಗಳಿಲ್ಲ. ಇವನ ವಕ್ಷಸ್ಥಳದಲ್ಲಿ ಶ್ರೀವತ್ಸಲಾಂಛನವಿದೆ. ಇವನೇ ಗೋವಿಂದನು. ಪ್ರಜಾಪತಿಬ್ರಹ್ಮನಿಗೂ ಒಡೆಯನು ಮತ್ತು ಸಕಲಲೋಕಗಳಿಗೂ ಪ್ರಭುವು.

**ದೃಷ್ಟ್ವೇಮಂ ವೃಷ್ಣಿಪ್ರವರಂ ಸ್ಮೃತಿರ್ಮಾಮಿಯಮಾಗತಾ ।**
**ಆದಿದೇವಮಯಂ ಜಿಷ್ಣುಂ ಪುರುಷಂ ಪೀತವಾಸಸಮ್ ॥೫೬॥**

ವೃಷ್ಣಿಕುಲೋತ್ಪನ್ನನಾದ, ಪೀತಾಂಬರಧಾರಿಯಾಗಿ ಇಲ್ಲಿ ಕುಳಿತಿರುವ, ಆದಿದೇವನಾದ ಈ ಜಿಷ್ಣುವನ್ನು ಕಂಡೊಡನೆಯೇ ಅಂದಿನ ವಿಷಯಗಳೆ ಲ್ಲವೂ ತಾನೇ ತಾನಾಗಿ ನನ್ನ ಸ್ಮೃತಿಪಥದಲ್ಲಿ ಸಮುದ್ರದ ಅಲೆಗಳಂತೆ ಒಂದರ ಮೇಲೊಂದು ಎದ್ದು ಕಾಣುತ್ತಿವೆ.

**ಸರ್ವೇಷಾಮೇವ ಭೂತಾನಾಂ ಪಿತಾ ಮಾತಾ ಚ ಮಾಧವಃ ।**
**ಗಚ್ಛಧ್ವಮೇನಂ ಶರಣ್ಯಂ ಶರಣಂ ಕೌರವರ್ಷಭಾಃ ॥೫೭॥**

ಈ ಮಾಧವನು ಪ್ರಪಂಚದಲ್ಲಿರುವ ಸಕಲಪ್ರಾಣಿಗಳಿಗೂ ತಂದೆ ಮತ್ತು ತಾಯಿಯೂ ಆಗಿರುವನು. ಕುರುಕುಲಾವತಂಸರೇ! ಇಂತಹ ಮಹಾನುಭಾವನಿಗೆ, ಭಕ್ತಕುಲಶರಣ್ಯನಿಗೆ ಶರಣಾಗತರಾಗಿರಿ. ಇವನ ಆಶ್ರಯವನ್ನು ಪ್ರಾರ್ಥಿಸಿರಿ.”

ಜನಮೇಜಯ! ಮಾರ್ಕಂಡೇಯರು ಯುಧಿಷ್ಠಿರನಿಗೆ ಹೀಗೆಂದು ಹೇಳಿದೊಡನೆಯೇ ದ್ರೌಪದೀಸಮೇತರಾದ ಪಾಂಡವರು ಮೇಲೆದ್ದು ಶ್ರೀಕೃಷ್ಣನಿಗೆ ಪ್ರಣಾಮಮಾಡಿದರು.

ಪೂಜಾರ್ಹನಾದ, ಪುರುಷವ್ಯಾಘ್ರನಾದ, ಸನ್ಮಾನಾರ್ಹನಾದ ಶ್ರೀಕೃಷ್ಣನೂ ಪಾಂಡವರನ್ನು ಸವಿಮಾತುಗಳಿಂದ ಸಂತೈಸಿದನು.

ಠ೧೮೯ನೆಯ ಅಧ್ಯಾಯವು ಮುಗಿಯಿತು.

೧೯೦ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಪರ್ವ (ಮುಂದುವರಿದಿದೆ.)

## ಕಲಿಯುಗದ ವರ್ಣನೆ ಮತ್ತು ಕಲಿಯ ಪ್ರಭಾವ

ಜನಮೇಜಯ! ಕುಂತೀಪುತ್ರನಾದ ಯುಧಿಷ್ಠಿರನು ಪ್ರಪಂಚದಲ್ಲಿ ಮುಂದಿನ ಸಾಮ್ರಾಜ್ಯಗಳ ವಿಷಯವಾಗಿ ಮಾರ್ಕಂಡೇಯರನ್ನು ಪ್ರಶ್ನಿಸಿದನು :

"ವಾಗ್ಮಿಗಳಲ್ಲಿ ಶ್ರೇಷ್ಠರಾದ ಮಹರ್ಷಿಗಳೇ! ಪರಮಾದ್ಭುತವಾದ ಪ್ರಪಂಚದ ಪ್ರಳಯ ಮತ್ತು ಪುನಃಸೃಷ್ಟಿಗಳ ಕ್ರಮಗಳನ್ನು ನಿಮ್ಮಿಂದ ಕೇಳಿದೆನು. ನಿಶ್ಚಯವಾಗಿಯೂ ಇದು ಪರಮಾಶ್ಚರ್ಯಕರವಾದ ಸಂಗತಿಯಾಗಿರುವುದು. ಕಲಿಯುಗದಲ್ಲಿ ಮುಂದೆ ಏನಾಗುವುದೆಂಬುದನ್ನು ತಿಳಿಯಲು ನನಗೆ ಮತ್ತಷ್ಟು ಕೌತೂಹಲವುಂಟಾಗಿರುವುದು. ಧರ್ಮ-ನೀತಿಗಳು ಲಯ ವಾಗಿ ಹೋದನಂತರ ಉಳಿಯುವುದಾದರೂ ಏನು? ಆ ಸಮಯದಲ್ಲಿರುವ ಜನರ ಶಕ್ತಿ-ಸಾಮರ್ಥ್ಯಗಳೇನು? ಅವರ ಆಹಾರ-ವಿಹಾರಗಳೇನು? ಅವರ ಆಯುಃಪರಿಮಿತಿಯೆಷ್ಟು? ಅವರ ಉಡುಗೆ-ತೊಡುಗೆಗಳು ಹೇಗಿರುತ್ತವೆ?

ಕಲಿಯುಗವು ಕಳೆದು ಎಷ್ಟು ವರ್ಷಗಳ ನಂತರ ಕೃತಯುಗವು ಪ್ರಾದುರ್ಭವಿಸುತ್ತದೆ?—ಈ ವಿಷಯಗಳೆಲ್ಲವನ್ನೂ ನನಗೆ ವಿವರವಾಗಿ ಹೇಳಿರಿ. ನೀವು ಹೇಳುವ ವಿಷಯಗಳು ಬಹಳ ಆಶ್ಚರ್ಯಕರವಾಗಿದ್ದು ಮನಸ್ಸಿಗೆ ಹರ್ಷದಾಯಕವಾಗಿರುತ್ತವೆ."

ಯುಧಿಷ್ಠಿರನಿಂದ ಹೀಗೆ ಪ್ರಾರ್ಥಿತರಾದ ಮಾರ್ಕಂಡೇಯರು ವೃಷ್ಣಿ ಕುಲೋತ್ಪನ್ನನಾದ ಶ್ರೀಕೃಷ್ಣನಿಗೂ ಮತ್ತು ಪಾಂಡವರಿಗೂ ಹರ್ಷವನ್ನುಂಟು ಮಾಡುತ್ತಾ ಪ್ರವಚನವನ್ನು ಉಪಕ್ರಮಿಸಿದರು :

"ಯುಧಿಷ್ಠಿರಮಹಾರಾಜ! ನಾನು ಪ್ರತ್ಯಕ್ಷವಾಗಿ ನೋಡಿರುವುದು, ಋಷಿ-ಮಹರ್ಷಿಗಳಿಂದ ಕೇಳಿರುವುದು ಮತ್ತು ದೇವದೇವನ ಪೂರ್ಣಾನು

ಗ್ರಹದಿಂದ ನಾನು ಅನುಭವಿಸಿರುವುದು—ಈ ಎಲ್ಲ ವಿಷಯಗಳನ್ನೂ ವಿಸ್ತಾರವಾಗಿ ಹೇಳುವೆನು. ಪಾಪಭೂಯಿಷ್ಠವಾದ ಕಲಿಯುಗದ ಕಡೆಯಲ್ಲಿ ನಡೆಯುವ ವಿಚಿತ್ರವಾದ ಸಂಗತಿಗಳನ್ನು ಸಾವಧಾನಚಿತ್ತನಾಗಿ ಕೇಳುವವನಾಗು.

ನಾನು ಹಿಂದೆ ಹೇಳಿದಂತೆ :

**ಕೃತೇ ಚತುಷ್ಪಾತ್ಸಕಲೋ ನಿರ್ವ್ಯಾಜೋಪಾಧಿವರ್ಜಿತಃ ।**
**ವೃಷಃ ಪ್ರತಿಷ್ಠಿತೋ ಧರ್ಮೋ ಮನುಷ್ಯೇ ಭರತರ್ಷಭ ॥೯॥**

ಕೃತಯುಗದಲ್ಲಿ ವೃಷಭರೂಪವಾದ ಧರ್ಮವು ನಾಲ್ಕು ಕಾಲುಗಳಿಂದಲೂ ಕೂಡಿದ್ದು ಮನುಷ್ಯನಲ್ಲಿ ಪೂರ್ಣರೂಪದಲ್ಲಿರುತ್ತದೆ. ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯಗಳೊಂದೂ ಆ ಯುಗದಲ್ಲಿರುವುದಿಲ್ಲ.

**ಅಧರ್ಮಪಾದವಿದ್ಧಸ್ತು ತ್ರಿಭಿರಂಶೈಃ ಪ್ರತಿಷ್ಠಿತಃ ।**
**ತ್ರೇತಾಯಾಂ ದ್ವಾಪರೇಽರ್ಧೇನ ವ್ಯಾಮಿಶ್ರೋ ಧರ್ಮ ಉಚ್ಯತೇ ॥**

ತ್ರೇತಾಯುಗವು ಪ್ರಾರಂಭವಾದನಂತರ ಕಾಮ-ಕ್ರೋಧಾದಿಗಳು ಮನುಷ್ಯರಲ್ಲಿ ನುಸುಳಿ ಅದರಿಂದುಂಟಾಗುವ ಪಾಪವು ಚತುಷ್ಪಾದಿಯಾದ ಧರ್ಮದ ಒಂದು ಕಾಲನ್ನು ತಿಂದು ಹಾಕುತ್ತದೆ. ಮುಂದೆ ದ್ವಾಪರಯುಗದಲ್ಲಿ ಧರ್ಮಾಧರ್ಮಗಳೆರಡೂ ಸರಿಸಮವಾಗಿದ್ದು ಚತುಷ್ಪಾದಿಯಾದ ಧರ್ಮವು ಎರಡು ಕಾಲುಗಳನ್ನು ಮಾತ್ರವೇ ಹೊಂದಿರುತ್ತದೆ.

**ತ್ರಿಭಿರಂಶೈರಧರ್ಮಸ್ತು ಲೋಕಾನಾಕ್ರಮ್ಯ ತಿಷ್ಠತಿ ।**
**ತಾಮಸಂ ಯುಗಮಾಸಾದ್ಯ ತದಾ ಭರತಸತ್ತಮ ॥೧೧॥**

**ಚತುರ್ಥಾಂಶೇನ ಧರ್ಮಸ್ತು ಮನುಷ್ಯಾನುಪತಿಷ್ಠತಿ ।**
**ಆಯುರ್ವೀರ್ಯಮಥೋ ಬುದ್ಧಿರ್ಬಲಂ ತೇಜಶ್ಚ ಪಾಣ್ಡವ ।**
**ಮನುಷ್ಯಾಣಾಮನುಯುಗಂ ಹ್ರಸತೀತಿ ನಿಬೋಧ ಮೇ ॥೧೨॥**

ಮುಂದಿನ ಯುಗವಾದ ಕಲಿಯುಗಕ್ಕೆ ತಾಮಸಯುಗವೆಂದೂ ಮತ್ತೊಂದು ಹೆಸರಿದೆ. ಆ ಯುಗದಲ್ಲಿ ಮೂರು ಭಾಗ ಅಧರ್ಮವೂ ಒಂದು ಭಾಗ ಧರ್ಮವೂ ಮನುಷ್ಯರಲ್ಲಿರುತ್ತದೆ.ಯುಧಿಷ್ಠಿರ! ಯುಗದಿಂದ ಯುಗಕ್ಕೆ

ಧರ್ಮವು ಕ್ಷಯಿಸುವಂತೆಯೇ ಮನುಷ್ಯರ ಆಯುಷ್ಯ, ವೀರ್ಯ, ಬುದ್ಧಿ, ಬಲ, ತೇಜಸ್ಸು–ಇವುಗಳೂ ಕ್ಷಯಿಸುತ್ತಾ ಹೋಗುತ್ತವೆ.

**ರಾಜಾನೋ ಬ್ರಾಹ್ಮಣಾ ವೈಶ್ಯಾಃ ಶೂದ್ರಾಶ್ಚೈವ ಯುಧಿಷ್ಠಿರ ॥೧೩॥**

**ವ್ಯಾಜೈರ್ಧರ್ಮಂ ಚರಿಷ್ಯನ್ತಿ ಧರ್ಮವೈತಂಸಿಕಾ ನರಾಃ ।**
**ಸತ್ಯಂ ಸಂಕ್ಷೇಪ್ಸ್ಯತೇ ಲೋಕೇ ನರೈಃ ಪಣ್ಡಿತಮಾನಿಭಿಃ ॥೧೪॥**

**ಸತ್ಯಹಾನ್ಯಾ ತತಸ್ತೇಷಾಮಾಯುರಲ್ಪಂ ಭವಿಷ್ಯತಿ ।**
**ಆಯುಷಃ ಪ್ರಕ್ಷಯಾದ್ವಿದ್ಯಾಂ ನ ಶಕ್ಷ್ಯನ್ತ್ಯುಪಜೀವಿತುಮ್ ॥೧೫॥**

ಕಲಿಯುಗದ ಕಡೆಯಲ್ಲಿ ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರು ನೆಪ ಮಾತ್ರಕ್ಕೆ ಧರ್ಮವನ್ನಾಚರಿಸುತ್ತಾರೆ. ಸಾಮಾನ್ಯವಾಗಿ ಕಲಿಯುಗದ ಜನರೆಲ್ಲರೂ ಧರ್ಮದ ಸೋಗಿನಲ್ಲಿ ತಮ್ಮ ತಮ್ಮ ಜನರನ್ನೇ ನಂಬಿಸಿ ಮೋಸ ಮಾಡುತ್ತಿರುತ್ತಾರೆ. ತಾವೇ ಪಂಡಿತರೆಂದು ಭಾವಿಸಿಕೊಂಡಿರುವರೂ ಸತ್ಯವನ್ನು ಮರೆಮಾಚುತ್ತಾರೆ. ಅಂತಹವರ ಅಸತ್ಯದ ಹೇಳಿಕೆಗಳು ಸರ್ವತ್ರ ವ್ಯಾಪಕವಾಗಿ ಸರ್ವರೂ ಅಸತ್ಯಭಾಷಿಗಳೇ ಆಗುವುದರಿಂದ ಅವರ ಆಯುಷ್ಯವು ಕ್ಷೀಣಿಸುತ್ತದೆ. ಅವರು ಅಲ್ಪಾಯುಗಳಾಗಿರುವುದರಿಂದ ಅವರಿಗೆ ವಿದ್ಯೆಯ ಪರಿಪೂರ್ಣತೆಯಿರುವುದಿಲ್ಲ.

**ವಿದ್ಯಾಹೀನಾನವಿಜ್ಞಾನಾಲ್ಲೋಭೋಽಪ್ಯಭಿಭವಿಷ್ಯತಿ ।**
**ಲೋಭಕ್ರೋಧಪರಾ ಮೂಢಾಃ ಕಾಮಾಸಕ್ತಾಶ್ಚ ಮಾನವಾಃ ।**
**ವೈರಬದ್ಧಾ ಭವಿಷ್ಯನ್ತಿ ಪರಸ್ಪರವಧೈಷಿಣಃ ॥೧೬॥**

ಪರಿಪೂರ್ಣವಿದ್ಯೆಯಿಲ್ಲದ ಅವರು ವಿನಯಸಂಪನ್ನರಾಗಿರುವುದಿಲ್ಲ. ಅಲ್ಪವಿದ್ಯೆಯಿಂದಲೇ ಮಹಾಗರ್ವಿಗಳಾಗುತ್ತಾರೆ. ಅಲ್ಪವಿದ್ಯೆಯಿಂದಲೇ ತಮ್ಮ ಜೀವನವನ್ನು ಹೊರೆಯುತ್ತಾ ಅವರು ಮಹಾಲೋಭಿಗಳೂ ಆಗುತ್ತಾರೆ. ಲೋಭದ ಜೊತೆಯಲ್ಲಿಯೇ ಕಾಮ-ಕ್ರೋಧಗಳೂ ಅವರಲ್ಲಿ ಆವಿರ್ಭವಿಸಿರುತ್ತವೆ. ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯಗಳಿಂದ ಆವೃತರಾದ ಆ ಜನರು ಪರಸ್ಪರವಾಗಿ ದ್ವೇಷಾಸೂಯೆಗಳನ್ನು ಹೊಂದಿ ಒಬ್ಬರು ಮತ್ತೊಬ್ಬರನ್ನು ಕೊಂದುಹಾಕಲೂ ಹವಣಿಸುತ್ತಿರುತ್ತಾರೆ.

**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಸಂಕೀರ್ಯನ್ತಃ ಪರಸ್ಪರಮ್ ।**
**ಶೂದ್ರತುಲ್ಯಾ ಭವಿಷ್ಯನ್ತಿ ತಪಃಸತ್ಯವಿವರ್ಜಿತಾಃ ॥೧೭॥**

**ಅನ್ತ್ಯಾ ಮಧ್ಯಾ ಭವಿಷ್ಯನ್ತಿ ಮಧ್ಯಾಶ್ಚಾನ್ತ್ಯಾ ನ ಸಂಶಯಃ ।**
**ಈದೃಶೋ ಭವಿತಾ ಲೋಕೋ ಯುಗಾನ್ತೇ ಪರ್ಯುಪಸ್ಥಿತೇ ॥೧೮॥**

ಬ್ರಾಹ್ಮಣ-ಕ್ಷತ್ರಿಯ-ವೈಶ್ಯರು ತಪಸ್ಸಿನಿಂದಲೂ, ಸತ್ಯದಿಂದಲೂ ವಿವರ್ಜಿತರಾಗಿ, ಪರಸ್ಪರ ಸಂಕೀರ್ಣರಾಗಿ ವರ್ಣೋಚಿತವಾದ ಕಟ್ಟುಪಾಡುಗಳನ್ನು ತೊರೆದು ಶೂದ್ರಸಮಾನರಾಗುತ್ತಾರೆ. ಇಷ್ಟುಮಾತ್ರವಲ್ಲ ; ಕೀಳುಜಾತಿಯವರು ಮಧ್ಯಮಜಾತಿಯವರಿಗೆ ಉಚಿತವಾದ ಕರ್ಮಗಳನ್ನು ಮಾಡಲು ತೊಡಗುತ್ತಾರೆ. ಮಧ್ಯಮಜಾತಿಯವರು ಕೀಳುಜಾತಿಯವರಿಗೆ ಉಚಿತವಾದ ಕರ್ಮಗಳನ್ನು ಮಾಡುತ್ತಾರೆ. ಲೋಕದಲ್ಲಿ ಈ ವಿಧವಾದ ವೈಪರೀತ್ಯಗಳೆಲ್ಲವೂ ಕಲಿಯುಗದ ಅಂತ್ಯದಲ್ಲಿ ಉಂಟಾಗುವುವು.

**ವಸ್ತ್ರಾಣಾಂ ಪ್ರವರಾ ಶಾಣೀ ಧಾನ್ಯಾನಾಂ ಕೋರದೂಷಕಾಃ ॥೧೯॥**

ಯುಧಿಷ್ಠಿರ! ಆಗಿನ ಕಾಲದಲ್ಲಿ ಸೆಣಬಿನ ಬಟ್ಟೆಗಳೇ ಅತಿಶ್ರೇಷ್ಠವಾದುವೆಂದು ಪರಿಗಣಿಸಲ್ಪಡುತ್ತವೆ. ಧಾನ್ಯಗಳಲ್ಲಿ ಕೋರದೂಷಕಧಾನ್ಯಗಳೇ (ರಾಗಿ-ಜೋಳ ಮುಂತಾದುವು) ಉತ್ತಮೋತ್ತಮವಾದ ಮತ್ತು ಬಹು ಪುಷ್ಟಿಕರವಾದ ಆಹಾರವೆಂದು ಪರಿಗಣಿತವಾಗುತ್ತವೆ.

**ಭಾರ್ಯಾಮಿತ್ರಾಶ್ಚ ಪುರುಷಾ ಭವಿಷ್ಯನ್ತಿ ಯುಗಕ್ಷಯೇ ।**
**ಮತ್ಸ್ಯಾಮಿಷೇಣ ಜೀವನ್ತೋ ದುಹನ್ತಶ್ಚಾಪ್ಯಜೈಡಕಮ್ ॥೨೦॥**

**ಗೋಷು ನಷ್ಟಾಸು ಪುರುಷಾ ಯೇಽಪಿ ನಿತ್ಯಂ ಧೃತವ್ರತಾಃ ।**
**ತೇಽಪಿ ಲೋಭಸಮಾಯುಕ್ತಾ ಭವಿಷ್ಯನ್ತಿ ಯುಗಕ್ಷಯೇ ॥೨೧॥**

ಆಗಿನ ಕಾಲದಲ್ಲಿ ಪುರುಷರು ಪತ್ನಿಯ ವಾಕ್ಯ ಪರಿಪಾಲಕರಾಗುತ್ತಾರೆ. ತಮ್ಮ ಪತ್ನಿಯರನ್ನು ಸ್ವಲ್ಪ ಹೊತ್ತು ಕೂಡ ಬಿಟ್ಟಿರಲು ಪುರುಷರು ಇಷ್ಟಪಡುವುದಿಲ್ಲ. ಮನುಷ್ಯರು ಮತ್ಸ್ಯಹಾರಿಗಳಾಗುತ್ತಾರೆ. ಗೋಕ್ಷೀರವನ್ನು ಕುಡಿಯಲು ಗೋವುಗಳೇ ಇಲ್ಲದೇ ಆಗಿನ ಕಾಲದ ಜನರು ಆಡು ಮತ್ತು ಕುರಿಗಳ ಹಾಲನ್ನು ಕುಡಿಯುತ್ತಾರೆ. ವ್ರತಾನುಷ್ಠಾನಪರರಾದರೂ ಆಗಿ ಕಾಲದಲ್ಲಿ ಲೋಭಪರವಶರಾಗುತ್ತಾರೆ.

**ಅನ್ಯೋನ್ಯಂ ಪರಿಮುಷ್ಣನ್ತೋ ಹಿಂಸಯನ್ತಶ್ಚ ಮಾನವಾಃ ।**
**ಅಜಪಾ ನಾಸ್ತಿಕಾಃ ಸ್ತೇನಾ ಭವಿಷ್ಯನ್ತಿ ಯುಗಕ್ಷಯೇ ॥೨೨॥**

ಒಬ್ಬರನ್ನು ಕಂಡರೆ ಮತ್ತೊಬ್ಬರಿಗೆ ಆಗುವುದಿಲ್ಲ. ಇನ್ನೊಬ್ಬರಿಗೆ ತೊಂದರೆಕೊಡುವುದರಲ್ಲಿಯೇ ಮನುಷ್ಯರು ಸದಾ ಆಸಕ್ತರಾಗಿರುತ್ತಾರೆ. ಜಪಾನುಷ್ಠಾನವಾಗಲೀ, ದೈವಭಕ್ತಿಯಾಗಲೀ–ಮನುಷ್ಯರಲ್ಲಿರುವುದಿಲ್ಲ. ಎಲ್ಲರೂ ನಾಸ್ತಿಕರೂ, ಕಳ್ಳರೂ ಆಗಿರುತ್ತಾರೆ.

**ಸರಿತ್ತೀರೇಷು ಕುದ್ದಾಲೈರ್ವಾಪಯಿಷ್ಯನ್ತಿ ಚೌಷಧೀಃ ।**
**ತಾಶ್ಚಾಪ್ಯಲ್ಪಫಲಾಸ್ತೇಷಾಂ ಭವಿಷ್ಯನ್ತಿ ಯುಗಕ್ಷಯೇ ॥೨೩॥**

ಮಹಾನದಿಗಳನ್ನು ತಡೆದು, ಕಾಲುವೆಗಳ ಮೂಲಕ ಆ ಮಹಾನದಿಗಳ ನೀರು ಹರಿಯುವಂತೆ ಮಾಡಿ ಅವುಗಳ ಮೂಲಕ ಬೆಳೆಯನ್ನು ಬೆಳೆಯಲು ಯತ್ನಿಸುತ್ತಾರೆ. ಕಲಿಯುಗಾಂತ್ಯದಲ್ಲಿ ಅಂತಹ ಸ್ಥಳಗಳಲ್ಲಿಯೂ ಸರಿಯಾಗಿ ಬೆಳೆಯಾಗುವುದಿಲ್ಲ.

**ಶ್ರಾದ್ಧೇ ದೈವೇ ಚ ಪುರುಷಾ ಯೇಽಪಿ ನಿತ್ಯಂ ಧೃತವ್ರತಾಃ ।**
**ತೇಽಪಿ ಲೋಭಸಮಾಯುಕ್ತಾ ಭೋಕ್ಷ್ಯನ್ತೀಹ ಪರಸ್ಪರಮ್ ॥೨೪॥**

ಪಿತೃಸಂಬಂಧವಾದ ಶ್ರಾದ್ಧಕಾಲಗಳಲ್ಲಿಯೂ, ದೇವಪೂಜಾ-ವ್ರತಾದಿಗಳ ಕಾಲಗಳಲ್ಲಿಯೂ ಅವುಗಳನ್ನು ಮಾಡಿಸುವ ಅಥವಾ ಮಾಡುವ ವ್ರತಾನುಷ್ಠಾನಪರರಾದ ಜನರು ಲೋಭಿಗಳಾಗುತ್ತಾರೆ. ಮತ್ತು ಅವರು ಕೆಲವು ಸಮಯಗಳಲ್ಲಿ ಪರಸ್ವತ್ತಿನ ಅಪಹಾರಕರೂ ಆಗುತ್ತಾರೆ. (ಶ್ರಾದ್ಧಾದಿಗಳಲ್ಲಿ ಬೇರೆಯವರನ್ನು ನಿಮಂತ್ರಿಸುವುದಕ್ಕೆ ಪ್ರತಿಯಾಗಿ ರಕ್ತಸಂಬಂಧಿಗಳನ್ನೇ ಆಹ್ವಾನಿಸುತ್ತಾರೆ.)

**ಪಿತಾ ಪುತ್ರಸ್ಯ ಭೋಕ್ತಾ ಚ ಪಿತುಃ ಪುತ್ರಸ್ತಥೈವ ಚ ।**
**ಅತಿಕ್ರಾನ್ತಾನಿ ಭೋಜ್ಯಾನಿ ಭವಿಷ್ಯನ್ತಿ ಯುಗಕ್ಷಯೇ ॥೨೫॥**

ತಂದೆಗೆ ಸಂಬಂಧಿಸಿದ ವಸ್ತುಗಳನ್ನು ಮಗನೂ, ಮಗನಿಗೆ ಸಂಬಂಧಿಸಿದ ವಸ್ತುಗಳನ್ನು ತಂದೆಯೂ ಯಾವ ವಿಧವಾದ ಕಟ್ಟುಪಾಡುಗಳೂ ಇಲ್ಲದೇ ಉಪಭುಂಜಿಸುತ್ತಿರುತ್ತಾರೆ. ತ್ಯಾಜ್ಯವಸ್ತುಗಳೂ ಉಪಭೋಗಾರ್ಹವಾಗುತ್ತವೆ.

**ನ ವ್ರತಾನಿ ಚರಿಷ್ಯನ್ತಿ ಬ್ರಾಹ್ಮಣಾ ವೇದನಿನ್ದಕಾಃ ।**
**ನ ಯಕ್ಷ್ಯನ್ತಿನ ಹೋಷ್ಯನ್ತಿ ಹೇತುವಾದವಿಮೋಹಿತಾಃ ।**
**ನಿಮ್ನೇಷ್ವೀಹಾಂ ಕರಿಷ್ಯನ್ತಿ ಹೇತುವಾದ ವಿಮೋಹಿತಾಃ ॥೨೬॥**

ವಿಧಿ-ನಿಷೇಧಗಳೆಂಬುದೇ ಆಗಿನ ಜನರ ಸ್ಮರಣೆಯಲ್ಲಿರುವುದಿಲ್ಲ. ಅಧ್ಯಯನಾಧ್ಯಾಪನಾದಿ ಷಟ್ಕರ್ಮಗಳಲ್ಲಿ ನಿರತರಾಗಿರಬೇಕಾದ ಬ್ರಾಹ್ಮಣರು ವೇದನಿಂದಕರಾಗುತ್ತಾರೆ. "ಯಜ್ಞ-ಯಾಗಾದಿಗಳನ್ನಾಗಲೀ, ಸ್ಮೃತ್ಯುಕ್ತವಾದ ಕರ್ಮಾನುಷ್ಠಾನಗಳನ್ನಾಗಲೀ ಶ್ರಮವಹಿಸಿ ಮಾಡುವುದರಿಂದ ಪ್ರಯೋಜನ ವೇನು? ವೇದವನ್ನು ಏಕೆ ಅಧ್ಯಯನಮಾಡಬೇಕು?"–ಇವೇ ಮುಂತಾಗಿ ಅರ್ಥವಿಲ್ಲದ ವಿತಂಡಾವಾದಗಳನ್ನು ಮಾಡಿಕೊಂಡು ಹೀನಕರ್ಮಗಳಲ್ಲಿ ಪ್ರವೃತ್ತರಾಗಿರುತ್ತಾರೆ.

**ನಿಮ್ನೇ ಕೃಷಿಂ ಕರಿಷ್ಯನ್ತಿ ಯೋಕ್ಷ್ಯನ್ತಿ ಧುರಿ ಧೇನುಕಾಃ ।**
**ಏಕಹಾಯನವತ್ಸಾಂಶ್ಚ ಯೋಜಯಿಷ್ಯನ್ತಿ ಮಾನವಾಃ ॥೨೭॥**

ಆಗಿನ ಕಾಲದಲ್ಲಿ ಮಾನವರು ತಗ್ಗಾದ ಪ್ರದೇಶಗಳಲ್ಲಿ (ಗೋಮಾಳ ಗಳಲ್ಲಿ ಕೃಷಿಮಾಡುತ್ತಾರೆ. ಕೃಷಿಮಾಡುವಾಗ ನೊಗಕ್ಕೆ ಹಸುಗಳನ್ನೂ ಮತ್ತು ಒಂದು ವರ್ಷದ ಕರುಗಳನ್ನೂ ಕಟ್ಟಿ ಉಳುತ್ತಾರೆ.

**ಪುತ್ರಃ ಪಿತೃವಧಂ ಕೃತ್ವಾ ಪಿತಾ ಪುತ್ರವಧಂ ತಥಾ ।**
**ನಿರುದ್ವೇಗೋ ಬೃಹದ್ವಾದೀ ನ ನಿನ್ದಾಮುಪಲಪ್ಸ್ಯತೇ ॥೨೮॥**

ಕೌಂತೇಯನೇ! ಆಗಿನ ಕಾಲದಲ್ಲಿ ತಂದೆಯು ಮಗನನ್ನೂ, ಮಗನು ತಂದೆಯನ್ನೂ ಕೊಲ್ಲುವ ಪ್ರಸಂಗಗಳು ಅನೇಕವಾಗಿರುತ್ತವೆ. ಆದರೂ ಸಹ ಮಗನನ್ನು ಕೊಂದ ತಂದೆಯಾಗಲೀ, ತಂದೆಯನ್ನು ಕೊಂದ ಮಗನಾಗಲೀ ಯಾವ ವಿಧವಾದ ಪಶ್ಚಾತ್ತಾಪವನ್ನೂ ಪಡುವುದಿಲ್ಲ. ಹೀಗೆ ಮಾಡುವುದು ಅಪರಾಧವೆಂದೇ ಅವರು ಭಾವಿಸುವುದಿಲ್ಲ. ಮಗನು ತಂದೆಯ ಮೇಲಾಗಲೀ ತಂದೆಯು ಮಗನ ಮೇಲಾಗಲೀ-ಸೇಡು ತೀರಿಸಿಕೊಂಡನಂತರ ಅವರು ಕೃತಕೃತ್ಯರಾದೆವೆಂದೇ ಭಾವಿಸುತ್ತಾರೆ. ಅವರು ಸಮಾಜದಲ್ಲಿಯೂ ಯಾವ ವಿಧವಾದ ನಿಂದೆಗೂ ಪಾತ್ರರಾಗುವುದಿಲ್ಲ.

**ಮ್ಲೇಚ್ಛಭೂತಂ ಜಗತ್ಸರ್ವಂ ನಿಷಿ ಯಂ ಯಜ್ಞವರ್ಜಿತಮ್ ।**
**ಭವಿಷ್ಯತಿ ನಿರಾನನ್ದಮನುತ್ಸವಮಥೋ ತಥಾ ॥೨೯॥**

ಪ್ರಪಂಚವೆಲ್ಲವೂ ಮ್ಲೇಚ್ಛರ ವೇಷ-ಭೂಷಣಗಳನ್ನೂ ನಡೆ-ನುಡಿಗಳನ್ನೂ ಅನುಸರಿಸುತ್ತದೆ. ಯಜ್ಞ-ಯಾಗಾದಿಗಳಾಗಲೀ, ಶ್ರೌತ-ಸ್ಮಾರ್ತ ಕರ್ಮಾನುಷ್ಠಾನಗಳಾಗಲೀ ಸರ್ವಥಾ ಇರುವುದಿಲ್ಲ. ಎಲ್ಲೆಲ್ಲಿಯೂ ಅಶಾಂತಿಯು ತಾಂಡವವಾಡುತ್ತಿರುತ್ತದೆ. ಯಾವನೊಬ್ಬನಿಗೂ ಉತ್ಸವಾದಿಗಳಲ್ಲಿ ಭಾಗವಹಿಸುವ ಇಚ್ಛೆಯೇ ಇರುವುದಿಲ್ಲ.

**ಪ್ರಾಯಶಃ ಕೃಪಣಾನಾಂ ಹಿ ತಥಾ ಬನ್ಧುಮತಾಮಪಿ ।**
**ವಿಧವಾನಾಂ ಚ ವಿತ್ತಾನಿ ಹರಿಷ್ಯನ್ತೀಹ ಮಾನವಾಃ ॥೩೦॥**

ಅಸಹಾಯಕರ, ಬಂಧುಗಳಲ್ಲದವರ, ಮಕ್ಕಳಿಲ್ಲದವರ, ವಿಧವೆಯರ ಸ್ವತ್ತುಗಳನ್ನು ಅಪಹರಿಸಲು ಜನರು ಬಹಳ ಆಸಕ್ತರಾಗಿರುತ್ತಾರೆ.

**ಸ್ವಲ್ಪವೀರ್ಯಬಲಾಃ ಸ್ತಬ್ಧಾ ಲೋಭಮೋಹಪರಾಯಣಾಃ ।**
**ತತ್ಕಥಾದಾನಸಂತುಷ್ಟಾ ದುಷ್ಟಾನಾಮಪಿ ಮಾನವಾಃ ।**
**ಪರಿಗ್ರಹಂ ಕರಿಷ್ಯನ್ತಿ ಮಾಯಾಚಾರಪರಿಗ್ರಹಾಃ ॥೩೧॥**

ಅಲ್ಪವೀರ್ಯರೂ, ಅಲ್ಪವಿದ್ಯೆಯುಳ್ಳವರೂ, ಅಸೂಯಾಪರರೂ, ದಾಂಭಿಕರೂ ಆದ ಬ್ರಾಹ್ಮಣರು ಹೆಚ್ಚು ಸಂಖ್ಯೆಯಲ್ಲಿದ್ದು ದುಷ್ಟರಿಂದಲೂ, ಪಾಪಿಷ್ಠರಿಂದಲೂ ದಾನವನ್ನು ಪ್ರತಿಗ್ರಹಮಾಡಲು ಸ್ವಲ್ಪವಾದರೂ ಹಿಂಜರಿಯುವುದಿಲ್ಲ. ದಾನಪಡೆದುದಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದಕ್ಕೆ ಬದಲಾಗಿ ದಾನಿಯನ್ನೇ ಬಾಯಿತುಂಬಾ ಹೊಗಳುತ್ತಾರೆ. ಇನ್ನೂ ಹೆಚ್ಚು ಹೆಚ್ಚು ದಾನಪಡೆಯುವುದೇ ಅವರ ಆಶಯವಾಗಿರುತ್ತದೆ. ದಾನಮಾಡು ವವರೂ ಸಹ ತಾತ್ಸಾರದಿಂದ ದಾನಮಾಡುವರೇ ಹೊರತು ಶ್ರದ್ಧೆಯಿಂದ ದಾನಮಾಡುವುದಿಲ್ಲ.

**ಸಮಾಹ್ವಯನ್ತಃ ಕೌನ್ತೇಯ ರಾಜಾನಃ ಪಾಪಬುದ್ಧಯಃ ॥೩೨॥**

**ಪರಸ್ಪರವಧೋದ್ಯುಕ್ತಾ ಮೂರ್ಖಾಃ ಪಣ್ಡಿತಮಾನಿನಃ ।**
**ಭವಿಷ್ಯನ್ತಿ ಯುಗಸ್ಯಾನ್ತೇ ಕ್ಷತ್ರಿಯಾ ಲೋಕಕಣ್ಟಕಾಃ ॥೩೩॥**

ಆಗಿನ ಕಾಲದಲ್ಲಿರುವ ರಾಜರೂ ರಾಜನೀತಿವಿಶಾರದರಾಗಿ ಧಾರ್ಮಿಕರಾಗಿರುವುದಿಲ್ಲ. ಪಾಪಚಿತ್ತರಾಗಿರುತ್ತಾರೆ. ಆದರೂ ತಾವೇ ಸರ್ವಜ್ಞರೆಂಬ ಮತ್ತು ಮಹಾಪರಾಕ್ರಮಶಾಲಿಗಳೆಂಬ ದುರಭಿಮಾನ ದಿಂದಿರುತ್ತಾರೆ. ಆ ಕಾರಣದಿಂದಲೇ ಅವರು ತಮ್ಮ ನೆರೆಹೊರೆಯ ರಾಜ ರೊಡನೆ ಸದಾ ಜಗಳವಾಡುತ್ತಲೇ ಇರುತ್ತಾರೆ. ಧರ್ಮೋದ್ಧಾರಕರೆನಿಸಿದ ಕ್ಷತ್ರಿಯರು ಕಲಿಯುಗದ ಅಂತ್ಯದಲ್ಲಿ ಲೋಕಕಂಟಕರೇ ಆಗುತ್ತಾರೆ.

**ಅರಕ್ಷಿತಾರೋ ಲುಬ್ಧಾಶ್ಚ ಮಾನಾಹಙ್ಕಾರದರ್ಪಿತಾಃ ।**
**ಕೇವಲಂ ದಣ್ಡರುಚಯೋ ಭವಿಷ್ಯನ್ತಿ ಯುಗಕ್ಷಯೇ ॥೩೪॥**

ಅವರಿಗೆ ಪ್ರಜೆಗಳನ್ನು ಪರಿಪಾಲನೆಮಾಡುವ ಸಾಮರ್ಥ್ಯವಿರುವುದಿಲ್ಲ. ಲೋಭ-ಮೋಹ-ಮದ-ಮಾತ್ಸರ್ಯಗಳು ಅವರಲ್ಲಿ ತುಂಬಿಹೋಗಿರುತ್ತವೆ. ಪ್ರಜೆಗಳನ್ನು ನಾನಾರೀತಿಯಲ್ಲಿ ಶಿಕ್ಷಿಸುವುದರಲ್ಲಿ ಮಾತ್ರವೇ ಅವರು ನಿರತರಾಗಿರುತ್ತಾರೆ.

**ಆಕ್ರಮ್ಯಾಕ್ರಮ್ಯ ಸಾಧೂನಾಂ ದಾರಾಂಶ್ಚಾಪಿ ಧನಾನಿ ಚ ।**
**ಭೋಕ್ಷ್ಯನ್ತೇ ನಿರನುಕ್ರೋಶಾ ರುದತಾಮಪಿ ಭಾರತ ॥೩೫॥**

ಸಾಧುಗಳನ್ನೂ, ಸತ್ಪುರುಷರನ್ನೂ ಅವರು ಆಗಾಗ ಆಕ್ರಮಣಮಾಡು ತ್ತಲೇ ಇರುತ್ತಾರೆ. ಐಶ್ವರ್ಯವನ್ನು ಕೊಳ್ಳೆಹೊಡೆಯುವುದೊಂದೇ ಅವರ ಧ್ಯೇಯವಾಗಿರುತ್ತದೆ. ಅನೇಕಸಮಯಗಳಲ್ಲಿ ಗೌರವಯುತರಾದ, ನ್ಯಾಯ ಪರರಾದ, ನಿಷ್ಕಪಟಿಗಳಾದ ಪ್ರಜೆಗಳನ್ನು ಧನದಾಸೆಗಾಗಿ ಹಿಂಸಿಸುವುದು ಮಾತ್ರವಲ್ಲದೇ-ಅವರ ಭಾರ್ಯೆಯರನ್ನೂ ಅಪಹರಿಸಿಕೊಂಡು ಹೋಗು ತ್ತಾರೆ. ಅವರು ಸಂಕಟಪಡುತ್ತಿದ್ದರೆ ಅದನ್ನು ನೋಡಿ ಆ ದುರುಳಕ್ಷತ್ರಿಯರು ಆನಂದಪಡುತ್ತಾರೆ. ಅವರಿಗೆ ದಯೆಯೆಂಬುದೇ ಇರುವುದಿಲ್ಲ.

**ನ ಕನ್ಯಾಂ ಯಾಚತೇ ಕಶ್ಚಿನ್ನಾಪಿ ಕನ್ಯಾ ಪ್ರದೀಯತೇ ।**
**ಸ್ವಯಂಗ್ರಾಹಾ ಭವಿಷ್ಯನ್ತಿ ಯುಗಾನ್ತೇ ಸಮುಪಸ್ಥಿತೇ ॥೩೬॥**

ಕಲಿಯುಗದ ಕಡೆಯಲ್ಲಿ ಕನ್ಯಾದಾನ–ಕನ್ಯಾವರಣಗಳೆಂಬ ಶಬ್ದಗಳೇ ಲುಪ್ತವಾಗಿ ಹೋಗುತ್ತವೆ. ಯಾವನೊಬ್ಬ ತಂದೆಯೂ ತನ್ನ ಮಗಳನ್ನು

ಯೋಗ್ಯನಾದ ವರನನ್ನು ಹುಡುಕಿ ಅವನಿಗೆ ಕೊಟ್ಟು ಲಗ್ನಮಾಡಲು ಯತ್ನಿಸುವುದಿಲ್ಲ. ಯಾವನೊಬ್ಬ ವರನೂ ಸತ್ಕುಲಪ್ರಸೂತಳಾದ ಕನ್ಯೆಯನ್ನು ಬೇಡಲೂ ಹೋಗುವುದಿಲ್ಲ. ಪ್ರೌಢೆಯರಾದ ಸ್ತ್ರೀಯರೇ ತಮಗೆ ಬೇಕಾದ ಪುರುಷನನ್ನು ಜಾತಿ-ಕುಲ-ಮತಾಚಾರಗಳ ವಿವೇಚನೆಯಿಲ್ಲದೇ ಆರಿಸಿ ಕೊಳ್ಳುತ್ತಾರೆ.

**ರಾಜಾನಶ್ಚಾಪ್ಯಸಂತುಷ್ಟಾಃ ಪರಾರ್ಥಾನ್ಮೂಢಚೇತಸಃ ।**
**ಸರ್ವೋಪಾಯೈರ್ಹರಿಷ್ಯನ್ತಿ ಯುಗಾನ್ತೇ ಪರ್ಯುಪಸ್ಥಿತೇ ॥೩೭॥**

ಯುಧಿಷ್ಠಿರ! ನಾನು ಹಿಂದೆಯೇ ಹೇಳಿದಂತೆ ರಾಜರು ಯಾವಾಗಲೂ ಅಸಂತುಷ್ಟರಾಗಿಯೇ ಇರುತ್ತಾರೆ. ಅಸಂತುಷ್ಟಿಯೆಂಬುದು ರಾಜರಿಗೆ ಇರ ಬೇಕಾದ ಒಂದು ಲಕ್ಷಣವಾದರೂ–ಆ ಅಸಂತುಷ್ಟಿಯು ಎಲ್ಲೆಮೀರಿ ಹೋಗು ತ್ತದೆ. ಆ ಕಾರಣದಿಂದಲೇ ಮೂಢಬುದ್ಧಿಯಿಂದ ಕೂಡಿದ ರಾಜರು ಪ್ರಜೆ ಗಳಲ್ಲಿರುವ ಧನವನ್ನು ನಾನಾವಿಧವಾದ ಉಪಾಯಗಳಿಂದ ಅಪಹರಿಸುತ್ತಾರೆ.

**ಮ್ಲೇಚ್ಛೀಭೂತಂ ಜಗತ್ಸರ್ವಂ ಭವಿಷ್ಯತಿ ನ ಸಂಶಯಃ ।**
**ಹಸ್ತೋ ಹಸ್ತಂ ಪರಿಮುಷೇದ್ಯುಗಾನ್ತೇ ಸಮುಪಸ್ಥಿತೇ ॥೩೮॥**

ಪ್ರಪಂಚವೆಲ್ಲವೂ, ಮ್ಲೇಚ್ಛಮಯವಾಗುತ್ತದೆ. ಉಡುಗೆ-ತೊಡಿಗೆ, ಆಚಾರ-ವ್ಯವಹಾರ, ಅನ್ನ-ಪಾನ, ಆಟ-ಪಾಟ ಎಲ್ಲದರಲ್ಲಿಯೂ ಜನರು ಮ್ಲೇಚ್ಛರನ್ನು ಅನುಕರಣೆಮಾಡುತ್ತಿರುತ್ತಾರೆ. ಅಣ್ಣ-ತಮ್ಮಂದಿರಲ್ಲಿ, ತಂದೆ-ಮಕ್ಕಳಲ್ಲಿ ಪರಸ್ಪರ ನಂಬಿಕೆಯಿರುವುದಿಲ್ಲ. ಅಣ್ಣನು ತನಗೆ ಮೋಸಮಾಡುವ ನೆಂದು ತಮ್ಮನು ಭಾವಿಸುತ್ತಾನೆ. ತಮ್ಮನು ತನಗೆ ಮೋಸಮಾಡುವನೆಂದು ಅಣ್ಣನು ಭಾವಿಸುತ್ತಾನೆ. ಎಡಗೈಯನ್ನು ಬಲಗೈ ನಂಬುವುದಿಲ್ಲ. ಬಲಗೈಯನ್ನು ಎಡಗೈ ನಂಬುವುದಿಲ್ಲ. ಮತ್ತೊಬ್ಬರಿಗೆ ಮೋಸಮಾಡಿ ಹಣವನ್ನು ಸಂಪಾದನೆಮಾಡುವುದೇ ಸಾಮಾನ್ಯವಾಗಿ ಪ್ರತಿಯೊಬ್ಬರ ಆಶಯವೂ ಆಗಿರುತ್ತದೆ.

**ಸತ್ಯಂ ಸಂಕ್ಷಿಪ್ಯತೇ ಲೋಕೇ ನರೈಃ ಪಣ್ಡಿತಮಾನಿಭಿಃ ।**
**ಸ್ಥವಿರಾ ಬಾಲಮತಯೋ ಬಾಲಾಃ ಸ್ಥವಿರಬುದ್ಧಯಃ ॥೩೯॥**

ಪಂಡಿತರೆನಿಸಿಕೊಂಡವರೇ ಸತ್ಯವನ್ನು ಮುಚ್ಚಿಡುತ್ತಾರೆ. ಇಚ್ಛೆ ಬಂದಂತೆ ಶ್ರುತಿ-ಸ್ಮೃತಿಗಳಿಗೆ ಸಮಯೋಚಿತವಾಗಿ ಅರ್ಥವನ್ನು ಕಲ್ಪಿಸು

ತ್ತಾರೆ. ಮತ್ತೊಂದು ವಿಚಿತ್ರವಾದ ಸಂಗತಿಯೆಂದರೆ: ಬಾಲರು ವೃದ್ಧರಂತೆ ಮಾತನಾಡುತ್ತಾರೆ. ವೃದ್ಧರಿಗೆ ಬಾಲರಿಗಿರುವ ಚಪಲತೆಯು ಉಂಟಾಗುತ್ತದೆ. (ಬಾಲಬುದ್ಧಿಯುಳ್ಳವರಾಗುತ್ತಾರೆ.)

**ಭೀರುಸ್ತಥಾ ಶೂರಮಾನೀ ಶೂರಾ ಭೀರುವಿಷಾದಿನಃ ।**
**ನ ವಿಶ್ವಸನ್ತಿ ಚಾನ್ಯೋನ್ಯಂ ಯುಗಾನ್ತೇ ಪರ್ಯುಪಸ್ಥಿತೇ ॥೪೦॥**

ನಿಜವಾಗಿ ಶೂರನಾಗಿರುವವನು ಹೇಡಿಯೆಂದು ಪ್ರಸಿದ್ಧಿಹೊಂದುತ್ತಾನೆ. ಹೇಡಿಯಾದವನಿಗೆ ಮಹಾಶೂರನೆಂಬ ಕೀರ್ತಿಯು ಲಭ್ಯವಾಗುತ್ತದೆ. ಒಬ್ಬರ ಮೇಲೆ ಇನ್ನೊಬ್ಬರ ಲೇಶಮಾತ್ರವಾದರೂ ನಂಬಿಕೆಯೆಂಬುದೇ ಇರುವುದಿಲ್ಲ.

**ಏಕಾಹಾರ್ಯಂ ಜಗತ್ಸರ್ವಂ ಲೋಭಮೋಹವ್ಯವಸ್ಥಿತಮ್ ।**
**ಅಧರ್ಮೋ ವರ್ಧತೇ ತತ್ರ ನ ತು ಧರ್ಮಃ ಪ್ರವರ್ತತೇ ॥೪೧॥**

ಜಗತ್ತೆಲ್ಲವೂ ಒಂದೇ ವಿಧವಾದ ಆಹಾರ-ವೇಷ-ಭೂಷಣಗಳುಳ್ಳದ್ದಾಗಿರುತ್ತದೆ. ಲೋಭ-ಮೋಹಗಳು ಸರ್ವತ್ರ ವ್ಯಾಪ್ತವಾಗಿರುತ್ತದೆ. ಅಧರ್ಮವು ದಿನ-ದಿನಕ್ಕೂ ಅಭಿವೃದ್ಧಿಹೊಂದುತ್ತಿದ್ದು ಧರ್ಮವು ನಶಿಸಿಹೋಗುತ್ತಿರುತ್ತದೆ.

**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ನ ಶಿಷ್ಯನ್ತಿ ಜನಾಧಿಪ ।**
**ಏಕವರ್ಣಸ್ತದಾ ಲೋಕೋ ಭವಿಷ್ಯತಿ ಯುಗಕ್ಷಯೇ ॥೪೨॥**

ವರ್ಣಸಾಂಕರ್ಯದಿಂದಾಗಿ ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರೆಂಬ ನಾಲ್ಕು ವಿಧವಾದ ವರ್ಣಾಶ್ರಮಗಳು ಸಂಪೂರ್ಣವಾಗಿ ಅಳಿದುಹೋಗುತ್ತವೆ. ಕಲಿಯುಗದ ಅಂತ್ಯದ ವೇಳೆಗೆ ಪ್ರಪಂಚದಲ್ಲಿ ಪುರುಷಜಾತಿ-ಸ್ತ್ರೀಜಾತಿಗಳೆಂಬ ಎರಡು ಜಾತಿಗಳು ಮಾತ್ರ ಉಳಿದಿರುತ್ತವೆ. ಧರ್ಮದ ಸಂಪರ್ಕವೇ ಇಲ್ಲದ ಅವರು ಕೇವಲ ನಿದ್ರಾಹಾರ-ಮೈಥುನತತ್ಪರರಾಗಿ ಪಶುಸಮಾನ ರಾಗಿರುತ್ತಾರೆ.

**ನ ಕ್ಷಂಸ್ಯತಿ ಪಿತಾ ಪುತ್ರಂ ಪುತ್ರಶ್ಚ ಪಿತರಂ ತಥಾ ।**
**ಭಾರ್ಯಾಶ್ಚ ಪತಿಶುಶ್ರೂಷಾಂ ನ ಕರಿಷ್ಯನ್ತಿ ಸಂಕ್ಷಯೇ ॥೪೩॥**

ಪಿತಾ-ಪುತ್ರಭಾವನೆಯಾಗಲೀ, ಸತಿ-ಪತಿಗಳೆಂಬ ಭಾವನೆಯಾಗಲೀ ಪ್ರಪಂಚದಲ್ಲಿ ಉಳಿಯುವುದಿಲ್ಲ. ಮಗನೇನಾದರೂ ಅಪರಾಧಮಾಡಿದರೆ

ತಂದೆಯು ಕ್ಷಮಿಸುವುದಿಲ್ಲ. ತಂದೆಯೇನಾದರೂ ಅಪರಾಧಮಾಡಿದರೆ ಮಗನೂ ಸೈರಣೆಯಿಂದಿರುವುದಿಲ್ಲ. ಎಲ್ಲೂರ ಕಡೆಯ ಉಪಾಯವಾದ ದಂಡೋಪಾಯವನ್ನೇ ಆಶ್ರಯಿಸಿ ಯಾವ ವಿಧವಾದ ಅನುಕಂಪವೂ ಇಲ್ಲದೇ ಶಿಕ್ಷಿಸಹೋಗುತ್ತಾರೆ. ಪತಿಶುಶ್ರೂಷೆಯೆಂಬ ಸ್ತ್ರೀಯರಿಗುಚಿತವಾದ ಧರ್ಮವೇ ಕಲಿಯುಗದ ಅಂತ್ಯದಲ್ಲಿರುವುದಿಲ್ಲ.

**ಯೇ ಯವಾನ್ನಾ ಜನಪದಾ ಗೋಧೂಮಾನ್ನಾಸ್ತಥೈವ ಚ ।**
**ತಾನ್ದೇಶಾನ್ಸಂಶ್ರಯಿಷ್ಯನ್ತಿ ಯುಗಾನ್ತೇ ಪರ್ಯುಪಸ್ಥಿತೇ ॥೪೪॥**

ಕಲಿಯುಗದ ಅಂತ್ಯದಲ್ಲಿ ಪ್ರಜೆಗಳೆಲ್ಲರೂ ತಿನ್ನಲೂ ಅನ್ನವಿಲ್ಲದೇ ಯವೆಯನ್ನೂ (ಬಾರ್ಲಿ) ಗೋಧಿಯನ್ನೂ ತಿನ್ನಲು ಉಪಕ್ರಮಿಸುತ್ತಾರೆ ಮತ್ತು ತಮ್ಮ ದೇಶದಲ್ಲಿ ಸಾಕಷ್ಟು ಗೋಧಿಯು ಸಿಕ್ಕದೇ ಗೋಧಿಗಾಗಿಯೂ–ಯವೆಗಾಗಿಯೂ ಬೇರೆ ಬೇರೆ ದೇಶಗಳ ಆಶ್ರಯವನ್ನು ಪಡೆಯುತ್ತಾರೆ.

**ಸ್ವೈರಾಚಾರಾಶ್ಚ ಪುರುಷಾ ಯೋಷಿತಶ್ಚ ವಿಶಾಮ್ಪತೇ ।**
**ಅನ್ಯೋನ್ಯಂ ನ ಸಹಿಷ್ಯನ್ತಿ ಯುಗಾನ್ತೇ ಪರ್ಯುಪಸ್ಥಿತೇ ॥೪೫॥**

ಪುರುಷರೂ ಮತ್ತು ಸ್ತ್ರೀಯರೂ ಆಗಿನ ಕಾಲದಲ್ಲಿ ಸ್ವೇಚ್ಛಾಚಾರಿಗಳಾಗಿರುತ್ತಾರೆ. ಸತಿ-ಪತಿಗಳಾಗಿದ್ದರೂ ಗಂಡನು ಹೇಳಿದ್ದನ್ನು ಹೆಂಡತಿಯಾಗಲೀ–ಹೆಂಡತಿಯು ಹೇಳಿದ್ದನ್ನು ಗಂಡನಾಗಲೀ–ಕೇಳುವ ಮನೋಭಾವವಿರುವುದಿಲ್ಲ.

**ಮ್ಲೇಚ್ಛಭೂತಂ ಜಗತ್ಸರ್ವಂ ಭವಿಷ್ಯತಿ ಯುಧಿಷ್ಠಿರ ।**
**ನ ಶ್ರಾದ್ಧೈಸ್ತರ್ಪಯಿಷ್ಯನ್ತಿ ದೈವತಾನೀಹ ಮಾನವಾಃ ॥೪೬॥**

ಪ್ರಪಂಚವೆಲ್ಲವೂ ಮ್ಲೇಚ್ಛಮಯವಾಗಿರುತ್ತದೆ. ಶಾಸ್ತ್ರವಿಹಿತವಾಗಿ ಮತ್ತು ಸಂಪ್ರದಾಯಾನುಸಾರವಾಗಿ ದೇವ-ಪಿತೃಗಳ ಸಂತೃಪ್ತಿಗಾಗಿ ಮಾಡ ಬೇಕಾದ ಶ್ರಾದ್ಧಾದಿಗಳನ್ನೂ ಜನರು ಸಂಪೂರ್ಣವಾಗಿ ಬಿಟ್ಟುಬಿಡುತ್ತಾರೆ.

**ನ ಕಶ್ಚಿತ್ಕಸ್ಯಚಿಚ್ಛ್ರೋತಾ ನ ಕಶ್ಚಿತ್ಕಸ್ಯಚಿದ್ಗುರುಃ ।**
**ತಮೋಗ್ರಸ್ತಸ್ತದಾ ಲೋಕೋ ಭವಿಷ್ಯತಿ ಜನಾಧಿಪ ॥೪೭॥**

ಯಾರೂ ಯಾರ ಮಾತನ್ನೂ ಕೇಳುವುದಿಲ್ಲ. ಯಾರು ಯಾರಿಗೂ ಗುರು

ವಾಗಿಯೂ ಇರುವುದಿಲ್ಲ. ಪ್ರಪಂಚದಲ್ಲೆಲ್ಲಾ ಅಜ್ಞಾನಾಂಧಕಾರವು ಆವರಿಸಿರುತ್ತದೆ.

**ಪರಮಾಯುಶ್ಚ ಭವಿತಾ ತದಾ ವರ್ಷಾಣಿ ಷೋಡಶ ।**
**ತತಃ ಪ್ರಾಣಾನ್ವಿಮೋಕ್ಷ್ಯನ್ತಿ ಯುಗಾನ್ತೇ ಸಮುಪಸ್ಥಿತೇ ॥೪೮॥**

ಕಲಿಯುಗದ ಅಂತ್ಯದಲ್ಲಿ ಮನುಷ್ಯನ ಆಯುಃಪ್ರಮಾಣವು ಹದಿನಾರು ವರ್ಷಗಳು ಮಾತ್ರ. ಹದಿನಾರು ವರ್ಷಗಳು ತುಂಬಿದೊಡನೆಯೇ ಮಾನವರು ಪ್ರಾಣಗಳನ್ನು ತ್ಯಜಿಸುತ್ತಾರೆ.

**ಪಞ್ಚಮೇ ವಾಥ ಷಷ್ಠೇ ವಾ ವರ್ಷೇ ಕನ್ಯಾ ಪ್ರಸೂಯತೇ ।**
**ಸಪ್ತವರ್ಷಾಷ್ಟವರ್ಷಾಶ್ಚ ಪ್ರಜಾಸ್ಯನ್ತಿ ನರಾಸ್ತದಾ ॥೪೯॥**

ಐದು ಅಥವಾ ಆರು ವರ್ಷದ ಹೆಣ್ಣುಮಕ್ಕಳು ಪ್ರಸವಿಸುತ್ತಾರೆ. ಏಳು ಅಥವಾ ಎಂಟು ವರ್ಷದ ಹುಡುಗರು ತಂದೆಗಳಾಗುತ್ತಾರೆ.

**ಪತ್ನೌ ಸ್ತ್ರೀ ತು ತದಾ ರಾಜನ್ಪುರುಷೋ ವಾ ಸ್ತ್ರಿಯಂ ಪ್ರತಿ ।**
**ಯುಗಾನ್ತೇ ರಾಜಶಾರ್ದೂಲ ನ ತೋಷಮುಪಯಾಸ್ಯತಿ ॥೫೦॥**

ಯುಗಾಂತ್ಯದಲ್ಲಿ ಪುರುಷರು ತಮ್ಮ ಸ್ತ್ರೀಯರಿಂದಾಗಲೀ–ಸ್ತ್ರೀಯರು ತಮ್ಮ ಪುರುಷರಿಂದಾಗಲೀ ತೃಪ್ತಿಯನ್ನು ಹೊಂದುವುದಿಲ್ಲ.

**ಅಲ್ಪದ್ರವ್ಯಾ ವೃಥಾಲಿಙ್ಗಾ ಹಿಂಸಾ ಚ ಪ್ರಭವಿಷ್ಯತಿ ।**
**ನ ಕಶ್ಚಿತ್ಕಸ್ಯಚಿದ್ದಾತಾ ಭವಿಷ್ಯತಿ ಯುಗಕ್ಷಯೇ ॥೫೧॥**

ಜನರು ಅತುಲೈಶ್ವರ್ಯವಂತರಾಗುತ್ತಾರೆ. ಧರ್ಮಕ್ರಿಯೆಗಳು ಬಾಹ್ಯಾಡಂಬರಗಳಿಂದ ಮಾತ್ರವೇ ಕೂಡಿರುತ್ತವೆ. ಜನಗಳು ಕೇವಲ ತೋರಿಕೆಗಾಗಿ ಧರ್ಮದ ಲಾಂಛನಗಳನ್ನು ಧರಿಸಿರುತ್ತಾರೆ. ದೇಶದಲ್ಲೆಲ್ಲಾ ಹಿಂಸೆ, ದುರಾಚಾರಗಳು ತಾಂಡವಾಡುತ್ತಿರುತ್ತವೆ. ದಾನ-ಪ್ರತಿಗ್ರಹಗಳೆಂಬ ಕ್ರಿಯೆಯೇ ಸಂಪೂರ್ಣವಾಗಿ ಲುಪ್ತವಾಗಿ ಹೋಗುತ್ತದೆ. ಪ್ರತಿಯೊಬ್ಬನೂ ಮೋಸದಿಂದಾಗಲೀ ಹಿಂಸೆಯಿಂದಾಗಲೀ ಮತ್ತೊಬ್ಬರ ಆಸ್ತಿಯನ್ನೂ, ಐಶ್ವರ್ಯವನ್ನೂ ಅಪಹರಿಸಬೇಕೆಂಬ ದುರಾಲೋಚನೆಯಿಂದ ಇರುವನೇ ಹೊರತು ತನ್ನ ಆಸ್ತಿಯಲ್ಲಿ ತಾನು ಸಂಪಾದಿಸಿದ ಹಣದಲ್ಲಿ ಸ್ವಲ್ಪವನ್ನಾದರೂ ದಾನ ಮಾಡಬೇಕೆಂಬ ಮನೋಭಾವನೆಯನು ಯಾವೊಬ್ಬನೂ ಹೊಂದಿರುವುದಿಲ್ಲ.

**ಅಟ್ಟಶೂಲಾ ಜನಪದಾಃ ಶಿವಶೂಲಾಶ್ಚ ತುಷ್ಪಥಾಃ ।**
**ಕೇಶಶೂಲಾಃ ಸ್ತ್ರಿಯಶ್ಚಾಪಿ ಭವಿಷ್ಯನ್ತಿ ಯುಗಕ್ಷಯೇ ॥೫೨॥**

ಜನನಿಬಿಡವಿರುವ ಪ್ರದೇಶಗಳಲ್ಲಿ ವೀರಕ್ಷಾಮವು ಸಂಭವಿಸುತ್ತದೆ. ಜನಗಳು ಅನ್ನವನ್ನು ಮಾರುತ್ತಾರೆ. ಆ ಯುಗದಲ್ಲಿ ವೇದವಿಕ್ರಯವು ನಡೆಯುತ್ತದೆ. ಸ್ತ್ರೀಯರೂ ಧನದಾಸೆಯಿಂದ ತಮ್ಮ ಶರೀರವನ್ನೇ ವಿಕ್ರಯಿಸಿಕೊಳ್ಳುತ್ತಾರೆ.

**ಮ್ಲೇಚ್ಛಾಚಾರಾಃ ಸರ್ವಭಕ್ಷ್ಯಾ ದಾರುಣಾಃ ಸರ್ವಕರ್ಮಸು ।**
**ಭಾವಿನಃ ಪಶ್ಚಿಮೇ ಕಾಲೇ ಮನುಷ್ಯಾ ನಾತ್ರ ಸಂಶಯಃ ॥೫೩॥**

**ಕ್ರಯವಿಕ್ರಯಕಾಲೇ ಚ ಸರ್ವಃ ಸರ್ವಸ್ಯ ವಞ್ಚನಮ್ ।**
**ಯುಗಾನ್ತೇ ಭರತಶ್ರೇಷ್ಠ ವಿತ್ತಲೋಭಾತ್ಕರಿಷ್ಯತಿ ॥೫೪॥**

ಆಗಿನ ಜನರು ಭೋಜನೋಪಾಹಾರಗಳಲ್ಲಿಯೂ ಮ್ಲೇಚ್ಛರ ಅನುಕರಣೆಯನ್ನೇ ಮಾಡುತ್ತಾರೆ. ದೋಷಯುಕ್ತವಾದ ಭೋಜನಮಾಡುವುದು ಮತ್ತು ದೋಷಯುಕ್ತವಾದ ದೃಶ್ಯಗಳನ್ನು ನೋಡುವುದು–ಇತ್ಯಾದಿಗಳಿಂದಾಗಿ ಅವರಿಗೆ ಸಹನೆಯೆಂಬುದೇ ಇರುವುದಿಲ್ಲ. ಸರ್ವದಾ ತಾಮಸಗುಣಪರಿಪೂರ್ಣರಾಗಿ, ಕುಪಿತರಾಗಿ ಭಯಂಕರರಾಗಿರುತ್ತಾರೆ. ಆಗಿನ ಕಾಲದಲ್ಲಿ ಕ್ರಯ-ವಿಕ್ರಯಾದಿಗಳೂ ಮೋಸದಿಂದಲೇ ಕೂಡಿರುತ್ತವೆ. ವಂಚನೆ ಮಾಡಿ ಹೆಚ್ಚು ದ್ರವ್ಯವನ್ನು ಸಂಪಾದನೆಮಾಡಲು ಜನರು ಪ್ರಯತ್ನಿಸುತ್ತಾರೆ.

**ಜ್ಞಾನಾನಿ ಚಾಪ್ಯವಿಜ್ಞಾಯ ಕರಿಷ್ಯನ್ತಿ ಕ್ರಿಯಾಸ್ತಥಾ ।**
**ಆತ್ಮಚ್ಛನ್ದೇನ ವರ್ತನ್ತೇ ಯುಗಾನ್ತೇ ಸಮುಪಸ್ಥಿತೇ ॥೫೫॥**

ವೇದ-ಶಾಸ್ತ್ರಗಳ ತಿಳಿವಳಿಕೆಯು ಸ್ವಲ್ಪವಾದರೂ ಇರದಿದ್ದರೂ–ವೇದವಿದರ ವೇಷ-ಭೂಷಣಾದಿಗಳನ್ನು ಧರಿಸಿ ಮಹಾಪಂಡಿತರಂತೆಯೇ ತೋರ್ಪಡಿಸಿಕೊಳ್ಳುತ್ತಾ, ಶ್ರುತಿ-ಸ್ಮೃತ್ಯುಕ್ತವಾದ ಕರ್ಮಗಳನ್ನು ತಮಗೆ ತೋರಿದ ರೀತಿಯಲ್ಲಿ ಮಾಡಿಸುತ್ತಾರೆ ಅಥವಾ ಮಾಡುತ್ತಾರೆ.

**ಸ್ವಭಾವಾತೂ ರಕರ್ಮಾಣಶ್ಚಾನ್ಯೋನ್ಯಮಭಿಶಂಸಿನಃ ।**
**ಭವಿತಾರೋ ಜನಾಃ ಸರ್ವೇ ಸಮ್ಪ್ರಾಪ್ತೇ ತು ಯುಗಕ್ಷಯೇ ॥೫೬॥**

ಯುಗಾಂತ್ಯದಲ್ಲಿ ಜನರು ಬಹಳ ಕ್ರೂರಿಗಳಾಗಿಯೂ, ಕಠಿನವಾದ ಮಾತುಳ್ಳವರಾಗಿಯೂ ಇದ್ದು ಅನ್ಯರ ನಿಂದೆಯಲ್ಲಿಯೇ ಸದಾ ಕಾಲಕಳೆಯುತ್ತಿರುತ್ತಾರೆ.

**ಆರಾಮಾಂಶ್ಚೈವ ವೃಕ್ಷಾಂಶ್ಚ ನಾಶಯಿಷ್ಯನ್ತಿ ನಿರ್ವ್ಯಥಾಃ ।**
**ಭವಿತಾ ಸಂಶಯೋ ಲೋಕೇ ಜೀವಿತಸ್ಯ ಹಿ ದೇಹಿನಾಮ್ ॥೫೮॥**

ಸ್ವಲ್ಪವಾದರೂ ಅಳುಕದೇ ಮಾನವರು ತಮ್ಮ ಸ್ವಾರ್ಥಕ್ಕಾಗಿ ಫಲ-ಪುಷ್ಪಭರಿತವಾದ ವೃಕ್ಷಗಳನ್ನೂ, ಉದ್ಯಾನವನಗಳನ್ನೂ ಧ್ವಂಸಮಾಡುತ್ತಾರೆ. ಅಂತಹ ದುಷ್ಟಕಾಲದಲ್ಲಿ ತಮ್ಮ ಜೀವಿಕೆಗೆ ಏನು ಮಾಡಬೇಕೆಂಬ ಸಂಶಯವು ಜನರಿಗೆ ಮೂಡುತ್ತದೆ. (ಜನರಿಗೆ ಪ್ರಾಣಸಂಶಯವುಂಟಾಗುತ್ತದೆ.)

**ತಥಾ ಲೋಭಾಭಿಭೂತಾಶ್ಚ ಭವಿಷ್ಯನ್ತಿ ನರಾ ನೃಪ ।**
**ಬ್ರಾಹ್ಮಣಾಂಶ್ಚ ಹನಿಷ್ಯನ್ತಿ ಬ್ರಾಹ್ಮಣಸ್ವೋಪಭೋಗಿನಃ ॥೫೮॥**

ಬ್ರಾಹ್ಮಣರನ್ನು ಕೊಲೆಮಾಡುವುದಾಗಲೀ, ಅವರ ವಿತ್ತವನ್ನು ಅಪಹರಿಸುವುದಾಗಲೀ ಆಗಿನ ಕಾಲದಲ್ಲಿ ಪಾಪವೆಂದೇ ಪರಿಗಣಿಸಲ್ಪಡುವುದಿಲ್ಲ. ಯಾವ ವಿಧವಾದ ಪಾಪಭೀತಿಯೂ ಇಲ್ಲದೇ ಬ್ರಹ್ಮಹತ್ಯೆಯನ್ನು ಮಾಡುತ್ತಾರೆ ಮತ್ತು ಬ್ರಾಹ್ಮಣರ ಸ್ವತ್ತನ್ನು ಅಪಹರಿಸುತ್ತಾರೆ.

**ಹಾಹಾಕೃತಾ ದ್ವಿಜಾಶ್ಚೈವ ಭಯಾರ್ತಾ ವೃಷಲಾರ್ದಿತಾಃ ।**
**ತ್ರಾತಾರಮಲಭನ್ತೋ ವೈ ಭ್ರಮಿಷ್ಯನ್ತಿ ಮಹೀಮಿಮಾಮ್ ॥೫೯॥**

ಶೂದ್ರರಿಂದ ಪೀಡಿಸಲ್ಪಟ್ಟು ಭಯಾರ್ತರಾದ ದ್ವಿಜರು ಹಾಹಾಕಾರ ಮಾಡುತ್ತಾ, ರಕ್ಷಣೆಗಾಗಿ ಅಲೆದಾಡುತ್ತಿದ್ದರೂ ರಕ್ಷಕರನ್ನು ಕಾಣದೇ ಊರಿಂದೂರಿಗೆ–ದೇಶದಿಂದ ದೇಶಕ್ಕೆ ಅಲೆದಾಡುತ್ತಲೇ ಇರುತ್ತಾರೆ.

**ಜೀವಿತಾನ್ತಕರಾಃ ಕ್ರೂರಾ ರೌದ್ರಾಃ ಪ್ರಾಣಿವಿಹಿಂಸಕಾಃ ।**
**ಯದಾ ಭವಿಷ್ಯನ್ತಿ ನರಾಸ್ತದಾ ಸಂಕ್ಷೇಪ್ಸ್ಯತೇ ಯುಗಮ್ ॥೬೦॥**

ಇದೇ ರೀತಿಯಲ್ಲಿ ಮಾನವರು ಪರಸ್ಪರ ಹನನಕಾರ್ಯವನ್ನಾರಂಭಿಸಿದಾಗ, ಜನರು ಬಹುಕ್ರೂರಿಗಳಾದಾಗ, ಪ್ರಾಣಿಹಿಂಸಕರಾದಾಗ–ಕಲಿಯುಗವು ಮುಗಿಯುತ್ತದೆ.

**ಆಶ್ರಯಿಷ್ಯನ್ತಿ ಚ ನದೀಃ ಪರ್ವತಾನ್ವಿಷಮಾಣಿ ಚ ।**
**ಪ್ರಧಾರಮಾನಾ ವಿತ್ರಸ್ತಾ ದ್ವಿಜಾಃ ಕುರುಕುಲೋದ್ವಹ ॥೬೧॥**

**ದಸ್ಯುಭಿಃ ಪೀಡಿತಾ ರಾಜನ್ಕಾಕಾ ಇವ ದ್ವಿಜೋತ್ತಮಾಃ ।**
**ಕುರಾಜಭಿಶ್ಚ ಸತತಂ ಕರಭಾರಪ್ರಪೀಡಿತಾಃ ॥೬೨॥**

**ಧೈರ್ಯಂ ತ್ಯಕ್ತ್ವಾ ಮಹೀಪಾಲ ದಾರುಣೇ ಯುಗಸಂಕ್ಷಯೇ ।**
**ವಿಕರ್ಮಾಣಿ ಕರಿಷ್ಯನ್ತಿ ಶೂದ್ರಾಣಾಂ ಪರಿಚಾರಕಾಃ ॥೬೩॥**

ಅಂತಹ ದುಷ್ಕಾಲದಲ್ಲಿಯೂ ಸತ್ಪುರುಷರಾಗಿಯೇ ಉಳಿದಿರುವ ಕೆಲವೇ ಮಂದಿ ಸದಾಚಾರಸಂಪನ್ನರು–ಕೊಲೆಪಾತಕರಿಂದ ತಪ್ಪಿಸಿಕೊಳ್ಳುವ ಸಲುವಾಗಿ ನದಿಗಳ ಕಡೆಗೆ, ಪರ್ವತಗಳ ಕಡೆಗೆ, ಅತಿಗಹನವಾಗಿರುವ ಕಾಡುಗಳ ಕಡೆಗೆ-ಕಾಗೆಗಳಂತೆ ಪರದಾಡುತ್ತಾ (ಅರಚಿಕೊಳ್ಳುತ್ತಾ) ಓಡಿಹೋಗುತ್ತಾರೆ. ದುಷ್ಟರಾಜರು (ಸರ್ಕಾರದವರು) ಹೇರುವ ತೆರಿಗೆಯನ್ನು ಕೊಡಲಾಗದೇ ಅನೇಕರು ಬಹುಭೀತರಾಗಿ ತಮ್ಮ ದೇಶವನ್ನೇ ಬಿಟ್ಟು ಓಡಿಹೋಗಿ ಕೇವಲ ಹೊಟ್ಟೆಹೊರೆಯುವ ಸಲುವಾಗಿಯೇ ಶೂದ್ರಜನರ ಸೇವೆಯನ್ನು ಮಾಡುತ್ತಿರುತ್ತಾರೆ.

**ಶೂದ್ರಾ ಧರ್ಮಂ ಪ್ರವಕ್ಷ್ಯನ್ತಿ ಬ್ರಾಹ್ಮಣಾಃ ಪರ್ಯುಪಾಸಕಾಃ ।**
**ಶ್ರೋತಾರಶ್ಚ ಭವಿಷ್ಯನ್ತಿ ಪ್ರಾಮಾಣ್ಯೇನ ವ್ಯವಸ್ಥಿತಾಃ ॥೬೪॥**

ಯುಧಿಷ್ಠಿರ! ಕಲಿಯುಗದಲ್ಲಿ ಶೂದ್ರರೂ ಧರ್ಮೋಪನ್ಯಾಸವನ್ನಾರಂಭಿಸುತ್ತಾರೆ. ಬ್ರಾಹ್ಮಣರು ಆ ಉಪನ್ಯಾಸಗಳಿಗೆ ಹೋಗಿ ಭಕ್ತಿ-ಶ್ರದ್ಧೆಗಳಿಂದ ಕೇಳಿ ಅವರ ಉಪದೇಶದಂತೆ ನಡೆಯಲು ಯತ್ನಿಸುತ್ತಾರೆ. ಶೂದ್ರ ಗುರುಗಳು ಹೇಳುವ ವಾಕ್ಯಗಳೇ ಪ್ರಮಾಣಿತವಾಗಿ ಪಾಲಿಸಲ್ಪಡುತ್ತವೆ.

**ವಿಪರೀತಶ್ಚ ಲೋಕೋಽಯಂ ಭವಿಷ್ಯತ್ಯಧರೋತ್ತರಃ ।**
**ಏಡೂಕಾನ್ಪೂಜಯಿಷ್ಯನ್ತಿ ವರ್ಜಯಿಷ್ಯನ್ತಿ ದೇವತಾಃ ॥೬೫॥**

ಕೆಳಗಿನವರು ಮೇಲೆ ಹೋಗುತ್ತಾರೆ; ಮೇಲಿನವರು ಪತಿತರಾಗುತ್ತಾರೆ. ಸಾತ್ತ್ವಿಕದೇವತಾರಾಧನೆಗಳು ಕಡಿಮೆಯಾಗುತ್ತಾ ಹೋಗುತ್ತವೆ. ಜನರು

ಮನುಷ್ಯರ ಮೂಳೆಗಳನ್ನೂ, ಗೋರಿಗಳನ್ನೂ, ಸಮಾಧಿಗಳನ್ನೂ, ಮೂಳೆಗಳಿಂದ ಕೂಡಿರುವ ಗೋಡೆಗಳನ್ನೂ ಶ್ರದ್ಧೆಯಿಂದ ಪೂಜಿಸಲು ಮೊದಲು ಮಾಡುತ್ತಾರೆ.

**ಶೂದ್ರಾಃ ಪರಿಚರಿಷ್ಯನ್ತಿ ನ ದ್ವಿಜಾನ್ಯುಗಸಂಕ್ಷಯೇ ।**

ಕಲಿಯುಗದ ಅಂತ್ಯದಲ್ಲಿ ಶೂದ್ರರು ಬ್ರಾಹ್ಮಣರ ಸೇವೆಯನ್ನು ಮಾಡುವುದಿಲ್ಲ.

**ಆಶ್ರಮೇಷು ಮಹರ್ಷೀಣಾಂ ಬ್ರಾಹ್ಮಣಾವಸಥೇಷು ಚ ॥೬೬॥**
**ದೇವಸ್ಥಾನೇಷು ಚೈತ್ಯೇಷು ನಾಗಾನಾಮಾಲಯೇಷು ಚ ।**
**ಏಡೂಕಚಿಹ್ನಾ ಪೃಥಿವೀ ನ ದೇವಗೃಹಭೂಷಿತಾ ।**
**ಭವಿಷ್ಯತಿ ಯುಗೇ ಕ್ಷೀಣೇ ತದ್ಯುಗಾನ್ತಸ್ಯ ಲಕ್ಷಣಮ್ ॥೬೭॥**

ಋಷ್ಯಾಶ್ರಮಗಳಲ್ಲಿ, ಪಾಠಶಾಲೆಗಳಲ್ಲಿ, ಬ್ರಾಹ್ಮಣರಿರುವ ಕೇರಿಗಳಲ್ಲಿ, ದೇವಸ್ಥಾನಗಳ ಸಮೀಪದಲ್ಲಿ, ಉದ್ಯಾನವನಗಳಲ್ಲಿ–ಭೂಮಿಯು ಗೋರಿಗಳಿಂದ ತುಂಬಿಹೋಗಿರುತ್ತದೆ. ದೇವತೆಗಳಿಗೆ ಮೀಸಲಾದ ದೇವಾಲಯಗಳು ನಿರ್ನಾಮವಾಗುತ್ತವೆ. ಯುಧಿಷ್ಠಿರ! ಹೀಗೆಲ್ಲವೂ ಪರಿವರ್ತನೆಯಾಗುವುದೇ ಯುಗದ ಅಂತ್ಯವು ಸಮೀಪಿಸಿತೆಂಬುದಕ್ಕೆ ಚಿಹ್ನೆಗಳು.

**ಯದಾ ರೌದ್ರಾ ಧರ್ಮಹೀನಾ ಮಾಂಸಾದಾಃ ಪಾನಪಾಸ್ತಥಾ ।**
**ಭವಿಷ್ಯನ್ತಿ ನರಾ ನಿತ್ಯಂ ತದಾ ಸಂಕ್ಷೇಪ್ಸ್ಯತೇ ಯುಗಮ್ ॥೬೮॥**

ಧರ್ಮಜ! ಮನುಷ್ಯರು ಯಾವಾಗ ಭಯಂಕರವಾಗಿ ಹಿಂಸ್ರಪ್ರಾಣಿಗಳಿಗಿಂತಲೂ ಕೀಳಾಗಿ ವರ್ತಿಸುತ್ತಾರೆಯೋ, ಧರ್ಮವು ಲೇಶಮಾತ್ರವೂ ಅವರಲ್ಲಿರುವುದಿಲ್ಲವೋ ಮತ್ತು ಯಾವಾಗಲೂ ಮಾನವರು ಮಾಂಸ-ಮದಿರಾ-ವನಿತೆಯರಲ್ಲಿಯೇ ಆಸಕ್ತರಾಗಿರುತ್ತಾರೆಯೋ–ಅಂದಿಗೆ ಕಲಿಯುಗದ ಅಂತ್ಯವಾಗುತ್ತದೆ.

**ಪುಷ್ಪಂ ಪುಷ್ಪೇ ಯದಾ ರಾಜನ್ಫಲೇ ವಾ ಫಲಮಾಶ್ರಿತಮ್ ॥೬೯॥**
**ಪ್ರಜಾಸ್ಯತಿ ಮಹಾರಾಜ ತದಾ ಸಂಕ್ಷೇಪ್ಸ್ಯತೇ ಯುಗಮ್ ।**
**ಅಕಾಲವರ್ಷೀ ಪರ್ಜನ್ಯೋ ಭವಿಷ್ಯತಿ ಗತೇ ಯುಗೇ ॥೭೦॥**

ಹೂವಿನಲ್ಲಿ ಹೂವು ಹುಟ್ಟುವುದೂ, ಹಣ್ಣಿನಲ್ಲಿ ಮತ್ತೊಂದು ಹಣ್ಣು

ಹುಟ್ಟುವುದೂ ಯುಗಾಂತ್ಯದ ಕುರುಹು. ಕಲಿಯುಗದ ಕಡೆಯಲ್ಲಿ ಪರ್ಜನ್ಯನು ಮಳೆಗರೆಯಲು ಪ್ರಾರಂಭಿಸಿದರೆ ಅನೇಕ ತಿಂಗಳವರೆಗೆ ನಿರಂತರವಾಗಿ ಸುರಿಸುತ್ತಲೇ ಇರುತ್ತಾನೆ. ಮಳೆಯು ನಿಂತುಹೋದರೆ ಅನೇಕವರ್ಷ ಗಳವರೆಗೆ ಪುನಃ ಮಳೆಯೇ ಬರುವುದಿಲ್ಲ.

**ಅಕ್ರಮೇಣ ಮನುಷ್ಯಾಣಾಂ ಭವಿಷ್ಯನ್ತಿ ತದಾ ಕ್ರಿಯಾಃ ।**
**ವಿರೋಧಮಥ ಯಾಸ್ಯನ್ತಿ ವೃಷಲಾ ಬ್ರಾಹ್ಮಣೈಃ ಸಹ ॥೭೧॥**

ನಿತ್ಯ-ನೈಮಿತ್ತಿಕಕರ್ಮಗಳಾಗಲೀ, ವ್ಯಾವಹಾರಿಕಕ್ರಿಯೆಗಳಾಗಲೀ ವ್ಯವಸ್ಥಿತವಾಗಿ ನಡೆಯುವುದಿಲ್ಲ. ಶೂದ್ರರು ಯಾವಾಗಲೂ ಬ್ರಾಹ್ಮಣರಿಗೆ ವಿರೋಧಿಗಳಾಗಿಯೇ ಇರುತ್ತಾರೆ.

**ಮಹೀ ಮ್ಲೇಚ್ಛಜನಾಕೀರ್ಣಾ ಭವಿಷ್ಯತಿ ತತೋಽಚಿರಾತ್ ।**
**ಕರಭಾರಭಯಾದ್ವಿಪ್ರಾ ಭಜಿಷ್ಯನ್ತಿ ದಿಶೋ ದಶ ॥೭೨॥**

ಪ್ರಪಂಚವೆಲ್ಲವೂ ಮ್ಲೇಚ್ಛಮಯವಾಗುತ್ತದೆ. ತೆರಿಗೆಗಳನ್ನು ಕೊಡ ಲಾಗದೇ ಅನೇಕಬ್ರಾಹ್ಮಣರು ದಶದಿಕ್ಕುಗಳಲ್ಲಿಯೂ ಪರಿಭ್ರಮಿಸುತ್ತಿರು ತ್ತಾರೆ.

**ನಿರ್ವಿಶೇಷಾ ಜನಪದಾಸ್ತಥಾ ವಿಷ್ಟಿಕರಾರ್ದಿತಾಃ ।**
**ಆಶ್ರಮಾನುಪಲಪ್ಸ್ಯನ್ತಿ ಫಲಮೂಲೋಪಜೀವಿನಃ ॥೭೩॥**

ಧಾರ್ಮಿಕರು, ಅಧಾರ್ಮಿಕರು–ಎಂಬ ಭೇದವಾಗಲೀ, ವರ್ಣಾಶ್ರಮ ಗಳಾಗಲೀ–ಯಾವುದೂ ಉಳಿಯುವುದಿಲ್ಲ. ಪ್ರಪಂಚವೆಲ್ಲವೂ ಅಧಾರ್ಮಿಕ ರಿಂದಲೇ ತುಂಬಿಹೋಗಿರುತ್ತದೆ. ಚಾತುರ್ವರ್ಣ್ಯದವರೂ ಆಹಾರ-ನಿದ್ರಾ-ಮೈಥುನಗಳಲ್ಲಿಯೇ ಆಸಕ್ತರಾಗಿರುತ್ತಾರೆ. ತೆರಿಗೆಯನ್ನು ಕೊಡಲಾರದೇ ಅನೇಕರು ಕಾಡಿಗೆ ಓಡಿಹೋಗಿ ಅಲ್ಲಿ ಕಂದ-ಮೂಲಾದಿಗಳನ್ನು ತಿನ್ನುತ್ತಾ ಜೀವಿಸುತ್ತಾರೆ.

**ಏವಂ ಪರ್ಯಾಕುಲೇ ಲೋಕೇ ಮರ್ಯಾದಾ ನ ಭವಿಷ್ಯತಿ ।**
**ನ ಸ್ಥಾಸ್ಯನ್ತ್ಯುಪದೇಶೇ ಚ ಶಿಷ್ಯಾ ವಿಪ್ರಿಯಕಾರಿಣಃ ॥೭೪॥**

**ಆಚಾರ್ಯೋಪನಿಧಿಶ್ಚೈವ ಭರ್ತ್ಸ್ಯತೇ ತದನನ್ತರಮ್ ।**
**ಅರ್ಥಯುಕ್ತ್ಯಾ ಪ್ರವರ್ತ್ಸ್ಯನ್ತಿ ಮಿತ್ರಸಮ್ಬನ್ಧಿಬಾನ್ಧವಾಃ ॥೭೫॥**

ಅಂತಹ ಅಸ್ತವ್ಯಸ್ತವಾದ ಸನ್ನಿವೇಶದಲ್ಲಿ ಮಾನ-ಮರ್ಯಾದೆ ಎಂಬ ಪದಗಳೇ ಎಷ್ಟೋ ಜನರಿಗೆ ತಿಳಿದಿರುವುದಿಲ್ಲ. ವಿದ್ಯಾರ್ಥಿಗಳು ಉಪಾಧ್ಯಾಯರಿಂದ ಪಾಠಕಲಿಯಲು ಶಾಲೆಗಳಿಗೆ ಹೋಗುವುದಿಲ್ಲ. ಅವರ ಉಪದೇಶಗಳನ್ನೆಲ್ಲಾ ಅಲ್ಲಗಳೆಯುತ್ತಾರೆ. ಎಷ್ಟೋ ಸಮಯಗಳಲ್ಲಿ ವಿದ್ಯಾರ್ಥಿಗಳು ಉಪಾಧ್ಯಾಯರನ್ನು ಥಳಿಸುವುದೂ ಉಂಟು. ಬಡವರಾದ ಉಪಾಧ್ಯಾ ಯರು ಜನರ ಅನಾದರಣೆಗೂ ಪಾತ್ರರಾಗುತ್ತಾರೆ. ಸ್ನೇಹ, ಬಾಂಧವ್ಯ-ಮುಂತಾದುವುಗಳೆಲ್ಲವೂ ಕೇವಲ ಐಶ್ವರ್ಯವನ್ನೇ ಅವಲಂಬಿಸಿರುತ್ತವೆ. ಐಶ್ವರ್ಯವೊಂದಿದ್ದರೆ ಅವನಿಗೆ ಅನೇಕರು ಗೆಳೆಯರಾಗುತ್ತಾರೆ. ದೂರದ ಸಂಬಂಧಿಗಳೂ ತಮ್ಮ ಸಂಬಂಧವನ್ನು ಬಹಳ ಹತ್ತಿರಮಾಡಿಕೊಂಡು ಧನಿಕರ ಆಶ್ರಯವನ್ನು ಪಡೆಯುತ್ತಾರೆ.

**ಅಭಾವಃ ಸರ್ವಭೂತಾನಾಂ ಯುಗಾನ್ತೇ ಸಮ್ಭವಿಷ್ಯತಿ ।**
**ದಿಶಃ ಪ್ರಜ್ವಲಿತಾಃ ಸರ್ವಾ ನಕ್ಷತ್ರಾಣ್ಯಪ್ರಭಾಣಿ ಚ ॥೭೬॥**

**ಜ್ಯೋತೀಂಷಿ ಪ್ರತಿಕೂಲಾನಿ ವಾತಾಃ ಪರ್ಯಾಕುಲಾಸ್ತಥಾ ।**
**ಉಲ್ಕಾಪಾತಾಶ್ಚ ಬಹವೋ ಮಹಾಭಯನಿದರ್ಶಕಾಃ ॥೭೭॥**

ಯುಗವು ಕಳೆಯುತ್ತಿದ್ದಂತೆಲ್ಲಾ ಸರ್ವತ್ರ ಅಭಾವವು ತಲೆದೋರುತ್ತದೆ. ನಾಲ್ಕು ದಿಕ್ಕುಗಳಲ್ಲಿಯೂ ಅಗ್ನಿಯು ಕಾಣಿಸಿಕೊಳ್ಳುತ್ತದೆ. ನಕ್ಷತ್ರಗಳಲ್ಲಿ ಕಾಂತಿಯೇ ಇರುವುದಿಲ್ಲ. ಗ್ರಹಗಳೆಲ್ಲವೂ ಪ್ರತಿಕೂಲವಾಗಿರುತ್ತವೆ. ಚಂಡಮಾರುತವು ಯದ್ವಾ-ತದ್ವಾ ಬೀಸುತ್ತಿರುತ್ತದೆ. ಮಹಾಭಯಸೂಚಕಗಳಾದ ಉಲ್ಕಾಪಾತಗಳಾಗುತ್ತವೆ.

**ಷಡ್ಭಿರನ್ಯೈಶ್ಚ ಸಹಿತೋ ಭಾಸ್ಕರಃ ಪ್ರತಪಿಷ್ಯತಿ ।**
**ತುಮುಲಾಶ್ಚಾಪಿ ನಿರ್ಹ್ರಾದಾ ದಿಗ್ದಾಹಾಶ್ಚಾಪಿ ಸರ್ವಶಃ ॥೭೮॥**

ಸೂರ್ಯನು ಉಳಿದ ಆರು ಮಂದಿ ಸೂರ್ಯರೊಡನೆಯೂ ಸೇರಿ ಪ್ರಪಂಚವನ್ನೇ ದಹಿಸಲು ಆರಂಭಿಸುತ್ತಾನೆ. ಸಪ್ತಸೂರ್ಯರ ಅಪಾರವಾದ ಶಾಖದಿಂದಾಗಿ ಪ್ರಪಂಚದ ಎಲ್ಲೆಡೆಗಳಲ್ಲಿಯೂ ಬೆಂಕಿಯು ತಾನೇ ತಾನಾಗಿ ಹೊತ್ತಿಕೊಳ್ಳುತ್ತದೆ. ದಾರುಣವಾದ ಮತ್ತು ಸಿಡಿಲಿನಂತೆ ಘೋರವಾದ ಶಬ್ದವು ಸುತ್ತಲೂ ಕೇಳಿಬರುತ್ತಿರುತ್ತದೆ.

**ಕಬನ್ಧಾನ್ತರ್ಹಿತೋ ಭಾನುರುದಯಾಸ್ತಮನೇ ತದಾ ।**
**ಅಕಾಲವರ್ಷೀ ಭಗವಾನ್ಭವಿಷ್ಯತಿ ಸಹಸ್ರದೃಕ್ ॥೭೯॥**

ಅಂತಹ ಸಮಯದಲ್ಲಿ ಸೂರ್ಯಗ್ರಹಣವಾದರೆ ಸೂರ್ಯನು ಹುಟ್ಟಿದಾಗಿನಿಂದ ಮುಳುಗುವವರೆಗೂ ರಾಹುವು ಸೂರ್ಯನನ್ನು ನುಂಗಿರುತ್ತಾನೆ. (ದೀರ್ಘಕಾಲದ ಸೂರ್ಯಗ್ರಹವಾಗುತ್ತದೆ.) ಸಹಸ್ರಾಕ್ಷನಾದ ದೇವೇಂದ್ರನು ಅಕಾಲದಲ್ಲಿ ಮಳೆಗರೆಯುತ್ತಾನೆ.

**ಸಸ್ಯಾನಿ ಚ ನ ರೋಕ್ಷ್ಯನ್ತಿ ಯುಗಾನ್ತೇ ಪರ್ಯುಪಸ್ಥಿತೇ ।**
**ಅಭೀಕ್ಷ್ಣಂ ಕ್ರೂರವಾದಿನ್ಯಃ ಪರುಷಾ ರುದಿತಪ್ರಿಯಾಃ ॥೮೦॥**

ಸರಿಯಾಗಿ ಬೆಳೆಗಳಾಗುವುದಿಲ್ಲ. ಸ್ತ್ರೀಯರು ಕಠಿನೋಕ್ತಿಯುಳ್ಳವರಾಗಿಯೂ, ನಿರ್ದಯರಾಗಿಯೂ, ಯಾವಾಗಲೂ ಅಳುವ ಸ್ವಭಾವದವರಾಗಿಯೂ ಇರುತ್ತಾರೆ.

**ಭರ್ತ್ಯಾಣಾಂ ವಚನೇ ಚೈವ ನ ಸ್ಥಾಸ್ಯನ್ತಿ ತತಃ ಸ್ತ್ರಿಯಃ ।**
**ಪುತ್ರಾಶ್ಚ ಮಾತಾಪಿತರೌ ಹನಿಷ್ಯನ್ತಿ ಯುಗಕ್ಷಯೇ ॥೮೧॥**

ಕೈಹಿಡಿದ ಪತಿಯ ಮಾತನ್ನೂ ಆಗಿನ ಕಾಲದ ಸ್ತ್ರೀಯರು ಕೇಳುವುದಿಲ್ಲ. ಮಕ್ಕಳು ತಂದೆ-ತಾಯಿಗಳನ್ನು ಕೊಲ್ಲಲೂ ಹಿಂಜರಿಯುವುದಿಲ್ಲ.

**ಸೂದಯಿಷ್ಯನ್ತಿ ಚ ಪತೀನ್ ಸ್ತ್ರಿಯಃ ಪುತ್ರಾನಪಾಶ್ರಿತಾಃ ।**
**ಅಪರ್ವಣಿ ಮಹಾರಾಜ ಸೂರ್ಯಂ ರಾಹುರುಪೈಷ್ಯತಿ ॥೮೨॥**

ಯಾರೊಬ್ಬರ ಅಂಕೆ-ಶಂಕೆಗಳಿಗೂ ಒಳಪಡದ ಸ್ತ್ರೀಯರು ಅನೇಕ ಸಮಯಗಳಲ್ಲಿ ತಮ್ಮ ಮಕ್ಕಳನ್ನು ಆಶ್ರಯಿಸಿ (ಮಕ್ಕಳೊಡನೆ ಸೇರಿಕೊಂಡು) ಗಂಡಂದಿರನ್ನೂ ಕೊಲೆಮಾಡುತ್ತಾರೆ. ಧರ್ಮಜ! ಕಲಿಯುಗದ ಅಂತ್ಯದಲ್ಲಿ ರಾಹುವು ಸೂರ್ಯನನ್ನು ಅಮಾವಾಸ್ಯೆಯ ದಿನವೇ ಗ್ರಹಣಮಾಡಬೇಕೆಂಬ ನಿಯಮವೂ ತಪ್ಪಿಹೋಗುತ್ತದೆ. ಅಕಾಲದಲ್ಲಿಯೂ ಸೂರ್ಯಗ್ರಹಣವಾಗುತ್ತದೆ.

**ಯುಗಾನ್ತೇ ಹುತಭುಕ್ಚಾಪಿ ಸರ್ವತಃ ಪ್ರಜ್ವಲಿಷ್ಯತಿ ॥೮೩॥**

ಯುಗಾಂತ್ಯದಲ್ಲಿ ಯಜ್ಞೇಶ್ವರನೂ ಸರ್ವತ್ರ ವ್ಯಾಪಿಸಿ ಸಕಲವನ್ನೂ ದಹಿಸುತ್ತಿರುತ್ತಾನೆ.

**ಪಾನೀಯಂ ಭೋಜನಂ ಚಾಪಿ ಯಾಚಮಾನಾಸ್ತದಾಧ್ವಗಾಃ ।**
**ನ ಲಪ್ಸ್ಯನ್ತೇ ನಿವಾಸಂ ಚ ನಿರಸ್ತಾಃ ಪಥಿ ಶೇರತೇ ॥೮೪॥**

ಯಾತ್ರಿಕರಿಗೆ ಹಾದಿಯಲ್ಲಿ ತಂಗಲು ವಿಶ್ರಾಂತಿಗೃಹಗಳಾಗಲೀ, ಊಟ ಮಾಡಲು ಅನ್ನವಾಗಲೀ ಸಿಕ್ಕುವುದಿಲ್ಲ. ಗೃಹಸ್ಥರ ಮನೆಗಳಿಗೆ ಹೋಗಿ ಕೇಳಿದರೂ ಉಳಿಯಲು ಸ್ಥಳವಾಗಲೀ, ಒಂದು ತುತ್ತು ಅನ್ನವಾಗಲೀ, ಕುಡಿಯಲು ಒಂದು ತೊಟ್ಟು ನೀರಾಗಲೀ ಸಿಕ್ಕುವುದಿಲ್ಲ. ನಿರಾಶರಾದ ಯಾತ್ರಿಕರು ದಾರಿಯಲ್ಲಿಯೇ ಮಲಗಿ ನಿದ್ರಿಸಬೇಕಾಗುವುದು.

**ನಿರ್ಘಾತವಾಯಸಾ ನಾಗಾಃ ಶಕುನಾಃ ಸಮೃಗದ್ವಿಜಾಃ ।**
**ರೂಕ್ಷಾವಾಚೋ ವಿಮೋಕ್ಷ್ಯನ್ತಿ ಯುಗಾನ್ತೇ ಪರ್ಯುಪಸ್ಥಿತೇ ॥೮೫॥**

ಕಲಿಯುಗದ ಅಂತ್ಯದಲ್ಲಿ ಕಾಗೆಗಳೂ, ಹಾವುಗಳೂ, ರಣಹದ್ದುಗಳೂ ಮತ್ತು ಇತರ ಪಶು-ಪ್ರಾಣಿ-ಪಕ್ಷಿಗಳೂ ಸಿಡಿಲಿನಂತೆ ಬಹುಭಯಂಕರವಾಗಿ ಧ್ವನಿಮಾಡುತ್ತಿರುತ್ತವೆ.

**ಮಿತ್ರಸಮ್ಬನ್ಧಿನಶ್ಚಾಪಿ ಸಂತ್ಯಕ್ಷ್ಯನ್ತಿ ನರಾಸ್ತದಾ ।**
**ಜನಂ ಪರಿಜನಂ ಚಾಪಿ ಯುಗಾನ್ತೇ ಪರ್ಯುಪಸ್ಥಿತೇ ॥೮೬॥**

**ಅಥ ದೇಶಾನ್ದಿಶಶ್ಚಾಪಿ ಪತ್ತನಾನಿ ಪುರಾಣಿ ಚ ।**
**ಕ್ರಮಶಃ ಸಂಶ್ರಯಿಷ್ಯನ್ತಿ ಯುಗಾನ್ತೇ ಪರ್ಯುಪಸ್ಥಿತೇ ॥೮೭॥**

ಕಲಿಯುಗವು ಮುಗಿಯಲು ಬಂದಾಗ ಮನುಷ್ಯರು ತಮ್ಮ ತಮ್ಮ ಕರ್ತವ್ಯಗಳನ್ನು ಸಂಪೂರ್ಣವಾಗಿ ಮರೆಯುತ್ತಾರೆ. ತಮ್ಮನ್ನೇ ಆಶ್ರಯಿಸಿರುವ ಪುತ್ರ-ಕಳತ್ರರನ್ನೂ, ಬಂಧುಗಳನ್ನೂ, ಮಿತ್ರರನ್ನೂ, ಸ್ನೇಹಿತರನ್ನೂ ವಂಚಿಸಿ ಮನಬಂದೆಡೆಗೆ ಹೊರಟುಹೋಗುತ್ತಾರೆ. ಮನುಷ್ಯರು ತಾವು ಹುಟ್ಟಿದ ಊರು, ಪಟ್ಟಣ, ದೇಶಗಳೆಲ್ಲವನ್ನೂ ತೊರೆದು ಪರದೇಶಗಳಿಗೆ ಹೋಗುತ್ತಾರೆ.

**ಹಾ ತಾತ ಹಾ ಸುತ್ಯೇವಂ ತದಾ ವಾಚಃ ಸುದಾರುಣಾಃ ।**
**ವಿಕ್ರೋಶಮಾನಶ್ಚಾನ್ಯೋನ್ಯಂ ಜನೋ ಗಾಂ ಪರ್ಯಟಿಷ್ಯತಿ ।**
**ತತಸ್ತುಮುಲಸಙ್ಘಾತೇ ವರ್ತಮಾನೇ ಯುಗಕ್ಷಮೇ ॥೮೮॥**

ಪ್ರಳಯಕಾಲವು ಸನ್ನಿಹಿತವಾದಾಗ ಜನರು "ಅಯ್ಯೋ ಮಗನೇ!"

"ಅಯ್ಯೋ ಅಪ್ಪಾ!" ಮುಂತಾಗಿ ಹೇಳಿಕೊಂಡು ದಾರುಣವಾಗಿ ಧ್ವನಿ ಮಾಡುತ್ತಾ ಹೊಟ್ಟೆಗೆ ಅನ್ನವಿಲ್ಲದೇ ಕುಡಿಯಲು ನೀರಿಲ್ಲದೇ ದಿಕ್ಕೆಟ್ಟವರಾಗಿ ಊರೂರು ಅಲೆಯುತ್ತಾರೆ.

ಇಷ್ಟೆಲ್ಲಾ ಅನರ್ಥಗಳಾಗಿ ಯುಗವು ಮುಗಿದು ಪ್ರಳಯವುಂಟಾಗಿ ಲೋಕವೆಲ್ಲಾ ನೀರಿನಿಂದ ತುಂಬಿಹೋಗುತ್ತದೆ. ಅನಂತರದ ಅನುಭವವನ್ನು ಈ ಹಿಂದೆಯೇ ಹೇಳಿರುವೆನಲ್ಲವೇ? ಧರ್ಮಜ! ಆಲದ ಮರದ ನಡುವೆ ಮಲಗಿರುವ ಚಿಕ್ಕಬಾಲಕನ ನಾಭಿಕಮಲದಿಂದ ಚತುರ್ಮುಖನು ಹೊರಟ ನಂತರ ಪುನಃ ಯಥಾಪೂರ್ವಕವಾಗಿ ಸೃಷ್ಟಿಯು ಪ್ರಾರಂಭವಾಗುತ್ತದೆ.

**ದ್ವಿಜಾತಿಪೂರ್ವಕೋ ಲೋಕಃ ಕ್ರಮೇಣ ಪ್ರಭವಿಷ್ಯತಿ ।**
**ತತಃ ಕಾಲಾನ್ತ ರೇಽನ್ಯಸ್ಮಿನ್ಪುನರ್ಲೋಕವಿವೃದ್ಧಯೇ ।**
**ಭವಿಷ್ಯತಿ ಪುನರ್ದೈವಮನುಕೂಲಂ ಯದೃಚ್ಛಯಾ ॥೮೯॥**

ಬ್ರಾಹ್ಮಣರೇ ಮೊದಲಾದ ನಾಲ್ಕು ವರ್ಣಗಳೂ ಅನುಕ್ರಮವಾಗಿ ಪುನಃ ಸೃಷ್ಟಿಯಾಗುತ್ತವೆ. ಸೃಷ್ಟಿಯಾದ ಈ ಜೀವಲೋಕದ ಅಭಿವೃದ್ಧಿಗಾಗಿ ಪುನಃ ದೈವದ ಅನುಕೂಲ್ಯಗಳೆಲ್ಲವೂ ಯಥಾಪೂರ್ವವಾಗಿಯೇ ಸಿದ್ಧವಾಗುತ್ತವೆ.

**ಯದಾ ಸೂರ್ಯಶ್ಚ ಚನ್ದ್ರಶ್ಚ ತಥಾ ತಿಷ್ಯಬೃಹಸ್ಪತೀ ॥೯೦॥**

**ಏಕರಾಶೌ ಸಮೇಷ್ಯನ್ತಿ ಪ್ರಪತ್ಸ್ಯತಿ ತದಾ ಕೃತಮ್ ।**
**ಕಾಲವರ್ಷೀ ಚ ಪರ್ಜನ್ಯೋ ನಕ್ಷತ್ರಾಣಿ ಶುಭಾನಿ ಚ ॥೯೧॥**

**ಪ್ರದಕ್ಷಿಣಾ ಗ್ರಹಾಶ್ಚಾಪಿ ಭವಿಷ್ಯನ್ತ್ಯನುಲೋಮಗಾಃ ।**
**ಕ್ಷೇಮಂ ಸುಭಿಕ್ಷಮಾರೋಗ್ಯಂ ಭವಿಷ್ಯತಿ ನಿರಾಮಯಮ್ ॥೯೨॥**

ಸೂರ್ಯ, ಚಂದ್ರ, ಪುಷ್ಯನಕ್ಷತ್ರಯುಕ್ತನಾದ ಬೃಹಸ್ಪತಿ–ಇವರು ಒಂದೇ ರಾಶಿಯಲ್ಲಿ ಉದಯಿಸುತ್ತಾರೆ. ಅವರು ಉದಯಿಸಿದಾಗಲೇ ಕೃತ ಯುಗವು ಪ್ರಾರಂಭವಾಗುತ್ತದೆ. ನಕ್ಷತ್ರಗಳೆಲ್ಲವೂ ಶುಭಪಥಸಂಚಾರದಲ್ಲಿ ತೊಡಗುತ್ತವೆ. ಪರ್ಜನ್ಯನು ಕಾಲ-ಕಾಲಕ್ಕೆ ಮಳೆಗರೆಯಲು ಆರಂಭಿಸು ತ್ತಾನೆ. ಗ್ರಹಗಳೆಲ್ಲವೂ ಸವ್ಯಮಾರ್ಗವನ್ನನುಸರಿಸಿ ತಿರುಗುತ್ತವೆ. ಪ್ರಪಂಚದ

ಎಲ್ಲೆಡೆಗಳಲ್ಲಿಯೂ ಕ್ಷೇಮ, ಸುಭಿಕ್ಷ, ಆರೋಗ್ಯ, ಶಾಂತಿ–ಇವುಗಳು ಪರಿಪೂರ್ಣವಾಗಿರುತ್ತವೆ.

**ಕಲ್ಕೀ ವಿಷ್ಣುಯಶಾ ನಾಮ ದ್ವಿಜಃ ಕಾಲಪ್ರಚೋದಿತಃ ।**
**ಉತ್ಪತ್ಸ್ಯತೇ ಮಹಾವೀರ್ಯೋ ಮಹಾಬುದ್ಧಿಪರಾಕ್ರಮಃ ।**
**ಸಮ್ಭೂತಃ ಸಮ್ಭಲಗ್ರಾಮೇ ಬ್ರಾಹ್ಮಣಾವಸಥೇ ಶುಭೇ ॥೯೩॥**

ಧರ್ಮಜ! ಕಲ್ಕಿಯ ಅವತಾರರಹಸ್ಯವನ್ನು ಹೇಳುವೆನು, ಕೇಳು. ಕಾಲಿನ ಪ್ರಚೋದನೆಯಂತೆ ಅಥವಾ ಕಾಲನಿಯಮಾನುಸಾರವಾಗಿ ವಿಷ್ಣು ಯಶನೆಂಬ ಹೆಸರಿನಿಂದ ಬ್ರಾಹ್ಮಣನೊಬ್ಬನ ಮನೆಯಲ್ಲಿ ಕಲ್ಕಿಯು ಅವತರಿಸುತ್ತಾನೆ. ಅವನು ಮಹಾವೀರ್ಯವಂತನಾಗಿಯೂ, ಬುದ್ಧಿವಂತನಾಗಿಯೂ ಮಹಾಪರಾಕ್ರಮಿಯಾಗಿಯೂ ಇರುತ್ತಾನೆ. ಸಂಭಲವೆಂಬ ಗ್ರಾಮದಲ್ಲಿ ಬ್ರಾಹ್ಮಣನೊಬ್ಬನ ಮನೆಯಲ್ಲಿ ಕಲ್ಕಿಯು ಜನ್ಮತಾಳುತ್ತಾನೆ.

**ಮನಸಾ ತಸ್ಯ ಸರ್ವಾಣಿ ವಾಹನಾನ್ಯಾಯುಧಾನಿ ಚ ॥೯೪॥**

**ಉಪಸ್ಥಾಸ್ಯನ್ತಿ ಯೋಧಾಶ್ಚ ಶಸ್ತ್ರಾಣಿ ಕವಚಾನಿ ಚ ।**
**ಸ ಧರ್ಮವಿಜಯೀ ರಾಜಾ ಚಕ್ರವರ್ತೀ ಭವಿಷ್ಯತಿ ॥೯೫॥**

ಹಸ್ತ್ಯಶ್ವ-ರಥ-ಪದಾತಿಗಳೆಂಬ ಚತುರಂಗಸೈನ್ಯಗಳೂ, ನಾನಾವಿಧವಾದ ಆಯುಧಗಳೂ ಮತ್ತು ವಜ್ರಕವಚಗಳೂ–ಅವನು ನೆನೆದಾಗ ನೆನೆದಷ್ಟು ಸಂಖ್ಯೆಯಲ್ಲಿ–ಅವನ ಮುಂದೆ ಉಪಸ್ಥಿತವಾಗುತ್ತವೆ. ಧರ್ಮೋದ್ಧಾರಕ್ಕಾಗಿಯೇ ಹುಟ್ಟುವ ಅವನು ತನ್ನ ಅಮೋಘಶಕ್ತಿಯಿಂದ ಅಧರ್ಮವನ್ನೂ, ಅಧರ್ಮಾನುಯಾಯಿಗಳನ್ನೂ ನಿರ್ಮೂಲಮಾಡಿ ಚಕ್ರವರ್ತಿಯಾಗುತ್ತಾನೆ.

**ಸ ಚೇಮಂ ಸಂಕುಲಂ ಲೋಕಂ ಪ್ರಸಾದಮುಪನೇಷ್ಯತಿ ।**
**ಉತ್ಥಿತೋ ಬ್ರಾಹ್ಮಣೋ ದೀಪ್ತಃ ಕ್ಷಯಾನ್ತಕೃದುದಾರಧೀಃ ।**
**ಸಂಕ್ಷೇಪಕೋ ಹಿ ಸರ್ವಸ್ಯ ಯುಗಸ್ಯ ಪರಿವರ್ತಕಃ ॥೬೬॥**

ಬಹಳ ಕಷ್ಟಸಂಕುಲಗಳಿಗೆ ಗುರಿಯಾಗಿರುವ ಲೋಕದಲ್ಲಿ ಶಾಂತಿಯು ಪುನಃ ನೆಲೆಸುವಂತೆ ಮಾಡುತ್ತಾನೆ. ಮಹಾತೇಜಸ್ವಿಯಾದ, ಉದಾರಿಯಾದ, ಸರ್ವಸಂಹಾರಕನಾದ ಆ ಬ್ರಾಹ್ಮಣನು ಅವತರಿಸಿ ಅಧರ್ಮದಿಂದ ವ್ಯಾಪ್ತವಾದ ಕಲಿಯುಗವನ್ನೇ ಪರಿವರ್ತನೆಮಾಡಿಬಿಡುತ್ತಾನೆ.

**ಸ ಸರ್ವತ್ರ ಗತಾನಕ್ಷುದ್ರಾನ್ಬ್ರಾಹ್ಮಣೈಃ ಪರಿವಾರಿತಃ ।**
**ಉತ್ಸಾದಯಿಷ್ಯತಿ ತದಾ ಸರ್ವಮ್ಲೇಚ್ಛಗಣಾನ್ದ್ವಿಜಃ ॥೯೭॥**

ಆ ಸಮಯದಲ್ಲಿ ಅಳಿದುಳಿದ ಬ್ರಾಹ್ಮಣರಿಂದ ಪರಿವೃತನಾದ ಕಲ್ಕಿಯು ಸರ್ವತ್ರವ್ಯಾಪ್ತರಾದ ಮ್ಲೇಚ್ಛಜಾತಿಯನ್ನೇ ಸಂಪೂರ್ಣವಾಗಿ ನಿರ್ಮೂಲ ಮಾಡಿ ಧರ್ಮಸ್ಥಾಪನೆಯನ್ನು ಮಾಡುತ್ತನೆ."

ಗ೯೦ನೆಯ ಅಧ್ಯಾಯವು ಮುಗಿಯಿತು.

ಗ೯ಗನೆಯ ಅಧ್ಯಾಯ ಮಾರ್ಕಣ್ಡೆಯಸಮಾಸ್ಯಾಪರ್ವ (ಮುಂದುವರಿದಿದೆ.)

## ಭಗವಾನ್ ಕಲ್ಕಿಯಿಂದ ಸತ್ಯಯುಗದ ಸ್ಥಾಪನೆ : ಮಾರ್ಕಂಡೇಯರು ಯುಧಿಷ್ಠಿರನಿಗೆ ಧರ್ಮೋಪದೇಶಮಾಡಿದುದು

ಮಾರ್ಕಂಡೇಯರು ಮುಂದುವರಿದು ಹೇಳುತ್ತಾರೆ : "ಧರ್ಮಜ! ನಾನು ಹಿಂದೆ ಹೇಳಿದ ರೀತಿಯಲ್ಲಿ ಮಹಾಪರಾಕ್ರಮಿಯಾದ ಕಲ್ಕಿಯು ಕಳ್ಳರನ್ನೂ, ದರೋಡೆಕೋರರನ್ನೂ, ಮ್ಲೇಚ್ಛರನ್ನೂ ಮತ್ತು ಅಧರ್ಮಿಗಳನ್ನೂ ಸಂಹಾರಮಾಡಿದ ನಂತರ ಅಶ್ವಮೇಧಯಾಗನಾಡಿ ಬ್ರಾಹ್ಮಣರಿಗೆ ಅಖಂಡ ಭೂಮಂಡಲವನ್ನೇ ದಾನವಾಗಿ ಕೊಡುತ್ತಾನೆ. ಪುಣ್ಯಾತ್ಮನಾದ ಪುಣ್ಯಕರ್ಮನಾದ ಕಲ್ಕಿಯು ಹಿಂದೆ ಬ್ರಹ್ಮನಿಂದ ನಿರ್ದಿಷ್ಟವಾಗಿದ್ದ ಧರ್ಮರಾಜ್ಯಪದ್ಧತಿಯನ್ನು ಊರ್ಜಿತಗೊಳಿಸಿ, ರಮಣೀಯವಾದ ಅರಣ್ಯವನ್ನು ಪ್ರವೇಶಿಸುತ್ತಾನೆ. ಈ ಲೋಕನಿವಾಸಿಗಳಾದ ಮಾನವರು ಕಲ್ಕಿಯ ಗುಣ-ಕರ್ಮಗಳನ್ನು ಅನುಸರಣೆಮಾಡುತ್ತಾರೆ. ಬ್ರಾಹ್ಮಣರ ಸಲುವಾಗಿ ಕಲ್ಕಿಯು ಮಾಡುವ ಕಳ್ಳ-ಕಾಕರ ಸಂಹಾರದಿಂದ ಪ್ರಪಂಚಾದ್ಯಂತವಾಗಿ ಕ್ಷೇಮ ವುಂಟಾಗುತ್ತದೆ. ಕಲ್ಕಿಯು ಸ್ವಲ್ಪಕಾಲ ಅರಣ್ಯದಲ್ಲಿ ತಪಸ್ಸುಮಾಡುತ್ತಲಿದ್ದು ಅನಂತರದಲ್ಲಿ ಕೃಷ್ಣಾಜಿನವನ್ನು ಧರಿಸಿ, ಶಕ್ತ್ಯಾಯುಧವನ್ನೂ, ಶೂಲಾದ್ಯಾ ಯುಧಗಳನ್ನೂ ಹಿಡಿದು ಒಂದಾದ ಮೇಲೊಂದರಂತೆ ದೇಶವನ್ನು ಜಯಿಸುತ್ತಾ ಮತು ಜಯಿಸಿದ ದೇಶಗಳಲ್ಲಿ ಧರ್ಮಸ್ಥಾಪನೆಯನ್ನು ಮಾಡುತ್ತಾ, ಅಲ್ಲಿರುವ ಬ್ರಾಹ್ಮಣಸಮೂಹದಿಂದ ಗೌರವಿಸಲ್ಪಟ್ಟವನಾಗಿ ಮತ್ತು ಅವರೆಲ್ಲರನ್ನೂ ಯಥೋಚಿತವಾಗಿ ಗೌರವಿಸಿ-ದಸ್ಯುಗಳ, ಅಧರ್ಮಿಗಳ ಮತ್ತು ದರೋಡೆಕೋರರ ಸಂಹಾರಕ್ಕಾಗಿ ಮುಂದೆ-ಮುಂದೆ ಪ್ರಯಾಣಮಾಡು

ತ್ತಾನೆ. ಕಲ್ಕಿಯ ಆಕ್ರಮಣಕ್ಕೆ ಸಿಕ್ಕಿದ ಕಳ್ಳಕಾಕರು "ಅಯ್ಯೋ! ಅಮ್ಮಾ! ಅಪ್ಪಾ! ಎಂದು ಗಟ್ಟಿಯಾಗಿ ಕಿರುಚಿಕೊಳ್ಳುತ್ತಾ ಪ್ರಾಣಬಿಡುತ್ತಾರೆ. ಆ ಸಮಯದಲ್ಲಿ ಆ ದಸ್ಯುಗಳನ್ನೂ, ಧರ್ಮಬಾಹಿರರನ್ನೂ ಸಂಹಾರ ಮಾಡುವುದರಿಂದಲೇ ಕಲಿಯುಗದ ಅಂತ್ಯವಾಗಿ ಕೃತಯುಗವು ಪ್ರಾರಂಭವಾಗುತ್ತದೆ. ಜನರೆಲ್ಲರೂ ಪುನಃ ಧಾರ್ಮಿಕಕಾರ್ಯಗಳನ್ನೂ, ನಿತ್ಯ- ನೈಮಿತ್ತಿಕವಾದ ಅನುಷ್ಠಾನಗಳನ್ನೂ ಮಾಡಲು ಮೊದಲು ಮಾಡುತ್ತಾರೆ. ಒಳ್ಳೊಳ್ಳೆಯ ಉದ್ಯಾನವನಗಳೂ, ಚೈತ್ಯವನಗಳೂ, ವಾಪೀ-ಕೂಪಗಳೂ, ತಟಾಕಗಳೂ, ನಯನಮನೋಹರವಾದ ಸರೋವರಗಳೂ, ದೇವತಾಮಂದಿರಗಳೂ ಎಲ್ಲೆಡೆಗಳಲ್ಲಿಯೂ ಪ್ರಾದುರ್ಭವಿಸುತ್ತವೆ. ಎಲ್ಲೆಡೆಗಳಲ್ಲಿಯೂ ಯಜ್ಞಕ್ರಿಯೆಗಳು ಆರಂಭವಾಗುತ್ತವೆ. ಬ್ರಾಹ್ಮಣರು ಸತ್ಯವಂತರಾಗಿಯೂ, ಸಾಧುಗಳಾಗಿಯೂ ಇರುತ್ತಾರೆ. ಉದಾರಶೀಲರೂ, ಜಿತೇಂದ್ರಿಯರೂ, ತಪಸ್ವಿಗಳೂ ಆಗಿರುತ್ತಾರೆ. ಕಳ್ಳಕಾಕರಿಂದ ನಿಬಿಡವಾಗಿರುತ್ತಿದ್ದ ಆಶ್ರಮಭೂಮಿಗಳು ಪುನಃ ಪುಣ್ಯಾತ್ಮರಾದ ತಪಸ್ವಿಗಳಿಂದ ಕೂಡಿ ಶೋಭಾಯಮಾನವಾಗುತ್ತವೆ. ದೇಶದ ಪ್ರಜೆಗಳು ಸತ್ಯವಂತರಾಗಿರುತ್ತಾರೆ. ಭೂಮಿಯಲ್ಲಿ ಹಾಕಿದ ಬೀಜಗಳು ಮೊಳೆತು ಒಳ್ಳೆಯ ಬೆಳೆಯಾಗುತ್ತದೆ. ಎಲ್ಲ ಋತುಗಳಲ್ಲಿಯೂ ಎಲ್ಲ ವಿಧವಾದ ಬೆಳೆಗಳೂ ಬೆಳೆಯುತ್ತವೆ. ಜನರು ದಾನಕೊಡುವುದರಲ್ಲಿಯೂ, ನಿಯತವಾದ ವ್ರತಾನುಷ್ಠಾನಗಳನ್ನು ಮಾಡುವುದರಲ್ಲಿಯೂ ನಿರತರಾಗಿರುತ್ತಾರೆ. ಬ್ರಾಹ್ಮಣರು ಯಾವಾಗಲೂ ಜಪ-ತಪಗಳಲ್ಲಿಯೂ, ಯಜ್ಞ-ಯಾಗಾದಿಗಳಲ್ಲಿಯೂ ನಿರತರಾಗಿರುತ್ತಾರೆ. ಧರ್ಮಾತ್ಮರಾಗಿದ್ದು ನಿತ್ಯತುಷ್ಟರಾಗಿರುತ್ತಾರೆ. ಕ್ಷತ್ರಿಯರು ಈ ಪೃಥ್ವಿಯನ್ನು ಧರ್ಮದಿಂದ ಪರಿಪಾಲನೆಮಾಡುತ್ತಾರೆ. ವೈಶ್ಯರು ಧರ್ಮಮೂಲವಾದ ವ್ಯಾಪಾರ-ವ್ಯವಹಾರಗಳಲ್ಲಿ ನಿರತರಾಗಿರುತ್ತಾರೆ. ಬ್ರಾಹ್ಮಣರು ಷಟ್ಕರ್ಮನಿರತರಾಗಿಯೂ, ಕ್ಷತ್ರಿಯರು ಪರಾಕ್ರಮಶಾಲಿಗಳಾಗಿಯೂ, ಶೂದ್ರರು ಬ್ರಹ್ಮ-ಕ್ಷತ್ರ-ವೈಶ್ಯರ ಸೇವೆಯಲ್ಲಿಯೂ ನಿರತರಾಗಿರುತ್ತಾರೆ.

ಧರ್ಮಜ! ಕೃತಯುಗದ ಅದೇ ಧರ್ಮವು ತ್ರೇತಾ-ದ್ವಾಪರಗಳಲ್ಲಿಯೂ ಮುಂದುವರಿಯುತ್ತದೆ. ಆದರೆ ಒಂದೊಂದು ಯುಗದಲ್ಲಿಯೂ ಒಂದೊಂದು ಭಾಗ ಧರ್ಮವು ಕಡಿಮೆಯಾಗುತ್ತಾ ಹೋಗುತ್ತದೆ. ಇದ

ರೊಂದಿಗೆ ನಾನು ನಿನಗೆ ಎಲ್ಲ ಯುಗಗಳ ರಹಸ್ಯವನ್ನೂ ಹೇಳಿದಂತಾಯಿತಲ್ಲವೇ? ಒಂದೊಂದು ಯುಗವೂ ಎಷ್ಟು ಸಹಸ್ರವರ್ಷಗಳ ಪರ್ಯಂತವಾಗಿರುವುದೆಂಬ ವಿಷಯವನ್ನೂ ನಿನಗೆ ಹೇಳಿದ್ದೇನೆ. ಕಲಿಯುಗದ ಕಡೆಯಲ್ಲಿ ಏನಾಗುವುದೆಂಬ ಭವಿಷ್ಯವನ್ನೂ ಋಷಿ-ಮಹರ್ಷಿಗಳಿಂದ ಗೌರವಿಸಲ್ಪಟ್ಟಿರುವ ವಾಯುಪುರಾಣವನ್ನು ನೆನೆದು ಅದರಲ್ಲಿರುವಂತೆಯೇ ಹೇಳಿದ್ದೇನೆ. ನಾನು ಚಿರಂಜೀವಿಯಾಗಿರುವುದರಿಂದಲೂ, ಅನೇಕಾನೇಕ ಯುಗಗಳ ಆದಿ ಮತ್ತು ಅಂತ್ಯಗಳನ್ನು ಪ್ರತ್ಯಕ್ಷವಾಗಿಯೇ ನೋಡಿರುವುದರಿಂದಲೂ–ಅದರ ಸಂಪೂರ್ಣಾನುಭವಗಳೆಲ್ಲವನ್ನೂ ನಿನಗೆ ಹೇಳಿರುತ್ತೇನೆ. ಇನ್ನು ಮುಂದೆ ನಾನು ಧರ್ಮ ಸಂಶಯನಿವಾರಣಾರ್ಥವಾಗಿ ಹೇಳಲಿರುವ ಮತ್ತೊಂದು ಮುಖ್ಯವಾದ ವಿಷಯವನ್ನು ಅನುಜರಿಂದಲೂ ಮತ್ತು ಶ್ರೀಕೃಷ್ಣನಿಂದಲೂ ಕೂಡಿ ಏಕಾಗ್ರತೆಯಿಂದ ಕೇಳುವವನಾಗು :

**ಧರ್ಮೇ ತ್ವಯಾತ್ಮಾ ಸಂಯೋಜ್ಯೋ ನಿತ್ಯಂ ಧರ್ಮಭೃತಾಂ ವರ ।**
**ಧರ್ಮಾತ್ಮಾ ಹಿ ಸುಖಂ ರಾಜನ್ಪ್ರೇತ್ಯ ಚೇಹ ನನ್ದತಿ ॥೧೯॥**

ಧರ್ಮಾತ್ಮರಲ್ಲಿ ಶ್ರೇಷ್ಠನೇ! ನಿನ್ನ ಆತ್ಮವು ನಿರಂತರವೂ ಧರ್ಮದ ಜೊತೆಯಲ್ಲಿಯೇ ಇರಲಿ. ಧರ್ಮಾತ್ಮನಾದವನು ಮಾತ್ರವೇ ಇಹ-ಪರಗಳೆರಡರಲ್ಲಿಯೂ ಸುಖವನ್ನು ಪಡೆಯುತ್ತಾನೆ. ನಾನು ಹೇಳಲಿರುವ ಮತ್ತೂ ಶುಭಾವಹವಾದ ಮಾತುಗಳನ್ನು ಕೇಳು.

**ನ ಬ್ರಾಹ್ಮಣೇ ಪರಿಭವಃ ಕರ್ತವ್ಯಸ್ತೇ ಕದಾಚನ ।**
**ಬ್ರಾಹ್ಮಣಃ ಕುಪಿತೋ ಹನ್ಯಾದಪಿ ಲೋಕಾನ್ಪ್ರತಿಜ್ಞಯಾ ॥೨೦॥**

ಬ್ರಾಹ್ಮಣನಿಗೆ ಯಾವಾಗಲೂ ಅವಮಾನಮಾಡಬೇಡ. ಬ್ರಾಹ್ಮಣನು ಕೋಪಗೊಂಡನೆಂದರೆ ತನ್ನ ಪ್ರತಿಜ್ಞೆಯಿಂದ ಮೂರು ಲೋಕಗಳನ್ನೂ ವಿನಾಶಮಾಡಬಲ್ಲನು.”

ಜನಮೇಜಯ! ಹೀಗೆಂದು ಮಾರ್ಕಂಡೇಯರು ಧರ್ಮಜನಿಗೆ ಹೇಳಿದನಂತರ ಕುರುಕುಲಾವತಂಸನಾದ, ನೃಪಶ್ರೇಷ್ಠನಾದ, ಬುದ್ಧಿಮಂತನಾದ, ಮಹಾತೇಜಸ್ವಿಯಾದ ಧರ್ಮಜನು ಪರಮಶ್ರೇಷ್ಠವಾದ ಧರ್ಮರಹಸ್ಯದ ಬಗೆಗೆ ಪುನಃ ಪ್ರಶ್ನಿಸಿದನು :

"ಮಹರ್ಷಿಗಳೇ! ನಾನು ನನ್ನ ಪ್ರಜೆಗಳನ್ನು ಪಾಲನೆಮಾಡಬೇಕಾದರೆ ಯಾವ ಧರ್ಮವನ್ನು ಅನುಸರಣೆಮಾಡಬೇಕು ಮತ್ತು ಯಾವ ಧರ್ಮವನ್ನು ಅನುಸರಿಸುವುದರಿಂದ ಸ್ವಧರ್ಮದಿಂದಲೂ ಚ್ಯುತನಾಗದೇ ರಾಜ್ಯ ಪರಿಪಾಲನೆಮಾಡಲು ಸಾಧ್ಯವಾಗುತ್ತದೆ? ದಯೆಮಾಡಿ ಹೇಳಿರಿ."

ಧರ್ಮಜನ ಈ ಪ್ರಶ್ನೆಗಳನ್ನು ಕೇಳಿ ನಸುನಗುತ್ತಾ ಮಾರ್ಕಂಡೇಯರು ಉತ್ತರಿಸಿದರು :

**ದಯಾವಾನ್ಸರ್ವಭೂತೇಷು ಹಿತೋ ರಕ್ತೋऽನಸೂಯಕಃ ।**
**ಸತ್ಯವಾದೀ ಮೃದುರ್ದಾನ್ತಃ ಪ್ರಜಾನಾಂ ರಕ್ಷಣೇ ರತಃ ।**
**ಚರ ಧರ್ಮಂ ತ್ಯಜಾಧರ್ಮಂ ಪಿತೄನ್ದೇವಾಂಶ್ಚ ಪೂಜಯ ॥೨೪॥**

"ಧರ್ಮಜ! ಪ್ರಪಂಚದಲ್ಲಿರುವ ಸಕಲಪ್ರಾಣಿಗಳ ವಿಷಯದಲ್ಲಿಯೂ ದಯಾಪರನಾಗಿರು. ಮತ್ತು ಅವುಗಳ ಹಿತದಲ್ಲಿಯೂ ಸರ್ವದಾ ಆಸಕ್ತ ನಾಗಿರು. ಪ್ರಜೆಗಳನ್ನು ನಿನ್ನ ಮಕ್ಕಳೆಂದೇ ಭಾವಿಸಿ ಅವರನ್ನು ಮಕ್ಕಳಂತೆಯೇ ಪ್ರೀತಿಸು. ಯಾರ ವಿಷಯದಲ್ಲಿಯೂ, ಯಾವ ಕಾರಣ ದಿಂದಲೂ ಅಸೂಯೆಪಡಬೇಡ. ಯಾವಾಗಲೂ ಸತ್ಯವನ್ನೇ ಹೇಳು. ನಿನ್ನ ಸ್ವಭಾವವೂ ಮೃದುವಾಗಿರಲಿ. ನೀನು ಚಕ್ರವರ್ತಿಯೇ ಆಗಿದ್ದರೂ ಪ್ರಜೆಗಳಿಗೆ ಬಹು ಸುಲಭನಾಗಿರು. ಜಿತೇಂದ್ರಿಯನಾಗಿರು ಮತ್ತು ಪ್ರಜೆಗಳ ರಕ್ಷಣೆಯೆಂಬುದೇ ನಿನ್ನ ಮುಖ್ಯವಾದ ಗುರಿಯಾಗಿರಲಿ. ಧರ್ಮಕಾರ್ಯಗಳನ್ನು ಮಾಡು. ಅಧರ್ಮಕಾರ್ಯಗಳನ್ನು ಪರಿತ್ಯಜಿಸು. ಪಿತೃದೇವತೆಗಳನ್ನೂ ಮತ್ತು ದೇವತೆಗಳನ್ನೂ ಆಯಾ ಕಾಲಗಳಲ್ಲಿ ಭಕ್ತಿ-ಶ್ರದ್ಧೆಗಳಿಂದ ಆರಾಧಿಸು.

**ಪ್ರಮಾದಾದ್ಯತ್ಕೃತಂ ತೇऽಭೂತ್ಸಮ್ಯಗ್ದಾನೇನ ತಜ್ಜಯ ।**
**ಅಲಂ ತೇ ಮಾನಮಾಶ್ರಿತ್ಯ ಸತತಂ ಪರವಾನ್ಭವ ॥೨೫॥**

ಪ್ರಮಾದವಶದಿಂದ ನಿನ್ನಿಂದ ಅಧರ್ಮಕಾರ್ಯವೇನಾದರೂ ನಡೆದರೆ ಅದಕ್ಕೆ ಪ್ರಾಯಶ್ಚಿತ್ತರೂಪವಾಗಿ ದಾನಗಳನ್ನು ಕೊಟ್ಟು ಒಡನೆಯೇ ಆ ಪಾಪ ದಿಂದ ವಿಮುಕ್ತನಾಗು. ಮಾನಾಭಿಮಾನಗಳನ್ನು ತೊರೆದು ದಯಾಪರ ನಾಗಿಯೂ–ಸರ್ವಸುಲಭನಾಗಿಯೂ ಇರು.

**ವಿಜಿತ್ಯ ಪೃಥಿವೀಂ ಸರ್ವಾಂ ಮೋದಮಾನಃ ಸುಖೀ ಭವ ।**
**ಏಷ ಭೂತೋ ಭವಿಷ್ಯಶ್ಚ ಧರ್ಮಸ್ತೇ ಸಮುದೀರಿತಃ ॥೨೬॥**

ನಿನ್ನ ಧರ್ಮದ ಬಲದಿಂದಲೇ ಪ್ರಪಂಚವೆಲ್ಲವನ್ನೂ ಗೆದ್ದು ಆನಂದದಿಂದಲೂ-ಸುಖದಿಂದಲೂ ಇರು. ಪ್ರಪಂಚದಲ್ಲಿ ಈಗಿರುವ ಧರ್ಮ ಮತ್ತು ಮುಂದೆ ಇರಬಹುದಾದ ಧರ್ಮ–ಇವುಗಳೆಲ್ಲವನ್ನೂ ನಿನಗೆ ತಿಳಿಸಿದ್ದೇನೆ. ಭೂತ-ಭವಿಷ್ಯಗಳಲ್ಲಿ ನಿನಗೆ ತಿಳಿಯದಿರುವ ವಿಷಯಗಳು ಯಾವುವೂ ಇರುವುದಿಲ್ಲ. ನೀನೇ ಸರ್ವವನ್ನೂ ತಿಳಿದವನಾಗಿರುವೆ. ಆದುದರಿಂದ ಪ್ರಸಕ್ತ ಸಂದರ್ಭದಲ್ಲಿ ನಿನಗುಂಟಾಗಿರುವ ಕ್ಲೇಶಕ್ಕಾಗಿ ಖಂಡಿತವಾಗಿಯೂ ಪರಿತಪಿಸಬೇಡ.

**ಪ್ರಾಜ್ಞಾಸ್ತಾತ ನ ಮುಹ್ಯನ್ತಿ ಕಾಲೇನಾಪಿ ಪ್ರಪೀಡಿತಾಃ ।**
**ಏಷ ಕಾಲೋ ಮಹಾಬಾಹೋ ಅಪಿ ಸರ್ವದಿವೌಕಸಾಮ್ ॥೨೮॥**

ಮಹಾಬಾಹುವೇ! ಪ್ರಾಜ್ಞರಾದವರು ಕಾಲ-ಕರ್ಮವಶದಿಂದ ಪೀಡಿತರಾದರೂ ಮೋಹವನ್ನು ಹೊಂದುವುದಿಲ್ಲ. ದೇವತೆಗಳೇ ಆದರೂ ಈ ವಿಧವಾದ ಕಾಲನಿಯಮಗಳನ್ನು ಮೀರಲಾರರು.

**ಮುಹ್ಯನ್ತಿ ಹಿ ಪ್ರಜಾಸ್ತಾತ ಕಾಲೇನಾಪಿ ಪ್ರಚೋದಿತಾಃ ।**
**ಮಾ ಚ ತತ್ರ ವಿಶಙ್ಕಾ ಭೂದ್ಯನ್ಮಯೋಕ್ತಂ ತವಾನಘ ॥೨೯॥**

ಕಾಲವೆಂಬುದು ಪ್ರತಿಯೊಬ್ಬನನ್ನೂ ಅವನವನ ಕರ್ಮಾನುಸಾರವಾಗಿ ಕಷ್ಟ-ಸುಖಗಳಲ್ಲಿ ಸಿಲುಕಿಸುತ್ತದೆ. ಆದುದರಿಂದ ಕಾಲವೆಂಬುದು ದುರತಿಕ್ರಮವಾದುದು. ಅನುಭವಿಸಬೇಕಾದುದನ್ನು ಅನುಭವಿಸಿಯೇ ಕಾಲವನ್ನು ಕಳೆಯಬೇಕು. ಆದರೆ ಧರ್ಮಜ! ನಾನು ಇದುವರೆಗೆ ಹೇಳಿರುವ ಧರ್ಮದ ವಿಷಯದಲ್ಲಿಯೂ ಮತ್ತು ನಿನಗೆ ಈಗ ಪ್ರಾಪ್ತವಾಗಿರುವ ಕ್ಲೇಶಗಳನ್ನು ನಿವಾರಣೆಮಾಡಿಕೊಂಡು ರಾಜ್ಯವನ್ನು ಪುನಃ ಪಡೆದು ಸುಖಿಯಾಗುವೆಯೆಂಬ ವಿಷಯದಲ್ಲಿಯೂ ಸ್ವಲ್ಪವಾದರೂ ಸಂಶಯಪಡಬೇಡ.

**ಆಶಙ್ಕ್ಯ ಮದ್ವಚೋ ಹ್ಯೇತದ್ಧರ್ಮಲೋಪೋ ಭವೇತ್ತವ ।**
**ಜಾತೋಽಸಿ ಪ್ರಥಿತೇ ವಂಶೇ ಕುರೂಣಾಂ ಭರತರ್ಷಭ ।**
**ಕರ್ಮಣಾ ಮನಸಾ ವಾಚಾ ಸರ್ವಮೇತತ್ಸಮಾಚಾರ ॥೩೦॥**

ನಾನು ಹೇಳಿರುವ ಯಾವುದಾದರೂ ವಿಷಯದಲ್ಲಿ ನೀನು ಸಂಶಯಿಸುವುದಾದರೆ ನಿನ್ನಲ್ಲಿರುವ ಧರ್ಮಕ್ಕೆ ನ್ಯೂನತೆಯುಂಟಾಗುವುದು. ನೀನು ಸುಪ್ರಸಿದ್ಧವಾದ ಕುರುವಂಶದಲ್ಲಿ ಜನ್ಮತಾಳಿರುವೆ. ಕರ್ಮದಿಂದಲೂ, ಮನಸ್ಸಿನಿಂದಲೂ, ಮಾತಿನಿಂದಲೂ–ನಾನು ಹೇಳಿದಂತೆ ಆಚರಿಸು."

ಜನಮೇಜಯ! ಅದಕ್ಕುತ್ತರವಾಗಿ ಯುಧಿಷ್ಠಿರನು ಹೇಳಿದನು :

"ಬ್ರಾಹ್ಮಣೋತ್ತಮರೇ! ನೀವು ಹೇಳಿರುವ ಪ್ರವಚನಗಳು ಕರ್ಣಾನಂದಕರವಾಗಿವೆ. ಪ್ರಯತ್ನಪೂರ್ವಕವಾಗಿ ನೀವು ಹೇಳಿದಂತೆಯೇ ನಾನು ಆಚರಿಸುತ್ತೇನೆ. ನನಗೆ ಸ್ವಭಾವತಃ ಲೋಭ-ಭಯ-ಮಾತ್ಸರ್ಯಗಳಾವುವೂ ಇರುವುದಿಲ್ಲ. ಆದುದರಿಂದ ನೀವು ಹೇಳಿದಂತೆ ನಾನಿರಲು ನನಗೆ ಹೆಚ್ಚೇನೂ ಕಷ್ಟವಾಗಲಾರದು. ನೀವು ಹೇಳಿದಂತೆಯೇ ಕರ್ಮದಿಂದಲೂ, ಮನಸ್ಸಿನಿಂದಲೂ, ಮಾತಿನಿಂದಲೂ ಪಾಲಿಸುತ್ತೇನೆ. ಇದರಲ್ಲಾವ ಸಂಶಯವೂ ಇಲ್ಲ."

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಮಹಾಧೀಮಂತರಾದ ಮಾರ್ಕಂಡೇಯರ ಕರ್ಣಾನಂದಕರವಾದ ಪ್ರವಚನವನ್ನು ಕೇಳಿ ದ್ರೌಪದೀಸಮೇತರಾದ ಪಾಂಡವರೂ, ಶ್ರೀಕೃಷ್ಣನೂ ಮತ್ತು ಅಲ್ಲಿ ನೆರೆದಿದ್ದ ಬ್ರಾಹ್ಮಣರೂ ಸಂತೋಷಭರಿತರಾದರು. ಯುಗ-ಯುಗಾಂತರಗಳಲ್ಲಿ ನಡೆದ, ಮಾರ್ಕಂಡೇಯರು ಸ್ವಾನುಭವದಿಂದ ಹೇಳಿದ ಮಂಗಳಕರವಾದ ಪುರಾಣಕಥೆಗಳನ್ನು ಕೇಳಿ ಪಾಂಡವರು ವಿಸ್ಮಿತರಾದರು.

೧೯೧ನೆಯ ಅಧ್ಯಾಯವು ಮುಗಿಯಿತು.

೧೯೨ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಇಕ್ಷ್ವಾಕುವಂಸದ ಅರಸನಾದ ಪರೀಕ್ಷಿತನಿಗೆ ಮಂಡೂಕರಾಜ ಕನ್ಯೆಯೊಡನೆ ವಿವಾಹ : ಶಲ ಮತ್ತು ದಲರ ಚರಿತ್ರೆ : ವಾಮದೇವಮುನಿಯ ಮಹತ್ತ್ವ

ಜನಮೇಜಯ! ಪಾಂಡುವಿನ ಹಿರಿಯ ಮಗನಾದ ಯುಧಿಷ್ಠಿರನು ಮಾರ್ಕಂಡೇಯಮಹರ್ಷಿಗಳನ್ನು ಬ್ರಾಹ್ಮಣರ ಮಹತ್ತ್ವದ ವಿಷಯವಾಗಿ

ಪುನಃ ಪ್ರಶ್ನಿಸಿದನು. ಮಾರ್ಕಂಡೇಯರು ನಸುನಗುತ್ತಾ ಹೇಳಿದರು : "ಈ ಅಪೂರ್ವವಾದ ಚರಿತವನ್ನು ಕೇಳು" ಎಂದು ಹೇಳಿ ಮಂಡೂಕೋಪಾಖ್ಯಾನ ವನ್ನು ಹೇಳತೊಡಗಿದರು :

"ಧರ್ಮಜ! ಅಯೋಧ್ಯೆಯಲ್ಲಿ ಪರೀಕ್ಷಿತನೆಂಬ ರಾಜನು ರಾಜ್ಯವಾಳು ತ್ತಿದ್ದನು. ಅವನು ಇಕ್ಷ್ವಾಕುವಂಶಕ್ಕೆ ಸೇರಿದ ಅರಸನಾಗಿದ್ದನು. ಒಂದಾ ನೊಂದು ದಿನ ರಾಜನು ಪದ್ಧತಿಯಂತೆ ಬೇಟೆಗೆ ಹೊರಟನು. ಕಾಡಿನಲ್ಲಿ ಅವನ ಕಣ್ಣಿಗೆ ಒಂದು ಸೊಗಸಾದ ಜಿಂಕೆಯು ಕಾಣಿಸಿತು. ಅದನ್ನು ಬೇಟೆ ಯಾಡಲು ಅದರ ಬೆನ್ನಟ್ಟಿಹೋದನು. ಆದರೆ ಅದು ರಾಜನ ಲಕ್ಷ್ಯಕ್ಕೆ ಸಿಕ್ಕ ದಷ್ಟು ವೇಗವಾಗಿ ಓಡಲಾರಂಭಿಸಿತು. ಪರೀಕ್ಷಿತನೂ ಕುದುರೆಯ ಮೇಲೆ ಕುಳಿತು ಅದನ್ನು ಅಟ್ಟಿಸಿಕೊಂಡೇ ಹೋಗುತ್ತಿದ್ದನು. ಹೀಗೆ ಆ ಜಿಂಕೆಯು ರಾಜನನ್ನು ಒಂದು ನಿರ್ಜನವಾದ ಪ್ರದೇಶಕ್ಕೆ ಕರೆದುಕೊಂಡು ಹೋಯಿತು. ಆದರೂ ಅದು ಅವನ ಬಾಣದ ಲಕ್ಷ್ಯಕ್ಕೆ ಸಿಕ್ಕದೇ ತಪ್ಪಿಸಿಕೊಂಡು ಹೊರಟುಹೋಯಿತು. ರಾಜನು ಬಹಳ ದೂರದ ಪ್ರಯಾಣದಿಂದಾಗಿ ಬಹಳವಾಗಿ ಆಯಾಸಗೊಂಡಿದ್ದನು. ಅದರ ಜೊತೆಗೆ ಹಸಿವು-ಬಾಯಾರಿಕೆಗಳೂ ಅವನನ್ನು ಬಹುವಾಗಿ ಪೀಡಿಸುತ್ತಿದ್ದುವು. ಅವನ ಮುಂದೆ ಬಹಳ ದಟ್ಟವಾದ ಮತ್ತು ಕತ್ತಲಿನಿಂದ ವ್ಯಾಪ್ತವಾದ ಅರಣ್ಯವಿದ್ದಿತು. ಅಂತಹ ಘೋರಾರಣ್ಯವನ್ನು ರಾಜನು ಪ್ರವೇಶಿಸಿದನು. ಆ ಅರಣ್ಯದ ಮಧ್ಯದಲ್ಲಿ ಒಂದು ನಯನಮನೋಹರವಾದ ಸರೋವರವಿದ್ದುದನ್ನು ಕಂಡು ಸಂತೋಷಭರಿತನಾದ ಪರೀಕ್ಷಿತನು–ಆ ಸರೋವರದಲ್ಲಿ ಕುದುರೆಯ ಮೈ ತೊಳೆದು, ತಾನೂ ಸ್ನಾನಮಾಡಿ ದಣಿವಾರಿಸಿಕೊಂಡು, ಕಮಲಪುಷ್ಪಗಳ ಕಾಂಡಗಳನ್ನೂ ಮತ್ತು ಸರೋವರದ ಸಮೀಪದಲ್ಲಿದ್ದ ಹುಲ್ಲನ್ನೂ ಕಿತ್ತು ಕುದುರೆಗೆ ಹಾಕಿ, ತಾನು ಸರೋವರದ ದಂಡೆಯ ಮೇಲೆ ಆರಾಮ ವಾಗಿ ಕುಳಿತನು. ಹಾಗೆಯೇ ಕುಳಿತಿರುವಾಗ ರಾಜನಿಗೆ ಸುಶ್ರಾವ್ಯವಾದ ಸಂಗೀತದ ಧ್ವನಿಯು ಕೇಳಿಸಿತು. ರಾಜನು ಆಶ್ಚರ್ಯಭರಿತನಾಗಿ "ಇಲ್ಲಿ ಯಾವ ಮಾನವನ ಹೆಜ್ಜೆಯ ಗುರುತೂ ಕಾಣುವುದಿಲ್ಲ. ಹೀಗಿರುವಾಗ ಸಂಗೀತದ ಧ್ವನಿಯು ಎಲ್ಲಿಂದ ಬರುತ್ತಿದೆ? ಇಂತಹ ಬಹಳ ಇಂಪಾದ ಸಂಗೀತವನ್ನು ಯಾರು ಹಾಡುತ್ತಿರಬಹುದು?"–ಹೀಗೆ ಮನಸ್ಸಿನಲ್ಲಿ

ಯೋಚಿಸುತ್ತಿರುವಾಗಲೇ ನವಯುವತಿಯೊಬ್ಬಳು ಹೂಗಳನ್ನು ಕೀಳು ತ್ತಿರುವ ಸುಮನೋಹರದೃಶ್ಯವು ಕಣ್ಣುಗಳಿಗೆ ಹಬ್ಬವನ್ನುಂಟುಮಾಡಿತು. ಮರುಕ್ಷಣದಲ್ಲಿಯೇ ಆ ವನಸುಂದರಿಯು ರಾಜನ ಸಮೀಪಕ್ಕೂ ಮೆಲ್ಲ-ಮೆಲ್ಲನೆ ಆಗಮಿಸಿದಳು.

ತಾನಾಗಿಯೇ ಹತ್ತಿರಕ್ಕೆ ಬಂದ ನವಯುವತಿಯನ್ನು ಮಾತನಾಡಿಸದೇ ಇರುವ ಅರಸಿಕನು ಯಾರಿದ್ದಾನೆ? ಸಮೀಪಕ್ಕೆ ಆಗಮಿಸಿದ ಯುವತಿಯನ್ನು ರಾಜನು ಪ್ರಶ್ನಿಸಿದನು : "ಮಂಗಳಾಂಗಿಯೇ! ನೀನು ಯಾರು? ಎಲ್ಲಿಯವಳು? ಈ ನಿರ್ಜನವಾದ ಅರಣ್ಯದಲ್ಲಿ ಏಕಾಕಿನಿಯಾಗಿ ಏಕಿರುವೆ?"

'ನಾನೊಬ್ಬಳು ಕನ್ಯೆ' ಇಷ್ಟೇ ಅವಳ ಉತ್ತರ. (ಇಲ್ಲಿ ಕನ್ಯೆಯೆಂದು ಹೇಳಿದುದರಿಂದ ಅವಿವಾಹಿತಳೆಂದು ಸ್ಪಷ್ಟವಾಯಿತಷ್ಟೆ.) ಒಡನೆಯೇ ರಾಜನು ಹೇಳಿದನು :

"ನೀನು ನನ್ನವಳಾಗಬೇಕೆಂಬುದು ನನ್ನ ಆಶಯ."

"ಅದೇನೋ ಆಗಬಹುದು. ಆದರೆ ನೀನು ಅದಕ್ಕಾಗಿ ಒಂದು ಪ್ರತಿಜ್ಞೆಯನ್ನು ಮಾಡಬೇಕು ಮತ್ತು ಅದರಂತೆ ನಡೆಯಲೂ ಬೇಕು. ಹಾಗಾಗುವುದಾದರೆ ಮಾತ್ರ ನಾನು ನಿನ್ನವಳಾಗಲು ಅಡ್ಡಿಯಿಲ್ಲ. ನಾನು ಹೇಳಿದಂತೆ ನೀನು ಪ್ರತಿಜ್ಞೆಮಾಡದಿದ್ದರೆ ನಾನು ನಿನ್ನವಳಾಗಲಾರೆನು."

ಕಾಮಿಯಾದವನು ಮಾಡಲಾರದ ಪ್ರತಿಜ್ಞೆಯು ಯಾವುದು ತಾನೇ ಇರುವುದು? ಚಂದ್ರನನ್ನಾದರೂ ಕಳಚಿ ಭೂಮಿಗೆ ತರುವಷ್ಟು ಉತ್ಸಾಹೋದ್ವೇಗಗಳು ಕಾಮುಕನ ಮನಸ್ಸಿನಲ್ಲಿ ಸ್ವಾಭಾವಿಕವಾಗಿಯೇ ಇರುತ್ತವೆ. ರಾಜನು ತನ್ನ ಪ್ರೇಯಸಿಗೆ ಕೊಡಬೇಕಾದ ಪ್ರತಿಜ್ಞೆಯ ವಿಷಯವಾಗಿ ಕೇಳಿದನು. ಅವಳು ಕೇಳಿದುದು ಬಹುಸರಳವಾದ ಪ್ರತಿಜ್ಞೆ. ಅದರಲ್ಲಿಯೂ ರಾಜನಾದವನಿಗೆ ನಡೆಸಿಕೊಡಲು ಅಸಾಧ್ಯವಾದುದೇನೂ ಅಲ್ಲ. "**ನೋದಕಂ ಮೇ ದರ್ಶಯಿತವ್ಯಂ**"–"ನನಗೆ ನೀರನ್ನು ಮಾತ್ರ ತೋರಿಸಕೂಡದು ಅರ್ಥಾತ್ ನಾನು ನಿನ್ನೊಡನಿರುವ ಪರ್ಯಂತವೂ ನನಗೆ ತಟಾಕಾದಿಗಳನ್ನು ತೋರಿಸಬಾರದು."

ಅದಕ್ಕೆ ರಾಜನು ಮರುಮಾತನಾಡದೆ "ತಥಾಸ್ತು" ಎಂದನು.

ಗಾಂಧರ್ವರೀತಿಯಲ್ಲಿ ವಿವಾಹವು ನಡೆದುಹೋಯಿತು. ನೂತನಭಾರ್ಯೆಯೊಡನೆ ರಾಜನು ಮನಬಂದಂತೆ ವಿಹರಿಸುತ್ತಾ ಸಂತೋಷದಿಂದಿದ್ದನು.

ಆ ವೇಳೆಗೆ ರಾಜನನ್ನು ಹುಡುಕಿಕೊಂಡು ಅವನ ಸೈನ್ಯದವರೂ ಆ ಅರಣ್ಯದ ಬಳಿಗೇ ಧಾವಿಸಿದರು. ವಿಶ್ರಾಂತಿಸುಖವನ್ನು ಪಡೆಯುತ್ತಿದ್ದ ರಾಜನನ್ನು ಕಂಡೊಡನೆಯೇ ಅವರೆಲ್ಲರೂ ರಾಜನನ್ನು ಸುತ್ತುವರಿದು ನಿಂತರು. ತನ್ನ ಸೈನಿಕರೂ ಅಲ್ಲಿಗೇ ಬಂದದ್ದರಿಂದ ರಾಜನಿಗೂ ಬಹಳ ಆನಂದವಾಯಿತು. ಸೈನಿಕರು ತನಗಾಗಿ ತಂದಿದ್ದ ಪಲ್ಲಕ್ಕಿಯಲ್ಲಿ ನೂತನಪತ್ನಿಯನ್ನೂ ಕುಳ್ಳಿರಿಸಿಕೊಂಡು ರಾಜಧಾನಿಗೆ ಪ್ರಯಾಣಮಾಡಿದನು.

ರಾಜಧಾನಿಗೆ ಬಂದನಂತರ ರಾಜನು ವನಸುಂದರಿಗಾಗಿ ಒಂದು ನೂತನವಾದ ಅಂತಃಪುರವನ್ನು ಸಿದ್ಧಗೊಳಿಸಿ ಅಲ್ಲಿ ಅವಳನ್ನಿಟ್ಟು ಅವಳ ಜೊತೆಯಲ್ಲಿಯೇ ಸರ್ವದಾ ಇರತೊಡಗಿದನು. ಹತ್ತಿರದ ಸಂಬಂಧಿಗಳಿಗಾಗಲೀ–ಮಂತ್ರಿಗಳಿಗಾಗಲೀ ರಾಜನು ದರ್ಶನವೇ ದುರ್ಲಭವಾಯಿತು. ಒಂದು ದಿನ ಮಹಾಮಾತ್ಯನು ರಾಜಸೇವೆಗೆ ನಿಯುಕ್ತರಾಗಿದ್ದ ದಾಸಿಯರನ್ನು "ನೀವಿಲ್ಲೇನು ಮಾಡುತ್ತಿರುವಿರಿ?" ಎಂದು ಕೇಳಿದನು. ದಾಸಿಯರು ಉತ್ತರಿಸಿದರು :

"ಅಪೂರ್ವವಾದ ಸೌಂದರ್ಯದಿಂದ ಕೂಡಿದ ಯುವತಿಯೊಬ್ಬಳ ಶುಶ್ರೂಷೆಯಲ್ಲಿ ನಿರತರಾಗಿದ್ದೇವೆ. ಆ ಯುವತಿಯನ್ನು ನಮ್ಮ ರಾಜನು ಕಾಡಿನಲ್ಲಿ ಮದುವೆಯಾಗಿ, ಅವಳಿಗೆ ನದೀ-ನದ-ತಟಾಕಾದಿಗಳನ್ನು ತೋರಿಸುವುದಿಲ್ಲವೆಂದು ಪ್ರತಿಜ್ಞೆ ಮಾಡಿಕರೆತಂದಿರುವನು." ಮಂತ್ರಿಯು ಕ್ಷಣಕಾಲ ಯೋಚಿಸಿದನು. "ಹೇಗಾದರೂ ಮಾಡಿ ರಾಜನಿಗಿರುವ ಸ್ತ್ರೀವ್ಯಾಮೋಹವನ್ನು ದೂರಮಾಡಬೇಕು. ಇಲ್ಲದಿದ್ದರೆ ರಾಜ್ಯಭಾರವಾದರೂ ಹೇಗೆ ನಡೆದೀತು? ರಾಜನು ಕ್ಷಣಕಾಲವಾದರೂ ಈ ಯುವತಿಯನ್ನು ಬಿಟ್ಟಿರತಕ್ಕವನಾಗಿಲ್ಲ."– ಹೀಗೆಂದು ಯೋಚಿಸಿ ಒಂದು ಕೃತಕವಾದ ಉದ್ಯಾನವನವನ್ನು ನಿರ್ಮಾಣ ಮಾಡಿದನು. ಆ ಉದ್ಯಾನವನದಲ್ಲಿ ಫಲ-ಪುಷ್ಪಭರಿತವಾದ ಮರ-ಗಿಡ-ಬಳ್ಳಿಗಳಿದ್ದುವು. ಅನೇಕಾನೇಕ ಲತಾಕುಂಜಗಳಿದ್ದುವು. ಆ ಉದ್ಯಾನವನದ ಒಂದು

ಕಡೆಯಲ್ಲಿ ಒಂದು ಸರೋವರವನ್ನೂ ನಿರ್ಮಿಸಲಾಗಿತ್ತು. ಅದರಲ್ಲಿ ಅಮೃತ ಸಮಾನವಾದ ನೀರಿದ್ದು ಆ ಸರೋವರವನ್ನು ಮುತ್ತಿನ ಬಲೆಯಿಂದ ಮುಚ್ಚಿಡ ಲಾಗಿತ್ತು. ಕೃತಕವಾದ ನಯನಮನೋಹರವಾದ ಅಂತಹ ಉದ್ಯಾನವನವನ್ನು ಸಿದ್ಧಗೊಳಿಸಿದನಂತರ ಮಹಾಮಂತ್ರಿಯು ರಾಜನ ಬಳಿಗೆ ರಹಸ್ಯದಲ್ಲಿ ಬಂದು ಭಿನ್ನವಿಸಿಕೊಂಡನು : "ಮಹಾರಾಜ! ಇದೊಂದು ಉತ್ತಮೋತ್ತಮವಾದ ಉದ್ಯಾನವನವಾಗಿದೆ. ಈ ಉದ್ಯಾನವನದ ಯಾವ ಭಾಗದಲ್ಲಿಯೂ ನೀರಿರುವುದಿಲ್ಲ. ನೀನಿಲ್ಲಿ ಯಥೇಚ್ಛವಾಗಿ ವಿಹಾರಮಾಡಬಹುದಾಗಿದೆ."

ರಾಜನಿಗೂ ಅರಮನೆಯೊಳಗೇ ಇದ್ದು ಬಹಳ ಬೇಸರವಾಗಿದ್ದಿತು. ಒಡನೆಯೇ ತನ್ನ ಪ್ರಿಯತಮೆಯನ್ನೂ ಕರೆದುಕೊಂಡು ಮಂತ್ರಿಯು ನಿರ್ದೇಶಿ ಸಿದ ಉದ್ಯಾನವನಕ್ಕೆ ವಿಹಾರಾರ್ಥವಾಗಿ ತೆರಳಿದನು. ವಿನೂತನವಾಗಿದ್ದ ಉದ್ಯಾನವನದಲ್ಲಿ ಅನುಪಮಸೌಂದರ್ಯದಿಂದ ಕೂಡಿದ್ದ ತನ್ನ ಹೊಸ ಮಡದಿಯೊಡನೆ ರಾಜನು ಯಥೇಚ್ಛವಾಗಿ ವಿಹರಿಸಿದನು. ಅದರಿಂದ ರಾಜ ನಿಗೆ ಬಹಳ ಬಳಲಿಕೆಯಾಯಿತು. ಹಸಿವು-ಬಾಯಾರಿಕೆಗಳಿಂದ ಪರಿತಪಿ ಸಿದನು. ಸ್ವಲ್ಪದೂರದಲ್ಲಿಯೇ ಮಾಧವೀಲತಾಕುಂಜವಿದ್ದುದನ್ನು ಕಂಡು ಅದರಿಂದ ಆಕರ್ಷಿತನಾದ ರಾಜನು ಆ ಲತಾಕುಂಜದಲ್ಲಿ ವಿಶ್ರಾಂತಿಪಡೆ ಯುವ ಸಲುವಾಗಿ ತನ್ನ ಪ್ರೇಯಸಿಯನ್ನೂ ಕರೆದುಕೊಂಡು ಲತಾಕುಂಜಕ್ಕೆ ಹೋದನು. ಲತಾಕುಂಜದಲ್ಲಿ ನಿರ್ಮಿತವಾಗಿದ್ದ ಪರ್ಯಂಕದಲ್ಲಿ ಪವಡಿಸಿ ಸುಶೀತಲವಾದ ಗಾಳಿಯನ್ನು ಸೇವಿಸುತ್ತಿರುವಾಗ ರಾಜನಿಗೆ ಸಮೀಪದಲ್ಲಿಯೇ ಸರೋವರವೊಂದು ಇರುವುದು ಕಾಣಿಸಿತು. ಅಮೃತಕ್ಕೆ ಸಮಾನವಾದ ನೀರಿನಿಂದ ಕೂಡಿದ್ದ ಆ ಸರೋವರದ ದಂಡೆಯ ಮೇಲೆಯೇ ರಾಜನು ಪತ್ನಿಯೊಡನೆ ಕುಳಿತನು. ಹಸಿವು-ಬಾಯಾರಿಕೆಗಳ ಆಯಾಸದಲ್ಲಿ ತನ್ನ ಪ್ರತಿಜ್ಞೆಯನ್ನು ಸಂಪೂರ್ಣವಾಗಿ ಮರೆತುಬಿಟ್ಟನು.

ಅಮೃತಸಮಾನವಾಗಿದ್ದ, ಬಹುಸ್ವಚ್ಛವಾಗಿದ್ದ ನೀರಿನಲ್ಲಿ ಮಡದಿ ಯೊಡನೆ ಜಲಕ್ರೀಡೆಯಾಡಬೇಕೆಂಬ ಆಶೆಯುಂಟಾಯಿತು. ಅಂತೆಯೇ ತನ್ನ ಪಕ್ಕದಲ್ಲಿದ್ದ ವನಸುಂದರಿಯನ್ನು ಕೇಳಿದನು : "ಮಂಗಳಾಂಗಿಯೇ! ನೀನು ಈ ಸರೋವರದೊಳಕ್ಕೆ ಧುಮುಕುವೆಯಾ? ನಾವಿಬ್ಬರೂ ಈ ನಯನಮನೋ

ಹರವಾದ ಸರೋವರದಲ್ಲಿ ಕ್ಷಣಕಾಲವಾದರೂ ಜಲಕ್ರೀಡೆಯಾಡೋಣ.” ಪತಿಯ ಮಾತನ್ನು ಕೇಳಿದೊಡನೆಯೇ ವನಸುಂದರಿಯು ಸರೋವರದೊಳಕ್ಕೆ ಧುಮುಕಿದಳು. ರಾಜನೂ ಧುಮುಕಿದನು. ನೀರೊಳಗೆ ಹೋದ ವನಸುಂದರಿಯು ಮೇಲೆ ಬರಲಿಲ್ಲ. ತನ್ನ ಪ್ರೇಯಸಿ. ಒಂದೆರಡು ಕ್ಷಣ ಆಟವಾಡುತ್ತಿರಬಹುದೆಂದು ರಾಜನು ಭಾವಿಸಿದನು. ಎಷ್ಟು ಹೊತ್ತಾದರೂ ಮೇಲೆ ಬಾರದಿರುವುದನ್ನು ಕಂಡು ರಾಜನಿಗೆ ದುಃಖವಾಯಿತು. ಸರೋವರದ ನೀರೆಲ್ಲವನ್ನೂ ಸಂಪೂರ್ಣವಾಗಿ ಶೋಧಿಸಿದನು. ಪ್ರೇಯಸಿಯ ಕುರುಹೂ ಸಿಕ್ಕಲಿಲ್ಲ. ಹತಾಶನಾದ ರಾಜನು ರಾಜಭಟರನ್ನು ಕರೆಯಿಸಿ ಸರೋವರದ ನೀರೆಲ್ಲವನ್ನೂ ಸಂಪೂರ್ಣವಾಗಿ ಹೊರಹಾಕುವಂತೆ ಆಜ್ಞಾಪಿಸಿದನು. ಸರೋವರದ ನೀರೆಲ್ಲವನ್ನೂ ಸಂಪೂರ್ಣವಾಗಿ ಹೊರಹಾಕಿದ್ದಾಯಿತು. ಇಡೀ ಸರೋವರದಲ್ಲಿ ಒಂದು ಕಪ್ಪೆಯು ಮಾತ್ರ ವಟಗುಟ್ಟುತ್ತಾ ಪೊಟರೆಯ ಬಳಿ ಕುಳಿತಿದ್ದಿತು. ಪ್ರೇಯಸಿಯನ್ನು ಕಳೆದುಕೊಂಡ ಬುದ್ಧಿಗೆಟ್ಟ ರಾಜನಿಗೆ ಕಪ್ಪೆಯ ಮೇಲೆ ಮಹಾಕೋಪವುಂಟಾಯಿತು. ತನ್ನ ಪ್ರೇಯಸಿಯು ಸಿಕ್ಕದಿರಲು ಕಪ್ಪೆಯೇ ಕಾರಣವೆಂದು ನಿರ್ಧರಿಸಿದನು. 'ಸರ್ವತ್ರ ಮಣ್ಡೂಕ ವಧಃ ಕ್ರಿಯತಾಂ'–'ದೇಶದ ಎಲ್ಲ ಕಡೆಗಳಲ್ಲಿರುವ ಕಪ್ಪೆಗಳನ್ನೂ ಕೊಂದು ಹಾಕಿರಿ”–ಎಂದು ದೇಶಾದ್ಯಂತವಾಗಿ ಡಂಗುರಹೊಡೆಸಿದನು. ಇಷ್ಟು ಮಾತ್ರ ವಲ್ಲ. ತನ್ನನ್ನು ನೋಡಲು ಬರುವವರು ಒಂದು ಸತ್ತ ಕಪ್ಪೆಯನ್ನಾದರೂ ಕೈಯಲ್ಲಿ ತರಬೇಕೆಂತಲೂ–ಅಂತಹವರಿಗೆ ಮಾತ್ರವೇ ತಾನು ಸಂದರ್ಶನ ವೀಯುವುದಾಗಿಯೂ ಪ್ರಸಿದ್ಧಿಪಡಿಸಿದನು.

ರಾಜಾಜ್ಞೆಯೆಂದರೇನು ಸಾಮಾನ್ಯವೇ? ಮೇಲಾಗಿ ಬಹುಕಷ್ಟತರ ವಾದ ಕಾರ್ಯವನ್ನೇನಾದರೂ ರಾಜನು ಹೇಳಿದ್ದರೆ ಅದನ್ನು ಕಾರ್ಯಗತ ಮಾಡಲು ಹಿಂದೆ-ಮುಂದೆ ನೋಡಬೇಕಾಗಿತ್ತು. ಕಪ್ಪೆಗಳನ್ನು ಸಂಹಾರ ಮಾಡುವ ಕಾರ್ಯವು ತಾನೇ! ದೇಶಾದ್ಯಂತವಾಗಿ ಕಪ್ಪೆಗಳ ಸಂಹಾರ ಕಾರ್ಯವು ಪ್ರಾರಂಭವಾಯಿತು. ಕಪ್ಪೆಗಳ ಕುಲವೇ ವಿನಾಶಹೊಂದುವ ಪರಿಸ್ಥಿತಿಯು ಒದಗಿತು. ಕಪ್ಪೆಗಳೆಲ್ಲವೂ ಸೇರಿ ತಮ್ಮ ರಾಜನಲ್ಲಿ ಈ ವಿಷಯವನ್ನು ನಿವೇದನೆಮಾಡಿದುವು. ಮಂಡೂಕರಾಜನು ತನ್ನ ಪ್ರಿಯಪ್ರಜೆಗಳನ್ನು ಯಥಾಮತಿ ಸಾಂತ್ವನಗೊಳಿಸಿ, ತಪಸ್ವಿಯೊಬ್ಬನ ವೇಷಧರಿಸಿ ಪರೀಕ್ಷಿತನ ಬಳಿಗೆ

ಧಾವಿಸಿ ರಾಜನನ್ನು ಸಂದರ್ಶಿಸಿ ಹೇಳಿದನು : "ಮಹಾರಾಜ! ಕ್ರೋಧವಶನಾಗಬೇಡ. ಪ್ರಸನ್ನನಾಗು. ನಿರಪರಾಧಿಗಳಾದ ಕಪ್ಪೆಗಳನ್ನು ಕೊಲ್ಲಿಸುವುದು ಇಕ್ಷ್ವಾಕುಕುಲೋತ್ಪನ್ನನಾದ ನಿನಗೆ ಯೋಗ್ಯವಲ್ಲ." ತಪಸ್ವಿಯ ರೂಪದಲ್ಲಿದ್ದ ಮಂಡೂಕರಾಜನು ತನ್ನ ಮಾತನ್ನು ಸಮರ್ಥಿಸಲು ಎರಡು ಶ್ಲೋಕಗಳನ್ನು ಹೇಳಿದನು :

**ಮಾ ಮಣ್ಡೂಕಾನ್ ಜಿಘಾಂಸ ತ್ವಂ ಕೋಪಂ ಸಂಧಾರಯಾಚ್ಯುತ ।**
**ಪ್ರಕ್ಷೀಯತೇ ಧನೋದ್ರೇಕೋ ಜನಾನಾಮವಿಜಾನತಾಮ್ ॥೨೮॥**

**ಪ್ರತಿಜಾನೀಹಿ ನೈತಾಂಸ್ತ್ವಂ ಪ್ರಾಪ್ಯ ಕ್ರೋಧಂ ವಿಮೋಕ್ಷ್ಯಸಿ ।**
**ಅಲಂ ಕೃತ್ವಾ ತವಾಧರ್ಮಂ ಮಣ್ಡೂಕೈಃ ಕಿಂ ಹತೈರ್ಹಿ ತೇ ॥೨೯॥**

"ಮಹಾರಾಜ! ಕಪ್ಪೆಗಳನ್ನು ನಾಶಮಾಡಬೇಡ. ನಿನ್ನ ಕೋಪವನ್ನು ನಿನ್ನಲ್ಲಿಯೇ ಧಾರಣೆಮಾಡುವವನಾಗು. (ನಿನ್ನ ಕೋಪಾಗ್ನಿಯನ್ನು ಕಪ್ಪೆಗಳ ವಿನಾಶಕ್ಕಾಗಿ ಪ್ರಯೋಗಿಸಬೇಡ.) ಅಜ್ಞಾನಿಗಳಾದ ಜನರು ಪೂರ್ವಾಪರವಿವೇಚನೆಯಿಲ್ಲದೇ ಪ್ರಯೋಗಿಸುವ ಕೋಪವು ಅವರ ಸಂಪತ್ತಿನ ಉತ್ಕರ್ಷವನ್ನು ಹಾಳುಮಾಡುವುದರಲ್ಲಿ ಪರ್ಯವಸಾನಹೊಂದುತ್ತದೆ. ಕಪ್ಪೆಗಳ ಮೇಲೆ ವ್ಯರ್ಥವಾಗಿ ಕೋಪಿಸಿಕೊಂಡು ಅವುಗಳನ್ನು ಸಾಯುವಂತೆ ಮಾಡುವುದಿಲ್ಲವೆಂದು ಈಗಲೇ ನಿಶ್ಚಯಮಾಡು. ಈ ಕಪ್ಪೆಗಳು ಸತ್ತು ಹೋಗುವುದರಿಂದ ನಿನಗಾಗುವ ಪ್ರಯೋಜನವಾದರೂ ಏನಿದೆ? ಈ ಕೂಡಲೇ ನಿನ್ನ ಈ ಅಧರ್ಮಕಾರ್ಯವನ್ನು ಸಾಕುಮಾಡು."

ತನ್ನ ಪ್ರೇಯಸಿಯನ್ನು ಕಳೆದುಕೊಂಡು ಬಹು ದುಃಖಿತನಾಗಿದ್ದ ಪರೀಕ್ಷಿತನು ತಪಸ್ವಿಯ ವೇಷದಲ್ಲಿದ್ದ ಮಂಡೂಕರಾಜನ ಮಾತುಗಳನ್ನು ಕೇಳಿ ಮತ್ತಷ್ಟು ಕುಪಿತನಾಗಿ ಉತ್ತರಿಸಿದನು :

"ನಾನೆಂದಿಗೂ ಕಪ್ಪೆಗಳನ್ನು ಕ್ಷಮಿಸುವುದಿಲ್ಲ. ಅವುಗಳ ವಂಶವೇ ನಿರ್ವಂಶವಾಗಿ ಹೋಗುವವರೆಗೂ ಅವುಗಳನ್ನು ಕೊಲ್ಲಿಸುವೆನು. ಕಪ್ಪೆಯೇ ಅಲ್ಲವೇ ಸರೋವರದಲ್ಲಿ ಬಿದ್ದ ನನ್ನ ಪ್ರೇಯಸಿಯನ್ನು ನುಂಗಿಹಾಕಿದುದು? ಆದುದರಿಂದ ಕಪ್ಪೆಗಳನ್ನು ನಾನು ಕೊಲ್ಲಿಸುತ್ತಿರುವುದು ನ್ಯಾಯವಾಗಿಯೇ

ಇದೆ. ಮಹಾಮುನಿಯೇ! ನೀನು ಕಪ್ಪೆಗಳ ವಿಷಯದಲ್ಲಿ ಅನುಕಂಪಿತನಾಗಿ ಮಧ್ಯೆ ಬರಬೇಡ. ನನಗೆ ಅವುಗಳ ವಧೆಮಾಡದಂತೆಯೂ ಹೇಳಬೇಡ."

ರಾಜನ ಮಾತುಗಳನ್ನು ಕೇಳಿ ಮಂಡೂಕರಾಜನಿಗೆ ಬಹಳ ದುಃಖ ವಾಯಿತು. ಪುನಃ ರಾಜನಿಗೆ ಹೇಳಿದನು : "ಮಹಾರಾಜ! ಪ್ರಸನ್ನನಾಗು. ಇಷ್ಟು ನಿರ್ದಯನಾಗಬೇಡ. ನಾನೇ ಮಂಡೂಕರಾಜನು. ನನ್ನನ್ನೇ ಆಯುವೆಂದೂ ಕರೆಯುತ್ತಾರೆ. ನಿನ್ನ ಹೆಂಡತಿಯಾಗಿದ್ದವಳೇ ನನ್ನ ಮಗಳು. ಸುಶೋಭನಳೆಂದು ಅವಳ ಹೆಸರು. ರಾಜರನ್ನು ವಂಚಿಸುವುದೇ ಅವಳ ದುಃಸ್ವಭಾವವಾಗಿ ಹೋಗಿದೆ. ಈ ಹಿಂದೆ ಅನೇಕರಾಜರು ಇದೇ ರೀತಿಯಲ್ಲಿ ವಂಚಿತರಾಗಿದ್ದಾರೆ."

ಹಾಗೆ ವಂಚಿಸಿದ ಚೆಲುವೆಯನ್ನು ಬಿಟ್ಟುಬಿಡಲೂ ರಾಜನು ಸಿದ್ಧನಾಗಿರ ಲಿಲ್ಲ. ಮಂಡೂಕರಾಜನೊಡನೆ ಹೇಳಿದನು :

"ಅದೇ ಸುಶೋಭನೆಯನ್ನು ನಾನು ಪುನಃ ಪಡೆಯಲಿಚ್ಛಿಸುತ್ತೇನೆ. ಈಗಲೇ ಅವಳನ್ನು ನನಗೆ ತಂದೊಪ್ಪಿಸು."

ಅನ್ಯಥಾ ವಿಧಿಯಿಲ್ಲದೇ ಮಂಡೂಕರಾಜನು ತನ್ನ ಮಗಳನ್ನು ರಾಜನಿಗೆ ಒಪ್ಪಿಸಿ ಅವಳೊಡನೆ ಹೇಳಿದನು : "ಇನ್ನು ಮುಂದೆ ನೀನೀ ರಾಜನನ್ನು ಶುಶ್ರೂಷೆಮಾಡಿಕೊಂಡಿರು." ಆಯುವು ಇಷ್ಟು ಮಾತ್ರ ಹೇಳಿ ಸುಮ್ಮನಿರ ಲಿಲ್ಲ. ಅವನಿಗೆ ತನ್ನ ಮಗಳು ಅನೇಕರಾಜರನ್ನು ವಂಚಿಸಿರುವ ವಿಷಯವು ನೆನಪಿಗೆ ಬಂದಿತು. ಈಗ ತನ್ನ ಮಗಳ ಕಾರಣದಿಂದಲೇ ತನ್ನ ಅನೇಕ ಜ್ಞಾತಿ-ಬಾಂಧವರು ಹತರಾಗಿರುವುದನ್ನೂ ನೆನೆದ ಕುಪಿತನಾಗಿ ಪುನಃ ಹೇಳಿದನು :

"ಸುಶೋಭನೇ! ನೀನು ಇದುವರೆಗೆ ಅನೇಕರಾಜರನ್ನು ವಂಚಿಸಿ ಅವರನ್ನು ದುಃಖಕ್ಕೀಡುಮಾಡಿರುವೆ. ನೀನು ಮಾಡಿರುವ ವಂಚನೆಗೆ ಶಿಕ್ಷೆಯು ಆಗಿಯೇ ತೀರಬೇಕಾಗಿದೆ. ನೀನು ಅನೇಕರಾಜರನ್ನು ನಿನ್ನ ದುಃಸ್ವಭಾವದಿಂದ ವಂಚನೆಮಾಡಿರುವೆಯಾದ್ದರಿಂದ ನಿನಗೆ ಹುಟ್ಟುವ ಮಕ್ಕಳು ಬ್ರಾಹ್ಮಣರನ್ನು ಗೌರವಿಸದಿರಲಿ. (ಬ್ರಾಹ್ಮಣವಿರೋಧಿಗಳಾಗಲಿ)."

ಮಂಡೂಕರಾಜನು ತನ್ನ ಮಗಳಿಗೆ ಶಾಪಕೊಟ್ಟು ವಿಷಯವು ಪರೀಕ್ಷಿತನ ಮನಸ್ಸಿಗೆ ಅಷ್ಟಾಗಿ ಬರಲಿಲ್ಲ. ಸುಶೋಭನೆಯೊಡನೆ ರಮಿಸಬೇಕೆಂದು ಅವನ ಮನಸ್ಸು ಬಹಳ ದಿವಸಗಳಿಂದಲೂ ತವಕಿಸುತ್ತಿದ್ದಿತು. ಕಳೆದುಕೊಂಡ ಹೆಣ್ಣು ಪುನಃ ಸಿಕ್ಕಿದುದಕ್ಕಾಗಿ ತ್ರೈಲೋಕ್ಯಾಧಿಪತ್ಯವೇ ಸಿಕ್ಕಿದಷ್ಟು ಸಂತಸಗೊಂಡ ರಾಜನು ಮಂಡೂಕರಾಜನಿಗೆ ತಲೆಬಾಗಿ ನಮಸ್ಕರಿಸಿ ಆನಂದಬಾಷ್ಪಗಳನ್ನು ಸುರಿಸುತ್ತಾ ಈ ಮಾತುಗಳನ್ನು ಹೇಳಿದನು :

"ಮಂಡೂಕರಾಜನೇ! ನಿನ್ನಿಂದ ನಾನು ಗೌರವಿಸಲ್ಪಟ್ಟಿದ್ದೇನೆ. ನಿನ್ನ ಈ ಉಪಕಾರವನ್ನು ನಾನೆಂದಿಗೂ ಮರೆಯಲಾರೆನು." ಹೀಗೆ ಹೇಳಿ ಯಥೋಚಿತವಾಗಿ ಆಯುವನ್ನು ಸತ್ಕರಿಸಿದನು. ನಂತರ ಆಯುವು ತನ್ನ ಮಗಳಿಂದಲೂ ಅನುಮತಿಯನ್ನು ಪಡೆದವನಾಗಿ ಸ್ವಕ್ಷೇತ್ರಕ್ಕೆ ಹಿಂದಿರುಗಿದನು.

ಕೆಲವು ದಿನಗಳನಂತರ ರಾಜನಿಗೆ ಸುಶೋಭನೆಯಲ್ಲಿ ಮೂವರು ಮಕ್ಕಳು ಜನಿಸಿದರು. ಶಲ, ದಲ, ಬಲ–ಎಂದು ಮೂವರಿಗೂ ಅನುಕ್ರಮವಾಗಿ ರಾಜನು ನಾಮಕರಣಮಾಡಿದನು. ಹಿರಿಯ ಮಗನಾದ ಶಲನು ಪ್ರಾಪ್ತವಯಸ್ಕನಾದನಂತರ ಅವನಿಗೆ ರಾಜ್ಯಭಾರವನ್ನು ವಹಿಸಿಕೊಟ್ಟು ತಾನು ತಪಸ್ಸಿನಲ್ಲಿಯೇ ನಿಯತಮನಸ್ಕನಾಗಿ ಅರಣ್ಯಕ್ಕೆ ಹೊರಟುಹೋದನು.

ಬೇಟೆಯಾಡುವುದೂ ರಾಜರ ಒಂದು ಧರ್ಮ. ಶಲರಾಜನು ಒಂದು ದಿನ ಬೇಟೆಯಾಡಲು ರಥದಲ್ಲಿ ಕುಳಿತು ಅರಣ್ಯಕ್ಕೆ ಹೊರಟನು. ಅರಣ್ಯದಲ್ಲಿ ತನ್ನ ಕಣ್ಣಿಗೆ ಬಿದ್ದ ಒಂದು ಜಿಂಕೆಯನ್ನು ಅನುಸರಿಸಿ ಧಾವಿಸುವಂತೆ ತನ್ನ ಸಾರಥಿಗೆ ಹೇಳಿದನು. ರಥಸಾರಥ್ಯದಲ್ಲಿ ಬಹಳ ನಿಪುಣನಾಗಿದ್ದ ಸೂತನು ಶಲರಾಜನಿಗೆ ಹೇಳಿದನು : "ಮಹಾರಾಜ! ಈ ಜಿಂಕೆಯ ಹಿಂದೆ ರಥವನ್ನು ಓಡಿಸಿಕೊಂಡು ಹೋಗುವುದು ವ್ಯರ್ಥವಾದ ಶ್ರಮದಲ್ಲಿಯೇ ಪರ್ಯವಸಾನವಾಗುವುದು. ನಾವು ಕಟ್ಟಿರುವ ಈ ಕುದುರೆಗಳಿಂದ ಜಿಂಕೆಯನ್ನು ಹಿಡಿ ಯುವ ಸಾಧ್ಯತೆಯಿಲ್ಲ. ಒಂದು ವೇಳೆ ವಾಮ್ಯಶ್ವಗಳನ್ನು ಈ ರಥಕ್ಕೆ ಕಟ್ಟಿದ್ದೇ ಆದರೆ ಆಗ ಮಾತ್ರ ನಾವು ಈ ಜಿಂಕೆಯನ್ನು ಹಿಡಿಯಬಹು ದಾಗಿದೆ."

"ಸೂತನೇ! ವಾಮ್ಯಶ್ವಗಳೆಂದರೆ ಯಾವುವು? ಅವೆಲ್ಲಿ ಸಿಕ್ಕುವುವು?

ಅದರ ವಿವರಣೆಯನ್ನು ಒಡನೆಯೇ ಹೇಳು. ಇಲ್ಲದಿದ್ದರೆ ನಿನ್ನನ್ನೀಗಲೇ ಕೊಂದುಬಿಡುವೆನು."

ಮಹಾರಾಜನ ಮಾತುಗಳನ್ನು ಕೇಳಿ ಸಾರಥಿಗೆ ಬಹಳ ಭಯವಾಯಿತು. ವಾಮ್ಯಶ್ವಗಳ ವಿಷಯವಾಗಿ ಶಲರಾಜನಿಗೆ ಹೇಳುವಂತೆಯೂ ಇಲ್ಲ. ಹೇಳಿಬಿಟ್ಟರೆ ಅವುಗಳ ಒಡೆಯನಾದ ವಾಮದೇವನು ಶಾಪಕೊಟ್ಟಾನೆಂಬ ಭಯ. ಹೇಳದಿದ್ದರೆ ಶಲರಾಜನು ಬಿಡುವುದಿಲ್ಲ. ಕೊಲ್ಲಲು ಸಿದ್ಧನಾಗಿದ್ದಾನೆ. ಅಂತಹ ಸಂದಿಗ್ಧಸ್ಥಿತಿಯಲ್ಲಿ ಸಿಕ್ಕಿಕೊಂಡ ಸಾರಥಿಯು ಕ್ಷಣಕಾಲ ಮೌನಿಯಾಗಿದ್ದನು. ಶಲರಾಜನು ಒಂದೆರಡು ಕ್ಷಣಗಳು ಸುಮ್ಮನಿದ್ದು ಅನಂತರ ತನ್ನ ಕೈಯಲ್ಲಿದ್ದ ಭರ್ಜಿಯನ್ನು ಮೇಲೆತ್ತಿ ಹೇಳಿದನು :

"ಸಾರಥಿಯೇ! ಒಡನೆಯೇ ಹೇಳು. ಇಲ್ಲದಿದ್ದರೆ ಈಗಲೇ ಕೊಂದು ಬಿಡುವೆನು."

ವಾಮ್ಯಶ್ವಗಳ ವಿಷಯವಾಗಿ ಹೇಳದಿದ್ದರೆ ಪ್ರಾಣವೇ ಉಳಿಯಲಾರ ದೆಂಬುದು ಸಾರಥಿಗೆ ನಿಶ್ಚಿತವಾಯಿತು. ಋಷಿಯ ಶಾಪದ ವಿಷಯವಾಗಿ ಯೋಚಿಸದೇ ವಾಮ್ಯಶ್ವಗಳ ವಿಷಯವನ್ನು ರಾಜಕುಮಾರನಿಗೆ ವಿವರಿಸಿ ಹೇಳಿದನು :

"ಮಹಾರಾಜ! ಭರ್ಜಿಯನ್ನು ಹಿಂದಕ್ಕೆ ತೆಗೆದುಕೋ. ಎಲ್ಲವನ್ನೂ ವಿಶದವಾಗಿ ಹೇಳುತ್ತೇನೆ. ವಾಮ್ಯಶ್ವಗಳು ವಾಮದೇವನೆಂಬ ಬ್ರಾಹ್ಮಣನ ಬಳಿಯಲ್ಲಿವೆ. ಅವುಗಳು ಮನೋವೇಗವನ್ನನುಸರಿಸಿ ಓಡಬಲ್ಲುವು."

ಸಾರಥಿಯು ಹೀಗೆ ಹೇಳಿದೊಡನೆಯೇ ರಥವನ್ನು ವಾಮದೇವನ ಆಶ್ರ ಮಕ್ಕೆ ಬಿಡುವಂತೆ ಶಲರಾಜನು ಆಜ್ಞಾಪಿಸಿದನು. ಆಶ್ರಮದ ಸಮೀಪಕ್ಕೆ ಹೋಗಿ ರಥದಿಂದಿಳಿದು ಆಶ್ರಮದೊಳಕ್ಕೆ ಹೋಗಿ ಶಲರಾಜನು ಆಶ್ರಮ ದಲ್ಲಿದ್ದ ವಾಮದೇವನಿಗೆ ನಮಸ್ಕರಿಸಿ ಬದ್ಧಾಂಜಲಿಯಾಗಿ ಪ್ರಾರ್ಥಿಸಿದನು :

"ಮಹರ್ಷೇ! ನನ್ನ ಬಾಣಾಘಾತಕ್ಕೆ ಸಿಕ್ಕಿದ ಜಿಂಕೆಯೊಂದು ತಪ್ಪಿಸಿ ಕೊಂಡು ಓಡುತ್ತಿದೆ. ಅದನ್ನು ಹಿಡಯಬೇಕಾದರೆ ನನ್ನ ರಥಕ್ಕೆ ನಿನ್ನಲ್ಲಿರುವ ವಾಮ್ಯಶ್ವಗಳನ್ನು ಕಟ್ಟುವುದರಿಂದ ಮಾತ್ರವೇ ಸಾಧ್ಯವಾಗುವುದು. ಆದುದ

ರಿಂದ ನಿನ್ನಲ್ಲಿರುವ ಒಂದು ಜೊತೆ ಕುದುರೆಗಳನ್ನು ಕೊಟ್ಟು ನನ್ನ ಕಾರ್ಯವು ಸುಗಮವಾಗುವಂತೆ ಮಾಡಿಕೊಡು."

ಅದಕ್ಕುತ್ತರವಾಗಿ ವಾಮದೇವನು ಹೇಳಿದನು. "ಶಲರಾಜನೇ! ನಾನು ನಿನ್ನ ಇಂದಿನ ಕಾರ್ಯಕ್ಕಾಗಿ ನನ್ನಲ್ಲಿರುವ ಒಂದು ಜೊತೆ ಕುದುರೆಗಳನ್ನು ಕೊಡುತ್ತೇನೆ. ಆದರೆ ನಿನ್ನ ಕಾರ್ಯವು ಮುಗಿದೊಡನೆಯೇ ನೀನವುಗಳನ್ನು ತಂದುಕೊಡಬೇಕು. ಈ ನಿಬಂಧನೆಯೊಡನೆ ನಾನವುಗಳನ್ನು ಕೊಡುತ್ತೇನೆ." ಹೀಗೆಂದು ಹೇಳಿ ವಾಮದೇವನು ವಾಮ್ಯಶ್ವಗಳನ್ನು ರಾಜಕುಮಾರನಿಗೆ ಕೊಟ್ಟನು.

ರಾಜಕುಮಾರನು ಒಡನೆಯೇ ತನ್ನ ರಥಕ್ಕೆ ಆ ಕುದುರೆಗಳನ್ನು ಕಟ್ಟಿಸಿ ವಾಮದೇವನ ಅನುಮತಿಯನ್ನು ಪಡೆದು ಆಶ್ರಮದಿಂದ ಹೊರಟು ಜಿಂಕೆಯನ್ನು ಬೆನ್ನಟ್ಟಿದನು. ಹೋಗುವಾಗ ದಾರಿಯಲ್ಲಿಯೇ ಸಾರಥಿಯನ್ನು ಕುರಿತು ರಾಜಕುಮಾರನು ಹೇಳಿದನು :

"ಸಾರಥಿಯೇ! ಈ ಅಶ್ವರತನ್ನಗಳು ಈ ಬ್ರಾಹ್ಮಣನ ಬಳಿಯಲ್ಲಿರಲು ಯೋಗ್ಯವಾದುವುಗಳಲ್ಲ. ಆದುದರಿಂದ ಈ ಕುದುರೆಗಳನ್ನು ವಾಮದೇವನಿಗೆ ಹಿಂದಿರುಗಿಸುವುದಿಲ್ಲ." ಹೀಗೆ ಹೇಳುತ್ತಿರುವಾಗಲೇ ಮನೋವೇಗದಿಂದ ಓಡುತ್ತಿದ್ದ ಆ ಕುದುರೆಗಳು ಜಿಂಕೆಯನ್ನು ಹಿಡಿದುವು. ಮರುಕ್ಷಣದಲ್ಲಿಯೇ ರಾಜಕುಮಾರನು ಜಿಂಕೆಯನ್ನು ಬೇಟೆಮಾಡಿ ಅದರೊಡನೆ ತನ್ನ ರಾಜಧಾನಿಯನ್ನು ಹೇರಿ ಉತ್ತಮೋತ್ತಮವಾದ ಆ ಕುದುರೆಗಳನ್ನು ತನ್ನ ಅಂತಃಪುರ ದಲ್ಲಿ ಬಚ್ಚಿಟ್ಟನು.

ಎಷ್ಟು ದಿನಗಳಾದರೂ ಕುದುರೆಗಳು ಹಿಂದಿರುಗಲಿಲ್ಲ. ವಾಮದೇವನು ಬಹುವಾಗಿ ಯೋಚಿಸಿದನು-'ಈ ಶಲರಾಜನಿನ್ನೂ ಯುವಕನು ; ಪೂರ್ವಾಪರ ವಿವೇಚನೆಯಿಲ್ಲದವನು. ನನ್ನ ಅಶ್ವರತ್ನಗಳನ್ನು ಪಡೆದು ಅವುಗಳೊಡನೆ ಆನಂದದಿಂದ ವಿಹರಿಸುತ್ತಿರುವನು. ಅವುಗಳನ್ನು ನನಗೆ ಹಿಂದಿರುಗಿಸಬೇಕೆಂಬ ಆಶಯವೇ ಅವನಿಗೆ ಇಲ್ಲವಾಗಿದೆ. ನಿಶ್ಚಯವಾಗಿಯೂ ಎಂತಹ ದುಷ್ಕಾಲ ವಿದು ?'-ಹೀಗೆಂದು ಯೋಚಿಸುತ್ತಾ , ಒಂದು ತಿಂಗಳು ಕಳೆದನಂತರ ತನ್ನ ಶಿಷ್ಯನೊಬ್ಬನನ್ನು ಕರೆದು ಹೇಳಿದನು : "ಆತ್ರೇಯನೇ! ಈಗಲೇ ನೀನು

ಇಕ್ಷ್ವಾಕುವಂಶೋತ್ಪನ್ನನಾದ ಶಲರಾಜನ ಬಳಿಗೆ ಹೋಗಿ ವಾಮ್ಯಶ್ವಗಳ ಕಾರ್ಯವು ಮುಗಿದಿದ್ದರೆ ಕೂಡಲೇ ಹಿಂದಿರುಗಿ ಕಳುಹಿಸಿಕೊಡುವಂತೆ ಹೇಳಿ ಬಾ."

ಗುರುವಿನ ಮಾತಿನಂತೆ ಆತ್ರೇಯನು ಶಲನ ಬಳಿಗೆ ಹೋಗಿ ಹೇಳಿದನು. "ಮಹಾರಾಜ! ನಿನಗೆ ಮಂಗಳವಾಗಲಿ. ಕುದುರೆಗಳಿಂದಾಗ ಬೇಕಾಗಿದ್ದ ಕಾರ್ಯವು ಮುಗಿದಿದ್ದರೆ ಈ ಕೂಡಲೇ ಅವುಗಳನ್ನು ನಮ್ಮ ಗುರುಗಳಾದ ವಾಮದೇವರ ಆಶ್ರಮಕ್ಕೆ ಕಳುಹಿಸು. ಹೀಗೆ ನನ್ನ ಗುರುಗಳ ಆಜ್ಞೆಯಾಗಿರುವುದು."

ಅದಕ್ಕುತ್ತರವಾಗಿ ರಾಜಕುಮಾರನು ಹೇಳಿದನು : "ಎಲೈ ಬ್ರಾಹ್ಮಣನೇ! ಈ ಕುದುರೆಗಳು ರಾಜರಲ್ಲಿರಲು ಅರ್ಹವಾಗಿವೆ. ಬ್ರಾಹ್ಮಣರು ಇಂತಹ ಅನರ್ಘರತ್ನಗಳನ್ನು ತಮ್ಮಲ್ಲಿಟ್ಟುಕೊಳ್ಳಲು ನಿಶ್ಚಯವಾಗಿಯೂ ಅರ್ಹರಲ್ಲ. ಮೇಲಾಗಿ ಬ್ರಾಹ್ಮಣರಿಗೆ ಈ ಕುದುರೆಗಳಿಂದಾಗುವ ಪ್ರಯೋಜನವು ತಾನೇ ಏನಿರುವುದು? ಕುದುರೆಗಳನ್ನು ಕಟ್ಟಿಕೊಂಡು ಬ್ರಾಹ್ಮಣರು ಏನು ಮಾಡಿ ಯಾರು! ನಿಮ್ಮ ಗುರುಗಳಲ್ಲಿರುವ ಸಮಿತ್ಕುಶಗಳೇ ಅವರ ತಪಸ್ಸಿಗೆ ಬೇಕಾ ಗುವ ಸಾಧನಗಳಾಗಿವೆ. ಅವುಗಳಿಂದಲೇ ಅವರು ತೃಪ್ತಿಯನ್ನು ಪಡೆಯುವುದು ಸೂಕ್ತವಾಗಿದೆ. ಕುದುರೆಗಳು ನಿಮಗಿನ್ನು ಸಿಕ್ಕಲಾರವು. ನೀನಿನ್ನು ಹಿಂದಿರುಗಬಹುದು."

ಋಷಿಪುತ್ರನಾದ ಆತ್ರೇಯನು ಮರುಮಾತನಾಡದೇ ಆಶ್ರಮಕ್ಕೆ ಹಿಂದಿ ರುಗಿ ಶಲರಾಜನು ಹೇಳಿದಂತೆಯೇ ವಾಮದೇವನ ಸನ್ನಿಧಿಯಲ್ಲಿ ಸಕಲವನ್ನೂ ಬಿನ್ನವಿಸಿದನು. ದುರ್ಬುದ್ಧಿಯಾದ ಶಲರಾಜನ ಮಾತುಗಳನ್ನು ಕೇಳಿ ವಾಮದೇವನು ಕೋಪಾವಿಷ್ಟನಾಗಿ ತಾನೇ ನೇರವಾಗಿ ಶಲರಾಜನ ಬಳಿಗೆ ಹೋಗಿ ತನ್ನ ಕುದುರೆಗಳನ್ನು ಒಡನೆಯೇ ಹಿಂದಿರುಗಿಸುವಂತೆ ರಾಜನನ್ನು ಎಚ್ಚರಿಸಿದನು. ವಾಮದೇವನೇ ಸಾಕ್ಷಾತ್ತಾಗಿ ಬಂದು ಕೇಳುತ್ತಿದ್ದರೂ ಶಲ ರಾಜನು ಬ್ರಾಹ್ಮಣನ ಮೇಲಿನ ತಿರಸ್ಕಾರಭಾವದಿಂದ ಕುದುರೆಗಳನ್ನು ಕೊಡು ವುದಿಲ್ಲವೆಂದು ನಿಶ್ಚಿತವಾಗಿ ಹೇಳಿಬಿಟ್ಟನು. ವಾಮದೇವನು ಪುನಃ ಎಚ್ಚರಿಸಿ ಹೇಳಿದನು :

**ಪ್ರಯಚ್ಛ ವಾಮ್ಯೌ ಮಮ ಪಾರ್ಥಿವ ತ್ವಂ**
**ಕೃತಂ ಹಿ ತೇ ಕಾರ್ಯಮಾಭ್ಯಾಮಕಶ್ಯಮ್ ।**
**ಮಾ ತ್ವಾ ವಧೀದ್ವರುಣೋ ಘೋರಪಾಶೈ-**
**ರ್ಬ್ರಹ್ಮಕ್ಷತ್ರಸ್ಯಾನ್ತರೇ ವರ್ತಮಾನಮ್ ॥೪೮॥**

"ಮಹಾರಾಜ! ಕ್ಷತ್ರಿಯರ ಧರ್ಮಕ್ಕೆ ಕಳಂಕವನ್ನು ತರಬೇಡ. ನಿನಗೆ ಮಾಡಲು ಸಾಧ್ಯವಾಗದಿರುವ ಕಾರ್ಯವನ್ನು ನನ್ನ ಕುದುರೆಗಳು ಮಾಡಿ ಕೊಟ್ಟಿವೆ. ಇಷ್ಟರಿಂದಲೇ ತೃಪ್ತನಾಗು. ಇತರರ ಸ್ವತ್ತಿನ ಅಪಹಾರಕ್ಕೆ ಯತ್ನಿಸಬೇಡ. ಹಾಗೆ ಮಾಡುವುದು ಕ್ಷತ್ರಿಯಧರ್ಮಕ್ಕೆ ಬಹಳ ಅನುಚಿತ ವೆನಿಸುವುದು. ಕ್ಷತ್ರಿಯಧರ್ಮವನ್ನೂ ಮೀರಿ ಬ್ರಾಹ್ಮಣಸ್ವತ್ತಿನ ಅಪಹಾರವನ್ನು ಮಾಡಲು ಯತ್ನಿಸಬೇಡ. ಘೋರಪಾಶವನ್ನು ಹೊಂದಿರುವ ವರುಣನು ನಿನ್ನನ್ನು ಸಂಹರಿಸದಿರಲಿ. (ಸಂಹರಿಸಲು ಅವಕಾಶವನ್ನೀಯ ಬೇಡ.)"

ಶಲರಾಜನು ವಾಮದೇವನ ಆ ಮಾತುಗಳನ್ನೂ ಗಣನೆಗೆ ತೆಗೆದು ಕೊಳ್ಳಲಿಲ್ಲ. ಬಹಳ ಲಾಘವದಿಂದಲೇ ಮಹರ್ಷಿಗೆ ಉತ್ತರಿಸಿದನು :

**ಅನಡ್ವಾಹೌ ಸುವ್ರತೌ ಸಾಧು ದಾನ್ತಾ-**
**ವೇತದ್ವಿಪ್ರಾಣಾಂ ವಾಹನಂ ವಾಮದೇವ ।**
**ತಾಭ್ಯಾಂ ಯಾಹಿ ತ್ರಂ ತತ್ರ ಕಾಮೋ ಮಹರ್ಷೇ**
**ಛನ್ದಾಂಸಿ ವೈ ತ್ವಾದೃಶಂ ಸಂ ವಹನ್ತಿ ॥೪೯॥**

"ವಾಮದೇವನೇ! ನೀನಿನ್ನು ಈ ಕುದುರೆಗಳ ಯೋಚನೆಯನ್ನೇ ಬಿಟ್ಟುಬಿಡು. ಇಲ್ಲಿರುವ, ಪಳಗಿದ, ಬಹುಸಾಧುಸ್ವಭಾವದಿಂದ ಕೂಡಿರುವ ಈ ಎರಡೆತ್ತುಗಳು ಬ್ರಾಹ್ಮಣರಿಗೆ ಯೋಗ್ಯವಾಗಿವೆ. ಕುದುರೆಗಳ ಬದಲಾಗಿ ಈ ಎತ್ತುಗಳನ್ನು ಹಿಡಿದುಕೊಂಡು ಹೋಗು. ನಿನಗೀ ಎತ್ತುಗಳಾದರೂ ಏಕೆ? ವಾಮದೇವ! ನಿನ್ನಂತಹ ಬ್ರಾಹ್ಮಣನನ್ನು ನೀನಾರಾಧಿಸುವ ನಾಲ್ಕು ವೇದಗಳೇ ಎತ್ತಿಕೊಂಡು ಹೋಗುವುವು. ಹೀಗಿರುವಾಗ ಕುದುರೆಗಳಾಗಲೀ– ಎತ್ತುಗಳಾಗಲೀ ಬೇಕಾಗುವುವೇ?"

ರಾಜಕುಮಾರನು ಬಹಳ ದುರಭಿಮಾನದಿಂದ ತನ್ನನ್ನು ಹಳಿದು

ಮಾತನಾಡುತ್ತಿರುವನೆಂದು ವಾಮದೇವನಿಗೆ ತಿಳಿಯಿತು. ವಾಮದೇವನೂ ಅದಕ್ಕೆ ಅನುರೂಪವಾಗಿಯೇ ಉತ್ತರವಿತ್ತನು :

**ಛನ್ದಾಂಸಿ ವೈ ಮಾದೃಶಂ ಸಂವಹನ್ತಿ**
**ಲೋಕೇಽಮುಷ್ಮಿನ್ಪಾರ್ಥಿವ ಯಾನಿ ಸನ್ತಿ ।**
**ಅಸ್ಮಿಂಸ್ತು ಲೋಕೇ ಮಮ ಯಾನಮೇತ-**
**ದಸ್ಮದ್ವಿಧಾನಾಮಪರೇಷಾಂ ಚ ರಾಜನ್ ॥೫೦॥**

"ನಿಜ, ಮಹಾರಾಜ! ನಾನು ಅನುದಿನವೂ ಪಾರಾಯಣಮಾಡುವ ವೇದಗಳೇ ನನ್ನನ್ನು ಎತ್ತಿಕೊಂಡು ಹೋಗುವುವು. ಆದರೆ ಅವುಗಳು ನನ್ನನ್ನು ಎತ್ತಿಕೊಂಡು ಹೋಗುವುದು ಅವಸಾನಾನಂತರದಲ್ಲಿ ಮತ್ತು ಪರಲೋಕಕ್ಕೆ–ತಿಳಿಯಿತೇ? ಈ ಪ್ರಪಂಚದಲ್ಲಿ ಮಾತ್ರ ನನ್ನ ಕುದುರೆಯಂತಹ ಪ್ರಾಣಿಗಳೇ ನನ್ನನ್ನಾಗಲೀ, ನಿನ್ನನ್ನಾಗಲೀ, ಇತರರನ್ನಾಗಲೀ–ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಒಯ್ಯಲೇಬೇಕಾಗುತ್ತದೆ."

ಶಲರಾಜ :

**ಚತ್ವಾರಸ್ತ್ವಾಂ ವಾ ಗರ್ದಭಾಃ ಸಂವಹನ್ತು**
**ಶ್ರೇಷ್ಠಾಶ್ವತರ್ಯೋ ಹರಯೋ ವಾತರಂಹಾಃ ।**
**ತೈಸ್ತ್ವಂ ಯಾಹಿ ಕ್ಷತ್ರಿಯಸ್ಯೈಷ ವಾಹೋ**
**ಮಮೈವ ವಾಮ್ಯೌ ನ ತವೈತೌ ಹಿ ವಿದ್ಧಿ ॥೫೧॥**

"ಹಾಗಾದರೆ ನಿನ್ನನ್ನು ಹೊತ್ತುಕೊಂಡು ಹೋಗಲು ನಾಲ್ಕು ಕತ್ತೆಗಳನ್ನೋ, ನಾಲ್ಕು ಹೇಸರಗತ್ತೆಗಳನ್ನೋ ಅಥವಾ ನಾಲ್ಕು ಉತ್ತಮಜಾತಿಯ ಕುದುರೆಗಳನ್ನೋ ಕೊಡುತ್ತೇನೆ. ತೆಗೆದುಕೊಂಡು ಹೋಗು. ಆದರೆ ಈ ಉತ್ತಮೋತ್ತಮವಾದ ವಾಮ್ಯಶ್ವಗಳು ಮಾತ್ರ ಕ್ಷತ್ರಿಯನಲ್ಲಿರಲು ಅರ್ಹವಾದುವುಗಳೇ ಹೊರತು ಬ್ರಾಹ್ಮಣನಲ್ಲಿರಲು ಖಂಡಿತವಾಗಿಯೂ ಯೋಗ್ಯವಾದುವುಗಳಲ್ಲ. ಆದುದರಿಂದ ಈ ಕುದುರೆಗಳು ನಿನ್ನವಲ್ಲವೆಂಬುದನ್ನು ನಿಶ್ಚಯಮಾಡಿ ತಿಳಿದುಕೋ. ಪುನಃ ನಾನವುಗಳನ್ನು ನಿನಗೆ ಖಂಡಿತವಾಗಿಯೂ ಕೊಡುವುದಿಲ್ಲ."

ಬ್ರಾಹ್ಮಣನ ಸಹನೆಯೂ ಮೀರಿತು. ರಾಜಕುಮಾರನನ್ನು ಕುರಿತು ವಾಮದೇವನು ಹೇಳಿದನು :

**ಘೋರಂ ವ್ರತಂ ಬ್ರಾಹ್ಮಣಸ್ಯೈತದಾಹು-**
**ರೇತದ್ರಾಜನ್ಯದಿಹಾಜೀವಮಾನಃ ।**
**ಅಯಸ್ಮಯಾ ಘೋರರೂಪಾ ಮಹಾನ್ತ-**
**ಶ್ಚತ್ವಾರೋ ವಾ ಯಾತುಧಾನಾಃ ಸುರೌದ್ರಾಃ ॥**
**ಮಯಾ ಪ್ರಯುಕ್ತಾಸ್ತ್ವದ್ವಧಮೀಪ್ಸಮಾನಾ**
**ವಹನ್ತು ತ್ವಾಂ ಶಿತಶೂಲಾಶ್ಚತುರ್ಧಾ ॥೫೨॥**

"ರಾಜಕುಮಾರನೇ! ಅನೇಕವಿಧವಾದ ಕಠಿನವ್ರತಗಳು ಬ್ರಾಹ್ಮಣರಿಗೆ ಉಕ್ತವಾಗಿವೆ. ಆ ಕಠಿನವ್ರತಗಳನ್ನು ನಾನು ಪರಿಪಾಲನೆಮಾಡಿರುವುದೇ ಆದರೆ–ನಾಲ್ಕುಮಂದಿ ಬಹುಭಯಂಕರರಾದ, ಘೋರರೂಪಿಗಳಾದ ರಾಕ್ಷಸರು ಈಗಲೇ ಬಂದು, ನನ್ನಿಂದ ಪ್ರೇರಿತರಾಗಿ, ತಮ್ಮ ನಿಶಿತವಾದ ಭರ್ಜಿಗಳ ಮೂಲಕ ನಿನ್ನನ್ನೆತ್ತಿ ನಿನ್ನನ್ನು ನಾಲ್ಕು ತುಂಡುಗಳಾಗಿ ಕತ್ತರಿಸಿ ಹಾಕಲಿ."

ಶಲರಾಜ :

**ಯೇ ತ್ವಾಂ ವಿದುರ್ಬ್ರಾಹ್ಮಣಂ ವಾಮದೇವ**
**ವಾಚಾ ಹನ್ತುಂ ಮನಸಾ ಕರ್ಮಣಾ ವಾ ।**
**ತೇ ತ್ವಾಂ ಸಶಿಷ್ಯಮಿಹ ಪಾತಯನ್ತು**
**ಮದ್ವಾಕ್ಯನುನ್ನಾಃಶಿತಶೂಲಾಸಿಹಸ್ತಾಃ ॥೫೩॥**

"ವಾಮದೇವನೇ! (ವಾಚಾ, ಮನಸಾ, ಕರ್ಮಣಾ ನನ್ನನ್ನು ನೀನು ಸಂಹರಿಸಲು ನಿಶ್ಚಯಿಸಿರುವೆಯಲ್ಲವೇ?) ನಿನ್ನ ಈ ಕ್ರೂರವಾದ ಮಾತುಗಳನ್ನು ಕೇಳಿಯೂ ನೀನು ಕೇವಲ ಬ್ರಾಹ್ಮಣನೆಂದು ತಿಳಿದು ಯಾವ ನನ್ನ ರಾಜಭಟರು ಇದುವರೆಗೂ ಸುಮ್ಮನಿರುವರೋ–ಆ ನನ್ನ ರಾಜಭಟರು ನನ್ನ ಆಜ್ಞಾನುಸಾರವಾಗಿ ನಿನ್ನನ್ನೂ, ನಿನ್ನ ಶಿಷ್ಯರನ್ನೂ ಭರ್ಜಿಗಳಿಂದಲೂ, ಕತ್ತಿಗಳಿಂದಲೂ ಕೊಂದು ನನ್ನ ಮುಂದೆ ಹಾಕಲಿ."

ವಾಮದೇವನು ಪುನಃ ತಾಳ್ಮೆಯಿಂದಲೇ ಹೇಳಿದನು :

ಮಮೈತೌ ವಾಮ್ಯೌ ಪ್ರತಿಗೃಹ್ಯ ರಾಜ-
ನ್ಪುನರ್ದದಾನೀತಿ ಪ್ರಪದ್ಯ ಮೇ ತ್ವಮ್ ।
ಪ್ರಯಚ್ಛ ಶೀಘ್ರಂ ಮಮ ವಾಮ್ಯೌ ತ್ವಮಶ್ವೌ
ಯದ್ಯಾತ್ಮಾನಂ ಜೀವಿತುಂ ತೇ ಕ್ಷಮಂ ಸ್ಯಾತ್ ॥೫೪॥

"ಮಹಾರಾಜ! ಇನ್ನೂ ಒಮ್ಮೆ ಎಚ್ಚರಿಸುತ್ತೇನೆ. ನನ್ನಿಂದ ನೀನು ವಾಮ್ಯಶ್ವಗಳನ್ನು ಪಡೆಯುವಾಗ ಹಿಂದಿರುಗಿಸಿಕೊಡುವೆನೆಂದು ಹೇಳಿದ್ದೆಯಲ್ಲವೇ? ಈಗಲೂ ಕಾಲವು ಮೀರಿಲ್ಲ. ನಿನಗಿನ್ನೂ ಬದುಕಿರಬೇಕೆಂಬ ಆಶಯವಿರುವುದಾದಲ್ಲಿ ನನ್ನ ವಾಮ್ಯಶ್ವಗಳನ್ನು ಶೀಘ್ರವಾಗಿ ಕೊಟ್ಟುಬಿಡು."

ಶಲರಾಜ :

ನ ಬ್ರಾಹ್ಮಣೇಭ್ಯೋ ಮೃಗಯಾ ಪ್ರಸೂತಾ-
ನ ತ್ವಾನುಶಾಸ್ಮ್ಯದ್ಯಪ್ರಭೃತಿ ಹ್ಯಸತ್ಯಮ್ ।
ತವೈವಾಜ್ಞಾಂ ಸಮ್ಪ್ರಣಿಧಾಯ ಸರ್ವಾಂ
ತಥಾ ಬ್ರಹ್ಮನ್ಪುಣ್ಯಲೋಕಂ ಲಭೇಯಮ್ ॥೫೫॥

"ವಾಮದೇವ! ಹೆಚ್ಚು ಮಾತನಾಡಿ ಪ್ರಯೋಜನವಿಲ್ಲ. ವಾಮ್ಯಶ್ವ ಗಳು ಜಿಂಕೆಯ ಬೆನ್ನಟ್ಟಲು ಬೇಕಾಗುವುವು. ಜಿಂಕೆಗಳನ್ನು ಬೇಟೆಯಾಡುವ ಅಥವಾ ಬೆನ್ನಟ್ಟುವ ಕೆಲಸ ಬ್ರಾಹ್ಮಣರದಲ್ಲ. ಬ್ರಾಹ್ಮಣರಿಗೆ ಸಲ್ಲದ ಕಾರ್ಯವನ್ನು ಮಾಡುತ್ತಿರುವುದಕ್ಕಾಗಿ ನಿನ್ನನ್ನು ನಾನೇ ಶಿಕ್ಷಿಸಬೇಕಾಗಿದ್ದಿತು. ನೀನು ಅಸತ್ಯವಾದಿಯಾದರೂ ನಾನು ನಿನ್ನನ್ನು ಶಿಕ್ಷಿಸುವುದಿಲ್ಲ. ಇಂದಿನಿಂದಲೇ ಬೇಕಾದರೂ ನಾನು ನಿನ್ನ ಮಾತಿನಂತೆ ನಡೆದು ಅನೇಕ ಉತ್ತಮಲೋಕಗಳನ್ನು ಸಾಧಿಸಬಹುದಾಗಿದೆ. ಆದರೆ ನಿನ್ನ ಮಾತಿನಂತೆ ನಿನಗೆ ಈ ಕುದುರೆಗಳನ್ನು ಮಾತ್ರ ಹಿಂದಿರುಗಿಸುವ ಇಚ್ಛೆಯು ನನಗಿಲ್ಲ."

ವಾಮದೇವ :

ನಾನುಯೋಗಾ ಬ್ರಾಹ್ಮಣಾನಾಂ ಭವನ್ತಿ
ವಾಚಾ ರಾಜನ್ ಮನಸಾ ಕರ್ಮಣಾ ವಾ ।

ಯಸ್ತ್ವೇವಂ ಬ್ರಹ್ಮ ತಪಸಾನ್ವೇತಿ ವಿದ್ವಾಂ-
ಸ್ತೇನ ಶ್ರೇಷ್ಠೋ ಭವತಿ ಹಿ ಜೀವಮಾನಃ ॥೫೬॥

"ಬ್ರಾಹ್ಮಣನಾದವನನ್ನು ಕಾರ್ಯದಿಂದಾಗಲೀ, ಮಾತಿನಿಂದಾಗಲೀ, ಮನಸ್ಸಿನಿಂದಾಗಲೀ–ಶಿಕ್ಷಿಸಕೂಡದು. ಯಾವ ಕಾರಣದಿಂದ ವಿದ್ಯಾವಂತನಾದ ಬ್ರಾಹ್ಮಣನು ತಪಸ್ಸಿನಿಂದ ಬ್ರಹ್ಮಸಾಕ್ಷಾತ್ಕಾರವನ್ನು ಪಡೆದುಕೊಂಡಿರುವನೋ–ಅದೇ ಕಾರಣದಿಂದ ಅವನು ಜೀವಿಸಿರುವ ಎಲ್ಲ ಪ್ರಾಣಿಗಳಿಗಿಂತಲೂ ಶ್ರೇಷ್ಠನೆನಿಸಿಕೊಳ್ಳುತ್ತಾನೆ. (ಆದರೆ ನೀನು ಅಂತಹ ಬ್ರಾಹ್ಮಣನನ್ನು ಕಾರ್ಯದಿಂದ, ಮಾತಿನಿಂದ ಮತ್ತು ಮನಸ್ಸಿನಿಂದ ಶಿಕ್ಷಿಸಹೊರಟಿರುವೆ. ಅದಕ್ಕೆ ಅನುರೂಪವಾದ ಫಲವನ್ನು ನೀನೀಗಲೇ ಪಡೆಯುವೆ.)"

ಯುಧಿಷ್ಠಿರ! ವಾಮದೇವನು ಹೀಗೆ ಹೇಳಿದೊಡನೆಯೇ ನಾಲ್ಕು ಮಂದಿ ಬೃಹದಾಕಾರದ ರಾಕ್ಷಸರು ಆವಿರ್ಭೂತರಾದರು. ನಾಲ್ವರೂ ರಾಜನನ್ನು ಮುತ್ತಿ ತಮ್ಮ ಭರ್ಜಿಗಳಿಂದ ರಾಜನನ್ನು ಹಿಡಿದೆತ್ತಿ ಸಂಹರಿಸುವಷ್ಟರಲ್ಲಿಯೇ ರಾಜಕುಮಾರನು ಗಟ್ಟಿಯಾಗಿ ಕೂಗಿ ಹೇಳಿದನು:

ಇಕ್ಷ್ವಾಕವೋ ಯದಿ ವಾ ಮಾಂ ತ್ಯಜೇಯು-
ರ್ವಿಧೇಯಾ ಮೇ ಯದಿ ಚೇಮೇ ವಿಶೋಽಪಿ ।
ನೋತ್ಸ್ರಕ್ಷ್ಯೇಽಹಂ ವಾಮದೇವಸ್ಯ ವಾಮ್ಯೌ
ನೈವಂವಿಧಾ ಧರ್ಮಶೀಲಾ ಭವನ್ತಿ ॥೫೮॥

"ವಾಮದೇವನೇ! ನನ್ನನ್ನು ಕೊಂದ ಮಾತ್ರದಿಂದ ನಿನಗೆ ವಾಮ್ಯಶ್ವಗಳು ಸಿಕ್ಕುವುದೆಂದು ಭ್ರಾಂತನಾಗಬೇಡ. ನನ್ನ ಆಜ್ಞೆಗೆ ಒಳ ಪಟ್ಟಿರುವ ದಲನೇ ಆಗಲೀ, ಇಕ್ಷ್ವಾಕುಗಳಲ್ಲಿ ಯಾರೇ ಆಗಲೀ–ಈ ಕುದುರೆಗಳನ್ನು ನಿನಗೆ ಕೊಡಲಾರರು. ಹಾಗೇನಾದರೂ ಅವರು ಕೊಟ್ಟಿದ್ದೇ ಆದರೆ ಅವರು ಧರ್ಮಭ್ರಷ್ಟರಾಗುತ್ತಾರೆ."

ಹೀಗೆಂದು ಹೇಳುತ್ತಿರುವಾಗಲೇ ರಾಕ್ಷಸರು ಅವನನ್ನು ಕೊಂದುಹಾಕಿದರು.

ಶಲನು ಆ ರೀತಿಯಾಗಿ ಪ್ರಾಣತೊರೆದನಂತರ ಇಕ್ಷ್ವಾಕುವಂಶದ

ಜನರು ದಲನಿಗೆ ಪಟ್ಟಗಟ್ಟಿದರು. ಅವನು ರಾಜನಾದನಂತರ ವಾಮದೇವನು ಪುನಃ ಆಸ್ಥಾನಕ್ಕೆ ಹೋಗಿ ದಲರಾಜನನ್ನು ಸಂಧಿಸಿ ಹೇಳಿದನು :

“ಮಹಾರಾಜ! ಎಲ್ಲ ಶಾಸ್ತ್ರಗಳೂ, ಎಲ್ಲ ಪುರಾಣಗಳೂ ಬ್ರಾಹ್ಮಣರಿಗೆ ದಾನಮಾಡಬೇಕೆಂದು ಸಾರಿ ಹೇಳುತ್ತವೆ. ಹೀಗಿರುವಾಗ ಬ್ರಾಹ್ಮಣನ ಸ್ವತ್ತನ್ನು ಅಪಹರಿಸಿಕೊಂಡಿರುವುದು ಸರ್ವಥಾ ನ್ಯಾಯವಲ್ಲ. ನಿನಗೆ ಪಾಪದ ಭಯವಿರುವುದಾದರೆ ಈ ಕೂಡಲೇ ನನ್ನ ವಾಮ್ಯಶ್ವಗಳನ್ನು ನನಗೆ ಹಿಂದಿರುಗಿಸು.” (ಮಂಡೂಕರಾಜನ ಶಾಪವು ನಿಷ್ಫಲವಾಗುವುದೆಂತು?) ವಾಮದೇವನ ಮಾತುಗಳನ್ನು ಕೇಳಿ ದಲರಾಜನೂ ಹೆಚ್ಚು ಕುಪಿತನಾಗಿ ತನ್ನ ಸಾರಥಿಯೊಡನೆ ಹೇಳಿದನು : “ಸಾರಥಿಯೇ! ನಾನು ಸಿದ್ಧಪಡಿಸಿರುವ ವಿಷಲಿಪ್ತವಾದ ಬಾಣಗಳಲ್ಲಿ ಒಂದು ಬಾಣವನ್ನು ಈ ಕೂಡಲೇ ತೆಗೆದುಕೊಂಡು ಬಾ. ಆ ಒಂದು ಬಾಣದಿಂದಲೇ ಈ ಬ್ರಾಹ್ಮಣನನ್ನು ಕೆಳಕ್ಕೆ ಕೆಡವಿ ಇವನ ಶರೀರವನ್ನು ನಾಯಿಗಳು ಎಳೆದಾಡುವಂತೆ ಮಾಡುವೆನು.”

ರಾಜಕುಮಾರನ ಮಾತುಗಳನ್ನು ಕೇಳಿ ದಿಟ್ಟತನದಿಂದಲೇ ನಿಂತಿದ್ದ ವಾಮದೇವನು ಉತ್ತರಿಸಿದನು :

ಜಾನಾಮಿ ಪುತ್ರಂ ದಶವರ್ಷಂ ತವಾಹಂ
ಜಾತಂ ಮಹಿಷ್ಯಾಂ ಶ್ಯೇನಜಿತಂ ನರೇನ್ದ್ರ ।
ತಂ ಜಹಿ ತ್ವಂ ಮದ್ವಚನಾತ್ಪ್ರಣುನ್ನ-
ಸ್ತೂರ್ಣಂ ಪ್ರಿಯಂ ಸಾಯಕೈರ್ಘೋರರೂಪೈಃ ॥೬೩॥

“ನರೇಂದ್ರನೇ! ನಿನಗೆ ನಿನ್ನ ಪಟ್ಟದ ರಾಣಿಯಲ್ಲಿ ಹುಟ್ಟಿರುವ ಶ್ಯೇನ ಜಿತನೆಂಬ ಹತ್ತುವರ್ಷ ವಯಸ್ಸಿನ ರಾಜಕುಮಾರನಿರುವನಲ್ಲವೇ? ನನ್ನ ನಿರ್ದೇಶದಂತೆ ನನ್ನ ಮೇಲೆ ಪ್ರಯೋಗಿಸಬೇಕೆಂದಿರುವ ಈ ಬಾಣದಿಂದ ನಿನ್ನ ಆ ಮಗನನ್ನೇ ಕೊಂದುಹಾಕುವೆ.”

ಮರುಕ್ಷಣದಲ್ಲಿಯೇ ವಾಮದೇವನಿಗೆ ಲಕ್ಷ್ಯವಿಟ್ಟು ಹೊಡೆದ ಆ ಮಹಾಸ್ತ್ರವು ಅಂತಃಪುರದಲ್ಲಿದ್ದ ಶ್ಯೇನಜಿತನ ಪ್ರಾಣಗಳನ್ನು ಅಪಹರಿಸಿತು. ವಾಮದೇವನು ನಿರ್ದೇಶಿಸಿದ್ದಂತೆ ತಾನು ಪ್ರಯೋಗಿಸಿದ ಬಾಣವು ತನ್ನ ಮಗನನ್ನೇ ಕೊಂದಿತೆಂಬ ವಿಷಯವು ತಿಳಿದೊಡನೆಯೇ ದಲನು ಮತ್ತಷ್ಟು

ಕುಪಿತನಾಗಿ ತನ್ನ ಪರಿವಾರದವರನ್ನು ಕುರಿತು ಹೇಳಿದನು : "ಎಲೈ ಇಕ್ಷ್ವಾಕು ರಾಜ್ಯದ ಪ್ರಜೆಗಳೇ! ನಾನೀ ಬ್ರಾಹ್ಮಣನನ್ನು ಕೊಂದು ನಿಮ್ಮೆಲ್ಲರಿಗೂ ಸೌಖ್ಯವುಂಟುಮಾಡುವೆನು. ಮತ್ತೊಂದು ವಿಷಲಿಪ್ತವಾದ ಬಾಣವನ್ನು ಒಡನೆಯೇ ತನ್ನಿರಿ. ಇಲ್ಲಿ ನೆರೆದಿರುವ ಭೂಪಾಲರುಗಳಿರಾ! ಇಂದು ನನ್ನ ಭುಜಬಲ-ಪರಾಕ್ರಮಗಳನ್ನಾದರೂ ನೋಡಿರಿ"–ಎಂದು ಹೇಳುತ್ತಾ ರಾಜ ಭಟರು ತಂದ ಬಾಣವನ್ನು ಧನುಸ್ಸಿನಲ್ಲಿಟ್ಟು ಸೆಳೆದನು. ಅವನ ಮಾತುಗಳನ್ನು ಕೇಳುತ್ತಾ ಅವನ ವರ್ತನೆಯನ್ನು ನೋಡುತ್ತಿದ್ದ ವಾಮದೇವನು ದಲನನ್ನು ಕುರಿತು ಪುನಃ ಹೇಳಿದನು : "ನನ್ನ ಪ್ರಭಾವದಿಂದಾಗಿ ನಿನ್ನ ಮಗನನ್ನೇ ನೀನು ಕೊಲ್ಲುವಂತಾದರೂ ನಿನಗೆ ವಿವೇಚನೆಯುಂಟಾಗಿಲಿಲ್ಲ. ನೀನೀಗ ಧನುಸ್ಸಿಗೆ ಹೆದೆಯೇರಿಸುವ ವಿಷಲಿಪ್ತವಾದ ಈ ಬಾಣವನ್ನು ನನಗೆ ಲಕ್ಷ್ಯವಿಟ್ಟು ಖಂಡಿತವಾಗಿಯೂ ಹೊಡೆಯಲಾರೆ."

ವಾಮದೇವನು ಹೀಗೆ ಹೇಳಿದೊಡನೆಯೇ ದಲನ ಕೈಗಳು ಹಾಗೆಯೇ ನಿಂತುಬಿಟ್ಟುವು. ತನ್ನ ಕೈಗಳನ್ನು ಅತ್ತಲಿತ್ತ ಆಡಿಸುವ ಸಾಮರ್ಥ್ಯವೂ ದಲನಿಗಿಲ್ಲದೇ ಹೋಯಿತು. ಸುತ್ತಲೂ ನಿಂತಿದ್ದ ಪರಿವಾರದವರನ್ನು ಕುರಿತು ಹೇಳಿದನು :

**ಇಕ್ಷ್ವಾಕವಃ ಪಶ್ಯತ ಮಾಂ ಗೃಹೀತಂ**
**ನ ವೈ ಶಕ್ನೋಮ್ಯೇಷ ಶರಂ ವಿಮೋಕ್ತುಮ್ ।**
**ನ ಚಾಸ್ಯ ಕರ್ತುಂ ನಾಶಮಭ್ಯುತ್ಸಹಾಮಿ**
**ಆಯುಷ್ಮಾನ್ವೈ ಜೀವತು ವಾಮದೇವಃ ॥೬೭॥**

"ಇಕ್ಷ್ವಾಕುಕುಲದ ಕ್ಷತ್ರಿಯರೇ! ನಾನು ಈ ಬ್ರಾಹ್ಮಣನ ಪ್ರಭಾವದಿಂದ ಹೆದೆಗೇರಿಸಿರುವ ಈ ಬಾಣವನ್ನು ಪ್ರಯೋಗಿಸಲು ಅಸಮರ್ಥನಾಗಿದ್ದೇನೆ. ಈ ಬ್ರಾಹ್ಮಣನನ್ನು ಸಂಹರಿಸಲುದ್ಯುಕ್ತನಾದ ನಾನು ಹೇಗೆ ಮಾಡಲು ಸರ್ವಥಾ ಅಸಮರ್ಥನಾಗಿರುತ್ತೇನೆ. ವಾಮದೇವನು ಚಿರಾಯುವಾಗಲಿ."

ದಲನ ಮಾತುಗಳನ್ನು ಕೇಳಿ, ಅವನ ಕರುಣಾಜನಕವಾದ ಸ್ಥಿತಿಯನ್ನೂ ನೋಡಿ ವಾಮದೇವನು ರಾಜಕುಮಾರನನ್ನು ಕುರಿತು ಹೇಳಿದನು :

"ರಾಜಕುಮಾರ! ನೀನು ಇದೇ ಸ್ಥಿತಿಯಲ್ಲಿ ಅಂತಃಪುರಕ್ಕೆ ಹೋಗಿ ಅಲ್ಲಿರುವ ಪಟ್ಟದ ರಾಣಿಯನ್ನು ಈ ಬಾಣದಿಂದ ಸ್ಪರ್ಶಮಾಡಿದೆಯಾದರೆ ನೀನು ಈ ಪಾಪದಿಂದ ವಿಮುಕ್ತನಾಗುವೆ." ವಾಮದೇವನು ಹೇಳಿದಂತೆಯೇ ದಲನು ಮಾಡಿದನು. ಒಡನೆಯೇ ದಲನ ಕೈಗಳು ಸ್ವಾಧೀನಕ್ಕೆ ಬಂದುವು.

ರಾಣಿಯು, ತನ್ನ ಪತಿಯು ಮುನಿಯ ವಿಷಯದಲ್ಲಿ ಮಾಡಿದ ಅಪ ಚಾರವನ್ನು ತಿಳಿದವಳಾಗಿ ಪಶ್ಚಾತ್ತಾಪಗೊಂಡು ವಾಮದೇವನಿಗೆ ಹೇಳಿದಳು:

**ಯಥಾ ಯುಕ್ತಾ ವಾಮದೇವಾಹಮೇನಂ**
**ದಿನೇ ದಿನೇ ಸಂದಿಶನ್ತೀ ನೃಶಂಸಮ್ ।**
**ಬ್ರಾಹ್ಮಣೇಭ್ಯೋ ಮೃಗಯತೀ ಸೂನೃತಾನಿ**
**ತಥಾ ಬ್ರಹ್ಮನ್ಪುಣ್ಯಲೋಕಂ ಲಭೇಯಮ್ ॥೧೯॥**

"ಪೂಜ್ಯರೇ! ಕ್ರೂರಿಯಾದ ನನ್ನ ಪತಿಗೆ ನಾನು ಅನುದಿನವೂ ಸದುಪದೇಶಮಾಡಿಕೊಂಡಿರುವಂತೆಯೂ ಮತ್ತು ನನ್ನ ಸದುಪದೇಶದಿಂದ ನನ್ನ ಪತಿಯು ಸತ್ಕರ್ಮಿಯಾಗುವಂತೆಯೂ ಅನುಗ್ರಹಿಸುವವರಾಗಿರಿ. ನಾನು ಯಾವಾಗಲೂ ಬ್ರಾಹ್ಮಣರ ಪರಿಚರ್ಯೆಯನ್ನು ಮಾಡುತ್ತಿದ್ದು ಅದರ ಫಲವಾಗಿ ಉತ್ತಮಲೋಕಗಳು ನನಗೆ ಲಭ್ಯವಾಗುವಂತೆಯೂ ಆಶೀ ರ್ವದಿಸಿರಿ." ರಾಣಿಯ ಮಾತುಗಳನ್ನು ಕೇಳಿ ವಾಮದೇವನು ಸಂತೋಷ ಭರಿತನಾಗಿ ಅವಳೊಡನೆ ಹೇಳಿದನು :

**ತ್ವಯಾ ತ್ರಾತಂ ರಾಜಕುಲಂ ಶುಭೇಕ್ಷಣೇ**
**ವರಂ ವೃಣೀಷ್ವಾಪ್ರತಿಮಂ ದದಾನಿ ತೇ ।**
**ಪ್ರಶಾಧೀಮಂ ಸ್ವಜನಂ ರಾಜಪುತ್ರಿ**
**ಇಕ್ಷ್ವಾಕುರಾಜ್ಯಂ ಸುಮಹಚ್ಚಾಪ್ಯನಿನ್ದ್ಯೇ ॥೨೦॥**

"ಶುಭದರ್ಶನಳೇ! ನಿನ್ನಿಂದ ಈ ರಾಜಕುಲವು ರಕ್ಷಿತವಾಯಿತು. ನೀನು ಯಾವುದಾದರೂ ಒಂದು ಮಹತ್ತರವಾದ ವರವನ್ನು ಕೇಳು. ಕೊಡು ವೆನು. ನೀನು ಯಾವ ವರವನ್ನೇ ಬೇಡಿದರೂ ನಾನು ಆ ವರವನ್ನು ಕೊಡಲು

ಸಿದ್ಧನಾಗಿರುವೆನು. ಸಂಕೋಚವಿಲ್ಲದೇ ಕೇಳು. ಅನಿಂದ್ಯಳೇ! ನೀನು ಸ್ವಜನರನ್ನೂ ಮತ್ತು ಈ ರಾಜ್ಯವನ್ನೂ ಧರ್ಮದಿಂದ ಪರಿಪಾಲನೆಮಾಡು."

ವಾಮದೇವನ ಮಾತುಗಳನ್ನು ಕೇಳಿ ರಾಣಿಯು ಕೈಜೋಡಿಸಿ ನಿಂತು ಬೇಡಿದಳು :

**ವರಂ ವೃಣೇ ಭಗವಂಸ್ತ್ವೇವಮೇಷ**
**ವಿಮುಚ್ಯತಾಂ ಕಿಲ್ಬಿಷಾದದ್ಯ ಭರ್ತಾ ।**
**ಶಿವೇನ ಚಾಧ್ಯಾಹಿ ಸಪುತ್ರಬಾನ್ಧವಂ**
**ವರೋ ವೃತೋ ಹ್ಯೇಷ ಮಯಾ ದ್ವಿಜಾಗ್ರ್ಯ ॥೭೧॥**

"ಬ್ರಾಹ್ಮಣೋತ್ತಮರೇ! ನಿಮ್ಮ ವರದ ಫಲವಾಗಿ ನನ್ನ ಪತಿಯು ಸಕಲಪಾಪಗಳಿಂದಲೂ ವಿಮುಕ್ತಿಹೊಂದಲಿ. ನೀವು ನನ್ನ ಮಗನಿಗೂ ಮತ್ತು ನನ್ನ ಪರಿವಾರದವರಿಗೂ ಶುಭೋದಯವನ್ನುಂಟುಮಾಡಿರಿ. ಈ ಒಂದು ವರವನ್ನು ದಯಪಾಲಿಸುವಂತೆ ನಿಮ್ಮನ್ನು ಬೇಡುವೆನು."

ರಾಜಕುಮಾರಿಯ ಮಾತುಗಳನ್ನು ಕೇಳಿ ವಾಮದೇವನು "ತಥಾಸ್ತು" ಎಂದನು. ಒಡನೆಯೇ ಸತ್ತುಬಿದ್ದದ್ದ ಹತ್ತು ವರ್ಷದ ಬಾಲಕನು ನಿದ್ದೆಯಿಂದ ಎಚ್ಚರಗೊಂಡವನಂತೆ ಮೇಲೆದ್ದು ಕುಳಿತನು. ದಲನೂ ಸಂತೋಷಭರಿತನಾಗಿ ತನ್ನ ವಶದಲ್ಲಿದ್ದ ವಾಮ್ಯಶ್ವಗಳನ್ನು ವಾಮದೇವನಿಗೊಪ್ಪಿಸಿ, ತನ್ನ ಸಮಸ್ತವಾದ ಅಪರಾಧಗಳನ್ನೂ ಕ್ಷಮಿಸಬೇಕೆಂದು ಹೇಳಿ ಪ್ರಣಾಮ ಮಾಡಿದನು. ವಾಮದೇವನು ಎಲ್ಲರನ್ನೂ ಹರಸಿ ವಾಮ್ಯಶ್ವಗಳೊಡನೆಯೂ ಮತ್ತು ಶಿಷ್ಯರೊಡನೆಯೂ ಆಶ್ರಮಕ್ಕೆ ತೆರಳಿದನು."

೧೯೨ನೆಯ ಅಧ್ಯಾಯವು ಮುಗಿಯಿತು.

೧೯೩ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಇಂದ್ರ ಮತ್ತು ಬಕಮಹರ್ಷಿಗಳ ಸಂವಾದ

ಪಾರಿಕ್ಷಿತ! ಮಂಡೂಕೋಪಾಖ್ಯಾನವು ಮುಗಿದನಂತರ ಋಷಿ-ಮಹರ್ಷಿಗಳೂ, ಬ್ರಾಹ್ಮಣರೂ ಮತ್ತು ಪಾಂಡವರೂ ಮಾರ್ಕಂಡೇಯ

ಮಹರ್ಷಿಗಳನ್ನು ಕೇಳಿದರು : "ಮಹರ್ಷಿಗಳೇ! ಬಕಮಹರ್ಷಿಗೆ ಚಿರಂಜೀವಿತ್ವವು ಹೇಗೆ ಪ್ರಾಪ್ತವಾಯಿತು?" ಅದಕ್ಕೆ ಮಾರ್ಕಂಡೇಯರು :

"ಮಹರ್ಷಿಯಾದ ಬಕಮಹರ್ಷಿಯು ಮಹಾತಪಸ್ವಿಯಾದ ಕಾರಣ ದೀರ್ಘಾಯುವಾದನು. ಈ ವಿಷಯದಲ್ಲಿ ಅನ್ಯಥಾ ವಿಚಾರಮಾಡಬೇಕಾಗಿಯೇ ಇಲ್ಲ"–ಎಂದು ಹೇಳಿದರು.

ಮಾರ್ಕಂಡೇಯರ ಆ ಉತ್ತರದಿಂದ ಯುಧಿಷ್ಠಿರಾದಿಗಳಿಗೆ ಸಮಾಧಾನವಾಗಲಿಲ್ಲ. ಪರ್ಯಾಯಾಂತರವಾಗಿ ಪುನಃ ಬಕಮಹರ್ಷಿಯ ಇತಿಹಾಸವನ್ನೇ ಪ್ರಶ್ನಿಸಿದರು.

"ಮಹಾಭಾಗರಾದ ಮುನಿಶ್ರೇಷ್ಠರೇ! ದಲ್ಭ್ಯಮಹರ್ಷಿಗಳ ಪುತ್ರನಾದ, ಮಹಾತಪಸ್ವಿಯಾದ ಬಕಮಹರ್ಷಿಯು ಚಿರಂಜೀವಿಯೆಂದೂ, ದೇವರಾಜನಾದ ಇಂದ್ರನಿಗೆ ಪರಮಮಿತ್ರನೆಂದೂ ಕೇಳಿದ್ದೇವೆ. ಸುಖ-ದುಃಖ ಸಮಾಚಾರಭೂಯಿಷ್ಠವಾದ ಬಕ ಮತ್ತು ಇಂದ್ರರ ಸಮಾಗಮದ ಇತಿಹಾಸವನ್ನು ಕೇಳಲು ಉತ್ಸುಕರಾಗಿದ್ದೇವೆ. ಯಥಾರ್ಥರೂಪದಲ್ಲಿ ವಿವರಿಸಿರಿ."

ಮಾರ್ಕಂಡೇಯ :

"ಯುಧಿಷ್ಠಿರ! ದೇವಾಸುರರ ಯುದ್ಧವು ಮುಗಿದು ಅಸುರರು ಪರಾಭವಹೊಂದಿ ದೇವತೆಗಳು ವಿಜಯಿಗಳಾದನಂತರ ಇಂದ್ರನು ಮೂರು ಲೋಕಗಳಿಗೂ ಸಾರ್ವಭೌಮನಾದನು. ಇಂದ್ರನು ತ್ರೈಲೋಕ್ಯಾಧಿಪತ್ಯವನ್ನು ವಹಿಸಿದನಂತರ ಪರ್ಜನ್ಯನು ಸುವೃಷ್ಟಿಯನ್ನು ಕರೆದನು. ಪೃಥ್ವಿಯಲ್ಲಿ ಸಸ್ಯಸಂಪತ್ತು ಸಮೃದ್ಧಿಯಾಯಿತು. ರೋಗ-ರುಜಿನಗಳಾವುವೂ ಇರಲಿಲ್ಲ. ಪ್ರಜೆಗಳು ಧರ್ಮಿಷ್ಠರಾಗಿಯೂ, ಧರ್ಮಪರಾಯಣರಾಗಿಯೂ ಇರತೊಡಗಿದರು. ಆನಂದಭರಿತರಾಗಿದ್ದರು. ಸ್ವಧರ್ಮಗಳಲ್ಲಿ ಸರ್ವದಾ ನಿರತರಾಗಿದ್ದರು. ಪ್ರಪಂಚದಲ್ಲಿದ್ದ ಜೀವಕೋಟಿಯು ಸುಖವಾಗಿರಲಾಗಿ ಇಂದ್ರನೂ ಸಂತೋಷಭರಿತನಾದನು. ತನ್ನ ವಾಹನವಾದ ಐರಾವತದ ಮೇಲೆ ಕುಳಿತು ಸಂತೋಷಭರಿತವಾಗಿದ್ದ ಪ್ರಪಂಚವನ್ನು ವೀಕ್ಷಿಸಿದನು. ಅಲ್ಲಿ ಚಿತ್ರ-ವಿಚಿತ್ರವಾದ ಋಷ್ಯಾಶ್ರಮಗಳಿದ್ದುವು. ಪೂರ್ಣಪ್ರವಾಹಗಳಿಂದ ಹರಿಯುತ್ತಿದ್ದ ಶುಭನದಿಗಳನ್ನು ವೀಕ್ಷಿಸಿದನು. ದೇಶ-ಕೋಶಗಳು ಸಮೃದ್ಧವಾಗಿದ್ದುವು.

ಹಳ್ಳಿ-ಊರುಗಳೂ ಧನ-ಧಾನ್ಯಗಳಿಂದ ಸಮೃದ್ಧವಾಗಿದ್ದು ಅಲ್ಲಿಯ ರೈತರೂ ಆನಂದೋತ್ಸಾಹದಿಂದಿದ್ದರು. ರಾಜರು ಧರ್ಮಪರಾಯಣರಾಗಿದ್ದು ಧರ್ಮ ಮೂಲವಾಗಿ ತಮ್ಮ ಪ್ರಜೆಗಳನ್ನು ಆಳುತ್ತಿದ್ದರು. ಅಲ್ಲಲ್ಲಿಯೇ ಕೆರೆಗಳೂ, ಸರೋವರಗಳೂ, ಬಾವಿಗಳೂ ಇದ್ದುವು. ಸರೋವರದ ದಂಡೆಗಳ ಮೇಲೆ ಅನುಷ್ಠಾನಪರರಾದ ಬ್ರಾಹ್ಮಣರು ಜಪ-ತಪಾದಿಗಳನ್ನು ಮಾಡುತ್ತಿದ್ದರು. ಆಕಾಶಮಾರ್ಗದಲ್ಲಿ ನಿಂತು ಅಂತಹ ಸುಮನೋಹರವಾದ ದೃಶ್ಯವನ್ನು ನೋಡುತ್ತಾ ಇಂದ್ರನು ಭೂಮಿಗಿಳಿದು ಸುಂದರವಾದ ಒಂದು ಆಶ್ರಮದ ಬಳಿಗೆ ತೆರಳಿದನು. ಆ ಆಶ್ರಮವು ಜಿಂಕೆಯೇ ಮೊದಲಾದ ಪ್ರಾಣಿಗಳಿಂದಲೂ ಶುಕ-ಪಿಕಗಳೇ ಮೊದಲಾದ ಪಕ್ಷಿಗಳಿಂದಲೂ ನಿಬಿಡವಾಗಿದ್ದಿತು. ಅದು ಪೂರ್ವದಿಕ್ಕಿನಲ್ಲಿದ್ದು ಸಮುದ್ರದ ಸಮೀಪದಲ್ಲಿದ್ದಿತು. ಅಂತಹ ಬಹುರಮ್ಯವಾದ ಆಶ್ರಮಕ್ಕೆ ದೇವರಾಜನು ಬಂದು ಆ ಆಶ್ರಮದಲ್ಲಿದ್ದ ಬಕ ಮಹರ್ಷಿಯನ್ನು ಸಂದರ್ಶಿಸಿದನು. ಬಕಮಹರ್ಷಿಯೂ ದೇವರಾಜನು ತನ್ನ ಆಶ್ರಮಕ್ಕೆ ಬಂದುದನ್ನು ನೋಡಿ ಸಂತೋಷಭರಿತನಾದನು. ಒಡನೆಯೇ ಬಕನು ದೇವರಾಜನಿಗೆ ಉಚಿತವಾದ ರೀತಿಯಲ್ಲಿ ಅರ್ಘ್ಯ-ಪಾದ್ಯಾದಿಗಳನ್ನೂ ಕಂದ-ಮೂಲ-ಫಲಗಳನ್ನೂ ಕೊಟ್ಟು ಸತ್ಕರಿಸಿದನು.

ಸುಖಾಸನದಲ್ಲಿ ಕುಳಿತಿದ್ದ, ವರನಾದ, ಬಲಸೂದನನಾದ ತ್ರಿದಶೇಶ್ವರ ನಾದ ಇಂದ್ರನು ಬಕಮಹರ್ಷಿಯನ್ನು ಹೀಗೆ ಪ್ರಶ್ನಿಸಿದನು :

"ಮಹರ್ಷೇ! ನೀನು ಹುಟ್ಟಿ ಅನೇಕಸಹಸ್ರವರ್ಷಗಳಾಗಿವೆ. ಆದುದ ರಿಂದ ಚಿರಂಜೀವಿಗಳಿಗಿರಬಹುದಾದ ಕಷ್ಟ-ಸುಖಗಳ ಅನುಭವವು ನಿನಗೆ ಸಂಪೂರ್ಣವಾಗಿರುವುದು. ಚಿರಂಜೀವಿಗಳಿಗೆ ಪ್ರಾಪ್ತವಾಗಬಹುದಾದ ದುಃಖದ ವಿಷಯವನ್ನು ನನಗೆ ಹೇಳು. ಈ ವಿಷಯವನ್ನು ನಿನ್ನಿಂದ ತಿಳಿಯಬೇಕೆಂದೇ ಇಲ್ಲಿಗೆ ಬಂದಿರುವೆನು."

ಬಕಮಹರ್ಷಿ :

**ಅಪ್ರಿಯೈಃ ಸಹ ಸಂವಾಸಃ ಪ್ರಿಯೈಶ್ಚಾಪಿ ವಿನಾಭವಃ ।**
**ಅಸದ್ಭಿಃ ಸಂಪ್ರಯೋಗಶ್ಚ ತದ್ದುಃಖಂ ಚಿರಜೀವಿನಾಮ್ ॥೧೮॥**

"ದೇವೇಂದ್ರನೇ! ನಮಗೆ ಬೇಡವಾದವರೊಡನೆ ಇರಬೇಕಾಗಿ ಬರುವುದು ; ಬೇಕಾದವರಿಂದ ಬಹುಬೇಗ ವಿಯೋಗಹೊಂದಬೇಕಾಗುವುದು ;



ಅಸತ್ಪುರುಷರೊಡನೆ ಸಹವಾಸಮಾಡಬೇಕಾಗುವುದು–ಇವಿಷ್ಟು ದುಃಖಗಳನ್ನೂ ಚಿರಂಜೀವಿಯಾದವನು ಅನುಭವಿಸಲೇಬೇಕು.

**ಪುತ್ರದಾರವಿನಾಶೋಽತ್ರ ಜ್ಞಾತೀನಾಂ ಸುಹೃದಾಮಪಿ ।**
**ಪರೇಷ್ವಾಯತ್ತತಾಕೃಚ್ಛ್ರಂ ಕಿಂ ನು ದುಃಖತರಂ ತತಃ ॥೧೯॥**

ಚಿರಂಜೀವಿಯಾದವನು–ಮಗನ ಮರಣ, ಮೊಮ್ಮಗನ ಮರಣ, ಹೆಂಡತಿಯ ವಿಯೋಗ, ಬಂಧು-ಮಿತ್ರರ ವಿನಾಶ–ಇತ್ಯಾದಿಗಳನ್ನು ನೋಡಿಯೇ

ತೀರಬೇಕಾಗುವುದು. ಜೀವನನಿರ್ವಹಣೆಗಾಗಿ ಪರಾಶ್ರಯವನ್ನು ಮಾಡಬೇಕಾಗಿ ಬರುವುದು. ಇದಕ್ಕಿಂತಲೂ ದುಃಖತರವಾದುದೇನಿದೆ?

**ನಾನ್ಯದ್ದುಃಖತರಂ ಕಿಂಚಿಲ್ಲೋಕೇಷು ಪ್ರತಿಭಾತಿ ಮೇ ।**
**ಅರ್ಥೈರ್ವಿಹೀನಃ ಪುರುಷಃ ಪರೈಃ ಸಮ್ಪರಿಭೂಯತೇ ॥೨೦॥**

ಅರ್ಥಹೀನನಾದ ಮನುಷ್ಯನು ಕಾಲ-ಕಾಲಕ್ಕೂ ಒಬ್ಬೊಬ್ಬರನ್ನು ಆಶ್ರಯಿಸಿ ಅವರಿಂದ ತಿರಸ್ಕೃತನಾಗಬೇಕಾಗುತ್ತದೆ. ಇದು ಮಹಾದುಃಖತರವಾದ ಜೀವನವೆನಿಸುವುದು. ಇದಕ್ಕಿಂತಲೂ ಹೆಚ್ಚಿನ ಕ್ಲೇಶವು ಬೇರೊಂದಿಲ್ಲ.

**ಅಕುಲಾನಾಂ ಕುಲೇ ಭಾವಂ ಕುಲೀನಾನಾಂ ಕುಲಕ್ಷಯಮ್ ।**
**ಸಂಯೋಗಂ ವಿಪ್ರಯೋಗಂ ಚ ಪಶ್ಯನ್ತಿ ಚಿರಜೀವಿನಃ ॥೨೧॥**

ಕುಲಹೀನರಾದವರ ಔನ್ನತ್ಯ, ಕುಲೀನರಾದವರ (ಸತ್ಕುಲಪ್ರಸೂತರ) ವಿನಾಶ–ಈ ಎರಡನ್ನೂ ಚಿರಂಜೀವಿಗಳು ಕಾಣುತ್ತಾರೆ. ಕುಲಹೀನರಾದವರೊಡನೆ ಸಹವಾಸ, ಸತ್ಕುಲಪ್ರಸೂತರೊಡನೆ ವಿಯೋಗ–ಈ ಎರಡನ್ನೂ ಚಿರಂಜೀವಿಗಳು ಅನುಭವಿಸುತ್ತಾರೆ.

**ಅಪಿ ಪ್ರತ್ಯಕ್ಷಮೇವೈತತ್ತವ ದೇವ ಶತಕ್ರತೋ ।**
**ಅಕುಲಾನಾಂ ಸಮೃದ್ಧಾನಾಂ ಕಥಂ ಕುಲವಿಪರ್ಯಯಃ ॥೨೨॥**

ದೇವೇಂದ್ರನೇ! ಈ ವಿಷಯವು ನಿನಗೂ ಪ್ರತ್ಯಕ್ಷಾನುಭವವೇ ಆಗಿದೆಯಲ್ಲವೇ! ಸಂಪತ್ಸಮೃದ್ಧಿಯನ್ನು ಪಡೆದಿರುವ ದುಷ್ಕುಲಪ್ರಸೂತರಿಂದ ಕುಲದ ವಿಪರ್ಯಾಸವು ಹೇಗಾಗುವುದೆಂಬುದನ್ನು ನೀನೂ ಅನೇಕ ಪ್ರತ್ಯಕ್ಷಪ್ರಮಾಣಗಳಿಂದಲೇ ನೋಡಿರುವೆ.

**ದೇವದಾನವಗನ್ಧರ್ವಮನುಷ್ಯೋರಗರಾಕ್ಷಸಾಃ ।**
**ಪ್ರಾಪ್ನುವನ್ತಿ ವಿಪರ್ಯಾಸಂ ಕಿಂ ನು ದುಃಖತರಂ ತತಃ ॥೨೩॥**

ದೇವರಾಜನೇ! ಈ ವಿಪರ್ಯಾಸವು ಮಾನವರಲ್ಲಿ ಮಾತ್ರವೇ ಆಗುವುದೆಂದು ಭಾವಿಸಬೇಡ. ದೇವ-ದಾನವ-ಗಂಧರ್ವ-ಮನುಷ್ಯೋರಗ-ರಾಕ್ಷಸರೂ ಸಹ ಈ ವಿಪರ್ಯಾಸವನ್ನು ಹೊಂದುತ್ತಾರೆ. ಇದಕ್ಕಿಂತಲೂ ದುಃಖತರವಾದುದು ಮತ್ತೇನಿರುವುದು?

**ಕುಲೇ ಜಾತಾಶ್ಚ ಕ್ಲಿಶ್ಯನ್ತೇ ದೌಷ್ಕುಲೇಯವಶಾನುಗಾಃ ।**
**ಆಢ್ಯೈರ್ದರಿದ್ರಾಶ್ಚಾಕ್ರಾನ್ತಾಃ ಕಿಂ ನು ದುಃಖತರಂ ತತಃ ॥೨೪॥**

ಸತ್ಕುಲಪ್ರಸೂತರಾದವರು ಕ್ಲೇಶಕ್ಕೊಳಗಾಗುತ್ತಾರೆ. ಅವರು ದುಷ್ಕುಲ ಪ್ರಸೂತರ ಹತೋಟಿಗೊಳಪಟ್ಟಿರುತ್ತಾರೆ. ಐಶ್ವರ್ಯವಂತರು ದರಿದ್ರರನ್ನು ಹಿಂಸಿಸುತ್ತಾರೆ. ಇವೆಲ್ಲವನ್ನೂ ಚಿರಂಜೀವಿಯಾದವನು ನೋಡುತ್ತಿರ ಬೇಕಾಗುತ್ತದೆ. ಇದಕ್ಕಿಂತಲೂ ದುಃಖತರವಾದುದು ಮತ್ತಾವುದಿದೆ? ದೇವೇಂದ್ರ!

**ಲೋಕೇ ವೈಧರ್ಮ್ಯಮೇತತ್ತು ದೃಶ್ಯತೇ ಬಹುವಿಸ್ತರಮ್ ।**
**ಹೀನಜ್ಞಾನಾಶ್ಚ ಹೃಷ್ಯನ್ತೇ ಕ್ಲಿಶ್ಯನ್ತೇ ಪ್ರಾಜ್ಞಕೋವಿದಾಃ ।**
**ಬಹುದುಃಖಪರಿಕ್ಲೇಶಂ ಮಾನುಷ್ಯಮಿಹ ದೃಶ್ಯತೇ ॥೨೫॥**

ಪ್ರಪಂಚದಲ್ಲಿ ಇಂತಹ ವೈಧರ್ಮ್ಯಗಳು ಅನೇಕವಾಗಿರುತ್ತವೆ. ಜ್ಞಾನಿ ಗಳಲ್ಲದವರೂ, ಮೂರ್ಖವೂ ಆನಂದಭರಿತರಾಗಿರುತ್ತಾರೆ. ವಿದ್ಯಾವಂತರೂ ಜ್ಞಾನಿಗಳೂ ಕ್ಲೇಶವನ್ನನುಭವಿಸುತ್ತಾರೆ. ಇಂತಹ ಅನೇಕವಿಧವಾದ ಮತ್ತು ಮನಸ್ಸಿಗೆ ಅತಿದುಃಖಕರವಾದ ಸನ್ನಿವೇಶಗಳೂ ಪ್ರಪಂಚದಲ್ಲಿ ನಡೆಯುತ್ತಲೇ ಇದ್ದು ಅವುಗಳನ್ನು ಚಿರಂಜೀವಿಯಾದವನು ನೋಡುತ್ತಲೇ ಇರಬೇಕಾಗುತ್ತದೆ. ಅದನ್ನು ನೋಡುವುದೇ ಬಹಳ ದುಃಖಕರವಾದುದು, ದೇವೇಂದ್ರ!"

ಚಿರಂಜೀವಿಗಳು ಅನುಭವಿಸಬೇಕಾದ ದುಃಖದ ವಿಷಯಗಳನ್ನು ಕೇಳಿದನಂತರ ದೇವೇಂದ್ರನು ಬಕಮಹರ್ಷಿಯನ್ನು ಪುನಃ ಪ್ರಶ್ನಿಸಿದನು :

"ಮಹರ್ಷೇ! ನಿನ್ನಿಂದ ಚಿರಂಜೀವಿಗಳು ಅನುಭವಿಸಬೇಕಾದ ದುಃಖದ ವಿಷಯಗಳೆಲ್ಲವನ್ನೂ ಕೇಳಿದೆನು. ಚಿರಂಜೀವಿಗಳು ಅನುಭವಿಸುವ ಸುಖದ ವಿಷಯಗಳನ್ನೂ ದಯಮಾಡಿ ಹೇಳು. ಚಿರಂಜೀವಿತ್ವವೂ ಸಂಪೂರ್ಣವಾಗಿ ನಿರರ್ಥಕವಲ್ಲವೆಂದು ನಾನು ಭಾವಿಸಿದ್ದೇನೆ."

ಬಕಮಹರ್ಷಿ :

"ಚಿರಂಜೀವಿಯು ಸರ್ವದಾ ಸುಖವಾಗಿಯೂ ಇರಬಹುದು. ಅವನಿಗೆ ದುಷ್ಟರ ಸಹವಾಸವು ಖಂಡಿತವಾಗಿಯೂ ಇರಬಾರದು. ಯಾವ ಸಂಬಂಧಿ

ಗಳೂ ಅವನಿಗೆ ಇರಬಾರದು. ತನ್ನ ಅಡಿಗೆಯನ್ನು ತಾನೇ ಮಾಡಿಕೊಳ್ಳ ಬೇಕು.

**ಅಷ್ಟಮೇ ದ್ವಾದಶೇ ವಾಪಿ ಶಾಕಂ ಯಃ ಪಚತೇ ಗೃಹೇ ।**
**ಕುಮಿತ್ರಾಣ್ಯನಪಾಶ್ರಿತ್ಯ ಕಿಂ ವೈ ಸುಖತರಂ ತತಃ ।**
**ಯತ್ರಾಹಾನಿ ನ ಗಣ್ಯಂತೇ ನೈನಮಾಹುರ್ಮಹಾಶನಮ್ ॥೨೮॥**

ದಿನದ ಎಂಟನೆಯ ಮುಹೂರ್ತದಲ್ಲಿಯೋ, ಹನ್ನೆರಡನೆಯ ಮುಹೂರ್ತದಲ್ಲಿಯೋ ಸ್ವಾಭಾವಿಕವಾಗಿ ಸಿಕ್ಕುವ ಕಾಯಿ-ಪಲ್ಯಗಳನ್ನು ಬೇಯಿಸಿಕೊಂಡು ತಿನ್ನಬೇಕು. ಕುಮಿತ್ರರನ್ನು ಆಶ್ರಯಿಸಬಾರದು. ಅಂತಹ ವನು ನಿರಂತರವಾಗಿ ಸುಖಿಯಾಗಿರುತ್ತಾನೆ. ದಿವಸಗಳು ಯಾವನಿಗೆ ಗಣನೆ ಯಲ್ಲಿರುವುದಿಲ್ಲವೋ–ಅವನನ್ನು ಅವನೆಷ್ಟೇ ಊಟಮಾಡಿದರೂ 'ಮಹಾ ಶನ' ನೆಂದು ಕರೆಯುವುದಿಲ್ಲ.

(ದಿನಗಳ ಗಣನೆಯಿಲ್ಲದಿರುವುದೆಂದರೆ ಬೆಳಗಾಗುತ್ತಲೇ ಊಟದ ವ್ಯವಸ್ಥೆಯಾಗಬೇಕೆಂಬ ಆತುರವಿಲ್ಲದಿರುವುದು. ಎರಡು-ಮೂರು ದಿನ ಕ್ಕೊಮ್ಮೆ ಆಹಾರವು ಲಭ್ಯವಾದಾಗ ಬೇಕಾದಷ್ಟು ತಿನ್ನುವುದು ; ಎರಡು-ಮೂರು ದಿನಗಳಿಗೊಮ್ಮೆ ಸ್ವಲ್ಪ ಹೆಚ್ಚಾಗಿಯೇ ಅನ್ನ ತಿಂದರೂ ಅವನನ್ನು ಯಾರೂ 'ಮಹಾಶನ' ಅಥವಾ 'ಹೊಟ್ಟೆಬಾಕ' ಎನ್ನುವುದಿಲ್ಲ.)

**ಅಪಿ ಶಾಕಂ ಪಚಾನಸ್ಯ ಸುಖಂ ವೈ ಮಘವನ್ ಗೃಹೇ ।**
**ಅರ್ಜಿತಂ ಸ್ವೇನ ವೀರ್ಯೇಣ ನಾಪ್ಯಪಾಶ್ರಿತ್ಯ ಕಂಚನ ॥೨೯॥**

ಯಾವನು ಯಾರೊಬ್ಬರ ಅವಲಂಬನೆಯೂ ಇಲ್ಲದೇ ತನ್ನ ಆಹಾರ ವನ್ನು ತಾನೇ ಸಿದ್ಧಪಡಿಸಿಕೊಳ್ಳುವನೋ–ಅವನು ಕೇವಲ ಕಾಯಿ-ಪಲ್ಯ ಗಳನ್ನೇ ಬೇಯಿಸಿಕೊಂಡು ಊಟಮಾಡಿದರೂ ಪರಮಸುಖಿಯೆಂದು ಪರಿಗಣಿಸಬಹುದು.

**ಫಲಶಾಕಮಪಿ ಶ್ರೇಯೋ ಭೋಕ್ತುಂ ಹ್ಯಕೃಪಣಂ ಗೃಹೇ ।**
**ಪರಸ್ಯ ತು ಗೃಹೇ ಭೋಕ್ತುಃ ಪರಿಭೂತಸ್ಯ ನಿತ್ಯಶಃ ॥೩೦॥**

**ಸುಮೃಷ್ಟಮಪಿ ನ ಶ್ರೇಯೋ ವಿಕಲ್ಪೋಽಯಮತಃ ಸತಾಮ್ ।**

**ಶ್ವವತ್ಕೀಲಾಲಪೋ ಯಸ್ತು ಪರಾನ್ನಂ ಭೋಕ್ತುಮಿಚ್ಛತಿ ।**
**ಧಿಗಸ್ತು ತಸ್ಯ ತದ್ಭುಕ್ತಂ ಕೃಪಣಸ್ಯ ದುರಾತ್ಮನಃ ॥೩೧॥**

ಬೇಡದೇ, ಕಷ್ಟಪಟ್ಟು ಗಳಿಸಿದ ಹಣ್ಣು-ಹಂಪಲುಗಳನ್ನೂ, ಕಾಯಿ-ಪಲ್ಯಗಳನ್ನೂ ಉಪಭುಂಜಿಸುವವನು ಬಹುಶ್ರೇಷ್ಠನೆನಿಸುತ್ತಾನೆ. ಪರಾನ್ನವು ಹೆಚ್ಚು ಮಧುರವಾಗಿದ್ದರೂ, ಮೃಷ್ಟಾನ್ನವೇ ಆಗಿದ್ದರೂ ನಿಂದ್ಯವೇ ಸರಿ. ಆದುದರಿಂದ ನಾಯಿಯಂತೆ ಅಥವಾ ರಾಕ್ಷಸನಂತೆ ಪರಾನ್ನವನ್ನು ಊಟ ಮಾಡುವವನು ಬಹಳ ನಿಂದ್ಯನಾಗುವನೆಂದು ಜ್ಞಾನಿಗಳು ಅಭಿಪ್ರಾಯಪಡುತ್ತಾರೆ. ಕೃಪಣನಾದ, ದುರಾತ್ಮನಾದ–ಅಂತಹ ಪರಾನ್ನಭಕ್ಷಕನ ಭೋಜನಕ್ಕೆ ಸರ್ವದಾ ಧಿಕ್ಕಾರವಿರಲಿ!

**ಯೋ ದತ್ವಾತಿಥಿಭೂತೇಭ್ಯಃ ಪಿತೃಭ್ಯಶ್ಚ ದ್ವಿಜೋತ್ತಮಃ ।**
**ಶಿಷ್ಟಾನ್ಯನ್ನಾನಿ ಯೋ ಭುಙ್ಕ್ತೇ ಕಿಂ ವೈ ಸುಖತರಂ ತತಃ ॥೩೨॥**

**ಅತೋ ಮೃಷ್ಟತರಂ ನಾನ್ಯತ್ಪೂತಂ ಕಿಂಚಿಚ್ಛತಕ್ರತೋ ।**
**ದತ್ವಾ ಯಸ್ತ್ವತಿಥಿಭ್ಯೋ ವೈ ಭುಙ್ಕ್ತೇ ತೇನೈವ ನಿತ್ಯಶಃ ॥೩೩॥**

ಮಧ್ಯಾಹ್ನದ ವೇಳೆಯಲ್ಲಿ ಮನೆಗೆ ಬಂದ ಅತಿಥಿಗಳನ್ನು ಸತ್ಕರಿಸಿ, ವೈಶ್ವದೇವದ ಮೂಲಕವಾಗಿ ದೇವ-ಪಿತೃ-ಭೂತಯಜ್ಞಗಳನ್ನು ಮಾಡಿ ಸೇವಕರಿಗೂ ಊಟಮಾಡಿಸಿ ಅನಂತರದಲ್ಲಿ ಊಟಮಾಡುವವನೇ ಪರಮ ಸುಖಿಯು. ಮಾಡಿದ ಅನ್ನದಲ್ಲಿ ಮೊದಲನೆಯ ಭಾಗವನ್ನು ಅತಿಥಿಗೆ ಬಡಿಸಿ ಶಿಷ್ಟಾನ್ನವನ್ನು ತಾನು ಊಟಮಾಡುವುದಕ್ಕಿಂತಲೂ ಹೆಚ್ಚಿನ ಪುಣ್ಯ ಕಾರ್ಯವೇ ಮತ್ತೊಂದಿರುವುದಿಲ್ಲ, ಮಹೇಂದ್ರ!

**ಯಾವತೋ ಹ್ಯನ್ಧಸಃ ಪಿಣ್ಡಾನಶ್ನಾತಿ ಸತತಂ ದ್ವಿಜಃ ॥೩೪॥**

**ತಾವತಾಂ ಗೋಸಹಸ್ರಾಣಾಂ ಫಲಂ ಪ್ರಾಪ್ನೋತಿ ದಾಯಕಃ ।**
**ಯದೇನೋ ಯೌವನಕೃತಂ ತತ್ಸರ್ವಂ ನಶ್ಯತೇ ಧ್ರುವಮ್ ॥೩೫॥**

ಅತಿಥಿಯು ಗೃಹಸ್ಥನ ಮನೆಗೆ ಬಂದು ಎಷ್ಟು ಅನ್ನದ ತುತ್ತುಗಳನ್ನು ತಿನ್ನುವನೋ–ಅಷ್ಟು ಸಾವಿರ ಗೋವುಗಳನ್ನು ದಾನಮಾಡಿದ ಪುಣ್ಯವು ಆ ಗೃಹಸ್ಥನಿಗೆ ಲಭ್ಯವಾಗುತ್ತಿರುತ್ತದೆ. ಪುರಂದರನೇ! ಅತಿಥಿಸತ್ಕಾರದಿಂದ ಸಕಲವಿಧವಾದ ಪಾಪಗಳೂ ಅಳಿಸಿಹೋಗುತ್ತವೆ.

**ಸದಕ್ಷಿಣಸ್ಯ ಭುಕ್ತಸ್ಯ ದ್ವಿಜಸ್ಯ ತು ಕರೇ ಗತಮ್ ।**
**ಯದ್ವಾರಿ ವಾರಿಣಾ ಸಿಞ್ಚೇತ್ತದ್ಧ್ಯೇನಸ್ತರತೇ ಕ್ಷಣಾತ್ ॥೩೬॥**

ಮಧ್ಯಾಹ್ನದ ವೇಳೆಯಲ್ಲಿ ಕರೆಯದೇ ಬಂದ ಅತಿಥಿಯನ್ನು ಗೌರವಿಸಿ ಸತ್ಕರಿಸಿ ಭೋಜನಮಾಡಿಸಿ, ಅನಂತರದಲ್ಲಿ ದಕ್ಷಿಣೆಯಿಟ್ಟು ಅದರ ಮೇಲೆ '**ನ ಮಮ ನ ಮಮ**' ಎಂದು ಹೇಳಿ ನೀರು ಬಿಟ್ಟು ಕೊಟ್ಟೊಡನೆಯೇ ದಾತೃವಿನ ಸಕಲವಿಧವಾದ ಪಾಪಗಳೂ ಕ್ಷಣಮಾತ್ರದಲ್ಲಿ ಪರಿಹಾರವಾಗುವುವೆಂಬುದರಲ್ಲಿ ಸ್ವಲ್ಪವಾದರೂ ಸಂಶಯವಿಲ್ಲ. ದೇವೇಂದ್ರ! ಅಂತಹ ಗೃಹಸ್ಥನನ್ನು ನೋಡುವುದೇ ಚಿರಂಜೀವಿಯಾದವನಿಗೆ ಪರಮಸುಖವೆನಿಸುವುದು."

ಯುಧಿಷ್ಠಿರ! ಬಕಮಹರ್ಷಿಯು ಇವೇ ಮೊದಲಾದ ಇನ್ನೂ ಅನೇಕ ಧರ್ಮದ ವಿಷಯಗಳನ್ನು ಇಂದ್ರನೊಡನೆ ಹೇಳಿದನಂತರ ಇಂದ್ರನು ದೇವಲೋಕಕ್ಕೆ ತೆರಳಿದನು."

ಗ೯೩ನೆಯ ಅಧ್ಯಾಯವು ಮುಗಿಯಿತು.

ಗ೯೪ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಕ್ಷತ್ರಿಯರಾಜರ ಮಹತ್ತ್ವ: ಸುಹೋತ್ರ ಮತ್ತು ಶಿಬಿಗಳ ಪ್ರಶಂಸೆ

ಬಕ ಮತ್ತು ಇಂದ್ರರ ಸಂಭಾಷಣೆಯನ್ನು ಕೇಳಿದನಂತರ ಪಾಂಡವರು ಮಾರ್ಕಂಡೇಯಮಹರ್ಷಿಗಳನ್ನು ಪುನಃ ಪ್ರಶ್ನಿಸಿದರು :

"ಬ್ರಾಹ್ಮಣೋತ್ತಮರೇ! ನೀವಿದುವರೆಗೂ ನಮ್ಮ ಪ್ರಾರ್ಥನೆಯಂತೆ ಬ್ರಾಹ್ಮಣರ ಮಹತ್ತ್ವದ ವಿಷಯವಾಗಿ ಹೇಳಿದಿರಿ. ಇನ್ನು ಮುಂದೆ ನಾವು ಕ್ಷತ್ರಿಯರ ಮಹತ್ತ್ವದ ವಿಷಯವಾಗಿ ನಿಮ್ಮಿಂದ ಇತಿಹಾಸಗಳನ್ನು ಕೇಳಲಿಚ್ಛೆಯುಳ್ಳವರಾಗಿದ್ದೇವೆ. ದಯಮಾಡಿ ಹೇಳಿರಿ."

"ಧರ್ಮಜ! ಹಾಗೆಯೇ ಆಗಲಿ. ಕ್ಷತ್ರಿಯರ ಮಹತ್ತ್ವವೆಷ್ಟೆಂಬುದನ್ನು ಸಾವಧಾನವಾಗಿ ಕೇಳಿರಿ."

ಎಂದು ಹೇಳಿ ಮಾರ್ಕಂಡೇಯರು ಕ್ಷತ್ರಿಯರ ಮಹತ್ತ್ವದ ಇತಿಹಾಸವನ್ನು ಹೇಳಲು ಉಪಕ್ರಮಿಸಿದರು :

"ಕುರುವಂಶೋತ್ಪನ್ನವಾದ ಸುಹೋತ್ರನೆಂಬ ಕ್ಷತ್ರಿಯನೊಬ್ಬನು ಒಮ್ಮೆ ಮಹರ್ಷಿಗಳ ಸಂದರ್ಶನಾರ್ಥವಾಗಿ ಹೊರಟನು. ಮಹರ್ಷಿಗಳನ್ನು ಸಂದರ್ಶಿಸಿ ಹಿಂದಿರುಗುತ್ತಿದ್ದಾಗ ಅವನಿಗೆದುರಾಗಿ ಉಶೀನರನ ಮಗನಾದ ಶಿಬಿಯು ರಥದಲ್ಲಿ ಕುಳಿತು ಅದೇ ಮಾರ್ಗವಾಗಿ ಬಂದನು. ತಮ್ಮ-ತಮ್ಮ ವಯೋನುಗುಣವಾಗಿ ಅವರು ಪರಸ್ಪರವಾಗಿ ಅಭಿವಂದನೆಗಳನ್ನು



ಮಾಡಿದರು. ಆದರೆ ಎರಡು ರಥಗಳೂ ನೇರವಾಗಿ ಮುಂದೆ ಹೋಗಲು ಸಾಧ್ಯವಿರಲಿಲ್ಲ. ಒಬ್ಬರು ಕೆಳಗಿಳಿದು ತಮ್ಮ ರಥವನ್ನು ಬದಿಗೆ ನಿಲ್ಲಿಸಿ

ಕೊಂಡು ಮತ್ತೊಬ್ಬರು ಮುಂದೆಹೋಗಲು ಅವಕಾಶನೀಡುವುದು ಅನಿವಾರ್ಯವಾಗಿತ್ತು.*

ಕುರುಕುಲೋತ್ಪನ್ನನಾದ ಸುಹೋತ್ರ ಮತ್ತು ಉಶೀನರನ ಮಗನಾದ ಶಿಬಿ-ಇಬ್ಬರೂ ಎದುರು-ಬದುರಾಗಿ ನಿಂತಿರುವಾಗ ಯಾರು ಯಾರಿಗೆ ಹಾದಿ ಮಾಡಿಕೊಡಬೇಕೆಂಬ ವಿಷಯದಲ್ಲಿ ಸಮಸ್ಯೆಯುಂಟಾಯಿತು.

ತ್ರಿಲೋಕಸಂಚಾರಿಗಳಾದ ನಾರದರು ಆ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಆಗಮಿಸಿದರು.

ಅನ್ಯೋನ್ಯಾಭಿಮುಖವಾಗಿ ನಿಂತಿದ್ದ ಇಬ್ಬರು ರಾಜರನ್ನೂ ನೋಡಿ ನಾರದರು ಪ್ರಶ್ನಿಸಿದರು : "ರಾಜಶ್ರೇಷ್ಠರೇ! ಒಬ್ಬರು ಮತ್ತೊಬ್ಬರ ಹಾದಿಗೆ ಅಡ್ಡಲಾಗಿ ಏಕೆ ನಿಂತಿರುವಿರಿ?" ನಾರದರಿಂದ ಹೀಗೆ ಪ್ರಶ್ನಿಸಲ್ಪಟ್ಟ ರಾಜರಿಬ್ಬರೂ ನಾರದರನ್ನು ಕುರಿತು ಹೇಳಿದರು : "ನಾರದರೇ! ನಾವಿಬ್ಬರೂ ಉದ್ದೇಶಪೂರ್ವಕವಾಗಿ ಒಬ್ಬರ ಹಾದಿಯನ್ನು ಮತ್ತೊಬ್ಬರು ತಡೆದು ನಿಂತಿರುವುದಿಲ್ಲ. ಹಿಂದಿನ ಋಷಿ-ಮಹರ್ಷಿಗಳು ಶ್ರೇಷ್ಠರಾದವರಿಗೂ ಮತ್ತು ಪರಾಕ್ರಮಿಗಳಿಗೂ ಗೌರವವನ್ನು ತೋರಿಸುವ ಸಲುವಾಗಿ ಹಾದಿಯನ್ನು ಬಿಟ್ಟುಕೊಡಬೇಕೆಂದು ಹೇಳಿರುವರು. ನಾವಿಬ್ಬರೂ ಪರಸ್ಪರ ಸಮಾನರೇ ಹೊರತು ಒಬ್ಬರು ಮತ್ತೊಬ್ಬರಿಗಿಂತಲೂ ಶ್ರೇಷ್ಠರಾಗಿರುವುದಿಲ್ಲ. ಆದುದರಿಂದ ನಾವು ಪರಸ್ಪರ ಹಾದಿಯನ್ನು ಬಿಟ್ಟುಕೊಡದೇ ನಿಂತಿರುತ್ತೇವೆ."

ಅವರ ಮಾತುಗಳನ್ನು ಕೇಳಿ ನಸುನಗುತ್ತಾ ನಾರದರು ಹೇಳಿದರು :

**ಕ್ರೂರಃ ಕೌರವ್ಯ ಮೃದವೇ ಮೃದುಃ ಕ್ರೂರೇ ಚ ಕೌರವ ।**
**ಸಾಧುಶ್ಚಾಸಾಧವೇ ಸಾಧುಃ ಸಾಧವೇ ನಾಪ್ನುಯಾತ್ಕಥಮ್ ॥೪॥**

---

* ಇಂತಹ ಸಂದರ್ಭಗಳು ನಮ್ಮ ಜೀವನದಲ್ಲಿಯೂ ಅನೇಕಬಾರಿ ಸಂಭವಿಸುತ್ತವೆ. ನಮ್ಮೆದುರಾಗಿ ದೊಡ್ಡವರು, ಮುದುಕರು, ಹೆಂಗಸರು ಬಂದರೆ ದಾರಿ ಚಿಕ್ಕದಾಗಿದ್ದಾಗ ನಾವು ಬದಿಗೆ ನಿಂತು ನಮ್ಮೆದುರಾಗಿ ಬಂದ ದೊಡ್ಡವರಿಗೆ, ಮುದುಕರಿಗೆ, ಸ್ತ್ರೀಯರಿಗೆ ಮುಂದೆ ಹೋಗಲು ಹಾದಿಮಾಡಿಕೊಡುತ್ತೇವೆ. ನಮ್ಮ ಮನಸ್ಸಿಗೆ ತಿಳಿಯದಂತೆಯೇ ಅಂತಹ ಸಮಯಗಳಲ್ಲಿ ನಾವು ಈ ಸಮುದಾಚಾರವನ್ನು ಅನುಸರಿಸುತ್ತೇವೆ.

"ಸುಹೋತ್ರನೇ! ಕ್ರೂರಿಯಾದವನು ಸತ್ಪುರುಷರನ್ನು ಸಂಧಿಸಿ ದಾಗಲೂ ಕ್ರೌರ್ಯದಿಂದ ವರ್ತಿಸುವನು. ಸಂಧಿಸಿದ ಮಾತ್ರದಿಂದ ಅವನ ಕ್ರೌರ್ಯವು ಹೋಗಿಬಿಡುವುದಿಲ್ಲ. ಅಥವಾ ಸತ್ಪುರುಷರಲ್ಲಿ ಸಾತ್ತ್ವಿಕತೆಯಿಂದ ವರ್ತಿಸಬೇಕೆಂಬ ಇಚ್ಛೆಯೂ ಅವನಿಗುಂಟಾಗುವುದಿಲ್ಲ. ಅವನ ಸ್ವಭಾವಸಿದ್ಧ ವಾದ ಗುಣವನ್ನು ಅವನು ಎಂದಿಗೂ ಬಿಡಲೊಲ್ಲನು. ಸಾಧುವಾದವನೂ ಅಂತೆಯೇ. ಸಾಧುವಾದವನು ಕ್ರೂರಸ್ವಭಾವದವರನ್ನು ಸಂಧಿಸಿದಾಗ ತಾನೂ ಕ್ರೂರಿಯಾಗಿಬಿಡುವುದಿಲ್ಲ. ತನ್ನ ಸಹಜಗುಣವಾದ ಸಾತ್ತ್ವಿಕತೆಯಿಂದಲೇ ವರ್ತಿಸುವನು. ಆದರೆ ಇಬ್ಬರು ಸಾತ್ತ್ವಿಕರು ಸಂಧಿಸಿದಾಗ ಒಬ್ಬರು ಮತ್ತೊಬ್ಬರಿಗೆ ಗೌರವವನ್ನೇಕೆ ತೋರಬಾರದು? ('ಸುಹೋತ್ರನೇ! ನೀನು ಕ್ರೂರಿಗಳ ವಿಷಯದಲ್ಲಿ ಕ್ರೂರನೂ, ಮೃದುವಾಗಿರುವವ ವಿಷಯದಲ್ಲಿ ಮೃದುವೂ ಆಗಿರುವೆ. ಶಿಬಿಯು ಕ್ರೂರಿಗಳ ವಿಷಯದಲ್ಲಿಯೂ ಮೃದುವಾಗಿ ರುವನು. ಆದುದರಿಂದ ಶಿಬಿಯೇ ನಿನಗಿಂತಲೂ ಶ್ರೇಷ್ಠನಾಗಿದ್ದಾನೆ.' ಹೀಗೂ ಅರ್ಥಮಾಡಬಹುದಾಗಿದೆ.)

**ಕೃತಂ ಶತಗುಣಂ ಕುರ್ಯಾನ್ನಾಸ್ತಿ ದೇವೇಷು ನಿರ್ಣಯಃ ।**
**ಔಶೀನರಃ ಸಾಧುಶೀಲೋ ಭವತೋ ವೈ ಮಹೀಪತಿಃ ॥೫॥**

ಸತ್ಪುರುಷರಿಗೆ ಅಲ್ಪವಾದ ಗೌರವವನ್ನು ತೋರಿದರೂ ಅವರದನ್ನು ನೂರು ಪಾಲು ಹೆಚ್ಚಾಗಿ ಭಾವಿಸುತ್ತಾರೆ. ಅವರ ಸ್ವಭಾವವೇ ಅದಾಗಿರುತ್ತದೆ. ಬ್ರಹ್ಮ-ವಿಷ್ಣು-ಪರಮೇಶ್ವರರಲ್ಲಿ ತರ-ತಮಭಾವವನ್ನು ನಿರ್ಣಯಿಸಲು ಸಾಧ್ಯ ವಾಗಲಾರದಂತೆ–ಇಬ್ಬರು ಸತ್ಪುರುಷರಲ್ಲಿ ತರ-ತಮಭಾವವನ್ನು ನಿಶ್ಚಯಿ ಸಲು ಬಹಳ ಕಷ್ಟವೇ ಆಗುತ್ತದೆ. ಆದರೂ ಬಹುಸೂಕ್ಷ್ಮದೃಷ್ಟಿಯಿಂದ ಪರಿ ಶೀಲಿಸುವುದಾದರೆ–ಶಿಬಿಯೇ ನಿನಗಿಂತಲೂ ಹೆಚ್ಚು ಸಾಧುಸ್ವಭಾವದವ ನೆಂದು ಹೇಳಬಹುದಾಗಿದೆ. ಅದೂ ಅಲ್ಲದೇ :

**ಜಯೇತ್ಕದರ್ಯಂ ದಾನೇನ ಸತ್ಯೇನಾನೃತವಾದಿನಮ್ ।**
**ಕ್ಷಮಯಾ ಕ್ರೂರಕರ್ಮಾಣಮಸಾಧುಂ ಸಾಧುನಾ ಜಯೇತ್ ॥೬॥**

ಕೃಪಣನಾದವನನ್ನು ದಾನದಿಂದಲೂ, ಸುಳ್ಳುಹೇಳುವವನನ್ನು ಸತ್ಯ ಭಾಷಣದಿಂದಲೂ, ಕ್ರೂರಕರ್ಮಿಯನ್ನು ಕ್ಷಮಾಗುಣದಿಂದಲೂ, ದುಷ್ಟನನ್ನು

ಸಾತ್ತ್ವಿಕತೆಯಿಂದಲೂ ಜಯಿಸಬೇಕು. ನೀವಿಬ್ಬರೂ ಉದಾರಿಗಳೂ ಧಾರ್ಮಿಕರೂ ಆಗಿರುವಿರಿ. ಆದುದರಿಂದ ನಿಮ್ಮಲ್ಲಿ ಯಾರಾದರೊಬ್ಬರು ಮತ್ತೊಬ್ಬರಿಗೆ ಹಾದಿಯನ್ನು ಬಿಟ್ಟುಕೊಡಬಹುದಲ್ಲವೇ?" ಹೀಗೆಂದು ಹೇಳಿ ನಾರದರು ಮೌನಧರಿಸಿ ನಿಂತರು.

ನಾರದರ ಮಾತುಗಳನ್ನು ಕೇಳಿ ಕುರುವಂಶಪ್ರದೀಪನಾದ ಸುಹೋತ್ರನು ರಥದಿಂದಿಳಿದು ಶಿಬಿಯ ರಥದ ಸುತ್ತಲೂ ಪ್ರದಕ್ಷಿಣೆಮಾಡಿ, ಅವನ ಗುಣಕಥನ ಮಾಡುತ್ತಾ ತನ್ನ ರಥವನ್ನು ಬದಿಗೆ ನಿಲ್ಲಿಸಿ, ಶಿಬಿಯ ರಥವು ಮುಂದೆ ಹೋಗಲು ಹಾದಿಮಾಡಿಕೊಟ್ಟು, ಅವನ ರಥವು ಮುಂದೆಹೋದ ನಂತರ ತಾನೂ ಪ್ರಯಾಣಮಾಡಿದನು.

ಯುಧಿಷ್ಠಿರ! ಈ ಪ್ರಕರಣದಲ್ಲಿ ದೇವರ್ಷಿಗಳಾದ ನಾರದರೇ ಬಂದು ಶಿಬಿರಾಜನ ಹಿರಿಮೆಯನ್ನು ಕೊಂಡಾಡಿದರು."

೧೯೪ನೆಯ ಅಧ್ಯಾಯವು ಮುಗಿಯಿತು.

೧೯೫ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಪರ್ವ (ಮುಂದುವರಿದಿದೆ.)

## ರಾಜಾ ಯಯಾತಿಯು ಬ್ರಾಹ್ಮಣನಿಗೆ ಸಾವಿರ ಗೋವುಗಳನ್ನು ದಾನವಾಗಿ ಕೊಟ್ಟುದು

ಮಾರ್ಕಂಡೇಯರು ಹಿಂದಿನ ಕ್ಷತ್ರಿಯರಾಜರಲ್ಲಿದ್ದ ವಿಶೇಷಗುಣಗಳ ವಿಷಯವಾಗಿ ಪುನಃ ಧರ್ಮರಾಜನಿಗೆ ಹೇಳುತ್ತಾರೆ :

"ಯುಧಿಷ್ಠಿರ! ಕ್ಷತ್ರಿಯರಾಜರು ಯಾಚಕರನ್ನು ಕಂಡರೆ ಅಲಕ್ಷ್ಯಮಾಡುತ್ತಿರಲಿಲ್ಲ. ಯಾಚಕರನ್ನು ನಿಕೃಷ್ಟವಾಗಿಯೂ ಕಾಣುತ್ತಿರಲಿಲ್ಲ. 'ಈಗ ಬಾ, ಆಗ ಬಾ' ಎಂದು ಹೇಳಿಕಳುಹಿಸುತ್ತಿರಲಿಲ್ಲ. ಸತ್ಪಾತ್ರನಾದ ಯಾಚಕನು ತಮ್ಮ ಬಳಿಗೆ ಬರಲಿಲ್ಲವೆಂದು ಪರಿತಪಿಸುತ್ತಿದ್ದರು. ಸತ್ಪಾತ್ರನಾದ ಯಾಚಕನು ತಮ್ಮ ಬಳಿಗೆ ಬಂದೊಡನೆಯೇ ಸಂತೋಷಭರಿತರಾಗಿ ಅವನನ್ನು ಸತ್ಕರಿಸಿ ಅವನ ಅಭೀಷ್ಟವನ್ನು ಪೂರೈಸಿ ಕಳುಹಿಸಿಕೊಡುತ್ತಿದ್ದರು. ಯಾಚಕನ ಮುಖವು ಕುಂದಿದರೆ ತಮಗೆ ಶ್ರೇಯಸ್ಕರವಲ್ಲವೆಂದು ಭಾವಿಸುತ್ತಿದ್ದರು. ಈ ವಿಷಯವಾಗಿ ನಡೆದ ಒಂದು ಇತಿಹಾಸವನ್ನು ಹೇಳುವೆನು, ಕೇಳು :

ನಹುಷನ ಮಗನಾದ ಯಯಾತಿಯು ಒಮ್ಮೆ ತನ್ನ ಪ್ರಜೆಗಳಿಂದಲೂ ಮಂತ್ರಿಗಳಿಂದಲೂ ಪರಿವೃತನಾಗಿ ಸಭಾಭವನದಲ್ಲಿ ಸಿಂಹಾಸನಾರೂಢನಾಗಿ ಕುಳಿತಿದ್ದನು. ಆ ಸಮಯಕ್ಕೆ ಸರಿಯಾಗಿ ಬ್ರಾಹ್ಮಣನೊಬ್ಬನು ಸಭಾಭವನಕ್ಕೆ ಆಗಮಿಸಿದನು. ಗುರುವಿನಿಂದ ಪೂರ್ಣವಿದ್ಯೆಯನ್ನು ಕಲಿತು ಬಂದಿದ್ದ ಆ ಬ್ರಾಹ್ಮಣನು ಗುರುದಕ್ಷಿಣೆಯನ್ನು ಸಲ್ಲಿಸುವ ಸಲುವಾಗಿ ಹಣಬೇಡಲು ಬಂದಿದ್ದನು. ಯಯಾತಿ-ಬ್ರಾಹ್ಮಣರ ಪರಸ್ಪರ ಸಮಾಗಮವಾದನಂತರ ಬ್ರಾಹ್ಮಣನು ಯಯಾತಿಗೆ ಹೇಳಿದನು :

"ಮಹಾರಾಜ! ನಾನು ಗುರುವಿನಲ್ಲಿ ವಿದ್ಯಾಭ್ಯಾಸವನ್ನು ಪೂರ್ಣ ಮಾಡಿದೆನು. ಯಥಾನುಗತವಾದ ಸಂಪ್ರದಾಯದ ಪ್ರಕಾರ ಮತ್ತು ನನ್ನ ಗುರುಗಳ ಕಡೆಯಲ್ಲಿ ವಿಧಿಸಿರುವ ನಿಬಂಧನೆಯೊಡನೆ ನಾನು ಅವರಿಗೆ ಗುರು ದಕ್ಷಿಣೆಯನ್ನು ಸಲ್ಲಿಸಬೇಕಾಗಿದೆ."

"ಬ್ರಾಹ್ಮಣ! ನೀನು ಸಲ್ಲಿಸಬೇಕಾಗಿರುವ ಗುರುದಕ್ಷಿಣೆಯ ಪರಿಮಿತಿ ಯೆಷ್ಟು? ಮತ್ತು ನಿಮ್ಮ ಗುರುಗಳ ನಿಬಂಧನೆಯೇನು?"–ಎಂದು ಯಯಾತಿಯು ಒಡನೆಯೇ ಪ್ರಶ್ನಿಸಿದನು.

ಅದಕ್ಕುತ್ತರವಾಗಿ ಬ್ರಾಹ್ಮಣನು ಹೇಳಿದನು :

**ವಿದ್ವೇಷಣಂ ಪರಮಂ ಜೀವಲೋಕೇ**
**ಕುರ್ಯಾನ್ನರಃ ಪಾರ್ಥಿವ ಯಾಚ್ಯಮಾನಃ ।**
**ತಂ ತ್ವಾಂ ಪೃಚ್ಛಾಮಿ ಕಥಂ ತು ರಾಜ**
**ನ್ದದ್ಯಾದ್ಭವಾನ್ದಯಿತಂ ಚ ಮೇಽದ್ಯ ॥೩॥**

"ಮಹಾರಾಜ! ಈ ಪ್ರಪಂಚದಲ್ಲಿ ಧರ್ಮಸಮ್ಮತವಾದ ಅಥವಾ ಧಾರ್ಮಿಕವಾದ ಯಾವುದಾದರೂ ಕಾರ್ಯಗಳಿಗೆ ಯಾಚನೆಮಾಡಲು ಹೋದರೆ ಧನಿಕರಾದವರು ಯಾಚಿಸಲು ಬಂದವನನ್ನು ಬಹಳ ಕುತ್ಸಿತದೃಷ್ಟಿ ಯಿಂದ ಕಾಣುತ್ತಾರೆ. ಯಾಚಕನನ್ನು ಹೀನದೃಷ್ಟಿಯಿಂದ ಕಂಡು ಕೇವಲ ದುರಭಿಮಾನದಿಂದ ಕೊಡುವ ದಾನವೂ ನಿಕೃಷ್ಟವಾಗುತ್ತದೆ. ಅಂತಹ ಧನ ವನ್ನು ಧರ್ಮಕಾರ್ಯಗಳಿಗಾಗಲೀ, ಗುರುದಕ್ಷಿಣೆಗಳಿಗಾಲೀ ಉಪಯೋಗಿ ಸುವುದು ಯೋಗ್ಯವಲ್ಲ. ಆದುದರಿಂದ ನಾನು ಈ ವಿಷಯದಲ್ಲಿ ನಿನ್ನನ್ನು

ನೇರವಾಗಿಯೇ ಪ್ರಶ್ನಿಸುತ್ತೇನೆ. ಯಾಚಕನು ಬಂದು ಧನವನ್ನು ಯಾಚಿಸಿ ದಾಗ ನಿನ್ನ ಮನಸ್ಸಿನಲ್ಲಿ ಉಂಟಾಗುವ ಪರಿಣಾಮವೇನು? ಯಾಚಕನ ವಿಷಯದಲ್ಲಿ ನಿನ್ನ ಮನೋಭಾವವು ಹೇಗಿರುತ್ತದೆ? ಈ ವಿಷಯವನ್ನು ಮರೆಮಾಚದೇ ಹೇಳು, ಮಹಾರಾಜ!"

"ದಾನಪಡೆಯಲು ಅರ್ಹನಾದ ಬ್ರಾಹ್ಮಣೋತ್ತಮನೇ!

**ನ ಚಾನುಕೀರ್ತಯೇದದ್ಯ ದತ್ತ್ವಾ**
**ಅಯಾಚ್ಯಮರ್ಥಂ ನ ಚ ಸಂಶೃಣೋಮಿ ।**
**ಪ್ರಾಪ್ಯಮರ್ಥಂ ಚ ಸಂಶ್ರುತ್ಯ**
**ತಂ ಚಾಪಿ ದತ್ತ್ವಾ ಸುಸುಖೀ ಭವಾಮಿ ॥೪॥**

ನಾನು ಕೊಟ್ಟ ದಾನದ ವಿಷಯವಾಗಿ ಪುನಃ ಹೇಳಿಕೊಳ್ಳುವುದಿಲ್ಲ. 'ಇಂತಹವನಿಗೆ ಈ ಸಮಯದಲ್ಲಿ ಇಂತಹ ದಾನಕೊಟ್ಟೆನೆಂದು' ಸ್ಮರಿಸಿ ಕೊಳ್ಳುವುದೂ ಇಲ್ಲ. 'ಇಂತಹ ವಸ್ತುಗಳು ಯಾಚನೆಗೆ ಅರ್ಹವಾದುವು ಗಳಲ್ಲ'–ಎಂಬ ವಿಷಯವನ್ನೂ ನಾನು ಇದುವರೆಗೂ ಕೇಳಿರುವುದಿಲ್ಲ. (ನನ್ನಲ್ಲಿರುವ ಸಕಲವಸ್ತುಗಳೂ ಸತ್ಪಾತ್ರರಾದವರಿಗೆ ದಾನಾರ್ಹವಾದ ವಸ್ತುಗಳೇ ಆಗಿವೆ.) ನನ್ನಲ್ಲಿರುವ ವಸ್ತುಗಳಲ್ಲಿ ಯಾಚಕನು ಯಾವ ವಸ್ತುವನ್ನು ಅಪೇಕ್ಷಿಸುವನೆಂಬುದನ್ನು ಕೇಳಿ ಒಡನೆಯೇ ಅವನಿಗದನ್ನು ಕೊಟ್ಟು ಸಂತೋಷಪಡುತ್ತೇನೆ. ನಾನು ನಿನಗಿಂದು ಒಂದು ಸಾವಿರ ಕೆಂಪು ಬಣ್ಣದ ಹಸುಗಳನ್ನು ಗುರುದಕ್ಷಿಣಾರ್ಥವಾಗಿ ಕೊಡಲು ನಿಶ್ಚಯಿಸಿರುತ್ತೇನೆ. ನನ್ನನ್ನು ಯಾಚಿಸಲು ಬಂದು ಬ್ರಾಹ್ಮಣರು ನಿಶ್ಚಯವಾಗಿಯೂ ನನಗೆ ಬಹಳ ಪ್ರಿಯರಾಗಿರುತ್ತಾರೆ. ಒಂದೇ ಮಾತಿನಲ್ಲಿ ಹೇಳುವುದಾದರೆ ; '**ನ ಮೇ ಮನಃ ಕುಪ್ಯತಿ ಯಾಚಮಾನೇ ದತ್ತಂ ನ ಶೋಚಾಮಿ ಕದಾಚಿ ದರ್ಥಮ್**'. ಯಾಚಕನು ನನ್ನ ಬಳಿಗೆ ಯಾಚಿಸಲು ಬರುವುದರಿಂದ ನನ್ನ ಮನಸ್ಸು ಖತಿಗೊಳ್ಳುವುದಿಲ್ಲ. ದಾನಕೊಟ್ಟನಂತರ ನಾನೆಂದಿಗೂ ಪರಿತಾಪ ಪಡುವುದೂ ಇಲ್ಲ."

ಯಯಾತಿಯು ಹೀಗೆ ಹೇಳಿ ಬ್ರಾಹ್ಮಣನನ್ನು ಸತ್ಕರಿಸಿ ಒಂದು ಸಾವಿರ ಹಸುಗಳನ್ನು ದಾನವಾಗಿ ಕೊಟ್ಟನು. ಬ್ರಾಹ್ಮಣನೂ ಸಹ ಗುರು

ದಕ್ಷಿಣಾರ್ಥವಾಗಿ ಗೋದಾನವನ್ನು ಸ್ವೀಕರಿಸಿ ತನ್ನ ಗ್ರಾಮಕ್ಕೆ ಪ್ರಯಾಣ ಮಾಡಿದೆನು."

ಒ೯೫ನೆಯ ಅಧ್ಯಾಯವು ಮುಗಿಯಿತು.

೧೯೬ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಪರ್ವ (ಮುಂದುವರಿದಿದೆ.)

## ಸೇದುಕ ಮತ್ತು ವೃಷದರ್ಭರ ಚರಿತ್ರೆ

ಧರ್ಮಜನು ಹೇಳುತ್ತಾನೆ :

"ಮಹರ್ಷಿಗಳೇ! ಕ್ಷತ್ರಿಯರ ಮಹಾಭಾಗ್ಯದ ವಿಷಯವಾಗಿ ಇನ್ನೂ ಕಥೆಗಳನ್ನು ಹೇಳಿರಿ. ನನಗೆ ಆ ಪುಣ್ಯಪುರುಷರ ಕಥೆಗಳನ್ನು ಕೇಳಿದಷ್ಟೂ ಇನ್ನೂ ಕೇಳಬೇಕೆನ್ನಿಸುತ್ತದೆ."

ಯುಧಿಷ್ಠಿರನ ಬೇಡಿಕೆಗೆ ಮನ್ನಣೆಯನ್ನಿತ್ತು ಮಹರ್ಷಿಗಳಾದ ಮಾರ್ಕಂಡೇಯರು ವೃಷದರ್ಭ ಮತ್ತು ಸೇದುಕರ ಕಥೆಯನ್ನು ಹೇಳಲು ಉಪಕ್ರಮಿಸಿದರು :

"ಯುಧಿಷ್ಠಿರ! ಹಿಂದೆ ವೃಷದರ್ಭ, ಸೇದುಕ–ಎಂಬಿಬ್ಬರು ರಾಜರಿದ್ದರು. ಇಬ್ಬರೂ ನೀತಿಶಾಸ್ತ್ರವಿಶಾರದರಾಗಿಯೂ, ಧನುರ್ವಿದ್ಯೆಯಲ್ಲಿ ನಿಪುಣ ರಾಗಿಯೂ ಇದ್ದರು. ರಹಸ್ಯವಾಗಿಯೇ ಮಾಡಬೇಕಾದ ಉಪಾಂಶುವ್ರತದ ಸಾಧನೆಯನ್ನು ವೃಷದರ್ಭನು ಬಾಲ್ಯದಿಂದಲೂ ಮಾಡುತ್ತಿದ್ದನು. ಬ್ರಾಹ್ಮಣ ರಿಗೆ ರಜತ ಮತ್ತು ಹಿರಣ್ಯದಾನಗಳ ಹೊರತಾಗಿ ಬೇರೆ ಯಾವ ಧನವನ್ನೂ ಕೊಡೆನೆಂಬುದೇ ಆ ಉಪಾಂಶುವ್ರತ. ಅವನು ಬ್ರಾಹ್ಮಣರಿಗೆ ರಜತ ಮತ್ತು ಸುವರ್ಣಗಳನ್ನು ಹೊರತಾಗಿ ಬೇರೆಯ ದಾನವನ್ನೇ ಕೊಟ್ಟವನಲ್ಲ. ಆ ರಹಸ್ಯವು ಸೇದುಕನಿಗೆ ಹೇಗೋ ತಿಳಿದಿದ್ದಿತು.

ಹೀಗೆಯೇ ಇರುತ್ತಿರಲಾಗಿ ಬ್ರಾಹ್ಮಣನೊಬ್ಬನು ವೇದಾಧ್ಯಯನವನ್ನು ಸಾಂಗವಾಗಿ ಮುಗಿಸಿ ಗುರುದಕ್ಷಿಣಾರ್ಥವಾಗಿ ಸೇದುಕರಾಜನ ಬಳಿಗೆ ಬಂದು ಅವನನ್ನು ವೇದೋಕ್ತವಾಗಿ ಆಶೀರ್ವದಿಸಿ ಗುರುದಕ್ಷಿಣಾರ್ಥವಾಗಿ ಒಂದು ಸಾವಿರ ಕುದುರೆಗಳನ್ನು ದಾನವಾಗಿ ಕೊಡುವಂತೆ ಪ್ರಾರ್ಥಿಸಿದನು. ಅದಕ್ಕು ತ್ತರವಾಗಿ ಸೇದುಕನು ಹೇಳಿದನು :

"ಬ್ರಾಹ್ಮಣೋತ್ತಮನೇ! ಇಷ್ಟು ಅಪಾರವಾದ ಅಶ್ವಸಂಪತ್ತಿಯು ನನ್ನಲ್ಲಿರುವುದಿಲ್ಲ. ಆದುದರಿಂದ ಗುರುದಕ್ಷಿಣಾರ್ಥವಾಗಿ ನೀನು ಕೇಳಿದ ಒಂದು ಸಾವಿರ ಕುದುರೆಗಳನ್ನು ಕೊಡಲು ಅಸಮರ್ಥನಾಗಿದ್ದೇನೆ. ಆದರೂ ಯಾಚಿಸಲು ಬಂದ ಬ್ರಾಹ್ಮಣನನ್ನು ಹಾಗೆಯೇ ಕಳುಹಿಸುವುದು ರಾಜ ಧರ್ಮವಲ್ಲ. ಅಪಾರವಾದ ಅಶ್ವಸಂಪತ್ತಿಯು ದೊರೆಯುವ ಸ್ಥಳವನ್ನಾದರೂ ಹೇಳುವುದು ನನ್ನ ಕರ್ತವ್ಯವಾಗಿದೆ. ವೃಷದರ್ಭನೆಂಬ ನನ್ನ ಮಿತ್ರನೊಬ್ಬ ನಿರುವನು. ಅವನು ಬಹುಧಾರ್ಮಿಕನು. ನೀನು ಈಗಲೇ ಹೋಗಿ ಅವನನ್ನು ಪ್ರಾರ್ಥಿಸು. ನಿನ್ನ ಇಚ್ಛೆಯು ಖಂಡಿತವಾಗಿಯೂ ಪೂರ್ಣವಾಗುವುದು. ಯಾಚಿಸಲು ಬಂದ ಬ್ರಾಹ್ಮಣನನ್ನು ಬರಿಗೈಯಿಂದ ಕಳುಹೆನೆಂಬುದು ಅವನ ಪ್ರತಿಜ್ಞೆಯೂ ಆಗಿರುವುದು." ಸೇದುಕನ ಮಾತುಗಳನ್ನು ಕೇಳಿ ಸಂತೋಷ ಭರಿತನಾದ ಆ ಬ್ರಾಹ್ಮಣನು ಒಡನೆಯೇ ವೃಷದರ್ಭರಾಜನ ಬಳಿಗೆ ಹೋಗಿ ಗುರುದಕ್ಷಿಣಾರ್ಥವಾಗಿ ಒಂದು ಸಾವಿರ ಕುದುರೆಗಳನ್ನು ಕೊಡಬೇಕೆಂದು ಯಾಚಿಸಿದನು. ಒಡನೆಯೇ ವೃಷದರ್ಭನು ಬ್ರಾಹ್ಮಣನಿಗೆ ಚಾವಟಿಯಿಂದ ಒಂದು ಪೆಟ್ಟುಕೊಟ್ಟನು. ಕುಪಿತನಾದ ಬ್ರಾಹ್ಮಣನು ರಾಜನಿಗೆ ಹೇಳಿದನು :

"ನಿರ್ದೋಷಿಯಾದ ನನ್ನನ್ನೇಕೆ ಹಿಂಸಿಸುವೆ?"

ಹೀಗೆ ಹೇಳಿ ಬ್ರಾಹ್ಮಣನು ರಾಜನನ್ನು ಶಪಿಸುವುದರಲ್ಲಿದ್ದನು. ಅಷ್ಟ ರೊಳಗಾಗಿಯೇ ರಾಜನು ಬ್ರಾಹ್ಮಣನೊಡನೆ ಹೇಳಿದನು :

"ಎಲೈ ಬ್ರಾಹ್ಮಣನೇ! ಯಾವನು ತನ್ನಲ್ಲಿರುವ ಧನವನ್ನು ಬ್ರಾಹ್ಮಣನಿಗೆ ದಾನಮಾಡುವುದಿಲ್ಲವೋ–ಅಂತಹವನಿಗೆ ನೀನು ಶಾಪಕೊಡಬಹುದು. ಬ್ರಾಹ್ಮಣರಿಗೆ ದಾನಮಾಡಲು ಸರ್ವದಾ ಸಿದ್ಧನಾಗಿರುವ ನನಗೆ ನೀನು ಶಾಪ ಕೊಡುವುದು ಯೋಗ್ಯವಲ್ಲ. ಮೇಲಾಗಿ ಶಾಂತಿಯೇ ಪರಮಧರ್ಮವಾಗಿ ಉಳ್ಳ ಬ್ರಾಹ್ಮಣನು ಕುಪಿತನಾಗಲೂಬಾರದು ; ಶಾಪವನ್ನೂ ಕೊಡಬಾರದು.'

ರಾಜನ ಆ ಮಾತಿನಿಂದ ಸ್ವಲ್ಪ ಸೈರಣೆಯನ್ನು ತಂದುಕೊಂಡ ಬ್ರಾಹ್ಮಣನು ಹೇಳಿದನು :

"ಮಹಾರಾಜ! ನಾನು ಮೊದಲು ಸೇದುಕನ ಬಳಿಗೆ ಯಾಚಿಸಲು ಹೋಗಿದ್ದೆನು. ಅವನು ನಿನ್ನಲ್ಲಿಗೆ ಕಳುಹಿಸಿಕೊಟ್ಟನು. ಇದರಲ್ಲಿ ನನ್ನ ತಪ್ಪೇನಿರುವುದು?"

ಸ್ವರ್ಣಕ್ಕೆ ಬದಲಾಗಿ ಕುದುರೆಗಳನ್ನು ಕೇಳಿದುದೇ ವೃಷದರ್ಭನ ಆಗ್ರಹಕ್ಕೆ ಕಾರಣವಾಗಿದ್ದಿತು. ಆದರೆ ಆ ವಿಷಯವನ್ನು ಬಹಿರಂಗ ಪಡಿಸುವ ಸಾಧ್ಯತೆಯಿರಲಿಲ್ಲ. ತನ್ನ ಬಳಿಗೆ ಸೇದುಕನು ಕಳುಹಿಸಿದನೆಂದು ಬ್ರಾಹ್ಮಣನು ಹೇಳಿದೊಡನೆಯೇ ಸೇದುಕನು ತನ್ನನ್ನು ಪರೀಕ್ಷಿಸಲೆಂದೇ ಈ ಬ್ರಾಹ್ಮಣನನ್ನು ಕಳುಹಿಸಿರುವನೆಂದು ನಿಶ್ಚಯಿಸಿದವನಾಗಿ ಬ್ರಾಹ್ಮಣನಿಗೆ ಹೇಳಿದನು :

"ಬಾಹ್ಮಣ! ನಾಳೆ ಬೆಳಗಿನಿಂದ ಮಧ್ಯಾಹ್ನದವರೆಗೆ ನನಗೆಷ್ಟು ಕಪ್ಪ-ಕಾಣಿಕೆಗಳು ಬರುತ್ತವೆಯೋ–ಆ ಎಲ್ಲ ಧನವನ್ನೂ ನಿನಗೆ ದಾನಮಾಡು ವೆನು. ಬ್ರಾಹ್ಮಣನೊಬ್ಬನನ್ನು ಚಾವಟಿಯಿಂದ ಹೊಡೆದು ಸಮಾಧಾನ ಪಡಿಸದೇ ಬರಿಗೈಯಿಂದ ಹೇಗೆ ತಾನೇ ಕಳುಹಿಸಿಕೊಡಲಿ?" ಹೀಗೆಂದು ಹೇಳಿ ಪ್ರಾತಃಕಾಲದಿಂದ ಮಧ್ಯಾಹ್ನದವರೆಗಿನ ಆದಾಯವನ್ನೆಲ್ಲವನ್ನೂ ಬ್ರಾಹ್ಮಣನಿಗೆ ದಾನವಾಗಿ ಕೊಟ್ಟುಬಿಟ್ಟನು. ಆ ಅಪಾರಧನದಿಂದ ಬ್ರಾಹ್ಮಣನು ಸಾವಿರಕ್ಕಿಂತಲೂ ಹೆಚ್ಚಿನ ಕುದುರೆಗಳನ್ನು ಕೊಳ್ಳಬಹುದಾಗಿದ್ದಿತು. ಆ ಮಹಾದಾನದಿಂದ ಬ್ರಾಹ್ಮಣನು ತೃಪ್ತನಾಗಿ ಆಶ್ರಮಕ್ಕೆ ಹಿಂದಿರುಗಿ ಗುರುಗಳಿಗೆ ಗುರುದಕ್ಷಿಣೆಯನ್ನು ಸಮರ್ಪಿಸಿದನು."

೧೯೬ನೆಯ ಅಧ್ಯಾಯವು ಮುಗಿಯಿತು.

೧೯೭ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಪರ್ವ (ಮುಂದುವರಿದಿದೆ.)

## ಇಂದ್ರಾಗ್ನಿಗಳಿಂದ ಶಿಬಿಚಕ್ರವರ್ತಿಯ ಪರೀಕ್ಷೆ

ಅನಂತರದಲ್ಲಿ ಮಾರ್ಕಂಡೇಯರು ಧರ್ಮಜನ ಅಭಿಮತದಂತೆ ಶಿಬಿ ಚಕ್ರವರ್ತಿಯ ಪವಿತ್ರಕಥೆಯನ್ನು ಹೇಳಲುಪಕ್ರಮಿಸಿದರು :

"ಒಮ್ಮೆ ದೇವತೆಗಳು ಸಭೆಸೇರಿ ತಾವು ಭೂಲೋಕಕ್ಕೆ ಹೋಗಿ ಉಶೀ ನರನ ಮಗನಾದ ಶಿಬಿಯನ್ನು ಪರೀಕ್ಷಿಸಬೇಕೆಂಬುದಾಗಿ ನಿಶ್ಚಯಮಾಡಿ ಕೊಂಡರು. ಆ ಕಾರ್ಯಕ್ಕೆ ಇಂದ್ರ ಮತ್ತು ಅಗ್ನಿಗಳನ್ನು ನಿಯೋಜಿಸ ಲಾಯಿತು. ಅವರಿಬ್ಬರೂ ಸ್ವರ್ಗವನ್ನು ಬಿಟ್ಟು ಭೂಮಿಗಿಳಿದು ಬಂದರು. ಅಗ್ನಿಯು ಕಪೋತದ ವೇಷಧರಿಸಿ ಹಾರುತ್ತಾ ಬಂದನು. ಇಂದ್ರನು

ಗಿಡಗದ ವೇಷಧರಿಸಿ ಕಪೋತವನ್ನಟ್ಟಿಸಿಕೊಂಡು ಅದರ ಬೆನ್ನಹಿಂದೆಯೇ ಹೊರಟನು. ಕಪೋತವು ಹಾರುತ್ತಾ ಹಾರುತ್ತಾ ಸುಂದರವಾದ ಸಿಂಹಾಸನದ ಮೇಲೆ ಕುಳಿತಿದ್ದ ಶಿಬಿಚಕ್ರವರ್ತಿಯ ತೊಡೆಯ ಮೇಲೆ ಹೋಗಿಬಿದ್ದಿತು. ಅದನ್ನು ನೋಡಿ ಹತ್ತಿರದಲ್ಲಿಯೇ ಇದ್ದ ರಾಜಪುರೋಹಿತರು ರಾಜ



ನಿಗೆ ಹೇಳಿದರು : "ಮಹಾರಾಜ! ಈ ಪಾರಿವಾಳವನ್ನು ಗಿಡಗಪಕ್ಷಿಯು ಅಟ್ಟಿಸಿಕೊಂಡು ಬರುತ್ತಿದೆ. ಆ ಪಕ್ಷಿಗೆ ಹೆದರಿ ಈ ಪಾರಿವಾಳವು ಪ್ರಾಣವನ್ನುಳಿಕೊಳ್ಳುವ ಸಲುವಾಗಿ ನಿನ್ನ ತೊಡೆಯ ಮೇಲೆ ಬಂದು ಬಿದ್ದಿರುವುದು. ವಾಸ್ತವಾಂಶವು ಹೀಗಿದ್ದರೂ ಕಪೋತವು ಮೇಲೆ ಬೀಳುವುದು ಮುಂಬರುವ

ಅನಿಷ್ಟಕ್ಕೆ ಸೂಚಕವೆಂದು ತಿಳಿದವರು ಹೇಳುತ್ತಾರೆ. ಆದುದರಿಂದ ಮುಂಬರುವ ಅಪಾಯದಿಂದ ಪಾರಾಗಲು ನೀನು ಹೇರಳವಾದ ದ್ರವ್ಯವನ್ನು ಬ್ರಾಹ್ಮಣರಿಗೆ ದಾನಮಾಡು.” ಪುರೋಹಿತರು ಹೀಗೆ ಹೇಳಿದ ನಂತರ ತೊಡೆಯ ಮೇಲೆ ಬಿದ್ದಿದ್ದ ಕಪೋತವು ಮೆಲ್ಲನೆ ತಲೆಯನ್ನೆತ್ತಿ ರಾಜನಿಗೆ ಹೇಳಿತು: “ಮಹಾರಾಜ! ನಿನ್ನ ಪುರೋಹಿತನು ಹೇಳುವುದೂ ನಿಶ್ಚಯ. ಒಂದು ಗಿಡಗವು ನನ್ನ ಬೆನ್ನಟ್ಟಿ ಬರುತ್ತಿತ್ತು. ಅದಕ್ಕೆ ಹೆದರಿ ನನ್ನ ಪ್ರಾಣವನ್ನುಳಿಕೊಳ್ಳುವ ಸಲುವಾಗಿ ನಿನ್ನಲ್ಲಿಗೆ ಓಡಿಯೋಡಿ ಬಂದಿರುವೆನು. ಮೇಲಾಗಿ ನಾನೊಬ್ಬ ಮುನಿಯಾಗಿದ್ದೆನು. ಈಗ ಈ ಕಪೋತಶರೀರದಲ್ಲಿರುವೆನು. ನೀನು ನನ್ನ ಪ್ರಾಣವೆಂದೇ ಭಾವಿಸಿ ನಿನ್ನ ರಕ್ಷಣೆಯನ್ನು ಯಾಚಿಸುತ್ತಿದ್ದೇನೆ. ನಾನು ನಾಲ್ಕು ವೇದಗಳನ್ನೂ ಆಮೂಲಾಗ್ರವಾಗಿ ಅಧ್ಯಯನ ಮಾಡಿರುತ್ತೇನೆ. ಸರ್ವಕಾಲದಲ್ಲಿಯೂ ಮಾಡಿದ ವೇದಾಧ್ಯಯನದಿಂದಲೇ ಕೃಶವಾಗಿ ಮಾಡಲ್ಪಟ್ಟ ಶರೀರವುಳ್ಳ ಜಿತೇಂದ್ರಿಯನಾದ ಬ್ರಹ್ಮಚಾರಿಯೆಂದು ನನ್ನನ್ನು ತಿಳಿ. ನಾನು ಯಾವಾಗಲೂ ತಪಸ್ಸಿನಲ್ಲಿಯೇ ನಿರತನಾಗಿದ್ದೇನೆ. ವಿದ್ಯೆ ಹೇಳಿಕೊಟ್ಟ ಆಚಾರ್ಯರಿಗೆ ಯಾವ ದಿನವೂ ಯಾವ ಕಾರಣ ದಿಂದಲೂ ಪ್ರತಿಯಾಗಿ ಮಾತನಾಡಿದವನಲ್ಲ.

ನಾನು ಪಾಪರಹಿತನೂ, ಧರ್ಮದಲ್ಲಿಯೇ ಸದಾ ನಿರತನೂ ಆಗಿರುವೆನು. ಬಹುಶ್ರಾವ್ಯವಾಗಿ ಸ್ವರಸಹಿತವಾಗಿ ವೇದಗಳನ್ನು ಹೇಳುತ್ತೇನೆ. ಛಂದಃಶಾಸ್ತ್ರವೂ ನನಗೆ ತಿಳಿದಿರುವುದು. ನಾನು ಎಲ್ಲ ವೇದಗಳನ್ನೂ ಸಸ್ವರವಾಗಿ ಅಧ್ಯಯನಮಾಡಿರುತ್ತೇನೆ. ನಾನು ಕಪೋತದ ಶರೀರದಲ್ಲಿ ಸೇರಿಕೊಂಡು ನಿನ್ನ ಬಳಿಗೆ ಬಂದಿದ್ದರೂ ನಾನು ನಿಜವಾದ ಕಪೋತ ಪಕ್ಷಿಯಲ್ಲ. ಆದುದರಿಂದ ನೀನು ನನ್ನನ್ನು ಗಿಡಗಪಕ್ಷಿಗೆ ಒಪ್ಪಿಸಿಬಿಡಬೇಡ. “ನ ಸಾಧು ದಾನಂ ಶ್ರೋತ್ರಿಯಸ್ಯ ಪ್ರದಾನಂ” ಶ್ರೋತ್ರಿಯನಾದ ಬ್ರಾಹ್ಮಣನನ್ನು ದಾನವಾಗಿ ಕೊಟ್ಟುಬಿಡುವುದು ಖಂಡಿತವಾಗಿಯೂ ಸಮಂಜಸವಲ್ಲ”–ಎಂದು ಹೇಳಿ ಕಪೋತವು ತನ್ನ ಮಾತನ್ನು ಮುಗಿಸುವುದ ರೊಳಗಾಗಿ ಗಿಡಗಪಕ್ಷಿಯು ರಾಜನ ಬಳಿಗೆ ಬಂದು ಅವನನ್ನು ಕುರಿತು ಹೀಗೆಂದು ಹೇಳಿತು :

**ಪರ್ಯಾಯೇಣ ವಸತಿರ್ವಾ ಭವೇಷು**
**ಸರ್ಗೇ ಜಾತಃ ಪೂರ್ವಮಸ್ಮಾತ್ಕಪೋತಾತ್ ।**
**ತ್ವಮಾದದಾನೋಽಥ ಕಪೋತಮೇನಂ**
**ಮಾ ತ್ವಂ ರಾಜನ್ವಿಘ್ನಕರ್ತಾ ಭವೇಥಾಃ ॥೧೦॥**

"ಮಹಾರಾಜ! ಪ್ರಾಣಿಗಳೇ ಆಗಲಿ, ಮನುಷ್ಯರೇ ಆಗಲೀ–ಮರಣಾನಂತರ ಮತ್ತೊಮ್ಮೆ ಮೊದಲಿನ ಜನ್ಮದಲ್ಲಿಯೇ ಹುಟ್ಟಬೇಕೆಂಬ ನಿಯಮವಿಲ್ಲ. (ಮನುಷ್ಯನು ಮನುಷ್ಯನಾಗಿಯೇ ಹುಟ್ಟಬೇಕೆಂಬ ನಿಯಮವಿಲ್ಲ. ಅದರಲ್ಲಿಯೂ ಪುರುಷನು ಪುರುಷನಾಗಿಯೇ ಹುಟ್ಟಬೇಕೆಂಬ ನಿಯಮವೂ ಇಲ್ಲ. ಪುರುಷನು ಪ್ರಾಣಿಯಾಗಲೂಬಹುದು. ಪ್ರಾಣಿಯು ಪುರುಷನಾಗಲೂ ಬಹುದು. ಸ್ತ್ರೀಯು ಪುರುಷನಾಗಬಹುದು ; ಪುರುಷನು ಸ್ತ್ರೀಯಾಗಬಹುದು.) ಪ್ರಪಂಚದಲ್ಲಾಗುತ್ತಿರುವ ಸೃಷ್ಟಿಯು ಈ ವಿಧವಾದ ವೈಶಿಷ್ಟ್ಯ ಅಥವಾ ವೈಚಿತ್ರ್ಯದಿಂದ ಕೂಡಿರುತ್ತದೆ. ನೀನು ನಿನ್ನ ಹಿಂದಿನ ಜನ್ಮದಲ್ಲಿ ಈ ಕಪೋತಪಕ್ಷಿಯ ಹೊಟ್ಟೆಯಲ್ಲಿಯೇ ಹುಟ್ಟಿರಲೂಬಹುದು. ಹಾಗಿದ್ದರೂ ನೀನು ಮಾತ್ರ ನನ್ನ ಆಹಾರಕ್ಕಾಗಿಯೇ ಸೃಷ್ಟಿಯಾಗಿರುವ ಈ ಕಪೋತವನ್ನು ತಡೆಹಿಡಿಯುವುದು ಯುಕ್ತವಲ್ಲ."

ಗಿಡಗಪಕ್ಷಿಯೂ ಮನುಷ್ಯರಂತೆಯೇ ಮಾತನಾಡುವುದನ್ನು ಕೇಳಿ ಆಶ್ಚರ್ಯಭರಿತನಾದ ಶಿಬಿಯು ಹೇಳಿದನು :

**ಕೇನೇದೃಶೀ ಜಾತು ಪರಾ ಹಿ ದೃಷ್ಟಾ**
**ವಾಗುಚ್ಯಮಾನಾ ಶಕುನೇನ ಸಂಸ್ಕೃತಾ ।**
**ಯಾಂ ವೈ ಕಪೋತೋ ವದತೇ ಯಾಂ ಚ ಶ್ಯೇನ**
**ಉಭೌ ವಿದಿತ್ವಾ ಕಥಮಸ್ತು ಸಾಧು ॥೧೧॥**

"ಇದುವರೆಗೆ ಯಾರಾದರೂ ಮನುಷ್ಯನು ಮಾತನಾಡುವಷ್ಟೇ ಸ್ಪಷ್ಟವಾದ ಸುಸಂಸ್ಕೃತವಾದ ಭಾಷೆಯಲ್ಲಿ ಪಕ್ಷಿಗಳು ಮಾತನಾಡಿದುದನ್ನು ಕೇಳಿರುವರೇ? ನಾನಂತೂ ಇದೇ ಮೊದಲಾಗಿ ಕೇಳುತ್ತಿದ್ದೇನೆ. ಪಾರಿವಾಳವು ಹೇಳಿದುದನ್ನೂ ಮತ್ತು ಗಿಡಗಪಕ್ಷಿಯು ಹೇಳಿದುದನ್ನೂ ಕೇಳಿದನಂತರ ನಾವು ಮಾಡಬೇಕಾದ ಕರ್ತವ್ಯವೇನು? ನಾವು ಯಾವ ಧರ್ಮಮಾರ್ಗವನ್ನು

ಅನುಸರಿಸಿ ಹೋಗಬೇಕು? ಯಾವ ಮಾರ್ಗವನ್ನನುಸರಿಸಿದರೆ ನಮ್ಮ ಮಾನವಧರ್ಮಕ್ಕೂ ರಾಜಧರ್ಮಕ್ಕೂ ಚ್ಯುತಿಯುಂಟಾಗುವುದಿಲ್ಲ–ಎಂಬುದನ್ನು ವಿವೇಚಿಸಬೇಕಾಗಿದೆ.

**ನಾಸ್ಯ ವರ್ಷಂ ವರ್ಷತಿ ವರ್ಷಕಾಲೇ**
**ನಾಸ್ಯ ಬೀಜಂ ರೋಹತಿ ಕಾಲ ಉಪ್ತಮ್ ।**
**ಭೀತಂ ಪ್ರಪನ್ನಂ ಯೋ ಹಿ ದದಾತಿ ಶತ್ರವೇ**
**ನ ತ್ರಾಣಂ ಲಭೇತ್ತ್ರಾಣಮಿಚ್ಛನ್ಸ ಕಾಲೇ ॥೧೨॥**

ಶರಣಾಗತವನ್ನು ರಕ್ಷಣೆಮಾಡದವನು ಮಹಾಪಾಪಕ್ಕೆ ಗುರಿಯಾಗುವನು. ಅವನ ರಾಜ್ಯದಲ್ಲಿ ಮಳೆಯಾಗಬೇಕಾದ ಕಾಲಕ್ಕೆ ಮಳೆಯಾಗುವುದಿಲ್ಲ. ಹಾಕಿದ ಬೀಜವು ಹುಟ್ಟುವುದಿಲ್ಲ. ಭೀತನಾಗಿಯೂ, ಪ್ರಸನ್ನನಾಗಿಯೂ ಬಂದವನನ್ನು ಯಾವನು ಅವನ ಶತ್ರುವಿಗೊಪ್ಪಿಸಿಬಿಡುವನೋ ಅಂತಹವನಿಗೆ ಮುಂದೆ ಒದಗಬಹುದಾದ ವಿಪತ್ತಿನಿಂದ ಪಾರುಮಾಡಲು ಯಾರೊಬ್ಬರು ಬರುವುದಿಲ್ಲ.

**ಜಾತಾ ಹ್ರಸ್ವಾ ಪ್ರಜಾ ಪ್ರಮೀಯತೇ**
**ಸದಾ ನ ವಾಸಂ ಪಿತರೋಽಸ್ಯ ಕುರ್ವತೇ ।**
**ಭೀತಂ ಪ್ರಪನ್ನಂ ಯೋ ಹಿ ದದಾತಿ ಶತ್ರವೇ**
**ನಾಸ್ಯ ದೇವಾಃ ಪರಿಗೃಹ್ಣನ್ತಿ ಹವ್ಯಮ್ ॥೧೩॥**

ಭಯದಿಂದ ಶರಣಾಗತನಾಗಿ ಬಂದವನನ್ನು ಯಾವಾತನು ರಕ್ಷಿಸದೇ ಶತ್ರುವಿಗೆ ಒಪ್ಪಿಸಿಬಿಡುವನೋ–ಅವನ ಮಕ್ಕಳು ಬಾಲ್ಯದಲ್ಲಿಯೇ ಸತ್ತು ಹೋಗುತ್ತಾರೆ. ಅವನ ಪೂರ್ವಜರು ಸ್ವರ್ಗದಿಂದ ಚ್ಯುತರಾಗುತ್ತಾರೆ. ಅವನು ಯಜ್ಞೇಶ್ವರನ ಮೂಲಕವಾಗಿ ಅರ್ಪಿಸುವ ಹವ್ಯವನ್ನು ದೇವತೆಗಳೂ ಪರಿಗ್ರಹಿಸುವುದಿಲ್ಲ.

**ಮೋಘಮನ್ನಂ ವಿನ್ದತಿ ಚಾಪ್ರಚೇತಾಃ**
**ಸ್ವರ್ಗಾಲ್ಲೋಕಾದ್ಭ್ರಶ್ಯತಿ ಶೀಘ್ರಮೇವ ।**
**ಭೀತಂ ಪ್ರಪನ್ನಂ ಯೋ ಹಿ ದದಾತಿ ಶತ್ರವೇ**
**ಸೇನ್ದ್ರಾ ದೇವಾಃ ಪ್ರಹರನ್ತ್ಯಸ್ಯ ವಜ್ರಮ್ ॥೧೪॥**

ಭಯದಿಂದ ಶರಣಾಗತನಾಗಿ ಬಂದವನನ್ನು ಯಾವಾತನು ರಕ್ಷಿಸದೇ ಶತ್ರುವಿಗೆ ಒಪ್ಪಿಸಿಬಿಡುತ್ತಾನೆಯೋ–ಅಂತಹ ನಿರ್ದಯನು ತಿನ್ನುವ ಅನ್ನವೂ ನಿಷ್ಫಲವಾಗುತ್ತದೆ. ಅನೇಕ ಪುಣ್ಯಕಾರ್ಯಗಳನ್ನು ಮಾಡಿ ಅವಸಾನಾನಂತರ ದಲ್ಲಿ ಸ್ವರ್ಗಕ್ಕೆ ಹೋದರೂ ಈ ಒಂದು ದುಷ್ಕಾರ್ಯದ ಫಲವಾಗಿ ಅವನು ಬಹಳ ಬೇಗ ಸ್ವರ್ಗದಿಂದ ಭ್ರಷ್ಟನಾಗುತ್ತಾನೆ ಮತ್ತು ಇಂದ್ರಾದಿ ದೇವತೆಗಳೂ ಪಾಪಿಷ್ಠನಾದ ಅವನನ್ನು ವಜ್ರಾಯುಧದಿಂದ ಪ್ರಹರಿಸುತ್ತಾರೆ. ಆದುದರಿಂದ ಗಿಡಗಪಕ್ಷಿಯೇ! ನನ್ನ ಸೇವಕರು ಈ ಕಪೋತಪಕ್ಷಿಯ ಬದಲಾಗಿ ಒಂದು ಹೋರಿಯನ್ನು ಹನನಮಾಡಿ ಅನ್ನದೊಡನೆ ಬೇಯಿಸಿ ನಿನಗೆ ಆಹಾರವನ್ನಾಗಿ ಕೊಡುತ್ತಾರೆ ಆಗಬಹುದೇ? ಅಥವಾ ನೀನಿರುವೆಡೆಗೆ ಮಾಂಸದ ರಾಶಿಯನ್ನೇ ತಂದುಹಾಕುತ್ತಾರೆ."

"ಮಹಾರಾಜ! ನನಗೆ ಹೋರಿಯೂ ಬೇಡ ; ಹೋರಿಯ ಮಾಂಸವೂ ಬೇಡ. ಬೇರಾವ ಮಾಂಸವನ್ನೂ ನಾನು ಅಪೇಕ್ಷಿಸುವವನಲ್ಲ. ನನಗೆ ಈ ಕಪೋತಪಕ್ಷಿಯಲ್ಲಿರುವ ಮಾಂಸಕ್ಕಿಂತಲೂ ಹೆಚ್ಚಿನ ಮಾಂಸದ ಅವಶ್ಯ ಕತೆಯೂ ಇಲ್ಲ. ದೇವರೇ ಈ ಕಪೋತವನ್ನು ನನ್ನ ಆಹಾರಾರ್ಥವಾಗಿ ಸೃಷ್ಟಿಸಿದ್ದಾನೆ. ಇಂದಿಗೆ ಈ ಪಕ್ಷಿಯ ಆಯುಷ್ಯವೂ ಮುಗಿದಿದೆಯಾದ್ದರಿಂದ ಈ ಪಕ್ಷಿಯೇ ನನಗೆ ಬೇಕಾಗಿರುವುದು. ಆದುದರಿಂದ ಈ ಪಕ್ಷಿಯನ್ನು ಕೂಡಲೇ ನನಗೆ ಕೊಟ್ಟುಬಿಡು."

"ಶ್ಯೇನಪಕ್ಷಿಯೇ! ಸ್ವಲ್ಪವಾದರೂ ನ್ಯೂನತೆಯಿಲ್ಲದ, ಸರ್ವಾಂಗಪರಿ ಪೂರ್ಣವಾದ, ಸುಪುಷ್ಟವಾದ ಹೋರಿಯನ್ನು ನಿನ್ನ ಸಮೀಪಕ್ಕೆ ಆಹಾರಾರ್ಥ ವಾಗಿ ಕಳುಹಿಸಿಕೊಡುತ್ತೇನೆ. ಭಯಪಟ್ಟು ನನ್ನನ್ನು ಶರಣುಹೊಂದಿರುವ ಈ ಕಪೋತಪಕ್ಷಿಯ ಬದಲಾಗಿನ ನೀನು ಆ ಹೋರಿಯನ್ನು ಪರಿಗ್ರಹಿಸು. ನನ್ನ ಸಮಕ್ಷದಲ್ಲಿಯೇ ಆ ಹೋರಿಯನ್ನು ನಿನಗೆ ಕಳುಹಿಸಿಕೊಡುತ್ತೇನೆ. ನೀನು ಮಾತ್ರ ಖಂಡಿತವಾಗಿಯೂ ಈ ಪಾರಿವಾಳವನ್ನು ಕೊಲ್ಲಕೂಡದು. ಒಂದೇ ಮಾತಿನಲ್ಲಿ ಹೇಳುವುದಾದರೆ–ನಾನು ನನ್ನ ಪ್ರಾಣವನ್ನಾದರೂ ಬಿಟ್ಟೇನು ; ಆದರೆ ಆ ಪಾರಿವಾಳವನ್ನು ಮಾತ್ರ ನಿನಗೆ ಖಂಡಿತವಾಗಿಯೂ ಒಪ್ಪಿಸ ಲಾರೆನು. ಚಂದ್ರನಂತೆ ನೋಡಲು ಆಹ್ಲಾದಕವಾಗಿರುವ ಈ ಪಾರಿವಾಳ

ವನ್ನು ನೋಡಿದರೆ ನಿನಗೆ ಕೊಲ್ಲಲು ಹೇಗೆ ತಾನೇ ಇಚ್ಛೆಯುಂಟಾಗುವುದು? ಏನೇ ಆದರೂ ನಾನು ಮಾತ್ರ ಈ ಕಪೋತವನ್ನು ನಿನಗೊಪ್ಪಿಸುವುದಿಲ್ಲ. ನೀನು ಈ ಕಪೋತವೊಂದನ್ನು ಬಿಟ್ಟು ಮತ್ತೇನನ್ನಾದರೂ ಅಪೇಕ್ಷಿಸು. ನಿನಗೆ ಪ್ರಿಯವಾಗಬಹುದಾದ ಯಾವ ಕಾರ್ಯವನ್ನು ಬೇಕಾದರೂ ಮಾಡಲು ಸಿದ್ಧ ನಾಗಿರುವೆನು. ಆದರೆ ನಿನಗಾಗಿ ಅಥವಾ ನಿನ್ನ ಪ್ರೀತಿಗಾಗಿ ಮಾಡುವ ಕಾರ್ಯವು ನನ್ನ ಪ್ರಜೆಗಳ ಪ್ರಶಂಸೆಗೆ ಪಾತ್ರವಾಗಿರಬೇಕು. ನಿಂದೆಗೆ ಪಾತ್ರ ವಾಗಬಾರದು. ಶರಣಾಗತರಕ್ಷಣೆಗೆ ಚ್ಯುತಿಯುಂಟಾಗದ ರೀತಿಯಲ್ಲಿ ನೀನು ಏನೇ ಹೇಳಿದರೂ ಮಾಡಲು ಸಿದ್ಧನಾಗಿರುವೆನೆಂದು ಪ್ರತಿಜ್ಞೆಮಾಡುತ್ತೇನೆ. ನಿಸ್ಸಂಕೋಚವಾಗಿ ಹೇಳು."

"ಹಾಗಾದರೆ ನಿನ್ನ ಬಲತೊಡೆಯನ್ನು ಕತ್ತರಿಸಿ ಅಲ್ಲಿಂದ ಮಾಂಸವನ್ನು ತೆಗೆದು ಈ ಕಪೋತದ ತೂಕಕ್ಕೆ ಸರಿಯಾಗುವಂತೆ ತೂಕಮಾಡಿ ಕೊಡಬೇಕು. ನಿನ್ನ ಬಲತೊಡೆಯ ಮಾಂಸವು ಮಾತ್ರವೇ ಈ ಕಪೋತಕ್ಕೆ ಪ್ರತ್ಯ ಮ್ನಾಯವಾದೀತು. ಇದರಿಂದ ನಾನು ತೃಪ್ತಿಹೊಂದುತ್ತೇನೆ ಮತ್ತು ನಿನ್ನ ಅನುಯಾಯಿಗಳೂ ನಿನ್ನೀ ಕಾರ್ಯವನ್ನು ಶ್ಲಾಘಿಸುತ್ತಾರೆ. ಆಗಬಹುದೇ?"

ಧರ್ಮಾತ್ಮನಾದ, ಸತ್ಯಸಂಕಲ್ಪನಾದ ಶಿಬಿಯು ಇಲ್ಲವೆನ್ನುವನೇ? ಕಪೋತದ ಪ್ರಾಣವುಳಿಯುವಂತೆ ಗಿಡಗವು ಸಲಹೆನೀಡಿದ್ದಕ್ಕಾಗಿ ಶಿಬಿಯು ಸಂತೋಷಭರಿತನಾದನು. ಒಡನೆಯೇ ಒಂದು ತಕ್ಕಡಿಯನ್ನು ತರಿಸಿ ತನ್ನ ತೊಡೆಯನ್ನು ಕತ್ತರಿಸಿ ಮಾಂಸವನ್ನು ತೆಗೆದು ಒಂದು ತಟ್ಟೆಯಲ್ಲಿಟ್ಟನು. ಮತ್ತೊಂದು ತಟ್ಟೆಯಲ್ಲಿ ಕಪೋತವು ಕುಳಿತುಕೊಂಡಿತು. ಆದರೆ ಕಪೋತವು ಕುಳಿತುಕೊಂಡಿದ್ದ ತಟ್ಟೆಯು ಕೆಳಗಡೆಯೇ ಇತ್ತು. ಶಿಬಿಯು ತನ್ನ ತೊಡೆ ಯಿಂದ ಮತ್ತೊಂದು ತುಂಡು ಮಾಂಸವನ್ನು ಕತ್ತರಿಸಿ ತಟ್ಟೆಯೊಳಗಿಟ್ಟನು. ಆದರೂ ಕಪೋತದ ತಟ್ಟೆಯು ಮೇಲೇಳಲಿಲ್ಲ. ಶಿಬಿಯು ತನ್ನ ಶರೀರದಲ್ಲಿ ಮಾಂಸವಿರುವ ಭಾಗಗಳನ್ನೆಲ್ಲಾ ಕತ್ತರಿಸಿ ಮಾಂಸದ ತುಂಡುಗಳನ್ನು ತೆಗೆದು ತಟ್ಟೆಯೊಳಗಿಟ್ಟನು. ಆದರೂ ಆ ಮಾಂಸದ ರಾಶಿಯ ಭಾರವು ಕಪೋತದ ಭಾರಕ್ಕೆ ಸರಿದೂಗಲಿಲ್ಲ. ಶಿಬಿಯು ಕ್ಷಣಕಾಲ ಯೋಚಿಸಿ ತಕ್ಕಡಿಯ ತಟ್ಟೆಯೊಳಗೇ ತಾನೇ ಕುಳಿತುಕೊಂಡನು. ಕಪೋತವನ್ನು ರಕ್ಷಿಸುವ ಒಂದೇ ಒಂದು ದೃಷ್ಟಿಯು ರಾಜನಿಗಿತ್ತೇ ಹೊರತು ತನ್ನ ಪ್ರಾಣ

ಹೋಗುವುದೆಂಬ ವಿವೇಚನೆಯೇ ಅವನಿಗಿರಲಿಲ್ಲ. ರಾಜನ ಸ್ಥೈರ್ಯವನ್ನು ಕಂಡೊಡನೆಯೇ ಗಿಡಗಪಕ್ಷಿಯು–"ಕಪೋತವು ರಕ್ಷಿತವಾಯಿತು"–ಎಂದು ಹೇಳಿ ಮಾಯವಾಗಿ ಹೋಯಿತು. ಮತ್ತೊಂದು ತಟ್ಟೆಯಲ್ಲಿ ಕುಳಿತಿದ್ದ ಪಾರಿವಾಳವನ್ನು ಶಿಬಿಯು ಕೇಳಿದನು :

"ಪಾರಿವಾಳವೇ! ಈ ಗಿಡಗಪಕ್ಷಿಯು ನಿಜವಾದ ಗಿಡಗಪಕ್ಷಿಯಲ್ಲ. ಈ ಮಹಾಪುರುಷನಾರೆಂಬುದನ್ನು ತಿಳಿಯಲು ಕಾತರನಾಗಿದ್ದೇನೆ ಮತ್ತು ನನ್ನ ಪ್ರಜೆಗಳೂ ಅವನಾರೆಂಬುದನ್ನು ತಿಳಿಯಲಿ. ಜಗದೀಶ್ವರನ ಹೊರತಾಗಿ ಮತ್ತಾರೂ ಈ ಕಾರ್ಯವನ್ನು ಮಾಡಲಾರರೆಂದು ನಾನು ಭಾವಿಸುತ್ತೇನೆ. ಪೂಜ್ಯನೇ! ಈ ನನ್ನ ಪ್ರಶ್ನೆಗೆ ಉತ್ತರಿಸಿ ನನ್ನನ್ನು ಧನ್ಯನನ್ನಾಗಿ ಮಾಡು."

ವೈಶ್ವಾನರೋಽಹಂ ಜ್ವಲನೋ ಧೂಮಕೇತು–
ರಥೈವ ಶ್ಯೇನೊ ವಜ್ರಹಸ್ತಃ ಶಚೀಪತಿಃ ।
ಸಾಧು ಜ್ಞಾತುಂ ತ್ವಾಮೃಷಭಂ ಸೌರಥೇಯ
ನೌ ಜಿಜ್ಞಾಸಯಾ ತ್ವತ್ಸಕಾಶಂ ಪ್ರಪನ್ನೌ ॥೨೫॥

"ಮಹಾರಾಜ! ನಾನು ಜ್ವಲನನಾದ, ಧೂಮಕೇತುವಾದ ವೈಶ್ವಾನರಾಗ್ನಿಯು. ಶ್ಯೇನಪಕ್ಷಿಯು ಸಾಕ್ಷಾತ್ ಶಚೀಪತಿಯು. ಸುರಥನಂದನನೇ! ನೀನು ನಿಶ್ಚಯವಾಗಿಯೂ ಪುರುಷರ್ಷಭನಾಗಿರುವೆ. ನಾವಿಬ್ಬರೂ ನಿನ್ನನ್ನು ಪರೀಕ್ಷಿಸಲೋಸುಗವಾಗಿಯೇ ಬಂದೆವು. ನೀನು ನನ್ನ ರಕ್ಷಣೆಗೆಂದು ಈ ಮಾಂಸದ ರಾಶಿಯನ್ನು ನಿನ್ನ ಶರೀರದಿಂದ ಕತ್ತರಿಸಿದುದರಿಂದ ನಿನ್ನ ಶರೀರವೆಲ್ಲವೂ ಅನೇಕ ರಂಧ್ರಗಳಿಂದ ಕೂಡಿದೆ. ನಾನು ಈ ಚಿಹ್ನೆಗಳೆಲ್ಲವೂ ಶುಭಪ್ರದವಾಗುವಂತೆಯೂ ಸುಂದರವಾಗಿರುವಂತೆಯೂ ಮಾಡುವೆನು. ಈ ರಂಧ್ರಗಳು ಸ್ವರ್ಣದ ಬಣ್ಣವನ್ನು ಹೊಂದುವುದಲ್ಲದೇ–ಸುವಾಸನೆಯನ್ನೂ ಬೀರುತ್ತವೆ. ನೀನೂ ದೇವತೆಗಳಿಂದಲೂ, ಋಷಿ-ಮಹರ್ಷಿಗಳಿಂದಲೂ ಪ್ರಶಂಸಿತನಾಗಿ ನಿನ್ನೀ ಪ್ರಜೆಗಳನ್ನು ಬಹುಕಾಲದವರೆಗೂ ಪಾಲನೆಮಾಡುವೆ. ಮುಂದೆ ನಿನ್ನ ಈ ಪಕ್ಕದಿಂದಲೇ ನಿನಗೊಬ್ಬ ಮಗನು ಹುಟ್ಟುತ್ತಾನೆ. ಅವನ ಹೆಸರು 'ಕಪೋತರೋಮ' ಎಂದಾಗಿರುವುದು. ಅವನು ನಿನ್ನ ವಂಶದಲ್ಲಿಯೇ ಶ್ರೇಷ್ಠತಮನಾಗಿಯೂ, ಮಹಾಪರಾಕ್ರಮಿಯಾಗಿಯೂ, ಸುಪ್ರಸಿದ್ಧ

ನಾಗಿಯೂ, ಯಶೋವಂತನಾಗಿಯೂ, ಸುಂದರಕಾಯನಾಗಿಯೂ ಆಗಿರುವನು. "ಹೀಗೆ ಹೇಳಿ ಅಗ್ನಿದೇವನು ಅಂತರ್ಧಾನಹೊಂದಿದನು."

೧೯೭ನೆಯ ಅಧ್ಯಾಯವು ಮುಗಿಯಿತು.

೧೯೮ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಪರ್ವ (ಮುಂದುವರಿದಿದೆ.)

## ದೇವರ್ಷಿಗಳಾದ ನಾರದರಿಂದ ಶಿಬಿಯ ಮಹತ್ತ್ವದ ಪ್ರತಿಪಾದನೆ

ಜನಮೇಜಯ! ಯುಧಿಷ್ಠಿರನಿಗೆ ಕ್ಷತ್ರಿಯರ ಗುಣಕಥನಗಳನ್ನು ಮತ್ತೂ ಕೇಳಬೇಕೆನ್ನಿಸಿತು. ಪುನಃ ಮಾರ್ಕಂಡೇಯಮಹರ್ಷಿಗಳನ್ನು ಪ್ರಾರ್ಥಿಸಿದನು : "ಮಹರ್ಷಿಗಳೇ! ಕ್ಷತ್ರಿಯರ ಮಹಾಭಾಗ್ಯನಿರೂಪಕ ಗಳಾದ ಇತಿಹಾಸಗಳನ್ನು ಮತ್ತೂ ಕೇಳಬೇಕೆಂದು ಮನಸ್ಸು ತವಕಪಡುತ್ತಿದೆ. ದಯಮಾಡಿ ಹೇಳಿರಿ."

ಮಾರ್ಕಂಡೇಯರು ಪುನಃ ಕಥಾಪ್ರವಚನವನ್ನು ಪ್ರಾರಂಭಿಸಿದರು :

"ಯುಧಿಷ್ಠಿರ! ವಿಶ್ವಾಮಿತ್ರನ ಮಗನಾದ ಅಷ್ಟಕನು ಮಾಡುತ್ತಿದ್ದ ಅಶ್ವಮೇದಯಜ್ಞಕ್ಕೆ ಸಮಸ್ತರಾಜರೂ ಬಂದಿದ್ದರು. ಅಷ್ಟಕನ ಜ್ಞಾತಿಗಳಾದ ಪ್ರತರ್ದನ, ವಸುಮನಸ ಮತ್ತು ಉಶೀನರನ ಮಗ ಶಿಬಿ–ಇವರೂ ಆಗಮಿಸಿದ್ದರು. ಅಶ್ವಮೇಧಯಾಗವು ಮುಗಿದನಂತರದಲ್ಲಿ ಅಷ್ಟಕನು ಯಾಗಕ್ಕೆ ಆಗಮಿಸಿದ್ದ ತನ್ನ ಮೂವರು ಅಣ್ಣ-ತಮ್ಮಂದಿರನ್ನೂ ರಥದಲ್ಲಿ ಕುಳ್ಳಿರಿಸಿಕೊಂಡು ಪ್ರಯಾಣಮಾಡುತ್ತಿದ್ದಾಗ–ಹಾದಿಯಲ್ಲಿ ದೇವರ್ಷಿಗಳಾದ ನಾರದರು ಸಿಕ್ಕಿದರು. ಒಡನೆಯೇ ರಥವನ್ನು ನಿಲ್ಲಿಸಿ ನಾಲ್ವರು ರಾಜಕುಮಾರರೂ ಮಹರ್ಷಿಗಳಿಗೆ ಅಭಿವಾದನಮಾಡಿ ನಮಸ್ಕರಿಸಿ ರಥದ ಮೇಲೆ ಕುಳಿತುಕೊಳ್ಳುವಂತೆ ನಾರದರನ್ನು ಪ್ರಾರ್ಥಿಸಿದರು. ನಾರದರು ಹಾಗೆಯೇ ಆಗಲೆಂದು ಹೇಳಿ ರಥಾರೋಹಣಮಾಡಿದರು. ಅವರನ್ನನುಸರಿಸಿ ರಾಜ ಕುಮಾರರೂ ರಥವನ್ನು ಹತ್ತಿದರು. ನಾಲ್ವರಲ್ಲಿ ಒಬ್ಬ ರಾಜಕುಮಾರನು ರಥದಲ್ಲಿಯೇ ನಾರದರನ್ನು ಯಥೋಚಿತವಾಗಿ ಸತ್ಕರಿಸಿ ಪ್ರಶ್ನಿಸಿದನು : "ಮಹರ್ಷಿಗಳೇ! ತಮ್ಮಲ್ಲಿ ಕೆಲವು ಪ್ರಶ್ನೆಗಳನ್ನು ಕೇಳುವ ಆಶಯವಿರುವುದು."

ನಾರದರು ಒಡನೆಯೇ 'ಕೇಳಬಹುದು' ಎಂದು ಉತ್ತರಿಸಿದರು.

"ಮಹರ್ಷಿಗಳೇ! ನಾವು ಚಿರಂಜೀವಿಗಳಾಗಿದ್ದೇವೆ. ಅನೇಕ ಧರ್ಮ ಕಾರ್ಯಗಳನ್ನು ಮಾಡಿದ್ದೇವೆ. ಸಾಧುಗಳು ಅನುಸರಿಸುವ ಸನ್ಮಾರ್ಗ ದಲ್ಲಿಯೇ ನಡೆಯುತ್ತಿದ್ದೇವೆ. ನಾವು ಮಾಡಿರುವ ಸತ್ಕರ್ಮಗಳ ಫಲವಾಗಿ ನಮಗೆ ಅವಸಾನಾನಂತರದಲ್ಲಿ ಸ್ವರ್ಗಪ್ರಾಪ್ತಿಯೂ ಆಗುವುದು. ಅಲ್ಲಿಯೂ ಬಹಳ ಕಾಲದವರೆಗೆ ಸ್ವರ್ಗಸುಖವನ್ನು ಅನುಭವಿಸುವೆವು. ಆದರೆ ಆ ಸ್ವರ್ಗಸುಖವೂ ಶಾಶ್ವತವಲ್ಲವೆಂಬುದೂ ನಮಗೆ ತಿಳಿದಿದೆ. ನಮ್ಮ ಸತ್ಕರ್ಮ ಫಲಗಳು ತೀರಿದೊಡನೆಯೇ ನಾವು ಪುನಃ ಈ ಭೂಮಿಯಲ್ಲಿ ಜನ್ಮವೆತ್ತಬೇಕಾಗುತ್ತದೆ. ನಮ್ಮ ನಾಲ್ವರಲ್ಲಿ ಯಾವನು–ತನ್ನ ಸತ್ಕರ್ಮಗಳ ಫಲವು ಮುಗಿದನಂತರ ಮೂವರಿಗಿಂತಲೂ ಮೊದಲು ಸ್ವರ್ಗದಿಂದ ಚ್ಯುತನಾಗುತ್ತಾನೆ? ಈ ರಹಸ್ಯವನ್ನು ದಯಮಾಡಿ ತಿಳಿಸಬೇಕೆಂದು ಪ್ರಾರ್ಥಿಸುತ್ತೇನೆ."

ನಾರದರು ಆ ಜಟಿಲವಾದ ಪ್ರಶ್ನೆಗೆ ಉತ್ತರವನ್ನೀಯಲು ಕ್ಷಣಕಾಲವೂ ಯೋಚಿಸಲಿಲ್ಲ. ಅವನು ಕೇಳುತ್ತಿದ್ದಂತೆಯೇ ಪ್ರಶ್ನೆಗೆ ಉತ್ತರವನ್ನಿತ್ತರು.

"ಅಷ್ಟಕನು ಎಲ್ಲರಿಗಿಂತಲೂ ಮೊದಲು ಸ್ವರ್ಗದಿಂದ ಚ್ಯುತನಾಗುತ್ತಾನೆ."

"ಕಾರಣವೇನೆಂದು ಕೇಳಬಹುದೇ?"

"ನಾನು ಹಿಂದೆ ಸ್ವಲ್ಪ ಕಾಲ ಈ ಅಷ್ಟಕನ ಮನೆಯಲ್ಲಿಯೇ ತಂಗಿದ್ದೆನು. ಒಂದು ದಿನ ಇವನು ನನ್ನನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಪಟ್ಟಣದ ಹೊರಭಾಗಕ್ಕೆ ಕರೆದುಕೊಂಡು ಹೋದನು. ಅಲ್ಲಿ ಅನೇಕ ವರ್ಣಗಳ ಸಾವಿರಾರು ಹಸುಗಳಿದ್ದುದನ್ನು ಕಂಡು ಈ ಹಸುಗಳು ಯಾರವೆಂದು ಅಷ್ಟಕನನ್ನು ಪ್ರಶ್ನಿಸಿದೆನು. ಅದಕ್ಕುತ್ತರವಾಗಿ ಅಷ್ಟಕನು, "ಈ ಹಸುಗಳೆಲ್ಲವೂ ನನ್ನವೇ ಆಗಿದ್ದುವು. ಈ ಎಲ್ಲ ಹಸುಗಳನ್ನೂ ನಾನು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟುಬಿಟ್ಟೆನು"–ಎಂದುತ್ತರಿಸಿ ತನ್ನ ಶ್ಲಾಘನೆಯನ್ನು ತಾನೇ ಮಾಡಿಕೊಂಡನು.

ಇವನು ಈ ವಿಧವಾದ ಉತ್ತರವನ್ನು ಕೊಟ್ಟದ್ದರಿಂದಲೇ ಇವನ

ಮನಸ್ಸು ಎಷ್ಟರಮಟ್ಟಿಗೆ ಸಂಸ್ಕೃತವಾಗಿರುವುದೆಂಬುದನ್ನು ತಿಳಿದು ಇವನು ಮಾಡಿರುವ ದಾನಕ್ಕೆ ಇಂತಿಷ್ಟೇ ಫಲವೆಂದು ನಿರ್ಧರಿಸಿದೆನು.”

ಉಳಿದ ಮೂವರಲ್ಲಿ ಪುನಃ ಜಿಜ್ಞಾಸೆಯುಂಟಾಯಿತು. ಅವರಲ್ಲೊಬ್ಬನು ನಾರದರನ್ನು ಕೇಳಿದನು : “ಮಹರ್ಷಿಗಳೇ! ತಾವು ಹೇಳಿದಂತೆ ಅಷ್ಟಕನು ಮೊದಲು ಸ್ವರ್ಗದಿಂದ ಕೆಳಗಿಳಿಯುತ್ತಾನೆ. ನಾವು ಮೂವರೂ ಸನ್ಮಾರ್ಗದಲ್ಲಿಯೇ ಇದ್ದೇವೆ. ನಾವು ಅಷ್ಟಕನಿಗಿಂತಲೂ ಇನ್ನೂ ಸ್ವಲ್ಪ ಹೆಚ್ಚುಕಾಲ ಸ್ವರ್ಗದಲ್ಲಿರಲು ಸಾಧ್ಯವಾಗಬಹುದೇ ಹೊರತು ಶಾಶ್ವತವಾದ ಸ್ವರ್ಗಸುಖವು ನಮಗಾರಿಗೂ ಸಿಕ್ಕಲಾರದು. ನಾವು ಮೂವರಲ್ಲಿ ಯಾರು ಮೊದಲು ಸ್ವರ್ಗದಿಂದ ಚ್ಯುತರಾಗುವೆವೆಂಬುದನ್ನು ದಯಮಾಡಿ ಹೇಳಿರಿ.”

ನಾರದರು ಒಡನೆಯೇ ಹೇಳಿದರು : ‘ಪ್ರತರ್ದನ.’

“ಕಾರಣವೇನೆಂದು ಕೇಳಬಹುದೇ?”

“ಕೇಳಲೂಬಹುದು ; ತಿಳಿದುಕೊಳ್ಳಲೂಬಹುದು. ಇವನ ಮನೆಯಲ್ಲಿಯೂ ನಾನು ಸ್ವಲ್ಪಕಾಲ ತಂಗಿದ್ದೆನು. ಇವನೂ ಒಮ್ಮೆ ನನ್ನನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ವಿಹಾರಾರ್ಥವಾಗಿ ಹೊರಟನು.

ರಥಕ್ಕೆ ನಾಲ್ಕು ಕುದುರೆಗಳು ಕಟ್ಟಲ್ಪಟ್ಟಿದ್ದುವು. ಪ್ರಯಾಣಮಾಡುತ್ತಿರುವ ಸಮಯದಲ್ಲಿ ಒಬ್ಬ ಬ್ರಾಹ್ಮಣನು ಎದುರಾಗಿ ಬಂದು ರಾಜನಿಗೆ ಸ್ವಸ್ತಿವಾಚನಮಾಡಿ ಆಶೀರ್ವದಿಸಿ, ತನಗೊಂದು ಕುದುರೆಯನ್ನು ದಾನವಾಗಿ ಕೊಡುವಂತೆ ಪ್ರಾರ್ಥಿಸಿದನು. ತಾನು ರಾಜಧಾನಿಗೆ ಹಿಂದಿರುಗಿದನಂತರ ಕುದುರೆಯನ್ನು ಕೊಡುವೆನೆಂದು ಪ್ರತರ್ದನನು ಬ್ರಾಹ್ಮಣನಿಗೆ ಹೇಳಿದನು. ಆದರೆ ಬ್ರಾಹ್ಮಣನು ಅದಕ್ಕೊಪ್ಪಲಿಲ್ಲ. ಬಹುಶೀಘ್ರವಾಗಿ ತನಗೆ ಕುದುರೆಯು ಬೇಕಾಗಿದೆಯೆಂದು ಒತ್ತಾಯಮಾಡಿ ಕೇಳಿದನು. ಬ್ರಾಹ್ಮಣನು ಒತ್ತಾಯ ಪಡಿಸಿದನಂತರ ರಾಜನು ತನ್ನ ರಥದ ಬಲಭಾಗದಲ್ಲಿ ಕಟ್ಟಿದ್ದ ಕೊನೆಯ ಕುದುರೆಯನ್ನೇ ಬಿಚ್ಚಿ ಬ್ರಾಹ್ಮಣನಿಗೆ ದಾನವಾಗಿ ಕೊಟ್ಟನು. ಮೂರು ಕುದುರೆಗಳಿಂದ ಎಳೆಯಲ್ಪಡುತ್ತಿದ್ದ ರಥವು ಮುಂದೆ ಸ್ವಲ್ಪದೂರ ಹೋಗುವುದರೊಳಗಾಗಿ ಮತ್ತೊಬ್ಬ ಬ್ರಾಹ್ಮಣನು ಬಂದನು. ಅವನೂ ಒಂದು ಕುದುರೆಯನ್ನೇ ದಾನವಾಗಿ ಕೇಳಿದನು. ರಾಜಧಾನಿಗೆ ಹಿಂದಿರುಗಿದನಂತರ

ಕೊಡುವೆನೆಂಬ ರಾಜನ ಉತ್ತರವು ಅವನಿಗೂ ಸಹ್ಯವಾಗಲಿಲ್ಲ. ರಥದ ಎಡ ಭಾಗದ ಕೊನೆಯಲ್ಲಿದ್ದ ಕುದುರೆಯನ್ನು ಬಿಚ್ಚಿ ಪ್ರತರ್ದನನು ಆ ಬ್ರಾಹ್ಮಣನಿಗೆ ದಾನವಾಗಿ ಕೊಟ್ಟುಬಿಟ್ಟನು.

ರಥದಲ್ಲಿ ಎರಡು ಕುದುರೆಗಳು ಮಾತ್ರವೇ ಉಳಿದುವು. ನಾವಿಬ್ಬರೂ ಇನ್ನೂ ಮುಂದೆ ಸ್ವಲ್ಪದೂರ ಪ್ರಯಾಣಮಾಡಿದೆವು. ಇನ್ನೊಬ್ಬ ಬ್ರಾಹ್ಮಣನು ರಥಕ್ಕೆದುರಾಗಿ ಬಂದು ರಾಜನನ್ನು ಆಶೀರ್ವದಿಸಿ ತಾನು ಯಾಚಿಸಲು ಬಂದಿರುವುದಾಗಿಯೂ ತನ್ನ ಇಷ್ಟಾರ್ಥವನ್ನು ಪೂರೈಸಬೇಕೆಂದೂ ಹೇಳಿ ದನು. ಪ್ರತರ್ದನನು ರಥವನ್ನು ನಿಲ್ಲಿಸಿ ಕೆಳಗಿಳಿದು ಬ್ರಾಹ್ಮಣನಿಗೆ ನಮಸ್ಕರಿಸಿ ಏನುಬೇಕೆಂದು ಕೇಳಲಾಗಿ, ಅವನು ಕೇಳಿದ್ದೂ ಒಂದು ಕುದುರೆಯನ್ನೇ. ಆ ಬ್ರಾಹ್ಮಣನಿಗೂ ಪ್ರತರ್ದನನು 'ನಗರಕ್ಕೆ ಹಿಂದಿರುಗಿದನಂತರ ಕೊಡುವೆನೆಂಬ' ಹಿಂದಿನ ಇಬ್ಬರಿಗೆ ಕೊಟ್ಟ ಉತ್ತರವನ್ನೇ ಕೊಟ್ಟನು. ಆದರೆ ಆ ಬ್ರಾಹ್ಮಣನೂ ಅದಕ್ಕೊಪ್ಪಲಿಲ್ಲ. ರಾಜನು ಉಳಿದಿದ್ದ ಎರಡು ಕುದುರೆಗಳಲ್ಲಿ ಒಂದನ್ನು ಬ್ರಾಹ್ಮಣನಿಗೆ ಕೊಟ್ಟು ಕಳುಹಿಸಬೇಕಾಯಿತು. ನಾನು ಆ ಘಟನೆಗಳೆಲ್ಲವನ್ನೂ ಔತ್ಸುಕ್ಯದಿಂದಲೇ ವೀಕ್ಷಿಸುತ್ತಾ ರಾಜನ ಮನಸ್ಸಿನ ಔದಾರ್ಯವನ್ನು ಬಹುಸೂಕ್ಷ್ಮರೀತಿಯಲ್ಲಿ ಗ್ರಹಿಸುತ್ತಿದ್ದೆನು. ಉಳಿದಿದ್ದ ಒಂದೇ ಕುದುರೆಯು ನಮ್ಮ ರಥವನ್ನು ಇನ್ನೂ ಸ್ವಲ್ಪದೂರ ಮುಂದೆ ಕೊಂಡೊಯ್ದಿತು. "ಜಯತು ಜಯತು ಮಹಾರಾಜಃ" ಎಂದು ಸ್ವಸ್ತಿವಾಚನ ಮಾಡುತ್ತಾ ನಾಲ್ಕನೆಯ ಬ್ರಾಹ್ಮಣನು ರಥಮ ಮುಂದೆ ಬಂದು ನಿಂತನು. ಅಡಿಗಡಿಗೆ ಯಾಚಕರು ಬರುತ್ತಿದ್ದರೂ ರಾಜನ ಮುಖವು ವಿವರ್ಣವಾಗಲಿಲ್ಲ. ರಥವನ್ನು ನಿಲ್ಲಿಸಿ ಕೆಳಗಿಳಿದು ಬ್ರಾಹ್ಮಣನಿಗೆ ನಮಸ್ಕರಿಸಿ ಪ್ರತರ್ದ ನನು ಪ್ರಶ್ನಿಸಿದನು. "ಬ್ರಾಹ್ಮಣೋತ್ತಮನೇ! ಏನನ್ನಪೇಕ್ಷಿಸಿ ನನ್ನಲ್ಲಿಗೆ ಬಂದಿರುವೆ?"

"ಮಹಾರಾಜ! ನನಗೆ ಒಂದು ಕುದುರೆಯು ಅತ್ಯವಶ್ಯವಾಗಿ ಬೇಕಾ ಗಿರುವುದು."

ಆ ಬ್ರಾಹ್ಮಣನೂ ಕುದುರೆಯನ್ನೇ ಕೇಳಿಬಿಡೋಣವೇ? ರಥಕ್ಕೆ ಕಟ್ಟಿ ದ್ದುದು ಒಂದೇ ಒಂದು ಕುದುರೆ. ರಾಜನ ಪ್ರತಿಕ್ರಿಯೆಯನ್ನು ನೋಡಬೇಕೆಂದು ನನ್ನ ಮನಸ್ಸು ತವಕಿಸುತ್ತಿದ್ದಿತು.

ಹಿಂದಿನ ಮೂವರು ಯಾಚಕರಿಗೆ ಉತ್ತರಿಸಿದಂತೆಯೇ ಆ ಬ್ರಾಹ್ಮಣ ನಿಗೂ ರಾಜನು ನಗರಕ್ಕೆ ಹಿಂದಿರುಗಿದನಂತರ ಕೊಡುವೆನೆಂದೇ ಉತ್ತರ ವನ್ನಿತ್ತನು.

ಆದರೆ ರಥವನ್ನೆಳೆಯುತ್ತಿರುವುದು ಒಂದೇ ಕುದುರೆಯೆಂಬುದನ್ನೂ ವಿವೇಚಿಸದೇ ಆ ಬ್ರಾಹ್ಮಣನು ತನಗೆ ಕುದುರೆಯು ಈಗಲೇ ಬೇಕಾಗಿದೆ ಯೆಂದೂ, ಕಾಲಮೀರಿ ದಾನಕೊಡುವುದು ನಿರರ್ಥಕವೆಂದೂ ಹೇಳಿದನು. ಒಡನೆಯೇ ರಾಜನು ಇದ್ದ ಒಂದು ಕುದುರೆಯನ್ನೂ ಬ್ರಾಹ್ಮಣನಿಗೆ ಕೊಟ್ಟು ಕುದುರೆಯ ಸ್ಥಾನದಲ್ಲಿ ತಾನೇ ನಿಂತು ರಥವನ್ನೆಳೆಯುತ್ತಾ ಹೇಳಿದನು : "ಈಗ ಯಾವನಾದರೂ ಬ್ರಾಹ್ಮಣನು ಬಂದರೆ ದಾನವಾಗಿಕೊಡಲು ನನ್ನಲ್ಲಿ ಏನೂ ಇಲ್ಲವಲ್ಲ! ಏನು ಮಾಡಲಿ?"

ಪ್ರತರ್ದನನು ತನ್ನಲ್ಲಿದ್ದ ನಾಲ್ಕು ಕುದುರೆಗಳನ್ನು ದಾನವಾಗಿ ಕೊಟ್ಟಿದ್ದು ನಿಶ್ಚಯ. ಆದರೆ ಅವನು ಪ್ರತಿಯೊಂದು ಬಾರಿ ದಾನಮಾಡು ವಾಗಲೂ, "ರಥಕ್ಕೆ ಕಟ್ಟಿರುವ ಕುದುರೆಗಳನ್ನು ಕೊಟ್ಟುಬಿಡಲೇ? ಮೂರೇ ಕುದುರೆಗಳಿವೆಯಲ್ಲಾ! ಕೊಡುವುದೆಂತು? ಎರಡು ಕುದುರೆಗಳು ಮಾತ್ರವೇ ಉಳಿದಿವೆ. ಮಾಡುವುದೇನು? ಇರುವ ಒಂದು ಕುದುರೆಯನ್ನೂ ಕೊಟ್ಟು ಬಿಟ್ಟರೆ ಹೇಗೆ?"–ಈ ವಿಧವಾಗಿ ತರ್ಕಿಸಿ ದಾನಮಾಡಿದನು. ದಾನಮಾಡು ವಾದ ಈ ವಿಧವಾದ ಜಿಜ್ಞಾಸೆಯು ಮನಸ್ಸಿನಲ್ಲಿಬಾರದು. ಆದುದರಿಂದಲೇ ನಿಮ್ಮ ಮೂವರಲ್ಲಿ ಪ್ರತರ್ದನನು ಮೊದಲು ಸ್ವರ್ಗದಿಂದ ಚ್ಯುತನಾಗುತ್ತಾನೆ.

ಎಲ್ಲರಿಗಿಂತಲೂ ಮೊದಲು ಅಷ್ಟಕನು ಸ್ವರ್ಗದಿಂದ ಚ್ಯುತನಾಗುವ ನೆಂದೂ–ಎರಡನೆಯವನು ಪ್ರತರ್ದನನೆಂದೂ ನಾರದರು ಹೇಳಿದರು. ಉಳಿ ದಿಬ್ಬರಲ್ಲಿ ಯಾರು ಮೊದಲು ಸ್ವರ್ಗದಿಂದ ಚ್ಯುತರಾಗುವರೆಂಬುವ ವಿಷಯ ವಾಗಿ ಜಿಜ್ಞಾಸೆಯುಂಟಾಯಿತು. ಆ ಇಬ್ಬರಲ್ಲಿ ಒಬ್ಬನು ನಾರದರನ್ನು ಕೇಳಿದನು:

"ಮಹರ್ಷಿಗಳೇ! ನಮ್ಮಿಬ್ಬರಲ್ಲಿ ಯಾರು ಮೊದಲು ಸ್ವರ್ಗದಿಂದ ಚ್ಯುತರಾಗುತ್ತೇವೆ?"

ನಾರದರಿಂದ ಒಡನೆಯೇ ಉತ್ತರ ಬಂದಿತು. 'ವಸುಮನಸ.'

'ಕಾರಣವೇನು?'

"ನಾನು ಹೀಗೆಯೇ ಪ್ರಪಂಚವೆಲ್ಲವನ್ನೂ ಸುತ್ತುತ್ತಿದ್ದಾಗ ಒಮ್ಮೆ ಈ ವಸುಮನಸನ ಮನೆಗೂ ಹೋಗಿದ್ದೆನು. ಆ ಸಮಯಕ್ಕೆ ಸರಿಯಾಗಿ ದೇವತೆಗಳಿಂದ ಕೊಡಲ್ಪಟ್ಟಿದ್ದ ಪುಷ್ಪರಥಕ್ಕೆ ಬ್ರಾಹ್ಮಣರು ಸ್ವಸ್ತಿವಾಚನವನ್ನು ಮಾಡುತ್ತಿದ್ದರು. ನಾನು ರಾಜನ ಸಮೀಪಕ್ಕೆ ಹೋದೆನು. ಆ ವೇಳೆಗೆ ಸ್ವಸ್ತಿವಾಚನವೂ ಮುಗಿಯಿತು. ಒಡನೆಯೇ ಆ ದಿವ್ಯರಥವು ಎಲ್ಲರಿಗೂ ಕಾಣಿಸಿತು. (ಅನೇಕಾನೇಕ ಮಹಾಯಜ್ಞಗಳನ್ನು ಮಾಡಿ ದೇವತೆಗಳನ್ನು ಆರಾಧಿಸುತ್ತಿದ್ದ ವಸುಮನಸನಿಗೆ ಅವನು ಮಾಡಿದ ಯಜ್ಞದಿಂದ ಸುಪ್ರೀತರಾಗಿದ್ದ ದೇವತೆಗಳು ಆ ಪುಷ್ಪರಥವನ್ನು ಅನುಗ್ರಹಿಸಿದ್ದರು.) ಅದರ ಸೌಂದರ್ಯವು ಅನುಪಮವಾಗಿದ್ದಿತು. ಅಂತೆಯೇ ನಾನು ಆ ರಥವನ್ನು ಮನಸಾರ ಹೊಗಳಿದೆನು. ನಾನು ಮಾಡಿದ ಪುಷ್ಪರಥದ ಸ್ತೋತ್ರವನ್ನು ಕೇಳಿ ವಸ್ಪಮನಸನು ನನ್ನೊಡನೆ ಹೇಳಿದನು : "ಮಹರ್ಷಿಗಳೇ! ನೀವು ಈ ಪುಷುರಥದ ಸೌಂದರ್ಯವನ್ನು ನೋಡಿ ಅದನ್ನು ಹೊಗಳಿದಿರಲ್ಲವೇ? ನಿಮ್ಮ ಹೊಗಳಿಕೆಗೆ ಪಾತ್ರವಾಗಿರುವ ಈ ರಥವು ಉತ್ತಮೋತ್ತಮವಾದುದೆಂಬುದರಲ್ಲಿ ಸಂಶಯವೇ ಇಲ್ಲ. ಅದೂ ಅಲ್ಲದೇ ಇಂತಹ ಉತ್ತಮವಾದ ವಸ್ತುವು ಮಹಾಜ್ಞಾನಿಗಳಾದ ತಮಗೇ ಸೇರುವುದು ಉಚಿತವಾಗಿದೆ. ಆದುದರಿಂದ ಈ ರಥವು ನಿಮ್ಮದೇ ಆಗಲಿ. ನಾನಿದನ್ನು ನಿಮಗೆ ಅರ್ಪಿಸಿದ್ದೇನೆ."

ಇದಾದ ಕೆಲವು ದಿನಗಳನಂತರ ಪುನಃ ಅವನಲ್ಲಿಗೆ ಹೋದೆನು. ಆ ಸಮಯಕ್ಕೆ ಸರಿಯಾಗಿ ಮತ್ತೊಂದು ಪುಷ್ಪರಥವನ್ನು ದೇವತೆಗಳು ಅನುಗ್ರಹಿಸಿದ್ದರು. ಅದರ ಸೌಂದರ್ಯವನ್ನು ನೋಡಿ ಭ್ರಾಂತನಾದ ನಾನು ಆ ರಥವನ್ನೂ ಸ್ತೋತ್ರಮಾಡಿದೆನು. ವಸುಮನಸನು ಈ ರಥವನ್ನೂ ನನಗೇ ಕೊಟ್ಟುಬಿಟ್ಟನು.

ಮೂರನೆಯ ಬಾರಿ ಈ ರಾಜನ ಬಳಿಗೆ ಹೋಗುವ ಸಂದರ್ಭವೂ ಒದಗಿತು. ಕಾಕತಾಳನ್ಯಾಯದಂತೆ ಆ ಬಾರಿಯೂ ಬ್ರಾಹ್ಮಣರು ನೂತನವಾದ ಪುಷ್ಪರಥಕ್ಕೆ ಸ್ವಸ್ತಿವಾಚನಮಾಡುತ್ತಿದ್ದರು. ಸ್ವಸ್ತಿವಾಚನವು ಮುಗಿದನಂತರ ಅಲ್ಲಿದ್ದವರೆಲ್ಲರ ದೃಷ್ಟಿಗೂ ಆ ದಿವ್ಯರಥವು ಕಾಣಿಸಿಕೊಂಡಿತು. ಆ ರಥದ ಅನುಪಮವಾದ ಸೌಂದರ್ಯವನ್ನು ನೋಡಿದೊಡನೆಯೇ ಮುಗ್ಧನಾಗಿ ಹೋದ ನಾನು ಅದನ್ನೂ ಸ್ತೋತ್ರಮಾಡಿದೆನು. ನಾನು ಸ್ತೋತ್ರ

ಮಾಡಿ ಮುಗಿಸಿದ ನಂತರ ವಸುಮನಸನು "ಮಹರ್ಷಿಗಳೇ! ನಿಮ್ಮಿಂದ ಈ ಪುಷ್ಪರಥಕ್ಕೆ ಸ್ವಸ್ತಿವಾಚನವು ಬಹಳ ಚೆನ್ನಾಗಿ ಮಾಡಲ್ಪಟ್ಟಿತು" ಎಂದು ಮಾತ್ರವೇ ಹೇಳಿ ಸುಮ್ಮನಾದನು. ಆ ಸಮಯದಲ್ಲಿ ಇವನಿಗೆ ಆ ರಥವನ್ನು ದಾನಕೊಡುವ ಮನಸ್ಸು ಬರಲಿಲ್ಲ. ಈ ಕಾರಣದಿಂದ ಶಿಬಿಗಿಂತಲೂ ವಸು ಮನಸನು ಮೊದಲು ಸ್ವರ್ಗದಿಂದ ಚ್ಯುತನಾಗುತ್ತಾನೆ."

ನಾಲ್ವರಲ್ಲಿ ಒಬ್ಬನು ಪುನಃ ನಾರದರನ್ನು ಕೇಳಿದನು : "ನಾರದರೇ! ಒಂದುವೇಳೆ ನೀವೂ ಮತ್ತು ಶಿಬಿಯೂ ಸ್ವರ್ಗಕ್ಕೆ ಹೋದರೆ ನಿಮ್ಮಿಬ್ಬರಲ್ಲಿ ಯಾರು ಮೊದಲು ಸ್ವರ್ಗದಿಂದ ಚ್ಯುತರಾಗುತ್ತಾರೆ?"

ನಾರದರು ಒಡನೆಯೇ ಹೇಳಿದರು : "ನಾನೇ ಮೊದಲು ಕೆಳಗೆ ಬೀಳು ತ್ತೇನೆ. ಶಿಬಿಯು ಮಾತ್ರ ಅಲ್ಲಿಯೇ ಇರುತ್ತಾನೆ."

ನಾಲ್ವರಲ್ಲೊಬ್ಬನು ಪುನಃ ನಾರದರನ್ನು ಪ್ರಶ್ನಿಸಿದನು. "ಶಿಬಿಯು ನಮ್ಮೆಲ್ಲರಿಗಿಂತಲೂ ಹೆಚ್ಚು ಕಾಲ ಸ್ವರ್ಗದಲ್ಲಿರುವ ಸಾಮರ್ಥ್ಯವನ್ನು ಹೇಗೆ ಪಡೆದನು? ಯಾವ ಧರ್ಮಕಾರ್ಯದಿಂದಾಗಿ ಇವನಿಗೆ ಈ ಮಹಾಫಲವು ಲಭ್ಯವಾಗಿರುವುದು? ದಯಮಾಡಿ ಹೇಳಿರಿ."

"ನಿಶ್ಚಯವಾಗಿಯೂ ನಾನು ಶಿಬಿಗೆ ಸಮಾನನಲ್ಲ. ಇದಕ್ಕೆ ಕಾರಣ ವನ್ನು ತಿಳಿಸುವೆನು, ಸಾವಧಾನವಾಗಿ ಕೇಳಿರಿ. ಒಂದಾನೊಂದು ದಿನ ಬ್ರಾಹ್ಮಣನೊಬ್ಬನು ಶಿಬಿಯ ಸಮೀಪಕ್ಕೆ ಬಂದು ಸ್ವಸ್ತಿವಾಚನಮಾಡಿ ಇವನನ್ನು ಕುರಿತು ಹೇಳಿದನು : "ಶಿಬಿರಾಜ! ನಾನು ಆಹಾರಾರ್ಥವಾಗಿ ನಿನ್ನಲ್ಲಿಗೆ ಬಂದಿರುವೆನು." ಅದಕ್ಕುತ್ತರವಾಗಿ ಶಿಬಿಯು ಹೇಳಿದನು :

"ಬ್ರಾಹ್ಮಣೋತ್ತಮ! ನಾನು ನಿನಗೇನು ಸೇವೆಮಾಡಲಿ? ಕೂಡಲೇ ಆಜ್ಞೆ ಮಾಡುವವನಾಗು."

"ನಿನಗೆ ಬೃಹದ್ಗರ್ಭನೆಂಬ ಒಬ್ಬ ಮಗನಿರುವನಲ್ಲವೇ? ಅವನನ್ನು ಕೊಂದು ಅವನ ಮಾಂಸದಿಂದ ನನಗೆ ಆಹಾರವನ್ನು ಸಿದ್ಧಪಡಿಸು"–ಎಂದು ಹೇಳಿ ಬ್ರಾಹ್ಮಣನು ಹೊರಟುಹೋದನು.

ಆ ಸಮಯದಲ್ಲಿ ನಾನು ಶಿಬಿಯ ಬಳಿಯಲ್ಲಿಯೇ ಇದ್ದೆನು. ಬ್ರಾಹ್ಮ

ಣನ ಮಾತು ಕೇಳಿ ನಾನು ಭ್ರಾಂತನಾದೆನು. ಶಿಬಿಯು ಏನು ಹೇಳುವನು ಮತ್ತು ಏನು ಮಾಡುವನು?–ಎಂಬುದನ್ನು ಬಹಳ ಉತ್ಸುಕತೆಯಿಂದ ನಿರೀಕ್ಷಿಸುತ್ತಿದ್ದೆನು.

ಮಗನನ್ನು ಕೊಂದು ತನಗೆ ಆಹಾರವನ್ನು ಸಿದ್ಧಪಡಿಸುವಂತೆ ಬ್ರಾಹ್ಮಣನು ಆಜ್ಞಾಪಿಸಿದುದಕ್ಕಾಗಿ ಶಿಬಿಯ ಮುಖದಲ್ಲಿ ಸ್ವಲ್ಪವಾದರೂ ಅಸಮಾಧಾನದ ಚಿಹ್ನೆಯೂ ಕಾಣಲಿಲ್ಲ. ಬಂದ ಅತಿಥಿಯನ್ನು ಸತ್ಕರಿಸಬೇಕೆಂಬ ನಿಶ್ಚಲಧ್ಯೇಯವೊಂದೇ ಇವನ ಮನಸ್ಸಿನಲ್ಲಿದ್ದಿತು. ಬ್ರಾಹ್ಮಣನು ಹೇಳಿದಂತೆ ತನ್ನ ಮಗನನ್ನು ಕೊಂದು ಅವನ ಮಾಂಸವನ್ನು ಬೇಯಿಸಿ ಘಮ-ಘಮಿಸುವ ಆಹಾರವನ್ನು ಸಿದ್ಧಮಾಡಿಕೊಂಡು ಅದನ್ನು ಒಂದು ಪಾತ್ರೆಯಲ್ಲಿಟ್ಟು ತಲೆಯ ಮೇಲೆ ಹೊತ್ತುಕೊಂಡು ಬ್ರಾಹ್ಮಣನನ್ನು ಹುಡುಕುವ ಸಲುವಾಗಿ ಅರಮನೆಯಿಂದ ಹೊರಟನು. ಇವನು ಬ್ರಾಹ್ಮಣನಿಗಾಗಿ ಆಹಾರವನ್ನು ತಲೆಯ ಮೇಲೆ ಹೊತ್ತುಕೊಂಡು ಹೋಗುತ್ತಿದ್ದಾಗ ಇವನಿಗೆದುರಾಗಿ ಸಿಕ್ಕಿದವನೊಬ್ಬನು ರಾಜನನ್ನು ಕುರಿತು ಗಾಬರಿಯಿಂದ ಹೇಳಿದನು :

"ಮಹಾರಾಜ! ನೀನು ಹುಡುಕುತ್ತಿರುವ ಬ್ರಾಹ್ಮಣನು ಪಟ್ಟಣದ ಒಳಹೊಕ್ಕು ನಿನ್ನ ಅರಮನೆಗೆ ಬೆಂಕಿಯನ್ನಿಡುತ್ತಿದ್ದಾನೆ. ಅವನು ಬಹಳ ಕುಪಿತನಾಗಿದ್ದಂತೆ ಕಾಣುತ್ತಿದ್ದನು. ನಿನ್ನ ಅರಮನೆಗೆ ಬೆಂಕಿಯಿಟ್ಟದ್ದು ಮಾತ್ರವಲ್ಲದೇ ಬೊಕ್ಕಸಕ್ಕೂ, ಮದ್ದುಗುಂಡಿನ ಕೋಠಿಗೂ, ನಿನ್ನ ಪತ್ನಿಯರಿರುವ ಅಂತಃಪುರಕ್ಕೂ, ಕುದುರೆಲಾಯ-ಆನೆಲಾಯಗಳಿಗೂ ಬೆಂಕಿಯಿಟ್ಟನು."

ಅಷ್ಟೊಂದು ರಾದ್ಧಾಂತದ ವಾರ್ತೆಯನ್ನು ಕೇಳಿದರೂ ಶಿಬಿಯ ಮುಖದಲ್ಲಿ ಕಳವಳದ  ಕುರುಹೂ ಕಾಣಲಿಲ್ಲ. ಪುನಃ ನಗರಕ್ಕೆ ಹೋಗಿ ಅರಮನೆಯನ್ನು ಹೊಕ್ಕು ಅಲ್ಲಿಯೇ ಇದ್ದ ಬ್ರಾಹ್ಮಣನನ್ನು ಕಂಡು ವಿನೀತನಾಗಿಯೇ ಹೇಳಿದನು : "ಪೂಜ್ಯನೇ! ನಿನ್ನ ಆಜ್ಞಾನುಸಾರವಾಗಿ ಭೋಜನವನ್ನು ಸಿದ್ಧಗೊಳಿಸಲಾಗಿದೆ. ಸ್ವೀಕರಿಸು." ಶಿಬಿಯ ಮಾತನ್ನು ಕೇಳಿ ಬ್ರಾಹ್ಮಣನು ಮಾತನಾಡಲೇ ಇಲ್ಲ. ಮೌನದಿಂದಲೇ ಕುಳಿತಿದ್ದನು.

ಅಷ್ಟು ದಾರುಣವಾದ ಮಾರ್ತೆಗಳನ್ನು ಕೇಳಿಯೂ ರಾಜನ ಮುಖವು ಸ್ವಲ್ಪವಾದರೂ ವಿಕಾರಹೊಂದದಿರುವುದನ್ನು ನೋಡಿ ಬ್ರಾಹ್ಮಣನಿಗೆ ಪರಮಾಶ್ಚರ್ಯವಾಯಿತು. ರಾಜನನ್ನು ಇನ್ನೂ ಪರೀಕ್ಷಿಸುವುದು ಹೇಗೆಂಬುದನ್ನು ಯೋಚಿಸುತ್ತಾ ನೆಲದ ಮೇಲೆಯೇ ಕ್ಷಣಕಾಲ ನೆಟ್ಟದೃಷ್ಟಿಯುಳ್ಳವನಾಗಿ ಕುಳಿತಿದ್ದನು.

ಶಿಬಿಗೆ ಬ್ರಾಹ್ಮಣನನ್ನು ಸತ್ಕರಿಸುವುದರಲ್ಲಿಯೇ ಪರಮಾಸಕ್ತಿಯಿದ್ದಿತು. ಅದೇ ತನ್ನ ಪರಮೋತ್ಕೃಷ್ಟಧರ್ಮವೆಂದೂ ದೃಢವಾಗಿ ನಂಬಿದ್ದನು. ಬ್ರಾಹ್ಮಣನನ್ನು ಸಂತೈಸುವ ಸಲುವಾಗಿ ಪುನಃ ದೈನ್ಯಭಾವದಿಂದ ಅವನೊಡನೆ ಶಿಬಿಯು ಹೇಳಿದನು :

"ಭಗವನ್! ಭೋಜನವನ್ನು ಮಾಡಬಹುದಲ್ಲವೇ?" ಬ್ರಾಹ್ಮಣನು ಶಿಬಿಯ ಮುಖವನ್ನು ದುರ-ದುರನೆ ಕ್ಷಣಕಾಲ ನೋಡಿ–'ನೀನೇ ಊಟ ಮಾಡು'–ಎಂದು ಆಜ್ಞಾಪಿಸಿದನು. ತನ್ನ ಮಗನನ್ನು ಕೊಂದು ಸಿದ್ಧಪಡಿಸಿದ್ದ ಆಹಾರವನ್ನು ತಾನೇ ತಿನ್ನಬೇಕು. ಈ ವಿಷಯವು ಕೇಳುವವರಿಗೇ ಹೃದಯ ವಿದಾರಕವಾಗಿದ್ದರೂ–ಶಿಬಿಯು ಬ್ರಾಹ್ಮಣನ ಆ ಮಾತಿನಿಂದಿಲೂ ಖತಿಗೊಳ್ಳಲಿಲ್ಲ. ಬ್ರಾಹ್ಮಣನು ಹೇಳಿದುದೆಲ್ಲವೂ ಭಗವದಾಜ್ಞೆಯೆಂದೇ ಭಾವಿಸಿ ಸುಮನಸ್ಕನಾಗಿಯೇ 'ಹಾಗೆಯೇ ಆಗಲೆಂದು' ಬ್ರಾಹ್ಮಣನಿಗೆ ಉತ್ತರವಿತ್ತು, ತನ್ನ ತಲೆಯ ಮೇಲಿದ್ದ ಪಾತ್ರೆಯನ್ನು ಕೆಳಗಿಳಿಸಿ, ಬ್ರಾಹ್ಮಣನ ಆಜ್ಞಾನುಸಾರವಾಗಿ ಭೋಜನಮಾಡಲು ಸಿದ್ಧನಾದನು. ಬ್ರಾಹ್ಮಣನಿಗೆ ಅದನ್ನು ನೋಡಿ ಸಹಿಸಲಾಗಲಿಲ್ಲ. ಮೇಲೆದ್ದು ಹೋಗಿ ಶಿಬಿಯ ಕೈಹಿಡಿದು ಹೇಳಿದನು : "ಶಿಬಿರಾಜ! ನೀನು ಕೋಪವನ್ನು ಸಂಪೂರ್ಣವಾಗಿ ಜಯಿಸಿ ಬಿಟ್ಟಿರುವೆ. ಬ್ರಾಹ್ಮಣನಿಗೆ ಕೊಡಕೂಡದೆಂದಿರುವ ವಸ್ತುವೇ ನಿನ್ನಲ್ಲಿಲ್ಲ. ತನು-ಮನ-ಧನ-ಪುತ್ರ-ಮಿತ್ರ-ಕಳತ್ರರೇ ಆದಿಯಾಗಿ ಸರ್ವಸ್ವವನ್ನೂ ನೀನು ಬ್ರಾಹ್ಮಣರಿಗೆ ದಾನಮಾಡಲು ಸಿದ್ಧನಾಗಿರುವೆ"–ಎಂದು ಹೇಳುತ್ತಾ ರಾಜನನ್ನು ಪುರಸ್ಕರಿಸಿದನು. ಬ್ರಾಹ್ಮಣನು ಸಂತುಷ್ಟನಾದುದಕ್ಕಾಗಿ ಸಂತಸ ಗೊಂಡ ಶಿಬಿಯು ತಲೆಯೆತ್ತಿ ನೋಡಲಾಗಿ, ತಾನು ಸಂಹರಿಸಿದ್ದ ಮಗನು ಜೀವಂತನಾಗಿ ದೇವತೆಯೋಪಾದಿಯಲ್ಲಿ ದಿವ್ಯಾಭರಣಗಳನ್ನು ಧರಿಸಿ ತನ್ನ

ಶರೀರದಿಂದ ಸುಗಂಧವನ್ನು ಹೊರಸೂಸುತ್ತಾ ಮುಗುಳ್ನಗೆಯೊಡನೆ ಅಲ್ಲಿಯೇ ನಿಂತಿರುವುದನ್ನು ಕಂಡನು. ತಂದೆ-ಮಕ್ಕಳಿಬ್ಬರನ್ನೂ ಆಶೀರ್ವದಿಸಿ ಬ್ರಾಹ್ಮಣನು ಅದೃಶ್ಯನಾದನು.

ರಾಜಕುಮಾರರೇ! ವಿಧಾತೃವೇ ಬ್ರಾಹ್ಮಣನ ರೂಪವನ್ನು ಧರಿಸಿ ಶಿಬಿಯನ್ನು ಪರೀಕ್ಷಿಸುವ ಸಲುವಾಗಿ ಬಂದಿದ್ದನು. ಬ್ರಾಹ್ಮಣವೇಷದಲ್ಲಿದ್ದ ವಿಧಾತೃವು ಅಂತರ್ಧಾನನಾದನಂತರ ಶಿಬಿಯ ಸಚಿವರು ಶಿಬಿಯನ್ನು ಕೇಳಿದರು : "ಮಹಾರಾಜ! ನೀನು ಎಲ್ಲ ವಿಷಯಗಳನ್ನೂ ತಿಳಿದವನಾಗಿರುವೆ. ಯಾವ ಅಪೇಕ್ಷೆಯಿಂದ ನೀನು ಹೀಗೆ ಮಾಡಿದೆ? ದಯಮಾಡಿ ಹೇಳು. ನಾವೂ ಸಹ ಇದರ ರಹಸ್ಯವನ್ನು ತಿಳಿಯಬೇಕೆಂಬ ಆಶಯದಿಂದಿರುತ್ತೇವೆ."

ಶಿಬಿಯು ಉತ್ತರಿಸಿದನು :

**ನೈವಾಹಮೇತದ್ಯಶಸೇ ದದಾನಿ**
**ನ ಚಾರ್ಥಹೇತೋರ್ನ ಚ ಭೋಗತೃಷ್ಣಯಾ ।**
**ಪಾಪೈರನಾಸೇವಿತ ಏಷ ಮಾರ್ಗ**
**ಇತ್ಯೇವಮೇತತ್ಸಕಲಂ ಕರೋಮಿ ॥೨೬॥**

**ಸದ್ಭಿಃ ಸದಾಧ್ಯಾಸಿತಂ ತು ಪ್ರಶಸ್ತಂ**
**ತಸ್ಮಾ ತ್ಪ್ರಶಸ್ತಂ ಶ್ರಯತೇ ಮತಿರ್ಮೇ ॥೨೭॥**

"ಸಚಿವೋತ್ತಮರೇ! ಯಶಸ್ಸನ್ನು ಗಳಿಸಲು ನಾನು ದಾನಕೊಡುವುದಿಲ್ಲ. ಧನಲಾಭಕ್ಕಾಗಲೀ, ಭೋಗದ ತೃಷ್ಣೆಯಿಂದಾಗಲೀ ನಾನೀ ಮಾರ್ಗವನ್ನು ಅವಲಂಬಿಸಿರುವುದಿಲ್ಲ. ಪಾಪಾತ್ಮರುಗಳಿಗೆ ಈ ಮಾರ್ಗಾನು ಸರಣೆಯು ದುಸ್ಸಾಧ್ಯವಾದುದೆಂಬುದನ್ನು ಮನಗಂಡೇ ನಾನೀ ಮಾರ್ಗವನ್ನು ಅನುಸರಿಸಲು ಇಚ್ಛೆಪಡುತ್ತೇನೆ. ಸತ್ಪುರುಷರಿಂದ ಅನುಸರಿಸಲ್ಪಟ್ಟಿರುವ ಈ ಮಾರ್ಗವು ಬಹುಪ್ರಶಸ್ತವಾದುದು. ನನ್ನ ಮನಸ್ಸು ಯಾವಾಗಲೂ ಸತ್ಪುರುಷರು ಅನುಸರಿಸಿರುವ ಮಾರ್ಗವನ್ನೇ ಅನುಸರಿಸಿಹೋಗಲು ತವಕಪಡುತ್ತದೆ."

ರಾಜಕುಮಾರರೇ! ಶಿಬಿಯು ಅಂದು ಅಮಾತ್ಯರಿಗೆ ಹೇಳಿದ ಆ ಮಾತು ಇಂದೂ ನನ್ನ ಕಿವಿಯಲ್ಲಿ ಮೊಳಗುತ್ತಿದೆ. ಅಂದು ನಾನು ಕಂಡ

ಆ ಅದ್ಭುತದೃಶ್ಯವು ಈಗಲೂ ನನ್ನ ಮನಸ್ಸಿನ ತೆರೆಯ ಮೇಲೆ ಸುಳಿದಾಡುತ್ತಿದೆ. ಶಿಬಿಯ ಇಂತಹ ಒಂದು ಸೌಭಾಗ್ಯವನ್ನು ನಾನು ಪ್ರತ್ಯಕ್ಷವಾಗಿಯೇ ಕಂಡೆನಾದ್ದರಿಂದ ನಿಮ್ಮ ಮುಂದೆ ವಿವರಿಸಿ ಹೇಳಿರುವೆನು."

೧೯೮ನೆಯ ಅಧ್ಯಾಯವು ಮುಗಿಯಿತು.

೧೯೯ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ರಾಜಾ ಇಂದ್ರದ್ಯುಮ್ನ ಮತ್ತು ಚಿರಂಜೀವಿಗಳ ಕಥೆ

ಜನಮೇಜಯ! ಪಾಂಡವರೂ ಮತ್ತು ಋಷಿ-ಮಹರ್ಷಿಗಳೂ ಮಾರ್ಕಂಡೇಯರನ್ನು ಪುನಃ ಪ್ರಶ್ನಿಸಿದರು : "ಮಹರ್ಷಿಗಳೇ! ನಿಮಗಿಂತಲೂ ದೀರ್ಘಾಯುಷ್ಮಂತರಾದವರು ಮತ್ತಾರಾದರೂ ಇರುವರೇ?"

"ನಿಸ್ಸಂಶಯವಾಗಿಯೂ ಇದ್ದಾರೆ. ರಾಜರ್ಷಿಯಾದ ಇಂದ್ರದ್ಯುಮ್ನನು ನನಗಿಂತಲೂ ಹಿರಿಯನು. ಅವನು ಮಾಡಿದ ಸತ್ಕರ್ಮಗಳ ಫಲವು ಮುಗಿದು ಹೋಗಲಾಗಿ ಅವನು ಸ್ವರ್ಗದಿಂದ ಬೀಳುತ್ತಿದ್ದಾಗ 'ಅಯ್ಯೋ! ನನ್ನ ಕೀರ್ತಿಯು ಲುಪ್ತವಾಗಿ ಹೋಯಿತೇ?' ಎಂದು ಕಿರುಚಿ ಕೊಳ್ಳುತ್ತಾ ಕೆಳಕೆ ಬಿದ್ದನು. ಅವನೊಮ್ಮೆ ನನ್ನ ಬಳಿಗೆ ಬಂದು ನನ್ನನ್ನು ಪ್ರಶ್ನಿಸಿದನು :

"ಮಹರ್ಷಿಯೇ! ನಾನಾರೆಂಬುದು ನಿಮಗೆ ತಿಳಿದಿರುವುದೇ?"

"ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿ ಪುಣ್ಯಭಾಗಿಗಳಾಗಬೇಕೆಂದು ಇಚ್ಛೆಯುಳ್ಳ ನಮ್ಮಂತಹವರು ಸಾಮಾನ್ಯವಾಗಿ ಒಂದೆಡೆಯಲ್ಲಿಯೇ ಸ್ಥಿರವಾಗಿರಲಾರರು. ಒಂದು ಹಳ್ಳಿಯಲ್ಲಾಗಲೀ, ಒಂದು ನಗರದಲ್ಲಾಗಲೀ ನಾವು ಒಂದು ರಾತ್ರಿಯು ಮಾತ್ರವೇ ತಂಗುವೆವು. ಇದರಿಂದಾಗಿ ಪ್ರಾಪಂಚಿಕ ವ್ಯವಹಾರಗಳ ವಾಸನೆಯೇ ಇಲ್ಲದ ನಮ್ಮಂತಹವರಿಗೆ ನಿನ್ನ ವಿಷಯಗಳು ತಿಳಿಯುವುದು ಕಷ್ಟವೇ ಸರಿ. ಸಾಮಾನ್ಯವಾಗಿ ರಾಜಕೀಯದ ವಿಷಯಗಳು ನಮಗೆ ತಿಳಿಯುವುದಿಲ್ಲ. ಸತತವಾದ ವ್ರತೋಪವಾಸಾದಿಗಳಿಂದ ನಮ್ಮ ಶರೀರವು ಕೃಶವಾಗಿರುವುದರಿಂದ ಪ್ರಾಪಂಚಿಕ ವ್ಯವಹಾರಕ್ಕೆ ಸ್ವಪ್ರಯತ್ನದಿಂದಾಗಲೀ, ಸ್ವೇಚ್ಛೆಯಿಂದಾಗಲೀ ನಾವು ಪ್ರವೇಶಿಸಲಾರೆವು. ಆದು

ದರಿಂದ ನಮ್ಮಂತಹವರು ದೀರ್ಘಾಯುಷ್ಮಂತರಾಗಿದ್ದರೂ ಭೂಲೋಕದಲ್ಲಿದ್ದಾಗ ನೀನು ಮಾಡಿದ ಕರ್ಮಗಳೇನೆಂಬುದನ್ನು ತಿಳಿದಿರಲಾರರು."

"ಮಹರ್ಷೇ! ಹಾಗಾದರೆ, ನಿಮಗೆ ತಿಳಿದಂತೆ ನಿಮಗಿಂತಲೂ ದೀರ್ಘಾಯುಷ್ಮಂತರಾದವರು ಮತ್ತಾರಾದರೂ ಇರುವರೇ?"

"ನನಗಿಂತಲೂ ದೀರ್ಘಾಯುಷ್ಮಂತರೇನೋ ಇದ್ದಾರೆ. ಹಿಮವತ್ಪರ್ವತದ ತಪ್ಪಲಿನಲ್ಲಿ ಪ್ರಾವಾರಕರ್ಣ–ಎಂಬ ಹೆಸರಿನ ಗೂಬೆಯು ನನಗಿಂತಲೂ ವಯಸ್ಸಿನಲ್ಲಿ ದೊಡ್ಡದು. ಅದು ನಿನ್ನನ್ನು ನೋಡಿದ್ದೀತು ; ಮತ್ತು ನಿನ್ನ ವಿಷಯವನ್ನು ತಿಳಿದಿರಲೂಬಹುದು. ಆದರೆ ಅದು ವಾಸಿಸುತ್ತಿರುವ ಸ್ಥಳವು ಇಲ್ಲಿಂದ ಬಹಳದೂರವಿದೆ." ನಾನು ಹೀಗೆಂದು ಹೇಳಿದೊಡನೆಯೇ ಇಂದ್ರದ್ಯುಮ್ನನು ಕುದುರೆಯ ಆಕಾರವನ್ನು ಧರಿಸಿ ನನ್ನನ್ನು ಹೊತ್ತುಕೊಂಡು ಪ್ರಾವಾರಕರ್ಣನಿದ್ದೆಡೆಗೆ ಕರೆದುಕೊಂಡು ಹೋದನು. ಅಲ್ಲಿದ್ದ ಪ್ರಾವಾರಕರ್ಣನನ್ನು ಇಂದ್ರದ್ಯುಮ್ನನು ಪ್ರಶ್ನಿಸಿದನು. "ನೀನು ನನ್ನನ್ನು ನೋಡಿರುವೆಯಾ? ಅಥವಾ ನನ್ನ ವಿಷಯಗಳೇನಾದರೂ ನಿನಗೆ ತಿಳಿದಿರುವುದೇ?"

ಗೂಬೆಯು ಕ್ಷಣಕಾಲ ಯೋಚಿಸಿ ರಾಜನಿಗೆ ಹೇಳಿತು :

"ಇಲ್ಲ, ನನಗೆ ನಿನ್ನ ವಿಷಯವು ತಿಳಿಯದು ; ಮತ್ತು ನಾನು ನಿನ್ನನ್ನು ನೋಡಿಯೂ ಇಲ್ಲ."

ರಾಜನು ಪ್ರಶ್ನಿಸಿದನು :

"ಹಾಗಾದರೆ ನಿನಗಿಂತಲೂ ಹಿರಿಯರು ನಿನಗೆ ತಿಳಿದಿರುವಂತೆ ಈ ಲೋಕದಲ್ಲಿ ಮತ್ತಾರಾದರೂ ಇದ್ದಾರೆಯೇ?"

"ಇಲ್ಲಿಗೆ ಸ್ವಲ್ಪದೂರದಲ್ಲಿ ಇಂದ್ರದ್ಯುಮ್ನವೆಂಬ ಸರೋವರದಲ್ಲಿ ನಾಡೀಜಂಘವೆಂಬ ಒಂದು ಬಕವಿದೆ. ಅದು ನನಗಿಂತಲೂ ಹೆಚ್ಚು ವಯಸ್ಸಿನದು. ಅದಕ್ಕೆ ನಿನ್ನ ವಿಷಯವು ತಿಳಿದಿರಬಹುದು."

ಒಡನೆಯೇ ಇಂದ್ರದ್ಯುಮ್ನನು ಪುನಃ ಅಶ್ವರೂಪವನ್ನು ಧರಿಸಿ ನನ್ನನ್ನೂ–ಗೂಬೆಯನ್ನೂ ತನ್ನ ಮೇಲೆ ಕುಳ್ಳಿರಿಸಿಕೊಂಡು ನಾಡೀಜಂಘವಿದ್ದ ಇಂದ್ರದ್ಯುಮ್ನ ಸರೋವರಕ್ಕೆ ಕರೆದೊಯ್ದನು. ನಾವಿಬ್ಬರೂ ಆ ಬಕವನ್ನು

ಕೇಳಿದೆವು : "ನಾಡಿಜಂಘನೇ! ಈ ಇಂದ್ರದ್ಯುಮ್ನನಾರೆಂಬುದು ನಿನಗೆ ಗೊತ್ತಿದೆಯೇ? ಇವನನ್ನು ನೀನು ನೋಡಿರುವೆಯಾ? ಅಥವಾ ಇವನ ವಿಷಯವನ್ನಾದರೂ ಕೇಳಿರುವೆಯಾ?"

ಬಕವು ಕ್ಷಣಕಾಲ ಯೋಚಿಸಿ ಹೇಳಿತು : "ಇಲ್ಲ, ನನಗಿವನ ಪರಿಚಯ ವಿಲ್ಲ. ಇವನ ಸಮಾಚಾರವೇನೆಂಬುದನ್ನೂ ನಾನರಿಯೆ."

"ಹೋಗಲಿ. ನಿನಗಿಂತಲೂ ವಯಸ್ಸಾದವರು ನಿನಗೆ ತಿಳಿದಿರುವಂತೆ ಮತ್ತಾರಾದರೂ ಇದ್ದಾರೆಯೇ?" ನಾನು ಬಕವನ್ನು ಪ್ರಶ್ನಿಸಿದೆನು :

"ಇದ್ದಾರೆ; ನನಗಿಂತಲೂ ವಯಸ್ಸಾದ 'ಅಕೂಪಾರ' ಎಂಬ ಆಮೆ ಯೊಂದು ಈ ಸರೋವರದಲ್ಲಿಯೇ ವಾಸಿಸುತ್ತಿದೆ. ಅದಕ್ಕೆ ಈ ರಾಜನ ವಿಷಯವು ತಿಳಿದಿದ್ದರೂ ತಿಳಿದಿರಬಹುದು. ಆದುದರಿಂದ ನೀವು ಅಕೂಪಾರ ನನ್ನೇ ಪ್ರಶ್ನಿಸಿರಿ."

ನಮ್ಮ ಪ್ರಾರ್ಥನೆಯಂತೆ ಬಕವು ಸರೋವರದ ತಳಭಾಗದಲ್ಲಿದ್ದ ಆಮೆಯನ್ನು ಕೂಗಿ ಗಟ್ಟಿಯಾಗಿ ಹೇಳಿತು : "ಅಕೂಪಾರ! ನೀನು ಸ್ವಲ್ಪ ಮೇಲಕ್ಕೆ ಬಾ. ನಿನ್ನಿಂದ ಮುಖ್ಯವಾದ ವಿಷಯವೊಂದನ್ನು ತಿಳಿಯ ಬೇಕಾಗಿದೆ."

ಬಕದ ಮಾತನ್ನು ಕೇಳಿದೊಡನೆಯೇ ಆಮೆಯು ನಾವಿದ್ದೆಡೆಗೆ ಆಗಮಿ ಸಿತು. ಅದು ಹೊರಕ್ಕೆ ಬಂದೊಡನೆಯೇ ನಾವದನ್ನು ಪ್ರಶ್ನಿಸಿದೆವು :

"ಅಕೂಪಾರ! ಇಂದ್ರದ್ಯುಮ್ನನಾರೆಂಬುದು ನಿನಗೆ ತಿಳಿದಿರುವುದೇ? ಅವನ ಇತಿಹಾಸವೇನೆಂಬುದನ್ನಾದರೂ ತಿಳಿದಿರುವೆಯಾ?"

ಇಂದ್ರದ್ಯುಮ್ನನೆಂಬ ಹೆಸರನ್ನು ಕೇಳಿದೊಡನೆಯೇ ಆಮೆಯ ಕಣ್ಣುಗಳು ನೀರಿನಿಂದ ತುಂಬಿಕೊಂಡುವು. ಅದರ ಹೃದಯವು ಅನುಕಂಪಿಸಿತು. ಮಹ ತ್ತರವಾದ ವಿಷಯಗಳೆಲ್ಲವೂ ಅದರ ಸ್ಮೃತಿಪಥಕ್ಕೆ ಬಂದು ತಲೆಯು ಸುತ್ತು ವಂತಾಗಿ ಎಚ್ಚರತಪ್ಪುವ ಸ್ಥಿತಿಯು ಆ ಆಮೆಗುಂಟಾಯಿತು. ಸ್ವಲ್ಪ ಚೇತರಿಸಿ ಕೊಂಡು ರಾಜನಿಗೆ ನಮಸ್ಕರಿಸುತ್ತಾ ತೊದಲುನುಡಿಗಳಿಂದ ಆಮೆಯು ಹೇಳತೊಡಗಿತು :

"ಈ ಮಹಾನುಭಾವನನ್ನು ನಾನರಿಯೇನೇ? ಸಾವಿರಾರು ಯಾಗಗಳನ್ನು ಮಾಡಿ, ಸಾವಿರಾರು ಯಜ್ಞಶಾಲೆಗಳನ್ನೂ, ಸಾವಿರಾರು ಅಗ್ನಿಕುಂಡಗಳನ್ನೂ, ಸಾವಿರಾರು ಯೂಪಸ್ತಂಭಗಳನ್ನೂ, ಸ್ಥಾಪಿಸಿದ ಮಹಾನುಭಾವನಿವನು. ಯಜ್ಞದ ಅವಭೃಥವಾದನಂತರದಲ್ಲಿ ಇವನು ಬ್ರಾಹ್ಮಣರಿಗೆ ದಕ್ಷಿಣಾರೂಪವಾಗಿ ಕೊಟ್ಟ ಹಸುಗಳ ಗೊರಸಿನ ಆಘಾತಗಳಿಂದಲೇ ನಿರ್ಮಿತವಾಗಿದೆ ಈ ಸರೋವರ. ಆದುದರಿಂದಲೇ ಇದಕ್ಕೆ ಇಂದ್ರದ್ಯುಮ್ನವೆಂಬ ಹೆಸರೂ ಬಂದಿರುವುದು. ಅಂದಿನಿಂದಲೂ ನಾನು ಇಲ್ಲಿಯೇ ವಾಸಮಾಡುತ್ತಿದ್ದೇನೆ."

ಆಮೆಯು ತನ್ನ ಮಾತನ್ನು ಮುಗಿಸುವುದರೊಳಗಾಗಿಯೇ ಆಕಾಶದ ಮಾರ್ಗವಾಗಿ ಪುಷ್ಪಕವಿಮಾನವೊಂದು ಆಗಮಿಸಿತು. ಇಂದ್ರದ್ಯುಮ್ನನನ್ನು ಕುರಿತು ಅಶರೀರವಾಣಿಯೊಂದು ಹೀಗೆ ಹೇಳಿತು: "ಸ್ವರ್ಗದಲ್ಲಿರುವ ಯಥೋಚಿತಸ್ಥಾನಕ್ಕೆ ಈ ಕೂಡಲೇ ಆಗಮಿಸು. ನಿನ್ನ ಕೀರ್ತಿಯು ಅಮರವಾದುದು. ಸಂತೋಷಭರಿತನಾಗಿ ನೀನಿನ್ನು ಈ ಪುಷ್ಪಕದಲ್ಲಿ ಕುಳಿತು ಸ್ವರ್ಗದಲ್ಲಿರುವ ನಿನ್ನ ಸ್ಥಾನಕ್ಕೆ ಆಗಮಿಸಬಹುದಾಗಿದೆ.

**ದಿವಂ ಸ್ಪೃಶತಿ ಭೂಮಿಂ ಚ ಶಬ್ದಃ ಪುಣ್ಯಸ್ಯ ಕರ್ಮಣಃ ।**
**ಯಾವತ್ಸ ಶಬ್ದೋ ಭವತಿ ತಾವತ್ಪುರುಷ ಉಚ್ಯತೇ ॥೧೬॥**

**ಅಕೀರ್ತಿಃ ಕೀರ್ತ್ಯತೇ ಲೋಕೇ ಯಸ್ಯ ಭೂತಸ್ಯ ಕಸ್ಯಚಿತ್ ।**
**ಸ ಪತತ್ಯಧಮಾಲ್ಲೋಕಾನ್ಯಾವಚ್ಛಬ್ದಃ ಪ್ರಕೀರ್ತ್ಯತೇ ॥೧೭॥**

**ತಸ್ಮಾತ್ಕಲ್ಯಾಣವೃತ್ತಃ ಸ್ಯಾದನನ್ತಾಯ ನರಃ ಸದಾ ।**
**ವಿಹಾಯ ಚಿತ್ತಂ ಪಾಪಿಷ್ಠಂ ಧರ್ಮಮೇವ ಸಮಾಶ್ರಯೇತ್ ॥೧೮॥**

ಯಾವನೊಬ್ಬನ ಪುಣ್ಯಕಾರ್ಯಗಳು ಎಂದಿನವರೆಗೆ ಕೀರ್ತನಮಾಡಲ್ಪಡುತ್ತವೆಯೋ, ಎಂದಿನವರೆಗೆ ಜನರು ಒಬ್ಬನ ಪುಣ್ಯಕಾರ್ಯಗಳ ಕಥನವನ್ನು ಮಾಡುತ್ತಿರುವರೋ–ಅಂದಿನವರೆಗೂ ಅವನು ಸ್ವರ್ಗಸುಖವನ್ನೇ ಅನುಭವಿಸುತ್ತಿರುತ್ತಾನೆ. ಅಂತೆಯೇ ಒಬ್ಬ ಪಾಪಿಷ್ಠನ ಪಾಪಕರ್ಮಗಳನ್ನು ಜನರು ಎಂದಿನವರೆಗೆ ನೆನೆಸಿಕೊಂಡು ಪರಿತಾಪಪಡುತ್ತಿರುವರೋ–ಅಂದಿನವರೆಗೂ ಆ ಪಾಪಾತ್ಮನ ಚೇತನವು ನರಕದಲ್ಲಿ ಬಿದ್ದು ಒದ್ದಾಡುತ್ತಿರುತ್ತದೆ.

ಆದುದರಿಂದ ಮನುಷ್ಯನಾದವನು ತನ್ನ ಶ್ರೇಯಸ್ಸಿಗಾಗಿ ಸತ್ಕಾರ್ಯಗಳನ್ನೇ ಮಾಡುತ್ತಿರಬೇಕು. ಪಾಪಕಾರ್ಯದ ಸಂಕಲ್ಪವನ್ನೂ ಮನಸ್ಸಿನಿಂದ ದೂರ ಮಾಡಿ ಯಾವಾಗಲೂ ಧರ್ಮಕಾರ್ಯಗಳ ಸಂಕಲ್ಪ ಮಾಡಲು ಮತ್ತು ಧರ್ಮಕಾರ್ಯಗಳನ್ನು ಮಾಡಲು ಯತ್ನಿಸಬೇಕು. ಧರ್ಮಕಾರ್ಯವೊಂದೇ ಶಾಶ್ವತವಾದ ಕೀರ್ತಿಯನ್ನೂ ಮತ್ತು ಶಾಶ್ವತವಾದ ಸುಖವನ್ನೂ ಇಹ-ಪರ ಗಳೆರಡರಲ್ಲಿಯೂ ಕೊಡಬಲ್ಲುದು."

ಅಶರೀರವಾಣಿಯು ಹೀಗೆ ಹೇಳಿದನಂತರ ಇಂದ್ರದ್ಯುಮ್ನನು ಆಕಾಶದ ಕಡೆಗೆ ತಿರುಗಿ ಹೇಳಿದನು : "ನಾನು ಈ ವಯೋವೃದ್ಧರನ್ನು ಅವರವರ ಸ್ಥಾನ ಗಳಿಗೆ ಕಳುಹಿಸುವ ಪರ್ಯಂತವಾಗಿ ಈ ವಿಮಾನವು ಇಲ್ಲಿಯೇ ಇರಲಿ."

ಹೀಗೆಂದು ಹೇಳಿ ಪುನಃ ಅಶ್ವರೂಪವನ್ನು ಧರಿಸಿದವನಾಗಿ ಪ್ರಾವಾರ ಕರ್ಣನನ್ನು ಹಿಮವತ್ಪರ್ವತದ ತಪ್ಪಲಿಗೂ, ನನ್ನನ್ನು ನಾನು ಮೊದಲಿದ್ದ ಸ್ಥಳಕ್ಕೂ ಕರೆತಂದುಬಿಟ್ಟನಂತರ ದಿವ್ಯವಾದ ದೇಹವನ್ನು ಧರಿಸಿ ದೇವಯಾನ ದಲ್ಲಿ ಕುಳಿತು ಸ್ವರ್ಗಲೋಕಕ್ಕೆ ಪ್ರಯಾಣಮಾಡಿದನು. ನಾನು ಚಿರಂಜೀವಿ ಯಾದುದರಿಂದ ಇವೆಲ್ಲವನ್ನೂ ಪ್ರತ್ಯಕ್ಷವಾಗಿ ನೋಡಿದೆನು, ಯುಧಿಷ್ಠಿರ!"

ಜನಮೇಜಯ! ಮಾರ್ಕಂಡೇಯರು ಈ ಎಲ್ಲ ವಿಷಯಗಳನ್ನೂ ಪಾಂಡವರಿಗೆ ವಿವರಿಸಿ ಹೇಳಿದರು. ಮಾರ್ಕಂಡೇಯರು ಕಥಾಪ್ರವಚನವನ್ನು ಮುಗಿಸಿದೊಡನೆಯೇ ಪಾಂಡುಪುತ್ರರು ಹೇಳಿದರು :

"ಮಹರ್ಷಿಗಳೇ! ತಾವೇ ಧನ್ಯರು. ಸ್ವರ್ಗದಿಂದ ಚ್ಯುತನಾಗಿದ್ದ ಇಂದ್ರದ್ಯುಮ್ನನನ್ನು ಪುನಃ ಸ್ವರ್ಗವನ್ನ ಸೇರುವಂತೆ ಮಾಡಿ ಉದ್ಧರಿಸಿದಿ ರಲ್ಲವೇ?"

"ಧರ್ಮಜ! ದೇವಕೀಪುತ್ರನಾದ ಈ ಶ್ರೀಕೃಷ್ಣನೂ ನರಕದಲ್ಲಿ ಬಿದ್ದು ಪರಿತಪಿಸುತ್ತಿದ್ದ ರಾಜರ್ಷಿಯಾದ ನೃಗನನ್ನು ಉದ್ಧರಿಸಿ ಸ್ವರ್ಗಕ್ಕೆ ಕಳುಹಿಸ ಲಿಲ್ಲವೇ? (ಅವರವರ ಕರ್ಮಾನುಸಾರವಾಗಿ ಮಾನವರು ಸ್ವರ್ಗ-ನರಕ, ಸುಖ-ಕಷ್ಟಗಳನ್ನು ಅನುಭವಿಸಿಯೇ ತೀರಬೇಕಾಗುತ್ತದೆ. ಕೆಲವು ಸಮಯ ಗಳಲ್ಲಿ ಪರಮಾತ್ಮನ ಇಚ್ಛೆಯಂತೆ ನಾವು ನಿಮಿತ್ತಮಾತ್ರರಾಗುತ್ತೇವೆ.)"

೧೯೯ನೆಯ ಅಧ್ಯಾಯವು ಮುಗಿಯಿತು.

## ನಿಂದಿತವಾದ, ನಿಂದಿತಜನ್ಮ, ಅತಿಥಿಸತ್ಕಾರ, ವಿವಿಧದಾನಗಳ ಮಹತ್ತ್ವ, ವಾಕ್ಶುದ್ಧಿ, ಗಾಯತ್ರೀಜಪ, ಇಂದ್ರಿಯನಿಗ್ರಹ- ಇತ್ಯಾದಿ ವಿಷಯಗಳ ವಿವರಣೆ

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಯುಧಿಷ್ಠಿರನು ಮಾರ್ಕಂಡೇಯಮಹರ್ಷಿಗಳಿಂದ ರಾಜರ್ಷಿಯಾದ ಇಂದ್ರದ್ಯುಮ್ನನಿಗೆ ಪುನಃ ಸ್ವರ್ಗಪ್ರಾಪ್ತಿಯಾದ ಇತಿಹಾಸವನ್ನು ಕೇಳಿದನಂತರ ಮಾರ್ಕಂಡೇಯಮಹರ್ಷಿಗಳನ್ನು ಕೇಳಿದನು :

"ಮಹರ್ಷಿಗಳೇ! ಯಾವ ಯಾವ ಅವಸ್ಥೆಗಳಲ್ಲಿ (ಆಶ್ರಮಗಳಲ್ಲಿ) ಯಾವ ಯಾವ ವಿಧವಾದ ದಾನಮಾಡಿದರೆ ಅವಸಾನಾಂತರದಲ್ಲಿ ಮಾನವನು ಇಂದ್ರಲೋಕಕ್ಕೆ ಹೋಗಬಲ್ಲನು? ಗೃಹಸ್ಥನಾದವನು ದಾನಮಾಡಿದರೆ ಯಾವ ಫಲವು ಸಿಕ್ಕುತ್ತದೆ? ಬ್ರಹ್ಮಚರ್ಯೆಯಲ್ಲಿದ್ದಾಗ, ವೃದ್ಧಾಪ್ಯದಲ್ಲಿದ್ದಾಗ ದಾನಮಾಡಿದರೆ ಯಾವ ಫಲಗಳು ಸಿಕ್ಕುತ್ತವೆ? ಮತ್ತು ದಾನಮಾಡಲು ಯುಕ್ತವಾದ ಕಾಲವು ಯಾವುದು?–ಇವೆಲ್ಲವನ್ನೂ ವಿಶದವಾಗಿ ಹೇಳಿರಿ."

**ವೃಥಾ ಜನ್ಮಾನಿ ಚತ್ವಾರಿ ವೃಥಾ ದಾನಾನಿ ಷೋಡಶ ।**
**ವೃಥಾ ಜನ್ಮ ಹ್ಯಪುತ್ರಸ್ಯ ಯೇ ಚ ಧರ್ಮಬಹಿಷ್ಕೃತಾಃ ॥೪॥**

**ಪರಪಾಕೇಷು ಯೇಽಶ್ನನ್ತಿ ಆತ್ಮಾರ್ಥಂ ಚ ಪಚೇತ್ತು ಯಃ ।**
**ಪರ್ಯಶ್ನನ್ತಿ ವೃಥಾ ಯೇ ಚ ತದಸತ್ಯಂ ಪ್ರಕೀರ್ತ್ಯತೇ ॥೫॥**

"ಯುಧಿಷ್ಠಿರ! ಮುಂದೆ ಹೇಳುವ ನಾಲ್ಕು ರೀತಿಗಳಲ್ಲಿ ಜೀವನನಡೆಸುವುದು ವ್ಯರ್ಥಜೀವನವೆನಿಸುವುದು. ಅಂತೆಯೇ ಮುಂದೆ ಹೇಳುವ ಹದಿನಾರು ವಿಧವಾದ ದಾನಗಳೂ ವ್ಯರ್ಥವೇ ಸರಿ.

ಮಕ್ಕಳಿಲ್ಲದವನ ಜನ್ಮವು ವ್ಯರ್ಥವೇ ಸರಿ. ಅಂತೆಯೇ ಧರ್ಮಬಾಹಿರನಾದವನ ಜನ್ಮವೂ ವ್ಯರ್ಥ. ಎರಡನೆಯದಾಗಿ : ಅನುದಿನವೂ ಪರಾನ್ನದಿಂದಲೇ ಜೀವಿಸುವವರ ಜನ್ಮವೂ ವ್ಯರ್ಥವಾದುದು. ದೇವ-ಪಿತೃಗಳಿಗಾಗಲೀ, ಅತಿಥಿಗಳಿಗಾಗಲೀ ಸಮರ್ಪಿಸದೇ ಯಾವಾತನು ತನಗೊಬ್ಬನಿ

ಗಾಗಿಯೇ ಅನ್ನವನ್ನು ಸಿದ್ಧಪಡಿಸಿಕೊಂಡು ಏಕಾಂಗಿಯಾಗಿ ಕುಳಿತು ಊಟ ಮಾಡುತ್ತಾನೆಯೋ ಅಂತಹವನ ಜನ್ಮವೂ ವ್ಯರ್ಥವಾದುದು. ಬಾಲಕರನ್ನೂ ವೃದ್ಧರನ್ನೂ ಬಿಟ್ಟು ಯಾವನು ಮೊದಲು ಊಟಮಾಡುವನೋ ಅಂತಹ ವನ ಜನ್ಮವೂ ವ್ಯರ್ಥವಾದುದು. ಇಂತಹ ಜನ್ಮವು ವ್ಯರ್ಥವಾದುದೆಂದು ಘೋಷಿಸಲ್ಪಟ್ಟಿದೆ.

ಇನ್ನು ನಿಷ್ಫಲವಾದ ಹದಿನಾರು ದಾನಗಳ ವಿಷಯವಾಗಿ ಹೇಳುವೆನು, ಕೇಳು :

**ಆರೂಢಪತಿತೇ ದತ್ತಮನ್ಯಾಯೋಪಹೃತಂ ಚ ಯತ್ ।**
**ವ್ಯರ್ಥಂ ತು ಪತಿತೇ ದಾನಂ ಬ್ರಾಹ್ಮಣೇ ತಸ್ಕರೇ ತಥಾ ॥೬॥**

**ಗುರೌ ಚಾನೃತಿಕೇ ಪಾಪೇ ಕೃತಘ್ನೇ ಗ್ರಾಮಯಾಜಕೇ ।**
**ವೇದವಿಕ್ರಯಿಣೇ ದತ್ತಂ ತಥಾ ವೃಷಲಯಾಜಕೇ ॥೭॥**

**ಬ್ರಹ್ಮಬನ್ಧುಷು ಯದ್ದತ್ತಂ ಯದ್ದತ್ತಂ ವೃಷಲೀಪತೌ ।**
**ಸ್ತ್ರೀಜನೇಷು ಚ ಯದ್ದತ್ತಂ ವ್ಯಾಲಗ್ರಾಹೇ ತಥೈವ ಚ ।**
**ಪರಿಚಾರಕೇಷು ಯದ್ದತ್ತಂ ವೃಥಾ ದಾನಾನಿ ಷೋಡಶ ॥೮॥**

(1) ನೈಷ್ಠಿಕಬ್ರಹ್ಮಚರ್ಯದಲ್ಲಿದ್ದೂ ಅಥವಾ ಸಂನ್ಯಾಸಿಯಾಗಿದ್ದೂ ಪತಿತನಾದವನಿಗೆ ಕೊಡುವ ದಾನವು ನಿಷ್ಫಲವಾಗುವುದು. (2) ಅನ್ಯಾಯ ದಿಂದ ಆರ್ಜಿಸಿದ ಹಣವನ್ನು ದಾನಕೊಡುವುದು ನಿಷ್ಫಲ. (3) ಪತಿತನಾದ ಬ್ರಾಹ್ಮಣನಿಗೆ, (4) ಕಳ್ಳನಿಗೆ, (5) ಪಿತ್ರಾದಿ ಗುರುಜನರಿಗೆ, (6) ಸುಳ್ಳು ಹೇಳುವವನಿಗೆ, (7) ಪಾಪಿಷ್ಠನಿಗೆ, (8) ಕೃತಘ್ನನಿಗೆ, (9) ಗ್ರಾಮಪುರೋ ಹಿತನಿಗೆ, (10) ವೇದವಿಕ್ರಯಮಾಡುವವನಿಗೆ, (11) ಶೂದ್ರಪುರೋಹಿತ ನಿಗೆ, (12) ಅಧ್ಯಯನ-ಅಧ್ಯಾಪನಶೂನ್ಯನಾದ ಜಾತಿಮಾತ್ರಬ್ರಾಹ್ಮಣನಿಗೆ (13) ಋತುಮತಿಯಾದ ಹೆಣ್ಣನ್ನು ಮದುವೆಯಾದವನಿಗೆ ಅಥವಾ ಶೂದ್ರ ಸ್ತ್ರೀಯರನ್ನು ಮದುವೆಯಾದ ಬ್ರಾಹ್ಮಣನಿಗೆ, (14) ಸ್ತ್ರೀಯರಿಗೆ, (15) ಹಾವಾಡಿಗನಿಗೆ, (16) ಪರಿಚಾರಕರಿಗೆ–ಕೊಡುವ ದಾನವು ವ್ಯರ್ಥವಾಗು ತ್ತದೆ. ಇಂತಹವರಿಗೆ ದಾನಕೊಡುವುದರಿಂದ ಮತ್ತಷ್ಟು ಪಾಪಸಂಘಟನೆ ಯಾಗುವುದೇ ಹೊರತು ಪುಣ್ಯಪ್ರಾಪ್ತಿಯಾಗುವುದಿಲ್ಲ.

(ಪಿತ್ರಾದಿ ಗುರುಜನರಿಗೂ, ಪರಿಚಾರಕರಿಗೂ, ಸ್ತ್ರೀಯರಿಗೂ ದಾನ ಕೊಡುವುದು ನಿಷ್ಫಲವೆಂದು ಹೇಳಿದೆ. ಇದರ ಅಭಿಪ್ರಾಯವು ಈ ರೀತಿ ಇದೆ: ಮಾತಾ-ಪಿತ್ರಾದಿ ಗುರುಜನರ ಸೇವೆಯನ್ನು ಮಾಡಬೇಕು ; ಪರಿಚಾರಕನ್ನೂ-ಸ್ತ್ರೀಯರನ್ನೂ ಪಾಲನೆ-ಪೋಷಣೆ ಮಾಡಬೇಕು. ಇದು ಮಾನವನ ಮುಖ್ಯ ಕರ್ತವ್ಯವಾಗಿದೆ. ಆದ್ದರಿಂದ ಇವರಿಗೆ ಕೊಡುವುದು ದಾನವೆಂದು ಪರಿಗಣಿತವಾಗುವುದಿಲ್ಲ.)

**ತಮೋವೃತಸ್ತು ಯೋ ದದ್ಯಾದ್ಭಯಾತ್ಕ್ರೋಧಾತ್ತಥೈವ ಚ ।**
**ಭುಙ್ಕ್ತೇ ಚ ದಾನಂ ತತ್ಸರ್ವಂ ಗರ್ಭಸ್ಥಸ್ತು ನರಃ ಸದಾ ॥೯॥**

ಯಾವ ಅಜ್ಞಾನಿಯು ತಮೋಗುಣಭೂಯಿಷ್ಠನಾಗಿ ಭಯದ ಕಾರಣದಿಂದಲೂ, ಕೋಪದಿಂದಲೂ ಕೂಡಿದವನಾಗಿ ದಾನಮಾಡುತ್ತಾನೆಯೋ– ಅವನು ಅದರ ದುಷ್ಫಲವನ್ನು ಮುಂದಿನ ಜನ್ಮದಲ್ಲಿ ತಾಯಿಯ ಗರ್ಭದಲ್ಲಿರುವಾಗಲೇ ಅನುಭವಿಸುತ್ತಾನೆ.

**ದದದ್ದಾನಂ ದ್ವಿಜಾತಿಭ್ಯೋ ವೃದ್ಧಭಾವೇನ ಮಾನವಃ ॥೧೦॥**

**ತಸ್ಮಾತ್ಸರ್ವಾಸ್ವವಸ್ಥಾಸು ಸರ್ವದಾನಾನಿ ಪಾರ್ಥಿವ ।**
**ದಾತವ್ಯಾನಿ ದ್ವಿಜಾತಿಭ್ಯಃ ಸ್ವರ್ಗಮಾರ್ಗಜಿಗೀಷಯಾ ॥೧೧॥**

ಶ್ರೋತ್ರಿಯನಾದ ಬ್ರಾಹ್ಮಣನಿಗೆ ಭಕ್ತಿಪೂರ್ವಕವಾಗಿ ದಾನಮಾಡಿದರೆ ಅದರ ಫಲವನ್ನು ಮಾನವನು ವೃದ್ಧಾಪ್ಯದಲ್ಲಿ ಪಡೆಯುತ್ತಾನೆ. ಸರ್ವಾವಸ್ಥೆಗಳಲ್ಲಿಯೂ (ಬಾಲ್ಯ-ಕೌಮಾರ-ವಾರ್ಧಕ್ಯಗಳಲ್ಲಿಯೂ) ಸರ್ವದಾನಗಳನ್ನೂ ಸ್ವರ್ಗಕಾಮಿಯಾದವನು ಶ್ರೋತ್ರಿಯರಾದ ಬ್ರಾಹ್ಮಣರಿಗೇ ಕೊಡಬೇಕು, ಧರ್ಮಜ!”

**ಚಾತುರ್ವರ್ಣ್ಯಸ್ಯ ಸರ್ವಸ್ಯ ವರ್ತಮಾನಃ ಪ್ರತಿಗ್ರಹೇ ।**
**ಕೇನ ವಿಪ್ರಾ ವಿಶೇಷೇಣ ತಾರಯನ್ತಿ ತರನ್ತಿ ಚ ॥೧೨॥**

“ಮಹರ್ಷಿಗಳೇ! ಶ್ರೋತ್ರಿಯರಾದ ಬ್ರಾಹ್ಮಣರಿಗೆ ದಾನಮಾಡಬೇಕೆಂದು ಹೇಳುತ್ತೀರಿ. ನಾಲ್ಕು ವರ್ಣದವರೂ ಶ್ರೋತ್ರಿಯರಾದ ಬ್ರಾಹ್ಮಣರಿಗೇ ದಾನಕೊಡಬೇಕಲ್ಲವೇ? ನಾಲ್ಕು ವರ್ಣದವರಿಂದಲೂ ದಾನವನ್ನು ಪ್ರತಿಗ್ರಹಮಾಡುವ ವಿಪ್ರರು ಇತರರನ್ನೂ ಉದ್ಧರಿಸಿ–ತಾವೂ ಪಾಪದಿಂದ ವಿಮುಕ್ತರಾಗಿ ಹೇಗೆ ಪುಣ್ಯಲೋಕಗಳನ್ನು ಪಡೆಯುತ್ತಾರೆ?”

**ಜಪೈರ್ಮನ್ತ್ರೈಶ್ಚ ಹೋಮೈಶ್ಚ ಸ್ವಾಧ್ಯಾಯಾಧ್ಯಯನೇನ ಚ ।**
**ನಾವಂ ವೇದಮಯೀಂ ಕೃತ್ವಾ ತಾರಯನ್ತಿ ತರನ್ತಿ ಚ ॥೧೩॥**

"ಗಾಯತ್ರಿಯೇ ಮೊದಲಾದ ಮಹಾಮಂತ್ರಗಳ ಜಪಗಳಿಂದಲೂ, ಹೋಮಾದಿಗಳಿಂದಲೂ, ಅಧ್ಯಯನಾಧ್ಯಾಪನಗಳಿಂದಲೂ–ಬ್ರಾಹ್ಮಣರು ವೇದಮಯವಾದ ನಾವೆಯೊಂದನ್ನು ಸಿದ್ಧಪಡಿಸಿ–ಅದರಿಂದ ಚಾತುರ್ವರ್ಣ್ಯದವರನ್ನೂ ಉದ್ಧಾರಮಾಡುತ್ತಾರೆ ಮತ್ತು ತಾವೂ ಉದ್ಧಾರವಾಗುತ್ತಾರೆ. ಈ ಕಾರಣದಿಂದಲೇ ಧರ್ಮಜ ;

**ಬ್ರಾಹ್ಮಣಾಂಸ್ತೋಷಯೇದ್ಯಸ್ತು ತುಷ್ಯನ್ತೇ ತಸ್ಯ ದೇವತಾಃ ।**
**ವಚನಾಚ್ಚಾಪಿ ವಿಪ್ರಾಣಾಂ ಸ್ವರ್ಗಲೋಕಮವಾಪ್ನುಯಾತ್ ॥೧೪॥**

ಯಾರು ಬ್ರಾಹ್ಮಣರನ್ನು ಸತ್ಕರಿಸುತ್ತಾರೆಯೋ–ಅವರ ವಿಷಯದಲ್ಲಿ ದೇವತೆಗಳೂ ಸುಪ್ರೀತರಾಗುತ್ತಾರೆ. ಬ್ರಾಹ್ಮಣರು ಸುಮನಸ್ಕರಾಗಿ 'ಪುಣ್ಯಲೋಕಾವಾಪ್ತಿರಸ್ತು' 'ಪುಣ್ಯಲೋಕಗಳು ಲಭಿಸಲಿ'–ಎಂದು ಆಶೀರ್ವಾದಮಾಡಿದ ಮಾತ್ರದಿಂದಲೇ ಪುಣ್ಯಲೋಕಗಳು ಲಭಿಸುತ್ತವೆ.

**ಪಿತೃದೈವತಪೂಜಾಭಿರ್ಬ್ರಾಹ್ಮಣಾಭ್ಯರ್ಚನೇನ ಚ ।**
**ಅನನ್ತಂ ಪುಣ್ಯಲೋಕಂ ತು ಗನ್ತಾಸಿ ತ್ವಂ ನ ಸಂಶಯಃ ॥೧೫॥**

ಅನುದಿನವೂ ದೇವ-ಪಿತೃಪೂಜೆಗಳಿಂದಲೂ–ಬ್ರಾಹ್ಮಣರನ್ನು ಸತ್ಕರಿಸುವುದರಿಂದಲೂ ನೀನು ಅನಂತಾನಂತವಾದ ಪುಣ್ಯಲೋಕಗಳನ್ನು ಪಡೆಯುವೆ. ಈ ವಿಷಯದಲ್ಲಿ ಸಂಶಯಲೇಶವೂ ಇಲ್ಲ.

**ಶ್ಲೇಷ್ಮಾದಿಭಿರ್ವ್ಯಾಪ್ತತನುರ್ಮ್ರಿಯಮಾಣೋ ವಿಚೇತನಃ ।**
**ಬ್ರಾಹ್ಮಣಾ ಏವ ಸಮ್ಪೂಜ್ಯಾಃ ಪುಣ್ಯಂ ಸ್ವರ್ಗಮಭೀಪ್ಸತಾ ॥೧೬॥**

ಶ್ಲೇಷ್ಮಾಧಿಕ್ಯದಿಂದ ಶರೀರವು ಪರಿತಾಪಪಡುತ್ತಿದ್ದರೂ, ಸಾಯುವ ಸ್ಥಿತಿಯಲ್ಲಿದ್ದರೂ, ಚೇತನಾರಹಿತನಾಗಿದ್ದರೂ–ದೇವ-ಬ್ರಾಹ್ಮಣ-ಪಿತೃಗಳನ್ನು ಸತ್ಕರಿಸುವವನು ಪುಣ್ಯಲೋಕಗಳನ್ನು ಖಂಡಿತವಾಗಿಯೂ ಪಡೆಯುತ್ತಾನೆ. ಪುಣ್ಯವನ್ನೂ, ಸ್ವರ್ಗವನ್ನೂ ಪಡೆಯಲಿಚ್ಛಿಸುವವನು ಶ್ರೋತ್ರಿಯರಾದ ಬ್ರಾಹ್ಮಣರನ್ನು ಸತ್ಕರಿಸಲೇಬೇಕು.

**ಶ್ರಾದ್ಧಕಾಲೇ ತು ಯತ್ನೇನ ಭೋಕ್ತವ್ಯಾ ಹ್ಯಜುಗುಪ್ಸಿತಾಃ ॥೧೭॥**

ಶ್ರಾದ್ಧದಿನಗಳಲ್ಲಿ ಸ್ವಲ್ಪವೂ ಆಲಸಿಕೆಯಿಲ್ಲದೇ ವೇದಾಧ್ಯಯನಸಂಪನ್ನರಾದ ಬ್ರಾಹ್ಮಣರನ್ನು ಕರೆದು ಭೋಜನಮಾಡಿಸಬೇಕು.

ಆದರೆ ಇಂತಹವರನ್ನು ಮಾತ್ರ ಶ್ರಾದ್ಧಭೋಜನಕ್ಕೆ ಕರೆಯಬಾರದು.

**ದುರ್ವರ್ಣಃ ಕುನಖೀ ಕುಷ್ಠೀ ಮಾಯಾವೀ ಕುಣ್ಡಗೋಲಕೌ ।**
**ವರ್ಜನೀಯಾಃ ಪ್ರಯತ್ನೇನ ಕಾಣ್ಡಪೃಷ್ಠಾಶ್ಚ ದೇಹಿನಃ ।**
**ಜುಗುಪ್ಸಿತಂ ಹಿ ಯಚ್ಛ್ರಾದ್ಧಂ ದಹತ್ಯಗ್ನಿರಿವೇನ್ಧನಮ್ ॥೧೮॥**

ಶಾಪಕ್ಕೆ ಗುರಿಯಾದವನು ಅಥವಾ ಪತಿತನಾದವನು ಅಥವಾ ಹೆಚ್ಚು ಬಿಳುಪಾಗಿ ಅಥವಾ ಹೆಚ್ಚು ಕಪ್ಪಾಗಿರುವವನು, ವಕ್ರ-ವಕ್ರವಾದ ಉಗುರುಗಳಿಂದ ಕೂಡಿರುವವನು, ಕುಷ್ಠರೋಗದವನು, ಮೋಸಗಾರನು, ಗಂಡನು ಸತ್ತಮೇಲೆ ವಿಧವೆಯಾದವಳಲ್ಲಿ ಅನ್ಯರಿಂದ ಹುಟ್ಟಿದವನು (ಗೋಲಕ), ಗಂಡನಿರುವಾಗಲೇ ಪರರ ಸಂಗಮದಿಂದ ಹುಟ್ಟಿದವನು (ಕುಂಡ), ಬ್ರಾಹ್ಮಣನಾದರೂ ಧನುರ್ಬಾಣಗಳನ್ನು ಧರಿಸಿ ಕ್ಷತ್ರಿಯವೃತ್ತಿಯಿಂದ ಜೀವಿಸುತ್ತಿರುವವನು–ಇವರುಗಳು ಶ್ರಾದ್ಧಭೋಜನಕ್ಕೆ ಅರ್ಹರಲ್ಲ. ಧರ್ಮಜ! ಶ್ರಾದ್ಧವನ್ನು ಜುಗುಪ್ಸೆಯಿಂದಾಗಲೀ, ಆಲಸಿಕೆಯಿಂದಾಗಲೀ ಮಾಡಬಾರದು. ಜುಗುಪ್ಸೆಯಿಂದ ಮಾಡುವ ಶ್ರಾದ್ಧವು ಅಗ್ನಿಯು ಸೌದೆಯನ್ನು ಭಸ್ಮಮಾಡುವಂತೆ–ಶ್ರಾದ್ಧಕರ್ತೃವಿನ ವಂಶವನ್ನೇ ನಾಶಮಾಡುತ್ತದೆ.

**ಯೇ ಯೇ ಶ್ರಾದ್ಧೇನ ಯುಜ್ಯನ್ತೇ ಮೂಕಾನ್ಧ ಬಧಿರಾದಯಃ ।**
**ತೇಽಪಿ ಸರ್ವೇ ನಿಯೋಕ್ತವ್ಯಾ ಮಿಶ್ರಿತಾ ವೇದಪಾರಗೈಃ ॥೧೯॥**

ಒಂದು ವೇಳೆ ಯಾವುದಾದರೂ ಸಮಯದಲ್ಲಿ ಮೂಕರನ್ನೂ, ಕುರುಡರನ್ನೂ, ಕಿವುಡರನ್ನೂ ಶ್ರಾದ್ಧಭೋಜನಕ್ಕೆ ಆಹ್ವಾನಿಸಬೇಕಾಗಿ ಬಂದರೂ ಶ್ರೋತ್ರಿಯರಾದ, ವೇದಪಾರಂಗತರಾದ ಬ್ರಾಹ್ಮಣರ ಜೊತೆಯಲ್ಲಿಯೇ ಅವರನ್ನು ಕರೆಯಬೇಕು.

**ಪ್ರತಿಗ್ರಹಶ್ಚ ವೈ ದೇಯಃ ಶೃಣು ಯಸ್ಯ ಯುಧಿಷ್ಠಿರ ।**
**ಪ್ರದಾತಾರಂ ತಥಾತ್ಮಾನಂ ಯಸ್ತಾರಯತಿ ಶಕ್ತಿಮಾನ್ ॥೨೦॥**

**ತಸ್ಮಿನ್ದೇಯಂ ದ್ವಿಜೇ ದಾನಂ ಸರ್ವಾಗಮವಿಜಾನತಾ ।**
**ಪ್ರದಾತಾರಂ ಯಥಾತ್ಮಾನಂ ತಾರಯೇದ್ಯಃ ಸ ಶಕ್ತಿಮಾನ್ ॥೨೧॥**

ಯಾವನು ತನ್ನನ್ನೂ ಉದ್ಧರಿಸಿಕೊಂಡು ಇತರರನ್ನೂ ಉದ್ಧರಿಸಲು ಸಮರ್ಥನೋ, ಯಾವನು ನಿತ್ಯಕರ್ಮಾನುಷ್ಠಾನಗಳನ್ನೂ ಜಪ-ತಪ-ಹೋಮಾದಿಗಳನ್ನೂ-ಅಂತಹವನಿಗೆ ಮಾತ್ರವೇ ಸಕಲಶಾಸ್ತ್ರಗಳನ್ನೂ ತಿಳಿದಿರುವ ನೀನು ದಾನಮಾಡಬೇಕು. ವೇದಾಧ್ಯಯನಸಂಪನ್ನನೂ, ಸದಾಚಾರಸಂಪನ್ನನೂ, ವ್ರತಾನುಷ್ಠಾನಗಳನ್ನು ಅನುದಿನವೂ ಮಾಡುತ್ತಿರು ವವನೂ ಆದ ಬ್ರಾಹ್ಮಣನು ಇತರರನ್ನೂ ಪಾವನರನ್ನಾಗಿ ಮಾಡಿ ತಾನೂ ಪಾವನನಾಗಬಲ್ಲನು.

**ನ ತಥಾ ಹವಿಷೋ ಹೋಮ್ಯೈರ್ನ ಪುಷ್ಪೈರ್ನಾನುಲೇಪನೈಃ ।**
**ಅಗ್ನಯಃ ಪಾರ್ಥ ತುಷ್ಯನ್ತಿ ಯಥಾ ಹ್ಯತಿಥಿಭೋಜನೇ ॥೨೨॥**

ಅನುದಿನವೂ ಅಗ್ನಿಹೋತ್ರಮಾಡುವಾಗ ಹೋಮಮಾಡುವ ಆಜ್ಯದಿಂದಾಗಲೀ ಅಥವಾ ಆ ಸಮಯದಲ್ಲಿ ಮಾಡುವ ಪೂಜೆಯಿಂದಾಗಲೀ ಯಜ್ಞೇಶ್ವರನು ಪೂರ್ಣವಾಗಿ ತೃಪ್ತಿಹೊಂದುವುದಿಲ್ಲ. ವೈಶ್ವದೇವಾಗ್ನಿಹೋತ್ರಾದಿಗಳ ಜೊತೆಗೆ ಅತಿಥಿಸತ್ಕಾರವನ್ನೂ ಅನುದಿನವೂ ಮಾಡಬೇಕು. ಅದರಿಂದ ಮಾತ್ರವೇ ಯಜ್ಞೇಶ್ವರನು ತೃಪ್ತನಾಗುವನು.

**ತಸ್ಮಾತ್ತ್ವಂ ಸರ್ವಯತ್ನೇನ ಯತಸ್ವಾತಿಥಿಭೋಜನೇ ।**
**ಪಾದೋದಕಂ ಪಾದಘೃತಂ ದೀಪಮನ್ನಂ ಪ್ರತಿಶ್ರಯಮ್ ।**
**ಪ್ರಯಚ್ಛನ್ತಿ ತು ಯೇ ರಾಜನ್ನೋಪಸರ್ಪನ್ತಿ ತೇ ಯಮಮ್ ॥೨೩॥**

ಧರ್ಮಜ! ಆದುದರಿಂದ ನೀನು ಸರ್ವಪ್ರಯತ್ನದಿಂದಲೂ ಅತಿಥಿಸತ್ಕಾರವನ್ನು ಮಾಡುತ್ತಿರು. ಅತಿಥಿಯಾಗಿ ಬಂದವನಿಗೆ ಕಾಲುತೊಳೆದುಕೊಳ್ಳಲು ನೀರುಕೊಟ್ಟು, ಸೋತುಹೋಗಿರುವ ಕಾಲುಗಳನ್ನುಜ್ಜಿಕೊಳ್ಳಲು ತುಪ್ಪವನ್ನು ಕೊಟ್ಟು, ರಾತ್ರಿಯ ವೇಳೆಯಲ್ಲಿ ದೀಪವನ್ನು ತೋರುತ್ತಾ, ಅನ್ನವನ್ನೂ ಮತ್ತು ಆಶ್ರಯವನ್ನೂ ಕೊಟ್ಟು ಸತ್ಕರಿಸುವವನು ಅವಸಾನಾ

ನಂತರದಲ್ಲಿ ಯಮನ ಮುಂದೆ ನಿಲ್ಲಬೇಕಾಗುವುದಿಲ್ಲ, (ಅಂತಹವನಿಗೆ ನರಕಭಯವಿಲ್ಲ.)

**ದೇವಮಾಲ್ಯಾಪನಯನಂ ದ್ವಿಜೋಚ್ಛಿಷ್ಟಾವಮಾರ್ಜನಮ್ ॥೨೪॥**

**ಆಕಲ್ಪಃ ಪರಿಚರ್ಯಾ ಚ ಗಾತ್ರ ಸಂವಾಹನಾನಿ ಚ ।**
**ಅತ್ರೈಕೈಕಂ ನೃಪಶ್ರೇಷ್ಠ ಗೋದಾನಾದ್ಧತಿರಿಚ್ಯತೇ ॥೨೫॥**

ದೇವನಿರ್ಮಾಲ್ಯವನ್ನು ತೆಗೆದುಹಾಕುವುದು, ಬ್ರಾಹ್ಮಣರು ಭೋಜನ ಮಾಡಿದ ಎಲೆಗಳನ್ನು ತೆಗೆದು ಗೋಮಯಮಾಡುವುದು, ಭೋಜನವಾದ ನಂತರ ಗಂಧಾದಿಗಳನ್ನು ಹಚ್ಚಿ ಉಪಚರಿಸುವುದು ಮತ್ತು ಬ್ರಾಹ್ಮಣರ ಕೈ-ಕಾಲುಗಳನ್ನು ಒತ್ತುವುದು–ಈ ಕ್ರಿಯೆಗಳಲ್ಲಿ ಒಂದೊಂದನ್ನು ಮಾಡಿದರೂ ಗೋದಾನವನ್ನು ಮಾಡಿದುದಕ್ಕಿಂತಲೂ ಅಧಿಕವಾದ ಫಲವು ಪ್ರಾಪ್ತವಾಗುತ್ತದೆ.

**ಕಪಿಲಾಯಾಃ ಪ್ರದಾನಾತ್ತು ಮುಚ್ಯತೇ ನಾತ್ರ ಸಂಶಯಃ ।**
**ತಸ್ಮಾದಲಂಕೃತಾಂ ದದ್ಯಾತ್ಕಪಿಲಾಂ ತು ದ್ವಿಜಾತಯೇ ॥೨೬॥**

ಯುಧಿಷ್ಠಿರ! ಕಪಿಲವರ್ಣದ ಹಸುವನ್ನು ದಾನವಾಗಿ ಕೊಡುವುದರಿಂದ ಸಕಲವಿಧವಾದ ಪಾಪಗಳೂ ಪರಿಹಾರವಾಗುತ್ತವೆ. ಇದರಲ್ಲಾವ ಸಂಶಯವೂ ಇಲ್ಲ. ಆದುದರಿಂದ ಸ್ವರ್ಣಾಭರಣಗಳಿಂದ ಅಲಂಕೃತವಾದ ಕಪಿಲಾ ಧೇನುವನ್ನು ಬ್ರಾಹ್ಮಣನಿಗೆ ದಾನಕೊಡಬೇಕು.

**ಶ್ರೋತ್ರಿಯಾಯ ದರಿದ್ರಾಯ ಗೃಹಸ್ಥಾಯಾಗ್ನಿಹೋತ್ರಿಣೇ ।**
**ಪುತ್ರದಾರಾಭಿಭೂತಾಯ ತಥಾಹ್ಯನುಪಕಾರಿಣೇ ॥೨೭॥**

ಶ್ರೋತ್ರಿಯನಾದವನಿಗೆ, ದರಿದ್ರನಾಗಿರುವವನಿಗೆ, ಗೃಹಸ್ಥನಾಗಿರುವವನಿಗೆ, ಅನುದಿನವೂ ಅಗ್ನಿಹೋತ್ರಮಾಡುವವನಿಗೆ, ಪುತ್ರರಿಂದಲೂ ಪತ್ನಿಯಿಂದಲೂ ಕೂಡಿರುವವನಿಗೆ, ಯಾವ ವಿಧವಾದ ಉಪಕಾರವನ್ನೂ ನಿನಗೆ ಮಾಡದೇ ಇರುವವನಿಗೆ ದಾನಮಾಡಬೇಕು.

**ಏವಂವಿಧೇಷು ದಾತವ್ಯಾ ನ ಸಮೃದ್ಧೇಷು ಭಾರತ ।**
**ಕೋ ಗುಣೋ ಭರತಶ್ರೇಷ್ಠ ಸಮೃದ್ಧೇಷ್ವಭಿವರ್ಜಿತಮ್ ॥೨೮॥**

ಇಂತಹವರಿಗೆ ಮಾತ್ರವೇ ದಾನಮಾಡಬೇಕು. ಐಶ್ವರ್ಯವಂತರಿಗೆ

ದಾನಕೊಡಬಾರದು. ಐಶ್ವರ್ಯವಂತರಿಗೆ ದಾನಕೊಡುವುದರಿಂದಾಗುವ ಪ್ರಯೋಜನವಾದರೂ ಏನು?

**ಏಕಸ್ಯೈಕಾ ಪ್ರದಾತವ್ಯಾ ನ ಬಹೂನಾಂ ಕದಾಚನ ।**
**ಸಾ ಗೌರ್ವಿಕ್ರಯಮಾಪನ್ನಾಹನ್ಯಾತ್ತ್ರಿಪುರುಷಂ ಕುಲಮ್ ।**
**ನ ತಾರಯತಿ ದಾತಾರಂ ಬ್ರಾಹ್ಮಣಂ ನೈವ ನೈವ ತು ॥೨೯॥**

ಒಬ್ಬ ಬ್ರಾಹ್ಮಣನಿಗೆ ಒಂದು ಹಸುವನ್ನು ದಾನವಾಗಿ ಕೊಡಬೇಕು. ನಾಲ್ಕಾರು ಬ್ರಾಹ್ಮಣರಿಗೆ ಒಂದೇ ಹಸುವನ್ನು ದಾನವಾಗಿ ಕೊಡಬಾರದು. ಹಾಗೆ ಕೊಟ್ಟರೆ ಅವರೆಲ್ಲರೂ ಅದನ್ನು ಉಪಯೋಗಿಸಿಕೊಳ್ಳುವ ಸಾಧ್ಯತೆ ಯಿಲ್ಲ. ಆದುದರಿಂದ ಅದನ್ನು ಮಾರಿ ಅದರ ಮೌಲ್ಯವನ್ನು ವಿಭಾಗಮಾಡಿ ಕೊಳ್ಳುತ್ತಾರೆ. ದಾನಪಡೆದವನು ದಾನಕೊಟ್ಟ ಹಸುವನ್ನು ಯಾವುದಾದರೂ ಕಾರಣದಿಂದ ವಿಕ್ರಯಮಾಡಿದರೆ ದಾನಕೊಟ್ಟವನ ಮೂರು ತಲೆಮಾರಿ ನವರು ಆ ಪಾಪದ ಫಲವನ್ನು ಅನುಭವಿಸಬೇಕಾಗುತ್ತದೆ. ಅಂತಹ ದಾನವು ದಾನಕೊಟ್ಟವನಿಗಾಗಲೀ–ದಾನ ತೆಗೆದುಕೊಂಡವನಿಗಾಗಲೀ ಫಲದಾಯಕ ವಾಗುವುದಿಲ್ಲ. ಪಾಪಹೇತುವಾಗುತ್ತದೆ.

**ಸುವರ್ಣಸ್ಯ ವಿಶುದ್ಧಸ್ಯ ಸುವರ್ಣಂ ಯಃ ಪ್ರಯಚ್ಛತಿ ।**
**ಸುವರ್ಣಾನಾಂ ಶತಂ ತೇನ ದತ್ತಂ ಭವತಿ ಶಾಶ್ವತಮ್ ॥೩೦॥**

ಯುಧಿಷ್ಠಿರ! ಶೋಭನವರ್ಣದಿಂದ ಕೂಡಿರುವ, ಪರಿಶುದ್ಧನಾದ ಬ್ರಾಹ್ಮಣನಿಗೆ ಒಂದು ಸುವರ್ಣಮುದ್ರೆಯನ್ನು ದಾನಮಾಡಿದರೆ-ಶತಸುವರ್ಣ ನಾಣ್ಯಗಳನ್ನು ದಾನ ಮಾಡಿದುದಕ್ಕಿಂತಲೂ ಹೆಚ್ಚಿನ ಪುಣ್ಯವು ನಿರಂತರವಾಗಿ ಲಭಿಸುತ್ತದೆ.

**ಅನಡ್ವಾಹಂ ತು ಯೋ ದದ್ಯಾದ್ಬಲವನ್ತಂ ಧುರಂಧರಮ್ ।**
**ಸ ನಿಸ್ತರತಿ ದುರ್ಗಾಣಿ ಸ್ವರ್ಗಲೋಕಂ ಚ ಗಚ್ಛತಿ ॥೩೧॥**

ನೊಗವನ್ನು ಹೊರಲು (ಬಂಡಿಗೆ ಹೂಡಲು) ಸಮರ್ಥವಾದ, ಬಲಿಷ್ಠ ವಾದ ಎತ್ತನ್ನು ದಾನಮಾಡಿದರೆ ಅನೇಕಾನೇಕ ಕಷ್ಟಗಳು ಪರಿಹಾರವಾಗುವು ದಲ್ಲದೇ–ದಾನಕೊಟ್ಟವನು ಅವಸಾನಾನಂತರದಲ್ಲಿ ಸ್ವರ್ಗಲೋಕವನ್ನೂ ಸೇರುತ್ತಾನೆ.

**ವಸುನ್ಧರಾಂ ತು ಯೋ ದದ್ಯಾದ್ದ್ವಿಜಾಯ ವಿದುರಾತ್ಮನೇ ।**
**ದಾತಾರಂ ಹ್ಯನುಗಚ್ಛನ್ತಿ ಸರ್ವೇ ಕಾಮಾಭಿವಾಞ್ಛಿತಾಃ ॥೩೨॥**

ವೇದ-ವೇದಾಂಗಪಾರಂಗತನಾದ, ಮಹಾತ್ಮನಾದ ಬ್ರಾಹ್ಮಣನಿಗೆ ಭೂದಾನಮಾಡಿದರೆ ದಾನಕೊಟ್ಟವರ ಆಶೋತ್ತರಗಳೆಲ್ಲವೂ ಈಡೇರುತ್ತವೆ.

**ಪೃಚ್ಛನ್ತಿ ಚಾತ್ರ ದಾತಾರಂ ವದನ್ತಿ ಪುರುಷಾ ಭುವಿ ।**
**ಅಧ್ವನಿ ಕ್ಷೀಣಗಾತ್ರಾಶ್ಚ ಪಾಂಸುಪಾದಾವಗುಣ್ಠಿತಾಃ ॥೩೩॥**

**ತೇಷಾಮೇವ ಶ್ರಮಾರ್ತಾನಾಂ ಯೋ ಹ್ಯನ್ನಂ ಕಥಯೇದ್ಬುಧಃ ।**
**ಅನ್ನದಾತೃಸಮಃ ಸೋಽಪಿ ಕೀರ್ತ್ಯತೇ ನಾತ್ರ ಸಂಶಯಃ ॥೩೪॥**

ತನಗೆ ದಾನಕೊಡುವ ಅಥವಾ ಅನ್ನವಿಡುವ ಸಾಮರ್ಥ್ಯವಿಲ್ಲದಿದ್ದರೂ ದಾನಮಾಡುವವನನ್ನು ಅಥವಾ ಅನ್ನವಿಡುವವನನ್ನು ಸೂಚಿಸಿದರೆ ಅದ ರಿಂದಲೂ ಮಹತ್ತರವಾದ ಪುಣ್ಯವು ಲಭಿಸುತ್ತದೆ. ದಾರಿನಡೆದು ದಣಿದ ಯಾತ್ರಿಕನೊಬ್ಬನು ಬಂದು–“ಈ ಊರಿನಲ್ಲಿ ಯಾರ ಮನೆಯಲ್ಲಾದರೂ ಊಟಮಾಡಲೂ ಅನ್ನವೂ, ವಿಶ್ರಾಂತಿಪಡೆಯಲು ಸ್ಥಳವೂ ಸಿಕ್ಕುವುದೇ?” ಎಂದು ಕೇಳಿದಾಗ–ಯಾತ್ರಿಕನಿಗೆ ಅನ್ನವಿಡುವ ಧಾರ್ಮಿಕನ ಹೆಸರನ್ನು ಹೇಳಿ ಅವನ ಮನೆಯನ್ನು ತೋರಿಸಿಕೊಟ್ಟರೆ–ಅವನಿಗೂ ಸಹ ಹಸಿದುಬಂದವನಿಗೆ ಅನ್ನವಿಟ್ಟಷ್ಟೇ ಪುಣ್ಯವು ಲಭಿಸುತ್ತದೆ. ಆದುದರಿಂದ ಕಷ್ಟದಲ್ಲಿರುವವನಿಗೆ ಸ್ವತಃ ಉಪಕರಿಸಲು ಸಾಮರ್ಥ್ಯವಿಲ್ಲದಿದ್ದರೂ ಉಪಕರಿಸಲು ಸಮರ್ಥರಾದವ ರನ್ನು ತೋರಿಸಿಕೊಟ್ಟಾದರೂ ಸಹಾಯಮಾಡಬೇಕು.

**ತಸ್ಮಾತ್ತ್ವಂ ಸರ್ವದಾನಾನಿ ಹಿತ್ವಾನ್ನಂ ಸಮ್ಪ್ರಯಚ್ಛ ಹ ।**
**ನ ಹೀದೃಶಂ ಪುಣ್ಯಫಲಂ ವಿಚಿತ್ರಮಿಹ ವಿದ್ಯತೇ ॥೩೫॥**

ಯುಧಿಷ್ಠಿರ! ಅನ್ನದಾನವೆಂಬುದು ಎಲ್ಲ ದಾನಗಳಿಗಿಂತಲೂ ಶ್ರೇಷ್ಠ ವಾದುದು. ಆದುದರಿಂದ ನೀನು ಮತ್ತಾವ ದಾನವನ್ನು ಮಾಡದಿದ್ದರೂ ಚಿಂತೆಯಿಲ್ಲ. ಹಸಿದು ಬಂದವರಿಗೆ ಅನ್ನವನ್ನು ದಾನಮಾಡುವುದನ್ನು ಮಾತ್ರ ತಪ್ಪಿಸಬೇಡ.

**ಯಥಾಶಕ್ತಿ ಚ ಯೋ ದದ್ಯಾದನ್ನಂ ವಿಪ್ರೇಷು ಸಂಸ್ಕೃತಮ್ ।**
**ಸ ತೇನ ಕರ್ಮಣಾಪ್ನೋತಿ ಪ್ರಜಾಪತಿಸಲೋಕತಾಮ್ ॥೩೬॥**

ಯಾವನು ಹಸಿದು ಬಂದ ಬ್ರಾಹ್ಮಣನಿಗೆ ಸುಸಂಸ್ಕೃತವಾದ ಅನ್ನವನ್ನು ಯಥಾಶಕ್ತಿ ಉಣಬಡಿಸುತ್ತಾನೆಯೋ–ಅವನು ಆ ಅನ್ನದಾನದಿಂದ ಪ್ರಜಾ ಪತಿಗೆ ಸಮಾನವಾಗಿ ಅವಸಾನಾನಂತರದಲ್ಲಿ ಅವನ ಸಾನ್ನಿಧ್ಯವನ್ನೇ ಪಡೆಯುತ್ತಾನೆ.

**ಅನ್ನಮೇವ ವಿಶಿಷ್ಟಂ ಹಿ ತಸ್ಮಾತ್ಪರತರಂ ಚ ॥೩೭॥**

**ಅನ್ನಂ ಪ್ರಜಾಪತಿಶ್ಚೋಕ್ತಃ ಸ ಚ ಸಂವತ್ಸರೋ ಮತಃ ।**
**ಸಂವತ್ಸರಸ್ತು ಯಜ್ಞೋಽಸೌ ಸರ್ವಂ ಯಜ್ಞೇ ಪ್ರತಿಷ್ಠಿತಮ್ ॥೩೮॥**

**ತಸ್ಮಾತ್ಸರ್ವಾಣಿ ಭೂತಾನಿ ಸ್ಥಾವರಾಣಿ ಚರಾಣಿ ಚ ।**
**ತಸ್ಮಾದನ್ನಂ ವಿಶಿಷ್ಟಂ ಹಿ ಸರ್ವೇಭ್ಯ ಇತಿ ವಿಶ್ರುತಮ್ ॥೩೯॥**

ಅನ್ನವೇ ಸರ್ವೋತ್ಕೃಷ್ಟವಾದುದು. ಅನ್ನಕ್ಕಿಂತಲೂ ಮಿಗಿಲಾದ ವಸ್ತುವೇ ಮತ್ತೊಂದಿರುವುದಿಲ್ಲ. **ಅನ್ನಂ ಪ್ರಜಾಪತಿಃ । ಪ್ರಜಾಪತಿಃ ಸಂವತ್ಸರಃ । ಸಂವತ್ಸರೋ ವೈಶ್ವದೇವಃ । ವೈಶ್ವದೇವ್ಯೋ ವೈ ಪ್ರಜಾಃ ।** ಎಂಬ ಶ್ರುತಿವಚನದಂತೆ ಅನ್ನವೇ ಪ್ರಜಾಪತಿಬ್ರಹ್ಮನು. ಪ್ರಜಾಪತಿಬ್ರಹ್ಮನೇ ಸಂವತ್ಸರವು. ಸಂವತ್ಸರವೇ ವೈಶ್ವದೇವವೆಂಬ ಯಜ್ಞವು. ವೈಶ್ವದೇವಯಜ್ಞದಿಂದಲೇ ಪ್ರಜೋತ್ಪತ್ತಿ.

ಆದುದರಿಂದ, ಯುಧಿಷ್ಠಿರ! ಸಕಲಚರಾಚರಗಳ ಸೃಷ್ಟಿ-ಸ್ಥಿತಿ-ಲಯ ಗಳಿಗೂ ಕಾರಣವಾದ ಅನ್ನವೇ ಪರಮಶ್ರೇಷ್ಠವಾದುದು.

**ಯೇಷಾಂ ತಟಾಕಾನಿ ಮಹೋದಕಾನಿ**
**ವಾಪ್ಯಶ್ಚ ಕೂಪಾಶ್ಚ ಪ್ರತಿಶ್ರಯಾಶ್ಚ ।**
**ಅನ್ನಸ್ಯ ದಾನಂ ಮಧುರಾ ಚ ವಾಣೀ ।**
**ಯಮಸ್ಯ ತೇ ನಿರ್ವ ಚನಾ ಭವನ್ತಿ ॥೪೦॥**

ದಾರಿಹೋಕರ ಬಾಯಾರಿಕೆಯ ಪರಿಹಾರಕ್ಕಾಗಿ ಸರೋವರಗಳನ್ನು ಕಟ್ಟಿಸುವವರೂ, ಬಾವಿಗಳನ್ನು ತೋಡಿಸುವವರೂ, ಯಾತ್ರಿಕರ ಶ್ರಮಪರಿ ಹಾರಕ್ಕಾಗಿ ತಂಗಲು ಮಂಟಪಾದಿಗಳನ್ನು ಕಟ್ಟಿಸುವವರೂ, ಹಸಿದುಬಂದವ ರಿಗೆ ಅನ್ನವಿಟ್ಟು ಉಪಚರಿಸುವವರೂ, ದುಃಖದಲ್ಲಿದ್ದವರನ್ನು ಸವಿಮಾತು

ಗಳಿಂದ ಸಂತೈಸುವವರೂ (ಪ್ರಿಯಭಾಷಿಗಳಾಗಿರುವವರೂ)–ಅವಸಾನಾ ನಂತರದಲ್ಲಿ ಯಮನಿಂದ ಯಾವ ವಿಧವಾದ ನಿಷ್ಠುರದ ಮಾತುಗಳನ್ನೂ ಕೇಳಬೇಕಾಗುವುದಿಲ್ಲ.

**ಧಾನ್ಯಂ ಶ್ರಮೇಣಾರ್ಜಿತವಿತ್ತಸಂಚಿತಂ**
**ವಿಪ್ರೇ ಸುಶೀಲೇ ಚ ಪ್ರಯಚ್ಛತೇ ಯಃ ।**
**ವಸುನ್ಧರಾ ತಸ್ಯ ಭವೇತ್ಸುತುಷ್ಟಾ**
**ಧಾರಾಂ ವಸೂನಾಂ ಪ್ರತಿಮುಞ್ಚತೀವ ॥೪೧॥**

ಯಾವನು ಸುಶೀಲನಾದ ಬ್ರಾಹ್ಮಣನಿಗೆ ತಾನು ಕಷ್ಟಪಟ್ಟು ಗಳಿಸಿದ ದ್ರವ್ಯದಿಂದ ಸಂಪಾದಿಸಿದ ಧಾನ್ಯವನ್ನು ಕೊಡುತ್ತಾನೆಯೋ–ಅವನ ವಿಷಯ ದಲ್ಲಿ ಭೂದೇವಿಯು ಸುಪ್ರೀತಳಾಗಿ ಐಶ್ವರ್ಯದ ಹೊಳೆಯನ್ನೇ ಹರಿಸುತ್ತಾಳೆ.

**ಅನ್ನದಾಃ ಪ್ರಥಮಂ ಯಾನ್ತಿ ಸತ್ಯವಾಕ್ತದನನ್ತರಮ್ ।**
**ಅಯಾಚಿತಪ್ರದಾತಾ ಚ ಸಮಂ ಯಾನ್ತಿ ತ್ರಯೋ ಜನಾಃ ॥೪೨॥**

ಯುಧಿಷ್ಠಿರ! ಅನ್ನದಾನಿಗಳು ಮೊದಲು ಉತ್ತಮಲೋಕವನ್ನು ಪಡೆ ಯುತ್ತಾರೆ. ಸತ್ಯವಾದಿಗಳು ಎರಡನೆಯವರಾಗುತ್ತಾರೆ. ಅಯಾಚಿತರಿಗೆ (ಯಾಚನೆಮಾಡದೇ ಇರುವವರಿಗೆ) ದಾನಮಾಡುವವರು ಮೂರನೆಯವ ರಾಗುತ್ತಾರೆ. ಆದರೆ ಆ ಮೂವರೂ ಒಂದೇ ಸ್ಥಳವನ್ನು ಸೇರಿ ಒಂದೇ ವಿಧವಾದ ಸ್ವರ್ಗಸುಖಕ್ಕೆ ಭಾಗಿಗಳಾಗುತ್ತಾರೆ.”

ಜನಮೇಜಯ! ಯುಧಿಷ್ಠಿರನಿಗೆ ಮಾರ್ಕಂಡೇಯರ ಪ್ರವಚನವನ್ನು ಕೇಳುತ್ತಿದ್ದಂತೆಲ್ಲಾ ಮತ್ತೂ ಕೇಳಬೇಕೆಂಬ ಆಸೆಯು ಹುಟ್ಟುತ್ತಿದ್ದಿತೇ ಹೊರತು ಸಾಕೆಂಬ ತೃಪ್ತಿಯೇ ಉಂಟಾಗುತ್ತಿರಲಿಲ್ಲ. ಸಾನುಜನಾದ ಧರ್ಮ ಜನು ಪುನಃ ಮಾರ್ಕಂಡೇಯರನ್ನು ಕೇಳಿದನು : “ಮಹರ್ಷಿಗಳೇ! ಯಮ ಲೋಕಕ್ಕೂ–ಇಲ್ಲಿಗೂ ಎಷ್ಟು ಅಂತರವಿದೆ? ಯಮಲೋಕದ ವಿಸ್ತಾರ ವೆಷ್ಟು? ಮಾನವರು ಯುಮಲೋಕವನ್ನು ದಾಟಿ ಮುಂದೆ ಹೋಗಬೇಕಾ ದರೆ ಮಾಡಬೇಕಾದ ಕಾರ್ಯಗಳೇನು? ಯಾವ ವಿಧವಾದ ಉಪಾಯದಿಂದ ಯಮಲೋಕವನ್ನು ದಾಟಿ ಮುಂದೆ ಹೋಗಲು ಸಾಧ್ಯವಾಗುವುದು?–ಈ ಎಲ್ಲ ವಿಷಯಗಳನ್ನೂ ದಯಮಾಡಿ ಹೇಳಿರಿ.”

"ಯುಧಿಷ್ಠಿರ! ನೀನು ಕೇಳಿರುವ ಈ ಪ್ರಶ್ನೆಯು ಬಹಳ ನಿಗೂಢವಾದುದು ; ಪವಿತ್ರತಮವಾದುದು ಮತ್ತು ಋಷಿ-ಮಹರ್ಷಿಗಳಿಂದ ಶ್ಲಾಘಿಸಲ್ಪಡತಕ್ಕುದೂ ಆಗಿರುವುದು. ಧಾರ್ಮಿಕರಲ್ಲಿ ಪರಮಶ್ರೇಷ್ಠನಾಗಿರುವ ನಿನಗೆ ಈ ನಿಗೂಢವಿಷಯವನ್ನೂ ಸವಿಸ್ತರವಾಗಿ ಹೇಳುವೆನು :

**ಷಡಸೀತಿಸಹಸ್ರಾಣಿ ಯೋಜನಾನಾಂ ನರಾಧಿಪ ।**
**ಯಮಲೋಕಸ್ಯ ಚಾಧ್ವಾನಮನ್ತರಂ ಮಾನುಷಸ್ಯ ಚ ॥೪೬॥**

**ಆಕಾಶಂ ತದಪಾನೀಯಂ ಘೋರಂ ಕಾನ್ತಾರದರ್ಶನಮ್ ।**
**ನ ತತ್ರ ವೃಕ್ಷಚ್ಛಾಯಾ ವಾ ಪಾನೀಯಂ ಕೇತನಾನಿ ಚ ।**
**ವಿಶ್ರಮೇದ್ಯತ್ರ ವೈ ಶ್ರಾನ್ತಃ ಪುರುಷೋಽಧ್ವನಿ ಕರ್ಶಿತಃ ॥೪೭॥**

ಮನುಷ್ಯಲೋಕದಿಂದ ಯಮಲೋಕಕ್ಕೆ ಸುಮಾರು ಎಂಭತ್ತಾರುಸಾವಿರ ಯೋಜನಗಳ ಅಂತರವಿದೆ. ಆ ಲೋಕಕ್ಕೆ ಹೋಗಲು ಆಕಾಶವೇ ಹಾದಿ. ನೀರು-ನೆರಳುಗಳಿಲ್ಲದೇ ಬಹುಭಯಂಕರವಾಗಿ ಕಾಣುವ ಆಕಾಶಮಾರ್ಗದಿಂದಲೇ ಯಮಲೋಕಕ್ಕೆ ಪ್ರಯಾಣಮಾಡಬೇಕು. ಸುದೀರ್ಘವಾದ ಆ ಮಾರ್ಗದಲ್ಲಿ ಒಂದೆಡೆಯಲ್ಲಾದರೂ ವಿಶ್ರಮಿಸಿಕೊಳ್ಳಲು ಮರದ ನೆರಳಾಗಲೀ, ಕುಡಿಯಲು ನೀರಾಗಲೀ, ಕುಳಿತುಕೊಳ್ಳಲು ಮನೆಗಳಾಗಲೀ ಇರುವುದಿಲ್ಲ.

**ನೀಯತೇ ಯಮದೂತೈಸ್ತು ಯಮಸ್ಯಾಜ್ಞಾಕರೈರ್ಬಲಾತ್ ।**
**ನರಾಃ ಸ್ತ್ರಿಯಸ್ತಥೈವಾನ್ಯೇ ಪೃಥಿವ್ಯಾಂ ಜೀವಸಂಜ್ಞಿತಾಃ ॥೪೮॥**

ಯಮನ ಆಜ್ಞಾಧಾರಕರಾದ ಯಮದೂತರಿಂದ ಪುರುಷರೂ, ಸ್ತ್ರೀಯರೂ ಮತ್ತು ಈ ಭೂಮಿಯಲ್ಲಿ ಜೀವಿ ಎಂಬ ಸಂಜ್ಞೆಯನ್ನು ಪಡೆದಿರುವ ಸಕಲಪ್ರಾಣಿಗಳೂ ಆಯುಷ್ಯವು ತೀರಿದ ಬಳಿಕ ಆ ಮಾರ್ಗದಲ್ಲಿಯೇ ಒಯ್ಯಲ್ಪಡುತ್ತಾರೆ. ಆದರೆ ಭೂಮಿಯಲ್ಲಿ ಜೀವಿಸಿದ್ದಾಗ ಮಾನವರು ದಾನ-ಧರ್ಮಗಳನ್ನೇನಾದರೂ ಮಾಡಿದ್ದರೆ ಆ ದಾನ-ಧರ್ಮಗಳ ಫಲಗಳು ಅವರನ್ನು ಯಮಲೋಕಕ್ಕೆ ಸುಖವಾಗಿ ತಲುಪಿಸಲು ಅನುಕೂಲಮಾಡಿಕೊಡುತ್ತವೆ.

**ಬ್ರಾಹ್ಮಣೇಭ್ಯಃ ಪ್ರದಾನಾನಿ ನಾನಾರೂಪಾಣಿ ಪಾರ್ಥಿವ ॥೪೯॥**

**ಹಯಾದೀನಾಂ ಪ್ರಕೃಷ್ಟಾನೀ ತೇಽಧ್ವಾನಂ ಯಾನ್ತಿ ವೈ ನರಾಃ ।**
**ಸಂನಿವಾರ್ಯಾತಪಂ ಯಾನ್ತಿ ಛತ್ರೇಣೈವ ಹಿ ಛತ್ರದಾಃ ॥೫೦॥**

ಮಾನವರೇನಾದರೂ ತಮ್ಮ ಜೀವಿತಕಾಲದಲ್ಲಿ ಶ್ರೋತ್ರಿಯನಾದ ಬ್ರಾಹ್ಮಣನಿಗೆ ಕುದುರೆಯನ್ನೋ ಅಥವಾ ಬೇರಾವುದಾದರೂ ಯಾನವನ್ನೋ ದಾನಮಾಡಿದ್ದರೆ–ಮರಣಾನಂತರದಲ್ಲಿ ಯಮಲೋಕಕ್ಕೆ ಹೋಗುವಾಗ ಅವರು ದಾನಮಾಡಿದ ಫಲವೇ ಯಾನರೂಪದಲ್ಲಿ ಅವರ ಬಳಿಗೆ ಬಂದು ಅವರನ್ನು ಬಹುಸುಲಭವಾಗಿ ಕರೆದೊಯ್ಯುತ್ತದೆ. ತಮ್ಮ ಜೀವಿತಕಾಲದಲ್ಲಿ ಛತ್ರಿಯನ್ನು ದಾನಮಾಡಿದ್ದರೆ ಯಮಲೋಕಮಾರ್ಗದಲ್ಲಿ ಅದರ ಫಲವೇ ಛತ್ರಿಯ ರೂಪದಲ್ಲಿ ಬಂದು ಸೂರ್ಯನ ತಾಪವನ್ನು ನಿವಾರಣೆಮಾಡುತ್ತದೆ.

**ತೃಪ್ತಾಶ್ಚೈವಾನ್ನದಾತಾರೋ ಹ್ಯತೃಪ್ತಾಶ್ಚಾಪ್ಯನನ್ನದಾಃ ।**
**ವಸ್ತ್ರಿಣೋ ವಸ್ತ್ರದಾ ಯಾನ್ತಿ ಅವಸ್ತ್ರಾ ಯಾನ್ತ್ಯವಸ್ತ್ರದಾಃ ॥೫೧॥**

ಯಾರು ಅನ್ನದಾನವನ್ನು ಮಾಡಿರುವರೋ ಅವರಿಗೆ ಆ ಹಾದಿಯಲ್ಲಿ ಪ್ರಯಾಣಮಾಡುವಾಗ ಹಸಿವೇ ಉಂಟಾಗುವುದಿಲ್ಲ. ಅನ್ನದಾನಮಾಡದವರು ಹಸಿವಿನಿಂದ ಬೆಂದು-ಬೇಸತ್ತು ಸಂಕಟಪಡುತ್ತಿರುತ್ತಾರೆ. ವಸ್ತ್ರದಾನವನ್ನು ಮಾಡಿದ್ದವರು ಉಡುಪನ್ನು ಧರಿಸಿದವರಾಗಿ ಪ್ರಯಾಣಮಾಡುತ್ತಾರೆ. ವಸ್ತ್ರದಾನಮಾಡದವರು ನಗ್ನರಾಗಿಯೇ ಪ್ರಯಾಣಮಾಡಬೇಕಾಗುತ್ತದೆ.

**ಹಿರಣ್ಯದಾಃ ಸುಖಂ ಯಾನ್ತಿ ಪುರುಷಾಸ್ತ್ವಭ್ಯಲಂಕೃತಾಃ ।**
**ಭೂಮಿದಾಸ್ತು ಸುಖಂ ಯಾನ್ತಿ ಸರ್ವೈಃ ಕಾಮೈಃ ಸುತರ್ಪಿತಾಃ ॥೫೨॥**

ಸುವರ್ಣದಾನವನ್ನು ಮಾಡಿದವರು ದಿವ್ಯಾಭರಣಗಳನ್ನು ಧರಿಸಿದವರಾಗಿ ಪ್ರಯಾಣಮಾಡುತ್ತಾರೆ. ಭೂದಾನಮಾಡಿದವರು ತಾವು ಅಪೇಕ್ಷಿಸಿದ ಎಲ್ಲ ವಸ್ತುಗಳನ್ನೂ ಮಾರ್ಗದಲ್ಲಿ ಪಡೆದುಕೊಳ್ಳುತ್ತಾ ಸುಖದಿಂದ ಪ್ರಯಾಣ ಮಾಡುತ್ತಾರೆ.

**ಯಾನ್ತಿ ಚೈವಾಪರಿಕ್ಲಿಷ್ಟಾ ನರಾಃ ಸಸ್ಯಪ್ರದಾಯಕಾಃ ।**
**ನರಾಃ ಸುಖತರಂ ಯಾನ್ತಿ ವಿಮಾನೇಷು ಗೃಹಪ್ರದಾಃ ॥೫೩॥**

ಧಾನ್ಯಗಳನ್ನು ದಾನಮಾಡಿದವರು ಯಾವ ವಿಧವಾದ ಕಷ್ಟಕ್ಕೂ ಒಳಗಾಗದೇ ಪ್ರಯಾಣಮಾಡುತ್ತಾರೆ. ಗೃಹದಾನಮಾಡಿದವರನ್ನು ಒಯ್ಯಲು ದಿವ್ಯವಾದ ವಿಮಾನವೇ ಆಗಮಿಸುತ್ತದೆ.

ಪಾನೀಯದಾ ಹ್ಯತೃಷಿತಾಃ ಪ್ರಹೃಷ್ಟಮನಸೋ ನರಾಃ ।
ಪನ್ಥಾನಂ ದ್ಯೋತಯನ್ತಶ್ಚ ಯಾನ್ತಿ ದೀಪಪ್ರದಾಃ ಸುಖಮ್ ॥೫೪॥

ಬೇಸಿಗೆಯ ಕಾಲದಲ್ಲಿ ಬಾಯಾರಿದವರಿಗೆ ನೀರುಕೊಟ್ಟವರು ಮರಣಾನಂತರದಲ್ಲಿ ಬಾಯಾರಿಕೆ ಇಲ್ಲದವರಾಗುತ್ತಾರೆ. ದೀಪದಾನಮಾಡಿದವರ ಮುಂದೆ ಜ್ಯೋತಿಯೇ ಬಂದು ಮಾರ್ಗವನ್ನು ತೋರಿಸಿ ಮಾರ್ಗವನ್ನು ಪ್ರಕಾಶಮಯವನ್ನಾಗಿ ಮಾಡುತ್ತದೆ.

ಗೋಪ್ರದಾಸ್ತು ಸುಖಂ ಯಾನ್ತಿ ನಿರ್ಮುಕ್ತಾಃ ಸರ್ವಪಾತಕೈಃ ।
ವಿಮಾನೈರ್ಹಂಸಸಂಯುಕ್ತೈರ್ಯಾನ್ತಿ ಮಾಸೋಪವಾಸಿನಃ ॥೫೫॥

ಗೋದಾನಮಾಡಿದವರು ತಮ್ಮ ಪಾಪಗಳೆಲ್ಲವನ್ನೂ ಸಂಪೂರ್ಣವಾಗಿ ಕಳೆದುಕೊಂಡು ದುರ್ಗಮವಾದ ಆ ಹಾದಿಯಲ್ಲಿ ಪರಮಸಂತೋಷದಿಂದ ಪ್ರಯಾಣಮಾಡುತ್ತಾರೆ. ಯುಧಿಷ್ಠಿರ! ಉಪವಾಸವ್ರತವೆಂಬುದು ಮನುಷ್ಯನಿಗೆ ಅತ್ಯದ್ಭುತಫಲವನ್ನು ನೀಡುತ್ತದೆ. ಒಂದು ತಿಂಗಳಕಾಲ ಉಪವಾಸವನ್ನಾಚರಿಸಿದವರು ರಾಜಹಂಸಗಳಿಂದ ಎಳೆಯಲ್ಪಡುವ ಶೋಭಾಯಮಾನವಾದ ವಿಮಾನಗಳಲ್ಲಿ ಕುಳಿತು ಪ್ರಯಾಣಮಾಡುತ್ತಾರೆ.

ತಥಾ ಬರ್ಹಿಪ್ರಯುಕ್ತೈಶ್ಚ ಷಷ್ಠರಾತ್ರೋಪವಾಸಿನಃ ।
ತ್ರಿರಾತ್ರಂ ಕ್ಷಪತೇ ಯಸ್ತು ಏಕಭುಕ್ತೇನ ಪಾಣ್ಡವ ।
ಅನ್ತರಾ ಚೈವ ನಾಶ್ನಾತಿ ತಸ್ಯ ಲೋಕಾ ಹ್ಯನಾಮಯಾಃ ॥೫೬॥

ಆರು ರಾತ್ರಿಗಳ ಪರ್ಯಂತವಾಗಿ ಉಪವಾಸಮಾಡಿದವರು ನವಿಲುಗಳಿಂದ ಎಳೆಯಲ್ಪಡುವ ವಿಮಾನದಲ್ಲಿ ಕುಳಿತು ಪ್ರಯಾಣಮಾಡುತ್ತಾರೆ. ಮೂರು ದಿನಗಳಿಗೊಮ್ಮೆ ಒಪ್ಪೊತ್ತು ಊಟಮಾಡುತ್ತಾ ಉಪವಾಸವ್ರತವನ್ನಾಚರಿಸುವವರು ಯಾವ ವಿಧವಾದ ರೋಗ-ರುಜಿನಾದಿ ಬಾಧೆಗಳೂ ಇಲ್ಲದಿರುವ ಉತ್ತಮಲೋಕವನ್ನು ಪಡೆಯುತ್ತಾರೆ.

ಪಾನೀಯಸ್ಯ ಗುಣಾ ದಿವ್ಯಾಃ ಪ್ರೇತಲೋಕಸುಖಾವಹಾಃ ॥೫೭॥

ತತ್ರ ಪುಷ್ಪೋದಕಾ ನಾಮ ನದೀ ತೇಷಾಂ ವಿಧೀಯತೇ ।
ಶೀತಲಂ ಸಲಿಲಂ ತತ್ರ ಪಿಬನ್ತಿ ಹ್ಯಮೃತೋಪಮಮ್ ॥೫೮॥

ಯುಧಿಷ್ಠಿರ! ಬಿಸಿಲುಹೊತ್ತಿನಲ್ಲಿ ಬಾಯಾರಿ ಬಂದವರಿಗೆ ನೀರು ಕೊಟ್ಟವನ ಸುಕೃತವು ಅಗಾಧವಾದುದು. ಕುಡಿಯಲು ನೀರುಕೊಟ್ಟು ಉಪಕರಿಸಿದವನಿಗೆ ಯಮಲೋಕದಲ್ಲಿಯೂ ಆ ಪಾನೀಯಗಳೇ ಸುಖವನ್ನುಂಟುಮಾಡುತ್ತವೆ. ಆ ಪಾನೀಯಗಳೇ ಯಮಲೋಕಮಾರ್ಗದಲ್ಲಿ 'ಪುಷ್ಪೋದಕ' ಎಂಬ ಹೆಸರಿನ ನದಿಯಾಗಿ ಪಾನೀಯದಾತೃವಿಗೆ ಸುಖವನ್ನುಂಟುಮಾಡುತ್ತವೆ. ಪಾನೀಯವನ್ನು ದಾರಿಹೋಕನಿಗೆ ಕೊಟ್ಟು ತೃಪ್ತಿ ಪಡಿಸಿದ ಮಾನವರು ಅಮೃತೋಪಮವಾದ ಮತ್ತು ಶೀತಲವಾದ ಪುಷ್ಪೋದಕ ನದಿಯ ನೀರನ್ನು ಕುಡಿದು ತಮ್ಮ ಆಯಾಸವನ್ನು ಪರಿಹಾರ ಮಾಡಿಕೊಳ್ಳುತ್ತಾರೆ.

**ಯೇ ಚ ದುಷ್ಕೃತಕರ್ಮಾಣಃ ಪೂಯಂ ತೇಷಾಂ ವಿಧೀಯತೇ ।**
**ಏವಂ ನದೀ ಮಹಾರಾಜ ಸರ್ವಕಾಮಪ್ರದಾ ಹಿ ಸಾ ॥೫೯॥**

ಯಾವ ವಿಧವಾದ ದಾನ-ಧರ್ಮಗಳನ್ನೂ ಮಾಡದೇ ಪಾಪಾತ್ಮರಾಗಿ ಸಾಯುವವರು ಯಮಲೋಕದ ಹಾದಿಯಲ್ಲಿ ಬಾಯಾರಿದಾಗ ನೀರು ಕುಡಿಯಲು ಯತ್ನಿಸಿದರೆ–ಆ ಪುಷ್ಪೋದಕನದಿಯೇ ಅವರಿಗೆ ಕೀವಿನ ನದಿಯಾಗಿ ಪರಿಣಮಿಸುತ್ತದೆ. ಈ ರೀತಿಯಲ್ಲಿ ಆ ನದಿಯು ಪುಣ್ಯಾತ್ಮರಿಗೆ ಶುದ್ಧೋದಕವನ್ನೂ–ಪಾಪಾತ್ಮರಿಗೆ ಕೀವು-ರಕ್ತ ಮೊದಲಾದುವುಗಳನ್ನೂ ಕೊಡುವ ಬಹು ವಿಚಿತ್ರಗುಣವುಳ್ಳ ನದಿಯಾಗಿರುತ್ತದೆ.

**ತಸ್ಮಾತ್ತ್ವಮಪಿ ರಾಜೇನ್ದ್ರ ಪೂಜಯೈನಾನ್ಯಥಾವಿಧಿ ॥೬೦॥**

ಯುಧಿಷ್ಠಿರ! ಆದುದರಿಂದ, ನೀನೂ ಸಹ ನಿನ್ನೊಡನೆ ಆಗಮಿಸಿರುವ ಈ ಬ್ರಾಹ್ಮಣರನ್ನು ಯಥೋಚಿತವಾಗಿ ಉಪಚರಿಸು.

**ಅಧ್ವನಿ ಕ್ಷೀಣಗಾತ್ರಶ್ಚ ಪಥಿ ಪಾಂಸುಸಮನ್ವಿತಃ ।**
**ಪೃಚ್ಛತೇ ಹ್ಯನ್ನದಾತಾರಂ ಗೃಹಮಾಯಾತಿ ಚಾಶಯಾ ।**
**ತಂ ಪೂಜಯಾಥ ಯತ್ನೇನ ಸೋಽತಿಥಿರ್ಬ್ರಾಹ್ಮಣಶ್ಚ ಸಃ ॥೬೧॥**

ಹಾದಿಯನ್ನು ನಡೆದು ಬಳಲಿ-ಬೆಂಡಾದ ಯಾತ್ರಿಕನು ಧೂಳಿನಿಂದ ಧೂಸರಿತನಾಗಿ ಕಣ್ಣಿಗೆ ಕಂಡವರನ್ನು–'ಈ ಸ್ಥಳದಲ್ಲಿ ಯಾತ್ರಿಕರನ್ನು ಉಪ

ಚರಿಸುವವರು ಇದ್ದಾರೆಯೇ?'–ಎಂದು ಕುಗ್ಗಿದ ಧ್ವನಿಯಿಂದ ಕೇಳುತ್ತಲೇ ಹೋಗುತ್ತಾನೆ. ತಿಳಿದವರಾರಾದರೂ ನಿನ್ನ ಹೆಸರನ್ನು ಹೇಳಿ ಬಳಲಿದ ದಾರಿ ಹೋಕನನ್ನು ನಿನ್ನ ಬಳಿಗೆ ಕಳುಹಿಸಬಹುದು. ಅಂತಹವನನ್ನು ನೀನು ಪ್ರಯತ್ನಪೂರ್ವಕವಾಗಿ ಉಪಚರಿಸು. ಅವನೇ ಅತಿಥಿಯು. ಅವನೇ ಬ್ರಾಹ್ಮಣನು.

**ತಂ ಯಾನ್ತಮನುಗಚ್ಛನ್ತಿ ದೇವಾಃ ಸರ್ವೇ ಸವಾಸವಾಃ ।**
**ತಸ್ಮಿನ್ಸಮ್ಪೂಜಿತೇ ಪ್ರೀತಾ ನಿರಾಶಾ ಯಾನ್ತ್ಯಪೂಜಿತೇ ।**
**ತಸ್ಮಾತ್ತ್ವಮಪಿ ರಾಜೇನ್ದ್ರ ಪೂಜಯೈನಂ ಯಥಾವಿಧಿ ॥೬೨॥**

ದಾರಿನಡೆದು ಬಳಲಿ-ಬೆಂಡಾಗಿರುವ ಯಾತ್ರಿಕನನ್ನು ಅನುಸರಿಸಿ ಇಂದ್ರಪ್ರಮುಖರಾದ ದೇವತೆಗಳೇ ಬರುತ್ತಾರೆ. ಆ ಅತಿಥಿಯನ್ನು ಪೂಜಿಸಿ ಉಪಚರಿಸುವುದರಿಂದ ಇಂದ್ರಪ್ರಮುಖರಾದ ದೇವತೆಗಳೂ ತೃಪ್ತಿಹೊಂದುತ್ತಾರೆ. ಯಾವುದಾದರೂ ಕಾರಣದಿಂದ ಬಳಲಿ ಬಂದ ಅತಿಥಿಯನ್ನು ಅನ್ನ-ಪಾನಾದಿಗಳಿಂದ ಉಪಚರಿಸದಿದ್ದರೆ–ದೇವತೆಗಳೂ ಕೂಡ ಹತಾಶರಾಗಿ ಹಿಂದಿರುಗುತ್ತಾರೆ. ಆದುದರಿಂದ ನೀನೂ ಸಹ ಬಳಲಿ ಬಂದ ಅತಿಥಿಯನ್ನು ಯಥಾವಿಧಿಯಾಗಿ ಪೂಜಿಸುವವನಾಗು.

ಧರ್ಮಜ! ಮೇಲೆ ಹೇಳಿದಂತಹ ಧರ್ಮಪ್ರದವಾದ ನೂರಾರು ವಿಷಯಗಳನ್ನು ನಿನಗೆ ಉಪದೇಶಿಸಿರುವೆನು. ಮತ್ತೇನು ಹೇಳಲಿ?"

"ಮಹರ್ಷಿಗಳೇ! ನೀವು ಧರ್ಮಾತ್ಮರಾಗಿರುವಿರಿ. ಧರ್ಮಾಧರ್ಮಗಳ ಸೂಕ್ಷ್ಮವನ್ನೂ ತಿಳಿದವರಾಗಿರುವಿರಿ. ಇಂತಹ ವಿಷಯಗಳನ್ನು ಪದೇ ಪದೇ ಕೇಳಬೇಕೆಂದು ನನ್ನ ಮನಸ್ಸೂ ತವಕಿಸುತ್ತದೆ."

"ಆಗಲಿ, ಯುಧಿಷ್ಠಿರ! ಕೇಳುವವರು ಆಸಕ್ತಿಯಿಂದ ಕೇಳಿದರೆ ಪ್ರವಚನಗಳನ್ನು ಹೇಳುವವರಿಗೂ ಹೆಚ್ಚಿನ ಉತ್ಸಾಹವೇ ಇರುತ್ತದೆ. ಅಂತೆಯೇ ನಾನು ನಿನಗೀಗ ಸಕಲಪಾಪಗಳನ್ನೂ ದೂರಮಾಡುವ ಧರ್ಮಾಚರಣೆಯ ವಿಷಯವನ್ನು ಹೇಳುತ್ತೇನೆ. ಅವ್ಯಗ್ರವಾದ ಮನಸ್ಸಿನಿಂದ ಕೇಳು.

**ಕಪಿಲಾಯಾಂ ತು ದತ್ತಾಯಾಂ ಯತ್ಫಲಂ ಜ್ಯೇಷ್ಠ ಪುಷ್ಕರೇ ।**
**ತತ್ಫಲಂ ಭರತಶ್ರೇಷ್ಠ ವಿಪ್ರಾಣಾಂ ಪಾದಧಾವನೇ ॥೬೬॥**

ಪೂಜ್ಯರಾದ ಬ್ರಾಹ್ಮಣರ ಪಾದಗಳನ್ನು ತೊಳೆಯುವುದರಿಂದ ಕಪಿಲಾ ಧೇನುವನ್ನು ಪರ್ವಕಾಲದಲ್ಲಿ ಜ್ಯೇಷ್ಠಪುಷ್ಕರದಲ್ಲಿ ದಾನಮಾಡುವುದರಿಂದ ಪ್ರಾಪ್ತವಾಗುವ ಮಹಾಪುಣ್ಯವು ಲಭ್ಯವಾಗುತ್ತದೆ.

**ದ್ವಿಜಪಾದೋದಕಕ್ಲಿನ್ನಾ ಯಾವತ್ತಿಷ್ಠತಿ ಮೇದಿನೀ ।**
**ತಾವತ್ಪುಷ್ಕರಪರ್ಣೇನ ಪಿಬನ್ತಿ ಪಿತರೋ ಜಲಮ್ ॥೬೭॥**

ಬ್ರಾಹ್ಮಣನ ಕಾಲುಗಳನ್ನು ತೊಳೆದನಂತರ ಭೂಮಿಯ ಮೇಲಿರುವ ಆ ಪುಣ್ಯೋದಕವು ಎಷ್ಟು ಕಾಲದವರೆಗೆ ಒಣಗದೇ ಇರುತ್ತದೆಯೋ–ಅಷ್ಟು ಕಾಲದವರೆಗೂ ಬ್ರಾಹ್ಮಣನ ಕಾಲುಗಳನ್ನು ತೊಳೆದವನ ಪಿತೃಗಳು ಪದ್ಮ ಪತ್ರಗಳಿಂದ ಮಾಡಿದ ದೊನ್ನೆಗಳಲ್ಲಿ ನೀರನ್ನು ಕುಡಿಯುತ್ತಾ ಬಾಯಾರಿಕೆ ಯನ್ನು ನೀಗಿಕೊಳ್ಳುತ್ತಾರೆ.

**ಸ್ವಾಗತೇನಾಗ್ನಯಸ್ತೃಪ್ತಾ ಆಸನೇನ ಶತಕ್ರತುಃ ।**
**ಪಿತರಃ ಪಾದಶೌಚೇನ ಅನ್ನಾದ್ಯೇನ ಪ್ರಜಾಪತಿಃ ॥೬೮॥**

ಬಳಲಿ ಬಂದ ಬ್ರಾಹ್ಮಣನನ್ನು ಸವಿಮಾತುಗಳಿಂದ ಸ್ವಾಗತಿಸುವುದ ರಿಂದಲೇ ದಕ್ಷಿಣಾಗ್ನಿ-ಗಾರ್ಹಪತ್ಯ-ಆಹವನೀಯಗಳೆಂಬ ಮೂವರು ಅಗ್ನಿ ದೇವತೆಗಳೂ ತೃಪ್ತಿಹೊಂದುತ್ತಾರೆ. ಸುಸ್ವಾಗತವಿತ್ತು ಒಳಗೆ ಕರೆದು, ಅರ್ಘ್ಯ-ಪಾದ್ಯಾದಿಗಳನ್ನಿತ್ತು ಸತ್ಕರಿಸಿ, ಕುಳಿತುಕೊಳ್ಳಲು ಆಸನವನ್ನು ಕೊಡುವುದರಿಂದ ಇಂದ್ರನು ತೃಪ್ತಿ ಹೊಂದುತ್ತಾನೆ. ಅತಿಥಿಯ ಪಾದಪ್ರಕ್ಷಾ ಳನೆಯನ್ನು ಮಾಡುವುದರಿಂದ ಪಿತೃದೇವತೆಗಳು ತೃಪ್ತಿಹೊಂದುತ್ತಾರೆ. ಭೋಜನಮಾಡಿಸಿ ತೃಪ್ತಿಪಡಿಸುವುದರಿಂದ ಪ್ರಜಾಪತಿಯು ತೃಪ್ತಿಹೊಂದು ತ್ತಾನೆ.

ಯುಧಿಷ್ಠಿರ! ಗೋದಾನದಲ್ಲಿರುವ ಸೂಕ್ಷ್ಮರಹಸ್ಯವನ್ನು ಹೇಳುವೆನು. ಕೇಳು :

**ಯಾವದ್ವತ್ಸಸ್ಯ ವೈ ಪಾದೌ ಶಿರಶ್ಚೈವ ಪ್ರದೃಶ್ಯತೇ ।**
**ತಸ್ಮಿನ್ಕಾಲೇ ಪ್ರದಾತವ್ಯಾ ಪ್ರಯತೇನಾನ್ತರಾತ್ಮನಾ ॥೬೯॥**

ಹಸುವಿಗೆ ಪ್ರಸೂತಿಸಮಯವಾಗಿರಬೇಕು. ಕರುವಿನ ಎರಡು ಕಾಲು

ಗಳೂ ಮತ್ತು ತಲೆಯೂ ಗರ್ಭದಿಂದ ಹೊರಬಂದಿರಬೇಕು. ಅಂತಹ ಸಮಯದಲ್ಲಿ ಶ್ರೋತ್ರಿಯನಾದ, ವೇದ-ವೇದಾಂಗಪಾರಂಗತನಾದ ಬ್ರಾಹ್ಮಣನನ್ನು ಕರೆದು ಆ ಹಸುವನ್ನು ವಿಧಿಪೂರ್ವಕವಾಗಿ, ಪ್ರಯತ್ನಪೂರ್ವಕವಾಗಿ ಮತ್ತು ಹೃತ್ಪೂರ್ವಕವಾಗಿ ದಾನಮಾಡಬೇಕು.

**ಅನ್ತರಿಕ್ಷಗತೋ ವತ್ಸೋ ಯಾವದ್ಯೋನ್ಯಾಂ ಪ್ರದೃಶ್ಯತೇ ।**
**ತಾವದ್ಗೌ ಪೃಥಿವೀ ಜ್ಞೇಯಾ ಯಾವದ್ಗರ್ಭಂ ನ ಮುಞ್ಚತಿ ॥೭೦॥**

ಎಷ್ಟು ಹೊತ್ತಿನವರೆಗೆ ಎರಡು ಕಾಲುಗಳೂ ಮತ್ತು ತಲೆಯೂ ಮಾತ್ರವೇ ಹೊರಬಂದು ಕರುವಿನ ಉಳಿದ ಭಾಗವು ಗರ್ಭದಲ್ಲಿರುವುದೋ-ಅಷ್ಟುಹೊತ್ತಿನವರೆಗೂ ಆ ಹಸುವು ಭೂದೇವಿಯೆಂದೇ ಪರಿಗಣಿಸಲ್ಪಡುತ್ತದೆ. ಆದುದರಿಂದ ಆ ಸಮಯದಲ್ಲಿ ಹಸುವನ್ನು ದಾನಮಾಡುವುದರಿಂದ ಭೂದಾನಮಾಡಿದ ಮಹಾಪುಣ್ಯವು ಲಭ್ಯವಾಗುತ್ತದೆ.

**ಯಾವನ್ತಿ ತಸ್ಯಾ ರೋಮಾಣಿ ವತ್ಸಸ್ಯ ಚ ಯುಧಿಷ್ಠಿರ ।**
**ತಾವದ್ಯುಗಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥೭೧॥**

ಇಂತಹ ಹಸುವನ್ನು ದಾನಮಾಡಿದವನು-ಆ ಹಸುವಿನ ಮತ್ತು ಕರುವಿನ ಶರೀರಗಳಲ್ಲಿರುವ ರೋಮಗಳಷ್ಟು ಸಹಸ್ರಸಂಖ್ಯಾತವಾದ ಯುಗಗಳ ಪರ್ಯಂತವಾಗಿ ಸ್ವರ್ಗಲೋಕದಲ್ಲಿದ್ದು ಸ್ವರ್ಗಸುಖವನ್ನು ಅನುಭವಿಸುತ್ತಿರುತ್ತಾನೆ.

**ಸುವರ್ಣನಾಸಾಂ ಯಃ ಕೃತ್ವಾ ಸುಖುರಾಂ ಕೃಷ್ಣಧೇನುಕಾಮ್ ।**
**ತಿಲೈಃ ಪ್ರಚ್ಛಾದಿತಾಂ ದದ್ಯಾತ್ಸರ್ವರತ್ನೈರಲಂಕೃತಾಮ್ ॥೭೨॥**

**ಪ್ರತಿಗ್ರಹಂ ಗೃಹೀತ್ವಾ ಯುಃ ಪುನರ್ದದತಿ ಸಾಧವೇ ।**
**ಫಲಾನಾಂ ಫಲಮಶ್ನಾತಿ ತದಾ ದತ್ವಾ ಚ ಭಾರತ ॥೭೩॥**

**ಸಸಮುದ್ರಗುಹಾ ತೇನ ಸಶೈಲವನಕಾನನಾ ।**
**ಚತುರನ್ತಾ ಭವೇದ್ದತ್ತಾ ಪೃಥಿವೀ ನಾತ್ರ ಸಂಶಯಃ ॥೭೪॥**

ಚಿನ್ನದ ಮೂಗುದಾರವನ್ನು ಹಾಕಿರುವ, ಸುಲಕ್ಷಣವಾದ ಗೊರಸುಗಳಿಂದ ಕೂಡಿರುವ, ಸರ್ವರತ್ನಾಭರಣಗಳಿಂದ ವಿಭೂಷಿತವಾದ, ಎಳ್ಳಿನಿಂದ

ಆಚ್ಛಾದಿತವಾದ, ಕೃಷ್ಣವರ್ಣದ ಧೇನುವನ್ನು ದಾನವಾಗಿ ಪಡೆದು, ಪುನಃ ಅದೇ ಧೇನುವನ್ನೇ ಸತ್ಪುರುಷನೊಬ್ಬನಿಗೆ ದಾನವಾಗಿ ಕೊಡುವವನ ಪುಣ್ಯವು ಅಪಾರವಾದುದು. ಚತುಸ್ಸಾಗರಪರ್ಯಂತವಾದ, ಪರ್ವತ-ದುರ್ಗ-ಗಿರಿ-ಕಾನನಗಳಿಂದಲೂ ನದೀ-ನದ-ಸರೋವರಗಳಿಂದಲೂ ಕೂಡಿರುವ ಈ ಭೂಮಂಡಲವನ್ನೇ ದಾನವಾಗಿ ಕೊಟ್ಟ ಮಹಾಪುಣ್ಯವು ಅವನಿಗೆ ಲಭಿಸು ತ್ತದೆ.

**ಅನ್ತರ್ಜಾನುಶಯೋ ಯಸ್ತು ಭುಙ್ಕ್ತೇ ಸಂಸಕ್ತಭಾಜನಃ ।**
**ಯೋ ದ್ವಿಜಃ ಶಬ್ದರಹಿತಂ ಸ ಕ್ಷಮಸ್ತಾರಣಾಯ ವೈ ॥೭೫॥**

ಯುಧಿಷ್ಠಿರ! ಊಟಮಾಡುವುದರಲ್ಲಿಯೂ ಒಂದು ನಿಯಮವಿದೆ. ಎರಡು ಮಂಡಿಗಳ ನಡುವೆ ಕೈಗಳನ್ನಿಟ್ಟುಕೊಂಡು ಊಟಮಾಡಬೇಕು. ಭೋಜನಪರ್ಯಂತವೂ ಊಟಮಾಡುವ ಎಲೆಯನ್ನು ಎಡಗೈಯಲ್ಲಿ ಸ್ಪರ್ಶ ಮಾಡಿಕೊಂಡಿರಬೇಕು. ಊಟಕ್ಕೆ ಪ್ರಾಣಾಗ್ನಿಹೋತ್ರವೆಂದೇ ಹೆಸರು. ಊಟ ಮಾಡುವಾಗ ಮಾತನಾಡಬಾರದು. (ಸೊರ್-ಬರ್ ಎಂದು ಶಬ್ದಮಾಡಿ ಕೊಂಡು ಭೋಜನ ಮಾಡಬಾರದು.) ಈ ರೀತಿಯಲ್ಲಿ ನಿಯಮದಿಂದ ಭೋಜನಮಾಡುವವನು ತಾನೂ ಉದ್ಧಾರವಾಗುವುದಲ್ಲದೇ–ಇತರರನ್ನೂ ಉದ್ಧರಿಸಲು ಸಮರ್ಥನಾಗುತ್ತಾನೆ.

**ಅಪಾನಪಾ ನ ಗದಿತಾಸ್ತಥಾನ್ಯೇ ಯೇ ದ್ವಿಜಾತಯಃ ।**
**ಜಪನ್ತಿ ಸಂಹಿತಾಂ ಸಮ್ಯಕ್ತೇ ನಿತ್ಯಂ ತಾರಣಕ್ಷಣಾಃ ॥೭೬॥**

ಯಾವ ಬ್ರಾಹ್ಮಣನು ಅಪೇಯಪಾನಮಾಡುವುದಿಲ್ಲವೋ (ದೋಷ ಯುಕ್ತವಾದ ಪಾನೀಯಗಳನ್ನು ಕುಡಿಯುವುದಿಲ್ಲವೋ), ಇತರರಲ್ಲಿರುವ ದೋಷವನ್ನೆತ್ತಿ ಆಡುವುದಿಲ್ಲವೋ ಮತ್ತು ನಿತ್ಯವೂ ಸಂಹಿತಾಪಾರಾಯಣ ಮಾಡುತ್ತಿರುವನೋ–ಅಂತಹ ಬ್ರಾಹ್ಮಣನು ತಾನೂ ಉದ್ಧಾರವಾಗಿ ಇತರ ರನ್ನೂ ಉದ್ಧರಿಸಲು ಸಮರ್ಥನಾಗುತ್ತಾನೆ.

**ಹವ್ಯಂ ಕವ್ಯಂ ಚ ಯತ್ಕಿಂಚಿತ್ಸರ್ವಂ ತಚ್ಛ್ರೋತ್ರಿಯೋಽರ್ಹತಿ ।**
**ದತ್ತಂ ಹಿ ಶ್ರೋತ್ರಿಯೇ ಸಾಧೌ ಜ್ವಲಿತೇಽಗ್ನೌ ಯಥಾ ಹುತಮ್ ॥೭೭॥**

ಶ್ರೋತ್ರಿಯನಾದ, ವೇದ-ವೇದಾಂಗಪಾರಂಗತನಾದ ಬ್ರಾಹ್ಮಣನು

ಹವ್ಯ-ಕವ್ಯಗಳೆರಡರಲ್ಲೂ (ಯಜ್ಞ-ಶ್ರಾದ್ಧ) ಭಾಗಿಯಾಗಲು ಅರ್ಹನಾಗಿರುವನು. ಯಜ್ಞೇಶ್ವರನಲ್ಲಿ ಹೋಮಮಾಡಿದ ಆಜ್ಯವು ಯಾವ ರೀತಿಯಲ್ಲಿ ಸಫಲವಾಗುತ್ತದೆಯೋ–ಅದೇ ರೀತಿಯಲ್ಲಿ ಬ್ರಾಹ್ಮಣನಿಗೆ ಸಮರ್ಪಿಸಿದ ಭೋಜನಾದಿಗಳೂ ಪ್ರಯೋಜಕಗಳಾಗುತ್ತವೆ.

**ಮನ್ಯುಪ್ರಹರಣಾ ವಿಪ್ರಾ ನ ವಿಪ್ರಾ ಶಸ್ತ್ರಯೋಧಿನಃ ।**
**ನಿಹನ್ಯುರ್ಮನ್ಯುನಾ ವಿಪ್ರಾ ವಜ್ರಪಾಣಿರಿವಾಸುರಾನ್ ॥೭೮॥**

ಬ್ರಾಹ್ಮಣರಿಗೆ ಕೋಪವೆಂಬುದೇ ಆಯುಧವು. ಅವರು ಮತ್ತೊಬ್ಬರೊಡನೆ ಹೋರಾಡಲು ಬೇರಾವ ಕಬ್ಬಿಣದ ಅಥವಾ ಉಕ್ಕಿನ ಆಯುಧಗಳನ್ನೂ ಉಪಯೋಗಿಸಬೇಕಾಗಿಲ್ಲ. ಆದರೆ ಅವರ ಕೋಪಕ್ಕೆ ವಜ್ರಾಯುಧಕ್ಕಿರುವ ಶಕ್ತಿಯೇ ಇರುವುದು. ಇಂದ್ರನು ತನ್ನ ವಜ್ರಾಯುಧದಿಂದ ಅಸುರರನ್ನು ಸಂಹರಿಸಿದಂತೆ–ಬ್ರಾಹ್ಮಣರು ತಮ್ಮ ಕೋಪದಿಂದಲೇ ಪ್ರತಿರೋಧಿಗಳನ್ನು ನಿಗ್ರಹಿಸಬಲ್ಲರು.

**ಧರ್ಮಾಶ್ರಿತೇಯಂ ತು ಕಥಾ ಕಥಿತೇಯಂ ತವಾನಘ ।**
**ಯಾಂ ಶ್ರುತ್ವಾ ಮುನಯಃ ಪ್ರೀತಾ ನೈಮಿಷಾರಣ್ಯವಾಸಿನಃ ॥೭೯॥**

**ವೀತಶೋಕಭಯಕ್ರೋಧಾ ವಿಪಾಪ್ಮಾನಸ್ತಥೈವ ಚ ।**
**ಶ್ರುತ್ವೇಮಾಂ ತು ಕಥಾಂ ರಾಜನ್ನ ಭವನ್ತೀಹ ಮಾನವಾಃ ॥೮೦॥**

ಯುಧಿಷ್ಠಿರ! ಧರ್ಮಮೂಲವಾದ ಮತ್ತು ಪುಣ್ಯದಾಯಕವಾದ ಈ ದಿವ್ಯವಾದ ಪ್ರವಚನಗಳನ್ನು ಪಾಪರಹಿತರಾದ ನೈಮಿಷಾರಣ್ಯದ ಮಹರ್ಷಿಗಳೆಲ್ಲರೂ ಕೇಳಿ ಆನಂದಭರಿತರಾದರು. ಶ್ರವಣಮಾತ್ರವಲ್ಲ, ಶ್ರವಣದ ಪ್ರಯೋಜನವನ್ನೂ ಪಡೆದರು. ಈ ಪುಣ್ಯಕಥಾಶ್ರವಣದಿಂದ ಆ ಮಹರ್ಷಿಗಳೆಲ್ಲರೂ ಶೋಕರಹಿತರೂ, ಭಯರಹಿತರೂ, ಕ್ರೋಧರಹಿತರೂ, ಪಾಪರಹಿತರೂ ಆದರು. ಈ ಪ್ರವಚನವನ್ನು ಕೇಳುವ ಅಥವಾ ಓದುವ ಮಾನವರೂ ಪುನರಾವೃತ್ತಿರಹಿತವಾದ ಪುಣ್ಯಲೋಕಗಳನ್ನು ಸೇರುತ್ತಾರೆ.”

ಯುಧಿಷ್ಠಿರನು ಪುನಃ ಮಾರ್ಕಂಡೇಯರನ್ನು ಪ್ರಶ್ನಿಸಿದನು : “ಮಹರ್ಷಿಗಳೇ! ‘ಶೌಚ’ ಎಂದರೇನು? ಬ್ರಾಹ್ಮಣರು ಸರ್ವದಾ ಪೂತಾತ್ಮರಾಗಿರುವುದಕ್ಕೆ ಯಾವ ವಿಧವಾದ ಶುಚಿತ್ವವು ಕಾರಣವಾಗಿದೆ?

ಸರ್ವದಾ ಪೂತಾತ್ಮರಾಗಿರಲು ಅವರು ಮಾಡುವ ಅನುಷ್ಠಾನವಾದರೂ ಏನು? ದಯಮಾಡಿ ಹೇಳಿರಿ.”

ಯುಧಿಷ್ಠಿರ! ಮೂರು ವಿಧವಾದ ಶುದ್ಧಿಗಳಿವೆ.

**ವಾಕ್ಶೌಚಂ ಕರ್ಮಶೌಚಂ ಚ ಯಚ್ಚ ಶೌಚಂ ಜಲಾತ್ಮಕಮ್ ।**
**ತ್ರಿಭಿಃ ಶೌಚೈರುಪೇತೋ ಯಃ ಸ ಸ್ವರ್ಗೀ ನಾತ್ರ ಸಂಶಯಃ ॥೮೨॥**

ವಾಕ್ಶುದ್ಧಿ, ಕ್ರಿಯಾಶುದ್ಧಿ ಮತ್ತು ಜಲಶುದ್ಧಿ–ಈ ಮೂರು ಶುದ್ಧಿಗಳನ್ನೂ ಮಾಡಿಕೊಂಡಿರುವವನು ಖಂಡಿತವಾಗಿಯೂ ಸ್ವರ್ಗಗಾಮಿಯಾಗುವುದರಲ್ಲಿ ಸಂಶಯವೇ ಇಲ್ಲ.

**ಸಾಯಂ ಪ್ರಾತಶ್ಚ ಸಂಧ್ಯಾಂ ಯೋ ಬ್ರಾಹ್ಮಣೋಽಭ್ಯುಪಸೇವತೇ ।**
**ಪ್ರಜಪನ್ಪಾವನೀಂ ದೇವೀಂ ಗಾಯತ್ರೀಂ ವೇದಮಾತರಮ್ ॥೮೩॥**

**ಸ ತಯಾ ಪಾವಿತೋ ದೇವ್ಯಾ ಬ್ರಾಹ್ಮಣೋ ನಷ್ಟಕಿಲ್ಬಿಷಃ ।**
**ನ ಸೀದೇತ್ಪ್ರತಿಗೃಹ್ಣಾನೋ ಮಹೀಮಪಿ ಸಸಾಗರಾಮ್ ॥೮೪॥**

ಈ ಮೂರು ವಿಧವಾದ ಶುದ್ಧಿಗಳನ್ನೂ ಮಾಡಿಕೊಂಡು ಯಾವ ಬ್ರಾಹ್ಮಣನು ಸಾಯಂ-ಪ್ರಾತಃಸಂಧ್ಯಾಕಾಲಗಳಲ್ಲಿ ಪರಮಪಾವನೆಯಾದ, ವೇದಮಾತೆಯಾದ ಗಾಯತ್ರೀಮಂತ್ರವನ್ನು ಪುನಶ್ಚರಣೆಮಾಡುವನೋ, ಅವನು ಪೂತಾತ್ಮನೇ ಆಗುತ್ತಾನೆ. “**ನ ಗಾಯತ್ರ್ಯಾಃ ಪರೋ ಮನ್ತ್ರಃ**” ಗಾಯತ್ರೀಮಂತ್ರಕ್ಕಿಂತಲೂ ಶ್ರೇಷ್ಠವಾದ ಮಂತ್ರವೇ ಇಲ್ಲ. ಯುಧಿಷ್ಠಿರ! ಗಾಯತ್ರೀಮಂತ್ರವನ್ನು ತ್ರಿಸಂಧ್ಯೆಗಳಲ್ಲಿಯೂ ಪುನಶ್ಚರಣೆ ಮಾಡುವವನಿಗೆ ಪಾಪದ ಸೋಂಕೇ ಇರುವುದಿಲ್ಲ. ಅಂತಹವನು ಅಖಂಡ ಭೂಮಂಡಲವನ್ನೇ ದಾನವಾಗಿ ತೆಗೆದುಕೊಂಡರೂ ಪಾಪಪೂರಿತನಾಗುವುದಿಲ್ಲ. ಪವಿತ್ರಾತ್ಮನಾಗಿಯೇ ಉಳಿಯುತ್ತಾನೆ. (ಎಂಟನೆಯ ವರ್ಷದಲ್ಲಿ ಉಪನೀತನಾಗಿ ಮರಣಪರ್ಯಂತವೂ ಎಡೆಬಿಡದೇ ತ್ರಿಸಂಧ್ಯೆಗಳಲ್ಲಿಯೂ ಪರಮ ಪವಿತ್ರಳಾದ ಗಾಯತ್ರಿದೇವಿಯ ಮಂತ್ರವನ್ನು ಪುನಶ್ಚರಣೆಮಾಡುವುದರಿಂದಲೇ ಬ್ರಾಹ್ಮಣನು ಸರ್ವದಾ ಪೂತಾತ್ಮನಾಗುತ್ತಾನೆ. ಇತರರನ್ನೂ ಪೂತಾತ್ಮರನ್ನಾಗಿ ಮಾಡಲೂ ಸಮರ್ಥನಾಗುತ್ತಾನೆ.)

**ಯೇ ಚಾಸ್ಯ ದಾರುಣಾ ಕೇಚಿದ್ಗ್ರಹಾಃ ಸೂರ್ಯಾದಯೋ ದಿವಿ ।**
**ತೇ ಚಾಸ್ಯ ಸೌಮ್ಯಾ ಜಾಯನ್ತೇ ಶಿವಾ ಶಿವತರಾಃ ಸದಾ ॥೮೫॥**

ತ್ರಿಸಂಧ್ಯೆಗಳಲ್ಲಿಯೂ ಗಾಯತ್ರೀಜಪವನ್ನು ಬಿಡದೇ ಮಾಡುವ ಬ್ರಾಹ್ಮಣನನ್ನು ದುಷ್ಟಸ್ಥಾನಗಳಲ್ಲಿ ಕುಳಿತ ಸೂರ್ಯಾದಿಗ್ರಹಗಳೂ ಏನೂ ಮಾಡಲಾರವು. ಮನುಷ್ಯನು ಹುಟ್ಟಿದ ವೇಳೆಗೆ ಅನುಸಾರವಾಗಿ ಒಂಬತ್ತು ಗ್ರಹಗಳೂ ಒಂದೊಂದು ಕಾಲದಲ್ಲಿ ಒಂದೊಂದು ವಿಧವಾದ ಫಲವನ್ನು ಮನುಷ್ಯನಿಗೆ ಕೊಡುತ್ತಿರುತ್ತವೆ. ಜೀವಮಾನದಲ್ಲಾಗುವ ಏರಿಳಿತಗಳು ಈ ಒಂಬತ್ತು ಗ್ರಹಗಳ ಒಳ್ಳೆಯ ಅಥವಾ ಕೆಟ್ಟ ಸ್ಥಿತಿಯಿಂದ ಆಗುವುದೆಂಬುದು ಸನಾತನವಾದ ಸಿದ್ಧಾಂತ. ಆದರೆ ಒಬ್ಬ ಬ್ರಾಹ್ಮಣನ ಕುಂಡಲಿಯ ಪ್ರಕಾರ ಗ್ರಹಗಳು ದುಷ್ಟಸ್ಥಾನದಲ್ಲಿದ್ದು ದುಷ್ಫಲಗಳನ್ನು ಕೊಡುವುದಾಗಿದ್ದರೂ– ಅವನು ಮಾಡುವ ಗಾಯತ್ರೀಪುನಶ್ಚರಣೆಯಿಂದ ಆ ಗ್ರಹಗಳು ಯಾವ ವಿಧವಾದ ದುಷ್ಫಲಗಳನ್ನೂ ಕೊಡಲು ಸಾಧ್ಯವಾಗದೇ ಶಾಂತವಾಗುತ್ತವೆ. ಒಳ್ಳೆಯ ಸ್ಥಾನದಲ್ಲಿರುವ ಗ್ರಹಗಳು ಹೆಚ್ಚು ಒಳ್ಳೆಯ ಫಲಗಳನ್ನು ನೀಡಲೂ ಸಮರ್ಥವಾಗುತ್ತವೆ.

**ಸರ್ವೇ ನಾನುಗತಂ ಚೈನಂ ದಾರುಣಾ ಪಿಶಿತಾಶನಾಃ ।**
**ಘೋರರೂಪಾ ಮಹಾಕಾಯಾ ಧರ್ಷಯನ್ತಿ ದ್ವಿಜೋತ್ತಮಮ್ ॥೮೬॥**

ಘೋರರೂಪವನ್ನು ಧರಿಸಿರುವ ಅದ್ಭುತವಾದ ಭೂತ-ಪ್ರೇತ-ಪಿಶಾಚ ರಾಕ್ಷಸರೂ ತ್ರಿಕಾಲಗಳಲ್ಲಿಯೂ ಗಾಯತ್ರೀಮಂತ್ರಪುನಶ್ಚರಣೆ ಮಾಡುವ ಬ್ರಾಹ್ಮಣನ ಹತ್ತಿರದಲ್ಲಿಯೂ ಸುಳಿಯಲಾರರು.

**ನಾಧ್ಯಾಪನಾದ್ಯಾಜನಾದ್ವಾ ಅನ್ಯಸ್ಮಾದ್ವಾ ಪ್ರತಿಗ್ರಹಾತ್ ।**
**ದೋಷೋ ಭವತಿ ವಿಪ್ರಾಣಾಂ ಜ್ವಲಿತಾಗ್ನಿಸಮಾ ದ್ವಿಜಾಃ ॥೮೭॥**

ಒಂದೇ ಮಾತಿನಲ್ಲಿ ಹೇಳುವುದಾದರೆ–ಗಾಯತ್ರೀಮಂತ್ರಪುನಶ್ಚರಣೆಯನ್ನು ತ್ರಿಸಂಧ್ಯೆಗಳಲ್ಲಿಯೂ ತಪ್ಪದೇ ಮಾಡುವ ಬ್ರಾಹ್ಮಣರು ಯಜ್ಞೇಶ್ವರನಿಗೆ ಸಮಾನರು. ಅಧ್ಯಾಪನದಿಂದಲೇ ಆಗಲೀ, ಯಾಜನದಿಂದಲೇ ಆಗಲೀ, ಪ್ರತಿಗ್ರಹದಿಂದಲೇ ಆಗಲೀ–ಅವರಿಗೆ ಯಾವ ವಿಧವಾದ ದೋಷವೂ ಉಂಟಾಗುವುದಿಲ್ಲ.

**ದುರ್ವೇದಾ ವಾ ಸುವೇದಾ ವಾ ಪ್ರಾಕೃತಾ ಸಂಸ್ಕೃತಾಸ್ತಥಾ ।**
**ಬ್ರಾಹ್ಮಣಾ ನಾವಮನ್ತವ್ಯಾ ಭಸ್ಮಚ್ಛನ್ನಾ ಇವಾಗ್ನಯಃ ॥೮೮॥**

ಯುಧಿಷ್ಠಿರ! ಬ್ರಾಹ್ಮಣರು ವೇದಾಧ್ಯಯನವನ್ನು ಮಾಡಿರಲಿ–ಮಾಡದಿರಲಿ ; ಪಂಡಿತರಾಗಿರಲಿ–ಪಾಮರರಾಗಿರಲಿ ; ಉತ್ತಮಸಂಸ್ಕಾರಯುಕ್ತರಾಗಿರಲಿ ; ಸಂಸ್ಕಾರಶೂನ್ಯರಾದ ಪ್ರಾಕೃತರಾಗಿರಲಿ–ಅವರನ್ನು ನಿಂದಿಸಬಾರದು. ಬೂದಿಮುಚ್ಚಿದ ಕೆಂಡಗಳಲ್ಲಿ ಗೂಢವಾಗಿ ಅಗ್ನಿಯಿರುವಂತೆ–ಬ್ರಾಹ್ಮಣನಾದವನು ಪ್ರಾಕೃತನಾಗಿದ್ದರೂ ಅಗ್ನಿಸಮಾನನಾಗಿ ಪೂತಾತ್ಮನಾಗಿರುತ್ತಾನೆ.

**ಯಥಾ ಶ್ಮಶಾನೇ ದೀಪ್ತೌಜಾಃ ಪಾವಕೋ ನೈವ ದುಷ್ಯತಿ ।**
**ಏವಂ ವಿದ್ವಾನವಿದ್ವಾನ್ವಾ ಬ್ರಾಹ್ಮಣೋ ದೈವತಂ ಮಹತ್ ॥೮೯॥**

ಯುಧಿಷ್ಠಿರ! ಪ್ರಜ್ವಲಿತವಾದ ಅಗ್ನಿಯು ಸ್ಮಶಾನದಲ್ಲಿಯೇ ಇದ್ದರೂ ಹೇಗೆ ದೂಷ್ಯವಲ್ಲವೋ–ಅದೇ ರೀತಿಯಲ್ಲಿ ಬ್ರಾಹ್ಮಣನು ವಿದ್ವಾಂಸನಾಗಿದ್ದರೂ ಅವಿದ್ವಾಂಸನಾಗಿದ್ದರೂ ದೂಷ್ಯನಾಗುವುದಿಲ್ಲ. ಬ್ರಾಹ್ಮಣರು ಮಂತ್ರವಿದರು. ಆ ಮಹಾಮಂತ್ರಗಳನ್ನು–ಅದರಲ್ಲಿಯೂ ಗಾಯತ್ರಿಯನ್ನು–ಅನುದಿನವೂ ಪುನಶ್ಚರಣೆಮಾಡುತ್ತಾ ಇರುವುದರಿಂದ ಮಂತ್ರಗಳನ್ನು ತಮ್ಮ ಅಧೀನದಲ್ಲಿಟ್ಟುಕೊಂಡಿರುತ್ತಾರೆ. ಅರ್ಥಾತ್ ಮಂತ್ರಸಿದ್ಧಿಯನ್ನು ಪಡೆದಿರುತ್ತಾರೆ. ಆದುದರಿಂದಲೇ ಅವರನ್ನು ದೇವತೆಗಳಿಗೆ ಸಮಾನರೆಂದೂ ಭೂಸುರರೆಂದೂ ಹೇಳುತ್ತಾರೆ.

**ಪ್ರಾಕಾರೈಶ್ಚ ಪುರದ್ವಾರೈಃ ಪ್ರಾಸಾದೈಶ್ಚ ಪೃಥಗ್ವಿಧೈಃ ।**
**ನಗರಾಣಿ ನ ಶೋಭನ್ತೇ ಹೀನಾನಿ ಬ್ರಾಹ್ಮಣೋತ್ತಮೈಃ ॥೯೦॥**

ಧರ್ಮಜ! ಒಂದು ಪಟ್ಟಣದಲ್ಲಿ ಅನೇಕವಿಧವಾದ ಸೌಧಗಳಿರಬಹುದು ; ಅನೇಕಪ್ರಾಕಾರಗಳಿರಬಹುದು ; ಆಹ್ಲಾದಕರವಾದ ಉದ್ಯಾನವನಗಳಿರಬಹುದು ; ಶೋಭಾಯಮಾನವಾದ ಮಹಾದ್ವಾರಗಳೂ ಇರಬಹುದು. ಆದರೆ ಬ್ರಾಹ್ಮಣೋತ್ತಮರು ಆ ನಗರದಲ್ಲಿ ವಾಸಮಾಡದಿದ್ದರೆ–ಆ ನಗರವು ಖಂಡಿತವಾಗಿಯೂ ಶೋಭಾಯಮಾನವಾಗಿರುವುದಿಲ್ಲ.

**ವೇದಾಢ್ಯಾ ವೃತ್ತಸಮ್ಪನ್ನಾ ಜ್ಞಾನವನ್ತಸ್ತಪಸ್ವಿನಃ ।**
**ಯತ್ರ ತಿಷ್ಠನ್ತಿ ವೈ ವಿಪ್ರಾಸ್ತನ್ನಾಮ ನಗರಂ ನೃಪ ॥೯೧॥**

ಯಾವ ಒಂದು ಗ್ರಾಮದಲ್ಲಿ–ಅಧ್ಯಯನಾಧ್ಯಾಪನಗಳಲ್ಲಿ, ವೈಶ್ವ ದೇವಾಗ್ನಿಹೋತ್ರಗಳಲ್ಲಿ, ಯಜನ-ಯಾಜನಗಳಲ್ಲಿ, ತಪಸ್ಸಿನಲ್ಲಿ ನಿರತರಾದ ಬ್ರಾಹ್ಮಣರಿರುತ್ತಾರೆಯೋ ಅದಕ್ಕೆ 'ನಗರ' ವೆಂದು ಹೆಸರು.

**ವ್ರಜೇ ವಾಪ್ಯಥವಾರಣ್ಯೇ ಯತ್ರ ಸನ್ತಿ ಬಹುಶ್ರುತಾಃ ।**
**ತತ್ತನ್ನಗರಮಿತ್ಯಾಹುಃ ಪಾರ್ಥ ತೀರ್ಥಂ ಚ ತದ್ಭವೇತ್ ॥೯೨॥**

ಕಾಡಾಗಲೀ, ಗೋಮಾಳವಾಗಲೀ–ವೇದ-ವೇದಾಂಗಪಾರಂಗತ ರಾದ, ಜ್ಞಾನಿಗಳಾದ ಬ್ರಾಹ್ಮಣರು ಅಲ್ಲಿ ವಾಸವಾಗಿದ್ದರೆ–ಆ ಸ್ಥಳವೇ ನಗರವೆನಿಸಿ ಕೊಳ್ಳುತ್ತದೆ ಮತ್ತು ಆ ಸ್ಥಳವೇ ಪರಮಪವಿತ್ರವಾದ ತೀರ್ಥಕ್ಷೇತ್ರವೂ ಆಗುತ್ತದೆ.

**ರಕ್ಷಿತಾರಂ ಚ ರಾಜಾನಂ ಬ್ರಾಹ್ಮಣಂ ಚ ತಪಸ್ವಿನಮ್ ।**
**ಅಭಿಗಮ್ಯಾಭಿಪೂಜ್ಯಾಥ ಸದ್ಯಃ ಪಾಪಾತ್ಪ್ರಮುಚ್ಯತೇ ॥೯೩॥**

ಪ್ರಜಾರಕ್ಷಕನಾದ ರಾಜನ ಮತ್ತು ತಪೋನಿಷ್ಠನಾದ ಬ್ರಾಹ್ಮಣನ ಬಳಿಗೆ ಹೋಗಿ ಅವರನ್ನು ಸೇವಿಸಿ–ಪೂಜಿಸಿದ ಮಾನವನು ಒಡನೆಯೇ ಪಾಪದಿಂದ ವಿಮುಕ್ತನಾಗುತ್ತಾನೆ.

**ಪುಣ್ಯತೀರ್ಥಾಭಿಷೇಕಂ ಚ ಪವಿತ್ರಾಣಾಂ ಚ ಕೀರ್ತನಮ್ ।**
**ಸದ್ಭಿಃ ಸಮ್ಭಾಷಣಂ ಚೈವ ಪ್ರಶ ಕೀರ್ತ್ಯತೇ ಬುಧೈಃ ॥೯೪॥**

ಯುಧಿಷ್ಠಿರ! ಪುಣ್ಯತೀರ್ಥಗಳಲ್ಲಿ ಸ್ನಾನಮಾಡುವುದು, ಪರಮ ಪವಿತ್ರಾತ್ಮರಾದ ಮಹಾತ್ಮರ ಕೀರ್ತನೆ ಅಥವಾ ತ್ರಿಸುಪರ್ಣಾದಿಮಂತ್ರಗಳ ಪಠನ ಮತ್ತು ಸತ್ಪುರುಷರೊಡನೆ ಸಂಭಾಷಣೆ–ಇವು ಪ್ರಶಸ್ತವಾದುವೆಂದು ಪಂಡಿತರಾದವರು ಹೇಳುತ್ತಾರೆ.

**ಸಾಧುಸಙ್ಗಮಪೂತೇನ ವಾಕ್ಸುಭಾಷಿತವಾರಿಣಾ ।**
**ಪವಿತ್ರೀಕೃತಮಾತ್ಮಾನಂ ಸನ್ತೋ ಮನ್ಯನ್ತಿ ನಿತ್ಯಶಃ ॥೯೫॥**

ಸತ್ಪುರುಷರಾದವರು–ಯಾವಾಗಲೂ ಸಾಧುಗಳ ಸಂಗಮದಿಂದ ಲಭ್ಯ

ವಾಗುವ, ಪವಿತ್ರವಾದ ಅವರ ಸುಭಾಷಿತಗಳೆಂಬ ನೀರಿನಿಂದ ಅಭಿಷಿಕ್ತರಾಗಿ ತಾವೂ ಪೂತಾತ್ಮರಾದೆವೆಂದೇ ಭಾವಿಸುತ್ತಾರೆ.

(ಸಾಧುಗಳ ಬಾಯಿಂದ ಹೊರಡುವ ಮಾತಿಗೇ ಒಂದು ಹೆಚ್ಚಿನ ಪಾವಿತ್ರ್ಯವುಂಟು. ಮೇಲಾಗಿ ಸಾಧುಗಳ ಮಾತುಗಳೂ ಸುಭಾಷಿತ ರೂಪವಾಗಿಯೇ ಇರುತ್ತವೆ. ಎಲ್ಲ ಮಾತುಗಳೂ ನೀತಿಬೋಧಕಗಳಾಗಿಯೇ ಇರುತ್ತವೆ. ಅಂತಹ ಪರಮಪವಿತ್ರವಾದ ಸಾಧುಗಳ ವಾಣಿಯೆಂಬುದು ವಾರಿ ಅಥವಾ ನೀರು. ನೀರು ಶರೀರವನ್ನು ಶುದ್ಧಿಗೊಳಿಸುವಂತೆ–ಸಾಧುಸಂತರ ವಾಣಿಯು ಮನಸ್ಸನ್ನು ಶುದ್ಧಿಗೊಳಿಸುತ್ತದೆ. ನೀರಿಗೂ ಸಾಧ್ಯವಾಗದ ಮನಶ್ಶುದ್ಧಿಯ ಕಾರ್ಯವನ್ನು ಸಾಧುಗಳ ವಾಕ್ಸುಭಾಷಿತವಾರಿಯು ಸಾಧಿಸಿ ಕೊಡುತ್ತದೆ. ಆದುದರಿಂದಲೇ ಸತ್ಪುರುಷರಾದವರು ಸಾಧುಗಳ ವಾಣಿಯನ್ನು ಕೇಳಿ ತಾವು ಪಾವನರಾದೆವೆಂದು ಭಾವಿಸಿಕೊಳ್ಳುತ್ತಾರೆ.)

**ತ್ರಿದಣ್ಡಧಾರಣಂ ಮೌನಂ ಜಟಾಭಾರೋಽಥ ಮುಣ್ಡನಮ್ ।**
**ವಲ್ಕಲಾಜಿನಸಂವೇಷ್ಟಂ ವ್ರತಚರ್ಯಾಭಿಷೇಚನಮ್ ॥೯೬॥**

**ಅಗ್ನಿಹೋತ್ರಂ ವನೇ ವಾಸಃ ಶರೀರಪರಿಶೋಷಣಮ್ ।**
**ಸರ್ವಾಣ್ಯೇತಾನಿ ಮಿಥ್ಯಾ ಸ್ಯುರ್ಯದಿ ಭಾವೋ ನ ನಿರ್ಮಲಃ ॥೯೭॥**

ತ್ರಿದಂಡಧಾರಣೆ (ಸಂನ್ಯಾಸ), ಮೌನವಾಗಿರುವಿಕೆ, ಜಟಾಧಾರಣೆ, ಶಿರೋಮಂಡನ, ನಾರುಬಟ್ಟೆ ಮತ್ತು ಕೃಷ್ಣಾಜಿನವನ್ನು ಧರಿಸುವುದು, ನಾನಾವಿಧವಾದ ವ್ರತಾಭಿಷೇಕಗಳನ್ನು ಮಾಡುವುದು, ಅಗ್ನಿಹೋತ್ರಮಾಡುವುದು, ಅರಣ್ಯದಲ್ಲಿಯೇ ವಾಸಮಾಡುವುದು, ನಾನಾವಿಧವಾದ ವ್ರತೋಪವಾಸಗಳಿಂದ ಶರೀರವನ್ನು ಶೋಷಿಸುವುದು–ಇತ್ಯಾದಿಗಳೆಲ್ಲವನ್ನೂ ಹೃದಯ ಶುದ್ಧಿಯಿಲ್ಲದೇ ಭಕ್ತಿ-ಶ್ರದ್ಧೆಗಳಿಲ್ಲದೇ ಮಾಡಿದ ಪಕ್ಷದಲ್ಲಿ ಅವು ನಿರರ್ಥಕಗಳಾಗುತ್ತವೆ.

(ವಿಷಯಸುಖಗಳನ್ನು ಅನುಭವಿಸಬೇಕಾದರೆ ಅಂತಃಶುದ್ಧಿಯಿರಬೇಕೆಂಬ ನಿಯಮವಿಲ್ಲ. ಅಂತಃಶುದ್ಧಿಯಿಲ್ಲದವನೂ ಸಕಲವಿಧವಾದ ಸುಖೋಪಭೋಗಗಳನ್ನೂ ಪಡೆಯಬಹುದು. ಆದರೆ ಮಾನವನು ಅಮೃತತ್ವವನ್ನು ಅಥವಾ ಅಮರತ್ವವನ್ನು ಪಡೆಯಬೇಕಾದರೆ ಅಂತಃಶುದ್ಧಿ ಅಥವಾ ಹೃದಯಶುದ್ಧಿಯು ಅತ್ಯಾವಶ್ಯಕವಾಗಿರುತ್ತದೆ.)

**ನ ದುಷ್ಕರಮನಾಶಿತ್ವಂ ಸುಕರಂ ಹ್ಯಶನಂ ವಿನಾ ।**
**ವಿಶುದ್ಧಿಂ ಚಕ್ಷುರಾದೀನಾಂ ಷಣ್ಣಾಮಿನ್ದ್ರಿಯಗಾಮಿನಾಮ್ ।**
**ವಿಕಾರಿ ತೇಷಾಂ ರಾಜೇನ್ದ್ರ ಸುದುಷ್ಕರಕರಂ ಮನಃ ॥೯೮॥**

ಉಪವಾಸಮಾಡದೇ ಇಂದ್ರಿಯಶುದ್ಧಿಯನ್ನು ಸಾಧಿಸಲು ಸಾಧ್ಯವಿಲ್ಲವೆಂದೂ–ಉಪವಾಸದಿಂದಲೇ ಸುಲಭವಾಗಿ ಅದನ್ನು ಸಾಧಿಸಬಹುದೆಂದೂ ಹೇಳಲಾಗುವುದಿಲ್ಲ. ವಾಙ್ಮನಶ್ಚಕ್ಷುಶ್ರೋತ್ರತ್ವಜಿಹ್ವಾಘ್ರಾಣಗಳೆಂಬ ಆರು ಇಂದ್ರಿಯಗಳೂ ಮನಸ್ಸಿನ ಮೂಲಕವಾಗಿ ಸುಖನ್ನೋ-ಕಷ್ಟವನ್ನೋ ಅನುಭವಿಸುತ್ತಿರುತ್ತವೆ. ಮನಸ್ಸನ್ನು ನಿರೋಧಿಸಿದರೆ ಪಂಚೇಂದ್ರಿಯಗಳನ್ನೂ ನಿರೋಧಿಸಿದಂತೆಯೇ ಆಗುತ್ತದೆ. ಆದರೆ ಮನಸ್ಸನ್ನು ನಿರೋಧಿಸಿ ಅದನ್ನು ಹತೋಟಿಯಲ್ಲಿಟ್ಟುಕೊಳ್ಳುವುದು ಬಹುದುಷ್ಕರವಾದುದು. ಆದುದರಿಂದಲೇ, ಮಹಾರಾಜ!

**ಯೇ ಪಾಪಾನಿ ನ ಕುರ್ವನ್ತಿ ಮನೋವಾಕ್ಕಾಯಕರ್ಮಭಿಃ ।**
**ತೇ ತಪನ್ತಿ ಮಹಾತ್ಮಾನೋ ನ ಶರೀರಸ್ಯ ಶೋಷಣಮ್ ॥೯೯॥**

ಮನಸಾ-ವಾಚಾ-ಕಾಯೇನ-ಕರ್ಮಣಾ ಯಾರು ಪಾಪಕರ್ಮಗಳನ್ನು ಮಾಡುವುದಿಲ್ಲವೋ-ಅಂತಹವರೇ ಮಹಾತಪಸ್ವಿಗಳೆಂದು ಪರಿಗಣಿತರಾಗುತ್ತಾರೆ. ಕ್ಲಿಷ್ಟವಾದ ವ್ರತೋಪವಾಸಗಳನ್ನಾದರೂ ಮಾಡಬಹುದು. ಆದರೆ ಮನಸ್ಸನ್ನು ದಂಡಿಸಿ ಹತೋಟಿಯಲ್ಲಿಟ್ಟುಕೊಳ್ಳುವುದು ಬಹಳಕಷ್ಟ. ಮನಸ್ಸನ್ನು ದಂಡಿಸಿ ಹತೋಟಿಯಲ್ಲಿಟ್ಟುಕೊಂಡಿರುವವರೇ ಮಹಾತಪಸ್ವಿಗಳೆಂಬುದರಲ್ಲಿ ಸ್ವಲ್ಪವೂ ಸಂಶಯವಿಲ್ಲ. ಕೇವಲ ಶರೀರಶೋಷಣೆಯೇ ತಪಸ್ಸಲ್ಲ.

**ನ ಜ್ಞಾತಿಭ್ಯೋ ದಯಾ ಯಸ್ಯ ಶುಕ್ಲದೇಹೋಽವಿಕಲ್ಮಷಃ ।**
**ಹಿಂಸಾ ಸಾ ತಪಸಸ್ತಸ್ಯ ನಾನಾಶಿತ್ವಂ ತಪಃ ಸ್ಮೃತಮ್ ॥೧೦೦॥**

ಬಂಧುಗಳಲ್ಲಿ, ಹೆಂಡತಿ-ಮಕ್ಕಳಲ್ಲಿ ದಯೆಯಿಲ್ಲದೇ, ಕರಣಶುದ್ಧಿಯಿಲ್ಲದೇ ಯಾವನು ತಪಸ್ಸನ್ನು ಮಾಡುವನೋ–ಅವನ ತಪಸ್ಸು ಹಿಂಸೆಯೇ ಸರಿ ; ಕೇವಲ ಉಪವಾಸವೂ ತಪಸ್ಸಾಗಲಾರದು.

**ತಿಷ್ಠನ್ಗೃಹೇ ಚೈವ ಮುನಿರ್ನಿತ್ಯಂ ಶುಚಿರಲಂಕೃತಃ ।**
**ಯಾವಜ್ಜೀವಂ ದಯಾವಾಂಶ್ಚ ಸರ್ವಪಾಪೈಃ ಪ್ರಮುಚ್ಯತೇ ॥೧೦೧॥**

ಸಕಲಪ್ರಾಣಿಗಳ ವಿಷಯದಲ್ಲಿಯೂ ದಯಾವಂತನಾಗಿರಬೇಕು. ಮುನಿಯು ಅರಣ್ಯಕ್ಕೇ ಹೋಗಬೇಕೆಂಬ ನಿಯಮವಿಲ್ಲ. ಉಪವಾಸಮಾಡ ಬೇಕೆಂಬ ನಿರ್ಬಂಧವೂ ಇಲ್ಲ. ಮನೆಯಲ್ಲಿಯೇ ಸಂಸಾರಿಯಾಗಿರಬಹುದು. ಆದರೆ ಅಂತಃಶುದ್ಧಿ-ಬಹಿಃಶುದ್ಧಿಗಳಿಂದ ಕೂಡಿರಬೇಕು. ಆಜೀವ ಪರ್ಯಂತವೂ ಪ್ರಾಣಿಗಳ ವಿಷಯದಲ್ಲಿ ದಯಾವಂತನಾಗಿರಬೇಕು. ಅಂತಹವನೇ ಸರ್ವಪಾಪಗಳಿಂದಲೂ ವಿಮುಕ್ತಿಯನ್ನು ಹೊಂದುತ್ತಾನೆ.

**ನ ಹಿ ಪಾಪಾನಿ ಕರ್ಮಾಣಿ ಶುದ್ಧ್ಯನ್ತ್ಯನಶನಾದಿಭಿಃ ।**
**ಸೀದತ್ಯನಶನಾದೇವ ಮಾಂಸಶೋಣಿತಲೇಪನಃ ॥೧೦೨॥**

ಅಂತಃಶುದ್ಧಿ-ಬಹಿಃಶುದ್ಧಿಗಳಿಲ್ಲದೇ ಮಾಡುವ ವ್ರತೋಪವಾಸಗಳು ಶರೀರವನ್ನು ಕೃಶಮಾಡಲು ಸಾಧಕಗಳಾಗುವುವೇ ಹೊರತು ಯಾವ ಪಾಪ ವನ್ನೂ ಹೋಗಲಾಡಿಸಲು ಸಮರ್ಥವಾಗುವುದಿಲ್ಲ. ಅಂತಹ ವ್ರತಾದಿಗಳು ರಕ್ತ-ಮಾಂಸಗಳಿಂದ ಕೂಡಿರುವ ಈ ಶರೀರವನ್ನು ಕ್ಷೀಣವಾಗಿ ಮಾಡು ವುದರಲ್ಲಿ ಮಾತ್ರವೇ ಪರ್ಯವಸಾನವನ್ನು ಹೊಂದುತ್ತವೆ.

**ಅಜ್ಞಾತಂ ಕರ್ಮ ಕೃತ್ವಾ ಚ ಕ್ಲೇಶೋ ನಾನ್ಯತ್ರಪ್ರಾಪ್ಯತೇ ।**
**ನಾಗ್ನಿರ್ದಹತಿ ಕರ್ಮಾಣಿ ಭಾವಶೂನ್ಯಸ್ಯ ದೇಹಿನಃ ॥೧೦೩॥**

ಶಾಸ್ತ್ರಗಳಲ್ಲಿ ಕಾಣದಿರುವ ಸ್ವಕಲ್ಪಿತವಾದ ಕರ್ಮಗಳೂ ಕೇವಲ ಕ್ಲೇಶದಲ್ಲಿಯೇ ಪರ್ಯವಸಾನಹೊಂದುತ್ತವೆ. ಇಂತಹ ಕರ್ಮಗಳಾವುವೂ ಯಾವ ವಿಧವಾದ ಪಾಪವನ್ನೂ ಹೋಗಲಾಡಿಸಲಾರವು. ಶಾಸ್ತ್ರವಿಧಿ ಯಿಂದಲೇ ಔಪಾಸನಾದಿಗಳಸ ಮೂಲಕವಾಗಿ ಸಂಪೂಜಿತನಾದ ಅಗ್ನಿದೇವನೂ ಭಾವಶೂನ್ಯನಾದ ಶ್ರದ್ಧಾರಹಿತನಾದ ಕರ್ತೃವಿನ ಪಾಪಗಳನ್ನು ಭಸ್ಮಮಾಡಲಾರನು.*

---

* ಈ ಕಾಲದಲ್ಲಿ ಮಾಡುವ ಅನೇಕಕರ್ಮಗಳಿಗೆ ಶಾಸ್ತ್ರಾಧಾರವಿರುವುದಿಲ್ಲ. ಶಾಸ್ತ್ರ ಗಳಲ್ಲಿ ಉಕ್ತವಾಗದಿರುವ ಇಂತಹ ಕರ್ಮಗಳನ್ನು ಮಾಡಿದರೂ ಪ್ರಯೋಜನವಿಲ್ಲ. ಶಾಸ್ತ್ರದಲ್ಲಿ ಉಕ್ತವಾಗಿರುವ ಕರ್ಮಗಳನ್ನು ಮಾಡುವಾಗಲೂ ಕರ್ತೃವು ಶ್ರದ್ಧಾ-ಭಕ್ತಿಗಳಿಂದಲೂ, ಮನಃಶುದ್ಧಿಯಿಂದಲೂ ಯುಕ್ತನಾಗಿರದಿದ್ದರೆ ಅಂತಹ ಶಾಸ್ತ್ರ ವಿಹಿತಕರ್ಮಗಳೂ ಯಾವ ವಿಧವಾದ ಪ್ರಯೋಜನವನ್ನೂ ಉಂಟುಮಾಡಲಾರವು.

**ಪುಣ್ಯಾದೇವ ಪ್ರವ್ರಜನ್ತಿ ಶುದ್ಧ ನ್ತ್ಯನಶನಾನಿ ಚ ।**
**ನ ಮೂಲಫಲಭಕ್ಷಿತ್ವಾನ್ನ ಮೌನಾನ್ನಾನಿಲಾಶನಾತ್ ॥೧೦೪॥**

**ಶಿರಸೋ ಮುಣ್ಡನಾದ್ವಾಪಿ ನ ಸ್ಥಾನಕುಟಿಕಾಸನಾತ್ ।**
**ನ ಜಟಾಧಾರಣಾದ್ವಾಪಿ ನ ತು ಸ್ಥಣ್ಡಿಲಶಯ್ಯಯಾ ॥೧೦೫॥**

**ನಿತ್ಯಂ ಹ್ಯನಶನಾದ್ವಾಪಿ ನಾಗ್ನಿಸೂಶ್ರೂಷಣಾದಪಿ ।**
**ನ ಚೋದಕಪ್ರವೇಶೇನ ನ ಚ ಕ್ಷ್ಮಾಶಯನಾದಪಿ ॥೧೦೬॥**

ಪರಿಶುದ್ಧವಾದ ಮನಸ್ಸಿನಿಂದ ಕೂಡಿದ ಮನುಷ್ಯರು ಪರಿಶುದ್ಧರಾಗಿರುತ್ತಾರೆ. ಉತ್ತಮಲೋಕಗಳಿಗೂ ಹೋಗುತ್ತಾರೆ. ವಾಙ್ಮನಸ್ಸುಗಳ ಶುದ್ಧಿಯಿಲ್ಲದೇ ಮಾಡುವ–ಉಪವಾಸಗಳು, ಕಂದ-ಮೂಲ-ಫಲಗಳಿಂದಲೇ ಜೀವಿಸಿರುವಿಕೆ, ಮೌನವ್ರತ, ವಾಯುಭಕ್ಷಣದಿಂದಲೇ ಪ್ರಾಣಧಾರಣೆಯನ್ನು ಮಾಡಿಕೊಂಡಿರುವುದು, ತಲೆಯನ್ನು ಮುಂಡನಮಾಡಿಸಿಕೊಳ್ಳುವುದು, ಬಹುಕಾಲ ಸ್ಥಿರವಾಗಿ ಕುಳಿತಿರುವುದು, ಜಟೆಯನ್ನು ಧರಿಸುವುದು, ಯಾವಾಗಲೂ ನೆಲದಮೇಲೆಯೇ ಹಾಸಿಗೆ-ಹೊದ್ದಿಕೆಗಳಿಲ್ಲದೇ ಮಲಗುವ ವ್ರತಾಚರಣೆಮಾಡುವುದು, ನಿತ್ಯೋಪವಾಸಮಾಡುವುದು, ವೈಶ್ವದೇವಾಗ್ನಿಹೋತ್ರಾದಿಗಳನ್ನು ಮಾಡುವುದು, ಚಳಿಗಾಲದಲ್ಲಿ ಕೊರೆಯುತ್ತಿರುವ ನೀರಿನಲ್ಲಿಯೇ ಕುಳಿತಿರುವುದು–ಇತ್ಯಾದಿ ಕ್ರಿಯೆಗಳಿಂದ ಯಾವ ಪ್ರಯೋಜನವೂ ಆಗುವುದಿಲ್ಲ.

**ಜ್ಞಾನೇನ ಕರ್ಮಣಾ ವಾಪಿಜರಾಮರಣಮೇವ ಚ ।**
**ವ್ಯಾಧಯಶ್ಚ ಪ್ರಹೀಯನ್ತೇ ಪ್ರಾಪ್ಯತೇ ಚೋತ್ತಮಂ ಪದಮ್ ॥೧೦೭॥**

ಜ್ಞಾನಯೋಗದಿಂದಲೂ ಮತ್ತು ಜ್ಞಾನಪ್ರಾಪ್ತಿಗೆ ಸಾಧಕವಾದ ಸತ್ಕರ್ಮಾಚರಣೆಯಿಂದಲೂ ರೋಗ-ರುಜಿನಾದಿಗಳ ಮತ್ತು ಜರಾ-ಮರಣಗಳ ನಿವಾರಣೆಯಾಗಿ ಮುಕ್ತಿಯು ಲಭಿಸುತ್ತದೆ.

**ಬೀಜಾನಿ ಹ್ಯಗ್ನಿದಗ್ಧಾನಿ ನ ರೋಹನ್ತಿ ಪುನರ್ಯಥಾ ।**
**ಜ್ಞಾನದಗ್ಧೈಸ್ತಥಾ ಕ್ಲೇಶೈರ್ನಾತ್ಮಾ ಸಂಯುಜ್ಯತೇ ಪುನಃ ॥೧೦೮॥**

ಅಗ್ನಿದಗ್ಧವಾದ (ಬಾಣಲೆಯಲ್ಲಿ ಹುರಿದ) ಬೀಜಗಳು ಯಾವ ರೀತಿಯಲ್ಲಿ ಮೊಳೆಯುವುದಿಲ್ಲವೋ–ಅದೇ ರೀತಿಯಲ್ಲಿ ಜ್ಞಾನವೆಂಬ ಅಗ್ನಿಯಿಂದ ದಗ್ಧ

ವಾಗಿ ಹೋಗುವ ಕ್ಲೇಶಗಳು ಆತ್ಮನನ್ನು ಪುನಃ ಸ್ಪರ್ಶಿಸಲಾರವು. (ನಿಶ್ಚಯ ಜ್ಞಾನವುಂಟಾಗುವವರೆಗೂ ಮನುಷ್ಯನಿಗೆ ದೇಹಾತ್ಮಭಾವವಿರುತ್ತದೆ. ನಾನು– ಎಂದರೆ ಶರೀರವೆಂದೇ ಭಾವಿಸುತ್ತಾನೆ. ಶರೀರಸುಖವನ್ನೇ ನಿಜವಾದ ಸುಖ ವೆಂದು ಭ್ರಮಿಸುತ್ತಾನೆ. ಇಂದ್ರಿಯಗಳನ್ನು ತೃಪ್ತಿಪಡಿಸುವುದೇ ಮುಖ್ಯ ಧ್ಯೇಯವೆಂದೂ ಭಾವಿಸುತ್ತಾನೆ. ಮನಸ್ಸನ್ನು ತನ್ನ ಅಧೀನದಲ್ಲಿಟ್ಟುಕೊಳ್ಳು ವುದಕ್ಕೆ ಬದಲಾಗಿ ಮನಸ್ಸಿನ ಹತೋಟಿಗೆ ಅಥವಾ ಆಶೆಯ ಹತೋಟಿಗೆ ಒಳಗಾಗುತ್ತಾನೆ. ಅಂತಃಶುದ್ಧಿ-ಬಹಿಃಶುದ್ಧಿಗಳಿಂದಲೂ, ಮನಸ್ಸಿನ ನಿಗ್ರಹ ದಿಂದಲೂ ಜ್ಞಾನೋದಯವಾಗುತ್ತದೆ. ಜ್ಞಾನವೆಂಬುದೇ ಅಗ್ನಿ. ಕ್ಲೇಶ ಗಳಿಗೆ ಮೂಲಸ್ಥಾನವಾದ ಮನಸ್ಸನ್ನು ಜ್ಞಾನಾಗ್ನಿಯಿಂದ ದಹಿಸಿದರೆ ಆ ಮನಸ್ಸು ಪುನಃ ಇಂದ್ರಿಯಾದಿಗಳ ಕಡೆಗೆ ಸಾಗದೇ ಆತ್ಮನೆಡೆಗೆ ಧಾವಿಸುತ್ತದೆ.)

**ಆತ್ಮನಾ ವಿಪ್ರಹೀಣಾನಿ ಕಾಷ್ಠಕುಡ್ಯೋಪಮಾನಿ ಚ ।**
**ವಿನಶ್ಯನ್ತಿ ನ ಸಂದೇಹಃ ಫೇನಾನೀವ ಮಹಾರ್ಣವೇ ॥೧೦೯॥**

ಜೀವಾತ್ಮನಿಂದ ಪರಿತ್ಯಕ್ತವಾದ ಶರೀರಗಳು ಸೌದೆ ಮತ್ತು ಗೋಡೆ ಗಳಂತೆ–ಜಡವೇ ಸರಿ. ಆ ಶರೀರಗಳು ಸಮುದ್ರದಲ್ಲಿ ಹುಟ್ಟುವ ನೊರೆಯಂತೆ ಕ್ಷಣಕಾಲವಿದ್ದು ಆತ್ಮನಿಂದ ವಿಹೀನವಾದೊಡನೆಯೇ ನಾಶಹೊಂದುತ್ತವೆ.

**ಆತ್ಮಾನಂ ವಿನ್ದತೇ ಯೇನ ಸರ್ವಭೂತಗುಹಾಶಯಮ್ ।**
**ಶ್ಲೋಕೇನ ಯದಿ ವಾರ್ಧೇನ ಕ್ಷೀಣಂ ತಸ್ಯ ಪ್ರಯೋಜನಮ್ ॥೧೧೦॥**

ಯುಧಿಷ್ಠಿರ! ದೇಹ ಮತ್ತು ಆತ್ಮಗಳ ಸಂಬಂಧವನ್ನು ಅನೇಕ ಉಪನಿಷತ್ತುಗಳು ಸಾರಿ ಹೇಳಿವೆ. ಆದರೆ ಉಪನಿಷತ್ತುಗಳೆಲ್ಲವನ್ನೂ ಸುಮ್ಮನೆ ಅಧ್ಯಯನಮಾಡಿದರೆ ದೇಹಾತ್ಮಸಂಬಂಧವನ್ನು ನಿರ್ಧರಿಸಿ ತಿಳಿಯಲು ಸಾಧ್ಯ ವಾಗಲಾರದು. ಉಪನಿಷತ್ತುಗಳಲ್ಲಿರುವ ಅನೇಕಾನೇಕ ಮಹಾವಾಕ್ಯಗಳಲ್ಲಿ ಒಂದೇ ವಾಕ್ಯವನ್ನೋ ಅಥವಾ ಅರ್ಧವಾಕ್ಯವನ್ನೋ ಅನುಸಂಧಾನಮಾಡಿ ಸಕಲಪ್ರಾಣಿಗಳ ಹೃದಯಕುಹರಗಳಲ್ಲಡಗಿರುವ, ಚಿನ್ಮಯನಾದ, ಚಿದ್ರೂಪ ನಾದ, ಜ್ಯೋತಿಃಸ್ವರೂಪನಾದ, ಅಂಗುಷ್ಠಮಾತ್ರನಾದ ಆತ್ಮನನ್ನು ಯಾವನು ಸಂದರ್ಶಿಸುವನೋ–ಅವನಿಗೆ ಉಳಿದ ವೇದ-ಶಾಸ್ತ್ರಗಳೆಲ್ಲವೂ ವ್ಯರ್ಥವಾಗಿ

ಪರಿಣಮಿಸುತ್ತವೆ. (ಭಾರತೀಯಶಾಸ್ತ್ರಗಳೆಲ್ಲವೂ ಆತ್ಮನನ್ನು ತೋರಿಸುವ ಅಥವಾ ಆತ್ಮದ ಕಡೆಗೆ ಒಯ್ಯುವ ಮುಖ್ಯಧ್ಯೇಯವನ್ನು ಹೊಂದಿವೆ. ಜ್ಯೋತಿಷವಾಗಲೀ, ವ್ಯಾಕರಣವಾಗಲೀ, ಸಂಗೀತವಾಗಲೀ, ನಾಟ್ಯವಾಗಲೀ, ಆಯುರ್ವೇದವಾಗಲೀ, ಯಾವುದೇ ಶಾಸ್ತ್ರ ಅಥವಾ ಕಲೆಗಳೇ ಆಗಲೀ–ಆತ್ಮದರ್ಶನದ ಕಡೆಗೆ ಮಾನವನ ಮನಸ್ಸನ್ನು ಒಯ್ಯುತ್ತವೆ. ಉಪನಿಷತ್ತುಗಳ ಸಾರವೇ ಆತ್ಮದರ್ಶನವಾಗಿದೆ. "ಹಾ3 ಉಹಾ3 ಉಹಾ3ಉ" ಮೊದಲಾದ ವಾಕ್ಯಗಳು ಆತ್ಮದರ್ಶನವನ್ನು ಮಾಡಿದವನು–ದರ್ಶನಮಾಡಿದ ಕಾಲದಲ್ಲಿ ಹೇಳುವ ವಾಕ್ಯಗಳಾಗಿವೆ. ಆತ್ಮದರ್ಶನಮಾಡಿದವನು ಯಾವ ಯಾವ ಅನುಭವಗಳನ್ನು ಪಡೆದು ಹೇಳುತ್ತಾನೆಯೋ–ಅವುಗಳೇ ಉಪನಿಷತ್ತುಗಳು ಅಥವಾ ಉಪನಿಷದ್ವಾಕ್ಯಗಳು. ಈ ಕಾರಣದಿಂದಲೇ ಆತ್ಮಜ್ಞಾನಿಯು ಉಪ ನಿಷತ್ತುಗಳನ್ನಾಗಲೀ ವೇದ-ಶಾಸ್ತ್ರಗಳನ್ನಾಗಲೀ ತಿಳಿದಿರಬೇಕೆಂಬ ನಿಯಮ ವಿಲ್ಲ. ಆತ್ಮಜ್ಞಾನಿಯು ಇಂದಿನ ಪ್ರಪಂಚದೃಷ್ಟಿಯಿಂದ ಅನಕ್ಷರಸ್ಥನಾಗಿಯೂ ಇರಬಹುದು. ಆದರೆ ಆ ಮಹಾನುಭಾವನು ಯಾವುದೇ ಭಾಷೆಯಲ್ಲಿ ಮಾತನಾಡಿದರೂ ಆ ಮಾತುಗಳು ಉಪನಿಷತ್ತುಗಳ ಸಾರವೇ ಆಗಿರುತ್ತದೆ. ಆದುದರಿಂದ ಮಾನವನು ಸೋಽಹಂ ಇತ್ಯಾದಿ ಯಾವುದೇ ಒಂದು ಮಹಾವಾಕ್ಯವನ್ನು ಅನುಸಂಧಾನಮಾಡಿ ಮಹಾಗುರುವಿನ ಕೃಪೆಯಿಂದ ಆತ್ಮದರ್ಶನಮಾಡಿಕೊಂಡಲ್ಲಿ ಆತ್ಮಬೋಧಕಗಳಾದ ಉಪನಿಷದ್ರಾಶಿಗಳೂ, ವೇದ-ಶಾಸ್ತ್ರಗಳೂ ಅವನಿಗೆ ನಿರರ್ಥಕಗಳಾಗುತ್ತವೆ. ಈ ವಿಷಯವನ್ನೇ ಮಾರ್ಕಂಡೇಯರು ಪುನಃ ಹೇಳುತ್ತಾರೆ.)

**ದ್ವ್ಯಕ್ಷರಾದಭಿಸಂಧಾಯ ಕೇಚಿಚ್ಛ್ಲೋಕಪದಾಙ್ಕಿತೈಃ ।**
**ಶತೈರನ್ಯೈಃ ಸಹಸ್ರೈಶ್ಚ ಪ್ರತ್ಯಯೋ ಮೋಕ್ಷಲಕ್ಷಣಮ್ ॥೧೧॥**

ಯುಧಿಷ್ಠಿರ! ಎರಡೇ ಅಕ್ಷರದ (ಸೋಽಹಂ ಅಥವಾ ದ್ವಯ ಮಂತ್ರದ) ಅನುಸಂಧಾನಮಾಡಿ ಆತ್ಮಸಾಕ್ಷಾತ್ಕಾರವನ್ನು ಪಡೆದವರೂ ಇದ್ದಾರೆ. ಮತ್ತೆ ಕೆಲವರು ಸಾಂಗವೇದಾಧ್ಯಯನಮಾಡಿ, ಉಪನಿಷತ್ತು ಗಳನ್ನೂ ಶ್ಲೋಕ-ಸೂತ್ರ-ಪದಗಳಿಂದ ಯುಕ್ತವಾದ ನೂರಾರು–ಸಾವಿ ರಾರು ಶಾಸ್ತ್ರವಾಕ್ಯಗಳನ್ನೂ ಅಧ್ಯಯನಮಾಡಿ ಅವುಗಳ ಅನುಸಂಧಾನ

ದಿಂದ ಆತ್ಮಸಾಕ್ಷಾತ್ಕಾರವನ್ನು ಪಡೆಯುತ್ತಾರೆ. ಆತ್ಮಸಾಕ್ಷಾತ್ಕಾರವೇ ಮೋಕ್ಷದ ಲಕ್ಷಣ. (ದೇಹಾತ್ಮಗಳ ಭೇದವನ್ನು ತಿಳಿಯಬೇಕಾದರೆ–ದೇಹಾತ್ಮಗಳ ಭೇದಭಾವನೆಯಿಂದಲೇ ಅನುಸರಿಸಿ ಬರುವ ಕರ್ಮ ವಿಪಾಕಗಳನ್ನು ಸುಟ್ಟುಹಾಕಬೇಕಾದರೆ–ಆತ್ಮದರ್ಶನವೊಂದೇ ಮಾರ್ಗ. ಆತ್ಮ ದರ್ಶನವೊಂದಲ್ಲದೇ ಮತ್ತಾವ ಕರ್ಮಗಳಿಂದಲೂ ಸಂಚಿತ ಪ್ರಾರಬ್ಧಾದಿ ಕರ್ಮಗಳನ್ನು ತೊಡೆದುಹಾಕುವ ಸಾಧ್ಯತೆಯಿಲ್ಲ. ಆದರೆ ಚರ್ಮ ಚಕ್ಷುಸ್ಸಿಗೆ ಗೋಚರವಾಗಲಾರದ ವಸ್ತುವೊಂದು ಇದೆಯೆಂದು ನಂಬಲೂ ಮಾನವನಿಗೆ ಸಾಧ್ಯವಾಗದು. ಆದುದರಿಂದ ಪ್ರಪಂಚದಲ್ಲಿರುವ ಎಲ್ಲ ವಿಜ್ಞಾನಿಗಳೂ ಪ್ರತ್ಯಕ್ಷವಾಗಿ ಸಿದ್ಧವಾಗುವ ವಿಜ್ಞಾನದಲ್ಲಿಯೇ ತಮ್ಮ ಬುದ್ಧಿಯನ್ನು ಪ್ರವಹಿಸಿದ್ದಾರೆ. ಆದರೆ ಈ ವಿಜ್ಞಾನಕ್ಕೆ ಅಂತ್ಯವಿಲ್ಲ. ಇನ್ನೂ ಸಾವಿರಾರು ಯುಗಗಳು ಕಳೆದರೂ ಬ್ರಹ್ಮಗರ್ಭದ ಆಸ್ಫೋಟವನ್ನು ಈ ವಿಜ್ಞಾನಿಯು ಮಾಡಲಾರನು. ಈ ಕಾರಣದಿಂದಲೇ ನಮ್ಮ ಋಷಿ-ಮಹರ್ಷಿಗಳು ಆ ಮಾರ್ಗವನ್ನು ಕೈಬಿಟ್ಟರು. ಯಾವ ಮೂಲವನ್ನು ಹಿಡಿಯುವುದರಿಂದ ಬ್ರಹ್ಮಗರ್ಭದ ವೈಚಿತ್ರ್ಯವು ತಾನಾಗಿಯೇ ಗೋಚರವಾಗುವುದೋ–ಆ ಬ್ರಹ್ಮ ವಸ್ತುವಿನ ದರ್ಶನಕ್ಕೆ ಹಾತೊರೆದು ಮತ್ತು ಅದರಲ್ಲಿ ಫಲವನ್ನೂ ಹೊಂದಿದರು. ಜ್ಞಾನ-ವಿಜ್ಞಾನಗಳೆಡರ ಅರಿವೂ ಅವರಿಗುಂಟಾಯಿತು.) ಹೃದಯ ಗುಹೆಯಲ್ಲಿ ಆತ್ಮನಿರುವನೆಂಬುದನ್ನು ನಂಬಿ ಒಳಗಣ್ಣಿನ ಮೂಲಕವಾಗಿ ಅವನನ್ನು ಕಂಡುಕೊಳ್ಳುವುದೇ ಮೋಕ್ಷ ಅಥವಾ ಮೋಕ್ಷದ ಲಕ್ಷಣ.

**ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ ।**
**ಊಚುರ್ಜ್ಞಾನವಿದೋ ವೃದ್ಧಾಃ ಪ್ರತ್ಯಯೋ ಮೋಕ್ಷಲಕ್ಷಣಮ್ ॥೧೧೨॥**

'ಆತ್ಮ' ಎಂಬುದೊಂದಿದೆ. ಇದು ಸಕಲಪ್ರಾಣಿಗಳ ಹೃದಯ ಗಳಲ್ಲಿಯೂ ಜ್ಯೋತಿಯಂತೆ ಬೆಳಗುತ್ತಿದೆ. ಇದನ್ನು ಜ್ಞಾನಚಕ್ಷುಸ್ಸಿನಿಂದ ನೋಡಲು ಸಾಧ್ಯವಿದೆ. ಈ ಆತ್ಮದರ್ಶನವೇ ವೇದೋಪನಿಷತ್ತುಗಳ ಪರಮ ಧ್ಯೇಯ–ಎಂಬ ನಿಶ್ಚಯಜ್ಞಾನವು ಯಾರಿಗಿರುವುದಿಲ್ಲವೋ (ಸಂಶಯಗ್ರಸ್ತ ರಾಗಿಯೇ ಇರುವರೋ) ಮತ್ತು ಈ ದೀಪದ ದರ್ಶನಕ್ಕೆ ಯಾರು ಯತ್ನಿಸುವುದಿಲ್ಲವೋ–ಅವರಿಗೆ ಇಹ-ಪರಗಳೆರಡೂ ಇಲ್ಲವೆಂಬುದು ಜ್ಞಾನವೃದ್ಧರ ಮತ್ತು ವಯೋವೃದ್ಧರ ಅಭಿಪ್ರಾಯವಾಗಿದೆ.

**ವಿದಿತಾರ್ಥಸ್ತು ವೇದಾನಾಂ ಪರಿವೇದ ಪ್ರಯೋಜನಮ್ ।**
**ಉದ್ವಿಜೇತ್ಸ ತು ವೇದೇಭ್ಯೋ ದಾವಾಗ್ನೇರಿವ ಮಾನವಃ ॥೧೧೬॥**

ಆತ್ಮತತ್ತ್ವವು ಯಾವನಿಗೆ ತಿಳಿದಿರುವುದೋ–ಅವನಿಗೆ ವೇದೋಪನಿಷತ್ತುಗಳ ಅರ್ಥವು ಸಂಪೂರ್ಣವಾಗಿ ತಿಳಿದಿದೆಯೆಂದೇ ಹೇಳಬೇಕು. ಇಂತಹ ಆತ್ಮಜ್ಞಾನಿಯು ವೇದೋಕ್ತವಾದ ಇತರ ಕಾಮ್ಯಕರ್ಮಗಳ ವಿಷಯವಾಗಿ ಕಾಡುಗಿಚ್ಚನ್ನು ನೋಡಿದ ಮಾನವನು ಭಯಪಡುವಂತೆ-ಭಯಪಡುತ್ತಾನೆ. (ಆತ್ಮದರ್ಶನವಾದನಂತರ ಆತ್ಮಜ್ಞಾನಿಗೆ ದೇಹಾತ್ಮಗಳ ಭೇದ ಜ್ಞಾನವುಂಟಾಗಿ, ದೇಹಸಂಬಂಧವಾದ ಪಾಪ-ಪುಣ್ಯಗಳೆರಡೂ ಭಸ್ಮವಾಗಿ ಹೋಗುವುದರಿಂದ ದೇಹಕ್ಕೆ ಸಂಬಂಧಿಸಿದ ಕರ್ಮಗಳ ವಿಷಯದಲ್ಲಿ ಅನಾ ಸಕ್ತಿಯುಂಟಾಗುವುದು ಸ್ವಾಭಾವಿಕವಾಗಿಯೇ ಇದೆ. ಆದರೆ ಆತ್ಮಜ್ಞಾನಿಯು ತಾನು ವೇದೋಕ್ತ ಕರ್ಮಗಳನ್ನು ಮಾಡಲು ಅನಾಸಕ್ತನಾಗಿರುವನೇ ಹೊರತು ಬೇರೆಯವರು ಮಾಡಕೂಡದೆಂದು ಹೇಳುವುದಿಲ್ಲ. ಹಾಗೆ ಹೇಳಲೂ ಬಾರದು. ವೇದೋಕ್ತಕರ್ಮಗಳು ಆತ್ಮದರ್ಶನದೆಡೆಗೆ ಹೋಗಲು ಒಂದೊಂದು ಮೆಟ್ಟಿಲಾಗಿರುತ್ತವೆ. ಈ ಗುಹ್ಯವಿಷಯವನ್ನು ಪ್ರತಿಯೊಂದು ಕರ್ಮದಲ್ಲಿಯೂ ತಿಳಿದುಕೊಂಡು ಕರ್ಮಮಾಡಬೇಕು.)

**ಶುಷ್ಕಂ ತರ್ಕಂ ಪರಿತ್ಯಜ್ಯ ಆಶ್ರಯಸ್ವ ಶ್ರುತಿಂ ಸ್ಮೃತಿಮ್ ।**
**ಏಕಾಕ್ಷರಾಭಿಸಮ್ಬುದ್ಧಂ ತತ್ತ್ವಂ ಹೇತುಭಿರಚ್ಛಸಿ ।**
**ಬುದ್ಧಿರ್ನ ತಸ್ಯ ಸಿದ್ಧ್ಯೇತ ಸಾಧನಸ್ಯ ವಿಪರ್ಯಯಾತ್ ॥೧೧೭॥**

ಯುಧಿಷ್ಠಿರ! ಒಣತರ್ಕವನ್ನು ಪರಿತ್ಯಜಿಸು. ಆತ್ಮವಸ್ತುವೆಂಬುದೊಂದು ಹೃದಯಗುಹೆಯಲ್ಲಿರುವುದೇ–ಇಲ್ಲವೇ? ಎಂಬುದನ್ನು ತರ್ಕ-ವಿತರ್ಕಗಳಿಂದ ಸಿದ್ಧಪಡಿಸುವ ಸಾಧ್ಯತೆಯಿಲ್ಲ. ಇದು ತರ್ಕಕ್ಕೆ ಮೀರಿದ ವಸ್ತುವಾಗಿರುವುದು. ಶ್ರುತಿ-ಸ್ಮೃತಿಗಳ ಆಧಾರಗಳಿಂದ ಆತ್ಮವಸ್ತುವಿದೆ ; ಪ್ರಪಂಚದಲ್ಲಿರುವ ಸಕಲಪ್ರಾಣಿಗಳ ಹೃದಯಗಳಲ್ಲಿಯೂ ಈ ಆತ್ಮವಸ್ತುವು ಇದೆ–ಎಂಬುದನ್ನು ನಂಬಬೇಕು. ಅನಂತರ ಈ ಆತ್ಮವಸ್ತುವನ್ನು ಕಂಡುಕೊಳ್ಳಲು ಪ್ರಯತ್ನಿಸಬೇಕು. ಆತ್ಮವಸ್ತುವಿದೆಯೆಂಬ ನಿಶ್ಚಯಜ್ಞಾನವಿಲ್ಲದೇ ಮಾಡುವ ಸಾಧನೆಯು ನಿಷ್ಪ್ರಯೋಜಕವಾಗುತ್ತದೆ.

**ವೇದಪೂರ್ವಂ ವೇದಿತವ್ಯಂ ಪ್ರಯತ್ನಾ-**
**ತ್ತದ್ದೈ ವೇದಸ್ತಸ್ಯ ವೇದಃ ಶರೀರಮ್ ।**
**ವೇದಸ್ತತ್ತ್ವಂ ತತ್ಸಮಾಸೋಪಲಬ್ಧೌ**
**ಕ್ಲೀಬಸ್ತ್ವಾತ್ಮಾ ತತ್ಸ ವೇದ್ಯಸ್ಯ ವೇದ್ಯಮ್ ॥೧೧೫॥**

ಧರ್ಮಜ! ಬಹಳವಾಗಿ ಪ್ರಯತ್ನಮಾಡಿಯಾದರೂ ಪರಮಾತ್ಮತತ್ತ್ವವನ್ನು ವೇದಗಳಿಂದಲೇ ತಿಳಿಯಬೇಕು. ಏಕೆಂದರೆ : ಪರಮಾತ್ಮತತ್ತ್ವವು ವೇದಸ್ವರೂಪವೇ ಆಗಿದೆ. ವೇದವೇ ಪರಮಾತ್ಮತತ್ತ್ವಕ್ಕೆ ಶರೀರ. ವೇದದ ಸೂಕ್ಷ್ಮಭಾವವೇ ಆತ್ಮ. ಈ ಆತ್ಮವು ಸ್ವಯಂಪ್ರಕಾಶವುಳ್ಳದ್ದು. ವೇದಪ್ರತಿಪಾದ್ಯನಾದ, ವೇದಗರ್ಭನಾದ ಈ ಆತ್ಮನನ್ನು ಅಜ್ಞಾನಿಯು ನೋಡಲಾರನು. ಪರಿಶುದ್ಧವಾದ ಬುದ್ಧಿಯುಳ್ಳವನು ಮಾತ್ರವೇ ಇವನನ್ನು ಒಳಗಣ್ಣಿನಿಂದ ನೋಡಬಲ್ಲನು.

**ವೇದೋಕ್ತಮಾಯುರ್ದೇವಾನಾಮಾಶಿಷಶ್ಚೈವ ಕರ್ಮಣಾಮ್ ।**
**ಫಲತ್ಯನುಯುಗಂ ಲೋಕೇ ಪ್ರಭಾವಶ್ಚ ಶರೀರಿಣಾಮ್ ॥೧೧೬॥**

ಧರ್ಮಜ! ಪ್ರತಿಯೊಂದು ಯುಗದಲ್ಲಿಯೂ ವೇದಗಳಲ್ಲಿ ಹೇಳಿರುವಂತೆ ದೇವತೆಗಳ ಆಯುರ್ಭಾವವಿರುತ್ತದೆ. ಯಜ್ಞ-ಯಾಗಾದಿ ಕರ್ಮಗಳಿಂದ ದೇವತೆಗಳು ಸುಪ್ರೀತರಾಗುತ್ತಾರೆ ಮತ್ತು ಆ ಕರ್ಮಗಳ ಅನುಷ್ಠಾನದಿಂದಲೇ ಮನುಷ್ಯರೂ ಪ್ರಭಾವಶಾಲಿಗಳಾಗಿರುತ್ತಾರೆ. (ಕರ್ಮಮಾಡುವುದು ಮಾನವನ ಸ್ವಭಾವ. ಮಾನವನು ಫಲದ ಕಾಮನೆಯಿಂದ ಕರ್ಮಗಳನ್ನು ಮಾಡುತ್ತಿರುತ್ತಾನೆ. ದೇವತೆಗಳೂ ಸುಪ್ರೀತರಾಗಿ ಫಲವನ್ನೂ ಕೊಡುತ್ತಿರುತ್ತಾರೆ. ಆದರೆ ಭೌತಿಕವಿಜ್ಞಾನಕ್ಕೆ ಅಂತ್ಯವೆಂಬುದು ಹೇಗೆ ಇಲ್ಲವೋ–ಅದೇ ರೀತಿಯಲ್ಲಿ ಕರ್ಮಗಳಿಗೂ ಮತ್ತು ಕರ್ಮಫಲಗಳಿಗೂ ಅಂತ್ಯವೇ ಇರುವುದಿಲ್ಲ. ಫಲವು ಮುಗಿದುಹೋದ ನಂತರ ಪುನಃ ಕರ್ಮಮಾಡಬೇಕು. ಯಜ್ಞ-ಯಾಗಾದಿಗಳನ್ನು ಮಾಡಿ ದೇವತೆಗಳ ಅನುಗ್ರಹದಿಂದ ಪಡೆಯುವ ಫಲಗಳೆಲ್ಲವೂ ನಿಯತವಾದುವುಗಳು. ನಿಯತವಾದ ಕಾಲವರೆಗೆ ಮಾತ್ರ ಕರ್ಮಫಲವನ್ನು ಅನುಭವಿಸುತ್ತಿರಬಹುದು. ಕರ್ಮಫಲವು ತೀರಿದನಂತರ ಪುನಃ ಕರ್ಮಮಾಡಬೇಕಾಗುವುದು . ಇದು ಪ್ರತಿಯೊಂದು ಯುಗದಲ್ಲಿಯೂ ಸ್ವಾಭಾ

ವಿಕವಾಗಿಯೇ ನಡೆಯುತ್ತಿರುತ್ತದೆ. ಈ ಕರ್ಮದ ಶೃಂಖಲೆಯನ್ನು ತಪ್ಪಿಸಿ ಕೊಳ್ಳಬೇಕಾದರೆ ಮನುಷ್ಯನು ಆತ್ಮದರ್ಶನಕ್ಕಾಗಿ ಪ್ರಯತ್ನಿಸಬೇಕು.)

**ಇನ್ದ್ರಿಯಾಣಾಂ ಪ್ರಸಾದೇನ ತದೇತತ್ಪರಿವರ್ಜಯೇತ್ ।**
**ತಸ್ಮಾದನಶನಂ ದಿವ್ಯಂ ನಿರದ್ಧೇನ್ದ್ರಿಯಗೋಚರಮ್ ॥೧೧೭॥**

ಇಂದ್ರಿಯಗಳನ್ನು ಪರಿಶುದ್ಧವಾಗಿ ಇಟ್ಟುಕೊಳ್ಳುವುದರಿಂದ ಆತ್ಮ ದರ್ಶನದ ಸಾಧನೆಯನ್ನು ಮಾಡಬಹುದಾಗಿದೆ. ಯುಧಿಷ್ಠಿರ! ಆದುದರಿಂದ, ಉಪವಾಸವೆಂದರೆ ಅನ್ನ-ನೀರನ್ನು ಬಿಟ್ಟು ಶರೀರವನ್ನು ಶೋಷಿಸುವುದಲ್ಲ. ಇಂದ್ರಿಯಗಳ ಬಹಿರ್ವ್ಯಾಪಾರವನ್ನು ನಿರೋಧಿಸಿ ಬುದ್ಧಿಯ ಮೂಲಕ ಒಳಗಿನ ಕಣ್ಣಿನಿಂದ ಆತ್ಮದರ್ಶನಮಾಡುವುದೇ ಉಪವಾಸ.

**ತಪಸಾ ಸ್ವರ್ಗಗಮನಂ ಭೋಗೋ ದಾನೇನ ಜಾಯತೇ ।**
**ಜ್ಞಾನೇನ ಮೋಕ್ಷೋ ವಿಜ್ಞೇಯಸ್ತೀರ್ಥಸ್ನಾನಾದಘಕ್ಷಯಃ ॥೧೧೮॥**

ತಪಸ್ಸಿನಿಂದ ಸ್ವರ್ಗಸುಖವನ್ನು ಪಡೆಯಬಹುದು. ದಾನಮಾಡುವುದರಿಂದ ಸುಖೋಪಭೋಗಗಳನ್ನು ಪಡೆಯಬಹುದು. ಪುಣ್ಯತೀರ್ಥಗಳಲ್ಲಿ ಸ್ನಾನಮಾಡುವುದರಿಂದ ಪಾಪಗಳನ್ನು ಪರಿಹರಿಸಿಕೊಳ್ಳಬಹುದು. ಆದರೆ ಮೋಕ್ಷವು ಲಭ್ಯವಾಗಬೇಕಾದರೆ ಆತ್ಮಜ್ಞಾನದಿಂದ ಮಾತ್ರವೇ ಸಾಧ್ಯವಾಗುವುದು."

ಜನಮೇಜಯ! ಮಾರ್ಕಂಡೇಯಮಹರ್ಷಿಗಳ ದಿವ್ಯೋಪದೇಶವನ್ನು ಕೇಳಿ ಮಹಾಯಶೋವಂತನಾದ ಯುಧಿಷ್ಠಿರನು ಪರಮಸಂತುಷ್ಟನಾಗಿ ಮಾರ್ಕಂಡೇಯರನ್ನು ಪುನಃ ಪ್ರಶ್ನಿಸಿದನು :

ಮಹರ್ಷಿಗಳೇ! ಮಹಾಪುಣ್ಯಪ್ರಾಪಕವಾದ ದಾನದ ವಿಧಿಯನ್ನು ನಿಮ್ಮಿಂದ ಕೇಳಿ ತಿಳಿಯಬೇಕೆಂದಿದ್ದೇನೆ."

"ಯುಧಿಷ್ಠಿರ! ನೀನು ತಿಳಿಯಬೇಕೆಂದಿರುವ ದಾನದ ವಿಧಿಯನ್ನು ಹೇಳಲು ನನಗೂ ಹೆಚ್ಚಿನ ಆಸಕ್ತಿಯಿರುವುದು. ಶ್ರುತಿ-ಸ್ಮೃತಿಗಳಲ್ಲಿ ಪ್ರತಿಪಾದಿತವಾಗಿರುವ ದಾನದ ರಹಸ್ಯವನ್ನು ತಿಳಿಸುವೆನು. ಏಕಾಗ್ರಚಿತ್ತನಾಗಿ ಕೇಳು.

**ಛಾಯಾಯಾಂ ಕರಿಣಃ ಶ್ರಾದ್ಧಂ ತತ್ಕರ್ಣಪರಿವೀಜಿತೇ ।**
**ದಶ ಕಲ್ಪಾಯುತಾನೀಹ ನ ಕ್ಷೀಯೇತ ಯುಧಿಷ್ಠಿರ ॥೧೨೧॥**

ಅಮಾವಾಸ್ಯೆಯ ಗುರುವಾರ ಬಂದ ದಿನದಂದು ಅಶ್ವತ್ಥವೃಕ್ಷದ ನೆರಳನ್ನು ಗಜಚ್ಛಾಯಾ ಎಂದು ಹೇಳುತ್ತಾರೆ. ಅಂದಿನ ದಿನ ಅಶ್ವತ್ಥವೃಕ್ಷದ ಸಮೀಪದಲ್ಲಿರುವ ತಟಾಕಾದಿಗಳ ಬಳಿಯಲ್ಲಿ ಶ್ರಾದ್ಧಮಾಡಿದರೆ ಅದರ ಫಲವು ಲಕ್ಷಕಲ್ಪಗಳ ಪರ್ಯಂತವಾಗಿರುತ್ತದೆ.

**ಜೀವನಾಯ ಸಮಾಕ್ಲಿನ್ನಂ ವಸು ದತ್ತ್ವಾ ಮಹೀಯತೇ ।**
**ವೈಶ್ಯಂ ತು ವಾಸಯೇದ್ಯಸ್ತು ಸರ್ವಯಜ್ಞೈಃ ಸ ಇಷ್ಟವಾನ್ ॥೧೨೨॥**

ಹಸಿದು ಬಂದವರಿಗೆ ಅನ್ನವಿಡುವವನೂ, ಅತಿಥಿಗಳಿಗೆ ತಂಗಲು ಆಶ್ರಯ ವನ್ನು ಕೊಡುವವನೂ, ಬಳಲಿ ಬಂದವರಿಗೆ ವಿಶ್ರಮಿಸಿಕೊಳ್ಳಲು ವಿಶ್ರಾಂತಿ ಗೃಹಗಳನ್ನು ಮಾರ್ಗಮಧ್ಯದಲ್ಲಿ ನಿರ್ಮಿಸುವವನೂ–ಸಕಲವಿಧವಾದ ಯಜ್ಞ ಗಳನ್ನೂ ಮಾಡಿದವರಿಗೆ ಪ್ರಾಪ್ತವಾಗುವ ಫಲವನ್ನು ಹೊಂದುತ್ತಾನೆ.

**ಪ್ರತಿಸ್ರೋತಶ್ಚಿತ್ರವಾಹಾಃ ಪರ್ಜನ್ಯೋಽನ್ನಾನುಸಂಚರನ್ ।**
**ಮಹಾಧುರಿ ಯಥಾ ನಾವಾ ಮಹಾಪಾಪೈಃ ಪ್ರಮುಚ್ಯತೇ ॥೧೨೩॥**

ಪಶ್ಚಿಮವಾಹಿನಿಯಾಗಿರುವ ನದಿಯ ತಟದಲ್ಲಿ ಕುದುರೆಯನ್ನು ದಾನ ಮಾಡುವವನಿಗೆ ಅಮಿತವಾದ ಫಲವು ಪ್ರಾಪ್ತವಾಗುತ್ತದೆ. ನಾನು ಹಿಂದೊಮ್ಮೆ ಹೇಳಿದಂತೆ ಮಧ್ಯಾಹ್ನಕಾಲದಲ್ಲಿ ಆಗಮಿಸುವ ಅತಿಥಿಯು ಸಾಕ್ಷಾತ್ ಇಂದ್ರನೇ ಆಗಿರುತ್ತಾನೆ. ಮಧ್ಯಾಹ್ನಕಾಲದಲ್ಲಿ ಹಸಿದು ಬಳಲಿ ಬರುವ ಅತಿಥಿಯನ್ನು ಸತ್ಕರಿಸಿದರೆ ಇಂದ್ರನನ್ನು ಸತ್ಕರಿಸಿದಂತೆಯೇ ಆಗುತ್ತದೆ. ಈ ಅತಿಥಿಪೂಜೆಯಿಂದ ಇಂದ್ರನು ಸುಪ್ರೀತನಾಗಿ ಮಹಾಫಲವನ್ನು ಅನುಗ್ರಹಿಸುತ್ತಾನೆ. ಮನುಷ್ಯರು ದೋಣಿಯಲ್ಲಿ ಕುಳಿತು ಸಮುದ್ರವನ್ನು ಅಥವಾ ನದಿಯನ್ನು ದಾಟುವಂತೆ–ಮೇಲೆ ಹೇಳಿದ ಧರ್ಮಕ್ರಿಯೆಗಳಿಂದ ಮಾನವನು ಸಕಲಪಾಪಗಳಿಂದಲೂ ವಿಮುಕ್ತನಾಗಿ ಈ ಸಂಸಾರಮಹಾ ಸಾಗರವನ್ನು ದಾಟುತ್ತಾನೆ.

**ವಿಪ್ಲವೇ ವಿಪ್ರದತ್ತಾನಿ ದಧಿಮಸ್ತ್ವಕ್ಷಯಾಣಿ ಚ ।**
**ಪರ್ವಸು ದ್ವಿಗುಣಂ ದಾನಮೃತೌ ದಶಗುಣಂ ಭವೇತ್ ॥೧೨೪॥**

ಗ್ರಹಣಕಾಲದಲ್ಲಿ ಬ್ರಾಹ್ಮಣನಿಗೆ ಮೊಸರನ್ನೂ ಮತ್ತು ತುಪ್ಪವನ್ನೂ ದಾನಮಾಡುವುದರಿಂದ ಕ್ಷಯರಹಿತವಾದ ಮಹಾಫಲವು ಪ್ರಾಪ್ತವಾಗುತ್ತದೆ. ದಾನಗಳನ್ನು ಅಮಾವಾಸ್ಯೆಯೇ ಮೊದಲಾದ ಪರ್ವಕಾಲಗಳಲ್ಲಿ ಮಾಡಿದರೆ ದ್ವಿಗುಣಿತವಾದ ಫಲವು ಪ್ರಾಪ್ತವಾಗುತ್ತದೆ. ಅದೇ ದಾನವನ್ನು ಋತುಗಳು ಪ್ರಾರಂಭವಾಗುವ ಕಾಲದಲ್ಲಿ ಮಾಡಿದರೆ ಹತ್ತರಷ್ಟು ಫಲವು ಲಭ್ಯವಾಗುತ್ತದೆ.

**ಅಯನೇ ವಿಷುವೇ ಚೈವ ಷಡಶೀತಿಮುಖೇಷು ಚ ।**
**ಚನ್ದ್ರಸೂರ್ಯೋಪರಾಗೇ ಚ ದತ್ತಮಕ್ಷಯಮುಚ್ಯತೇ ॥೧೨೫॥**

ಉತ್ತರಾಯಣ-ದಕ್ಷಿಣಾಯನ ಪ್ರಾರಂಭದಲ್ಲಿಯೂ, ತುಲಾ, ಮೇಷ, ಮಿಥುನ, ಕನ್ಯಾ, ಮೀನ–ಈ ಸಂಕ್ರಮಣಕಾಲಗಳಲ್ಲಿಯೂ, ಸಂವತ್ಸರದ ಮೊದಲನೆಯ ದಿನದಲ್ಲಿಯೂ, ಸೂರ್ಯ-ಚಂದ್ರರ ಗ್ರಹಣಕಾಲದಲ್ಲಿಯೂ ಮಾಡುವ ದಾನವು ಕ್ಷಯರಹಿತವಾದ ಫಲವನ್ನು ಕೊಡುತ್ತದೆ.

**ಋತುಷು ದಶಗುಣಂ ವದನ್ತಿ ದತ್ತಂ**
**ಶತಗುಣಮೃತ್ವಯನಾದಿಷು ಧ್ರುವಮ್ ।**
**ಭವತಿ ಸಹಸ್ರಗುಣಂ ದಿನಸ್ಯ ರಾಹೋ-**
**ರ್ವಿಷುವತಿ ಚಾಕ್ಷಯಮಶ್ನುತೇ ಫಲಮ್ ॥೧೨೬॥**

ಋತುಗಳ ಪ್ರಾರಂಭದ ದಿನಗಳಲ್ಲಿ ಮಾಡುವ ದಾನವು ಹತ್ತುಪಾಲು ಹೆಚ್ಚು ಫಲವನ್ನು ಕೊಡುವುದೆಂದೂ, ದಕ್ಷಿಣಾಯನ ಮತ್ತು ಉತ್ತರಾಯಣ ಪ್ರಾರಂಭದಲ್ಲಿ ಮಾಡುವ ದಾನವು ನೂರು ಪಾಲು ಹೆಚ್ಚು ಫಲಕೊಡುವುದೆಂದೂ, ಗ್ರಹಣಕಾಲದಲ್ಲಿ ಮಾಡುವ ದಾನವು ಸಾವಿರ ಪಾಲು ಹೆಚ್ಚು ಫಲ ಕೊಡುವುದೆಂದೂ, ವಿಷುವತ್ಪುಣ್ಯಕಾಲದಲ್ಲಿ ಮಾಡುವ ದಾನದ ಫಲವು ಕ್ಷಯರಹಿತವಾಗುವುದೆಂದೂ ತಿಳಿದವರು ಹೇಳುತ್ತಾರೆ. (ಈ ದಾನದ ರಹಸ್ಯವನ್ನು ಹೀಗೂ ನಿರೂಪಿಸಬಹುದಾಗಿದೆ. ಯಾವ ಮನುಷ್ಯನು ಯಾವುದನ್ನೇ ದಾನಮಾಡಿದರೂ ಅದರ ಫಲವನ್ನು ಅವನು ಅದೇ ಜನ್ಮದಲ್ಲಿಯೋ ಮರುಜನ್ಮದಲ್ಲಿಯೋ ಪಡೆದೇ ಪಡೆಯುತ್ತಾನೆ. ಅವನು ಅನುಭವಿಸುವ ಸುಖೋಪಭೋಗಗಳಿಂದಲೇ ನಾವು ಆ ಮನುಷ್ಯನು ಹಿಂದಿನ ಜನ್ಮದಲ್ಲಿ ಯಾವ ದಾನಮಾಡಿರಬಹುದೆಂಬುದನ್ನು ಊಹಿಸಬಹುದಾಗಿದೆ.)

**ನಾಭೂಮಿದೋ ಭೂಮಿಮಶ್ನಾತಿ ರಾಜ-**
**ನ್ನಾಯಾನದೋ ಯಾನಮಾರುಹ್ಯ ಯಾತಿ**
**ಯಾನ್ಯಾನ್ಕಾಮಾನ್ಬ್ರಾಹ್ಮಣೇಭ್ಯೋ ದದಾತಿ**
**ತಾಂಸ್ತಾನ್ಕಾಮಾನ್ ಜಾಯಮಾನಃ ಸ ಭುಙ್ಕ್ತೇ ॥೧೨೭॥**

ಭೂಮಿಯನ್ನು ದಾನಮಾಡದವನು ಭೂಪಾಲನಾಗಲಾರನು. ಕುದುರೆ, ಎತ್ತು ಮೊದಲಾದುವುಗಳನ್ನು ದಾನಮಾಡದವನು ತನ್ನದೇ ಆದ ವಾಹನದಲ್ಲಿ ಕುಳಿತು ಪ್ರಯಾಣಮಾಡಲಾರನು. ಮಾನವನು ಈ ಜನ್ಮದಲ್ಲಿ ಯಾವ ಯಾವ ಪದಾರ್ಥಗಳನ್ನು ಪರ್ವಕಾಲಗಳಲ್ಲಿ ಸತ್ಪಾತ್ರರಿಗೆ ದಾನಮಾಡುವನೋ ಅದಕ್ಕೆ ಸಾವಿರ ಪಾಲು ಅಧಿಕವಾದ ಫಲವನ್ನು ಅವನು ಮುಂದಿನ ಜನ್ಮದಲ್ಲಿ ಪಡೆಯುತ್ತಾನೆ. ದಾನಕಾಲದಲ್ಲಿ ಅವನು ಮನಸ್ಸಿನಲ್ಲಿ ಆಶಿಸುವ ಕಾಮನೆಗಳೆಲ್ಲವನ್ನೂ ಪುನರ್ಜನ್ಮದಲ್ಲಿ ಪಡೆಯುವುದರಲ್ಲಿ ಯಾವ ಸಂಶಯವೂ ಇಲ್ಲ.

**ಅಗ್ನೇರಪತ್ಯಂ ಪ್ರಥಮಂ ಸುವರ್ಣಂ**
**ಭೂರ್ವೈಷ್ಣವೀ ಸೂರ್ಯಸುತಾಶ್ಚ ಗಾವಃ ।**
**ಲೋಕಾಸ್ತ್ರಯಸ್ತೇನ ಭವನ್ತಿ ದತ್ತಾ**
**ಯಃ ಕಾಞ್ಚನಂ ಗಾಶ್ಚ ಮಹೀಂ ಚ ದದ್ಯಾತ್ ॥೧೨೮॥**

ಯುಧಿಷ್ಠಿರ! ಸುವರ್ಣವು ಅಗ್ನಿಯಿಂದ ಹುಟ್ಟಿರುವುದು. ಭೂಮಿಯು ವಿಷ್ಣುವಿನಿಂದಲೂ, ಹಸುಗಳು ಸೂರ್ಯನಿಂದಲೂ ಹುಟ್ಟಿವೆ. ಆದುದರಿಂದ ಯಾವನು ಚಿನ್ನ, ಭೂಮಿ ಮತ್ತು ಗೋವುಗಳನ್ನೂ ದಾನಕೊಡುವನೋ ಅವನಿಗೆ ಕ್ರಮವಾಗಿ ಅಗ್ನಿಲೋಕ, ವೈಕುಂಠಲೋಕ ಮತ್ತು ಸೂರ್ಯಲೋಕಗಳು ಪ್ರಾಪ್ತವಾಗುವುವು.

**ಪರಂ ಹಿ ದಾನಾನ್ನ ಬಭೂವ ಶಾಶ್ವತಂ**
**ಭವ್ಯಂ ತ್ರಿಲೋಕೇ ಭವತೇ ಕುತಃ ಪುನಃ ।**
**ತಸ್ಮಾತ್ಪ್ರಧಾನಂ ಪರಮಂ ಹಿ ದಾನಂ**
**ವದನ್ತಿ ಲೋಕೇಷು ವಿಶಿಷ್ಟಬುದ್ಧಯಃ ॥೧೨೯॥**

ಧರ್ಮಜ! ದಾನಕ್ಕಿಂತಲೂ ಪರಮಶ್ರೇಷ್ಠವಾದ ಧರ್ಮವು ಹಿಂದೆಯೂ ಇರಲಿಲ್ಲ ; ಈಗಲೂ ಇಲ್ಲ. ಮೂರು ಲೋಕಗಳಲ್ಲಿಯೂ ದಾನ

ಕ್ಕಿಂತಲೂ ಪವಿತ್ರತಮವಾದ ಕಾರ್ಯವು ಮತ್ತೊಂದಿಲ್ಲ. ದಾನವು ಶಾಶ್ವತ ಫಲದಾಯಕವಾದುದು ; ಭವ್ಯವಾದುದು. ಆದುದರಿಂದಲೇ ಬುದ್ಧಿಸಂಪನ್ನರು ದಾನವೇ ಪರಮಧರ್ಮವೆಂದೂ, ದಾನಕ್ಕಿಂತಲೂ ಶ್ರೇಷ್ಠವಾದ ಧರ್ಮವು ಮತ್ತೊಂದಿಲ್ಲವೆಂದೂ-ಸಾರಿ ಸಾರಿ ಹೇಳುತ್ತಾರೆ."

೨೦೦ನೆಯ ಅಧ್ಯಾಯವು ಮುಗಿಯಿತು.

೨೦೧ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ತಪಸ್ಸಿನಿಂದ ಪ್ರಸನ್ನನಾದ ಭಗವಂತನಿಂದ ಉತ್ತಂಕನಿಗೆ ವರಪ್ರದಾನ : ಕುವಲಾಶ್ವನಿಗೆ ಧುಂಧುಮಾರನೆಂಬ ಹೆಸರು ಬರಲು ಕಾರಣ

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಯುಧಿಷ್ಠಿರನು ಮಾರ್ಕಂಡೇಯಮಹರ್ಷಿಗಳ ಮುಖಾರವಿಂದದಿಂದ ಇಂದ್ರದ್ಯುಮ್ನನು ಪುನಃ ಸ್ವರ್ಗಾರೋಹಣಮಾಡಿದ ಪವಿತ್ರಕಥಾಪ್ರವಚನವನ್ನೂ-ಅದಕ್ಕೆ ಸಂಬಂಧಿಸಿದಂತೆ ದಾನ, ದಯೆ ಮತ್ತು ಅಧ್ಯಾತ್ಮವಿಷಯಗಳನ್ನೂ ಕೇಳಿದನಂತರ ತಪೋವೃದ್ಧರಾದ, ದೀರ್ಘಾಯುಷ್ಮಂತರಾದ ಕಲ್ಮಷರಹಿತರಾದ ಮಾರ್ಕಂಡೇಯಮಹರ್ಷಿಗಳನ್ನು ಪುನಃ ಪ್ರಶ್ನಿಸಿದನು :

"ಮಹರ್ಷಿಗಳೇ! ನಿಮಗೆ ದೇವ-ದಾನವ-ರಾಕ್ಷಸರೆಲ್ಲರ ಪರಿಚಯವೂ ಇರುವುದು. ರಾಜರ ಮತ್ತು ಋಷಿ-ಮಹರ್ಷಿಗಳ ವಂಶಚಾರಿತ್ರ್ಯವೂ ಸ್ಪಷ್ಟವಾಗಿ ತಿಳಿದಿರುವುದು. ನಿಮಗೆ ಈ ಮೂರು ಲೋಕಗಳಲ್ಲಿಯೂ ತಿಳಿಯದಿರುವ ವಿಷಯವೇ ಇಲ್ಲ. ಅದೂ ಅಲ್ಲದೇ ನೀವು ಮನುಷ್ಯರು, ಸರ್ಪಗಳು, ರಾಕ್ಷಸರು, ದೇವತೆಗಳು. ಯಕ್ಷ-ಗಂಧರ್ವ-ಕಿನ್ನರ-ಕಿಂಪುರುಷರು, ಅಪ್ಸರೆಯರು–ಇವರುಗಳಿಗೆ ಸಂಬಂಧಿಸಿದ ಕಥೆಗಳನ್ನೂ ಆಮೂಲಾಗ್ರವಾಗಿ ತಿಳಿದವರಾಗಿರುವಿರಿ. ಈ ಕಾರಣದಿಂದಲೇ ನಾನು ಇಕ್ಷ್ವಾಕುವಂಶಪ್ರದೀಪನಾದ ಅಜೇಯನಾದ ಕುವಲಾಶ್ವನ ಸುಚರಿತ್ರೆಯನ್ನು ನಿಮ್ಮ ಮುಖಾರವಿಂದದಿಂದ ಕೇಳಿ ತಿಳಿದುಕೊಳ್ಳಲಿಚ್ಛಿಸಿದ್ದೇನೆ. ಆ ಮಹಾನುಭಾವನಿಗೆ ಕೆಲವು ಕಾಲಾ

ನಂತರದಲ್ಲಿ ಧುಂಧುಮಾರನೆಂಬ ಹೆಸರು ಬಂದಿತೆಂದೂ ಕೇಳಿದ್ದೇನೆ. ಕುವಲಾಶ್ವನು ಧುಂಧುಮಾರನು ಹೇಗಾದನು? ಅವನಿಗೆ ಆ ಹೆಸರು ಬರಲು ಕಾರಣವೇನು? ಈ ವಿಷಯವನ್ನು ವಿಶದವಾಗಿ ಹೇಳುವ ಕೃಪೆಮಾಡಿರಿ."

ಜನಮೇಜಯ! ಹೀಗೆಂದು ಯುಧಿಷ್ಠಿರನಿಂದ ಪ್ರಾರ್ಥಿತರಾದ ಮಾರ್ಕಂಡೇಯರು ಧುಂಧುಮಾರನ ಕಥಾಪ್ರವಚನವನ್ನು ಹೇಳಲುಪಕ್ರಮಿಸಿದರು :

"ಯುಧಿಷ್ಠಿರಮಹಾರಾಜ! ಏಕಾಗ್ರಚಿತ್ತನಾಗಿ ಕೇಳು. ಧುಂಧುಮಾರನ ಕಥೆಯನ್ನು ಸವಿಸ್ತರವಾಗಿ ಹೇಳುವೆನು. ಈ ಕಥೆಯು ನಿಶ್ಚಯವಾಗಿಯೂ ಧರ್ಮಪ್ರಾಪಕವಾದುದು. ಈ ಕಥೆಯನ್ನು ಕೇಳುವುದರಿಂದಲೇ ಸಕಲಪಾಪಗಳೂ ಪರಿಹಾರವಾಗುತ್ತವೆ. ಕುವಲಾಶ್ವನಿಗೆ ಧುಂಧುಮಾರನೆಂಬ ಹೆಸರು ಬರಲು ಕಾರಣವನ್ನೂ ತಿಳಿಸುವೆನು.

ಹಿಂದೆ ಬಹುಖ್ಯಾತನಾದ ಉತ್ತಂಕನೆಂಬ ಮಹರ್ಷಿಯೊಬ್ಬನಿದ್ದನು. ಒಂದು ಮರಳುಗಾಡಿನಲ್ಲಿ ಅವನ ದಿವ್ಯಾಶ್ರಮವಿದ್ದಿತು. ಅವನು ಅನೇಕ ವರ್ಷಗಳ ಪರ್ಯಂತವಾಗಿ ಮಹಾವಿಷ್ಣುವನ್ನು ಕುರಿತು ಬಹುಘೋರವಾದ ತಪಸ್ಸನ್ನು ಮಾಡುತ್ತಿದ್ದನು. ಅವನ ನಿಶ್ಚಲತಪಸ್ಸಿಗೆ ಸುಪ್ರೀತನಾದ ಭಗವಾನ್ ಮಹಾವಿಷ್ಣುವು ಶಂಖ-ಚಕ್ರ-ಗದಾಧಾರಿಯಾಗಿ ಉತ್ತಂಕನಿಗೆ ದರ್ಶನವನ್ನಿತ್ತನು. ಶ್ರೀಮಹಾವಿಷ್ಣುವಿನ ಸಂದರ್ಶನವಾದೊಡನೆಯೇ ರೋಮಾಂಚಿತನಾದ ಉತ್ತಂಕನು ಆನಂದಬಾಷ್ಪಗಳನ್ನು ಸುರಿಸುತ್ತಾ ಪ್ರಾಂಜಲಿಯಾಗಿ ನಿಂತು ವಿಷ್ಣುವನ್ನು ಸ್ತೋತ್ರಮಾಡಿದನು :

**ತ್ವಯಾ ದೇವ ಪ್ರಜಾಃ ಸರ್ವಾಃ ಸಸುರಾಸುರಮಾನವಾಃ ।**
**ಸ್ಥಾವರಾಣಿ ಚ ಭೂತಾನಿ ಜಙ್ಗಮಾನಿ ತಥೈವ ಚ ॥೧೪॥**

**ಬ್ರಹ್ಮ ವೇದಾಶ್ಚ ವೇದ್ಯಂ ಚ ತ್ವಯಾ ಸೃಷ್ಟಂ ಮಹಾದ್ಯುತೇ ।**
**ಶಿರಸ್ತೇ ಗಗನಂ ದೇವ ನೇತ್ರೇ ಶಶಿದಿವಾಕರೌ ॥೧೫॥**

**ನಿಃಶ್ವಾಸಃ ಪವನಶ್ಚಾಪಿ ತೇಜೋಽಗ್ನಿಶ್ಚ ತವಾಚ್ಯುತ ।**
**ಬಾಹವಸ್ತೇ ದಿಶಃ ಸರ್ವಾಃ ಕುಕ್ಷಿಶ್ಚಾಪಿ ಮಹಾರ್ಣವಃ ॥೧೬॥**

**ಊರೂ ತೇ ಪರ್ವತಾ ದೇವ ಖಂ ನಾಭಿರ್ಮಧುಸೂದನ ।**
**ಪಾದೌ ತೇ ಪೃಥಿವೀ ದೇವೀ ರೋಮಾಣ್ಯೋಷಧಯಸ್ತಥಾ ॥೧೭॥**

**ಇನ್ದ್ರಸೋಮಾಗ್ನಿವರುಣಾ ದೇವಾಸುರಮಹೋರಗಾಃ ।**
**ಪ್ರಹ್ವಾಸ್ತ್ವಾಮುಪತಿಷ್ಠನ್ತಿ ಸ್ತುವನ್ತೋ ವಿವಿಧೈಃ ಸ್ತವೈಃ ॥೧೮॥**

**ತ್ವಯಾ ವ್ಯಾಪ್ತಾನಿ ಸರ್ವಾಣಿ ಭೂತಾನಿ ಭುವನೇಶ್ವರ ।**
**ಯೋಗಿನಃ ಸುಮಹಾವೀರ್ಯಾಃ ಸ್ತುವನ್ತಿ ತ್ವಾಂ ಮಹರ್ಷಯಃ ॥೧೯॥**

**ತ್ವಯಿ ತುಷ್ಟೇ ಜಗತ್ಸ್ವಾಸ್ಥ್ಯಂ ತ್ವಯಿ ಕ್ರುದ್ಧೇ ಮಹದ್ಭಯಮ್ ।**
**ಭಯಾನಾಮಪನೇತಾಸಿ ತ್ವಮೇಕಃ ಪುರುಷೋತ್ತಮ ॥೨೦॥**

**ದೇವಾನಾಂ ಮಾನುಷಾಣಾಂ ಚ ಸರ್ವಭೂತಸುಖಾವಹಃ ।**
**ತ್ರಿಭಿರ್ವಿಕ್ರಮಣೈರ್ದೇವ ತ್ರಯೋ ಲೋಕಾಸ್ತ್ವಯಾ ಹೃತಾಃ ॥೨೧॥**

**ಅಸುರಾಣಾಂ ಸಮೃದ್ಧಾನಾಂ ವಿನಾಶಶ್ಚ ತ್ವಯಾ ಕೃತಃ ।**
**ತವ ವಿಕ್ರಮಣೈರ್ದೇವಾ ನಿರ್ವಾಣಮಗಮನ್ಪರಮ್ ॥೨೨॥**

**ಪರಾಭೂತಾಶ್ಚ ದೈತ್ಯೇನ್ದ್ರಾಸ್ತ್ವಯಿ ಕ್ರುದ್ಧೇ ಮಹಾದ್ಯುತೇ ।**
**ತ್ವಂ ಹಿ ಕರ್ತಾ ವಿಕರ್ತಾ ಚ ಭೂತಾನಾಮಿಹ ಸರ್ವಶಃ ।**
**ಆರಾಧಯಿತ್ವಾ ತ್ವಾಂ ದೇವಾಃ ಸುಖಮೇಧನ್ತಿ ಸರ್ವಶಃ ॥೨೩॥**

"ದೇವದೇವನೇ! ಮಹಾವಿಷ್ಣೋ! ಈ ಪ್ರಪಂಚದಲ್ಲಿರುವ ಸಕಲ ಚರಾಚರಗಳೂ, ದೇವ-ದಾನವ-ಮಾನವರೂ, ಬ್ರಹ್ಮನೂ, ವೇದಗಳೂ ನಿನ್ನಿಂದಲೇ ಸೃಷ್ಟಿಸಲ್ಪಟ್ಟವರು. ನೀನು ಅಪ್ರಮೇಯನು. ನಿನ್ನ ಶರೀರದ ಆದಿ ಮತ್ತು ಅಂತ್ಯಗಳನ್ನು ಯಾರಿಂದಲೂ ತಿಳಿಯುವ ಸಾಧ್ಯತೆಯಿಲ್ಲ. ಮೇಲೆ ಕಾಣುತ್ತಿರುವ ಅಗಣಿತಯೋಜನವಿಸ್ತೀರ್ಣವಾದ ಆಕಾಶವೇ ನಿನ್ನ ಶಿರಸ್ಸು. ಆಕಾಶದಲ್ಲಿ ಬೆಳಗುತ್ತಿರುವ ಸೂರ್ಯ-ಚಂದ್ರರೇ ನಿನ್ನ ನೇತ್ರದ್ವಯಗಳು. ವಾಯುದೇವನೇ ನಿನ್ನ ಉಚ್ಛ್ವಾಸ-ನಿಃಶ್ವಾಸರೂಪನಾಗಿರುವನು. ಅಗ್ನಿ ದೇವನೇ ನಿನ್ನ ತೇಜೋರೂಪನಾಗಿರುವನು. ದಶದಿಕ್ಕುಗಳೇ ನಿನ್ನ ನೀಳ ವಾದ ತೋಳುಗಳು. ಚತುಸ್ಸಮುದ್ರಗಳೇ ನಿನ್ನ ಉದರ. ಮಹೋನ್ನತ

ವಾದ ಗಗನಚುಂಬಿಯಾದ ಪರ್ವತಗಳೇ ನಿನ್ನ ತೊಡೆಗಳು. ಸ್ವರ್ಗವೇ ನಿನ್ನ ನಾಭಿ. ಈ ಭೂಮಾತೆಯೇ ನಿನ್ನ ಪಾದಪದ್ಮದ್ವಯರೂಪಳಾಗಿದ್ದಾಳೆ. ಭೂಮಿಯ ಮೇಲೆ ಬೆಳೆದಿರುವ ಓಷಧಿಲತೆಗಳೇ ನಿನ್ನ ರೋಮಕೋಟಿಗಳು. ಇಂದ್ರ, ಸೋಮ, ಅಗ್ನಿ, ವರುಣರೇ ಮೊದಲಾದ ದೇವತೆಗಳೂ, ಅಸುರರೂ, ಸರ್ಪಾಧಿದೇವತೆಗಳೂ ಬದ್ಧಾಂಜಲಿಗಳಾಗಿ ಮತ್ತು ನತಶಿರರಾಗಿ ನಿಂತು ಸರ್ವದಾ ನಿನ್ನನ್ನು ಸ್ತೋತ್ರಮಾಡುತ್ತಿರುತ್ತಾರೆ. ನೀನು ಸಕಲಭೂತ ಗಳಲ್ಲಿಯೂ ವ್ಯಾಪಿಸಿರುವೆ. ಸರ್ವಲೋಕಗಳಲ್ಲಿಯೂ ವ್ಯಾಪ್ತನಾಗಿರುವೆ. ಮಹಾವೀರ್ಯರಾದ, ತಪೋಧನರಾದ ಯೋಗಿಗಳು ಸರ್ವಕಾಲದಲ್ಲಿಯೂ ನಿನ್ನ ಧ್ಯಾನೋಪಾಸನೆಗಳನ್ನು ಮಾಡುತ್ತಿರುತ್ತಾರೆ. ನೀನು ಪ್ರಸನ್ನಾತ್ಮ ನಾಗಿರುವಾಗ ಪ್ರಪಂಚವೂ ಶಾಂತಿಯಿಂದಿರುತ್ತದೆ. ನೀನು ಕುಪಿತನಾದೆ ಯೆಂದರೆ ಸರ್ವತ್ರ ಮಹಾಭಯವು ವ್ಯಾಪ್ತವಾಗುತ್ತದೆ. ಭಯವನ್ನುಂಟು ಮಾಡುವವನೂ ನೀನೇ ; ಪುನಃ ಭಯವನ್ನು ಹೋಗಲಾಡಿಸುವವನೂ ನೀನೇ ಆಗಿರುವೆ. ದೇವ-ಮಾನವಾದಿ ಸರ್ವಭೂತಗಳಿಗೂ ನೀನು ಸುಖಪ್ರದನಾ ಗಿರುವೆ. ಮೂರು ಹೆಜ್ಜೆಗಳಿಂದಲೇ ಮೂರು ಲೋಕಗಳನ್ನೂ ಸ್ವಾಧೀನ ಪಡಿಸಿಕೊಂಡ ಮಹಾನುಭಾವನು ನೀನು. ದುರಹಂಕಾರದಿಂದ ಮದಿಸಿದ್ದ ಅಸುರರನ್ನು ಅನೇಕಬಾರಿ ನಿಗ್ರಹಮಾಡಿರುವೆ.

ನಿನ್ನ ಸಾಮರ್ಥ್ಯದ ಮೂಲಕವಾಗಿಯೇ ದೇವತೆಗಳು ಶಾಂತಿಯನ್ನೂ ಸೌಖ್ಯವನ್ನೂ ಪಡೆದಿರುತ್ತಾರೆ. ನಿನ್ನ ಕೋಪವು ಅನೇಕದೈತ್ಯಶ್ರೇಷ್ಠರ ಸೊಕ್ಕನ್ನು ಮುರಿದಿದೆ. ಈ ವಿಶ್ವದ ಸೃಷ್ಟಿ-ಸ್ಥಿತಿ-ಲಯಕಾರಕನೂ ನೀನೊಬ್ಬನೇ ಆಗಿರುವೆ. ನಿನ್ನನ್ನು ಸರ್ವಕಾಲದಲ್ಲಿಯೂ ಆರಾಧಿಸುತ್ತಿರುವುದರಿಂದ ದೇವತೆಗಳಿಂದು ಸುಖಿಗಳಾಗಿದ್ದಾರೆ."

ಧರ್ಮಜ! ಉತ್ತಂಕನು ಹೃಷೀಕೇಶನನ್ನು ಹೀಗೆ ಸ್ತೋತ್ರ ಮಾಡಿದನು. ಉತ್ತಂಕನು ಮಾಡಿದ ಮಹಾತಪಸ್ಸಿನಿಂದಲೂ ಮತ್ತು ಸ್ತೋತ್ರ ದಿಂದಲೂ ಸುಪ್ರೀತನಾದ ಮಹಾವಿಷ್ಣುವು ಪ್ರತ್ಯಕ್ಷನಾಗಿ ಮಹರ್ಷಿಗೆ ಹೇಳಿದನು :

"ಮಹರ್ಷೇ! ನಾನು ನಿನ್ನ ವಿಷಯದಲ್ಲಿ ಸುಪ್ರೀತನಾಗಿರುವೆನು. ನಿನಗಿಷ್ಟವಾದ ವರವನ್ನು ಕೇಳು."

ಪರ್ಯಾಪ್ತೋ ಮೇ ವರೋ ಹ್ಯೇಷ ಯದಹಂ ದೃಷ್ಟವಾನ್ಹರಿಮ್ ।
ಪುರುಷಂ ಶಾಶ್ವತಂ ದಿವ್ಯಂ ಸ್ರಷ್ಟಾರಂ ಜಗತಃ ಪ್ರಭುಮ್ ॥೨೫॥



"ಮಹಾನುಭಾವನೇ! ನಿನ್ನ ದಿವ್ಯದರ್ಶನವೇ ನನಗೊಂದು ಮಹಾವರವಲ್ಲವೇ? ಪರಮಪುರುಷನಾದ, ಶಾಶ್ವತನಾದ, ದಿವ್ಯಸ್ವರೂಪನಾದ, ಪರಮಕಾರುಣಿಕನಾದ, ಸಕಲಭುವನಗಳ ಸೃಷ್ಟಿಕರ್ತನಾದ, ಪ್ರಭುವಾದ ಶ್ರೀಹರಿಯನ್ನು–ಪರಂಧಾಮನನ್ನು ನಾನು ಸಂದರ್ಶಿಸಿದೆನಲ್ಲವೇ? ಇದಕ್ಕಿಂತಲೂ ಮಿಗಿಲಾದ ವರವುಯಾವುದಿದೆ? ದಯಾಮಯನೇ! ಇದಿಷ್ಟೇ ನನಗೆ ಸಾಕು"

ಪ್ರೀತಸ್ತೇಽಹಮಲೌಲ್ಯೇನ ಭಕ್ತ್ಯಾ ತವ ಚ ಸತ್ತಮ ।
ಅವಶ್ಯಂ ಹಿ ತ್ವಯಾ ಬ್ರಹ್ಮನ್ಮತ್ತೋ ಗ್ರಾಹ್ಯೋ ವರೋ ದ್ವಿಜ ॥೨೬॥

"ಬ್ರಾಹ್ಮಣೋತ್ತಮನೇ! ನಿನ್ನ ಭಕ್ತಿಗೂ ಮತ್ತು ನಿಸ್ಪೃಹತೆಗೂ ನಾನು ಮೆಚ್ಚಿದೆನು. ನೀನು ನನ್ನಿಂದ ಯಾವುದಾದರೂ ವರವನ್ನು ಅವಶ್ಯವಾಗಿ ಪಡೆಯಲೇಬೇಕು."

ಯುಧಿಷ್ಠಿರ! ಶ್ರೀಹರಿಯಿಂದ ಹೀಗೆ ನಿರ್ದೇಶಿತನಾದ ಉತ್ತಂಕನು ಎರಡು ಕೈಗಳನ್ನೂ ಜೋಡಿಸಿ ವಿನೀತನಾಗಿ ವರವನ್ನು ಕೇಳಿದನು :

**ಯದಿ ಮೇ ಭಗವನ್ಪ್ರೀತಃ ಪುಣ್ಡರೀಕನಿಭೇಕ್ಷಣ ।**
**ಧರ್ಮೇ ಸತ್ಯೇ ದಮೇ ಚೈವ ಬುದ್ಧಿರ್ಭವತು ಮೇ ಸದಾ ।**
**ಅಭ್ಯಾಸಶ್ಚ ಭವೇದ್ಭಕ್ತ್ಯಾ ತ್ವಯಿ ನಿತ್ಯಂ ಮಮೇಶ್ವರ ॥೨೯॥**

"ಪುಂಡರೀಕಾಕ್ಷನೇ! ನೀನು ನಿಶ್ಚಯವಾಗಿಯೂ ನನ್ನ ವಿಷಯದಲ್ಲಿ ಸುಪ್ರೀತನಾಗಿದ್ದರೆ–ನನಗೆ ವರವೊಂದನ್ನು ಕೊಡಲೇಬೇಕೆನ್ನುವುದಾದರೆ–ಈ ವರವನ್ನು ದಯಪಾಲಿಸು. ಸತ್ಯ-ಧರ್ಮ-ಜಿತೇಂದ್ರಿಯತ್ವಗಳಲ್ಲಿ ನನ್ನ ಮನಸ್ಸು ಯಾವಾಗಲೂ ನಿಯತವಾಗಿರಲಿ ; ನಿನ್ನ ಮೇಲಿನ ಭಕ್ತಿಯು ಅಚಲವಾಗಿರಲಿ ಮತ್ತು ಸುಪ್ರತಿಷ್ಠವಾಗಿರಲಿ ; ನಿನ್ನನ್ನು ಕ್ಷಣಕಾಲವಾದರೂ ಮರೆಯದಿರುವ ಭಕ್ತಿಯು ನನ್ನಲ್ಲಿ ಆವಿರ್ಭವಿಸಲಿ–ಈ ವರವನ್ನು ದಯಪಾಲಿಸು."

ಉತ್ತಂಕನ ಈ ಮಾತುಗಳನ್ನು ಕೇಳಿ ನಸುನಗುತ್ತಾ ಶ್ರೀಹರಿಯು ಪುನಃ ಹೇಳಿದನು :

"ದ್ವಿಜೋತ್ತಮನೇ! ನೀನು ಪ್ರಾರ್ಥಿಸಿದ ವರಗಳೆಲ್ಲವೂ ನನ್ನ ಅನುಗ್ರಹದಿಂದ ನಿನಗೆ ಲಭ್ಯವಾಗುತ್ತವೆ. ಇದರೊಂದಿಗೆ ನಿನಗೆ ಯೋಗವಿದ್ಯೆಯೂ ಲಭಿಸುತ್ತದೆ. ಆ ಯೋಗವಿದ್ಯೆಯಿಂದ ನೀನು ದೇವತೆಗಳಿಗೂ ಮತ್ತು ಮೂರು ಲೋಕಗಳಿಗೂ ಪ್ರಯೋಜನಕರವಾದ ಮಹಾಕಾರ್ಯವನ್ನು ಸಾಧಿಸುವೆ. ಈ ಮೂರು ಲೋಕಗಳ ಮತ್ತು ದೇವತೆಗಳ ವಿನಾಶಾರ್ಥವಾಗಿಯೇ ಧುಂಧು ಎಂಬ ಮಹಾರಾಕ್ಷಸನು ಬಹುಘೋರವಾದ ತಪಸ್ಸನ್ನು ಮಾಡುತ್ತಿರುವನು. ಅವನ ಸಂಹಾರವು ಅನಿವಾರ್ಯವಾಗಿದೆ. ಆದರೆ ಅವನನ್ನು ಸಂಹರಿಸುವುದು ಅಷ್ಟು ಸುಲಭವಾದ ಕಾರ್ಯವಲ್ಲ. ಸಂಹಾರೋಪಾಯವನ್ನೂ ಮತ್ತು ಅವನನ್ನು ಯಾರು ಸಂಹರಿಸುವರೆಂಬುದನ್ನೂ ಹೇಳುವೆನು,

ಕೇಳು : ಇಕ್ಷ್ವಾಕುವಂಶದಲ್ಲಿ ಮಹಾಪರಾಕ್ರಮಿಯಾದ ಮತ್ತು ಅಜೇಯನಾದ ಬೃಹದಶ್ವನೆಂಬ ರಾಜನು ಜನಿಸುತ್ತಾನೆ. ಅವನಿಗೆ ಶುಭವ್ರತನೂ, ಜಿತೇಂದ್ರಿಯನೂ ಆದ ಕುವಲಾಶ್ವನೆಂಬ ಮಗನು ಹುಟ್ಟುತ್ತಾನೆ. ಅವನು ನನ್ನ ಯೋಗಬಲವನ್ನು ಪಡೆದು ನಿನ್ನಿಂದ ನಿರ್ದೇಶಿತನಾಗಿ ಧುಂಧುರಾಕ್ಷಸನನ್ನು ಸಂಹರಿಸಿ ಧುಂಧುಮಾರನೆಂದೇ ಪ್ರಸಿದ್ಧನಾಗುತ್ತಾನೆ."

ಯುಧಿಷ್ಠಿರ! ಮಹಾವಿಷ್ಣುವು ಉತ್ತಂಕನಿಗೆ ಹೀಗೆ ಹೇಳಿ ಅಂತರ್ಧಾನನಾದನು."

೨೦೧ನೆಯ ಅಧ್ಯಾಯವು ಮುಗಿಯಿತು.

೨೦೨ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಧುಂಧುವನ್ನು ಸಂಹಾರಮಾಡುವಂತೆ ಉತ್ತಂಕನು ಬೃಹದಶ್ವನನ್ನು ನಿರ್ಬಂಧಪಡಿಸಿದುದು

"ಯುಧಿಷ್ಠಿರ! ಇಕ್ಷ್ವಾಕುವು ಕಾಲವಶನಾಗಲಾಗಿ, ಅವನ ಮಗನಾದ ಧರ್ಮಾತ್ಮಾದ ಶಸಾದನು ಅಯೋಧ್ಯೆಯ ರಾಜ್ಯಸಿಂಹಾಸನವನ್ನೇರಿ ಈ ಪೃಥ್ವಿಯನ್ನು ಆಳತೊಡಗಿದನು. ಶಶಾದನ ಮಗನೇ ಮಹಾಪರಾಕ್ರಮಿಯಾದ ಕಕುತ್ಸ್ಥ. ಕಕುತ್ಸ್ಥನಿಗೆ ಅನೇನಸನೆಂಬ ಮಗನು ಹುಟ್ಟಿ ಅಯೋಧ್ಯೆಯ ರಾಜನಾಗಿ ಅನೇಕವರ್ಷಗಳ ಪರ್ಯಂತವಾಗಿ ಧರ್ಮದಿಂದ ರಾಜ್ಯಪಾಲನೆಯನ್ನು ಮಾಡಿದನು. ಅನೇನಸನ ಮಗನ ಹೆಸರು ಪೃಥು. ವಿಖ್ಯಾತನಾದ ವಿಷ್ವಗಶ್ವನೇ ಪೃಥುವಿನ ಮಗ. ವಿಶ್ವಗಶ್ವನಿಗೆ ಅದ್ರಿ ಎಂಬ ಮಗನಿದ್ದನು. ಯುವನಾಶ್ವನು ಅದ್ರಿಯ ಮಗ. ಯುವನಾಶ್ವನಿಗೆ ಶ್ರಾವನೆಂಬ ಮಗನಿದ್ದನು. ಶ್ರಾವನ ಪುತ್ರನೇ ಶ್ರಾವಸ್ತಕ. ಆ ಮಹಾನುಭಾವನಿಂದಲೇ 'ಶ್ರಾವಸ್ತೀ' ಎಂಬ ನಗರವು ನಿರ್ಮಿಸಲ್ಪಟ್ಟಿತು. ಬೃಹದಶ್ವನು ಸುಪ್ರಸಿದ್ಧನಾದ ಶ್ರಾವಸ್ತಕನ ಪುತ್ರ. ಹಿಂದೆ ಶ್ರೀಹರಿಯು ಹೇಳಿದಂತೆ ಬೃಹದಶ್ವನ ಮಗನೇ ಕುವಲಾಶ್ವ. ಕುವಲಾಶ್ವನಿಗೆ ಇಪ್ಪತ್ತೊಂದು ಸಾವಿರ ಮಕ್ಕಳಿದ್ದರು. ಆ ರಾಜಕುಮಾರರೆಲ್ಲರೂ ಬಲಿಷ್ಠರಾಗಿಯೂ, ವಿದ್ಯಾವಂತರಾಗಿಯೂ, ಇತರರಿಂದ ದುರ್ಜಯರಾಗಿಯೂ ಇದ್ದರು. ಕುವಲಾಶ್ವನು

ಸದ್ಗುಣಗಳಲ್ಲಿಯೂ, ಪರಾಕ್ರಮದಲ್ಲಿಯೂ ತನ್ನ ತಂದೆಯಾದ ಬೃಹದಶ್ವನನ್ನೂ ಮೀರಿಸಿದ್ದನು. ಸರ್ವಗುಣಪರಿಪೂರ್ಣನಾದ ಪುತ್ರನನ್ನು ಬೃಹದಶ್ವನು ರಾಜ್ಯಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕವನ್ನು ಮಾಡಿದನು. ಮಹಾಪರಾಕ್ರಮಿಯಾದ, ಧರ್ಮಾತ್ಮನಾದ, ಸಕಲಗುಣಪರಿಪೂರ್ಣನಾದ ಕುವಲಾಶ್ವನಿಗೆ ಪಟ್ಟಾಭಿಷೇಕಮಾಡಿ ರಾಜ್ಯಾಡಳಿತವನ್ನು ವಹಿಸಿಕೊಟ್ಟನಂತರ ಬೃಹದಶ್ವನು ತಪಶ್ಚರಣೆಗಾಗಿ ಅರಣ್ಯಕ್ಕೆ ಹೊರಟನು.

ಅಯೋಧ್ಯೆಯ ರಾಜನಾದ ಬೃಹದಶ್ವನು ಮಗನಿಗೆ ಪಟ್ಟಕಟ್ಟಿ ತಪಶ್ಚರಣೆಮಾಡಲು ಅರಣ್ಯಕ್ಕೆ ಹೊರಟಿರುವನೆಂಬ ವಾರ್ತೆಯು ಉತ್ತಂಕನಿಗೆ ತಿಳಿಯಿತು. ಒಡನೆಯೇ ಮಹಾತೇಜಸ್ವಿಯಾದ ಉತ್ತಂಕನು ರಾಜಧಾನಿಗೆ ಬಂದು ಸರ್ವಾಸ್ತ್ರಗಳಲ್ಲಿಯೂ ವಿಶಾರದನಾಗಿದ್ದ ಬೃಹದಶ್ವನಿಗೆ ಅರಣ್ಯಕ್ಕೆ ಹೋಗುವುದೂ ಮತ್ತು ತಪಶ್ಚರಣೆಯಲ್ಲಿ ನಿಯುಕ್ತನಾಗುವುದೂ ಅನುಚಿತವೆಂದು ಬೋಧನೆಮಾಡಿದನು.

**ಭವತಾ ರಕ್ಷಣಂ ಕಾರ್ಯಂ ತತ್ತಾವತ್ಕರ್ತುಮರ್ಹಸಿ ।**
**ನಿರುದ್ವಿಗ್ನಾ ವಯಂ ರಾಜಂಸ್ತ್ವತ್ಪ್ರಸಾದಾದ್ಭವೇಮ ಹಿ ॥೧೧॥**

**ತ್ವಯಾ ಹಿ ಪೃಥಿವೀ ರಾಜನ್ರಕ್ಷ್ಯಮಾಣಾ ಮಹಾತ್ಮನಾ ।**
**ಭವಿಷ್ಯತಿ ನಿರುದ್ವಿಗ್ನಾ ನಾರಣ್ಯಂ ಗನ್ತುಮರ್ಹಸಿ ॥೧೨॥**

"ಮಹಾರಾಜ! ಪ್ರಜೆಗಳ ರಕ್ಷಣೆಯೇ ನಿನಗಿರುವ ಮುಖ್ಯಧರ್ಮ. ನಿನ್ನ ಧರ್ಮವನ್ನೇ ಅನುಸರಿಸಿ ನಡೆಯುವುದು ನಿನಗೆ ಯೋಗ್ಯವಾಗಿದೆ. ನೀನು ಪ್ರಜೆಗಳ ರಕ್ಷಣೆಯಲ್ಲಿ ನಿರತನಾಗಿರುವುದರಿಂದ ಅರಣ್ಯದಲ್ಲಿ ವಾಸಮಾಡುತ್ತಿರುವ ನಾವೆಲ್ಲರೂ ನಿರುದ್ವಿಗ್ನರಾಗಿ ನಮ್ಮ ನಮ್ಮ ಕರ್ತವ್ಯಗಳನ್ನು ಮಾಡುತ್ತಿರುತ್ತೇವೆ. ಧರ್ಮಾತ್ಮನಾದ ನೀನು ಈ ಪೃಥ್ವಿಯನ್ನು ಆಳುವುದರಿಂದಲೇ ಈ ಪೃಥ್ವಿಯು ನಿರಪಾಯದಿಂದಿರಲು ಸಾಧ್ಯವಾಗಿದೆ. ನೀನು ಈ ಪೃಥ್ವಿಯನ್ನು ಆಳುತ್ತಿದ್ದರೆ ಯಾವ ದುಷ್ಟರ ಭಯವೂ ಇರುವುದಿಲ್ಲ. ಆದುದರಿಂದ ನೀನು ಅರಣ್ಯಕ್ಕೆ ಹೋಗುವುದು ಉಚಿತವಲ್ಲ.

**ಪಾಲನೇ ಹಿ ಮಹಾನ್ಧರ್ಮಃ ಪ್ರಜಾನಾಮಿಹ ದೃಶ್ಯತೇ ।**
**ನ ತಥಾ ದೃಶ್ಯತೇಽರಣ್ಯೇ ಮಾಭೂತ್ತೇ ಬುದ್ಧಿರೀದೃಶೀ ॥೧೩॥**

ನೀನು ರಾಜ್ಯದಲ್ಲಿಯೇ ಇದ್ದು ಪ್ರಜೆಗಳನ್ನು ರಕ್ಷಣೆಮಾಡುವುದರಿಂದ ನಿನಗೆ ಮಹತ್ತರವಾದ ಧರ್ಮವೂ (ಪುಣ್ಯವೂ) ಪ್ರಾಪ್ತವಾಗುತ್ತದೆ. ಆದರೆ ನೀನು ಅರಣ್ಯಕ್ಕೆ ಹೋಗುವುದರಿಂದ ಈ ವಿಧವಾದ ಮಹಾಪುಣ್ಯವು ನಿನಗೆ ಲಭ್ಯವಾಗಲಾರದು. ಆದುದರಿಂದ ನಿನ್ನ ಬುದ್ಧಿಯು ವಾನಪ್ರಸ್ಥಾಶ್ರಮದ ಆಶಯವನ್ನು ತೊರೆಯಲಿ.



**ಈದೃಶೋ ನ ಹಿ ರಾಜೇನ್ದ್ರ ಧರ್ಮಃ ಕ್ವಚನ ದೃಶ್ಯತೇ ।**
**ಪ್ರಜಾನಾಂ ಪಾಲನೇ ಯೋ ವೈ ಪುರಾ ರಾಜರ್ಷಿಭಿಃ ಕೃತಃ ॥೧೪॥**

ಕ್ಷತ್ರಿಯನಾದವನಿಗೆ ಪ್ರಜಾರಕ್ಷಣೆಗಿಂತಲೂ ಮಿಗಿಲಾದ ಧರ್ಮವು

ಬೇರೊಂದಿಲ್ಲ. ಮಹಾರಾಜ! ಹಿಂದೆ ಅನೇಕ ರಾಜಾಧಿರಾಜರು ಪ್ರಜಾ ರಕ್ಷಣೆಯಿಂದಲೇ ಕೀರ್ತಿಮಂತರಾಗಿರುವರು.

**ರಕ್ಷಿತವ್ಯಾಃ ಪ್ರಜಾ ರಾಜ್ಞಾ ತಾಸ್ತ್ವಂ ರಕ್ಷಿತುಮರ್ಹಸಿ ।**
**ನಿರುದ್ವಿಗ್ನಸ್ತಪಶ್ಚರ್ತುಂ ನ ಹಿ ಶಕ್ನೋಮಿ ಪಾರ್ಥಿವ ॥೧೫॥**

ರಾಜನಾದವನಿಗೆ ಪ್ರಜಾಪಾಲನೆ ಮತ್ತು ರಕ್ಷಣೆಗಳೇ ಪರಮಧರ್ಮ. ಆದುದರಿಂದ ನೀನು ಅರಣ್ಯಕ್ಕೆ ಹೋಗುವುದನ್ನು ನಿಲ್ಲಿಸಿ ಪ್ರಜಾರಕ್ಷಣೆ ಯಲ್ಲಿಯೇ ನಿರತನಾಗಿರು. ಪ್ರಸಕ್ತಸಮಯದಲ್ಲಿ ನನಗೆ ಒಂದು ಉಪದ್ರವವು ಬಂದೊದಗಿರುವುದು. ನಾನು ಶಾಂತನಾಗಿದ್ದು ನನ್ನ ತಪಸ್ಸನ್ನು ಮುಂದು ವರಿಸಲು ಅಸಮರ್ಥನಾಗಿದ್ದೇನೆ.

ನನ್ನ ಆಶ್ರಮದ ಸಮೀಪದಲ್ಲಿ ಸಮುದ್ರದಂತೆಯೇ ವಿಶಾಲವಾದ 'ಉಜ್ಜಾಲಕ' ಎಂಬ ಹೆಸರಿನ ಮರುಭೂಮಿಯಿರುವುದು. ಆ ಮರು ಭೂಮಿಯು ಅನೇಕಯೋಜನಗಳಷ್ಟು ವಿಸ್ತಾರವಾಗಿರುವುದು. ಯಾವ ಒಂದೆಡೆಯಲ್ಲಾಗಲೀ ಅಲ್ಲಿ ನೀರೆಂಬುದೇ ಇಲ್ಲ. ಸರ್ವತ್ರ ಮರಳಿನಿಂದ ಆವೃತವಾಗಿರುವ ಆ ಮರುಭೂಮಿಯಲ್ಲಿ ದಾನವಮುಖ್ಯನಾದ ಧುಂಧು ಎಂಬ ಹೆಸರಿನ ದೈತ್ಯನಿರುವನು. ಮಹಾಪರಾಕ್ರಮಿಯಾದ, ಮಹಾ ವೀರ್ಯನಾದ, ಬಹುಘೋರರೂಪಿಯಾದ ಮತ್ತು ಬಹುಭಯಂಕರನಾದ ಧುಂಧುವು ಸುಪ್ರಸಿದ್ಧರಾದ ಮಧು-ಕೈಟಭರ ಪುತ್ರನು. ದುರಾಸದನಾದ ಆ ದೈತ್ಯನಾಯಕನು ಉಜ್ಜಾಲಕಮರುಭೂಮಿಯ ತಳಭಾಗದಲ್ಲಿ ವಾಸಮಾಡು ತ್ತಿದ್ದಾನೆ. ಆದುದರಿಂದ ನೀನು ಮೊದಲು ಆ ಧುಂಧುವನ್ನು ಸಂಹರಿಸಿ ನನ್ನ ತಪಸ್ಸಿಗೆ ರಕ್ಷಣೆಯನ್ನಿತ್ತು ಅನಂತರದಲ್ಲಿ ಅರಣ್ಯಕ್ಕೆ ತಪಸ್ಸಿಗಾಗಿ ಪ್ರಯಾಣ ಮಾಡಬಹುದಾಗಿದೆ. ಆ ದುಷ್ಟದೈತ್ಯನು ಮೂರು ಲೋಕಗಳ ವಿನಾಶವನ್ನೇ ಸಂಕಲ್ಪಿಸಿ ಸುದಾರುಣವಾದ ತಪಸ್ಸಿನಲ್ಲಿ ನಿರತನಾಗಿದ್ದಾನೆ. ಸಕಲಲೋಕ ಪಿತಾಮಹನಾದ ಬ್ರಹ್ಮನಿಂದ ವರವೊಂದನ್ನು ಪಡೆದಿರುವ ಧುಂಧುದೈತ್ಯನು ದೇವ-ದಾನವ-ರಾಕ್ಷಸ-ಗಂಧರ್ವರಿಂದಲೂ ಹಾಗೂ ಯಕ್ಷರಿಂದಲೂ ಅವಧ್ಯನಾಗಿರುತ್ತಾನೆ. ಅವನನ್ನು ನೀನು ಸಂಹರಿಸು ; ನಿನಗೆ ಮಂಗಳ ವಾಗಲಿ. ದುಷ್ಟಶಿಕ್ಷಣ-ಶಿಷ್ಟಪರಿಪಾಲನಾಧರ್ಮದಿಂದ ನಿನ್ನ ಮನಸ್ಸು

ಚ್ಯುತವಾಗದಿರಲಿ. ಅವನನ್ನು ನೀನು ಸಂಹಾರಮಾಡುವುದರಿಂದ ಶಾಶ್ವತ ವಾದ, ಕ್ಷಯರಹಿತವಾದ ಕೀರ್ತಿಯನ್ನು ಪಡೆಯುವೆ. ಮಹಾಕ್ರೂರಿಯಾದ ಆ ರಾಕ್ಷಸನು ಮರುಭೂಮಿಯ ಮರಳಿನ ಕೆಳಗೆ ಮಲಗಿರುತ್ತಾನೆ. ವರ್ಷ ಕ್ಕೊಮ್ಮೆ ಅವನು ಎಚ್ಚರಗೊಂಡು ಹೊರಗೆ ಬಂದು ಶ್ವಾಸೋಚ್ಛ್ವಾಸಮಾಡು ವಾಗ ನದ-ನದೀ-ಅರಣ್ಯ-ದುರ್ಗ-ಪರ್ವತಗಳಿಂದ ಕೂಡಿರುವ ಈ ಭೂ ಮಂಡಲವೇ ಕಂಪಿಸುತ್ತದೇ. ಅವನ ನಿಃಶ್ವಾಸದ ರಭಸಕ್ಕೆ ಸಮುದ್ರಪ್ರಾಯ ವಾಗಿರುವ ಆ ಮರುಭೂಮಿಯಲ್ಲಿರುವ ಮರಳು ಗಗನಮಂಡಲಕ್ಕೆ ಹಾರಿ ಸೂರ್ಯಮಂಡಲವನ್ನೇ ಮುಚ್ಚಿಬಿಡುತ್ತದೆ. ಏಳು ದಿನಗಳ ಪರ್ಯಂತವಾಗಿ ಭೂಮಂಡಲವು ನಡುಗುತ್ತಿದ್ದು ಅಗ್ನಿಯ ಜ್ವಾಲೆಗಳು ಸರ್ವತ್ರ ವ್ಯಾಪಿಸು ತ್ತವೆ. ಈ ಕಾರಣದಿಂದಲೇ ನಾನು ನನ್ನ ಆಶ್ರಮದಲ್ಲಿ ಶಾಂತನಾಗಿ ತಪಶ್ಚರಣೆಯನ್ನು ಮಾಡಲು ಅಸಮರ್ಥನಾಗಿದ್ದೇನೆ.

ಪ್ರಪಂಚದ ಹಿತಾರ್ಥವಾಗಿ ನೀನೀಗಲೇ ಆ ದೈತ್ಯನನ್ನು ಸಂಹರಿಸು ವವನಾಗು. ಅವನನ್ನು ಸಂಹರಿಸುವುದರಿಂದ ಮೂರು ಲೋಕಗಳೂ ಸುಖ-ಶಾಂತಿಗಳನ್ನು ಪಡೆಯುತ್ತವೆ. 'ದೇವತೆಗಳಿಂದಲೂ ಅವಧ್ಯನಾದ ಅಸುರ ನನ್ನು ನಾನು ವಧೆಮಾಡಬಲ್ಲೆನೇ?'—ಎಂದು ಸಂಶಯಿಸಬೇಡ. ನೀನೇ ಆ ಅಸುರನನ್ನು ಸಂಹರಿಸಲು ಸಮರ್ಥನಾಗಿರುವೆಯೆಂದು ನಾನು ಭಾವಿಸಿದ್ದೇನೆ. ಆ ಅಸುರನೊಡನೆ ಯುದ್ಧಕ್ಕೆ ನೀನು ನಿಲ್ಲುವಾಗ ವೈಷ್ಣವತೇಜಸ್ಸೂ ನಿನ್ನಲ್ಲಿ ಆವಿರ್ಭವಿಸುತ್ತದೆ. ಹಿಂದೊಮ್ಮೆ ಮಹಾವಿಷ್ಣುವೇ ಸಾಕ್ಷಾತ್ತಾಗಿ ಬಂದು ಈ ವರವನ್ನು ನನಗೆ ಅನುಗ್ರಹಿಸಿರುವನು. 'ಅವನಿಗೆದುರಾಗಿ ನಿಂತು ಯುದ್ಧ ಮಾಡುವವನಿಗೆ ನನ್ನ ವೈಷ್ಣವಶಕ್ತಿಯು ಸೇರಿ ದುಷ್ಟನಾದ ದುರಾಸದನಾದ ಧುಂಧುವಿನ ಸಂಹಾರವು ಶಕ್ಯವಾಗುವುದು' ಎಂದು ಶ್ರೀವಿಷ್ಣುವೇ ವರವನ್ನಿತ್ತಿ ದ್ದಾನೆ. ಈ ಕಾರಣದಿಂದ ನೀನು ಆ ದುಷ್ಟರಾಕ್ಷಸನನ್ನು ಸಂಹರಿಸುವ ವಿಷಯ ದಲ್ಲಿ ಸಂಶಯಪಡಬೇಕಾಗಿಲ್ಲ. ವೈಷ್ಣವಶಕ್ತಿಯನ್ನು ಧಾರಣೆಮಾಡಿಕೊಂಡವ ನಾಗಿ ಮಹಾಪರಾಕ್ರಮಿಯಾದ ಅಸುರನನ್ನು ಸಂಹರಿಸು. ಧುಂಧುವು ಅಮಿತಪರಾಕ್ರಮವನ್ನು ಹೊಂದಿರುವುದರಿಂದಲೂ ಮತ್ತು ಬ್ರಹ್ಮನ ವರವನ್ನು ಪಡೆದಿರುವುದರಿಂದಲೂ—ಸಾಧಾರಣಪರಾಕ್ರಮಿಗಳಿಂದ ಪರಾಜಿತ

ನಾಗಲಾರನು. ಸಾಧಾರಣಪರಾಕ್ರಮವುಳ್ಳವರು ಅವನೊಡನೆ ನೂರು ವರ್ಷಗಳ ಪರ್ಯಂತವಾಗಿ ಯುದ್ಧಮಾಡಿದರೂ ವ್ಯರ್ಥವೇ ಸರಿ.”

೨೦೨ನೆಯ ಅಧ್ಯಾಯವು ಮುಗಿಯಿತು.

೨೦೩ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಬ್ರಹ್ಮನ ಉತ್ಪತ್ತಿ: ವಿಷ್ಣುವಿನಿಂದ ಮಧು-ಕೈಟಭರ ವಧೆ

ಯುಧಿಷ್ಠಿರ! ಹೀಗೆ ಉತ್ತಂಕನಿಂದ ನಿರ್ಬಂಧಿತನಾದ ಬೃಹದಶ್ವನು ಮಹರ್ಷಿಯನ್ನು ಕುರಿತು ಅಂಜಲಿಬದ್ಧನಾಗಿ ಹೇಳಿದನು :

“ಮಹರ್ಷೇ! ನಿನ್ನ ಆಗಮನವೆಂದಿಗೂ ವ್ಯರ್ಥವಾಗಲಾರದು. ಕುವಲಾಶ್ವನೆಂದು ಕರೆಯಲ್ಪಡುತ್ತಿರುವ ಇವನು ನನ್ನ ಮಗನು. ಇವನು ಧೈರ್ಯೋತ್ಸಾಹವುಳ್ಳವನೂ, ಬಹುಬೇಗ ಕಾರ್ಯಸಾಧನೆಯನ್ನು ಮಾಡುವವನೂ, ಪರಾಕ್ರಮದಲ್ಲಿ ಅಪ್ರತಿಮನೂ ಆಗಿರುತ್ತಾನೆ. ನಿನಗೆ ಪ್ರಿಯವಾದುದನ್ನು ಈ ನನ್ನ ಮಗನು ಮಾಡಿಕೊಡಲು ಸಮರ್ಥನಾಗಿದ್ದಾನೆ. ಕಬ್ಬಿಣದ ಗದೆಯನ್ನು ಆಯುಧವನ್ನಾಗಿ ಧರಿಸಿರುವ, ಇಪ್ಪತ್ತೊಂದು ಸಾವಿರ ಮಕ್ಕಳಿಂದ ಪರಿವೃತನಾದ ಇವನು ನೀನು ನಿಯೋಜಿಸುವ ಯಾವುದೇ ಮಹಾಕಾರ್ಯವನ್ನಾದರೂ ಸಾಧಿಸಿಕೊಡಬಲ್ಲನು. ನಾನೀಗಲೇ ಶಸ್ತ್ರಸಂನ್ಯಾಸವನ್ನು ಮಾಡಿಬಿಟ್ಟಿದ್ದೇನೆ. ಯಾವ ಕಾರಣದಿಂದಲೂ ಪುನಃ ಆಯುಧವನ್ನು ಮುಟ್ಟಲಾರೆನು. ಆದುದರಿಂದ ನಾನು ಅರಣ್ಯಕ್ಕೆ ಹೋಗಲು ಅನುಮತಿಯನ್ನು ನೀಡು.”

ಮಹಾತೇಜಸ್ವಿಯಾದ ಉತ್ತಂಕನು ಬೃಹದಶ್ವನ ಪ್ರಾರ್ಥನೆಗೆ ‘ತಥಾಸ್ತು’ ಎಂದು ಉತ್ತರಿಸಿದನು.

ಬೃಹದಶ್ವನು ಮಗನನ್ನು ಕರೆದು ಉತ್ತಂಕಮಹರ್ಷಿಯ ಆಜ್ಞಾನುಸಾರವಾಗಿ ನಡೆಯುವಂತೆ ಆದೇಶವನ್ನು ನೀಡಿ ತನ್ನ ಸಂಕಲ್ಪದಂತೆ ತಪಶ್ಚರಣೆಗಾಗಿ ಅರಣ್ಯಕ್ಕೆ ಹೊರಟುಹೋದನು.

ಜನಮೇಜಯ! ಮಾರ್ಕಂಡೇಯರು ಈ ಪ್ರಕಾರವಾಗಿ ಕಥಾಪ್ರವಚನಮಾಡುತ್ತಿದ್ದಾಗ–ಯುಧಿಷ್ಠಿರನು ಮಧ್ಯದಲ್ಲಿ ಮಾರ್ಕಂಡೇಯ

ಮಹರ್ಷಿಗಳನ್ನು ಪ್ರಶ್ನಿಸಿದನು : "ಪೂಜ್ಯರೇ! ತಾಪಸೋತ್ತಮರೇ! ಮಹಾ ಪರಾಕ್ರಮಿಯಾದ ಆ ಧುಂಧುವು ಯಾರು? ಅವನು ಯಾರ ಮಗನು? ಆ ದೈತ್ಯನ ತಾತನ ಹೆಸರೇನು? ನಾನು ಈ ಎಲ್ಲ ವಿಷಯಗಳನ್ನೂ ವಿಶದ ವಾಗಿ ತಿಳಿದುಕೊಳ್ಳುವ ಇಚ್ಛೆಯಿಂದಿರುತ್ತೇನೆ. ನಾನು ಇದುವರೆಗೆ ಆ ದೈತ್ಯನ ಹೆಸರನ್ನೇ ಕೇಳಿರಲಿಲ್ಲ. ಆದುದರಿಂದ ಧುಂಧುದೈತ್ಯನ ಪೂರ್ವಾಪರ ವಿಚಾರಗಳೆಲ್ಲವನ್ನೂ ದಯಮಾಡಿ ಹೇಳಿರಿ."

"ಯುಧಿಷ್ಠಿರ! ನಿನ್ನ ಇಚ್ಛೆಯಂತೆಯೇ ಆ ದೈತ್ಯನ ಸಂಬಂಧವಾದ ವಿಷಯಗಳೆಲ್ಲವನ್ನೂ ಯಥಾವತ್ತಾಗಿಯೇ ತಿಳಿಸುವೆನು. ಏಕಾಗ್ರಚಿತ್ತನಾಗಿ ಕೇಳುವವನಾಗು. ಜಗತ್ಪ್ರಳಯವಾದನಂತರ ಅಖಂಡಬ್ರಹ್ಮಾಂಡವೂ ನೀರಿನಲ್ಲಿ ಮುಳುಗಿಹೋಗಿದ್ದಾಗ, ಸಕಲಚರಾಚರ-ಸ್ಥಾವರ-ಜಂಗಮಗಳೂ ವಿಧ್ವಸ್ತ ವಾಗಿದ್ದಾಗ ಅರ್ಥಾತ್ ಸೃಷ್ಟಿಯು ಸಂಪೂರ್ಣವಾಗಿ ಲಯಹೊಂದಿದ್ದಾಗ, ಯಾವನು ಸಕಲಭುವನಗಳ ಸೃಷ್ಟಿಗೂ ಮೂಲಕಾರಣನೋ, ಯಾವನು ಶಾಶ್ವತನೂ–ಕ್ಷಯರಹಿತನೂ ಆಗಿರುವನೋ ಮತ್ತು ಯಾವನನ್ನು ಸಿದ್ಧರಾದ ಮಹರ್ಷಿಗಳು ಸರ್ವಲೋಕೇಶ್ವನೆಂದು ಕರೆಯುವರೋ–ಅಂತಹ ಮಹಾನು ಭಾವನಾದ ಮಹಾವಿಷ್ಣುವು ಶೇಷಶಾಯಿಯಾಗಿ ಅಖಂಡವಾದ ಜಲರಾಶಿಯ ಮೇಲೆ ಮಲಗಿ ಯೋಗನಿದ್ರಾಪರವಶನಾಗಿದ್ದನು. ಹೀಗೆ ಶೇಷಶಾಯಿಯಾಗಿ ಯೋಗನಿದ್ರೆಯಲ್ಲಿದ್ದಾಗ ಸೂರ್ಯನಿಗೆ ಸಮಾನವಾದ ದಿವ್ಯತೇಜಸ್ಸಿನಿಂದ ಕೂಡಿದ್ದ ಬಹುಸುಂದರವಾದ ಕಮಲಪುಷ್ಪವೊಂದು ಮಹಾವಿಷ್ಣುವಿನ ನಾಭಿ ಯಿಂದ ಉದಯಿಸಿತು. ಸೂರ್ಯನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ವಿಷ್ಣುವಿನ ನಾಭಿಕಮಲದಿಂದ ಸಾಕ್ಷಾತ್ ಲೋಕಗುರುವಾದ, ಸೂರ್ಯನಿಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ, ಚತುರ್ವೇದಸ್ವರೂಪನಾದ, ಚತು ರ್ಮುಖನಾದ, ಮಹಾಬಲನಾದ ಮತ್ತು ಅಮಿತಪರಾಕ್ರಮಿಯಾದ ಬ್ರಹ್ಮನು ಉದಯಿಸಿದನು.

ಸಾವಿರಾರು ವರ್ಷಗಳು ಕಳೆದನಂತರ ಬಹುಯೋಜನವಿಸ್ತೀರ್ಣವಾಗಿದ್ದ ದಿವ್ಯವಾದ ಸರ್ಪಶಯ್ಯೆಯಲ್ಲಿ ಪವಡಿಸಿದ್ದ, ಕಿರೀಟ-ಕೌಸ್ತುಭಧಾರಿಯಾಗಿ ಪೀತಾಂಬರವನ್ನು ಧರಿಸಿದ್ದ, ಅಪರಿಮಿತವಾದ ಕಾಂತಿಯಿಂದ ದೇದೀಪ್ಯ ಮಾನನಾಗಿ ವಿರಾಜಿಸುತ್ತಿದ್ದ, ಸಹಸ್ರಸೂರ್ಯಸದೃಶನಾಗಿದ್ದ, ಅದ್ಭುತದರ್ಶನ

ನಾಗಿದ್ದ ಶ್ರೀಹರಿಯನ್ನು ಮಧು-ಕೈಟಭರೆಂಬ ಇಬ್ಬರು ರಾಕ್ಷಸರು ನೋಡಿದರು. ಮಹಾವಿಷ್ಣುವು ಸಹಸ್ರಸೂರ್ಯರ ಮಹಾತೇಜಸ್ಸಿನಿಂದ ಕೂಡಿದವನಾಗಿ ಸರ್ಪಶಯ್ಯೆಯಲ್ಲಿ ಯೋಗನಿದ್ರಾನ್ವಿತನಾಗಿ ಮಲಗಿರುವುದನ್ನೂ ಮತ್ತು ಅವನ ನಾಭಿಕಮಲದಿಂದ ನಾಲ್ಕು ತಲೆಗಳುಳ್ಳ ಬ್ರಹ್ಮನು ಉದಯಿಸಿ ರುವುದನ್ನೂ ಕಂಡು ದೈತ್ಯದ್ವಯರಿಗೆ ಪರಮಾಶ್ಚರ್ಯವಾಯಿತು.

ಆ ಮಧು-ಕೈಟಭರಾಕ್ಷಸರು ತಮ್ಮ ರಾಕ್ಷಸಸ್ವಭಾವಕ್ಕೆ ಅನುಗುಣವಾಗಿ ಅಮಿತತೇಜಸ್ವಿಯಾದ ಬ್ರಹ್ಮನನ್ನು ಭಯಪಡಿಸಲು ಉಪಕ್ರಮಿಸಿದರು. ಅನೇಕ ಬಾರಿ ಮಾಡಿದ ಆ ರಾಕ್ಷಸರ ಘೋರಗರ್ಜನೆಗಳಿಂದ ಭೀತನಾದ ಪಿತಾಮಹನು ಕುಳಿತಿದ್ದಲ್ಲಿಯೇ ಸ್ವಲ್ಪನಡುಗಿದನು. ಬ್ರಹ್ಮನು ನಡುಗುತ್ತಿರ ಲಾಗಿ ಅವನು ಕುಳಿತಿದ್ದ ನಾಭಿಪದ್ಮದ ದಳಗಳೂ ಸ್ವಾಭಾವಿಕವಾಗಿಯೇ ಕಂಪಿಸಿದುವು. ಅದರಿಂದಾಗಿ ಕೇಶವನು ಜಾಗ್ರತನಾದನು. ಯೋಗನಿದ್ರೆ ಯಿಂದ ಎಚ್ಚೆತ್ತ ಮಹಾಮಹಿಮನಾದ ಗೋವಿಂದನು ಮಹಾಪರಾಕ್ರಮಿ ಗಳಾದ ಆ ಇಬ್ಬರು ರಾಕ್ಷಸರನ್ನೂ ವೀಕ್ಷಿಸಿ ಅವರನ್ನು ಕುರಿತು ಹೀಗೆಂದು ಹೇಳಿದನು : "ಮಹಾಪರಾಕ್ರಮಿಗಳಾದ ದೈತ್ಯರೇ! ನಿಮಗೆ ಸ್ವಾಗತವು. ನಿಮ್ಮ ವಿಷಯದಲ್ಲಿ ನಾನು ಸುಪ್ರೀತನಾಗಿದ್ದೇನೆ. ಆದುದರಿಂದ ನಿಮಗೆ ಬೇಕಾದ ವರವನ್ನು ಕೊಡಲು ಇಚ್ಛಿಸಿರುತ್ತೇನೆ."

ವರದನಾದ ಕೇಶವನು ಹೀಗೆಂದು ಹೇಳಲಾಗಿ ಮಹಾದುರಭಿಮಾನಿ ಗಳಾದ ಮತ್ತು ಪರಾಕ್ರಮಿಗಳಾದ ಆ ಮಧು-ಕೈಟಭರು ಗಹಗಹಿಸಿ ನಗುತ್ತಾ ಹೇಳಿದರು :

"ಸುರೋತ್ತಮನೇ! ನೀನು ನಮಗೆ ವರಕೊಡುವ ಅವಶ್ಯಕತೆಯಿಲ್ಲ. ನಾವೇ ನಿನಗೆ ಬೇಕಾದ ವರಕೊಡಲು ಸಿದ್ಧರಾಗಿ ಬಂದಿರುವೆವು. ನೀನು 'ಇಂತಹ ವರವನ್ನು ಕೇಳಬಹುದೇ-ಕೇಳಬಾರದೇ?'–ಎಂದೂ ವಿವೇಚಿಸುವ ಕಾರಣವಿಲ್ಲ. ಈ ಸಮಯದಲ್ಲಿ ನಿನ್ನ ಮನಸ್ಸಿಗೆ ತೋಚಿದ ವರವನ್ನು ನಿಸ್ಸಂಕೋಚವಾಗಿ ಕೇಳಬಹುದು."

"ಶೂರಾಧಿಶೂರರೇ! ಹಾಗಾದರೆ ನಾನೇ ನಿಮ್ಮಿಂದ ಒಂದು ವರವನ್ನು ಪಡೆಯುತ್ತೇನೆ. ನಾನು ನಿಮ್ಮಿಂದ ಕೇಳಬೇಕಾದ ಮತ್ತು ಪಡೆಯಬೇಕಾಗಿರುವ

ಒಂದೇ ಒಂದು ವರವಿರುವುದು. ನೀವಿಬ್ಬರೂ ಮಹಾಪರಾಕ್ರಮಶಾಲಿಗಳಾಗಿರುವಿರಿ. ನಿಮ್ಮಿಬ್ಬರಿಗೆ ಸಮಾನನಾದ ವೀರಪುರುಷನು ತ್ರಿಭುವನಗಳಲ್ಲಿಯೂ ಇರುವುದಿಲ್ಲ. ಸತ್ಯಪರಾಕ್ರಮಿಗಳೇ! ನೀವು ನನಗೆ ವರವನ್ನು ಕೊಡಲು ಸಿದ್ಧರಾಗಿರುವಿರಾದರೆ–ನನ್ನಿಂದ ನೀವು ವಧ್ಯರಾಗಬೇಕು. ಈ ಒಂದು ವರವನ್ನು ನನಗೆ ಕೊಡಿರಿ. ನಿಮ್ಮಿಂದ ವರಪಡೆದು ನಾನು ಪ್ರಪಂಚದ ಹಿತಾರ್ಥವಾಗಿ ಈ ಕಾರ್ಯವನ್ನು ಸಾಧಿಸಬೇಕೆಂದಿದ್ದೇನೆ."

ಹೃಷೀಕೇಶನು ಕೇಳಿದ ವರದಿಂದ ಮಧು-ಕೈಟಭರು ಕುಪಿತರಾಗಲಿಲ್ಲ. ಧರ್ಮಸಮ್ಮತವಾದ ಮತ್ತು ವೀರರಿಗೆ ಉಚಿತವಾದ ಮಾತುಗಳನ್ನೇ ಹೇಳಿದರು :

**ಅನೃತಂ ನೋಕ್ತಪೂರ್ವಂ ನೌ ಸ್ವೈರೇಷ್ವಪಿ ಕುತೋಽನ್ಯಥಾ ।**
**ಸತ್ಯೇ ಧರ್ಮೇ ಚ ನಿರತೌ ವಿದ್ಧ್ಯಾವಾಂ ಪುರುಷೋತ್ತಮ ॥೨೮॥**

"ಪುರುಷೋತ್ತಮನೇ! ನಾವು ಇದುವರೆವಿಗೂ ಸುಳ್ಳಾಡಿದವರಲ್ಲ. ಪರಿಹಾಸಕ್ಕಾದರೂ ನಾವು ಸುಳ್ಳಾಡಿಲ್ಲವೆಂದಮೇಲೆ ಉಳಿದ ಸಮಯಗಳಲ್ಲಿ ಅನೃತಭಾಷಣಮಾಡಿಲ್ಲವೆಂಬುದನ್ನು ಹೇಳಬೇಕಾದ ಅವಶ್ಯಕತೆಯೇ ಇಲ್ಲವಲ್ಲವೇ? ನಾವು ಯಾವಾಗಲೂ ಸತ್ಯ-ಧರ್ಮಗಳಲ್ಲಿಯೇ ನಿಷ್ಠೆಯುಳ್ಳವರಾಗಿರುತ್ತೇವೆಂಬುದಾಗಿ ಭಾವಿಸು.

**ಬಲೇ ರೂಪೇ ಚ ಶೌರ್ಯೇ ಚ ನ ಶಮೇ ಚ ಸಮೋಽಸ್ತಿ ನೌ ।**
**ಧರ್ಮೇ ತಪಸಿ ದಾನೇ ಚ ಶೀಲಸತ್ತ್ವದಮೇಷು ಚ ॥೨೯॥**

ಬಲ, ರೂಪ, ಶೌರ್ಯ, ಜಿತೇಂದ್ರಿಯತೆ, ಧರ್ಮನಿಷ್ಠೆ, ತಪಸ್ಸು, ದಾನ, ಸೌಶೀಲ್ಯ–ಇತ್ಯಾದಿ ಗುಣಗಳಲ್ಲಿ ನಮಗೆ ಅನುರೂಪರಾದವರು ಮತ್ತಾರೂ ಇರುವುದಿಲ್ಲ.

**ಉಪಪ್ಲವೋ ಮಹಾನಸ್ಮಾನುಪಾವರ್ತತ ಕೇಶವ ।**
**ಉಕ್ತಂ ಪ್ರತಿಕುರುಷ್ವ ತ್ವಂ ಕಾಲೋ ಹಿ ದುರತಿಕ್ರಮಃ ॥೩೦॥**

ಆದರೂ ಕಾಲಾನುಗುಣವಾಗಿ ನಮಗಿಂದು ದೊಡ್ಡ ಅಪಾಯವು ಬಂದೋದಗಿರುವುದು. ಆದುದರಿಂದಲೇ ನೀನಿಂದು ನಮ್ಮನ್ನು ಸಂಹಾರ

ಮಾಡುವ ವರವನ್ನು ಪ್ರಾರ್ಥಿಸಿರುವೆ. ನಾವು ನಿನಗೆ ಈ ವರವನ್ನು ಕೊಟ್ಟಿರುತ್ತೇವೆ. ನಮ್ಮನ್ನು ನೀನು ಸಂಹಾರಮಾಡಬಹುದು. ಕಾಲವು ದುರತಿಕ್ರಮವಾದುದು. ಅದನ್ನು ಮೀರಿ ನಡೆಯಲು ಯಾರಿಂದಲೂ ಸಾಧ್ಯವಿಲ್ಲ.

**ಆವಾಮಿಚ್ಛಾವಹೇ ದೇವ ಕೃತಮೇಕಂ ತ್ವಯಾ ವಿಭೋ ।**
**ಅನಾವೃತೇಽಸ್ಮಿನ್ನಾಕಾಶೇ ವಧಂ ಸುರವರೋತ್ತಮ ॥೩೧॥**

**ಪುತ್ರತ್ವಮಧಿಗಚ್ಛಾವ ತವ ಚಾಪಿ ಸುಲೋಚನ ।**
**ವರ ಏಷ ವೃತೋ ದೇವ ತದ್ವಿದ್ಧಿ ಸುರಸತ್ತಮ ।**
**ಅನೃತಂ ಮಾ ಭವೇದ್ದೇವ ಯದ್ಧಿ ನೌ ಸಂಶ್ರುತಂ ತದಾ ॥೩೨॥**

ವಿಭುವೇ! ಒಂದು ಕಾರ್ಯವನ್ನು ನೀನು ನಮಗಾಗಿ ಮಾಡಬೇಕೆಂದು ನಮ್ಮ ಇಚ್ಛೆಯಾಗಿರುವುದು. ಮೇಲಾಗಿ ಮೊದಲು ನಮಗೆ ವರಕೊಡಲು ನೀನೇ ಮುಂದೆ ಬಂದೆಯಲ್ಲವೇ? ಈಗ ನಾವು ಆ ವರವನ್ನು ನಿನ್ನಿಂದ ಪಡೆಯಲಿಚ್ಛಿಸುತ್ತೇವೆ. ಆಕಾಶದ ಆವರಣವಿಲ್ಲದ ಸ್ಥಳದಲ್ಲಿ ನೀನು ನಮ್ಮನ್ನು ವಧೆಮಾಡಬೇಕು. ಮುಂದಿನ ಜನ್ಮದಲ್ಲಿ ನಾವು ನಿನ್ನ ಮಕ್ಕಳಾಗಿ ಹುಟ್ಟಬೇಕೆಂಬ ಆಶಯವೂ ನಮಗಿರುವುದು. ಈ ನಮ್ಮ ಆಶಯವನ್ನೂ ನೀನು ಪೂರೈಸಿಕೊಡಬೇಕು. ನೀನು ವರವನ್ನು ಕೊಡಲು ಬಂದಿರುವುದು ನಿರರ್ಥಕವಾಗದಿರಲಿ. ನಮ್ಮ ಈ ಆಶಯವನ್ನು ಪೂರೈಸಿಕೊಡುವುದರ ಮೂಲಕ ನಿನ್ನ ವರವು ಸಾರ್ಥಕ್ಯವನ್ನು ಹೊಂದಲಿ."

ಮಧು-ಕೈಟಭರ ಆ ಮಾತುಗಳನ್ನು ಕೇಳಿ ಪರಮಪುರುಷನು "ತಥಾಸ್ತು! ನಿಮ್ಮ ಪ್ರಾರ್ಥನೆಯಂತೆಯೇ ಎಲ್ಲವನ್ನೂ ಮಾಡುವೆನು, ನಿಮ್ಮ ಇಚ್ಛೆಯಂತೆಯೇ ಎಲ್ಲ ಕಾರ್ಯಗಳೂ ನೆರವೇರುವುವು"–ಎಂದನು. 'ಆಕಾಶದ ಆವರಣವಿಲ್ಲದಿರುವ ಸ್ಥಳವಾದರೂ ಇದೆಯೇ?'–ಎಂಬುದನ್ನೂ ಶ್ರೀಹರಿಯು ಆಗ ಯೋಚಿಸಲಿಲ್ಲ.

ಯುಧಿಷ್ಠಿರ! ಮಧು-ಕೈಟಭರಿಗೆ ಅವರು ಕೇಳಿದ ವರವನ್ನು ಕೊಟ್ಟ ನಂತರ ಮಹಾವಿಷ್ಣುವು ಯೋಚಿಸತೊಡಗಿದನು. ಆದರೆ ಆಕಾಶದ ಆವರಣವಿಲ್ಲದಿರುವ ಸ್ಥಳವೇ ಅವನಿಗೆ ಹೊಳೆಯದಾಯಿತು. ಭೂಮಿಯಲ್ಲಾಗಲೀ, ಸ್ವರ್ಗದಲ್ಲಾಗಲೀ-ಆಕಾಶದಿಂದ ಆವೃತವಾಗದಿರುವ ಸ್ಥಳವೇ ಕಾಣಲಿಲ್ಲ.

ಕಟ್ಟಕಡೆಗೆ ತನ್ನ ಎರಡು ತೊಡೆಗಳನ್ನೂ ಸೇರಿಸಿ ಆ ಸ್ಥಳದಲ್ಲಿ ಆಕಾಶದ ಆವರಣವಿಲ್ಲವೆಂಬುದನ್ನು ನಿಶ್ಚಯಿಸಿ ಮಧು-ಕೈಟಭರನ್ನು ತನ್ನ ತೊಡೆಯ ಮಧ್ಯದಲ್ಲಿ ಸಿಕ್ಕಿಸಿಕೊಂಡು ತನ್ನ ಚಕ್ರಾಯುಧದಿಂದ ಅವರನ್ನು ಕ್ಷಣಮಾತ್ರ ದಲ್ಲಿ ಸಂಹರಿಸಿಬಿಟ್ಟನು."

(ಆಕಾಶಕ್ಕೆ ಪರ್ಯಾಯಪದವಾದ 'ಅಂಬರ' ಪದದ ಅರ್ಥವನ್ನು ವಸ್ತ್ರವೆಂದಿಟ್ಟುಕೊಂಡು 'ಅನಾವೃತಾವೂರೂ' ವಸ್ತ್ರರಹಿತವಾದ ತೊಡೆಗಳನ್ನು ನೋಡಿಕೊಂಡು ಮಹಾವಿಷ್ಣುವು ಮಧು-ಕೈಟಭರನ್ನು ಸಂಹರಿ ಸಿದನು–ಎಂದೂ ಅರ್ಥಮಾಡಬಹುದು.)

೨೦೩ನೆಯ ಅಧ್ಯಾಯವು ಮುಗಿಯಿತು.

೨೦೪ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಧುಂಧುವಿನ ತಪಸ್ಸು ಮತ್ತು ವರಪ್ರಾಪ್ತಿ: ಕುವಲಾಶ್ವನಿಂದ ಧುಂಧುವಿನ ವಧೆ: ದೇವತೆಗಳಿಂದ ಕುವಲಾಶ್ವನಿಗೆ ವರಪ್ರದಾನ

"ಯುಧಿಷ್ಠಿರ! ಮಹಾತೇಜಸ್ವಿಯಾದ ಧುಂಧುವು ಮಧು-ಕೈಟಭರ ಪುತ್ರನು. ಮಹಾವೀರ್ಯನಾದ ಅವನು ಬಹುಘೋರವಾದ ತಪಸ್ಸನ್ನು ಮಾಡಲು ತೊಡಗಿದನು. ಅನೇಕವರ್ಷಗಳವರೆಗೆ ಒಂದೇ ಕಾಲಿನಲ್ಲಿ ನಿಂತು ತಪಸ್ಸು ಮಾಡುತ್ತಾ ತನ್ನ ಶರೀರವನ್ನು ಶೋಷಣೆಮಾಡಿದನು. ಕೇವಲ ಮೂಳೆ-ಚಕ್ಕಳಗಳು ಮಾತ್ರವೇ ಅವನ ಶರೀರದಲ್ಲಿ ಉಳಿದಿದ್ದುವು. ಬ್ರಹ್ಮ ದೇವನು ಅವನ ತಪಸ್ಸಿಗೆ ಸಂತುಷ್ಟನಾಗಿ ಅವನಿಗೊಂದು ವರವನ್ನು ಅನು ಗ್ರಹಿಸಿದನು. ಯಾವ ವರವನ್ನು ಕೇಳಬೇಕೆಂಬುದನ್ನು ಮೊದಲೇ ನಿಶ್ಚಯಿಸಿದ್ದ ಧುಂಧುವು ಬ್ರಹ್ಮನನ್ನು ಕುರಿತು ಹೇಳಿದನು :

"ಬ್ರಹ್ಮದೇವ! ನಾನು ಮಾಡಿದ ತಪಸ್ಸಿನಿಂದ ನೀನು ಸುಪ್ರೀತನಾಗಿ ವರವನ್ನು ಕೊಡಲು ಬಂದಿರುವೆಯಾದರೆ–ನಾನು ಈ ವರವನ್ನು ನಿನ್ನಿಂದ ಅಪೇಕ್ಷಿಸುತ್ತೇನೆ.

**ದೇವದಾನವಯಕ್ಷಾಣಾಂ ಸರ್ಪಗನ್ಧರ್ವರಕ್ಷಸಾಮ್ ।**
**ಅವಧ್ಯೋಽಹಂ ಭವೇಯಂ ವೈ ವರ ಏಷ ವೃತೋ ಮಯಾ ॥೩॥**

ದೇವ-ದಾನವ-ಯಕ್ಷ-ನಾಗ-ಗಂಧರ್ವ-ರಾಕ್ಷಸರಲ್ಲಿ ಯಾರೊಬ್ಬ ರಾಗಲೀ ನನ್ನನ್ನು ವಧಿಸಲು ಸಮರ್ಥರಾಗಬಾರದು. ಈ ಒಂದು ವರವನ್ನು ನಿನ್ನಿಂದ ಪಡೆಯುವ ಸಲುವಾಗಿಯೇ ನಾನು ನಿನ್ನನ್ನು ಕುರಿತು ಇಷ್ಟು ವರ್ಷ ಗಳ ಪರ್ಯಂತವಾಗಿ ಘೋರವಾದ ತಪಸ್ಸನ್ನು ಮಾಡಿರುತ್ತೇನೆ."

ಧುಂಧುವು ಕೇಳಿದ ವರದ ವಿಷಯವಾಗಿ ಬ್ರಹ್ಮನು ಕ್ಷಣಮಾತ್ರವೂ ಯೋಚಿಸಲಿಲ್ಲ. 'ತಥಾಸ್ತು. ನಿನ್ನ ಅಪೇಕ್ಷೆಯಂತೆಯೇ ವರವನ್ನು ದಯ ಪಾಲಿಸಿರುವೆನು. ನೀನಿನ್ನು ನಿನ್ನ ಇಚ್ಛೆಯಿದ್ದೆಡೆಗೆ ತೆರಳಬಹುದು'–ಎಂದು ಹೇಳಿದನು. ಬ್ರಹ್ಮನು ಮಾತನ್ನು ಕೇಳಿ ಧುಂಧುವು ಸಂತೋಷಭರಿತನಾಗಿ ಬ್ರಹ್ಮನ ಎರಡು ಪಾದಗಳನ್ನೂ ಹಿಡಿದು ನಮಸ್ಕರಿಸಿ, ಅವನ ಪಾದಧೂಳಿ ಯನ್ನು ತಲೆಯಮೇಲಿಟ್ಟುಕೊಂಡು ಹೊರಟುಹೋದನು.

ಮೊದಲೇ ಪರಾಕ್ರಮಶಾಲಿಯಾಗಿದ್ದ ಧುಂಧುವು ವರವನ್ನೂ ಪಡೆದು ಮದೋನ್ಮತ್ತನಾಗಿ ತನ್ನ ತಂದೆಯನ್ನು ಕೊಂದ ವಿಷ್ಣುವನ್ನು ಸ್ಮರಿಸಿ ಅವನ ಬಳಿಗೆ ಹೋದನು. ಮಹಾಕೋಪಿಷ್ಠನಾದ ಧುಂಧುವು ವಿಷ್ಣುಪ್ರಮುಖ ರಾದ ದೇವತೆಗಳನ್ನೂ, ಗಂಧರ್ವರನ್ನೂ ಯುದ್ಧದಲ್ಲಿ ಪರಾಜಿತರನ್ನಾಗಿ ಮಾಡಿದನು. ಮೂರು ಲೋಕಗಳನ್ನೂ ಜಯಿಸಿ ತನ್ನೆದುರಾಗಿ ನಿಲ್ಲುವವರೇ ಇಲ್ಲವೆಂಬ ದುರಭಿಮಾನದಿಂದ ವಿಷ್ಣುಪ್ರಮುಖರಾದ ದೇವತೆಗಳಿಗೆ ಸಾಕಷ್ಟು ಹಿಂಸೆಯನ್ನೂ ಕೊಟ್ಟು, ದುಷ್ಟಾತ್ಮನಾದ ಧುಂಧುವು ಸಮುದ್ರದೋಪಾದಿ ಯಲ್ಲಿದ್ದ ಉಜ್ಜಾಲಕವೆಂಬ ಮರಳುಗಾಡಿಗೆ ಬಂದು, ಮರಳಿನ ಕೆಳಭಾಗದಲ್ಲಿ ತನ್ನ ನಿವಾಸವನ್ನು ಮಾಡಿಕೊಂಡು–ಅದರ ಸಮೀಪದಲ್ಲಿಯೇ ಆಶ್ರಮವನ್ನು ಕಟ್ಟಿಕೊಂಡು ಅಲ್ಲಿ ತಪಸ್ಸುಮಾಡುತ್ತಿದ್ದ ಉತ್ತಂಕನಿಗೆ ನಾನಾವಿಧವಾಗಿ ಉಪಟಳ ಕೊಡಲು ಉಪಕ್ರಮಿಸಿದನು.

ವಿಷ್ಣುಪ್ರಮುಖರಾದ ದೇವತೆಗಳನ್ನು ಜಯಿಸಿದ ಮಾತ್ರದಿಂದಲೇ ಅವನ ಕೋಪವು ಉಪಶಮನವನ್ನು ಹೊಂದಲಿಲ್ಲ. ಮೂರು ಲೋಕಗಳನ್ನೂ ವಿನಾಶಮಾಡುವ ಸಂಕಲ್ಪಮಾಡಿ ಅದರ ಸಿದ್ಧಿಗಾಗಿ ಉಜ್ಜಾಲಕಮರಳುಗಾಡಿನ ಮಧ್ಯದಲ್ಲಿ ಮರಳಿನ ಕೆಳಭಾಗದಲ್ಲಿ ಒಂದು ಗುಹೆಯನ್ನು ಕಲ್ಪಿಸಿಕೊಂಡು ಪುನಃ ಘೋರವಾದ ತಪಸ್ಸನ್ನು ಮಾಡಲು ಉಪಕ್ರಮಿಸಿದನು. ಯಜ್ಞೇಶ್ವರ

ನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ಧುಂಧುವು ಉತ್ತಂಕನ ಆಶ್ರಮದ ಸಮೀಪದಲ್ಲಿ ಮರಳಿನ ಕೆಳಭಾಗದಲ್ಲಿದ್ದ ಗುಹೆಯಲ್ಲಿ ಸುದೀರ್ಘವಾಗಿ ಉಸಿರುಬಿಡುತ್ತಿದ್ದಾಗ ಉತ್ತಂಕನು ಆ ರಾಕ್ಷಸನ ಉಪಟಳವನ್ನು ತಪ್ಪಿಸಿ ಕೊಳ್ಳಬೇಕೆಂಬ ಆಶಯದಿಂದ ಬೃಹದಶ್ವರಾಜನಲ್ಲಿಗೆ ಹೋದನು.

ಯುಧಿಷ್ಠಿರ! ನಾನು ಹಿಂದೆಯೇ ಹೇಳಿದಂತೆ, ಅರಣ್ಯಕ್ಕೆ ಹೊರಟಿದ್ದ ಬೃಹದಶ್ವನು ತನ್ನ ಮಗನಾದ ಕುವಲಾಶ್ವನನ್ನು ಕರೆದು ಮಹರ್ಷಿಯ ನಿರ್ದೇಶದಂತೆ ನಡೆಯಬೇಕೆಂದು ಹೇಳಿ ಕಾಡಿಗೆ ಹೊರಟುಹೋದನು. ಕುವಲಾಶ್ವನು ತಂದೆಯ ಮತ್ತು ಮಹರ್ಷಿಯ ಆದೇಶಾನುಸಾರವಾಗಿ ತನ್ನ ಇಪ್ಪತ್ತೊಂದು ಸಾವಿರ ಮಂದಿ ಮಕ್ಕಳಿಂದಲೂ ಕೂಡಿದವನಾಗಿ ಧುಂಧುವಿ ನೊಡನೆ ಯುದ್ಧಮಾಡಲು ಹೊರಟನು. ಅವನ ಮಕ್ಕಳೆಲ್ಲರೂ ಮಹಾ ಪರಾಕ್ರಮಿಗಳಾಗಿದ್ದರು. ಉತ್ತಂಕನ ಪ್ರಾರ್ಥನೆಯಂತೆ ಮಹಾವಿಷ್ಣುವು ಮೂರು ಲೋಕಗಳ ರಕ್ಷಣಾರ್ಥವಾಗಿ ತನ್ನ ಯೋಗಶಕ್ತಿಯನ್ನು ಕುವಲಾಶ ನಿಗೆ ಅನುಗ್ರಹಿಸಿದನು. ಅಪ್ರತಿಮಪರಾಕ್ರಮಿಯಾದ ಕುವಲಾಶ್ವನು ಪರಿ ವಾರಸಮೇತನಾಗಿ ಉಜ್ಜಾಲಕಕ್ಕೆ ಪ್ರಯಾಣಮಾಡುತ್ತಿದ್ದಾಗ ಅಂತರಿಕ್ಷದ ಕಡೆಯಿಂದ ಅಶರೀರವಾಣಿಯೊಂದು ಕೇಳಿಸಿತು :

"ಏಷ ಶ್ರೀಮಾನವಧ್ಯೋಽದ್ಯ ಧುನ್ಧುಮಾರೋ ಭವಿಷ್ಯತಿ"

"ಶ್ರೀಮಂತನಾದ, ಅವಧ್ಯನಾದ ಈ ಕುವಲಾಶ್ವನೇ ಧುಂಧುಮಾರ ನಾಗುತ್ತಾನೆ. (ಧುಂಧುವಿನ ಮರಣಕ್ಕೆ ಕಾರಣನಾಗುತ್ತಾನೆ.)"

ಆ ಅಶರೀರವಾಣಿಯನ್ನು ಕೇಳಿದೊಡನೆಯೇ ದೇವತೆಗಳೆಲ್ಲರೂ ಕುವಲಾಶ್ವನ ಮೇಲೆ ಪುಷ್ಪವೃಷ್ಟಿಯನ್ನು ಸುರಿಸಿದರು. ದೇವದುಂದುಭಿಗಳು ಮೊಳಗಿದುವು. ಕುವಲಾಶ್ವನು ಪ್ರಯಾಣಮಾಡುತ್ತಿದ್ದಾಗ ಮಾರುತನು ಮಂದ-ಮಂದವಾಗಿ ಬೀಸುತ್ತಿದ್ದನು. ದೇವೇಂದ್ರನು ತುಂತುರುಮಳೆ ಯನ್ನು ಸುರಿಸುತ್ತಾ ಕುವಲಾಶ್ವನಿಗೂ ಅವನ ಪರಿವಾರದವರಿಗೂ ಆಹ್ಲಾದವನ್ನುಂಟುಮಾಡಿದನಲ್ಲದೇ–ಅವರ ಕಾಲುಗಳ ಸಂಘಟ್ಟನೆಗಳಿಂದ

ಮೋಡದಂತೆಯೇ ಆವರಿಸಿದ್ದ ಧೂಳನ್ನೂ ಅಡಗಿಸಿದನು. ಕುವಲಾಶ್ವನ ಮತ್ತು ಧುಂಧುವಿನ ನಡುವೆ ನಡೆಯುವ ಸಮರವನ್ನು ವೀಕ್ಷಿಸಲು ಉಜ್ಜಾಲಕಮರುಭೂಮಿಯ ಮೇಲ್ಭಾಗದ ಆಕಾಶದಲ್ಲಿ ಸಕಲದೇವತೆಗಳೂ ವಿಮಾನಾರೂಢರಾಗಿ ಉಪಸ್ಥಿತರಾದರು. ಅತುಲಪರಾಕ್ರಮಿಯಾದ



ಕುವಲಾಶ್ವನು ನಾರಾಯಣನ ಯೋಗಶಕ್ತಿಯಿಂದ ಕೂಡಿದವನಾಗಿ ವೀರರಾದ ತನ್ನ ಮಕ್ಕಳಿಂದಲೂ ಪರಿವೃತನಾಗಿ ಉಜ್ಜಾಲಕವನ್ನು ನಾಲ್ಕು ದಿಕ್ಕುಗಳಿಂದಲೂ ಆಕ್ರಮಿಸಿದನು. ರಾಕ್ಷಸನೆಲ್ಲಿರುವನೆಂಬುದನ್ನು ಕಂಡುಹಿಡಿಯಲು ಮರಳನ್ನೆಲ್ಲಾ ಅಗೆದು ಹಾಕಬೇಕೆಂದು ಕುವಲಾಶ್ವನು

ತನ್ನ ಮಕ್ಕಳಿಗೆ ಆಜ್ಞೆಮಾಡಿದನು. ತಂದೆಯ ಆಜ್ಞಾನುಸಾರವಾಗಿ ಕುವಲಾಶ್ವನ ಇಪ್ಪತ್ತೊಂದು ಸಾವಿರ ಮಕ್ಕಳು ಅವ್ಯಾಹತವಾಗಿ ಏಳು ದಿನಗಳ ಪರ್ಯಂತವಾಗಿ ಮರಳನ್ನು ತೋಡಿದನಂತರ ಧುಂಧುರಾಕ್ಷಸನು ದೃಗ್ಗೋಚರನಾದನು. ಸೂರ್ಯನಂತೆಯೇ ತೇಜೋಮಯವಾಗಿದ್ದ ಧುಂಧುವಿನ ಶರೀರವು ಮರಳಿನಲ್ಲಿ ಬಿದ್ದಿದ್ದಿತು. ಬೃಹದಾಕಾರದ ಆ ಶರೀರವು ಉಜ್ವಾಲಕದ ಪಶ್ಚಿಮಭಾಗವನ್ನು ಪೂರ್ಣವಾಗಿ ಆವಸಿದ್ದಿತು. ಪ್ರಳಯಕಾಲದ ಅಗ್ನಿಯಂತೆ ಮಹಾತೇಜಸ್ವಿನಿಂದ ಪ್ರಜ್ವಲಿಸುತ್ತಿದ್ದ ಧುಂಧುರಾಕ್ಷಸನಿನ್ನೂ ಮಲಗಿಯೇ ಇದ್ದನು. ಕುವಲಾಶ್ವನ ಮಹಾಪರಾಕ್ರಮಿಗಳಾದ ಮಕ್ಕಳು ರಾಕ್ಷಸನ ಆ ಅದ್ಭುತಶರೀರದ ಸುತ್ತಲೂ ನಿಂತು ಭರ್ಜಿಗಳಿಂದಲೂ, ಈಟಿಗಳಿಂದಲೂ, ತ್ರಿಶೂಲಗಳಿಂದಲೂ, ಕತ್ತಿಗಳಿಂದಲೂ, ಗದೆಗಳಿಂದಲೂ, ಕೊಡಲಿಗಳಿಂದಲೂ, ತೀಕ್ಷ್ಣವಾದ ಬಾಣಗಳಿಂದಲೂ ಏಕಕಾಲದಲ್ಲಿ ಪ್ರಹರಿಸತೊಡಗಿ ದರು. ಅಸಂಖ್ಯಾತಪ್ರಹಾರಗಳಿಂದ ಎಚ್ಚೆತ್ತ ಧುಂಧುವು ಕುಪಿತನಾಗಿ ತನ್ನ ಮೇಲೆ ಅವ್ಯಾಹತವಾಗಿ ಬೀಳುತ್ತಿದ್ದ ಆಯುಧಗಳೆಲ್ಲವನ್ನೂ ಕ್ಷಣಮಾತ್ರದಲ್ಲಿ ನುಂಗಿಹಾಕಿದನು. ಮರುಕ್ಷಣದಲ್ಲಿಯೇ ಧುಂಧುವು ಹೂಂಕರಿಸಿ ಆಕಾಶ ದಂತೆ ವಿಶಾಲವಾಗಿದ್ದ ಬಾಯಿಂದ ಅಗ್ನಿಯನ್ನು ಕಾರಿದನು. ಯುಗಾಂತದಲ್ಲಿ ಹುಟ್ಟುವ ಸಂವರ್ತಕಾಗ್ನಿಗೆ ಸಮಾನವಾಗಿದ್ದ ಆ ಅಗ್ನಿಯು ಕ್ಷಣಮಾತ್ರದಲ್ಲಿ ಕುವಲಾಶ್ವನ ಇಪ್ಪತ್ತೊಂದು ಸಾವಿರ ಮಂದಿ ಮಕ್ಕಳನ್ನೂ ಭಸ್ಮಮಾಡಿ ಬಿಟ್ಟಿತು. ಕುಪಿತನಾದ ಧುಂಧುವು ಮೂರು ಲೋಕಗಳನ್ನೂ ತನ್ನ ಹೂಂಕಾರದಿಂದ ನಡುಗಿಸುತ್ತಾ ತನ್ನ ಬಾಯಿಂದ ಜ್ವಾಲೆಗಳನ್ನು ಕಾರುತ್ತಾ ನಿಮಿಷಮಾತ್ರದಲ್ಲಿ–ಹಿಂದೆ ಕಪಿಲಮಹರ್ಷಿಯು ಸಗರನ ಮಕ್ಕಳನ್ನು ಭಸ್ಮಮಾಡಿದಂತೆಯೇ–ಕುವಲಾಶ್ವನ ಮಕ್ಕಳೆಲ್ಲರನ್ನೂ ಭಸ್ಮಮಾಡಿ ಅತ್ಯಾಶ್ಚರ್ಯ ಕರವಾದ ಸಾಧನೆಯನ್ನು ಮಾಡಿಬಿಟ್ಟನು.

ಇಪ್ಪತ್ತೊಂದು ಸಾವಿರ ಮಕ್ಕಳೂ ಧುಂಧುವಿನ ಬಾಯಿಂದ ಹೊರಟ ಅಗ್ನಿಜ್ವಾಲೆಗಳಿಗೆ ಸಿಕ್ಕಿ ಭಸ್ಮೀಭೂತರಾದನಂತರ, ಮಹಾಪರಾಕ್ರಮಿಯಾದ ಕುವಲಾಶ್ವನು–ನಿದ್ದೆಯಿಂದ ಎಚ್ಚೆತ್ತು ಬಂದ ಎರಡನೆಯ ಕುಂಭಕರ್ಣನೋಪಾದಿಯಲ್ಲಿ–ಬಹುಭಯಂಕರನಾಗಿದ್ದ ಧುಂಧುವಿಗೆ ಎದುರಾಗಿ ಯುದ್ಧ ಸನ್ನದ್ಧನಾಗಿ ನಿಂತನು.

ಧುಂಧುವಿನ ಬಾಯಿಂದ ಅಗ್ನಿಜ್ವಾಲೆಗಳು ಅವ್ಯಾಹತವಾಗಿ ಹೊರಬರುತ್ತಲೇ ಇದ್ದುವು. ಅದರ ಉಪಶಮನಾರ್ಥವಾಗಿ ಕುವಲಾಶ್ವನ ಶರೀರದಿಂದ ನೀರು ಪ್ರವಾಹರೂಪವಾಗಿ ಹೊರಟಿತು. ಆದರೆ ಆ ಪ್ರವಾಹವನ್ನೂ ಧುಂಧು ರಾಕ್ಷಸನ ಮುಖದಿಂದ ಬರುತ್ತಿದ್ದ ಅಗ್ನಿಜ್ವಾಲೆಗಳು ಶುಷ್ಕಗೊಳಿಸಿದುವು. ಅದರಿಂದಲೂ ಕುವಲಾಶ್ವನು ನಿರ್ವಿಣ್ಣನಾಗಲಿಲ್ಲ. ಕುವಲಾಶ್ವನು ವಿಷ್ಣುವಿನಿಂದ ಅನುಗೃಹೀತವಾದ ಯೋಗಶಕ್ತಿಯಿಂದ ಮಹಾಪೂರದೋಪಾದಿಯಲ್ಲಿ ತನ್ನ ಶರೀರದಿಂದ ನೀರನ್ನು ಸುರಿಸುತ್ತಾ ಧುಂಧುವಿನ ಮುಖದಿಂದ ಹೊರಟ ಮಹಾಜ್ವಾಲೆಗಳನ್ನು ಉಪಶಮನಗೊಳಿಸಿದನು. ಇನ್ನು ಹೆಚ್ಚುಕಾಲ ಈ ದಾನವನೊಡನೆ ಸರಸವಾಡುವುದು ಪ್ರಯೋಜನವಿಲ್ಲವೆಂದು ನಿರ್ಧರಿಸಿದ ಕುವಲಾಶ್ವನು ತನ್ನ ಧನುಸ್ಸಿಗೆ ಬ್ರಹ್ಮಾಸ್ತ್ರವನ್ನು ನಿಯೋಜಿಸಿ ಮಂತ್ರ ಪುನಶ್ಚರಣೆಮಾಡಿ ಧುಂಧುವಿನ ಎದೆಗೆ ಗುರಿಯಿಟ್ಟು ಹೊಡೆದನು. ನಿಮಿಷ ಮಾತ್ರದಲ್ಲಿ ಧುಂಧುವು ಹತನಾಗಿ ಕೆಳಗುರುಳಿದನು. ದೇವತೆಗಳ ಶತ್ರುವಾದ ಧುಂಧುವನ್ನು ಸಂಹರಿಸಿದ ಕುವಲಾಶ್ವನು ಆ ಸಮಯದಲ್ಲಿ ಮತ್ತೊಬ್ಬ ಲೋಕೇಶ್ವರನೋಪಾದಿಯಲ್ಲಿ ಕಂಗೊಳಿಸಿದನು. ಧುಂಧುವನ್ನು ಸಂಹರಿಸಿದ ಆ ದಿನದಿಂದ ಕುವಲಾಶ್ವನು 'ಧುಂಧುಮಾರ' (ಧುಂಧುವಿನ ಸಂಹಾರಕ) ಎಂದೇ ಪ್ರಸಿದ್ಧನಾದನು. ಕುವಲಾಶ್ವನ ಮತ್ತು ಧುಂಧುವಿನ ಸಮರವನ್ನು ನೋಡಬೇಕೆಂದು ಆಗಮಿಸಿದ್ದ ದೇವತೆಗಳೂ ಮತ್ತು ಋಷಿ-ಮಹರ್ಷಿಗಳೂ ಕುವಲಾಶ್ವನ ವಿಷಯದಲ್ಲಿ ಪರಮಪ್ರೀತರಾಗಿ ಅವನ ಬಳಿಗೆ ಬಂದು ಹೀಗೆಂದು ಹೇಳಿದರು :

"ಕುವಲಾಶ್ವನೇ! ನಿನ್ನ ಪರಾಕ್ರಮಕ್ಕೆ ಮೆಚ್ಚಿದೆವು. ಈ ದುಷ್ಟ ರಾಕ್ಷಸ ನನ್ನು ಸಂಹರಿಸಿ ನಮ್ಮೆಲ್ಲರ ಭಯವನ್ನೂ ದೂರಮಾಡಿರುವೆ. ನಾವು ನಿನ್ನಿಂದ ಸಂರಕ್ಷಿತರಾದೆವು. ಆದುದರಿಂದ ನಾವು ನಿನಗೆ ವರಗಳನ್ನು ಕೊಡಲು ಅಪೇಕ್ಷಿಸಿದ್ದೇವೆ. ಮನಸ್ಸಿಗೆ ಇಷ್ಟವಾದ ವರಗಳನ್ನು ಕೇಳಬಹುದು."

ಯುಧಿಷ್ಠಿರ! ದೇವತೆಗಳ ಮಾತುಗಳನ್ನು ಕೇಳಿ ಕುವಲಾಶ್ವನಿಗೂ ಸಂತೋಷವಾಯಿತು. ವಿನಮ್ರನಾಗಿ ಎರಡು ಕೈಗಳನ್ನೂ ಜೋಡಿಸಿ ದೇವತೆಗಳನ್ನು ಪ್ರಾರ್ಥಿಸಿದನು.

**ದದ್ಯಾಂ ವಿತ್ತಂ ದ್ವಿಜಾಗ್ರ್ಯೇಭ್ಯಃ ಶತ್ರೂಣಾಂ ಚಾಪಿ ದುರ್ಜಯಃ ।**
**ಸಖ್ಯಂ ಚ ವಿಷ್ಣುನಾ ಮೇ ಸ್ಯಾದ್ಭೂತೇಷ್ವದ್ರೋಹ ಏವ ಚ ।**
**ಧರ್ಮೇ ರತಿಶ್ಚ ಸತತಂ ಸ್ವರ್ಗೇ ವಾಸಸ್ತಥಾಕ್ಷಯಃ ॥೩೭॥**

"ದೇವತೆಗಳೇ! ಮಹರ್ಷಿಗಳೇ! ಬ್ರಾಹ್ಮಣಶ್ರೇಷ್ಠರಿಗೆ ಯಥೇಚ್ಛವಾಗಿ ದಾನಮಾಡಬೇಕೆಂಬ ಆಶಯರು ನನಗೆ ಬಹಳ ದಿನಗಳಿಂದಲೂ ಇರುವುದು. ಈ ನನ್ನ ಆಶಯವು ನಿಮ್ಮ ವರಪ್ರಸಾದದಿಂದ ಪೂರ್ಣವಾಗಲಿ. ಶತ್ರುಗಳೊಡನೆ ಯುದ್ಧಮಾಡುವಾಗ ನಾನು ಯಾವಾಗಲೂ ಪರಾಜಿತನಾಗಕೂಡದು. ನನ್ನ ಮತ್ತು ವಿಷ್ಣುವಿನ ಸ್ನೇಹವು ಚಿರಂತನವಾಗಿರಲಿ. ನಾನು ಯಾವ ಪ್ರಾಣಿಗಳ ವಿಷಯದಲ್ಲಿಯೂ ದ್ರೋಹವನ್ನೆಣಿಸದಂತೆ ಅನುಗ್ರಹಿಸಿರಿ. ಧರ್ಮದಲ್ಲಿಯೇ ನನ್ನ ಮನಸ್ಸು ಸುಸ್ಥಿರವಾಗಿರಲಿ. ನನ್ನ ಮರಣಾ ನಂತರದಲ್ಲಿ ನನಗೆ ಅಕ್ಷಯವಾದ ಸ್ವರ್ಗಸುಖವು ಲಭಿಸಲಿ."

ಧರ್ಮಸಮ್ಮತವಾದ ರಾಜನ ಆ ಆಶಯವನ್ನು ಕೇಳಿ ಅಲ್ಲಿ ನೆರೆದಿದ್ದ ದೇವರ್ಷಿಗಳೂ, ದೇವತೆಗಳೂ ಮತ್ತು ಉತ್ತಂಕನೂ ಸುಪ್ರೀತರಾಗಿ 'ತಥಾಸ್ತು' ಎಂದು ಒಕ್ಕೊರಲಿನಿಂದ ಹೇಳಿ ರಾಜರನ್ನು ಹರಸಿದರು.

ನೀತಿಬೋಧಕವಾದ ಅನೇಕ ವಿಷಯಗಳನ್ನು ರಾಜನಿಗೆ ಉಪದೇಶಿಸಿ ದೇವತೆಗಳೂ ಮತ್ತು ಮಹರ್ಷಿಗಳೂ ತಮ್ಮ-ತಮ್ಮ ನಿವಾಸಗಳಿಗೆ ತೆರಳಿದರು.

ಯುಧಿಷ್ಠಿರ! ಕುವಲಾಶ್ವನ ಇಪ್ಪತ್ತೊಂದು ಸಾವಿರ ಮಕ್ಕಳಲ್ಲಿ ದೃಢಾಶ್ವ, ಕಪಿಲಾಶ್ವ ಮತ್ತು ಚಂದ್ರಾಶ್ವ–ಎಂಬ ಮೂವರು ಮಕ್ಕಳು ಹತಶೇಷರಾಗಿ ಉಳಿದಿದ್ದರು. ಅವರಿಂದಲೇ ಮುಂದೆ ಮಹಾಪರಾಕ್ರಮಿಗಳ ವಂಶವಾದ ಸುಪ್ರಸಿದ್ಧವಾದ ಇಕ್ಷ್ವಾಕುವಂಶವು ಬೆಳೆಯಿತು.

ಧರ್ಮಜ! ನಾನು ವಿವರಿಸಿದ ರೀತಿಯಲ್ಲಿ ಮಧು-ಕೈಟಭರ ಮಗನಾದ ಧುಂಧುವು ಕುವಲಾಶ್ವನಿಂದ ಹತನಾದನು. ಈ ಕಾರಣದಿಂದಲೇ ಕುವಲಾಶ್ವನಿಗೆ ಧುಂಧುಮಾರನೆಂದೂ ಹೆಸರಾಯಿತು. ನೀನು ಕೇಳಿದುದೆಲ್ಲವನ್ನೂ ವಿವರಿಸಿ ಹೇಳಿದ್ದೇನೆ. ಯಾರ ಪರಾಕ್ರಮದಿಂದಾಗಿ ಧುಂಧುಮಾರೋಪಾಖ್ಯಾನವು ಪ್ರಸಿದ್ಧವಾಯಿತೆಂಬ ರಹಸ್ಯವನ್ನೂ ಹೇಳಿದ್ದೇನೆ.

**ಇದಂ ತು ಪುಣ್ಯಮಾಖ್ಯಾನಂ ವಿಷ್ಣೋಃ ಸಮನುಕೀರ್ತನಮ್ ।**
**ಶೃಣುಯಾದ್ಯಃ ಸ ಧರ್ಮಾತ್ಮಾ ಪುತ್ರವಾಂಶ್ಚ ಭವೇನ್ನರಃ ॥೪೪॥**

**ಆಯುಷ್ಮಾನ್ಭೂತಿಮಾಂಶ್ಚೈವ ಶ್ರುತ್ವಾ ಭವತಿ ಪರ್ವಸು ।**
**ನ ಚ ವ್ಯಾಧಿಭಯಂ ಕಿಂಚಿತ್ಪ್ರಾಪ್ನೋತಿ ವಿಗತಜ್ವರಃ ॥೪೫॥**

ವಿಷ್ಣುಸಂಕೀರ್ತನರೂಪವಾದ ಮತ್ತು ಪುಣ್ಯಪ್ರದವಾದ ಈ ಆಖ್ಯಾನವನ್ನು ಯಾರು ಪಠಿಸುತ್ತಾರೆಯೋ ಮತ್ತು ಕೇಳುತ್ತಾರೆಯೋ–ಅವರು ಧರ್ಮಾತ್ಮರೂ, ಸುಪುತ್ರವಂತರೂ ಆಗುತ್ತಾರೆ. ಪರ್ವಕಾಲಗಳಲ್ಲಿ ಈ ಕಥೆಯನ್ನು ಶ್ರವಣಮಾಡಿದರೆ ಆಯಷ್ಮಂತರೂ, ಐಶ್ವರ್ಯವಂತರೂ ಆಗುತ್ತಾರೆ. ನಿಷ್ಠೆಯಿಂದಲೂ, ಶ್ರದ್ಧೆಯಿಂದಲೂ ಈ ಉಪಾಖ್ಯಾನವನ್ನು ಶ್ರವಣ ಮಾಡುವವರಿಗೆ ರೋಗ-ರುಜಿನಗಳ ಬಾಧೆಗಳೂ ಇರುವುದಿಲ್ಲ."

೨೦೪ನೆಯ ಅಧ್ಯಾಯವು ಮುಗಿಯಿತು.

೨೦೫ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಪತಿವ್ರತಾಸ್ತ್ರೀಮಾಹಾತ್ಮ್ಯ: ತಂದೆ-ತಾಯಿಗಳ ಸೇವಾಫಲ

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಮಹಾರಾಜ! ಯುಧಿಷ್ಠಿರನು ಧುಂಧುಮಾರನ ಆಖ್ಯಾನವನ್ನು ಕೇಳಿದನಂತರ ಮಾರ್ಕಂಡೇಯಮಹರ್ಷಿಗಳನ್ನು ಬಹುಕ್ಲಿಷ್ಟವಾದ ಮತ್ತು ಧರ್ಮಸಂಬಂಧವಾದ ಪ್ರಶ್ನೆಯನ್ನು ಕೇಳಿದನು.

"ಮಾರ್ಕಂಡೇಯಮಹರ್ಷಿಗಳೇ! ನಾನು ತಮ್ಮಿಂದ ಉತ್ತಮ ಸ್ತ್ರೀಯರ ಮಾಹಾತ್ಮ್ಯವನ್ನು ಕೇಳಲಿಚ್ಛಿಸಿದ್ದೇನೆ.

**ಪ್ರತ್ಯಕ್ಷಮಿಹ ವಿಪ್ರರ್ಷೇ ದೇವಾ ದೃಶ್ಯನ್ತಿ ಸತ್ತಮ ।**
**ಸೂರ್ಯಾಚನ್ದ್ರಮಸೌ ವಾಯುಃ ಪೃಥಿವೀ ವಹ್ನಿರೇವ ಚ ॥೩॥**

**ಪಿತಾ ಮಾತಾ ಚ ಭಗವನ್ಗುರುರೇವ ಚ ಸತ್ತಮ ।**
**ಯಚ್ಚಾನ್ಯದ್ದೇವವಿಹಿತಂ ತಚ್ಚಾಪಿ ಭೃಗುನನ್ದನ ॥೪॥**

**ಮಾನ್ಯಾ ಹಿ ಗುರವಃ ಸರ್ವೇ ಏಕಪತ್ನ್ಯಸ್ತಥಾ ಸ್ತ್ರಿಯಃ ।**
**ಪತಿವ್ರತಾನಾಂ ಶುಶ್ರೂಷಾ ದುಷ್ಕರಾ ಪ್ರತಿಭಾತಿ ಮೇ ॥೫॥**

ಸೂರ್ಯ-ಚಂದ್ರರು, ವಾಯು, ಭೂಮಿ, ಅಗ್ನಿ, ಮಾತಾ-ಪಿತೃಗಳು ಮತ್ತು ಗುರು–ಇವರನ್ನು ಪ್ರತ್ಯಕ್ಷದೇವತೆಗಳೆಂದೇ ಹೇಳುತ್ತಾರೆ. ಇವರೆಲ್ಲ ರನ್ನೂ ನಾವು ಗೌರವಿಸಿ ಪೂಜಿಸಬೇಕು. ಅದೇ ರೀತಿಯಲ್ಲಿ ಪತಿವ್ರತೆಯರಾದ ಸ್ತ್ರೀಯರನ್ನು ನಾವು ಗೌರವಿಸಬೇಕು. ಪತಿವ್ರತೆಯಾದ ಸ್ತ್ರೀಯರು ತಮ್ಮ ಪತಿಗಳಿಗೆ ಮಾಡಬೇಕಾದ ಶುಶ್ರೂಷೆಯು ಬಹುಕಷ್ಟಸಾಧ್ಯವಾದುದೆಂದು ನಾನು ಭಾವಿಸುತ್ತೇನೆ. ಪತಿವ್ರತೆಯರ ಮಾಹಾತ್ಮ್ಯವನ್ನು ಸವಿಸ್ತರವಾಗಿ ಹೇಳಲು ತಾವು ಸಮರ್ಥರಾಗಿರುವಿರಿ. ನಾನು ಹಿಂದೆ ಹೇಳಿದಂತೆ ಪತಿ ಶುಶ್ರೂಷೆಯೆಂಬುದು ಬಹಳ ಕಷ್ಟಸಾಧ್ಯವೆಂಬುದು ನನ್ನ ಅಭಿಪ್ರಾಯವಾಗಿದೆ.

**ನಿರುಧ್ಯ ಚೇನ್ದ್ರಿಯಗ್ರಾಮಂ ಮನಃ ಸಂರುಧ್ಯ ಚಾನಘ ।**
**ಪತಿಂ ದೈವತವಚ್ಚಾಪಿ ಚಿನ್ತಯನ್ತ್ಯಃ ಸ್ಥಿತಾ ಹಿ ಯಾಃ ॥೬॥**

ಪತಿಶುಶ್ರೂಷಾಪರಾಯಣೆಯರಾದ ಸ್ತ್ರೀಯರು ಜಿತೇಂದ್ರಿಯರಾಗಿರ ಬೇಕು. ಕೋಪ-ತಾಪಗಳಿಗೆ ಎಡೆಯಾಗದಂತೆ ಮನಸ್ಸನ್ನು ಬಿಗಿಹಿಡಿಯ ಬೇಕು. ಪತಿಯೇ ಪರದೈವವೆಂದು ಭಾವಿಸಬೇಕು. ಇಂತಹ ಪವಿತ್ರ ಸ್ತ್ರೀಯರ ಮಹಿಮಾಶ್ರವಣವು ನಿಶ್ಚಯವಾಗಿಯೂ ಪಾಪಹರವಾದುದು. ಸ್ವಸುಖವನ್ನು ನಿರ್ಲಕ್ಷಿಸಿ ಪತಿಯೇ ದೇವರೆಂದು ಭಾವಿಸಿ ಜಿತೇಂದ್ರಿಯತೆ ಯಿಂದಿದ್ದು ಮನಸ್ಸನ್ನು ನಿರೋಧಿಸಿ ಪತಿಶುಶ್ರೂಷೆಯನ್ನು ಮಾಡುವುದು ದುಷ್ಕರವೆಂದು ನನಗನ್ನಿಸುತ್ತದೆ.

**ಮಾತಾಪಿತ್ರೋಶ್ಚ ಶುಶ್ರೂಷಾ ಸ್ತ್ರೀಣಾಂ ಭರ್ತರಿ ಚ ದ್ವಿಜ ।**
**ಸ್ತ್ರೀಣಾಂ ಧರ್ಮಾತ್ಸುಘೋರಾದ್ಧಿ ನಾನ್ಯಂ ಪಶ್ಯಾಮಿ ದುಷ್ಕರಮ್ ॥೭॥**

ಮಕ್ಕಳು ತಾಯಿ-ತಂದೆಗಳಿಗೆ ಮಾಡುವ ಶುಶ್ರೂಷೆ, ಪತ್ನಿಯರು ಗಂಡಂದಿರಿಗೆ ಮಾಡುವ ಶುಶ್ರೂಷೆ–ಎರಡೂ ಬಹುಕಠಿನವಾದುದು. ಈ ಎರಡರಲ್ಲಿಯೂ ಸ್ತ್ರೀಯರ ಪತಿಶುಶ್ರೂಷಾಧರ್ಮವು ಬಹುದುಷ್ಕರವಾದುದು ಮತ್ತು ಕಠಿನವಾದುದು.

**ಸಾಧ್ವಾಚಾರಾಃ ಸ್ತ್ರಿಯೋ ಬ್ರಹ್ಮನ್ಯತ್ಕುರ್ವನ್ತಿ ಸದಾದೃತಾಃ ।**
**ದುಷ್ಕರಂ ಖಲು ಕುರ್ವನ್ತಿ ಪಿತರಂ ಮಾತರಂ ಚ ವೈ ॥೯॥**

ಸಾಧ್ವಿಯರಾದ ಸ್ತ್ರೀಯರು ತಮ್ಮ ಸುಖವನ್ನು ಬದಿಗೊತ್ತಿ ಗಂಡನನ್ನೇ ದೇವರೆಂದು ಭಾವಿಸಿ ಬಹಳ ಜಾಗರೂಕತೆಯಿಂದ ಮಾಡುವ ಶುಶ್ರೂಷೆಯೂ ಮತ್ತು ಮಾತಾ-ಪಿತೃಗಳು ವೃದ್ಧರಾಗಿರುವ ಕಾಲದಲ್ಲಿ ಗಂಡು ಮಕ್ಕಳು ಶ್ರದ್ಧೆಯಿಂದ ಮಾಡುವ ಶುಶ್ರೂಷೆಯೂ ನಿಶ್ಚಯವಾಗಿಯೂ ಅತಿ ಕಠಿನವಾದುವುಗಳು.

**ಏಕಪತ್ನ್ಯಶ್ಚ ಯಾ ನಾರ್ಯೋ ಯಾಶ್ಚ ಸತ್ಯಂ ವದನ್ತ್ಯುತ ।**
**ಕುಕ್ಷಿಣಾ ದಶ ಮಾಸಾಂಶ್ಚ ಗರ್ಭಂ ಸಂಧಾರಯನ್ತಿ ಯಾಃ ॥೧೦॥**

ಪತಿಯೊಬ್ಬನನ್ನೇ ತನ್ನ ಜೀವನಸರ್ವಸ್ವವೆಂದು ನಂಬಿರುವ, ಸರ್ವದಾ ಸತ್ಯವನ್ನೇ ಹೇಳುವ, ಹತ್ತುತಿಂಗಳು ಗರ್ಭಧಾರಣೆಮಾಡುವ ಸಾಧ್ವಿಯರ ಕಾರ್ಯವು ನಿಶ್ಚಯವಾಗಿಯೂ ಬಹುಕಠಿನವಾದುದು. ಈ ಕಷ್ಟಗಳನ್ನು ಸಹಿಸಲು ಅವರಿಗಿರುವ ಸಹನೆಯೂ ಪರಮಾದ್ಭುತವಾದುದು.

**ನಾರ್ಯಃ ಕಾಲೇನ ಸಮ್ಭೂಯ ಕಿಮದ್ಭುತತರಂ ತತಃ ।**
**ಸಂಶಯಂ ಪರಮಂ ಪ್ರಾಪ್ಯ ವೇದನಾಮತುಲಾಮಪಿ ॥೧೧॥**

**ಪ್ರಜಾಯನ್ತೇ ಸುತಾನ್ನಾರ್ಯೋ ದುಃಖೇನ ಮಹತಾ ವಿಭೋ ।**
**ಪುಷ್ಣನ್ತಿ ಚಾಪಿ ಮಹತಾ ಸ್ನೇಹೇನ ದ್ವಿಜಪುಙ್ಗವ ॥೧೨॥**

ಗರ್ಭವತಿಯರಾದ ಸ್ತ್ರೀಯರಿಗೆ ಪ್ರಸವಕಾಲವು ಪ್ರಾಪ್ತವಾದಾಗ ತಮ್ಮ ಜೀವವೇ ಉಳಿಯುವುದೋ ಇಲ್ಲವೋ ಎಂಬ ಸಂಶಯವುಂಟಾಗುತ್ತದೆ. ಆ ಸಮಯದಲ್ಲಿ ಅವರಿಗಾಗುವ ವೇದನೆಯಂತೂ ಅನಿರ್ವಾಚ್ಯವಾದುದು ಮತ್ತು ಅವರ್ಣನೀಯವಾದುದು. ಬಹುಕಷ್ಟದಿಂದ ಮತ್ತು ಬಹುದುಃಖದಿಂದ ಪಡೆದ ಮಕ್ಕಳನ್ನು ಆ ಸಾಧ್ವಿಯರು ಬಹಳ ಅಕ್ಕರೆಯಿಂದಲೇ ಸಾಕುತ್ತಾರೆ.

**ಯಾಶ್ಚ ಕ್ರೂರೇಷು ಸತ್ತ್ವೇಷು ವರ್ತಮಾನಾಜುಗುಪ್ಸಿತಾ ।**
**ಸ್ವಕರ್ಮ ಕುರ್ವನ್ತಿ ಸದಾ ದುಷ್ಕರಂ ತಚ್ಚ ಮೇ ಮತಮ್ ॥೧೩॥**

ಸಾಧ್ವಿಯರಾದ ಸ್ತ್ರೀಯರು ಬಹುಕ್ರೂರಿಯಾದ ಪತಿಯನ್ನು ಪಡೆದಿದ್ದರೂ, ಅವನಿಂದ ತಿರಸ್ಕೃತರಾಗಿ ಅವಹೇಳಿತರಾದರೂ-ತಮ್ಮ ಪತಿಶುಶ್ರೂಷಾ

ಧರ್ಮವನ್ನು ಬಿಡದೇ ಅಂತಹ ಕ್ರೂರಪತಿಯ ಸೇವೆಯನ್ನೂ ಬಹಳ ಸ್ಥೈರಣೆ ಯಿಂದಲೇ ಮಾಡುತ್ತಿರುತ್ತಾರೆ. ಹೀಗೆ ಕ್ರೂರಿಯಲ್ಲಿಯೂ ಸೌಜನ್ಯದಿಂದ ವರ್ತಿಸಿಕೊಂಡಿರುವುದು ಬಹುಕಷ್ಟಸಾಧ್ಯವೆಂಬುದು ನನ್ನ ಅಭಿಪ್ರಾಯ ವಾಗಿದೆ.

ಮಹಾನುಭಾವರೇ! ನನಗೆ ಕ್ಷಾತ್ರಧರ್ಮದ ರಹಸ್ಯವನ್ನೂ ಮತ್ತು ಕರ್ತವ್ಯವನ್ನೂ ದಯಮಾಡಿ ಹೇಳಿರಿ. ಧರ್ಮಾತ್ಮರಾದವರಿಗೆ ಕ್ರೂರಕರ್ಮ ದಿಂದ ಧರ್ಮಸಂಪಾದನೆಯನ್ನು ಮಾಡಲು ಸಾಧ್ಯವಾಗಲಾರದು ಮಹರ್ಷಿ ಗಳೇ! ನಾನು ಕೇಳುವ ಎಲ್ಲ ಪ್ರಶ್ನೆಗಳಿಗೆ ಉತ್ತರ ಹೇಳಲು ನೀವು ಸಮರ್ಥ ರಾಗಿರುವಿರಿ. ನಾನು ಕೇಳಿರುವ ಈ ಎಲ್ಲ ಪ್ರಶ್ನೆಗಳಿಗೂ ಪ್ರವಚನರೂಪದಲ್ಲಿ ಉತ್ತರವನ್ನು ಕೊಡಬೇಕೆಂದು ಕೇಳಿಕೊಳ್ಳುತ್ತೇನೆ. ಭೃಗುಕುಲಾವತಂಸರೇ! ಸುವ್ರತರೇ! ನಾನು ನಿಮ್ಮ ಸಮೀಪದಲ್ಲಿಯೇ ಇದ್ದುಕೊಂಡು ನಿಮ್ಮ ಸೇವೆ ಯನ್ನು ಮಾಡುತ್ತಾ ಈ ಧರ್ಮರಹಸ್ಯಗಳೆಲ್ಲವನ್ನೂ ನಿಮ್ಮಿಂದ ಕೇಳಿ ತಿಳಿಯ ಬೇಕೆಂದಿರುವೆನು. ದಯಮಾಡಿ ಹೇಳಿರಿ."

"ಭರತಕುಲಾವತಂಸನೇ! ನಿನ್ನ ಪ್ರಶ್ನೆಗಳು ಎಷ್ಟೇ ಕ್ಲಿಷ್ಟವಾಗಿದ್ದರೂ ಅವುಗಳೆಲ್ಲಕ್ಕೂ ಸಮಾಧಾನಹೇಳುತ್ತೇನೆ. ನಾನು ಹೇಳುವುದೆಲ್ಲವನ್ನೂ ಏಕಾಗ್ರಚಿತ್ತನಾಗಿ ಕೇಳು :

**ಮಾತೃಸ್ತು ಗೌರವಾದನ್ಯೇ ಪಿತೃನನ್ಯೇ ತು ಮೇನಿರೇ ।**
**ದುಷ್ಕರಂ ಕುರುತೇ ಮಾತಾ ವಿವರ್ಧಯತಿ ಯಾ ಪ್ರಜಾಃ ॥೧೭॥**

ಕೆಲವರು ತಾಯಿಗೆ ಹೆಚ್ಚಿನ ಮತ್ತು ಮೊದಲನೆಯ ಗೌರವವನ್ನು ಕೊಡಬೇಕೆನ್ನುತ್ತಾರೆ. ಮತ್ತೆ ಕೆಲವರು ತಂದೆಗೆ ಗೌರವವನ್ನು ಕೊಡಬೇಕೆನ್ನು ತ್ತಾರೆ. ಆದರೆ ನೀನು ಹೇಳಿದಂತೆ ತಾಯಿಯು ಹತ್ತು ತಿಂಗಳ ಕಾಲ ಗರ್ಭ ಧಾರಣೆಮಾಡಿ ದಾರುಣವೇದನೆಯನ್ನು ಅನುಭವಿಸಿದನಂತರ ಪ್ರಸವಿಸಿ ತಾನು ಪಟ್ಟ ಕಷ್ಟಗಳೊಂದನ್ನೂ ಸ್ಮರಣೆಗೆ ತಂದುಕೊಳ್ಳದೇ ಹುಟ್ಟಿದ ಶಿಶು ವನ್ನು ಬಹಳ ಅಕ್ಕರೆಯಿಂದ ಸಾಕುತ್ತಾಳೆ.

**ತಪಸಾ ದೇವತೇಜ್ಯಾಭಿರ್ವನ್ದನೇನ ತಿತಿಕ್ಷಯಾ ।**
**ಸುಪ್ರಶಸ್ತೈರುಪಾಯೈಶ್ಚಾಪಿಹನ್ತೇ ಪಿತರಃ ಸುತಾನ್ ॥೧೮॥**

ಪಿತೃಗಳಾದವರು ಸುಪುತ್ರರನ್ನು ಪಡೆಯಲು ತಪಸ್ಸು, ದೇವರ ಪೂಜೆ, ಉಪಾಸನೆ–ಇವೇ ಮುಂತಾದ ಸುಪ್ರಶಸ್ತವಾದ ಉಪಾಯಗಳಿಂದ ಸುಪುತ್ರರನ್ನು ಪಡೆಯುವ ಇಚ್ಛೆಯುಳ್ಳವರಾಗಿರುತ್ತಾರೆ. (ತಾಯಿಯು ಹತ್ತು ತಿಂಗಳು ಗರ್ಭದಲ್ಲಿ ಧಾರಣೆಮಾಡಿ ಮಗುವು ಹುಟ್ಟಿದನಂತರ ಅದನ್ನು ಅಕ್ಕರೆಯಿಂದ ಸಾಕುತ್ತಾಳೆ. ಆದರೆ ತಂದೆಯೂ ಸುಪುತ್ರಪ್ರಾಪ್ತಿಗಾಗಿ ಕಠಿನವಾದ ತಪಸ್ಸನ್ನು ಮಾಡುತ್ತಾನೆ ; ಯಜ್ಞವನ್ನು ಮಾಡುತ್ತಾನೆ ; ದೇವತೆಗಳನ್ನು ಆರಾಧಿಸುತ್ತಾನೆ. ಈ ಎಲ್ಲ ಕಾರ್ಯಗಳಿಗೂ ಸುಪುತ್ರರನ್ನು ಪಡೆಯುವ ಉತ್ಕಟೇಚ್ಛೆಯೇ ಕಾರಣವಾಗಿರುತ್ತದೆ. ಬಹುದುಷ್ಕರವಾದ ತಪಸ್ಸು-ಯಜ್ಞಗಳನ್ನು ಮಾಡಿ ತಂದೆಯಾದವನು ಮಕ್ಕಳನ್ನು ಪಡೆದುಕೊಳ್ಳುತ್ತಾನೆ. ಅರ್ಥಾತ್ ಈ ಕಾರಣಗಳಿಂದ ತಂದೆ-ತಾಯಿಗಳಿಬ್ಬರನ್ನೂ ಸಮಾನವಾಗಿ ಗೌರವಿಸಬೇಕು.)

**ಏವಂ ಕೃಚ್ಛ್ರೇಣ ಮಹತಾ ಪುತ್ರಂ ಪ್ರಾಪ್ಯ ಸುದುರ್ಲಭಮ್ ।**
**ಚಿನ್ತಯನ್ತಿ ಸದಾ ವೀರ ಕೀದೃಶೋಽಯಂ ಭವಿಷ್ಯತಿ ॥೧೯॥**

ಈ ರೀತಿಯಾಗಿ ಬಹುಕಷ್ಟದಿಂದ ಪಡೆದ ಮಗನ ಮುಂದಿನ ಅಭಿವೃದ್ಧಿಯನ್ನು ಕುರಿತು ತಂದೆ-ತಾಯಿಗಳು ಸದಾ ಯೋಚಿಸುತ್ತಿರುತ್ತಾರೆ. ಇವನು ವಂಶಕ್ಕೆ ಗೌರವತರುವವನಾಗುತ್ತಾನೆಯೋ? ಅಥವಾ ವಂಶಕ್ಕೆ ಕಳಂಕತರುವವನಾಗುತ್ತಾನೆಯೋ?–ಎಂಬುದೇ ಅವರ ಸದಾಕಾಲದ ಚಿಂತನೆಯೂ ಆಗಿರುತ್ತದೆ.

**ಆಶಂಸತೇ ಹಿ ಪುತ್ರೇಷು ಪಿತಾ ಮಾತಾ ಚ ಭಾರತ ।**
**ಯಶಃ ಕೀರ್ತಿಮಥೈಶ್ವರ್ಯಂ ಪ್ರಜಾ ಧರ್ಮಂ ತಥೈವ ಚ ॥೨೦॥**

ತಮ್ಮ ಮಕ್ಕಳು ಕೀರ್ತಿವಂತರಾಗಬೇಕೆಂದೂ, ಐಶ್ವರ್ಯವಂತರಾಗಬೇಕೆಂದೂ, ಯಶೋವಂತರಾಗಬೇಕೆಂದೂ, ಧರ್ಮನಿಷ್ಠರಾಗಬೇಕೆಂದೂ ಮತ್ತು ಸುಪುತ್ರವಂತರಾಗಬೇಕೆಂದೂ ಮಾತಾ-ಪಿತೃಗಳು ಸರ್ವದಾ ಆಶಿಸುತ್ತಿರುತ್ತಾರೆ.

**ತಯೋರಾಶಾಂ ತು ಸಫಲಾಂ ಯಃ ಕರೋತಿ ಸ ಧರ್ಮವಿತ್ ।**
**ಪಿತಾ ಮಾತಾ ಚ ರಾಜೇನ್ದ್ರ ತುಷ್ಯತೋ ಯಸ್ಯ ನಿತ್ಯಶಃ ॥೨೧॥**

**ಇಹ ಪ್ರೇತ್ಯ ಚ ತಸ್ಯಾಥ ಕೀರ್ತಿರ್ಧರ್ಮಶ್ಚ ಶಾಶ್ವತಃ ॥೨೨॥**

ಮಾತಾ-ಪಿತೃಗಳ ಆಶಯವನ್ನು ಯಾವ ಸುಪುತ್ರನು ಸಫಲಗೊಳಿಸುವನೋ–ಅವನೇ ಧರ್ಮಾತ್ಮನು ಅಥವಾ ಧರ್ಮದ ರಹಸ್ಯವನ್ನು ತಿಳಿದವನು. ಯಾವನ ತಾಯಿ-ತಂದೆಗಳು ನಿತ್ಯತುಷ್ಟರಾಗಿರುವರೋ-ಅವನಿಗೆ ಶಾಶ್ವತವಾದ ಕೀರ್ತಿಯೂ ಲಭಿಸಿ ಇಹ-ಪರಗಳೆರಡರಲ್ಲಿಯೂ ಅವನು ಸುಖಿಯಾಗುತ್ತಾನೆ.

**ನೈವ ಯಜ್ಞಕ್ರಿಯಾಃ ಕಾಶ್ಚಿನ್ನ ಶ್ರಾದ್ಧಂ ನೋಪವಾಸಕಮ್ ।**
**ಯಾ ತು ಭರ್ತರಿ ಶುಶ್ರೂಷಾ ತಯಾ ಸ್ವರ್ಗಂ ಜಯತ್ಯುತ ॥೨೩॥**

ಸ್ತ್ರೀಯರಿಗಾದರೋ ಯಜ್ಞಗಳಾಗಲೀ, ಶ್ರಾದ್ಧಕ್ರಿಯೆಯಾಗಲೀ, ಉಪವಾಸಾದಿಗಳಾಗಲೀ–ಯಾವ ಹೆಚ್ಚಿನ ಫಲವನ್ನೂ ಕೊಡಲಾರವು. ಪತಿಶುಶ್ರೂಷೆಯೊಂದರಿಂದಲೇ ಸ್ತ್ರೀಯರು ಸ್ವರ್ಗವನ್ನು ಜಯಿಸುವರು. (ಸ್ವರ್ಗವನ್ನು ಪಡೆಯುವರು). ಈ ವಿಷಯವನ್ನೇ ಪ್ರಧಾನವನ್ನಾಗಿಟ್ಟುಕೊಂಡು ನಾನು ಮುಂದೆ ಹೇಳುವ ಪತಿವ್ರತಾಧರ್ಮದ ಆಖ್ಯಾನವನ್ನು ನೀನು ನಿಯತಮನಸ್ಕನಾಗಿ ಕೇಳು, ಯುಧಿಷ್ಠಿರ!"

೨೦೫ನೆಯ ಅಧ್ಯಾಯವು ಮುಗಿಯಿತು.

೨೦೬ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಕೌಶಿಕನೆಂಬ ಬ್ರಾಹ್ಮಣನ ಮತ್ತು ಪತಿವ್ರತೆಯ ಉಪಾಖ್ಯಾನ

ಮಾರ್ಕಂಡೇಯರು ಪ್ರವಚನವನ್ನು ಮುಂದುವರಿಸುತ್ತಾ ಹೇಳುತ್ತಾರೆ :

"ಭಾರತನೇ! ಬ್ರಾಹ್ಮಣಶ್ರೇಷ್ಠನಾದ, ವೇದಾಧ್ಯಾಯಿಯಾದ, ತಪೋಧನನಾದ, ಧರ್ಮಶೀಲನಾದ ಕೌಶಿಕನೆಂಬ ಬ್ರಾಹ್ಮಣನೊಬ್ಬನಿದ್ದನು. ಉಪನಿಷತ್ಸಮೇತವಾಗಿ ಸಾಂಗವೇದಾಧ್ಯಯನವನ್ನು ಮಾಡಿದ್ದ ಆ ಬ್ರಾಹ್ಮಣನೊಮ್ಮೆ ಒಂದು ಮರದ ನೆರಳಿನಲ್ಲಿ ಕುಳಿತು ವೇದಪಾರಾಯಣವನ್ನು ಮಾಡುತ್ತಿದ್ದನು. ಅದೇ ಸಮಯದಲ್ಲಿ ಅದೇ ವೃಕ್ಷದ ಮೇಲೆ ಕುಳಿತಿದ್ದ ಹೆಣ್ಣು ಬಕಪಕ್ಷಿಯು ಹಿಕ್ಕೆ ಹಾಕಿತು. ಕಾಕತಾಳನ್ಯಾಯದಂತೆ ಆ ಹಿಕ್ಕೆಯು ಬ್ರಾಹ್ಮಣನ ತಲೆಯ ಮೇಲೆ ಬಿದ್ದಿತು. ತಲೆಯೆತ್ತಿ ಬಕಪಕ್ಷಿಯನ್ನು ನೋಡಿ

ಬ್ರಾಹ್ಮಣನು ಕುಪಿತನಾದನಲ್ಲದೇ-ಆ ಬಕಪಕ್ಷಿಗೆ ತೊಂದರೆಯನ್ನುಂಟು ಮಾಡಬೇಕೆಂದೂ ಅವನ ಮನಸ್ಸು ತವಕಿಸಿತು. ಕ್ರೋಧಾಭಿಭೂತನಾದ ತಪಸ್ವಿಯ ಮನಸ್ಸಿನ ಆಶಯದಂತೆ ಆ ಬಕಪಕ್ಷಿಯು ನೆಲದ ಮೇಲೆ ದೊಪ್ಪನೆ ಬಿದ್ದಿತು. ತನ್ನ ಕ್ರೋಧದೃಷ್ಟಿಗೆ ತುತ್ತಾಗಿ ಕೆಳಗೆ ಬಿದ್ದು ಪ್ರಾಣತೊರೆದಿದ್ದ



ಪಕ್ಷಿಯನ್ನು ನೋಡಿದೊಡನೆಯೇ ಬ್ರಾಹ್ಮಣನ ಹೃದಯವು ದಯಾಪೂರ್ಣ ವಾಯಿತು. ತಾನು ಒಂದು ಪ್ರಾಣಿಗೆ ತೊಂದರೆಕೊಡಬೇಕೆಂದು ಚಿಂತಿಸಿದು ದಕ್ಕಾಗಿ ಅವನು ಪರಿತಪಿಸಿದನು. 'ರಾಗ-ದ್ವೇಷಗಳಿಂದ ಕೂಡಿದವನಾಗಿ ನಾನಿಂದು ಇಂತಹ ದುಷ್ಟಯೋಚನೆಯನ್ನು ಮಾಡಿಬಿಟ್ಟೆನಲ್ಲಾ!'–ಎಂದು

ಪದೇ-ಪದೇ ಹೇಳಿಕೊಂಡು ದುಃಖಿಸಿದನು. 'ದುಷ್ಟಯೋಚನೆಯನ್ನು ಮಾಡಿಬಿಟ್ಟೆನು ; ಮಾಡಬಾರದಾಗಿತ್ತು'–ಎಂದು ಪದೇ-ಪದೇ ಹೇಳಿಕೊಂಡು ಭಿಕ್ಷಾಟನೆಗಾಗಿ ಗ್ರಾಮವನ್ನು ಪ್ರವೇಶಿಸಿದನು. ಹಲವಾರು ಶ್ರೋತ್ರಿಯರ ಮನೆಗಳಿಗೆ ಹೋಗಿ ಭಿಕ್ಷೆಯನ್ನು ಪಡೆದನಂತರ, ದಿನವೂ ಭಿಕ್ಷೆಗೆ ಹೋಗು ತ್ತಿದ್ದ ಚಿರಪರಿಚಿತವಾಗಿದ್ದ ಒಂದು ಮನೆಗೂ ಭಿಕ್ಷೆಗೆ ಹೋಗಿ ಬಾಗಿಲಲ್ಲಿ ನಿಂತು–'ಭವತಿ ಭಿಕ್ಷಾಂ ದೇಹಿ'–ಎಂದು ಕೂಗಿದನು. ಹೀಗೆ ಕೂಗಿದೊಡ ನೆಯೇ ಮನೆಯೊಳಗಿನಿಂದ 'ತಿಷ್ಠ'–'ನಿಲ್ಲು' ಎಂಬ ಶಬ್ದವು ಕೇಳಿಬಂದಿತು.

ಗೃಹಿಣಿಯು ಭಿಕ್ಷೆಹಾಕುವ ಪಾತ್ರೆಯನ್ನು ಪರಿಶುದ್ಧಗೊಳಿಸುತ್ತಿದ್ದ ಸಮಯಕ್ಕೆ ಸರಿಯಾಗಿ ಹಸಿವು-ಬಾಯಾರಿಕೆಗಳಿಂದ ಬಳಲಿದ್ದ ಅವಳ ಪತಿಯು ಮನೆಯನ್ನು ಪ್ರವೇಶಿಸಿದನು. ಒಡನೆಯೇ ಬ್ರಾಹ್ಮಣಿಯು ತೊಳೆ ಯುತ್ತಿದ್ದ ಪಾತ್ರೆಯನ್ನು ಬದಿಗಿಟ್ಟು, ಬಳಲಿ ಬಂದ ಗಂಡನಿಗೆ ಕೈ-ಕಾಲು- ಮುಖಗಳನ್ನು ತೊಳೆಯಲು ನೀರು ಕೊಟ್ಟು, ಊಟಕ್ಕೆ ಕುಳಿತುಕೊಳ್ಳಲು ಮಣೆಯಿಟ್ಟಳು. ತನ್ನ ಗಂಡನು ಮಣೆಯ ಮೇಲೆ ಕುಳಿತನಂತರ ಎಲೆ ಹಾಕಿ ಶುಚಿ-ರುಚಿಯಾದ ಭಕ್ಷ್ಯ-ಭೋಜ್ಯಾದಿಗಳ ಊಟವನ್ನು ಬಡಿಸಿ ಗಂಡನ ಸಮೀಪದಲ್ಲಿಯೇ ಬೀಸಣಿಗೆಯಿಂದ ಗಾಳಿ ಹಾಕುತ್ತಾ ನಿಂತು ಕೊಂಡಳು. ಪ್ರತಿನಿತ್ಯವೂ ಗಂಡನು ಊಟಮಾಡಿದನಂತರ ಉಳಿದ ಉಚ್ಛಿಷ್ಟವನ್ನು ಊಟಮಾಡುವುದು ಅವಳ ಪದ್ಧತಿಯಾಗಿತ್ತು. ಪತಿಯ ಇಚ್ಛಾನುಸಾರಿಣಿಯಾಗಿ ನಡೆಯುತ್ತಿದ್ದ ಆ ಸಾಧ್ವಿಯು ಪತಿಯನ್ನೇ ಪರದೈವ ವೆಂದು ಭಾವಿಸಿದ್ದಳು. ಅನನ್ಯಚಿತ್ತಳಾಗಿದ್ದುಕೊಂಡು ಮನಸಾ, ವಾಚಾ, ಕರ್ಮಣಾ-ಪತಿಯ ಸೇವೆಯನ್ನು ಮಾಡುತ್ತಿದ್ದಳು. ಸರ್ವದಾ ಪತಿಯ ಶುಶ್ರೂಷೆಯಲ್ಲಿಯೇ ನಿರತಳಾಗಿದ್ದ ಅವಳು ಪತಿಯೇ ಸರ್ವಸ್ವವೆಂದು ದೃಢ ವಾಗಿ ನಂಬಿದ್ದಳು. ಆ ಬ್ರಾಹ್ಮಣಿಯು ಸದಾಚಾರಸಂಪನ್ನಳಾಗಿದ್ದಳು. ಶುಚಿ ಯಾಗಿದ್ದಳು. ಕುಟುಂಬನಿರ್ವಹಣೆಯಲ್ಲಿ ನಿಪುಣೆಯಾಗಿದ್ದಳು. ಪತಿಯ ಕಾರ್ಯಗಳಲ್ಲಿಯೂ ಸಹಕಾರಿಣಿಯಾಗಿದ್ದು ಅವನ ಹಿತವನ್ನೇ ಸರ್ವದಾ ಅಭಿಲಾಷಿಸುತ್ತಿದ್ದಳು.

ಇಷ್ಟು ಮಾತ್ರವಲ್ಲದೇ ಆ ಸಾಧ್ವಿಯು ನಿತ್ಯ-ನೈಮಿತ್ತಿಕವಾದ ದೇವತಾ ಕಾರ್ಯಗಳನ್ನೂ ತಪ್ಪದೇ ಮಾಡುತ್ತಿದ್ದಳು. ಮಧ್ಯಾಹ್ನದ ವೇಳೆಗೆ ಆಗ

ಮಿಸಿದ ಅತಿಥಿಗಳನ್ನು ಸತ್ಕರಿಸುತ್ತಿದ್ದಳು. ಆಳುಗಳನ್ನೂ ನಿರ್ಲಕ್ಷಿಸುತ್ತಿರಲಿಲ್ಲ. ವೇಳೆ-ವೇಳೆಗೆ ಅವರಿಗೆ ಅನ್ನಾಹಾರಗಳನ್ನು ಕೊಟ್ಟು ಉಪಚರಿಸುತ್ತಿದ್ದಳು. ಅತ್ತೆ-ಮಾವಂದಿರನ್ನೂ ಭಯ-ಭಕ್ತಿಗಳಿಂದ ಉಪಚರಿಸುತ್ತಿದ್ದಳು.

ಪತಿಯ ಊಟವು ಮುಗಿದನಂತರ ಅವನಿಗೆ ತಾಂಬೂಲವನ್ನು ಕೊಡುತ್ತಿದ್ದ ವೇಳೆಯಲ್ಲಿ ಆ ಸಾಧ್ವಿಯು ಬಾಗಿಲಿನಲ್ಲಿ ಭಿಕ್ಷೆಗಾಗಿ ನಿಂತಿದ್ದ ಬ್ರಾಹ್ಮಣನನ್ನು ನೋಡಿದಳು. ಪತಿಶುಶ್ರೂಷೆಯ ಅವಸರದಲ್ಲಿದ್ದ ಅವಳಿಗೆ ಬ್ರಾಹ್ಮಣನಿಗೆ ತಾನು ನಿಲ್ಲೆಂದು ಹೇಳಿದುದೇ ಮರೆತು ಹೋಗಿದ್ದಿತು. ಅವನನ್ನು ನೋಡಿದೊಡನೆಯೇ ತಾನು ಹೇಳಿದ್ದು ಸ್ಮರಣೆಗೆ ಬಂದಿತು. ಅಷ್ಟು ಹೊತ್ತೂ ಬ್ರಾಹ್ಮಣನನ್ನು ಬಾಗಿಲಿನಲ್ಲೇ ನಿಲ್ಲಿಸಿದುದಕ್ಕಾಗಿ ಆ ಬ್ರಾಹ್ಮಣಿಯು ಬಹಳ ವಾಗಿ ನಾಚಿದಳು. ಒಡನೆಯೇ ಅಡಿಗೆಮನೆಯೊಳಗೆ ಹೋಗಿ ಅನ್ನವನ್ನು ತೆಗೆದುಕೊಂಡು, ಕಾಯುತ್ತಾ ನಿಂತಿದ್ದ ಬ್ರಾಹ್ಮಣನ ಜೋಳಿಗೆಗೆ ಹಾಕಲು ಹೋದಳು. ಬ್ರಾಹ್ಮಣಿಯು ಭಿಕ್ಷೆಯನ್ನು ಹಾಕಲು ತನ್ನೆದುರಿಗೆ ಬಂದೊಡನೆಯೇ ಬ್ರಾಹ್ಮಣನು ಹೇಳಿದನು : "ವರಾಂಗನೆಯೇ! ಇಂದೇನು ಹೀಗೆ ಮಾಡಿಬಿಟ್ಟೆ? 'ನಿಲ್ಲು' ಎಂದು ಹೇಳಿದನಂತರ ನನಗೆ ಭಿಕ್ಷೆಯನ್ನಿಟ್ಟು ನನ್ನನ್ನು ಒಡನೆಯೇ ಕಳುಹಿಸಬೇಡವೇ?"

ಬ್ರಾಹ್ಮಣಿಯು ಬ್ರಾಹ್ಮಣನ ಮುಖವನ್ನು ನೋಡಿದಳು. ತೇಜಸ್ವಿ ಯಾದ ಬ್ರಾಹ್ಮಣನು ತಾನು ಸಾವಕಾಶಮಾಡಿದ್ದರಿಂದ ಕುಪಿತನಾಗಿರುವ ನೆಂಬುದರ ಅರಿವು ಅವಳಿಗಾಯಿತು. ಒಡನೆಯೇ ವಿನಯಾನ್ವಿತಳಾಗಿ ಬ್ರಾಹ್ಮಣನನ್ನು ಸಮಾಧಾನಗೊಳಿಸುತ್ತಾ ಹೇಳಿದಳು :

**ಕ್ಷನ್ತುಮರ್ಹಸಿ ಮೇ ವಿದ್ವನ್ಭರ್ತಾ ಮೇ ದೈವತಂ ಮಹತ್ ।**
**ಸ ಚಾಪಿ ಕ್ಷುಧಿತಃ ಶ್ರಾನ್ತಃ ಪ್ರಾಪ್ತಃ ಶುಶ್ರೂಷಿತೋ ಮಯಾ ॥೨೦॥**

"ವಿದ್ವಾಂಸನೇ! ನಾನು ನಿನಗೆ ಮಾಡಿದ ಅಪಚಾರವನ್ನು ಕ್ಷಮಿಸು. ನನ್ನನ್ನು ಕ್ಷಮಿಸಲು ನೀನು ಅರ್ಹನಾಗಿರುವೆ. ನಾನು ಉದ್ದೇಶಪೂರ್ವಕವಾಗಿ ನಿನಗೆ ಭಿಕ್ಷೆಯಿಡಲು ಪಾತ್ರೆಯನ್ನು ತೊಳೆಯುತ್ತಿರುವ ವೇಳೆಗೆ ಸರಿಯಾಗಿ ಹಸಿವಿನಿಂದಲೂ ಆಯಾಸದಿಂದಲೂ ಬಳಲಿದ್ದ ನನ್ನ ಪತಿಯು ಮನೆಯೊಳಗೆ ಬಂದನು. ಪತಿಯೇ ನನಗೆ ಪರದೈವವು. ಅವನಿಗೆ ಆ ಸಮಯ

ದಲ್ಲಿ ಊಟವಿಟ್ಟು ಉಪಚರಿಸುವುದು ನನ್ನ ಪ್ರಥಮಕರ್ತವ್ಯವಾಗಿದ್ದಿತು. ನನ್ನ ಕರ್ತವ್ಯವನ್ನು ಮುಗಿಸಿದನಂತರ ನಿನಗೆ ಭಿಕ್ಷೆಯಿಡಲು ಬಂದಿರುವೆನು."

**ಬ್ರಾಹ್ಮಣಾ ನ ಗರೀಯಾಂಸೋ ಗರೀಯಾಂಸ್ತೇ ಪತಿಃ ಕೃತಃ ।**
**ಗೃಹಸ್ಥಧರ್ಮೇ ವರ್ತನ್ತೀ ಬ್ರಾಹ್ಮಣಾನವಮನ್ಯಸೇ ॥೨೧॥**

"ಹಾಗಾದರೆ ಬ್ರಾಹ್ಮಣರು ನಿನಗೆ ಶ್ರೇಷ್ಠರೆನಿಸಿಲ್ಲ. ಬ್ರಾಹ್ಮಣರಿಗಿಂತಲೂ ನಿನಗೆ ಪತಿಯೇ ಶ್ರೇಷ್ಠನೆನಿಸಿದನು. ಬ್ರಾಹ್ಮಣರ ಪೂಜೆಗಿಂತಲೂ ಪತಿಯ ಸೇವೆಯೇ ನಿನಗೆ ಹೆಚ್ಚಿನದಾಯಿತು. ಗೃಹಸ್ಥಧರ್ಮದಲ್ಲಿ ನೀನಿದ್ದುಕೊಂಡೂ ಭಿಕ್ಷೆಗಾಗಿ ಬಂದ ಬ್ರಾಹ್ಮಣನನ್ನು ಅನಾದರಣೆಮಾಡಿರುವೆ.

**ಇನ್ದ್ರೋಽಪ್ಯೇಷಾಂ ಪ್ರಣಮತೇ ಕಿಂ ಪುನರ್ಮಾನವಾ ಭುವಿ ।**
**ಅವಲಿಪ್ತೇನ ಜಾನೀಷೇ ವೃದ್ಧಾನಾಂ ನ ಶ್ರುತಂ ತ್ವಯಾ ।**
**ಬ್ರಾಹ್ಮಣಾ ಹ್ಯಗ್ನಿಸದೃಶಾ ದಹೇಯುಃ ಪೃಥಿವೀಮಪಿ ॥೨೨॥**

ಸಕಲದೇವತೆಗಳ ಅಧಿಪತಿಯಾದ ಇಂದ್ರನೂ ಮೊದಲು ಬ್ರಾಹ್ಮಣರನ್ನು ಸತ್ಕರಿಸಿ ಅನಂತರವೇ ಬೇರೆಯ ಕಾರ್ಯಗಳಲ್ಲಿ ಉದ್ಯುಕ್ತನಾಗುವನು. ಹೀಗಿರುವಾಗ ಮಾನವರ ವಿಷಯದಲ್ಲಿ ಹೇಳುವುದೇನಿದೆ? ಆದರೆ ಗರ್ವಿಷ್ಠಳೇ! ವೃದ್ಧರ ಸೇವೆಮಾಡದೇ ಅವರ ಹಿತೋಪದೇಶವನ್ನು ಕೇಳದೇ ಇರುವುದರಿಂದ ನಿನಗೀ ಧರ್ಮರಹಸ್ಯವು ತಿಳಿಯದಾಗಿದೆ. ಬ್ರಾಹ್ಮಣರು ಅಗ್ನಿಸಮಾನರೆಂದು ಭಾವಿಸು. ಅವರು ಕುಪಿತರಾದರೆಂದರೆ ಈ ಪೃಥ್ವಿಯನ್ನೇ ಸುಟ್ಟುಬಿಡುವರು.!"

**ನಾಹಂ ಬಲಾಕಾ ವಿಪ್ರರ್ಷೇ ತ್ಯಜ ಕ್ರೋಧಂ ತಪೋಧನ ॥೨೩॥**

**ಅನಯಾ ಕ್ರುದ್ಧಯಾ ದೃಷ್ಟ್ಯಾ ಕ್ರುದ್ಧಃ ಕಿಂ ಮಾಂ ಕರಿಷ್ಯತಿ ।**
**ನಾವಜಾನಾಮ್ಯಹಂ ವಿಪ್ರಾನ್ದೇವೈಸ್ತುಲ್ಯಾನ್ಮನಸ್ವಿನಃ ॥೨೪॥**

"ಬ್ರಾಹ್ಮಣೋತ್ತಮನೇ! ಸುಟ್ಟುಬಿಡಲು ನಾನೇನೂ ಬಕಪಕ್ಷಿಯಲ್ಲ. ನಿನ್ನ ಕೋಪವು ನನ್ನನ್ನೇನೂ ಮಾಡಲಾರದು ; ನಿನ್ನ ಕ್ರೂರದೃಷ್ಟಿಯೂ ನನ್ನನ್ನು ದಹಿಸಲಾರದು. ನಾನೆಂದಿಗೂ ಬ್ರಾಹ್ಮಣರನ್ನು ಅನಾದರಣೆ

ಮಾಡಿರುವುದಿಲ್ಲ. ಮನಸ್ವಿಗಳಾದ ಮತ್ತು ಮಹಾತ್ಮರಾದ ಬ್ರಾಹ್ಮಣರು ನಿಶ್ಚಯವಾಗಿಯೂ ದೇವಸಮಾನರೇ ಸರಿ.

**ಅಪರಾಧಮಿಮಂ ವಿಪ್ರ ಕ್ಷನ್ತುಮರ್ಹಸಿ ಮೇಽನಘ ।**
**ಜಾನಾಮಿ ತೇಜೋ ವಿಪ್ರಾಣಾಂ ಮಹಾಭಾಗ್ಯಂ ಚ ಧೀಮತಾಮ್ ॥೨೫॥**

ನಿಷ್ಪಾಪನೇ! ಆದರೆ ನಾನು ಅನಿವಾರ್ಯವಾಗಿ ಮಾಡಿದ ಈ ಒಂದು ಅಪರಾಧವನ್ನು ಕ್ಷಮಿಸುವುದು ಯೋಗ್ಯವಾಗಿದೆ. ಬ್ರಾಹ್ಮಣರ ಮಹಾತೇಜ ಸ್ಸಿನ ಪ್ರಭಾವವೆಷ್ಟೆಂಬುದನ್ನು ಅವರ ಮಹಾಭಾಗ್ಯವೆಷ್ಟೆಂಬುದನ್ನೂ ನಾನು ತಿಳಿದಿರುತ್ತೇನೆ.

**ಅಪೇಯಃ ಸಾಗರಃ ಕ್ರೋಧಾತ್ಕೃತೋ ಹಿ ಲವಣೋದಕಃ ।**
**ತಥೈವ ದೀಪ್ತತಪಸಾಂ ಮುನೀನಾಂ ಭಾವಿತಾತ್ಮನಾಮ್ ।**
**ಯೇಷಾಂ ಕ್ರೋಧಾಗ್ನಿರದ್ಯಾಪಿ ದಣ್ಡಕೇ ನೋಪಶಾಮ್ಯತಿ ॥೨೬॥**

ಕೋಪಗೊಂಡ ಬ್ರಾಹ್ಮಣನೊಬ್ಬನಿಂದ ಮಹಾಸಾಗರದ ನೀರು ಕುಡಿ ಯಲು ಅಯೋಗ್ಯವಾಗಿ ಮಾಡಲ್ಪಟ್ಟು ಉಪ್ಪುನೀರಾಗಿ ಪರಿವರ್ತಿತ ವಾಯಿತು. ಅದೇ ರೀತಿಯಲ್ಲಿ ಮಹಾತಪಸ್ವಿಗಳಾದ, ಜಿತೇಂದ್ರಿಯರಾದ ಮುನಿಗಳ ಮಹಾಕೋಪದಿಂದ ಪ್ರಾದುರ್ಭೂತವಾದ ಕಾಡುಗಿಚ್ಚು ಇಂದೂ ಕೂಡ ದಂಡಕಾರಣ್ಯದಲ್ಲಿ ಉಪಶಮನವಾಗದೇ ಧಗ-ಧಗನೆ ಉರಿಯುತ್ತಲೇ ಇರುವುದು.

**ಬ್ರಾಹ್ಮಣಾನಾಂ ಪರಿಭವಾದ್ವಾತಾಪಿಃ ಸುದುರಾತ್ಮವಾನ್ ।**
**ಅಗಸ್ತ್ಯಮೃಷಿಮಾಸಾದ್ಯ ಜೀರ್ಣಃ ಕ್ರೂರೋ ಮಹಾಸುರಃ ॥೨೭॥**

ಬ್ರಾಹ್ಮಣರನ್ನು ನಿರ್ಲಕ್ಷಮಾಡಿದುದರಿಂದಲೇ ದುರ್ಬುದ್ಧಿಯಾದ, ದುಷ್ಕರ್ಮಿಯಾದ, ಕ್ರೂರಿಯಾದ ವಾತಾಪಿಯು ಅಗಸ್ತ್ಯಋಷಿಗಳನ್ನು ಕೆಣಕಿ ಅವರ ಹೊಟ್ಟೆಯಲ್ಲೇ ಜೀರ್ಣವಾಗಿ ಹೋದನು.

**ಬಹುಪ್ರಭಾವಾಃ ಶ್ರೂಯನ್ತೇ ಬ್ರಾಹ್ಮಣಾನಾಂ ಮಹಾತ್ಮನಾಮ್ ।**
**ಕ್ರೋಧಃ ಸುವಿಪುಲೋ ಬ್ರಹ್ಮನ್ಪ್ರಸಾದಶ್ಚ ಮಹಾತ್ಮನಾಮ್ ॥೨೮॥**
**ಅಸ್ಮಿಂಸ್ತ್ವತಿಕ್ರಮೇ ಬ್ರಹ್ಮನ್ಕ್ಷನ್ತುಮರ್ಹಸಿ ಮೇಽನಘ ॥೨೯॥**

ಬ್ರಾಹ್ಮಣರಿಗಿರುವ ಅನೇಕವಾದ ಪ್ರಭಾವಗಳು ಎಲ್ಲೆಡೆಗಳಲ್ಲಿಯೂ

ಕೇಳಿಬರುತ್ತಿವೆ. ಮಹಾತ್ಮರಾದ ಬ್ರಾಹ್ಮಣರು ಕ್ರೂರಿಗಳ ಮತ್ತು ಅಧರ್ಮಿಗಳ ವಿಷಯದಲ್ಲಿ ಎಷ್ಟು ಕೋಪಿಷ್ಠರಾಗಿರುತ್ತಾರೆಯೋ-ಅದೇ ರೀತಿಯಲ್ಲಿಯೇ ಸತ್ಪುರುಷರ ವಿಷಯದಲ್ಲಿಯೂ ಮತ್ತು ಧರ್ಮನಿರತರಾಗಿರುವವರ ವಿಷಯದಲ್ಲಿಯೂ ಅಷ್ಟೇ ದಯಾಳುಗಳೂ, ಅನುಗ್ರಹಪರರೂ, ಕ್ಷಮಾವಂತರೂ ಆಗಿರುತ್ತಾರೆ. ಅದೇ ರೀತಿಯಲ್ಲಿ ನೀನಾದರೂ ನಾನು ಮಾಡಿದ ಅಪರಾಧವನ್ನು ಕ್ಷಮಿಸುವುದು ಸಾಧುವಾಗಿದೆ.

**ಪತಿಶುಶ್ರೂಷಯಾ ಧರ್ಮೋ ಯಃ ಸ ಮೇ ರೋಚತೇ ದ್ವಿಜ ।**
**ದೈವತೇಷ್ವಪಿ ಸರ್ವೇಷು ಭರ್ತಾ ಮೇ ದೈವತಂ ಪರಮ್ ॥೩೦॥**

ಯಾವ ಪತಿಶುಶ್ರೂಷಾಧರ್ಮವೆಂಬುದಿದೆಯೋ-ಅದೇ ನನ್ನ ಪಾಲಿಗೆ ಶ್ರೇಷ್ಠವಾದ ಧರ್ಮವೆಂದು ನಾನು ಭಾವಿಸಿದ್ದೇನೆ. ಈ ಧರ್ಮದಲ್ಲಿಯೇ ನನಗೆ ಹೆಚ್ಚಿನ ಅಭಿರುಚಿಯಿರುವುದು. ಎಲ್ಲ ದೇವತೆಗಳಿಗಿಂತಲೂ ಹೆಚ್ಚಾಗಿ ಪತಿಯೇ ನನಗೆ ಪರದೈವವು.

**ಅರಿಶೇಷೇಣ ತಸ್ಯಾಹಂ ಕುರ್ಯಾಂ ಧರ್ಮಂ ದ್ವಿಜೋತ್ತಮ ॥೩೧॥**

**ಶುಶ್ರೂಷಾಯಾಃ ಫಲಂ ಪಶ್ಯ ಪತ್ಯುರ್ಬ್ರಾಹ್ಮಣ ಯಾದೃಶಮ್ ।**
**ಬಲಾಕಾ ಹಿ ತ್ವಯಾ ದಗ್ಧಾ ರೋಷಾತ್ತದ್ವಿದಿತಂ ಮಯಾ ॥೩೨॥**

ಪತಿಯೇ ಪರದೈವವೆಂದು ಭಾವಿಸಿರುವ ನಾನು ನನ್ನ ಪತಿಯನ್ನು ಸ್ವಲ್ಪವಾದರೂ ನ್ಯೂನಾತಿರೇಕಗಳಿಲ್ಲದಂತೆ ಸೇವಿಸುತ್ತೇನೆ. ಪತಿಶುಶ್ರೂಷಾ ಧರ್ಮದ ಹೊರತಾಗಿ ಬೇರಾವ ಧರ್ಮವೂ ನನಗೆ ತಿಳಿಯದು. ಪತಿಶುಶ್ರೂಷೆಯ ಫಲವೇನೆಂಬುದನ್ನು ನೀನೀಗಾಲೇ ಪ್ರತ್ಯಕ್ಷವಾಗಿಯೇ ತಿಳಿದಿರುವೆ. ನೀನು ನಿನ್ನ ಕೋಪಾವೇಶದಿಂದ ದಗ್ಧಮಾಡಿದ ಬಕಪಕ್ಷಿಯ ವಿಷಯವು ನಾನು ಮಾಡಿದ ಪತಿಸೇವಾಫಲದಿಂದಲೇ ನನಗೆ ತಿಳಿಯಿತು. ಬ್ರಾಹ್ಮಣೋತ್ತಮ! ಆದರೆ, ನೀನು ಮಾಡುತ್ತಿರುವ ತಪಸ್ಸಿನ ಮತ್ತು ವೇದಾಧ್ಯಯನಗಳ ಜೊತೆಗೆ ಈ ಕೆಲವು ಧರ್ಮರಹಸ್ಯಗಳನ್ನೂ ತಿಳಿದುಕೊಳ್ಳಬೇಕಾಗಿದೆ.

**ಕ್ರೋಧಃ ಶತ್ರುಃ ಶರೀರಸ್ಥೋ ಮನುಷ್ಯಾಣಾಂ ದ್ವಿಜೋತ್ತಮ ।**
**ಯಃ ಕ್ರೋಧಮೋಹೌ ತ್ಯಜತಿ ತಂ ದೇವಾ ಬ್ರಾಹ್ಮಣಂ ವಿದುಃ ॥೩೩॥**

ಬ್ರಾಹ್ಮಣೋತ್ತಮನೇ! ಮಾನವರಿಗೆ ತಮ್ಮ ಶರೀರದಲ್ಲಿರುವ ಕ್ರೋಧವೇ ತಮ್ಮನ್ನು ಕೊಲ್ಲುವ ಶತ್ರುವಾಗಿ ಪರಿಣಮಿಸುತ್ತದೆ. ಯಾವಾ ತನು ಕ್ರೋಧ ಮತ್ತು ಮೋಹಗಳನ್ನು ತ್ಯಜಿಸುತ್ತಾನೆಯೋ–ಅವನನ್ನೇ ದೇವತೆಗಳು ಬ್ರಾಹ್ಮಣನೆಂದು ತಿಳಿಯುತ್ತಾರೆ.

**ಯೋ ವದೇದಿಹ ಸತ್ಯಾನಿ ಗುರುಂ ಸಂತೋಷಯೇತ ಚ ।**
**ಹಿಂಸಿತಶ್ಚ ನ ಹಿಂಸೇತ ತಂ ದೇವಾ ಬ್ರಾಹ್ಮಣಂ ವಿದುಃ ॥೩೪॥**

ಯಾವಾತನು ಯಾವಾಗಲೂ ಸತ್ಯವನ್ನೇ ಹೇಳುವನೋ, ಆಚಾರ್ಯ ನನ್ನು ಶುಶ್ರೂಷೆಯಿಂದ ಸಂತೋಷಗೊಳಿಸುವನೋ ಮತ್ತು ತಾನು ಹಿಂಸಿತ ನಾದರೂ ಪರರನ್ನು ಹಿಂಸಿಸುವುದಿಲ್ಲವೋ–ಅವನನ್ನೇ ದೇವತೆಗಳು ಬ್ರಾಹ್ಮಣ ನೆಂದು ತಿಳಿಯುತ್ತಾರೆ.

**ಜಿತೇನ್ದ್ರಿಯೋ ಧರ್ಮಪರಃ ಸ್ವಾಧ್ಯಾಯನಿರತಃ ಶುಚಿಃ ।**
**ಕಾಮಕ್ರೋಧೌ ವಶೌ ಯಸ್ಯ ತಂ ದೇವಾ ಬ್ರಾಹ್ಮಣಂ ವಿದುಃ ॥೩೫॥**

ಯಾವನು ಜಿತೇಂದ್ರಿಯನಾಗಿಯೂ–ಧರ್ಮಪರನಾಗಿಯೂ ಇರು ವನೋ, ಅಧ್ಯಯನದಲ್ಲಿ ನಿರತನಾಗಿ ಅಂತರಂಗ-ಬಹಿರಂಗಶುದ್ಧನಾಗಿಯೂ ಇರುವನೋ ಮತ್ತು ಕಾಮ-ಕ್ರೋಧಗಳೆರಡೂ ಯಾವನ ವಶವರ್ತಿಯಾ ಗಿರುವುವೋ–ಅಂತಹವನನ್ನೇ ದೇವತೆಗಳು ಬ್ರಾಹ್ಮಣನೆಂದು ತಿಳಿಯುವರು.

**ಯಸ್ಯ ಚಾತ್ಮಸಮೋ ಲೋಕೋ ಧರ್ಮಜ್ಞಸ್ಯ ಮನಸ್ವಿನಃ ।**
**ಸರ್ವಧರ್ಮೇಷು ಚ ರತಸ್ತಂ ದೇವಾ ಬ್ರಾಹ್ಮಣಂ ವಿದುಃ ॥೩೬॥**

ಯಾವನು ಲೋಕವನ್ನು ತನ್ನಂತೆಯೇ ಭಾವಿಸಿರುವನೋ (ಇತರರೂ ತನ್ನಂತೆಯೇ ಎಂಬ ಭಾವನೆಯಿಂದಿರುವನೋ), ಧರ್ಮಜ್ಞನೋ, ದೃಢ ವಾದ ಮನಸ್ಸುಳ್ಳವನೋ, ವರ್ಣಾಶ್ರಮಗಳಿಗೆ ಉಕ್ತವಾಗಿರುವ ಸರ್ವಧರ್ಮ ಗಳಲ್ಲಿಯೂ ನಿರತನಾಗಿರುವನೋ–ಅವನನ್ನೇ ದೇವತೆಗಳು ಬ್ರಾಹ್ಮಣನೆಂದು ತಿಳಿಯುವರು.

**ಯೋಽಧ್ಯಾಪಯೇದಧೀಯೀತ ಯಜೇದ್ವಾ ಯಾಜಯೀತ ವಾ ।**
**ದದ್ಯಾದ್ವಾಪಿ ಯಥಾಶಕ್ತಿ ತಂ ದೇವಾ ಬ್ರಾಹ್ಮಣಂ ವಿದುಃ ॥೩೭॥**

ಯಾವನು ತಾನೂ ಅಧ್ಯಯನಮಾಡಿ ಇತರರಿಗೂ ಅಧ್ಯಯನಮಾಡಿಸುವನೋ (ವೇದವನ್ನು ಹೇಳಿಕೊಡುವನೋ), ತಾನೂ ಯಾಗಮಾಡಿ ಇತರರಿಗೂ ಯಾಗಮಾಡಿಸುವನೋ ಮತ್ತು ಯಥಾಶಕ್ತಿ ದಾನಮಾಡುವನೋ–ಅಂತಹವನನ್ನೇ ದೇವತೆಗಳು ಬ್ರಾಹ್ಮಣನೆಂದು ತಿಳಿಯುವರು.

**ಬ್ರಹ್ಮಚಾರೀ ವದಾನ್ಯೋ ಯೋಽಧೀಯೀತ ದ್ವಿಜಪುಙ್ಗವ ।**
**ಸ್ವಾಧ್ಯಾಯವಾನಮತ್ತೋ ವೈ ತಂ ದೇವಾ ಬ್ರಾಹ್ಮಣಂ ವಿದುಃ ॥೩೮॥**

ಯಾವನು ಸದಾ ಬ್ರಹ್ಮೋಪಾಸನೆಯಲ್ಲಿಯೇ ನಿರತನಾಗಿರುವನೋ, ಉದಾರನೋ, ಸದಾ ಅಧ್ಯಯನಾಧ್ಯಾಪನಗಳಲ್ಲಿಯೇ ನಿರತನಾಗಿರುವನೋ ಮತ್ತು ಯಾವನು ಅಪ್ರಮತ್ತನೋ (ಆಲಸಿಕೆಯಿಲ್ಲದವನೋ)–ಅಂತಹವನನ್ನೇ ದೇವತೆಗಳು ಬ್ರಾಹ್ಮಣನೆಂದು ತಿಳಿಯುವರು.

**ಯದ್ಬ್ರಾಹ್ಮಣಾನಾಂ ಕುಶಲಂ ತದೇಷಾಂ ಪರಿಕೀರ್ತಯೇತ್ ।**
**ಸತ್ಯಂ ತಥಾ ವ್ಯಾಹರತಾಂ ನಾನೃತೇ ರಮತೇ ಮನಃ ॥೩೯॥**

**ಧರ್ಮಂ ತು ಬ್ರಾಹ್ಮಣಸ್ಯಾಹುಃ ಸ್ವಾಧ್ಯಾಯಂ ದಮಮಾರ್ಜವಮ್**
**ಇನ್ದ್ರಿಯಾಣಾಂ ನಿಗ್ರಹಂ ಚ ಶಾಶ್ವತಂ ದ್ವಿಜಸತ್ತಮ ॥೪೦॥**

ಬ್ರಾಹ್ಮಣಸತ್ತಮನೇ! ಬ್ರಾಹ್ಮಣರಿಗೆ ಯಾವುದರಿಂದ ಸೌಖ್ಯವುಂಟಾಗುತ್ತದೆಯೋ ಅದನ್ನೇ ಅವರಿಗೆ ಹೇಳಬೇಕು. (ನಿನ್ನ ಕುಶಲಕ್ಕೇ ಇದನ್ನು ಹೇಳುತ್ತಿದ್ದೇನೆ.) ಸತ್ಯವನ್ನು ಯಾವಾಗಲೂ ಹೇಳುತ್ತಿರುವವರಿಗೆ ಸುಳ್ಳು ಹೇಳಲು ಖಂಡಿತವಾಗಿಯೂ ಮನಸ್ಸು ಒಪ್ಪುವುದಿಲ್ಲ. ಅಧ್ಯಯನಾಧ್ಯಾಪನಗಳು, ಜಿತೇಂದ್ರಿಯತೆ, ಕಪಟವಿಲ್ಲದಿರುವಿಕೆ, ಇಂದ್ರಿಯನಿಗ್ರಹ–ಇವುಗಳೇ ಬ್ರಾಹ್ಮಣನ ಶಾಶ್ವತವಾದ ಧರ್ಮಗಳೆಂದು ಹೇಳುತ್ತಾರೆ.

**ಸತ್ಯಾರ್ಜವೇ ಧರ್ಮಮಾಹುಃ ಪರಂ ಧರ್ಮವಿದೋ ಜನಾಃ ।**
**ದುರ್ಜ್ಞೇಯಃ ಶಾಶ್ವತೋ ಧರ್ಮಃ ಸ ಚ ಸತ್ಯೇ ಪ್ರತಿಷ್ಠಿತಃ ॥೪೧॥**

**ಶ್ರುತಿಪ್ರಮಾಣೋ ಧರ್ಮಃ ಸ್ಯಾದಿತಿ ವೃದ್ಧಾನುಶಾಸನಮ್ । ಬಹುಧಾ ದೃಶ್ಯತೇ ಧರ್ಮಃ ಸೂಕ್ಷ್ಮ ಏವ ದ್ವಿಜೋತ್ತಮ ॥೪೨॥**

ಧರ್ಮವಿದರಾದವರು ಸತ್ಯ ಮತ್ತು ಋಜುತ್ವ (ನಿಷ್ಕಾಪಟ್ಯ)ಗಳನ್ನು ಪರಮಧರ್ಮವೆಂದು ಹೇಳುತ್ತಾರೆ. ಶಾಶ್ವತವಾದ ಧರ್ಮವೇನೆಂಬುದನ್ನು ತಿಳಿಯುವುದು ದುಃಸಾಧ್ಯವಾಗಿರುವುದು. ಆದರೆ ಶಾಶ್ವತಧರ್ಮವು ಮಾತ್ರ ಸತ್ಯದಲ್ಲಿಯೇ ಪ್ರತಿಷ್ಠಿತವಾಗಿರುವುದು. (ಇಲ್ಲಿ ಶಾಶ್ವತಧರ್ಮವೆಂದರೆ ಆತ್ಮ ದರ್ಶನಧರ್ಮವೇ ಆಗಿರುವುದು.) 'ಶ್ರುತಿಪ್ರಮಾಣವಿರುವುದೇ ಧರ್ಮ' ಎಂದು ವೃದ್ಧರು ಹೇಳುತ್ತಾರೆ. ಆದರೆ ಶ್ರುತಿವಿಹಿತವಾದ ಈ ಧರ್ಮಗಳ ನಾನಾಪ್ರಕಾರಗಳಾಗಿವೆ. ಆದುದರಿಂದ ಇದು ಬಹುಸೂಕ್ಷ್ಮವಾದುದೂ ಮತ್ತು ಸ್ಥೂಲಬುದ್ಧಿಯವರಿಗೆ ನಿಲುಕದ್ದೂ ಆಗಿರುತ್ತದೆ.

**ಭವಾನಪಿ ಚ ಧರ್ಮಜ್ಞಃ ಸ್ವಾಧ್ಯಾಯನಿರತಃ ಶುಚಿಃ ।**
**ನ ತು ತತ್ತ್ವೇನ ಭಗವನ್ಧರ್ಮಂ ವೇತ್ಸೀತಿ ಮೇ ಮತಿಃ ॥೪೩॥**

ಪೂಜ್ಯನೇ! ಭಗವತ್ಸ್ವರೂಪನಾದ, ಬ್ರಾಹ್ಮಣೋತ್ತಮನಾದ ನೀನೂ ಧರ್ಮಜ್ಞನೂ, ಸ್ವಾಧ್ಯಯನಿರತನೂ, ಶುಚಿಯೂ ಆಗಿರುವೆಯೆಂಬುದರಲ್ಲಿ ಸಂಶಯವಿಲ್ಲ. ಆದರೆ ನೀನು ಧರ್ಮವನ್ನು (ಧರ್ಮಸೂಕ್ಷ್ಮವನ್ನು) ತತ್ತ್ವತಃ ಯಥಾರ್ಥವಾಗಿ ತಿಳಿದಿಲ್ಲವೆಂದೇ ನನ್ನ ಬುದ್ಧಿಗೆ ತೋರುತ್ತಿದೆ.

**ಯದಿ ವಿಪ್ರ ನ ಜಾನೀಷೇ ಧರ್ಮಂ ಪರಮಕಂ ದ್ವಿಜ ।**
**ಧರ್ಮವ್ಯಾಧಂ ತತಃ ಪೃಚ್ಛ ಗತ್ವಾ ತು ಮಿಥಿಲಾಂ ಪುರೀಮ್ ॥೪೪॥**

ನೀನು ಈ ಶ್ರೇಷ್ಠವಾದ ತತ್ತ್ವಮೂಲವಾದ ಧರ್ಮಸೂಕ್ಷ್ಮವನ್ನು ತಿಳಿಯದವನಾಗಿದ್ದರೆ–ಮಿಥಿಲಾನಗರಿಗೆ ಹೋಗಿ ಅಲ್ಲಿರುವ ಧರ್ಮವ್ಯಾಧ ನನ್ನು ಧರ್ಮರಹಸ್ಯದ ವಿಷಯವಾಗಿ ಪ್ರಶ್ನಿಸು. ಮಾತಾ-ಪಿತೃಗಳ ಶುಶ್ರೂಷೆಯಲ್ಲಿ ಸರ್ವದಾ ನಿರತನಾಗಿಯೂ ಇರುವ ಮಿಥಿಲಾವಾಸಿಯಾದ ಆ ವ್ಯಾಧನು ನಿನಗೆ ಶಾಶ್ವತಧರ್ಮವನ್ನು ಬೋಧಿಸುತ್ತಾನೆ. ನಿನಗೆ ಯಾವಾಗ ಅನುಕೂಲವಾಗುವುದೋ ಆಗ ನೀನು ಅಲ್ಲಿಗೆ ಹೋಗು.

**ಅತ್ಯುಕ್ತಮಪಿ ಮೇ ಸರ್ವಂ ಕ್ಷನ್ತು ಮರ್ಹಸ್ಯನಿನಿತ ।**

ನಿನಗೆ ಮಂಗಳವಾಗಲಿ. ಧರ್ಮಜ್ಞನಾದ ಬ್ರಾಹ್ಮಣನೊಬ್ಬನಿಗೆ ಈ ಎಲ್ಲ ವಿಷಯಗಳನ್ನೂ ಹೇಳಿದುದು ಹೆಚ್ಚು ಮಾತೇ ಸರಿ. ಅಕಳಂಕನೇ! ನಾನೀಗ ಹೇಳಿರುವುದು ಅತ್ಯುಕ್ತಿಯೆಂದು ನೀನು ಭಾವಿಸುವುದಾದಲ್ಲಿ ದಯೆಯಿಟ್ಟು ಕ್ಷಮಿಸಿಬಿಡು.

**ಸ್ತ್ರಿಯೋ ಹ್ಯವಧ್ಯಾಃ ಸರ್ವೇಷಾ ಯೇ ಚ ಧರ್ಮವಿದೋ ಜನಾಃ ॥**

ಯಾರು ಧರ್ಮವನ್ನು ತಿಳಿದಿರುವರೋ–ಆ ಎಲ್ಲರಿಗೂ ಸ್ತ್ರೀಯರು ಅವಧ್ಯರಾಗುತ್ತಾರೆ. ಅರ್ಥಾತ್ ಧರ್ಮವಿದರಾದವರು ಸ್ತ್ರೀಯರೊಮ್ಮೆ ತಪ್ಪು ಮಾಡಿದರೂ ಶಿಕ್ಷಿಸಹೋಗುವುದಿಲ್ಲ."

ಪತಿವ್ರತೆಯಾದ ಬ್ರಾಹ್ಮಣಿಯ ಮಾತುಗಳನ್ನು ಕೇಳಿದ ಕೌಶಿಕನು ಹೇಳಿದನು :

"ತಾಯೇ! ಬ್ರಾಹ್ಮಣಿಯೇ! ನಾನು ನಿನ್ನ ವಿಷಯದಲ್ಲಿ ಸುಪ್ರೀತನಾಗಿರುವೆನು. ನಿನಗೆ ಮಂಗಳವಾಗಲಿ. ನನ್ನ ಕೋಪವು ನಿನ್ನ ಅಮೃತಧಾರಾಸಮಾನವಾದ ಹಿತವಚನದಿಂದ ಉಡುಗಿಹೋಯಿತು. ನೀನು ಮಾಡಿದ ನಿಂದೆಯೇ ನನ್ನ ಪರಮಶ್ರೇಯಸ್ಸಿಗೆ ಕಾರಣವಾಗುತ್ತದೆಂದು ಭಾವಿಸುತ್ತೇನೆ. ನಿನಗೆ ಮಂಗಳವಾಗಲಿ. ನಾನಿನ್ನು ಹೋಗಿಬರುತ್ತೇನೆ. ನೀನು ಹೇಳಿದಂತೆ ನಾನು ಧರ್ಮವ್ಯಾಧನಲ್ಲಿಗೆ ಹೋಗಿ ಶಾಶ್ವತವಾದ ಧರ್ಮವು ಯಾವುದೆಂದು ತಿಳಿದುಬರುತ್ತೇನೆ."

ಧರ್ಮಜ! ಬ್ರಾಹ್ಮಣಿಯು ಭಿಕ್ಷೆನೀಡಿ ಕೌಶಿಕನನ್ನು ಕಳುಹಿಸಿ ಕೊಟ್ಟಳು. ಕೌಶಿಕನು ತಾನು ಮಾಡಿದ ಅಪಚಾರಕ್ಕಾಗಿ ತನ್ನನ್ನೇ ನಿಂದಿಸಿ ಕೊಳ್ಳುತ್ತಾ ತನ್ನ ಆಶ್ರಮದ ಹಾದಿಯನ್ನು ಹಿಡಿದನು."

೨೦೬ನೆಯ ಅಧ್ಯಾಯವು ಮುಗಿಯಿತು.

## ಕೌಶಿಕನು ಧರ್ಮವ್ಯಾಧನ ಬಳಿಗೆ ತೆರಳಿದುದು : ಧರ್ಮವ್ಯಾಧನು ಬ್ರಾಹ್ಮಣನನ್ನು ಕಾಣುತ್ತಲೇ ಪತಿವ್ರತೆಯು ಅವನನ್ನು ಕಳುಹಿಸಿರುವಳೆಂಬುದನ್ನು ಹೇಳಿದುದು : ಬ್ರಾಹ್ಮಣನ ಅಚ್ಚರಿ : ಧರ್ಮವ್ಯಾಧನಿಂದ ಧರ್ಮರಹಸ್ಯಗಳ ವಿವರಣೆ

"ಯುಧಿಷ್ಠಿರ! ಕೌಶಿಕನು ತನ್ನ ಆಶ್ರಮಕ್ಕೆ ಹೋದರೂ ಅವನ ಮನಸ್ಸಿನಲ್ಲಿ ಸಮಾಧಾನವಿರಲಿಲ್ಲ. ಬ್ರಾಹ್ಮಣಿಯು ಹೇಳಿದ ಮಾತುಗಳನ್ನೇ ಕೌಶಿಕನು ಯಾವಾಗಲೂ ಜ್ಞಾಪಿಸಿಕೊಂಡು ತಾನು ಬಹಳ ನಿಂದ್ಯನೆಂದು ಭಾವಿಸಿ ತನ್ನನ್ನು ತಾನೇ ಹಳಿದುಕೊಳ್ಳುತ್ತಿದ್ದನು. ಧರ್ಮದ ಸೂಕ್ಷ್ಮಗತಿ ಯೇನೆಂಬುದನ್ನು ತಿಳಿಯಬೇಕೆಂಬ ಆಶಯವುಂಟಾಗಿ ತನ್ನಲ್ಲಿ ತಾನೇ ಮಾತನಾಡಿಕೊಂಡನು :

"ಬ್ರಾಹ್ಮಣಿಯ ಮಾತಿನಲ್ಲಿ ಶ್ರದ್ಧೆಯನ್ನಿಡುವುದು ಯುಕ್ತವಾಗಿದೆ. ಆದುದರಿಂದ ನಾನೀಗಲೇ ಮಿಥಿಲಾಪಟ್ಟಣಕ್ಕೆ ಪ್ರಯಾಣಮಾಡುತ್ತೇನೆ. ಧರ್ಮದ ರಹಸ್ಯವನ್ನು ತಿಳಿಯಬೇಕಾದರೆ ಇದೊಂದೇ ಮಾರ್ಗ. ಆತ್ಮ ಜ್ಞಾನಿಯೂ, ಧರ್ಮವಿದನೂ ಆದ ವ್ಯಾಧನು ಮಿಥಿಲಾಪಟ್ಟಣದಲ್ಲಿ ಇರುವು ದರಲ್ಲಿ ಸಂದೇಹವೇ ಇಲ್ಲ. ಆ ತಪೋಧನನನ್ನು ಕಾಣಲು ಧರ್ಮಸೂಕ್ಷ್ಮವನ್ನು ಪ್ರಶ್ನಿಸುವ ಸಲುವಾಗಿ ಮಿಥಿಲಾಪುರಿಗೆ ನಾನೀಗಲೇ ಪ್ರಯಾಣಮಾಡು ತ್ತೇನೆ."

ಕೌಶಿಕನು ಹೀಗೆ ಚಿಂತಿಸಿ ಬ್ರಾಹ್ಮಣಿಯ ಮಾತಿನಲ್ಲಿ ಶ್ರದ್ಧೆಯನ್ನಿಟ್ಟು ಕುತೂಹಲಾನ್ವಿತನಾಗಿ ಮಿಥಿಲೆಗೆ ಪ್ರಯಾಣಮಾಡಿದನು. ಅನೇಕ ಅರಣ್ಯ ಗಳನ್ನೂ, ಗ್ರಾಮಗಳನ್ನೂ, ನಗರಗಳನ್ನೂ ದಾಟಿ ಜನಕನಿಂದ ರಕ್ಷಿಸಲ್ಪಡು ತ್ತಿದ್ದ ಮಿಥಿಲೆಯನ್ನು ಸೇರಿದನು.

ಧರ್ಮಶಾಲೆಗಳಿಂದ ನಿಬಿಡವಾಗಿದ್ದ, ಯಜ್ಞೋತ್ಸವಗಳಿಂದ ವಿಶಿಷ್ಟ ವಾಗಿದ್ದ, ಸುಂದರವಾದ ಮಹಾದ್ವಾರಗಳಿಂದ ಕೂಡಿದ್ದ, ದೊಡ್ಡ-ದೊಡ್ಡ ಸೌಧಗಳಿಂದನಿಬಿಡವಾಗಿದ್ದ ಮಿಥಿಲಾನಗರಿಯನ್ನು ಕೌಶಿಕನು ಪ್ರವೇಶಿಸಿದನು.

ಮಿಥಿಲಾಪಟ್ಟಣದಲ್ಲಿ ಏಳು ಉಪ್ಪರಿಗೆಯ ಅನೇಕ ಅರಮನೆಗಳಿದ್ದುವು. ಆ ಪಟ್ಟಣದ ಬೀದಿಗಳು ನೇರವಾಗಿದ್ದು ಎರಡು ಸಾಲುಗಳಲ್ಲಿಯೂ ನಾನಾವಿಧ ವಾದ ಅಂಗಡಿಗಳಿಂದ ಕೂಡಿ ಶೋಭಿಸುತ್ತಿದ್ದುವು. ಕುದುರೆಗಳಿಂದಲೂ, ರಥ ಗಳಿಂದಲೂ, ಆನೆಗಳಿಂದಲೂ ಮತ್ತು ಸೈನಿಕರಿಂದಲೂ ಆ ಪಟ್ಟಣವು ತುಂಬಿ ಹೋಗಿದ್ದಿತು. ಪಟ್ಟಣದಲ್ಲಿ ವಾಸಿಸುತ್ತಿದ್ದ ಪ್ರಜೆಗಳೆಲ್ಲರೂ ಹೃಷ್ಟರಾಗಿಯೂ, ಪುಷ್ಟರಾಗಿಯೂ, ಸದಾ ಉತ್ಸವಗಳಲ್ಲಿಯೇ ನಿರತರಾಗಿಯೂ ಇದ್ದರು. ಇನ್ನೂ ಅನೇಕವಾದ ನಯನಮನೋಹರವಾದ ಸುಂದರದೃಶ್ಯಗಳನ್ನು ವೀಕ್ಷಿ ಸುತ್ತಾ ಕೌಶಿಕನು ಮಿಥಿಲಾಪಟ್ಟಣದ ರಾಜಬೀದಿಯಲ್ಲಿ ನಡೆದುಹೋಗುತ್ತಿ ದ್ದನು. ತನ್ನೆದುರಾಗಿ ಸಿಕ್ಕಿದ ಬ್ರಾಹ್ಮಣರನ್ನು ಪ್ರಶ್ನಿಸಿ ಧರ್ಮವ್ಯಾಧನ ನಿವಾಸ ವಿರುವ ಮಾರ್ಗವನ್ನು ತಿಳಿದುಕೊಂಡು ಅದೇ ಮಾರ್ಗದಲ್ಲಿಯೇ ಸ್ವಲ್ಪದೂರ ನಡೆದು ಹೋದನಂತರ–ಕೌಶಿಕನು ಪ್ರಾಣಿಗಳನ್ನು ವಧೆಮಾಡುವ ಸ್ಥಳದಲ್ಲಿ ಉಪವಿಷ್ಟನಾಗಿದ್ದ ಧರ್ಮವ್ಯಾಧನನ್ನು ನೋಡಿದನು. ತಪಸ್ವಿಯಾದ ವ್ಯಾಧನು ಆ ಸಮಯದಲ್ಲಿ ಹಂದಿಯ ಮಾಂಸವನ್ನೂ ಎಮ್ಮೆಯ ಮಾಂಸವನ್ನೂ ಮಾರುತ್ತಿದ್ದನು. ಮಾಂಸವನ್ನು ಕೊಳ್ಳಲು ಜನರು ಆ ವ್ಯಾಧನ ಸುತ್ತಲೂ ಕಿಕ್ಕಿರಿದು ತುಂಬಿದ್ದುದರಿಂದ ಬ್ರಾಹ್ಮಣನು ವ್ಯಾಧನಿಗೆ ಸ್ವಲ್ಪದೂರದಲ್ಲಿ ಜನ ರಿಲ್ಲದ ಸ್ಥಳದಲ್ಲಿ ನಿಂತುಕೊಂಡನು. ಧರ್ಮವ್ಯಾಧನಿಗೆ ಒಡನೆಯೇ ಬ್ರಾಹ್ಮಣ ನೊಬ್ಬನು ತನ್ನ ದರ್ಶನಕ್ಕಾಗಿ ಬಂದಿರುವ ವಿಷಯವು ತಿಳಿದು ಸಂಭ್ರಮ ದಿಂದ ಮೇಲೆದ್ದು ನಿರ್ಜನಪ್ರದೇಶದಲ್ಲಿ ನಿಂತಿದ್ದ ಬ್ರಾಹ್ಮಣನನ್ನು ಸಮೀಪಿಸಿ ವಿನಯಪೂರ್ವಕವಾಗಿ ನಮಸ್ಕರಿಸುತ್ತಾ ಹೇಳಿದನು :

"ಪೂಜ್ಯನೇ! ಬ್ರಾಹ್ಮಣಶ್ರೇಷ್ಠನೇ! ನಿನಗೆ ವಿನಯಪೂರ್ವಕವಾಗಿ ನಮಸ್ಕರಿಸುತ್ತೇನೆ. ನಿನಗೆ ಸುಸ್ವಾಗತವು. ನಿನಗೆ ಮಂಗಳವಾಗಲಿ. ನಾನೊಬ್ಬ ವ್ಯಾಧನಾಗಿದ್ದೇನೆ. ನಾನು ನಿನಗೆ ಯಾವ ಕಾರ್ಯವನ್ನು ಮಾಡಿಕೊಡ ಬೇಕೆಂಬುದನ್ನು ಆಜ್ಞಾಪಿಸಲು ಅರ್ಹನಾಗಿರುವೆ. ಪತಿವ್ರತೆಯಾದ ಬ್ರಾಹ್ಮಣಿಯು ನಿನ್ನನ್ನು ಮಿಥಿಲಾಪಟ್ಟಣಕ್ಕೆ ಹೋಗುವಂತೆ ಹೇಳಿದ ವಿಷಯವು ನನಗೆ ತಿಳಿದಿದೆ. ನೀನು ಯಾವ ಕಾರಣದಿಂದ ಇಲ್ಲಿಗೆ ಬಂದಿರುವೆ ಯೆಂಬ ವಿಷಯವೂ ನನಗೆ ತಿಳಿದಿರುವುದು."

ಧರ್ಮವ್ಯಾಧನ ಮಾತುಗಳನ್ನು ಕೇಳಿದೊಡನೆಯೇ ಬ್ರಾಹ್ಮಣನಿ

ಗುಂಟಾದ ಅಚ್ಚರಿಯು ಅಷ್ಟಿಷ್ಟಲ್ಲ. ತನ್ನೊಳಗೇ ಅಂದುಕೊಂಡನು. ನಿಶ್ಚಯವಾಗಿಯೂ ಇದು ನನ್ನ ಜೀವನದಲ್ಲಿ ಕಂಡ ಎರಡನೆಯ ಅಚ್ಚರಿ.

ಬ್ರಾಹ್ಮಣನು ಹೀಗೆ ಆಲೋಚಿಸುತ್ತಿರುವಾಗಲೇ ಧರ್ಮವ್ಯಾಧನು ಬ್ರಾಹ್ಮಣನನ್ನು ಕುರಿತು ಪುನಃ ಹೇಳಿದನು: "ಬ್ರಾಹ್ಮಣೋತ್ತಮನೇ! ನೀನೀಗ ನಿಂತಿರುವ ಈ ಸ್ಥಳವು ನಿನ್ನಂತಹ ವೇದಾಧ್ಯಯನಸಂಪನ್ನನು ನಿಲ್ಲಲು ಯೋಗ್ಯವಾದ ಸ್ಥಳವಲ್ಲ. ಆದುದರಿಂದ ನಿನಗೆ ಒಪ್ಪಿಗೆಯಿದ್ದಲ್ಲಿ ನನ್ನ ಮನೆಗೆ ನನ್ನೊಡನೆ ದಯಮಾಡಿಸಬಹುದಾಗಿದೆ."

ಯುಧಿಷ್ಠಿರ! ಬ್ರಾಹ್ಮಣನು ಹೆಚ್ಚು ಯೋಚಿಸದೇ ಬಹುಸಂತುಷ್ಟನಾಗಿ ಹಾಗೆಯೇ ಆಗಲೆಂದು ವ್ಯಾಧನಿಗೆ ಉತ್ತರಿಸಿದನು. ಅನಂತರದಲ್ಲಿ ವ್ಯಾಧನು ಬ್ರಾಹ್ಮಣನನ್ನು ಮುಂದೆ ಮಾಡಿಕೊಂಡು ತನ್ನ ಮನೆಗೆ ಹೋದನು. ವ್ಯಾಧನು ಬಹುರಮ್ಯವಾಗಿದ್ದ ತನ್ನ ಮನೆಗೆ ಬ್ರಾಹ್ಮಣನನ್ನು ಕರೆದುಕೊಂಡು ಹೋಗಿ ಸುಖಾಸನವನ್ನಿತ್ತು ಕುಳ್ಳಿರಿಸಿ ಅರ್ಘ್ಯಾದಿಗಳಿಂದ ಯಥಾಯೋಗ್ಯವಾಗಿ ಸತ್ಕರಿಸಿದನು.

ಪ್ರಯಾಣದಿಂದಾದ ದಣಿವನ್ನು ಪರಿಹರಿಸಿಕೊಂಡು ಸುಖಾಸನದಲ್ಲಿ ಕುಳಿತಿದ್ದ ಕೌಶಿಕನು ವ್ಯಾಧನೊಡನೆ ಹೇಳಿದನು :

**ಕರ್ಮೈತದ್ವೈ ನ ಸದೃಶಂ ಭವತಃ ಪ್ರತಿಭಾತಿ ಮೇ ।**
**ಅನುತಪ್ಯೇ ಭೃಶಂ ತಾತ ತವ ಘೋರೇಣ ಕರ್ಮಣಾ ॥೧೯॥**

"ಮಹಾನುಭಾವನೇ! ಈ ಮಾಂಸವಿಕ್ರಯಕ್ರಮವು ನಿನ್ನಂತಹವರಿಗೆ ಯೋಗ್ಯವಲ್ಲವೆಂದು ನನಗನ್ನಿಸುತ್ತದೆ. ತಾತ! ನೀನು ಕ್ರೂರಿಗಳಿಗೆ ಯೋಗ್ಯವಾದ ಈ ಕಾರ್ಯವನ್ನು ಮಾಡುತ್ತಿರುವುದು ನನಗೆ ಉಚಿತವೆನಿಸುವುದಿಲ್ಲ. ನೀನು ಈ ಕಾರ್ಯವನ್ನು ಮಾಡುತ್ತಿರುವುದನ್ನು ನೋಡಿ ನಾನು ಬಹಳವಾಗಿ ಸಂತಾಪಪಡುತ್ತಿದ್ದೇನೆ."

ಬ್ರಾಹ್ಮಣನ ಆ ಮಾತಿಗೆ ಉತ್ತರವಾಗಿ ಧರ್ಮವ್ಯಾಧನು ಹೇಳಿದನು :

**ಕುಲೋಚಿತಮಿದಂ ಕರ್ಮ ಪಿತೃಪೈತಾಮಹಂ ಪರಮ್ ।**
**ವರ್ತಮಾನಸ್ಯ ಮೇ ಧರ್ಮೇ ಸ್ವೇ ಮನ್ಯುಂ ಮಾ ಕೃಥಾ ದ್ವಿಜ ॥೨೦॥**

"ಬ್ರಾಹ್ಮಣೋತ್ತಮನೇ! ಈ ಕರ್ಮವು ನನ್ನ ಕುಲೋಚಿತವಾದುದು ಮತ್ತು ತಾತ-ಮುತ್ತಾತಂದಿರ ಕಾಲದಿಂದಲೂ ನಡೆದುಬಂದಿರುವುದು. ಇದೇ ನನಗೆ ಶ್ರೇಷ್ಠವಾದ ಕರ್ಮವು. ನಾನು ನನ್ನ ಕುಲೋಚಿತವಾದ ವೃತ್ತಿಯಲ್ಲಿದ್ದೇನೆ. ಅದಕ್ಕಾಗಿ ನೀನು ಪರಿತಾಪಪಡಬೇಕಾಗಿಲ್ಲ.

**ವಿಧಾತ್ರಾ ವಿಹಿತಂ ಪೂರ್ವಂ ಕರ್ಮ ಸ್ವಮನುಪಾಲಯನ್ ।**
**ಪ್ರಯತ್ನಾಚ್ಚ ಗುರೂ ವೃದ್ಧೌ ಶುಶ್ರೂಷೇಽಹಂ ದ್ವಿಜೋತ್ತಮ ॥೨೧॥**

ಮೇಲಾಗಿ ಇದು ನಾನು ಮಾಡಿಕೊಂಡ ವೃತ್ತಿಯಲ್ಲ. ಇದು ಬ್ರಹ್ಮನಿಂದಲೇ ನನ್ನ ಕುಲಕ್ಕೆ ನಿರ್ದೇಶಿತವಾದ ವೃತ್ತಿಯಾಗಿರುವುದು. ನನ್ನ ಕುಲೋಚಿತವಾದ ವೃತ್ತಿಯನ್ನು ಪರಿಪಾಲಿಸುತ್ತಾ ವೃದ್ಧರಾದ ನನ್ನ ತಾಯಿ-ತಂದೆಗಳನ್ನು ಶ್ರದ್ಧೆಯಿಂದ ಶುಶ್ರೂಷೆಮಾಡುತ್ತಿದ್ದೇನೆ.

**ಸತ್ಯಂ ವದೇ ನಾಭ್ಯಸೂಯೇ ಯಥಾಶಕ್ತಿ ದದಾಮಿ ಚ ।**
**ದೇವತಾತಿಥಿಭೃತ್ಯಾನಾಮವಶಿಷ್ಟೇನ ವರ್ತಯೇ ॥೨೨॥**

ಸತ್ಯವನ್ನೇ ಹೇಳುತ್ತೇನೆ. ಪರಿಹಾಸಕ್ಕಾದರೂ ಸುಳ್ಳನ್ನು ಹೇಳುವುದಿಲ್ಲ. ಯಾರ ವಿಷಯದಲ್ಲಿಯೂ ಅಸೂಯೆಪಡುವುದಿಲ್ಲ. ಯಥಾಶಕ್ತಿ ದಾನ ಮಾಡುತ್ತೇನೆ. ದೇವತೆಗಳನ್ನು ಪೂಜಿಸಿ, ಅತಿಥಿಗಳನ್ನು ಆದರರಿಂದ ಸ್ವಾಗತಿಸಿ, ಸತ್ಕರಿಸಿ, ಭೃತ್ಯರಿಗೆ ಅನ್ನವಿಟ್ಟು ಅನಂತರದಲ್ಲಿ ಉಳಿದ ಅನ್ನವನ್ನು ನಾನು ಊಟಮಾಡುತ್ತೇನೆ.

**ನ ಕುತ್ಸಯಾಮ್ಯಹಂ ಕಿಂಚಿನ್ನ ಗರ್ಹೇ ಬಲವತ್ತರಮ್ ।**
**ಕೃತಮನ್ವೇತಿ ಕರ್ತಾರಂ ಪುರಾ ಕರ್ಮ ದ್ವಿಜೋತ್ತಮ ॥೨೩॥**

ಅಪರಾಧಿಯಾದವನ ಅಪರಾಧವನ್ನು ಎತ್ತಿ ಹೇಳಿ ಅವನನ್ನು ಕುಚೋದ್ಯಮಾಡಲು ಹೋಗುವುದಿಲ್ಲ. ಯಾರ ಮೇಲೆಯೂ ಯಾವ ಕಾಲದಲ್ಲಿಯೂ ದೋಷಾರೋಪಣೆಯನ್ನೂ ಮಾಡುವುದಿಲ್ಲ. ಹಿಂದೆ ಮಾಡಿದ ಕರ್ಮವು (ಪುಣ್ಯಕರ್ಮವಾಗಲೀ-ಪಾಪಕರ್ಮವಾಗಲೀ) ಮಾಡಿದವನನ್ನು ಅನುಸರಿಸಿ ಹೋಗುತ್ತಲೇ ಇರುತ್ತದೆ.

**ಕೃಷಿಗೋರಕ್ಷ್ಯವಾಣಿಜ್ಯಮಿಹ ಲೋಕಸ್ಯ ಜೀವನಮ್ ।**
**ದಣ್ಡನೀತಿಸ್ತ್ರಯೀ ವಿದ್ಯಾ ತೇನ ಲೋಕೋ ಭವತ್ಯುತ ॥೨೪॥**

ಕೃಷಿ, ಗೋರಕ್ಷಣೆ ಮತ್ತು ವ್ಯಾಪಾರ–ಈ ಮೂರೂ ಈ ಲೋಕದಲ್ಲಿ ಜೀವಿಸಲು ಸಾಧಕಗಳಾಗಿವೆ. ದಂಡನೀತಿ ಮತ್ತು ವೇದತ್ರಯಗಳು ಪರ ಲೋಕಪ್ರಾಪ್ತಿಗೆ ಸಾಧಕಗಳಾಗಿವೆ.

**ಕರ್ಮ ಶೂದ್ರೇ ಕೃಷಿರ್ವೈಶ್ಯೇ ಸಂಗ್ರಾಮಃ ಕ್ಷತ್ರಿಯೇ ಸ್ಮೃತಃ ।**
**ಬ್ರಹ್ಮಚರ್ಯಂ ತಪೋ ಮನ್ತ್ರಾಃ ಸತ್ಯಂ ಚ ಬ್ರಾಹ್ಮಣೇ ಸದಾ ॥೨೫॥**

ಮೂರು ವರ್ಣದವರ ಸೇವೆಯು ಶೂದ್ರನಿಗೂ, ಕೃಷಿ-ಗೋರಕ್ಷಣೆ ಮತ್ತು ವಾಣಿಜ್ಯಗಳು ವೈಶ್ಯನಿಗೂ, ಯುದ್ಧಮಾಡಿ ಶತ್ರುಗಳನ್ನು ವಿನಾಶ ಮಾಡಿ ಧರ್ಮದಿಂದ ರಾಜ್ಯಪರಿಪಾಲನೆಮಾಡುವುದು ಕ್ಷತ್ರಿಯನಿಗೂ, ಬ್ರಹ್ಮ ಚರ್ಯ-ತಪಶ್ಚರಣೆ-ಮಂತ್ರಪುನಶ್ಚರಣೆ-ಸತ್ಯನಿಷ್ಠೆಗಳು ಬ್ರಾಹ್ಮಣನಿಗೂ ಬ್ರಹ್ಮ ನಿಂದ ವಿಧಿಸಲ್ಪಟ್ಟ ಕರ್ಮಗಳಾಗಿವೆ.

**ರಾಜಾ ಪ್ರಶಾಸ್ತಿ ಧರ್ಮೇಣ ಸ್ವಕರ್ಮನಿರತಾಃ ಪ್ರಜಾಃ ।**
**ವಿಕರ್ಮಾಣಶ್ಚ ಯೇ ಕೇಚಿತ್ತಾನ್ಯುನಕ್ತಿ ಸ್ವಕರ್ಮಸು ॥೨೬॥**

ಸ್ವಕರ್ಮಗಳಲ್ಲಿ ನಿರತರಾದ ಪ್ರಜೆಗಳನ್ನು ರಾಜನಾದವನು ಧರ್ಮ ದಿಂದ ಪರಿಪಾಲನೆಮಾಡುತ್ತಾನೆ. ಕರ್ಮಭ್ರಷ್ಟರಾದವರನ್ನು ಯಥಾಯೋಗ್ಯ ವಾಗಿ ಶಿಕ್ಷಿಸಿ ಅವರವರ ಕರ್ಮಗಳಲ್ಲಿಯೇ ನಿರತರಾಗಿರುವಂತೆ ಮಾಡು ವುದೂ ರಾಜನ ಕರ್ತವ್ಯವಾಗಿದೆ.

**ಭೇತವ್ಯಂ ಹಿ ಸದಾ ರಾಜ್ಞಃ ಪ್ರಜಾನಾಮಧಿಪಾ ಹಿ ತೇ ।**
**ವಾರಯನ್ತಿ ವಿಕರ್ಮಸ್ಥಂ ನೃಪಾ ಮೃಗಮಿವೇಷುಭಿಃ ॥೨೭॥**

ಪ್ರಜೆಗಳಿಗೆ ಅಧಿಪತಿಗಳಾಗಿರುವ ರಾಜರ ವಿಷಯದಲ್ಲಿ ಭಯ-ಭಕ್ತಿ ಗಳಿಂದಿರಬೇಕು. ಏಕೆಂದರೆ : ವ್ಯಾಧರು ಬೇಟೆಯಾಡುವ ಕಾಲದಲ್ಲಿ ಬಾಣ ಗಳ ಪ್ರಯೋಗದಿಂದ ದಿಕ್ಕಾಪಾಲಾಗಿ ಓಡಿಹೋಗುವ ಜಿಂಕೆಗಳನ್ನು ಯಾವ ರೀತಿಯಲ್ಲಿ ನಿರೋಧಿಸುತ್ತಾರೆಯೋ–ಅದೇ ರೀತಿಯಲ್ಲಿ ರಾಜರು ವರ್ಣಾ ಶ್ರಮಧರ್ಮಗಳಿಂದ ಭ್ರಷ್ಟರಾದವರನ್ನು ಯಥಾಯೋಗ್ಯವಾಗಿ ಶಿಕ್ಷಿಸಿ

ಅವರವರ ವರ್ಣಾಶ್ರಮಧರ್ಮಾನುಸರಣೆಯಲ್ಲಿ ಅವರನ್ನು ಪುನಃ ನಿಯೋಜಿಸುತ್ತಾರೆ.

**ಜನಕಸ್ಯೇಹ ವಿಪ್ರರ್ಷೇ ವಿಕರ್ಮಸ್ಥೋ ನ ವಿದ್ಯತೇ ।**
**ಸ್ವಕರ್ಮನಿರಾತ ವರ್ಣಾಶ್ಚತ್ವಾರೋಽಪಿ ದ್ವಿಜೋತ್ತಮ ॥೨೮॥**

ಬ್ರಹ್ಮರ್ಷಿಯೇ! ಜನಕನಿಂದ ಆಳಲ್ಪಡುತ್ತಿರುವ ಈ ದೇಶದಲ್ಲಿ ಯಾವೊಬ್ಬ ಪ್ರಜೆಯೂ ತನ್ನ ವಂಶಾನುಗತವಾಗಿ ಬಂದಿರುವ ವರ್ಣಾಶ್ರಮ ಧರ್ಮಗಳಿಂದ ಭ್ರಷ್ಟನಾಗಿರುವುದಿಲ್ಲ. ಬ್ರಹ್ಮ-ಕ್ಷತ್ರಿಯ-ವೈಶ್ಯ-ಶೂದ್ರರೆಂಬ ನಾಲ್ಕುವರ್ಣದವರೂ ತಮ್ಮ ತಮ್ಮ ವರ್ಣಾಶ್ರಮಧರ್ಮಗಳನ್ನು ಬಹಳ ಕಟ್ಟುನಿಟ್ಟಾಗಿ ಪರಿಪಾಲಿಸುತ್ತಿದ್ದಾರೆ.

**ಸ ಏಷ ಜನಕೋ ರಾಜಾ ದುರ್ವೃತ್ತಮಪಿ ಚೇತ್ಸುತಮ್ ।**
**ದಣ್ಡ್ಯಂ ದಣ್ಡೇ ನಿಕ್ಷಿಪತಿ ತಥಾ ನ ಗ್ಲಾತಿ ಧಾರ್ಮಿಕಮ್ ॥೨೯॥**

ಈ ನಮ್ಮ ಜನಕರಾಜನು, ದುರ್ವೃತ್ತನಾದವನು ತನ್ನ ಮಗನೇ ಆಗಿದ್ದರೂ–ಅವನನ್ನು ಶಿಕ್ಷಾರ್ಹನೆಂದು ನಿಶ್ಚಯಿಸಿ ಅವನ ಅಪರಾಧಕ್ಕೆ ಅನುಗುಣವಾದ ಶಿಕ್ಷೆಯನ್ನೇ ವಿಧಿಸುತ್ತಾನೆ. ಧಾರ್ಮಿಕನಾದವನನ್ನು ಯಾವ ಕಾರಣದಿಂದಲೂ ಶಿಕ್ಷಿಸಹೋಗುವುದಿಲ್ಲ.

**ಸುಯುಕ್ತಚಾರೋ ನೃಪತಿಃ ಸರ್ವಂ ಧರ್ಮೇಣ ಪಶ್ಯತಿ ।**
**ಶ್ರೀಶ್ಚ ರಾಜ್ಯ ಚ ದಣ್ಡಶ್ಚ ಕ್ಷತ್ರಿಯಾಣಾಂ ದ್ವಿಜೋತ್ತಮ ॥೩೦॥**

ತನ್ನ ದೇಶದಲ್ಲಿ ನಡೆಯುವ ವಿಷಯಗಳನ್ನು ತಿಳಿದುಕೊಳ್ಳಲು ರಾಜನು ಸುಶಿಕ್ಷಿತರಾದ ಗೂಢಚಾರರನ್ನು ನಿಯಮಿಸಿಕೊಂಡಿರುತ್ತಾನೆ. ಎಲ್ಲ ಪ್ರಜೆಗಳನ್ನೂ ಸ್ವಲ್ಪವೂ ಪಕ್ಷಪಾತವಿಲ್ಲದೇ ಧರ್ಮೈಕದೃಷ್ಟಿಯಿಂದ ಪರಿಪಾಲಿಸುತ್ತಿದ್ದಾನೆ. ಸಂಪತ್ತು, ರಾಜ್ಯಭಾರ ಇವುಗಳು ರಾಜನಿಗೆ ಸೇರಿದುವುಗಳು. ದುಷ್ಟಶಿಕ್ಷಣ-ಶಿಷ್ಟಪರಿಪಾಲನೆಗಳೇ ಅವನ ಮುಖ್ಯಧರ್ಮ.

**ರಾಜಾನೋ ಹಿ ಸ್ವಧರ್ಮೇಣ ಶ್ರಿಯಮಿಚ್ಛನ್ತಿ ಭೂಯಸೀಮ್ ।**
**ಸರ್ವೇಷಾಮೇವ ವರ್ಣಾನಾಂ ತ್ರಾತಾ ರಾಜಾ ಭವತ್ಯುತ ॥೩೧॥**

ರಾಜರು ಯಾವಾಗಲೂ ಸ್ವಧರ್ಮದಲ್ಲಿಯೇ ನಿರತರಾಗಿದ್ದುಕೊಂಡು

ತನ್ಮೂಲಕವಾಗಿ ಅತುಲವಾದ ಐಶ್ವರ್ಯವನ್ನು ಪಡೆಯಲು ಇಚ್ಛಿಸುತ್ತಾರೆ. ರಾಜನು ಸಮಸ್ತವರ್ಣಗಳ ರಕ್ಷಕನಾಗಿರುತ್ತಾನೆ.

**ಪರೇಣ ಹಿ ಹತಾನ್ಬ್ರಹ್ಮನ್ವರಾಹಮಹಿಷಾನಹಮ್ ।**
**ನ ಸ್ವಯಂ ಹನ್ಮಿ ವಿಪ್ರರ್ಷೇ ವಿಕ್ರೀಣಾಮಿ ಸದಾ ತ್ವಹಮ್ ॥೩೨॥**

ಬ್ರಾಹ್ಮಣೋತ್ತಮನೇ! ನನ್ನ ವಿಷಯವಾಗಿ ಹೇಳಬೇಕಾದರೆ–ನಾನು ಜಾತಿಯಲ್ಲಿ ವ್ಯಾಧನು. ಹಂದಿಯ ಮತ್ತು ಎಮ್ಮೆಯ ಮಾಂಸವನ್ನು ಮಾರಿ ಅದರಿಂದ ಜೀವಿಸುತ್ತೇನೆ. ಆದರೆ ಆ ಪ್ರಾಣಿಗಳನ್ನು ನಾನು ಕೊಲ್ಲುವುದಿಲ್ಲ. ಬೇರೆಯವರು ಕೊಂದ ಪ್ರಾಣಿಗಳ ಮಾಂಸವನ್ನು ಮಾತ್ರವೇ ನಾನು ಮಾರುತ್ತೇನೆ.

**ನ ಭಕ್ಷಯಾಮಿ ಮಾಂಸಾನಿ ಋತುಗಾಮೀ ತಥಾ ಹ್ಯಹಮ್ ।**
**ಸದೋಪವಾಸೀ ಚ ತಥಾ ನಕ್ತಭೋಜೀ ಸದಾ ದ್ವಿಜ ॥೩೩॥**

ಆದರೆ ನಾನು ಮಾಂಸಭಕ್ಷಕನಲ್ಲ. ನಾನು ಇಂದಿನವರೆಗೂ ಮಾಂಸವನ್ನು ತಿಂದಿಲ್ಲ. ಋತುಕಾಲದಲ್ಲಿ ಮಾತ್ರವೇ ಪತ್ನಿಯ ಸಂಗವನ್ನು ಮಾಡುತ್ತೇನೆ. ಅನುದಿನವೂ ಹಗಲಿನಲ್ಲಿ ಉಪವಾಸವಿದ್ದು ರಾತ್ರಿಯಲ್ಲಿ ಮಾತ್ರ ಊಟಮಾಡುತ್ತೇನೆ.

ನನ್ನ ವರ್ಣಧರ್ಮಗಳು ಕ್ರೌರ್ಯವಾದ ವೃತ್ತಿಯುಳ್ಳದ್ದಾಗಿದ್ದರೂ ಆ ಕ್ರೌರ್ಯವೃತ್ತಿಗೆ ಅನುಸಾರವಾಗಿ ನಾನೂ ಕ್ರೌರ್ಯದಿಂದಲೇ ಇರಬೇಕೆಂಬ ನಿಯಮವಿಲ್ಲ.

**ಅಶೀಲಶ್ಚಾಪಿ ಪುರುಷೋ ಭೂತ್ವಾ ಭವತಿ ಶೀಲವಾನ್ ।**
**ಪ್ರಾಣಿಹಿಂಸಾರತಶ್ಚಾಪಿ ಭವತೇ ಧಾರ್ಮಿಕಃ ಪುನಃ ॥೩೪॥**

ಕ್ರೌರ್ಯವೃತ್ತಿಯಲ್ಲಿದ್ದೂ ಸಾಧುಜೀವನವನ್ನು ನಡೆಸಬಹುದಾಗಿದೆ. ಇದು ಸ್ವಾನುಭವದ ಮಾತು. ಮಾನವನೊಬ್ಬನು ದುಶ್ಶೀಲನಾಗಿದ್ದರೂ ಪರಮಪುರುಷನ ಸದೈಕಧ್ಯಾನದಿಂದ ಸುಶೀಲನಾಗುತ್ತಾನೆ. ಪ್ರಾಣಿಹಿಂಸಕನಾಗಿದ್ದರೂ ಧಾರ್ಮಿಕನಾಗುತ್ತಾನೆ.

ರಾಜರು ಧರ್ಮಕ್ಕೆ ಮೂಲಭಾತರಾಗಿರುತ್ತಾರೆ. ಅವರ ಧರ್ಮಮೂಲ

ವಾದ ರಾಜ್ಯಾಡಳಿತವನ್ನೇ ಅನುಸರಿಸಿ ದೇಶವೂ ಧರ್ಮಭೂಯಿಷ್ಠವಾಗಿರುತ್ತದೆ.

**ವ್ಯಭಿಚಾರಾನ್ನರೇನ್ದ್ರಾಣಾಂ ಧರ್ಮಃ ಸಂಕೀರ್ಯತೇ ಮಹಾನ್ ।**
**ಅಧರ್ಮೋ ವರ್ಧತೇ ಚಾಪಿ ಸಂಕೀರ್ಯನ್ತೇ ತತಃ ಪ್ರಜಾಃ ॥೩೫॥**

ಆದರೆ ರಾಜರೇ ಪಾಪಾತ್ಮರಾದರೆ, ಪಾಪಕರ್ಮಗಳನ್ನು ಮಾಡುತ್ತಿದ್ದರೆ, ಧರ್ಮವನ್ನು ಬದಿಗಿಟ್ಟು ಸ್ವೇಚ್ಛೆಯಿಂದ ರಾಜ್ಯಭಾರವನ್ನು ಮಾಡುತ್ತಿದ್ದರೆ–ದೇಶದಲ್ಲಿ ಧರ್ಮಸಂಕರವಾಗುತ್ತದೆ. ಅಧರ್ಮದ ಪ್ರಾದುರ್ಭಾವದಿಂದಾಗಿ ಪ್ರಜೆಗಳು ವರ್ಣಸಾಂಕರ್ಯವನ್ನು ಹೊಂದುತ್ತಾರೆ.

**ಭೇರುಣ್ಡಾ ವಾಮನಾಃ ಕುಬ್ಜಾಃ ಸ್ಥೂಲಶೀರ್ಷಾಸ್ತಥೈವ ಚ ।**
**ಕ್ಲೀಬಾಶ್ಚಾನ್ಧಾಶ್ಚ ಬಧಿರಾ ಜಾಯನ್ತೇಽತ್ಯುಚ್ಚಲೋಚನಾಃ ॥೩೬॥**

ಬ್ರಾಹ್ಮಣೋತ್ತಮನೇ! ನಿಶ್ಚಯವಾಗಿಯೂ ಲೋಕದಲ್ಲಿ ಅಧರ್ಮವು ಹೆಚ್ಚಿದಂತೆಲ್ಲಾ–ವಿಕಾರವಾದ ಆಕಾರವುಳ್ಳ ಮನುಷ್ಯರೂ, ಕುಳ್ಳರೂ, ಕುರೂಪಿಗಳೂ, ದಪ್ಪತಲೆಯವರೂ, ನಪುಂಸಕರೂ, ಕುರುಡರೂ, ಕಿವುಡರೂ, ಮೆಳ್ಳೆಗಣ್ಣುಳ್ಳವರೂ ಹುಟ್ಟುತ್ತಾರೆ.

**ಪಾರ್ಥಿವಾನಾಮಧರ್ಮತ್ವಾತ್ಪ್ರಜಾನಾಮಭವಃ ಸದಾ ।**
**ಸ ಏಷ ರಾಜಾ ಜನಕಃ ಪ್ರಜಾ ಧರ್ಮೇಣ ಪಶ್ಯತಿ ।**
**ಅನುಗೃಹ್ಣನ್ಪ್ರಜಾಃ ಸರ್ವಾ ಸ್ವಧರ್ಮನಿರತಾಃ ಸದಾ ॥೩೭॥**

ರಾಜನು ಮಾಡುವ ಪಾಪಕಾರ್ಯದಿಂದಾಗಿ, ಧರ್ಮದ ಅಲಕ್ಷ್ಯದಿಂದಾಗಿ, ದುರ್ನೀತಿಯಿಂದಾಗಿ–ಪ್ರಜೆಗಳು ತೊಂದರೆಗೀಡಾಗಿ ಅವನತಿಯನ್ನು ಹೊಂದುತ್ತಾರೆ. ಆದರೆ ನಮ್ಮ ರಾಜನಾದ ಜನಕನು ಎಲ್ಲ ಪ್ರಜೆ ಗಳನ್ನೂ ಧರ್ಮದಿಂದ ಪರಿಪಾಲನೆ ಮಾಡುತ್ತಿದ್ದಾನೆ. ಅವರ ವಿಷಯದಲ್ಲಿ ಯಾವಾಗಲೂ ಅನುಗ್ರಹಬುದ್ಧಿಯಿಂದಿರುತ್ತಾನೆ. ಪ್ರಜೆಗಳನ್ನು ತನ್ನ ಮಕ್ಕಳೆಂದೇ ತಿಳಿದು ಅವರ ವಿಷಯದಲ್ಲಿ ಯಾವಾಗಲೂ ದಯಾಪರನಾಗಿರುತ್ತಾನೆ. ಈ ಕಾರಣದಿಂದಲೇ ಪ್ರಜೆಗಳೂ ತಮ್ಮ ತಮ್ಮ ವರ್ಣಾಶ್ರಮಧರ್ಮಗಳಲ್ಲಿ ನಿರತರಾಗಿದ್ದು ಧಾರ್ಮಿಕರಾಗಿರುತ್ತಾರೆ.

**ಯೇ ಚೈವ ಮಾಂ ಪ್ರಶಂಸನ್ತಿ ಯೇ ಚ ನಿನ್ದನ್ತಿ ಮಾನವಾಃ ।**
**ಸರ್ವಾನ್ಸುಪರಿಣೀತೇನ ಕರ್ಮಣಾ ತೋಷಯಾಮ್ಯಹಮ್ ॥೩೮॥**

ನನ್ನ ವಿಷಯದಲ್ಲಿ ಹೇಳುವುದಾದರೆ–ನನ್ನನ್ನು ಶ್ಲಾಘಿಸುವವರನ್ನೂ ಮತ್ತು ನಿಂದಿಸುವವರನ್ನೂ ಸಮಾನತೆಯಿಂದ ಕಾಣುತ್ತಾ, ಸಾಧು-ಸತ್ಪುರುಷರಿಗೆ ಉಚಿತವಾದ ಮಾರ್ಗದಿಂದ ಅವರನ್ನು ಸತ್ಕರಿಸುತ್ತೇನೆ.

**ಯೇ ಜೀವನ್ತಿ ಸ್ವಧರ್ಮೇಣ ಸಂಯುಞ್ಜನ್ತಿ ಚ ಪಾರ್ಥಿವಾಃ ।**
**ನ ಕಿಂಚಿದುಪಜೀವನ್ತಿ ದಾನ್ತಾ ಉತ್ಥಾನಶೀಲಿನಃ ॥೩೯॥**

ಸ್ವಧರ್ಮನಿರತರಾಗಿ ಯಾರಿರುತ್ತಾರೆಯೋ, ಯಾರು ಸತ್ಯಸಂಧರಾಗಿರುತ್ತಾರೆಯೋ, ಯಾರು ತಮ್ಮ ಸೇನೆಯನ್ನು ವ್ಯವಸ್ಥೆಗೊಳಿಸಿರುತ್ತಾರೆಯೋ, ಯಾರು ಜಿತೇಂದ್ರಿಯರಾಗಿರುತ್ತಾರೆಯೋ, ಯಾರು ಚತುರರಾಗಿ ಕಾರ್ಯದಕ್ಷರಾಗಿರುತ್ತಾರೆಯೋ–ಅಂತಹ ರಾಜರು ಯಾರ ಅವಲಂಬನೆಯನ್ನೂ ಪಡೆಯಬೇಕಾಗಿಲ್ಲ. ಧರ್ಮವೇ ಅವರಿಗೆ ಅವಲಂಬನವಾಗಿರುತ್ತದೆ.

**ಶಕ್ತ್ಯಾನ್ನದಾನಂ ಸತತಂ ತಿತಿಕ್ಷಾ ಧರ್ಮನಿತ್ಯತಾ ।**
**ಯಥಾರ್ಹಂ ಪ್ರತಿ ಪೂಜಾ ಚ ಸರ್ವಭೂತೇಷು ವೈ ಸದಾ ॥೪೦॥**

**ತ್ಯಾಗಾನ್ನಾನ್ಯತ್ರ ಮರ್ತ್ಯಾನಾಂ ಗುಣಾಸ್ತಿಷ್ಠನ್ತಿ ಪೂರುಷೇ ॥೪೧॥**

ಬ್ರಾಹ್ಮಣೋತ್ತಮನೇ! ಯಥಾಶಕ್ತಿ ಅನ್ನದಾನಮಾಡುವುದು, ಸಹನೆಯಿಂದಿರುವುದು, ಧರ್ಮದಲ್ಲಿಯೇ ನಿಷ್ಠನಾಗಿರುವುದು, ಸರ್ವಪ್ರಾಣಿಗಳ ವಿಷಯದಲ್ಲಿಯೂ ದಯೆಯನ್ನು ತೋರುವುದು, ಸಕಲಪ್ರಾಣಿಗಳನ್ನೂ ಯಥಾಯೋಗ್ಯವಾಗಿ ಸತ್ಕರಿಸುವುದು–ಈ ಸದ್ಗುಣಗಳೆಲ್ಲವೂ ತ್ಯಾಗಶೀಲನಾದ ಪುರುಷನಲ್ಲಿ ಮಾತ್ರವೇ ಸುಸ್ಥಿರವಾಗಿರಬಲ್ಲವು. ತ್ಯಾಗಶೀಲನಲ್ಲದವನಲ್ಲಿ ಈ ಸದ್ಗುಣಗಳಿರುವ ಸಾಧ್ಯತೆಯಿಲ್ಲ.

**ಮೃಷಾ ವಾದಂ ಪರಿಹರೇತ್ಕುರ್ಯಾತ್ಪ್ರಿಯಮಯಾಚಿತಃ ।**
**ನ ಚ ಕಾಮಾನ್ನ ಸಂರಮ್ಭಾನ್ನ ದ್ವೇಷಾದ್ಧರ್ಮಮುತ್ಸೃಜೇತ್ ॥೪೨॥**

ಶ್ರೇಯಸ್ಸನ್ನು ಬಯಸುವವನು ಸುಳ್ಳು ಹೇಳುವುದನ್ನು ಖಂಡಿತವಾಗಿಯೂ ದೂರಮಾಡಬೇಕು. ಅಪ್ರಾರ್ಥಿತನಾಗಿ ಇತರರಿಗೆ ಪ್ರಿಯವ

ನ್ನುಂಟುಮಾಡಬೇಕು. ಉಪಕಾರಮಾಡಬೇಕೆಂಬ ಬುದ್ಧಿಯಿರುವುದು ಶ್ರೇಷ್ಠ ವಾದುದು. ಅದರಲ್ಲಿಯೂ ಪ್ರಾರ್ಥಿಸಿದರೆ ಮಾತ್ರ ಉಪಕಾರಮಾಡ ಬೇಕೆಂದಿರುವ ಬುದ್ಧಿಗಿಂತಲೂ–ಯಾರ ಕಷ್ಟವು ಹೇಗಿರುವುದೆಂಬುದನ್ನು ಸ್ವತಃ ಪರಿಶೀಲಿಸಿ ಕಷ್ಟದಲ್ಲಿರುವವರಿಗೆ ಅಯಾಚಿತವಾಗಿ ಉಪಕಾರ ಮಾಡುವುದು ಪರಮಶ್ರೇಷ್ಠವಾದುದು. ಕಾಮದ ಕಾರಣದಿಂದಾಗಲೀ ಭಯದ ಕಾರಣದಿಂದಾಗಲೀ, ದ್ವೇಷದ ಕಾರಣದಿಂದಾಗಲೀ ಧರ್ಮವನ್ನು ಬಿಡಬಾರದು.

**ಪ್ರಿಯೇ ನಾತಿಭೃಶಂ ಹೃಷ್ಯೇದಪ್ರಿಯೇ ನ ಚ ಸಂಜ್ವರೇತ್ ।**
**ನ ಮುಹ್ಯೇದರ್ಥಕೃಚ್ಛ್ರೇಷು ನ ಚ ಧರ್ಮಂ ಪರಿತ್ಯಜೇತ್ ॥೪೩॥**

ಮನಸ್ಸಿಗೆ ಪ್ರಿಯವಾದ ಕಾರ್ಯವು ನಡೆದಾಗ ಅಥವಾ ಪ್ರಿಯವಾದ ವಾರ್ತೆಯನ್ನು ಕೇಳಿದಾಗ ಹಿಗ್ಗಬಾರದು ; ಅಂತೆಯೇ ಕಷ್ಟವು ಬಂದಾಗ ಅಪ್ರಿಯವಾದ ಕಾರ್ಯವು ನಡೆದಾಗ ಕುಗ್ಗಲೂಬಾರದು. ಐಶ್ವರ್ಯವಂತ ನಾದವನಿಗೂ ಸಮಯಗಳಲ್ಲಿ ಹಣದ ಮುಗ್ಗಟ್ಟು ಬಂದೇ ಬರುತ್ತದೆ. ಬಡವ ರಿಗಂತೂ ಇದು ಸರ್ವಸಾಧಾರಣವಾಗಿಯೇ ಇರುತ್ತದೆ. ಆದರೆ ಆ ವಿಧವಾದ ಹಣದ ಮುಗ್ಗಟ್ಟು ಬಂದಾಗ ಮನುಷ್ಯನು ಭ್ರಾಂತನಾಗಬಾರದು ಮತ್ತು ಅದೇ ಕಾರಣದಿಂದಾಗಿ ಧರ್ಮಭ್ರಷ್ಟನೂ ಆಗಕೂಡದು.

**ಕರ್ಮ ಚೇತ್ಕಿಂಚಿದನ್ಯತ್ಸ್ಯಾದಿತರನ್ನ ತದಾಚರೇತ್ ।**
**ಯತ್ಕಲ್ಯಾಣಮಭಿಧ್ಯಾಯೇತ್ತತ್ರಾತ್ಮಾನಂ ನಿಯೋಜಯೇತ್ ॥೪೪॥**

ಮಾಡಿದ ಒಂದು ಕಾರ್ಯದಲ್ಲಿ ದೋಷವಿದೆಯೆಂದು ತಿಳಿದನಂತರ ಪುನಃ ಪುನಃ ಅದೇ ಕಾರ್ಯವನ್ನು ಮಾಡಲು ಯತ್ನಿಸಬಾರದು. ಯಾವ ಕಾರ್ಯವನ್ನು ಮಾಡಿದರೆ ಧರ್ಮಕ್ಕೆ ವಿರೋಧವಾಗುವುದಿಲ್ಲವೋ, ಧರ್ಮಾರ್ಥ-ಕಾಮಗಳೂ ಸಿದ್ಧಿಸುವುವೋ–ಅಂತಹ ಕಾರ್ಯಗಳಲ್ಲಿಯೇ ವಿವೇಚನಾಪೂರ್ವಕವಾಗಿ ಮನಸ್ಸನ್ನು ನಿಯೋಜಿಸಬೇಕು.

**ನ ಪಾಪೇ ಪ್ರತಿಪಾಪಃ ಸ್ಯಾತ್ಸಾಧುರೇವ ಸದಾ ಭವೇತ್ ।**
**ಆತ್ಮನೈವ ಹತಃ ಪಾಪೋ ಯಃ ಪಾಪಂ ಕರ್ತುಮಿಚ್ಛತಿ ॥೪೫॥**

ಒಬ್ಬನು ನಮ್ಮ ವಿಷಯದಲ್ಲಿ ದ್ರೋಹವನ್ನೆಣಿಸಿದರೆ ನಾವು ಪ್ರತಿಯಾಗಿ ಅವನಿಗೆ ದ್ರೋಹಮಾಡಬಾರದು. ಸತ್ಪುರುಷರ, ಸಾಧು-ಸಂತರ ಮಾರ್ಗಾನುಸಾರಿಗಳಾದ ನಾವು ಯಾವುದೇ ಸಮಯದಲ್ಲಿಯೂ ರಾಗ-ದ್ವೇಷಗಳಿಗೆ ಮನಸೋತು ಸನ್ಮಾರ್ಗವನ್ನು ತೊರೆಯಕೂಡದು. ಮತ್ತೊಬ್ಬರಿಗೆ ದ್ರೋಹ ಮಾಡುವ ಬುದ್ಧಿಯುಳ್ಳವನು ಕಾಲಕ್ರಮದಲ್ಲಿ ತಾನೇ ತನ್ನನ್ನು ಹಾಳುಮಾಡಿಕೊಳ್ಳುತ್ತಾನೆ.

**ಕರ್ಮ ಚೈತದಸಾಧೂನಾಂ ವೃಜಿನಾನಾಮಸಾಧುವತ್ ।**
**ನ ಧರ್ಮೋಽಸ್ತೀತಿ ಮನ್ವಾನಾಃ ಶುಚೀನವಹಸನ್ತಿ ಯೇ ॥೪೬॥**

**ಅಶ್ರದ್ದಧಾನಾ ಧರ್ಮಸ್ಯ ತೇ ನಶ್ಯನ್ತಿ ನ ಸಂಶಯಃ ।**
**ಮಹಾದೃತಿರಿವಾಧ್ಮಾತಃ ಪಾಪೋ ಭವತಿ ನಿತ್ಯದಾ ॥೪೭॥**

ದ್ರೋಹಮಾಡಿದವನಿಗೆ ಅಥವಾ ಮೋಸಮಾಡಿದವನಿಗೆ ದ್ರೋಹದಿಂದ ಅಥವಾ ಮೋಸದಿಂದ ಪ್ರತೀಕಾರಮಾಡುವುದು ಸಾಧು-ಸತ್ಪುರುಷರ ಮಾರ್ಗವಲ್ಲ. ಕಳ್ಳತನಕ್ಕೆ ಪ್ರತಿಯಾಗಿ ಕಳ್ಳತನಮಾಡುವುದನ್ನು ಯಾರೂ ಸರಿಯೆಂದು ಹೇಳಲಾರರು. ಅಂತೆಯೇ ದ್ರೋಹಮಾಡಿದವನಿಗೆ ಪ್ರತಿಯಾಗಿ ದ್ರೋಹವೆಸಗಲು ಹೋಗಬಾರದು. 'ಧರ್ಮವೆಂಬುದೆಲ್ಲಿದೆ? ಇದಕ್ಕೆ ಸಂಬಂಧಿಸಿದ ವಿಷಯಗಳೆಲ್ಲವೂ ಕಟ್ಟುಕಥೆಗಳು'–ಎಂದು ಭಾವಿಸಿರುವವರು ಈ ಕಾರಣದಿಂದಲೇ ಶ್ರೋತ್ರಿಯರನ್ನೂ ಸಾಧು-ಸಂತರನ್ನೂ ಅವಹೇಳನ ಮಾಡುವರು. ಧರ್ಮಮಾರ್ಗದಲ್ಲಿ ಮತ್ತು ಧರ್ಮದ ವಿಷಯದಲ್ಲಿ ಸ್ವಲ್ಪವಾದರೂ ಶ್ರದ್ಧೆಯಿಲ್ಲದವರು ಖಂಡಿತವಾಗಿಯೂ ವಿನಾಶಹೊಂದುತ್ತಾರೆ. ತಿದಿಯನ್ನು ಒತ್ತಿದಾಗ ಮೊದಲು ಗಾಳಿತುಂಬಿ ತಿದಿಯು ಉಬ್ಬುತ್ತದೆ. ಗಾಳಿಯು ಹೋದಮೇಲೆ ಮರುಕ್ಷಣದಲ್ಲಿಯೇ ಕುಗ್ಗುತ್ತದೆ. ಹಾಗೆಯೇ ಕೆಟ್ಟವರು ಮೊದಲು ಅನ್ಯಾಯೋಪಾರ್ಜಿತವಾದ ಐಶ್ವರ್ಯದಿಂದ ಉಬ್ಬಿಹೋಗಿದ್ದರೂ ಕೊನೆಗೆ ನಾಶಹೊಂದುತ್ತಾರೆ.

**ಮೂಢಾನಾಮವಲಿಪ್ತಾನಾಮಸಾರಂ ಭಾವಿತಂ ಭವೇತ್ ।**
**ದರ್ಶಯತ್ಯನ್ತರಾತ್ಮಾ ತಂ ದಿವಾ ರೂಪಮಿವಾಂಶುಮಾನ್ ॥೪೮॥**

ಗರ್ವಿಷ್ಠರಾದ ಅಂತಹ ಮೂಢರ ಜೀವನವು ಸಾರರಹಿತವಾಗಿರುತ್ತದೆ.

ಹಗಲಿನಲ್ಲಿ ಸೂರ್ಯನು ತನ್ನ ಕಿರಣಗಳಿಂದ ಪ್ರಪಂಚದ ವಿಶಿಷ್ಟವಸ್ತು ಗಳನ್ನೂ ದೃಗ್ಗೋಚರವನ್ನಾಗಿ ಮಾಡುವಂತೆ–ಆ ಮೂಢರ ಹೃದಯಕಮಲ ದಲ್ಲಿರುವ ಅಂತರಾತ್ಮನು ಅವರು ಮಾಡುವ ಪಾಪಕಾರ್ಯಗಳೆಲ್ಲವನ್ನೂ ಮನಸ್ಸೆಂಬ ತೆರೆಯ ಮೇಲೆ ಬಾರಿ-ಬಾರಿಗೂ ತೋರಿಸುತ್ತಲೇ ಇರುತ್ತಾನೆ. (ಆದರೆ ಕುತರ್ಕಗಳಿಂದ ತಾನು ಮಾಡಿದ್ದೇ ಸರಿ–ಎಂದು ಮೂಢನು ನಿರ್ಧರಿಸುತ್ತಿರುತ್ತಾನೆ.)

**ನ ಲೋಕೇ ರಾಜತೇ ಮೂರ್ಖಃ ಕೇವಲಾತ್ಮಪ್ರಶಂಸಯಾ ।**
**ಅಪಿ ಚೇಹ ಶ್ರಿಯಾ ಹೀನಃ ಕೃತವಿದ್ಯಃ ಪ್ರಕಾಶತೇ ॥೪೯॥**

ಬ್ರಾಹ್ಮಣೋತ್ತಮನೇ! ಆತ್ಮಪ್ರಶಂಸೆಯೆಂಬುದು ಬಹುನಿಂದ್ಯ ವಾದುದು. ಕೇವಲ ಆತ್ಮಪ್ರಶಂಸೆಯಿಂದಲೇ ಮೂರ್ಖನೆಂದಿಗೂ ಈ ಲೋಕ ದಲ್ಲಿ ಕೀರ್ತಿಮಂತನಾಗಿ ಬಾಳುವುದಿಲ್ಲ. ಒಬ್ಬ ಮನುಷ್ಯನು ಬಹಳ ಬಡ ವನೇ ಆಗಿದ್ದರೂ ಅವನು ವಿದ್ಯಾವಂತನಾಗಿದ್ದರೆ ಕೀರ್ತಿಯನ್ನು ಗಳಿಸುತ್ತಾನೆ.

**ಅಬ್ರುವನ್ಕಸ್ಯಚಿನ್ನಿಂದಾಮಾತ್ಮಪೂಜಾಮವರ್ಣಯನ್ ।**
**ನ ಕಶ್ಚಿದ್ಗುಣಸಮ್ಪನ್ನಃ ಪ್ರಕಾಶೋ ಭುವಿ ದೃಶ್ಯತೇ ॥೫೦॥**

ಗುಣಸಂಪನ್ನನಾದವನೊಬ್ಬನು ಯಾವಾಗಲೂ ಇತರರ ನಿಂದೆಯನ್ನು ಮಾಡುತ್ತಾ ಮತ್ತು ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುತ್ತಾ ಇರುವುದು ಪ್ರಪಂಚದಲ್ಲಿ ಕಂಡುಬರುವುದಿಲ್ಲ. (ಪರನಿಂದೆಯನ್ನು ಮಾಡುವವನನ್ನೂ ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುವವನನ್ನೂ ದಂಭಾಚಾರಿಯೆಂದು ಜನರು ಪರಿಗಣಿಸುತ್ತಾರೆ.)

**ವಿಕರ್ಮಣಾ ತಪ್ಯಮಾನಃ ಪಾಪಾದ್ವಿಪರಿಮುಚ್ಯತೇ ।**
**ನ ತತ್ಕುರ್ಯಾಂ ಪುನರಿತಿ ದ್ವಿತೀಯಾತ್ಪರಿಮುಚ್ಯತೇ ॥೫೧॥**

ಬ್ರಾಹ್ಮಣೋತ್ತಮನೇ! ಪಶ್ಚಾತ್ತಾಪದಿಂದ ಅನೇಕಪಾಪಗಳು ನಿವಾ ರಣೆಯಾಗುತ್ತವೆ. 'ಅಯ್ಯೋ! ನಾನು ಇಂತಹ ದುಷ್ಟಕಾರ್ಯವನ್ನು ಮಾಡಿ ಬಿಟ್ಟೆನಲ್ಲಾ!'–ಎಂದು ಮರುಗಿದರೇ ಸಾಕು. ಆ ದುಷ್ಟಕಾರ್ಯದಿಂದ ಪ್ರಾಪ್ತವಾದ ಪಾಪವು ವಿನಾಶವಾಗುತ್ತದೆ. 'ಇನ್ನು ಮುಂದೆ ಖಂಡಿತ

ವಾಗಿಯೂ ಇಂತಹ ಪಾಪಕಾರ್ಯವನ್ನು ಮಾಡುವುದಿಲ್ಲ'–ಎಂದು ಪ್ರತಿಜ್ಞೆ ಮಾಡುವುದರಿಂದ ಮುಂದೆ ಮಾಡಬಹುದಾದ ಪಾಪಕಾರ್ಯಕ್ಕೆ ತಡೆ ಯುಂಟಾಗುತ್ತದೆ.

**ಕರ್ಮಣಾ ಯೇನ ತೇನೇಹ ಪಾಪಾದ್ದ್ವಿಜವರೋತ್ತಮ ।**
**ಏವಂ ಶ್ರುತಿರಿಯಂ ಬ್ರಹ್ಮನ್ಧರ್ಮೇಷು ಪ್ರತಿದೃಶ್ಯತೇ ॥೫೨॥**

ದ್ವಿಜಶ್ರೇಷ್ಠನೇ! ಆದುದರಿಂದ ಮಾನವನು ಅಪ್ಪಿ-ತಪ್ಪಿ ತಪ್ಪುಮಾಡಿ ದರೂ ಪಶ್ಚಾತ್ತಾಪಪಡಬೇಕು ಮತ್ತು ಅಂತಹ ಪಾಪಕಾರ್ಯವನ್ನು ಪುನಃ ಮಾಡುವುದಿಲ್ಲವೆಂದು ನಿರ್ಧರಿಸಬೇಕು. ಜಪ, ತಪ, ತೀರ್ಥಸ್ನಾನ, ಪುಣ್ಯ ಕ್ಷೇತ್ರಯಾತ್ರೆಗಳಿಂದ ಪರಿಹಾರವಾಗದಿರುವ ಪಾಪಗಳೂ ಪಶ್ಚಾತ್ತಾಪದಿಂದ ಪರಿಹಾರವಾಗುತ್ತವೆ. ಈ ಮಾತು ಶ್ರುತಿಪ್ರತಿಪಾದ್ಯವಾದುದು. ಆದುದ ರಿಂದಲೇ ಧರ್ಮಸಮ್ಮತವಾಗಿದೆ.

**ಪಾಪಾನ್ಯಬುದ್ಧ್ವೇಹ ಪುರಾ ಕೃತಾನಿ**
**ಪ್ರಾಗ್ಧರ್ಮಶೀಲೋಽಪಿ ವಿಹನ್ತಿ ಪಶ್ಚಾತ್ ।**
**ಧರ್ಮೋ ರಾಜನ್ನುದತೇ ಪೂರುಷಾಣಾಂ**
**ಯತ್ಕುರ್ವತೇ ಪಾಪಮಿಹ ಪ್ರಮಾದಾತ್ ॥೫೩॥**

ಧರ್ಮಶೀಲನಾದವನೊಬ್ಬನು ತಿಳಿದೋ ತಿಳಿಯದೆಯೋ ಒಂದು ಪಾಪವನ್ನು ಮಾಡಿದರೂ–ನಿರಂತರವಾದ ಧರ್ಮಮಾರ್ಗಾನುಸರಣೆಯಿಂದ ಆ ಪಾಪವನ್ನು ಹೋಗಲಾಡಿಸಿಕೊಳ್ಳಲು ಸಮರ್ಥನಾಗುತ್ತಾನೆ. ಪ್ರಮಾದ ದಿಂದ ಮಾಡಿದ ಧಾರ್ಮಿಕರ ಪಾಪಗಳನ್ನು ಧರ್ಮವೇ ನಿರಸನಮಾಡುತ್ತದೆ.

**ಪಾಪಂ ಕೃತ್ವಾ ಹಿ ಮನ್ಯೇತ ನಾಹಮಸ್ಮೀತಿ ಪೂರುಷಃ ।**
**ತಂ ತು ದೇವಾಃ ಪ್ರಪಶ್ಯನ್ತಿ ಸ್ವಸ್ಯೈವಾನ್ತರಪೂರುಷಃ ॥೫೪॥**

ಮನುಷ್ಯನು ಪಾಪಕರ್ಮವನ್ನು ಮಾಡಿ–'ನಾನು ಪಾಪ ಮಾಡಲಿಲ್ಲ' ಎಂದು ಭಾವಿಸಿಕೊಂಡುಬಿಡಬಹುದು. ಆದರೆ ದೇವತೆಗಳು ಅವನ ಪಾಪ ಕರ್ಮವನ್ನು ನೋಡುತ್ತಿರುತ್ತಾರೆ ಮತ್ತು ಒಳಗೆ ಕುಳಿತಿರುವ ಅಂತರಾತ್ಮನೂ ನೋಡುತ್ತಿರುತ್ತಾನೆ.

**ಚಿಕೀರ್ಷೇದೇವ ಕಲ್ಯಾಣಂ ಶ್ರದ್ದಧಾನೋಽನಸೂಯಕಃ ।**
**ವಸನಸ್ಯೇವ ಛಿದ್ರಾಣಿ ಸಾಧೂನಾಂ ವಿವೃಣೋತಿ ಯಃ ॥೫೫॥**

ಯಾವಾಗಲೂ ಒಳ್ಳೆಯ ಕಾರ್ಯಗಳನ್ನೇ ಮಾಡುತ್ತಿರಬೇಕು. ಎಲ್ಲ ಕಾರ್ಯಗಳನ್ನೂ ಶ್ರದ್ಧೆಯಿಂದ ಮಾಡಬೇಕು. ಅಸೂಯಾರಹಿತನಾಗಿರ ಬೇಕು. ತೊಟ್ಟಿರುವ ಬಟ್ಟೆಯಲ್ಲಿರುವ ತೂತುಗಳನ್ನು ಮುಚ್ಚಿಕೊಳ್ಳುವಂತೆ ಸಾಧು-ಸತ್ಪುರುಷರಲ್ಲಿರಬಹುದಾದ ಒಂದೆರಡು ಲೋಪ-ದೋಷಗಳನ್ನೂ (ದಾರಿದ್ರ್ಯಾದಿಗಳನ್ನೂ) ಮುಚ್ಚಬೇಕು. (ನಿವಾರಿಸಲು ಯತ್ನಿಸಬೇಕು.) ಅಂತಹವನಿಗೆ ಪಾಪದ ಸೋಂಕು ಇರುವುದಿಲ್ಲ.

**ಪಾಪಂ ಚೇತ್ಪುರುಷಃ ಕೃತ್ವಾ ಕಲ್ಯಾಣಮಭಿಪದ್ಯತೇ ।**
**ಮುಚ್ಯತೇ ಸರ್ವಪಾಪೇಭ್ಯೋ ಮಹಾಭ್ರೇಣೇವ ಚನ್ದ್ರಮಾಃ ॥೫೬॥**

ಅಂತಹವನು ಆಕಸ್ಮಿಕವಾಗಿ ತಿಳಿದೋ ತಿಳಿಯದೆಯೇ ಒಂದು ಪಾಪ ವನ್ನು ಮಾಡಿದರೂ ಅವನ ಸದ್ಗುಣಗಳೂ ಸದ್ಧರ್ಮಗಳೂ ಆ ಪಾಪವನ್ನು ನಿವಾರಣೆಮಾಡುತ್ತವೆ ಮತ್ತು ಅವನು ಕಲ್ಯಾಣವನ್ನೇ ಹೊಂದುತ್ತಾನೆ. ಚಂದ್ರನು ಮಹಾಮೇಘಜಾಲದಿಂದ ವಿಮುಕ್ತನಾಗುವಂತೆ–ಅವನು ಸರ್ವ ಪಾಪಗಳಿಂದಲೂ ವಿಮುಕ್ತನಾಗುತ್ತಾನೆ.

**ಯಥಾದಿತ್ಯಃ ಸಮುದ್ಯನ್ವೈ ತಮಃ ಪೂರ್ವಂ ವ್ಯಪೋಹತಿ ।**
**ಏವಂ ಕಲ್ಯಾಣಮಾತಿಷ್ಠನ್ಸರ್ವಪಾಪೈಃ ಪ್ರಮುಚ್ಯತೇ ॥೫೭॥**

ಯಾವನು ಮೋಕ್ಷಾರ್ಥಿಯಾಗಿರುವನೋ, ಜೀವನ್ಮುಕ್ತಿಗಾಗಿ ಆತ ದರ್ಶನಕ್ಕಾಗಿ ಸಾಧನೆಯನ್ನು ಮಾಡುತ್ತಿರುವನೋ–ಅಂತಹವನ ಜನ್ಮ-ಜನ್ಮಾಂತರಗಳ ಪಾಪಗಳೆಲ್ಲವೂ–ಸೂರ್ಯನು ಉದಯಿಸಿದೊಡನೆಯೇ ಕತ್ತಲೆಯು ನಿರ್ಮೂಲವಾಗಿ ಹೋಗುವಂತೆ–ನಾಶಹೊಂದುತ್ತವೆ.

**ಪಾಪಾನಾಂ ವಿದ್ಧ್ಯಧಿಷ್ಠಾನಂ ಲೋಭಮೇವ ದ್ವಿಜೋತ್ತಮ ।**
**ಲುಬ್ಧಾಃ ಪಾಪಂ ವ್ಯವಸ್ಯನ್ತಿ ನರಾ ನಾತಿಬಹುಶ್ರುತಾಃ ॥೫೮॥**

ಅತ್ಯಾಶೆಯೇ ಪಾಪಗಳಿಗೆ ಆವಾಸಸ್ಥಾನವೆಂದು ತಿಳಿದುಕೊ. ಹೆಚ್ಚು ತಿಳಿವಳಿಕೆಯಿಲ್ಲದ, ಆಶೆಬಡುಕರಾದ, ಕೃಪಣರಾದ ಜನರು, ಪಾಪಕರ್ಮ ಗಳನ್ನು ಮಾಡುತ್ತಾ ಹೋಗುತ್ತಾರೆ.

**ಅಧರ್ಮಾ ಧರ್ಮರೂಪೇಣ ತೃಣೈಃ ಕೂಪಾ ಇವಾವೃತಾಃ ।**
**ತೇಷಾಂ ದಮಃ ಪವಿತ್ರಾಣಿ ಪ್ರಲಾಪಾ ಧರ್ಮಸಂಶ್ರಿತಾಃ ।**
**ಸರ್ವಂ ಹಿ ವಿದ್ಯತೇ ತೇಷು ಶಿಷ್ಟಾಚಾರಃ ಸುದುರ್ಲಭಃ ॥೫೯॥**

ಅಂತಹ ಲೋಭಿಗಳೂ ತೋರಿಕೆಗೆ ಮಾತ್ರ ಧಾರ್ಮಿಕರಾಗಿಯೇ ಕಾಣಿಸುತ್ತಾರೆ. ಹುಲ್ಲಿನಿಂದ ಮುಚ್ಚಿರುವ ಬಾವಿಯೋಪಾದಿಯಲ್ಲಿ ಅವರ ಆಚಾರ-ವ್ಯವಹಾರಗಳಿರುತ್ತವೆ. ಬಹಿರಂಗದಲ್ಲವರು ಜಿತೇಂದ್ರಿಯರಾಗಿಯೂ, ಪವಿತ್ರಾತ್ಮರಾಗಿಯೂ ಇರುವಂತೆ ತೋರ್ಪಡಿಸಿಕೊಳ್ಳುತ್ತಾರೆ. ಅವರಾಡುವ ಮಾತುಗಳೂ ಶ್ರುತಿ-ಸ್ಮೃತಿಗಳಿಗೆ ಸಮ್ಮತವಾಗಿಯೇ ಇರುತ್ತವೆ. ಆದರೆ ಅವರಲ್ಲಿ ಶಿಷ್ಟಾಚಾರವು ಮಾತ್ರ ಇರುವುದಿಲ್ಲ."

ಮಾರ್ಕಂಡೇಯರು ಯುಧಿಷ್ಠಿರನಿಗೆ ಹೇಳುತ್ತಾರೆ :

"ಯುಧಿಷ್ಠಿರ! ಧರ್ಮವ್ಯಾಧನ ಮಾತುಗಳನ್ನು ಕೇಳಿ ಮಹಾಪ್ರಾಜ್ಞನಾದ ಕೌಶಿಕ ಬ್ರಾಹ್ಮಣನು ವ್ಯಾಧನನ್ನು ಕೇಳಿದನು : "ಮಹಾನುಭಾವನೇ! ನಾನು ಯಾವುದು ಶಿಷ್ಟಾಚಾರ ; ಯಾವುದು ಶಿಷ್ಟಾಚಾರವಲ್ಲ–ಎಂಬುದನ್ನು ಹೇಗೆ ತಿಳಿದುಕೊಳ್ಳಲಿ? ಶಿಷ್ಟಾಚಾರದ ವಿಷಯಗಳನ್ನು ಸಮಗ್ರವಾಗಿ ನಿನ್ನಿಂದ ತಿಳಿಯಲಿಚ್ಛಿಸುತ್ತೇನೆ. ಧಾರ್ಮಿಕರಲ್ಲಿ ಶ್ರೇಷ್ಠನಾದ ನಿನಗೆ ಮಂಗಳವಾಗಲಿ. ಮಹಾಮತಿಯಾದ ವ್ಯಾಧನೇ! ನಿನ್ನಿಂದ ಈ ವಿಷಯ ವನ್ನು ಕೇಳಿ ತಿಳಿದುಕೊಳ್ಳಬೇಕೆನ್ನುವ ಆಶಯವು ನನಗೆ ಬಹಳವಾಗಿದೆ. ಯಥಾವತ್ತಾಗಿ ಹೇಳಿ ನನ್ನ ಅಪೇಕ್ಷೆಯನ್ನು ಪೂರ್ಣಗೊಳಿಸು."

ಧರ್ಮವ್ಯಾಧನು ಮಂದಸ್ಮಿತನಾಗಿ ಹೇಳುತ್ತಾನೆ :

**ಯಜ್ಞೋ ದಾನಂ ತಪೋ ವೇದಾಃ ಸತ್ಯಂ ಚ ದ್ವಿಜಸತ್ತಮ ।**
**ಪಞ್ಚೈತಾನಿ ಪವಿತ್ರಾಣಿ ಶಿಷ್ಟಾಚಾರೇಷು ಸರ್ವದಾ ॥೬೨॥**

"ದ್ವಿಜಸತ್ತಮನೇ! ಯಜ್ಞಮಾಡುವುದು, ದಾನಕೊಡುವುದು, ತಪಶ್ಚರಣೆ, ವೇದಗಳ ಅಧ್ಯಯನ ಮತ್ತು ಸತ್ಯನಿಷ್ಠೆ–ಈ ಐದು ಕ್ರಿಯೆಗಳು ಶಿಷ್ಟಾಚಾರಸಂಪನ್ನರಲ್ಲಿ ಸತತವಾಗಿರುತ್ತವೆ.

**ಕಾಮಕ್ರೋಧೌ ವಶೇ ಕೃತ್ವಾ ದಮ್ಭಂ ಲೋಭಮನಾರ್ಜವಮ್ ।**
**ಧರ್ಮಮಿತ್ಯೇವ ಸಂತುಷ್ಟಾಸ್ತೇ ಶಿಷ್ಟಾಃ ಶಿಷ್ಟಸಮ್ಮತಾಃ ॥೬೩॥**

ಕಾಮ-ಕ್ರೋಧಗಳನ್ನು ವಶಪಡಿಸಿಕೊಂಡು, ದಂಭ-ಲೋಭವಿಲ್ಲದವರಾಗಿ, ಕಾಪಟ್ಯರಹಿತರಾಗಿ, ಧರ್ಮವೇ ಮುಖ್ಯವೆಂದು ಭಾವಿಸಿ ಧರ್ಮವನ್ನೇ ಅವಲಂಬಿಸಿರುವವು ಶಿಷ್ಟರು. ಅಂತಹವರನ್ನೇ ಶಿಷ್ಟರೆಂದು ಶಿಷ್ಟರಾದವರೂ ಸಮ್ಮತಿಸುತ್ತಾರೆ.

**ನ ತೇಷಾಂ ವಿದ್ಯತೇಽವೃತ್ತಂ ಯಜ್ಞಸ್ವಾಧ್ಯಾಯಶೀಲಿನಾಮ್ ।**
**ಆಚಾರಪಾಲನಂ ಚೈವ ದ್ವಿತೀಯಂ ಶಿಷ್ಟಲಕ್ಷಣಮ್ ॥೬೪॥**

ಯಜ್ಞಗಳಲ್ಲಿ ಸರ್ವದಾ ನಿರತರಾಗಿರುವವರಿಗೂ ಮತ್ತು ವೇದಾಧ್ಯಯನದಲ್ಲಿ ನಿರತರಾಗಿರುವವರಿಗೂ ಸ್ವೇಚ್ಛಾಪ್ರವರ್ತನೆಯು ಇರುವುದಿಲ್ಲ. ಅವರು ಹೀಗೆಯೇ ಇರಬೇಕು ; ಇಂತಹುದೇ ಕಾರ್ಯಮಾಡಬೇಕು ಎಂಬುದೆಲ್ಲವನ್ನೂ ಧರ್ಮವೇ ನಿರ್ದೇಶಿಸುತ್ತದೆ. ಮನೆಯಲ್ಲಿ ಹಿರಿಯರಾದವರು ಹೇಳಿದ ಮತ್ತು ಹಾಕಿಕೊಟ್ಟ ಸಂಪ್ರದಾಯಾನುಸಾರವಾಗಿ ನಡೆಯುವುದು ಎರಡನೆಯ ಶಿಷ್ಟಲಕ್ಷಣವಾಗಿರುತ್ತದೆ.

**ಗುರುಶುಶ್ರೂಷಣಂ ಸತ್ಯಮಕ್ರೋಧೋ ದಾನಮೇವ ಚ ।**
**ಏತಚ್ಚತುಷ್ಟಯಂ ಬ್ರಹ್ಮನ್ ಶಿಷ್ಟಾಚಾರೇಷು ನಿತ್ಯದಾ ॥೬೫॥**

ಗುರುಶುಶ್ರೂಷೆ (ಮಾತಾ-ಪಿತೃಗಳ ಶುಶ್ರೂಷೆ), ಸತ್ಯನಿಷ್ಠೆ, ಕೋಪದ ತ್ಯಾಗ ಮತ್ತು ದಾನಶೀಲತೆ–ಈ ನಾಲ್ಕು ಶಿಷ್ಟಾಚಾರನಿರತರಲ್ಲಿ ಶಾಶ್ವತವಾಗಿರುತ್ತವೆ.

**ಶಿಷ್ಟಾಚಾರೇ ಮನಃ ಕೃತ್ವಾ ಪ್ರತಿಷ್ಠಾಪ್ಯ ಚ ಸರ್ವಶಃ ।**
**ಯಾಮಯಂ ಲಭತೇ ವೃತ್ತಿಂ ಸಾ ನ ಶಕ್ಯಾ ಹ್ಯತೋಽನ್ಯಥಾ ॥೬೬॥**

ಶಿಷ್ಟಾಚಾರದಲ್ಲಿಯೇ ಇರಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿ, ಸರ್ವತ್ರ ತಾನು ಶಿಷ್ಟಾಚಾರವನ್ನೇ ಅನುಸರಿಸಿ ಇರುವೆನೆಂದೂ ಘೋಷಿಸಿ, ಯಾವನು ಯಾವ ಸ್ವವೃತ್ತಿಯಲ್ಲಿ ಪ್ರವೃತ್ತನಾಗುವನೋ–ಅಂತಹವನು ಮೇಲೆ ಹೇಳಿದ ಗುರುಶುಶ್ರೂಷದಿ ನಾಲ್ಕು ನಿಯಮಗಳನ್ನು ಬಿಟ್ಟು ಏನನ್ನೂ ಸಾಧಿಸ ಲಾರನು. (ಮತ್ತಾವುದೇ ಸತ್ಕರ್ಮಗಳಲ್ಲಿ ನಿರತರಾಗಿದ್ದರೂ ಗುರುಶುಶ್ರೂಷೆ, ಸತ್ಯನಿಷ್ಠೆ, ಅಕ್ರೋಧ ಮತ್ತು ದಾನಶೀಲತೆಗಳಿಲ್ಲದಿದ್ದರೆ ಅಂತಹವರನ್ನು ಶಿಷ್ಟಾಚಾರಸಂಪನ್ನರೆಂದು ಶಿಷ್ಟರಾದವರು ಪರಿಗಣಿಸುವುದಿಲ್ಲ.)

**ವೇದಸ್ಯೋಪನಿಷತ್ಸತ್ಯಂ ಸತ್ಯಸ್ಯೋಪನಿಷದ್ದಮಃ।**
**ದಮಸ್ಯೋಪನಿಷತ್ತ್ಯಾಗಃ ಶಿಷ್ಟಾಚಾರೇಷು ನಿತ್ಯದಾ ॥೬೭॥**

ಬ್ರಾಹ್ಮಣೋತ್ತಮನೇ! ವೇದಗಳ ಸಾರವೇ 'ಸತ್ಯ'. (ಪರಬ್ರಹ್ಮವಸ್ತುವಿನ ತಿಳಿವಳಿಕೆಯೇ ವೇದಾಧ್ಯಯನಕ್ಕೆ ಮುಖ್ಯಪ್ರಯೋಜನ. ಸತ್ಯನಿಷ್ಠನಾಗಿರದಿದ್ದರೆ ಅಥವಾ ಪರಬ್ರಹ್ಮವಸ್ತುವನ್ನು ತಿಳಿಯದಿದ್ದರೆ ವೇದಾಧ್ಯಯನ ಮಾಡಿಯೂ ಪ್ರಯೋಜನವಿಲ್ಲ.) ಸತ್ಯದ ಸಾರವು ದಮದಲ್ಲಡಗಿದೆ. ಸತ್ಯನಿಷ್ಠನಾಗಿರುವುದರ ಪ್ರಯೋಜನವೆಂದರೆ ಅವನು ಜಿತೇಂದ್ರಿಯನಾಗಬೇಕು. ("ಸತ್ಯಂ" ಎಂಬುದನ್ನು ಪರಬ್ರಹ್ಮಪರ್ಯಾಯದಲ್ಲಿ ತೆಗೆದುಕೊಂಡರೆ ಪರಬ್ರಹ್ಮವಸ್ತುವನ್ನು ತಿಳಿದಿರುವವನು ಜಿತೇಂದ್ರಿಯನಾಗಿರಬೇಕು. ಜಿತೇಂದ್ರಿಯತ್ವವಿಲ್ಲದಿದ್ದರೆ ಅವನಿಗೆ ಪರಬ್ರಹ್ಮವಸ್ತುವಿನ ತಿಳಿವಳಿಕೆಯುಂಟಾಗಿಲ್ಲ ವೆಂದು ನಿರ್ಧರಿಸಬಹುದು.) ಜಿತೇಂದ್ರಿಯತೆಯ ಸಾರವು ತ್ಯಾಗದಲ್ಲಡಗಿದೆ. ಜಿತೇಂದ್ರಿಯನಾದವನು ತ್ಯಾಗಶೀಲನಾಗಿಯೂ ಇರುತ್ತಾನೆ. ತ್ಯಾಗಶೀಲನಲ್ಲದಿದ್ದರೆ ಅವನನ್ನು ಜಿತೇಂದ್ರಿಯನೆಂದು ಹೇಳಲು ಸಾಧ್ಯವಾಗುವುದಿಲ್ಲ. ಒಂದು ಗುಣಕ್ಕೆ ಮತ್ತೊಂದು ಗುಣವು ಪೂರಕವಾಗಿರುತ್ತದೆ. ಆದುದರಿಂದ ಶಿಷ್ಟರಾದವರಲ್ಲಿ ವೇದಾಧ್ಯಯನ-ಸತ್ಯ-ದಮ-ತ್ಯಾಗ–ಈ ನಾಲ್ಕು ಗುಣ ಗಳೂ ಎಡೆಬಿಡದೇ ಇರುತ್ತವೆ.

**ಯೇ ತು ಧರ್ಮಾನಸೂಯನ್ತೇ ಬುದ್ಧಿಮೋಹಾನ್ವಿತಾ ನರಾಃ ।**
**ಅಪಥಾ ಗಚ್ಛತಾಂ ತೇಷಾಮನುಯಾತಾ ಚ ಪೀಡ್ಯತೇ ॥೬೮॥**

ಮೋಹಪರವಶರಾದ ಯಾರು ಧಾರ್ಮಿಕರಾದವರನ್ನು ಅಸೂಯಾದೃಷ್ಟಿಯಿಂದ ಕಾಣುವರೋ, ಧರ್ಮದ ವಿಷಯದಲ್ಲಿ ಮಾತ್ಸರ್ಯವುಳ್ಳವರಾಗಿರುವರೋ ಮತ್ತು ಶಿಷ್ಟರಾದವರ ಮಾರ್ಗವನ್ನು ಬಿಟ್ಟು ಅಪಮಾರ್ಗ ದಲ್ಲಿ ಪ್ರವೃತ್ತಿಯುಳ್ಳವರಾಗಿರುವರೋ–ಅವರು ಖಂಡಿತವಾಗಿಯೂ ನಾಶ ಹೊಂದುತ್ತಾರೆ. ದುರ್ಮಾರ್ಗಪ್ರವರ್ತಕರಾದ ಅವರನ್ನೇ ಅನುಸರಿಸುವ ಅವರ ಅನುಯಾಯಿಗಳೂ ವಿನಾಶಹೊಂದುತ್ತಾರೆ.

**ಯೇ ತು ಶಿಷ್ಟಾಃ ಸುನಿಯತಾಃ ಶ್ರುತಿತ್ಯಾಗಪರಾಯಣಾಃ ।**
**ಧರ್ಮಪನ್ಥಾನಮಾರೂಢಾಃಸತ್ಯಧರ್ಮಪರಾಯಣಾಃ ॥೬೯॥**

**ನಿಯಚ್ಛನ್ತಿ ಪರಾಂ ಬುದ್ಧಿಂ ಶಿಷ್ಟಾಚಾರಾನ್ವಿತಾ ಜನಾಃ ।**
**ಉಪಾಧ್ಯಾಯಮತೇ ಯುಕ್ತಾಃ ಸ್ಥಿತ್ಯಾ ಧರ್ಮಾರ್ಥದರ್ಶಿನಃ ॥೭೦॥**

ಯಾರು ವ್ರತಾನುಷ್ಠಾನಪರರಾಗಿ, ವೇದಮಾರ್ಗಾನುಸಾರಿಗಳಾಗಿ, ತ್ಯಾಗಶೀಲರಾಗಿ, ಸತ್ಯಧರ್ಮಪರಾಯಣರಾಗಿ, ಧರ್ಮದ ಮಾರ್ಗದಲ್ಲೇ ಮುನ್ನಡೆಯುವವರಾಗಿ, ತಮ್ಮ ಶ್ರೇಷ್ಠವಾದ ಬುದ್ಧಿಯನ್ನು ಯಾವಾಗಲೂ ಪರತತ್ತ್ವದಲ್ಲಿಯೇ ನಿಯೋಜಿಸಿ, ಆಚಾರ್ಯರ ಉಪದೇಶಾನುಸಾರವಾಗಿ ನಡೆಯುತ್ತಾ, ಧರ್ಮಾರ್ಥಗಳ ನಿಜಸ್ವರೂಪವನ್ನು ತಿಳಿದವರಾಗಿರುವರೋ– ಅವರೇ ಶಿಷ್ಟಾಚಾರಸಂಪನ್ನರು.

**ನಾಸ್ತಿಕಾನ್ಭಿನ್ನಮರ್ಯಾದಾನ್ ರಾನ್ಪಾಪಮತೌ ಸ್ಥಿತಾನ್ ।**
**ತ್ಯಜ ತಾನ್ ಜ್ಞಾನಮಾಶ್ರಿತ್ಯ ಧಾರ್ಮಿಕಾನುಪಸೇವ್ಯ ಚ ॥೭೧॥**

**ಕಾಮಲೋಭಗ್ರಹಾಕೀರ್ಣಾಂ ಪಞ್ಚೇನ್ದ್ರಿಯಜಲಾಂ ನದೀಮ್ ।**
**ನಾವಂ ಧೃತಿಮಯೀಂ ಕೃತ್ವಾ ಜನ್ಮದುರ್ಗಾಣಿ ಸಂತರ ॥೭೨॥**

ನಾಸ್ತಿಕರನ್ನೂ, ಲೋಕಮರ್ಯಾದೆಯನ್ನು ಮೀರಿದವರನ್ನೂ, ಧರ್ಮ ಭ್ರಷ್ಟರನ್ನೂ, ಕ್ರೂರಿಗಳನ್ನೂ, ಯಾವಾಗಲೂ ಪಾಪಕರ್ಮಗಳಲ್ಲಿಯೇ ಬುದ್ಧಿಯುಳ್ಳವರನ್ನೂ ತ್ಯಜಿಸಿ, ವಿವೇಕಿಯಾಗಿ, ಧಾರ್ಮಿಕರಾದವರ ಸೇವೆ ಮಾಡುತ್ತಾ, ಕಾಮ-ಲೋಭಗಳೆಂಬ ಮೊಸಳೆಗಳಿಂದಲೂ ಪಂಚೇಂದ್ರಿಯ ಗಳೆಂಬ ನೀರಿನ ಪ್ರವಾಹದಿಂದಲೂ ಕೂಡಿರುವ, ಜನ್ಮ-ಮೃತ್ಯುಗಳೆಂಬ ದುರ್ಗಮಪ್ರದೇಶದಲ್ಲಿ ಪ್ರವಹಿಸುವ ನದಿಯನ್ನು, ದೃಢವಾದ ಬುದ್ಧಿಯೆಂಬ ನಾವೆಯ ಮೂಲಕವಾಗಿ ದಾಟುವವನಾಗು. (ಜನ್ಮ-ಮೃತ್ಯು-ಜರಾ-ವ್ಯಾಧಿಗಳೆಂಬ ದುರ್ಗಗಳನ್ನು ದಾಟುವವನಾಗು.)

**ಕ್ರಮೇಣ ಸಂಚಿತೋ ಧರ್ಮೋ ಬುದ್ಧಿಯೋಗಮಯೋ ಮಹಾನ್ ।**
**ಶಿಷ್ಟಾಚಾರೇ ಭವೇತ್ಸಾಧೂ ರಾಗಃ ಶುಕ್ಲೇವ ವಾಸಸಿ ॥೭೩॥**

ಶಿಷ್ಟಾಚಾರಸಂಪನ್ನನಾದವನು ತಾನು ಅನುದಿನವೂ ಮಾಡುವ ಸತ್ಕರ್ಮಗಳಿಂದ ಧರ್ಮಸಂಚಯಮಾಡುತ್ತಾ ತನ್ನ ಮನಸ್ಸನ್ನು ಕ್ರಮೇಣ ಬುದ್ಧಿಯೋಗದಲ್ಲಿ ನಿಯೋಜಿಸಲು ಸಮರ್ಥನಾಗುತ್ತಾನೆ. ಬಿಳಿಯದಾದ ಬಟ್ಟೆಗೆ ಕೆಂಪುಬಣ್ಣವನ್ನು ಹಾಕಿದಾಗ ಶೋಭಾಯಮಾನವಾಗಿ (ಢಾಳಾಗಿ)

ಕಾಣುವಂತೆ–ಶಿಷ್ಟಾಚಾರಸಂಪನ್ನನು ತಾನು ಆಚರಿಸುವ ಶಿಷ್ಟಾಚಾರದ ಮೂಲಕವಾಗಿಯೇ ಶೋಭಿಸುತ್ತಾನೆ.

**ಅಹಿಂಸಾ ಸತ್ಯವಚನಂ ಸರ್ವಭೂತಹಿತಂ ಪರಮ್ ।**
**ಅಹಿಂಸಾ ಪರಮೋ ಧರ್ಮಃ ಸ ಚ ಸತ್ಯೇ ಪ್ರತಿಷ್ಠಿತಃ ।**
**ಸತ್ಯೇ ಕೃತ್ವಾ ಪ್ರತಿಷ್ಠಾಂ ತು ಪ್ರವರ್ತನ್ತೇ ಪ್ರವೃತ್ತಯಃ ॥೭೪॥**

ಯಾರೊಬ್ಬರಿಗೂ ವಾಕ್-ಶರೀರ-ಮನಸ್ಸು ಇವುಗಳಿಂದ ತೊಂದರೆಯನ್ನುಂಟುಮಾಡದಿರುವುದು ಮತ್ತು ಸತ್ಯನಿಷ್ಠೆ–ಈ ಎರಡೂ ಎಲ್ಲ ಪ್ರಾಣಿಗಳಿಗೂ ಹಿತವಾದ ಧರ್ಮವಾಗಿರುತ್ತವೆ. ಅಹಿಂಸೆಯು ಪರಮೋತ್ಕೃಷ್ಟವಾದ ಧರ್ಮ. ಅಹಿಂಸೆಯೆಂಬುದು ಸತ್ಯದಲ್ಲಿಯೇ ಅಧಿಷ್ಠಾನವನ್ನು ಹೊಂದಿರುವುದು. ಮನೋಬುದ್ಧಿಗಳು ಸತ್ಯದಲ್ಲಿ ಪ್ರತಿಷ್ಠಿತವಾದಾಗಲೇ ಧಾರ್ಮಿಕರ ಪ್ರವೃತ್ತಿಗಳು ಕಾರ್ಯರೂಪದಿಂದ ಹೊರಬರುತ್ತವೆ.

**ಸತ್ಯಮೇವ ಗರೀಯಸ್ತು ಶಿಷ್ಟಾಚಾರನಿಷೇವಿತಮ್ ।**
**ಆಚಾರಶ್ಚ ಸತಾಂ ಧರ್ಮಃ ಸನ್ತಶ್ಚಾಚಾರಲಕ್ಷಣಾಃ ॥೭೫॥**

ಶಿಷ್ಟಾಚಾರಸಂಪನ್ನರಿಂದ ನಿಷೇವಿತವಾದ ಸತ್ಯವೇ ಪರಮಶ್ರೇಷ್ಠವಾದುದು. ಸದಾಚಾರಸಂಪನ್ನತೆಯೂ ಸತ್ಪುರುಷರ ಮುಖ್ಯಧರ್ಮವಾಗಿರುತ್ತದೆ. ಸದಾಚಾರ ಅಥವಾ ಶಿಷ್ಟಾಚಾರವುಳ್ಳವರೇ ಸಂತರೆಂದೂ-ಸತ್ಪುರುಷರೆಂದೂ ಹೇಳಬಹುದಾಗಿದೆ. ಸದಾಚಾರ-ಶಿಷ್ಟಾಚಾರಗಳೇ ಸಂತರ ಲಕ್ಷಣಗಳಾಗಿರುತ್ತವೆ.

**ಯೋ ಯಥಾಪ್ರಕೃತಿರ್ಜನ್ತುಃ ಸ ಸ್ವಾಂ ಪ್ರಕೃತಿಮಶ್ನುತೇ ।**
**ಪಾಪಾತ್ಮಾ ಕ್ರೋಧಕಾಮಾದೀನ್ದೋಷಾನಾಪ್ನೋತ್ಯನಾತ್ಮವಾನ್ ॥೭೬॥**

ಯಾವ ಪ್ರಾಣಿಗೆ ಅಥವಾ ಯಾವ ಮನುಷ್ಯನಿಗೆ ಯಾವ ಸ್ವಭಾವವಿರುವುದೋ–ಆಯಾ ಸ್ವಭಾವಕ್ಕೆ ಅನುಸಾರವಾಗಿ ಅವನ ಗುಣ-ಕರ್ಮಗಳಿರುತ್ತವೆ. ಜಿತೇಂದ್ರಿಯನಲ್ಲದವನು, ಜಿತಮನಸ್ಕನಲ್ಲದವನು ಕಾಮ-ಕ್ರೋಧಾದಿಗಳಿಂದ ವಿಶಿಷ್ಟನಾಗಿ ಪಾಪಾತ್ಮನಾಗುತ್ತಾನೆ.

**ಆರಮ್ಭೋ ನ್ಯಾಯಯುಕ್ತೋ ಯಃ ಸ ಹಿ ಧರ್ಮ ಇತಿ ಸ್ಮೃತಃ ।**
**ಅನಾಚಾರಸ್ತ್ವಧರ್ಮೇತಿ ಏತಚ್ಛಿಷ್ಟಾನುಶಾಸನಮ್ ॥೭೭॥**

ನ್ಯಾಯಯುಕ್ತವಾದ, ನ್ಯಾಯಸಮ್ಮತವಾದ ಕಾರ್ಯಾರಂಭವು ಯಾವುದೋ–ಅದೇ ಧರ್ಮವೆಂದು ಹೇಳಲ್ಪಡುತ್ತದೆ. ಆಚಾರವಿರುದ್ಧವಾದ ನ್ಯಾಯಸಮ್ಮತವಲ್ಲದ ಕಾರ್ಯವನ್ನು ಅಧರ್ಮಕಾರ್ಯವೆಂದು ಶಿಷ್ಟರಾದ ವರು ವಿಧಿಸಿದ್ದಾರೆ.

**ಅಕ್ರುಧ್ಯನ್ತೋಽನಸೂಯನ್ತೋ ನಿರಹಂಕಾರಮತ್ಸರಾಃ ।**
**ಋಜವಃ ಶಮಸಮ್ಪನ್ನಾಃ ಶಿಷ್ಟಾಚಾರಾ ಭವನ್ತಿ ತೇ ॥೭೮॥**

ಎಂತಹ ಉದ್ವೇಗಕರವಾದ ಸಂದರ್ಭದಲ್ಲಿಯೂ ಕೋಪಗೊಳ್ಳದಿರು ವವರೂ, ಇತರರ ಪ್ರಾದುರ್ಭಾವವನ್ನ ನೋಡಿದ ಹೊಟ್ಟೆಕಿಚ್ಚುಪಡ ದವರೂ, ಎಂತಹ ಉಚ್ಛ್ರಾಯಸ್ಥಿತಿಯಲ್ಲಿದ್ದರೂ ಅಹಂಕಾರಪಡದವರೂ, ಅಪಕಾರ ಮಾಡಿದವನ ಮೇಲೆ ಛಲವಿಡದವರೂ, ನಿಷ್ಕಾಪಟ್ಯವುಳ್ಳವರೂ, ಶಾಂತಸ್ವಭಾವವುಳ್ಳವರೂ–ಶಿಷ್ಟಾಚಾರಸಂಪನ್ನರೆನಿಸಿಕೊಳ್ಳುತ್ತಾರೆ.

**ತ್ರೈವಿದ್ಯವೃದ್ಧಾಃ ಶುಚಯೋ ವೃತ್ತವನ್ತೋ ಮನಸ್ವಿನಃ ।**
**ಗುರುಶುಶ್ರೂಷವೋ ದಾನ್ತಾಃ ಶಿಷ್ಟಾಚಾರಾ ಭವನ್ತ್ಯುತ ॥೭೯॥**

ವೇದ-ಶಾಸ್ತ್ರಾಧ್ಯಯನಾದಿಗಳಲ್ಲಿ ನಿಷ್ಣಾತರೂ, ಬಹಿರನ್ತಃಶುದ್ಧರೂ, ಶೀಲವಂತರೂ, ಜಿತಮನಸ್ಕರೂ, ಗುರುಶುಶ್ರೂಷಾನಿರತರೂ, ಜಿತೇಂದ್ರಿ ಯರೂ ಶಿಷ್ಟಾಚಾರಸಂಪನ್ನರೆನಿಸಿಕೊಳ್ಳುತ್ತಾರೆ.

**ತೇಷಾಮಹೀನಸತ್ತ್ವಾನಾಂ ದುಷ್ಕರಾಚಾರಕರ್ಮಣಾಮ್ ।**
**ಸ್ವೈಃ ಕರ್ಮಭಿಃ ಸತ್ಕೃತಾನಾಂ ಘೋರತ್ವಂ ಸಮ್ಪ್ರಣಶ್ಯತಿ ॥೮೦॥**

ಮಹಾಸತ್ತ್ವವಂತರಾದ, ತಾವು ಕೈಗೊಂಡ ಕಾರ್ಯವು ದುಸ್ಸಾಧ್ಯ ವಾಗಿದ್ದರೂ ಶ್ರದ್ಧೆಯಿಂದ ಮಾಡಿ ಮುಗಿಸುವ ಸುದೃಢವಾದ ಮನೋ ಭಾವದಿಂದ ಕೂಡಿರುವ, ನಿಷ್ಠಾಯುಕ್ತವಾದ ಶಿಷ್ಟಾಚಾರದಿಂದಲೇ ತಮ್ಮನ್ನು ಸುಸಂಸ್ಕೃತರನ್ನಾಗಿ ಮಾಡಿಕೊಂಡಿರುವ ಸತ್ಪುರುಷರ ಜನ್ಮ-ಜನ್ಮಾಂತರಗಳ ಪಾಪಗಳೂ ಸಂಪೂರ್ಣವಾಗಿ ವಿನಾಶಹೊಂದುತ್ತವೆ.

**ತಂ ಸದಾಚಾರಮಾಶ್ಚರ್ಯಂ ಪುರಾಣಂ ಶಾಶ್ವತಂ ಧ್ರುವಮ್ ।**
**ಧರ್ಮಂ ಧರ್ಮೇಣ ಪಶ್ಯನ್ತಃ ಸ್ವರ್ಗಂ ಯಾನ್ತಿ ಮನೀಷಿಣಃ ॥೮೧॥**

ಬ್ರಾಹ್ಮಣೋತ್ತಮನೇ! ಸದಾಚಾರ ಅಥವಾ ಶಿಷ್ಟಾಚಾರವೆಂಬುದು

ಅತ್ಯಾಶ್ಚರ್ಯಕರವಾದುದು ; ಅತ್ಯಾಶ್ಚರ್ಯಕರವಾದ ಫಲಪ್ರಾಪಕವಾದುದು ; ಬಹುಪುರಾತನವಾದುದು ; ಅನಾದಿಯಾದುದು, ಶಾಶ್ವತವಾದುದು ಮತ್ತು ನಿತ್ಯವಾದುದು. ಇಂತಹ ಶಿಷ್ಟಾಚಾರವನ್ನು ಧರ್ಮೈಕದೃಷ್ಟಿಯಿಂದ ಮಾಡುತ್ತಾ ಜಿತೇಂದ್ರಿಯರಾದವರು ಅವಸಾನಾನಂತರದಲ್ಲಿ ಸ್ವರ್ಗವನ್ನು ಪಡೆಯುತ್ತಾರೆ.

**ಆಸ್ತಿಕಾ ಮಾನಹೀನಾಶ್ಚ ದ್ವಿಜಾತಿಜನಪೂಜಕಾಃ ।**
**ಶ್ರುತವೃತ್ತೋಪಸಮ್ಪನ್ನಾಃ ಸನ್ತಃ ಸ್ವರ್ಗನಿವಾಸಿನಃ ॥೮೨॥**

ಆಸ್ತಿಕರೂ, ದುರಭಿಮಾನಹೀನರೂ, ಬ್ರಾಹ್ಮಣಪೂಜಕರೂ, ಸುಶೀಲರೂ ಆಗಿರುವ ಸಂತರು ಅವಸಾನಾನಂತರದಲ್ಲಿ ಸ್ವರ್ಗಲೋಕವನ್ನು ಪಡೆಯುತ್ತಾರೆ.

ವಿಪ್ರೋತ್ತಮನೇ! ಧರ್ಮವು ಮೂರು ವಿಧವಾದ ಲಕ್ಷಣವುಳ್ಳ ದ್ದಾಗಿದೆ :

**ವೇದೋಕ್ತಃ ಪರಮೋ ಧರ್ಮೋ ಧರ್ಮಶಾಸ್ತ್ರೇಷು ಚಾಪರಃ ।**
**ಶಿಷ್ಟಾಚಾರಶ್ಚ ಶಿಷ್ಟಾನಾಂ ತ್ರಿವಿಧಂ ಧರ್ಮಲಕ್ಷಣಮ್ ॥೮೩॥**

(1) ವೇದಗಳಲ್ಲಿ ಉಕ್ತವಾಗಿರುವ ಯಜ್ಞ-ಯಾಗಾದಿಗಳನ್ನು ಆಚರಿಸುವುದು, (2) ಧರ್ಮಶಾಸ್ತ್ರಗಳಲ್ಲಿ-ಸ್ಮೃತಿಗಳಲ್ಲಿ ಉಕ್ತವಾಗಿರುವಂತೆ ಷೋಡಶಸಂಸ್ಕಾರಗಳನ್ನು ಮಾಡಿಕೊಳ್ಳುವುದು ಮತ್ತು ವೈಶ್ವದೇವಾದಿಗಳನ್ನು ಮಾಡುವುದು, (3) ಮನೆಯಲ್ಲಿ ಶಿಷ್ಟರು ಹಾಕಿಕೊಟ್ಟಿರುವ ಮೇಲ್ಪಙ್ಕ್ತಿಯನ್ನನುಸರಿಸಿ ನಡೆಯುವುದು—ಈ ರೀತಿಯಾಗಿ ಧರ್ಮಕ್ಕೆ ಮೂರು ವಿಧವಾದ ಲಕ್ಷಣಗಳಿವೆ.

**ಧಾರಣಂ ಚಾಪಿ ವಿದ್ಯಾನಾಂ ತೀರ್ಥಾನಾಮವಗಾಹನಮ್ ।**
**ಕ್ಷಮಾ ಸತ್ಯಾರ್ಜವಂ ಶೌಚಂ ಸತಾಮಾಚಾರದರ್ಶನಮ್ ॥೮೪॥**

ಸಕಲವಿದ್ಯೆಗಳನ್ನೂ ಅಧ್ಯಯನಮಾಡುವುದು, ಪುಣ್ಯತೀರ್ಥಗಳಲ್ಲಿ ಸ್ನಾನಮಾಡುವುದು, ಕ್ಷಮಾಶೀಲರಾಗಿರುವುದು, ಸತ್ಯನಿಷ್ಠೆ, ನಿಷ್ಕಾಪಟ್ಯ, ಅಂತಶ್ಶುದ್ಧಿ ಮತ್ತು ಬಹಿಶ್ಶುದ್ಧಿ—ಇವುಗಳೂ ಸಹ ಸತ್ಪುರುಷರ ಸದಾಚಾರದರ್ಶನಗಳಾಗಿವೆ.

**ಸರ್ವಭೂತದಯಾವನ್ತೋ ಅಹಿಂಸಾನಿರತಾಃ ಸದಾ ।**
**ಪರುಷಂ ಚ ನ ಭಾಷನ್ತೇ ಸದಾ ಸನ್ತೋ ದ್ವಿಜಪ್ರಿಯಾಃ ॥೮೫॥**

**ಶುಭಾನಾಮಶುಭಾನಾಂ ಚ ಕರ್ಮಣಾಂ ಫಲಸಂಚಯೇ ।**
**ವಿಪಾಕಮಭಿಜಾನನ್ತಿ ತೇ ಶಿಷ್ಟಾಃ ಶಿಷ್ಟಸಮ್ಮತಾಃ ॥೮೬॥**

ಶಿಷ್ಟಾಚಾರಸಂಪನ್ನರಾದವರು ಸರ್ವಪ್ರಾಣಿಗಳ ವಿಷಯದಲ್ಲಿಯೂ ಪರಮದಯಾವಂತರಾಗಿರುತ್ತಾರೆ. ಯಾವ ಪ್ರಾಣಿಗೂ ಯಾವಾಗಲೂ ತೊಂದರೆಯನ್ನು ಕೊಡದೇ ಅಹಿಂಸಾನಿರತರಾಗಿರುತ್ತಾರೆ. ಬ್ರಾಹ್ಮಣರಿಗೆ ಪ್ರಿಯರಾಗಿರುತ್ತಾರೆ. ಶುಭಾಶುಭಕಾರ್ಯಗಳ ಆಚರಣೆಯಿಂದ ಪ್ರಾಪ್ತ ವಾಗುವ ಪುಣ್ಯ-ಪಾಪಗಳ ಫಲಗಳನ್ನು ಅನುಭವಿಸಬೇಕಾದಾಗ ಸತ್ಪುರುಷರು ಪುಣ್ಯಫಲಕ್ಷಯಕರವಾದ ಸುಖಾನುಭವಕ್ಕೆ ಗಮನಕೊಡುವುದಿಲ್ಲ. ಪಾಪಫಲಕ್ಷಯಕರವಾದ ದುಃಖವನ್ನೇ ಧೈರ್ಯವಾಗಿ ಎದುರಿಸುತ್ತಾರೆ.

**ನ್ಯಾಯೋಪೇತಾ ಗುಣೋಪೇತಾಃ ಸರ್ವಲೋಕಹಿತೈಷಿಣಃ ।**
**ಸನ್ತಃ ಸ್ವರ್ಗಜಿತಃ ಶುಕ್ಲಾಃ ಸಂನಿವಿಷ್ಟಾಶ್ಚ ಸತ್ಪಥೇ ॥೮೭॥**

**ದಾತಾರಃ ಸಂವಿಭಕ್ತಾರೋ ದೀನಾನುಗ್ರಹಕಾರಿಣಃ ।**
**ಸರ್ವಪೂಜ್ಯಾಃ ಶ್ರುತಧನಾಸ್ತಥೈವ ಚ ತಪಸ್ವಿನಃ ।**
**ಸರ್ವಭೂತದಯಾವನ್ತಸ್ತೇ ಶಿಷ್ಟಾಃ ಶಿಷ್ಟಸಮ್ಮತಾಃ ॥೮೮॥**

ಶಿಷ್ಟಸಮ್ಮತರಾದ ಶಿಷ್ಟರು ಯಾವಾಗಲೂ ನ್ಯಾಯತತ್ಪರರಾಗಿರುತ್ತಾರೆ. ಶಮ-ದಮಾದಿ ಗುಣಗಳಿಂದ ಕೂಡಿರುತ್ತಾರೆ. ಸಕಲಜನರ ಹಿತದಲ್ಲಿಯೂ ಆಸಕ್ತರಾಗಿರುತ್ತಾರೆ. ತಾವು ಮಾಡಿದ ಸತ್ಕರ್ಮಗಳಿಂದ ಸ್ವರ್ಗವನ್ನು ಜಯಿಸುತ್ತಾರೆ. (ಅವರಿಗೆ ಸ್ವರ್ಗವೂ ಸದಾ ಸಿದ್ಧವಾಗಿಯೇ ಇರುವುದು.) ಹಿಂಸಾಶೂನ್ಯವಾದ ಧರ್ಮವನ್ನೇ ಆಚರಿಸುತ್ತಿರುತ್ತಾರೆ. ಯಾವಾಗಲೂ ಸತ್ಪುರುಷರ ಮಾರ್ಗಾನುವರ್ತಿಗಳಾಗಿರುತ್ತಾರೆ. ದಾನಶೀಲರಾಗಿರುತ್ತಾರೆ. ಕುಟುಂಬಪೋಷಣೆಯಲ್ಲಿಯೂ ಯಾರಿಗೂ ಅಸಮಾಧಾನವಾಗದ ರೀತಿ ಯಲ್ಲಿ ಸರ್ವಸಮಾನವಾಗಿ ವರ್ತಿಸುತ್ತಿರುತ್ತಾರೆ. ದೀನರಾದವರಿಗೆ ಸರ್ವದಾ ಅವಲಂಬನೆಯನ್ನು ನೀಡುತ್ತಾರೆ. ಸಕಲರಿಂದಲೂ ಗೌರವಿಸಲ್ಪಡುತ್ತಾರೆ.

ವಿದ್ಯಾಧನರೂ ಮತ್ತು ತಪಸ್ವಿಗಳೂ ಆಗಿರುತ್ತಾರೆ. ಸಕಲಪ್ರಾಣಿಗಳ ವಿಷಯದಲ್ಲಿಯೂ ದಯಾಪರರಾದ ಇಂತಹವರೇ ಶಿಷ್ಟರೆನಿಸಿಕೊಳ್ಳುತ್ತಾರೆ.

**ದಾನಶಿಷ್ಟಾಃ ಸುಖಾಲ್ಲೋಕಾನಾಪ್ನುವನ್ತೀಹ ಚ ಶ್ರಿಯಮ್ ।**
**ಪೀಡಯಾ ಚ ಕಲತ್ರಸ್ಯ ಭೃತ್ಯಾನಾಂ ಚ ಸಮಾಹಿತಾಃ ॥೮೯॥**

**ಅತಿಶಕ್ತ್ಯಾ ಪ್ರಯಚ್ಛನ್ತಿ ಸ ಸದ್ಭಿಃ ಸಮಾಗತಾಃ ।**
**ಲೋಕಯಾತ್ರಾಂ ಚ ಪಶ್ಯನ್ತೋ ಧರ್ಮಮಾತ್ಮಹಿತಾನಿ ಚ ।**
**ಏವಂ ಸನ್ತೋ ವರ್ತಮಾನಾಸ್ತ್ವೇಧನ್ತೇ ಶಾಶ್ವತೀಃ ಸಮಾಃ ॥೯೦॥**

ದಾನಮಾಡಿ ಉಳಿದುದರಿಂದಲೇ ಜೀವನಡೆಸುವ ಶಿಷ್ಟರು ಉತ್ತಮ ಲೋಕಗಳನ್ನು ಅವಸಾನಾನಂತರದಲ್ಲಿ ಪಡೆಯುವುದಲ್ಲದೇ–ಈ ಲೋಕ ದಲ್ಲಿಯೂ ಕೀರ್ತಿಮಂತರಾಗುತ್ತಾರೆ. ಶಿಷ್ಟರಾದವರು ತಮ್ಮ ಮಡದಿ-ಮಕ್ಕಳಿಗೂ, ಸೇವಕರಿಗೂ ತೊಂದರೆಯಾದರೂ (ಅವರುಗಳಿಗೆ ಊಟ ಮಾಡಲು ಅನ್ನವಿಲ್ಲದಿದ್ದರೂ) ಅನಾಹೂತರಾಗಿ ಆಗಮಿಸುವ ಸತ್ಪುರುಷರಿಗೆ ಸರ್ವಸ್ವವನ್ನೂ ತಮ್ಮ ಶಕ್ತಿಮೀರಿ ಸಮರ್ಪಿಸುತ್ತಿರುತ್ತಾರೆ. ಶಿಷ್ಟರಾದ ಇವರು ಲೋಕಧರ್ಮವನ್ನು ತಿಳಿದುಕೊಂಡು ತಮ್ಮ ಹಿತಪ್ರಾಪಕವಾದ ಧರ್ಮಾಚರಣೆಯನ್ನು ಮಾಡುತ್ತಾ ಬಹಳ ಕಾಲದವರೆಗೂ ಕೀರ್ತಿಮಂತ ರಾಗಿ ಜೀವನವನ್ನು ನಡೆಸುತ್ತಿರುತ್ತಾರೆ.

ಬ್ರಾಹ್ಮಣೋತ್ತಮನೇ! ನಾನು ಹಿಂದೆಯೇ ಹೇಳಿದಂತೆ :

**ಅಹಿಂಸಾ ಸತ್ಯವಚನಮಾನೃಶಂಸ್ಯಮಥಾರ್ಜವಮ್ ।**
**ಅದ್ರೋಹೋ ನಾಭಿಮಾನಶ್ಚ ಹ್ರೀಸ್ತಿತಿಕ್ಷಾ ದಮಃ ಶಮಃ ॥೯೧॥**

**ಧೀಮನ್ತೋ ಧೃತಿಮನ್ತಶ್ಚ ಭೂತಾನಾಮನುಕಮ್ಪಕಾಃ ।**
**ಅಕಾಮದ್ವೇಷಸಂಯುಕ್ತಾಸ್ತೇ ಸನ್ತೋ ಲೋಕಸಾಕ್ಷಿಣಃ ॥೯೨॥**

ಅಹಿಂಸೆ, ಸತ್ಯನಿಷ್ಠೆ, ಕರುಣೆ, ನಿಷ್ಕಾಪಟ್ಯ ಇತರರಿಗೆ ದ್ರೋಹವ ನ್ನೆಸಗದಿರುವುದು, ನಿರಭಿಮಾನ, ಪಾಪಕಾರ್ಯಗಳನ್ನು ಮಾಡಲು ನಾಚು ವುದು, ಸಹನೆ, ಜಿತೇಂದ್ರಿಯತೆ ಮತ್ತು ಶಾಂತತೆ–ಇವುಗಳು ಶಿಷ್ಟರಲ್ಲಿರ ಬೇಕಾದ ಮುಖ್ಯಗುಣಗಳು. ಬುದ್ಧಿವಂತರಾಗಿಯೂ, ದೃಢಮನಸ್ಕರಾ

ಗಿಯೂ ಭೂತದಯಾಪಶ್ಚಾತ್ತಾಪವುಳ್ಳವರಾಗಿಯೂ, ಕಾಮ-ದ್ವೇಷರಹಿತರಾಗಿಯೂ ಇರುವ ಸತ್ಪುರುಷರು ಲೋಕಕ್ಕೇ ಸಾಕ್ಷಿಭೂತರಾಗಿರುತ್ತಾರೆ.

**ತ್ರೀಣ್ಯೇವ ತು ಪದಾನ್ಯಾಹುಃ ಸತಾಂ ವ್ರತಮನುತ್ತಮಮ್ ।**
**ನ ಚೈವ ದ್ರುಹ್ಯೇದ್ದದ್ಯಾಚ್ಚ ಸತ್ಯಂ ಚೈವ ಸದಾ ವದೇತ್ ॥೬೩॥**

ಶಿಷ್ಟಾಚಾರಸಂಪನ್ನನು ಅನುಸರಿಸಬೇಕಾದ ಮುಖ್ಯಧರ್ಮಗಳು ಮೂರು. ಯಾವಾಗಲೂ ಯಾರಿಗೂ ಯಾವ ರೀತಿಯಲ್ಲಿಯೂ ತೊಂದರೆ ಕೊಡದಿರುವುದು ; ಶಕ್ತಿಮೀರಿ ದಾನಮಾಡುವುದು; ಸತ್ಯನಿಷ್ಠನಾಗಿರುವುದು.

**ಸರ್ವತ್ರ ಚ ದಯಾವನ್ತಃ ಸನ್ತಃ ಕರುಣವೇದಿನಃ ।**
**ಗಚ್ಛನ್ತೀಹ ಸುಸಂತುಷ್ಟಾ ಧರ್ಮಪನ್ಥಾನಮುತ್ತಮಮ್ ।**
**ಶಿಷ್ಟಾಚಾರಾ ಮಹಾತ್ಮಾನೋ ಯೇಷಾಂ ಧರ್ಮಃ ಸುನಿಶ್ಚಿತಃ ॥೬೪॥**

ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ದಯಾವಂತರಾಗಿರುವ, ಕರುಣಾಶಾಲಿಗಳಾದ, ಮತ್ತೊಬ್ಬರ ಕಷ್ಟವೇನೆಂಬುದನ್ನು ತಿಳಿದು ಕರುಣೆತೋರುವ ಸ್ವಭಾವದಿಂದ ಕೂಡಿರುವ ಇಂತಹವರು ಈ ಲೋಕದಲ್ಲಿ ಸಂತುಷ್ಟರಾಗಿ ಧರ್ಮಾಚರಣೆಯನ್ನು ಮಾಡುತ್ತಿದ್ದು, ಮುಂದೆಯೂ ಉತ್ತಮೋತ್ತಮ ವಾದ ಧರ್ಮಮಾರ್ಗಕ್ಕೆ ಅರ್ಥಾತ್ ಉತ್ತಮಲೋಕಗಳಿಗೆ ಹೋಗುತ್ತಾರೆ. ಮಹಾತ್ಮರಾದ ಶಿಷ್ಟಾಚಾರಸಂಪನ್ನರು ಅನುಸರಿಸಬೇಕಾದ ಮಾರ್ಗವು ಬಹುಸ್ಪಷ್ಟವಾಗಿ ಮಹರ್ಷಿಗಳಿಂದ ನಿಶ್ಚಯಿಸಲ್ಪಟ್ಟಿದೆ.

**ಅನಸೂಯಾ ಕ್ಷಮಾ ಶಾನ್ತಿಃ ಸಂತೋಷಃ ಪ್ರಿಯವಾದಿತಾ ॥೬೫॥**

**ಕಾಮಕ್ರೋಧಪರಿತ್ಯಾಗಃ ಶಿಷ್ಟಾಚಾರನಿಷೇವಣಮ್ ।**
**ಕರ್ಮ ಚ ಶ್ರುತಸಮ್ಪನ್ನಂ ಸತಾಂ ಮಾರ್ಗಮನುತ್ತಮಮ್ ॥೬೬॥**

ಅಸೂಯೆಯಿಲ್ಲದಿರುವುದು, ಸಹನಶೀಲತೆ, ಎಂತಹ ಕಷ್ಟಕಾಲದಲ್ಲಿಯೂ ಮತ್ತು ಉದ್ವಿಗ್ನತೆಯಿಂದ ಕೂಡಿದ ಸನ್ನಿವೇಶದಲ್ಲಿಯೂ ಮನಸ್ಸನ್ನು ಶಾಂತಗೊಳಿಸುವುದು, ಸರ್ವದಾ ಸಂತೋಷಯುಕ್ತರಾಗಿರುವುದು, ಇತರರೊಡನೆ ಪ್ರಿಯವಾದ ಮಾತನಾಡುವುದು, ಕಾಮ-ಕ್ರೋಧಗಳನ್ನು ಪರಿತ್ಯಜಿಸುವುದು, ಶಿಷ್ಟಾಚಾರಸಂಪನ್ನರ ಸೇವೆಮಾಡುವುದು, ಶ್ರುತಿ-ಸ್ಮೃತಿವಿಹಿತವಾದ

ಕರ್ಮಗಳನ್ನು ಮಾಡುವುದು–ಇವುಗಳು ಸತ್ಪುರುಷರು ಅನುಸರಿಸುವ ಮಾರ್ಗಗಳಾಗಿವೆ.

**ಶಿಷ್ಟಾಚಾರಂ ನಿಷೇವನ್ತೇ ನಿತ್ಯಂ ಧರ್ಮಮನುವ್ರತಾಃ ।**
**ಪ್ರಜ್ಞಾಪ್ರಾಸಾದಮಾರುಹ್ಯ ಮುಚ್ಯನ್ತೇ ಮಹತೋ ಭಯಾತ್ ॥**

ಸತ್ಪುರುಷರು ತಮ್ಮ ಜೀವನಪರ್ಯಂತವಾಗಿ ಶಿಷ್ಟಾಚಾರಪರಾಯಣರಾಗಿ ಧರ್ಮಮಾರ್ಗದಲ್ಲಿಯೇ ಜೀವನವನ್ನು ನಡೆಸುತ್ತಿದ್ದು, ಸತ್ಕರ್ಮಾನುಷ್ಠಾನಗಳಿಂದ ಬ್ರಹ್ಮಸಾಕ್ಷಾತ್ಕಾರವೆಂಬ ಪ್ರಜ್ಞಾರೂಪವಾದ ಪ್ರಾಸಾದವನ್ನೇರಿ ಸಂಸಾರಭಯದಿಂದ ವಿಮುಕ್ತಿಯನ್ನು ಹೊಂದುತ್ತಾರೆ.

**ಪ್ರೇಕ್ಷನ್ತೋ ಲೋಕವೃತ್ತಾನಿ ವಿವಿಧಾನಿ ದ್ವಿಜೋತ್ತಮ ।**
**ಅತಿಪುಣ್ಯಾನಿ ಪಾಪಾನಿ ತಾನಿ ದ್ವಿಜವರೋತ್ತಮ ॥೯೮॥**

ಇಂತಹ ಸತ್ಪುರುಷರು ವಿಧ-ವಿಧವಾದ ಲೋಕವಿಷಯಗಳನ್ನು ನೋಡುತ್ತಿರುತ್ತಾರೆ. ಅತಿಪುಣ್ಯಕರವಾದ ಕಾರ್ಯವು ಯಾವುದು ಮತ್ತು ಪಾಪಾಹೇತುವಾದ ಕಾರ್ಯವು ಯಾವುದು–ಎಂಬುದನ್ನು ತಮ್ಮ ಪ್ರಜ್ಞೆಯಿಂದ ವಿವೇಚಿಸಿ ಕಾರ್ಯಮಾಡುತ್ತಾರೆ. ಇಂತಹ ಸತ್ಪುರುಷರ, ಶಿಷ್ಟಾಚಾರ ಸಂಪನ್ನರ ಸಹವಾಸವು ಪರಮಶ್ರೇಷ್ಠವಾದುದು.

ಬ್ರಾಹ್ಮಣೋತ್ತಮನೇ! ಶಿಷ್ಟಾಚಾರದ ವಿಷಯದಲ್ಲಿ ನನ್ನ ಬುದ್ಧಿಗೆ ತಿಳಿದಂತೆ ಹಿರಿಯರು ಹೇಳಿರುವುದನ್ನು ಯಥಾವತ್ತಾಗಿ ನಿನ್ನ ಮುಂದೆ ಇಟ್ಟಿದ್ದೇನೆ.”

ಇಂ೦೭ನೆಯ ಅಧ್ಯಾಯವು ಮುಗಿಯಿತು.

ಇಂ೦೮ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಧರ್ಮವ್ಯಾಧನಿಂದ ಹಿಂಸೆ ಮತ್ತು ಅಹಿಂಸೆಗಳ ನಿರೂಪಣೆ

“ಯುಧಿಷ್ಠಿರ! ಧರ್ಮವ್ಯಾಧನು ಮುಂದುವರಿದು ಬ್ರಾಹ್ಮಣನೊಡನೆ ಹೇಳುತ್ತಾನೆ :

“ಬ್ರಾಹ್ಮಣೋತ್ತಮನೇ! ನೀನು ನನ್ನನ್ನು ಕುರಿತು ಈ ಕ್ರೂರಕರ್ಮವನ್ನು ಮಾಡಬೇಡವೆಂದು ಹೇಳಿದೆಯಲ್ಲವೇ? ನಿಶ್ಚಯವಾಗಿಯೂ ನೀನು

ಹೇಳಿದಂತೆ ನಾನು ಮಾಡುತ್ತಿರುವ ಈ ಕರ್ಮವು ಬಹುಕ್ರೂರವಾದುದೇ ಆಗಿರುವುದು. ಇದರಲ್ಲಾವ ಸಂಶಯವೂ ಇಲ್ಲ, ಆದರೆ :

**ವಿಧಿಸ್ತು ಬಲವಾನ್ಬ್ರಹ್ಮನ್ದುಸ್ತರಂ ಹಿ ಪುರಾ ಕೃತಮ್ ।**
**ಪುರಾ ಕೃತಸ್ಯ ಪಾಪಸ್ಯ ಕರ್ಮದೋಷೋ ಭವತ್ಯಯಮ್ ।**
**ದೋಷಸ್ಯೈತಸ್ಯ ವೈ ಬ್ರಹ್ಮನ್ವಿಘಾತೇ ಯತ್ನವಾನಹಮ್ ॥೨॥**

'ವಿಧಿ' ಎಂಬುದು ಬಹಳ ಬಲವತ್ತರವಾದುದು. ಬ್ರಾಹ್ಮಣೋತ್ತಮ ! ಹಿಂದೆ ಮಾಡಿದ ಪಾಪದ ಫಲವಾಗಿ ನಾನಿಂದು ಈ ಕ್ರೂರಕರ್ಮವನ್ನು ಮಾಡಬೇಕಾಗಿದೆ. ಮತ್ತು ಈ ಕ್ರೂರಕರ್ಮದಿಂದಲೇ ನನ್ನ ಜೀವನವನ್ನು ನಡೆಸಬೇಕಾಗಿದೆ. ವಿಧಿಯ ನಿಯಮವನ್ನು ಬದಲಾಯಿಸಲು ಯಾರಿಂದಲೂ ಸಾಧ್ಯವಿಲ್ಲ. ಹಿಂದೆ ಮಾಡಿದ ಪಾಪ-ಪುಣ್ಯಕರ್ಮಗಳಿಗೆ ಅನುಸಾರವಾಗಿ ವಿಧಿಯು ನಮ್ಮನ್ನು ಕಾರ್ಯಪ್ರವೃತ್ತರನ್ನಾಗಿ ಮಾಡುತ್ತದೆ. ನಾನು ಹಿಂದಿನ ಜನ್ಮದಲ್ಲಿ ಮಾಡಿದ ದೋಷನಿವಾರಣೆಗೆ ಸಾಕಷ್ಟು ಪ್ರಯತ್ನವನ್ನೇನೋ ಮಾಡುತ್ತಿದ್ದೇನೆ. ಆದರೂ ವಿಧಿಯ ಪ್ರಾಬಲ್ಯವು ಹೆಚ್ಚಿನದು. ವಿಧಿಯ ವೈಚಿತ್ರ್ಯಲೀಲೆಯನ್ನು ಹೇಳುವೆನು, ಕೇಳು :

**ವಿಧಿನಾ ಹಿ ಹತೇ ಪೂರ್ವಂ ನಿಮಿತ್ತಂ ಘಾತಕೋ ಭವೇತ್ ॥೩॥**

ಜೀವಿಯ ಮೃತ್ಯುವು ವಿಧಿಯಿಂದ ಮೊದಲೇ ನಿಶ್ಚಿತವಾಗಿರುತ್ತದೆ. ಆದರೆ ಹಂತಕರು (ಕಟುಕ-ವ್ಯಾಧ ಮುಂತಾದವರು) ನಿಮಿತ್ತಮಾತ್ರರಾಗುತ್ತಾರೆ.

**ನಿಮಿತ್ತಭೂತಾ ಹಿ ವಯಂ ಕರ್ಮಣೋಽಸ್ಯ ದ್ವಿಜೋತ್ತಮ ।**
**ಯೇಷಾಂ ಹತಾನಾಂ ಮಾಂಸಾನಿ ವಿಕ್ರೀಣಾಮೀಹ ವೈ ದ್ವಿಜ ॥೪॥**

**ತೇಷಾಮಪಿ ಭವೇದ್ಧರ್ಮ ಉಪಯೋಗೇ ನ ಭಕ್ಷಣೇ ।**
**ದೇವತಾತಿಥಿಭೃತ್ಯಾನಾಂ ಪಿತೄಣಾಂ ಚಾಪಿ ಪೂಜನಮ್ ॥೫॥**

ಈ ಕರ್ಮವು ನಡೆಯುತ್ತಿರುವುದಕ್ಕೆ ನಾವೂ ಕೂಡ ನಿಮಿತ್ತಮಾತ್ರರು. ನಾನು ಕೊಲ್ಲುವ ಈ ಪ್ರಾಣಿಗಳ ವಧೆಯು ವಿಧಿಯಿಂದ ಮೊದಲೇ ಆಗಿಬಿಟ್ಟಿರುತ್ತದೆ. ನಾನು ಯಾವ ಯಾವ ಪ್ರಾಣಿಗಳ ಮಾಂಸವನ್ನು ಮಾರುತ್ತೇನೆಯೋ ಆ ಪ್ರಾಣಿಗಳಿಗೂ ಕೂಡ ಧರ್ಮವು ಪ್ರಾಪ್ತವಾಗುತ್ತದೆ. ಆ ಪ್ರಾಣಿಗಳ ಮಾಂಸವನ್ನು ಮನುಷ್ಯರು ಭಕ್ಷಿಸುವುದರಿಂದ ಆ ಪ್ರಾಣಿಗಳ ಎಷ್ಟೋ

ಪಾಪಗಳು ಕಳೆದು ಅವುಗಳಿಗೂ ಸದ್ಗತಿಯುಂಟಾಗುವ ಅಥವಾ ಒಳ್ಳೆಯ ಜನ್ಮಸಿಕ್ಕುವ ಸಾಧ್ಯತೆಯುಂಟು. ಮಾನವರು ದೇವರ ಪೂಜೆಮಾಡಿ ಮಾಂಸ ವನ್ನು ನಿವೇದನಮಾಡಿ ಭಕ್ಷಿಸುತ್ತಾರೆ. ಅತಿಥಿಗಳನ್ನು ಸತ್ಕರಿಸಿ ಪರಿಪಕ್ವವಾದ ಮಾಂಸದ ಭೋಜನಮಾಡಿಸುತ್ತಾರೆ. ಪಿತೃಗಳ ತೃಪ್ತಿಗಾಗಿ ಮಾಡುವ ಶ್ರಾಧಾದಿಗಳಲ್ಲಿಯೂ ಉಪಯೋಗಿಸುವುದುಂಟು. ಇನ್ನು ಮನೆಯ ಸೇವಕ ರಿಗೆ ಈ ಮಾಂಸವನ್ನು ಪಕ್ವಮಾಡಿ ಹಾಕುತ್ತಾರೆ. ಆದುದರಿಂದ ಯಾವ ಪ್ರಾಣಿಯ ಮಾಂಸವು ಯಾರಿಗೆ ಸೇರುವುದೋ–ತದನುಸಾರವಾಗಿ ಆ ಪ್ರಾಣಿಗೂ ಪುಣ್ಯಫಲವುಂಟಾಗುತ್ತದೆ. ಮೇಲಾಗಿ :

**ಓಷಧ್ಯೋ ವೀರುಧಶ್ಚೈವ ಪಶವೋ ಮೃಗಪಕ್ಷಿಣಃ ।**
**ಅನಾದಿಭೂತಾ ಭೂತಾನಾಮಿತ್ಯಪಿ ಶ್ರೂಯತೇ ಶ್ರುತಿಃ ॥೬॥**

ಓಷಧಿಲತೆಗಳು (ಸಸ್ಯಗಳು), ಬಳ್ಳಿಗಳು, ಜಿಂಕೆಗಳು, ಪಕ್ಷಿಗಳು ಮತ್ತು ಮೃಗಗಳು ಅನಾದಿಕಾಲದಿಂದಲೂ ಪ್ರಾಣಿಗಳಿಗೆ ಆಹಾರರೂಪ ವಾಗಿರುವುವೆಂದು ಶ್ರುತಿಗಳೇ ಘೋಷಿಸುತ್ತವೆ.

ಇದಲ್ಲದೆ ಮಾಂಸಪ್ರದಾನದಿಂದಲೇ ಸದ್ಗತಿಯನ್ನು ಹೊಂದಿರುವವರೂ ಅನೇಕರಿದ್ದಾರೆ.

**ಆತ್ಮಮಾಂಸಪ್ರಸಾದೇನ ಶಿಬಿರೌಶೀನರೋ ನೃಪಃ ।**
**ಸ್ವರ್ಗಂ ಸುದುರ್ಗಮಂ ಪ್ರಾಪ್ತಃ ಕ್ಷಮಾವಾನ್ದ್ವಿಜಸತ್ತಮ ॥೭॥**

ದ್ವಿಜವರನೇ! ಕ್ಷಮಾವಂತನಾದ, ಉಶೀನರನ ಮಗನಾದ ಶಿಬಿ ಚಕ್ರವರ್ತಿಯು ತನ್ನ ಶರೀರಿದ ಮಾಂಸಪ್ರದಾನದಿಂದಲೇ ಸುದುರ್ಗಮವಾದ ಸ್ವರ್ಗವನ್ನು ಪಡೆದನು.

**ರಾಜ್ಞೋ ಮಹಾನಸೇ ಪೂರ್ವಂ ರನ್ತಿದೇವಸ್ಯ ವೈ ದ್ವಿಜ ।**
**ದ್ವೇ ಸಹಸ್ರೇ ತು ವಧ್ಯೇತೇ ದ್ವೇ ಸಹಸ್ರೇ ಗವಾಂ ತಥಾ ॥೮॥**

**ಅಹನ್ಯಹನಿ ವಧ್ಯೇತೇ ದ್ವೇ ಸಹಸ್ರೇ ಗವಾಂ ತಥಾ ।**
**ಸಮಾಂಸಂ ದದತೋಹ್ಯನ್ನಂ ರನ್ತಿದೇವಸ್ಯ ನಿತ್ಯಶಃ ॥೯॥**

**ಅತುಲಾ ಕೀರ್ತಿರಭವನ್ನೃಪಸ್ಯ ದ್ವಿಜಸತ್ತಮ ।**
**ಚಾತುರ್ಮಾಸ್ಯೇ ಚ ಪಶವೋ ವಧ್ಯನ್ತ ಇತಿ ನಿತ್ಯಶಃ ॥೧೦॥**

ರಾಜನಾದ ರಂತಿದೇವನ ಅಡಿಗೆ ಮನೆಯಲ್ಲಿ ಅನುದಿನವೂ ಎರಡು ಸಾವಿರಪ್ರಾಣಿಗಳನ್ನು ವಧೆಮಾಡುತ್ತಿದ್ದರು. ಹಾಗೆಯೇ ಎರಡು ಸಾವಿರ ಗೋವುಗಳನ್ನು ವಧೆಮಾಡುತ್ತಿದ್ದರು.

ರಂತಿದೇವನು ಅನುದಿನವೂ ಮಾಂಸಮಿಶ್ರವಾದ ಭೋಜನವನ್ನು ಮಾಡಿಸುತ್ತಿದ್ದುದರಿಂದ ಕೀರ್ತಿಮಂತನಾದನು. ಸಂಕಲ್ಪಿತವಾದ ನಾಲ್ಕು ತಿಂಗಳ ಪರ್ಯಂತವಾಗಿ ಇದೇ ರೀತಿಯಲ್ಲಿ ಅನುದಿನವೂ ಪಶುಗಳು ವಧಿಸಲ್ಪಡುತ್ತಿದ್ದುವು.

(8, 9 ಮತ್ತು 10ನೇ ಶ್ಲೋಕಗಳ ಔಚಿತ್ಯವನ್ನು ಪರಿಶಿಷ್ಟದಲ್ಲಿ ವಿಮರ್ಶಿಸಲಾಗಿದೆ.)

**ಅಗ್ನಯೋ ಮಾಂಸಕಾಮಾಶ್ಚ ಇತ್ಯಪಿ ಶ್ರೂಯತೇ ಶ್ರುತಿಃ।**
**ಯಜ್ಞೇಷು ಪಶವೋ ಬ್ರಹ್ಮನ್ವಧ್ಯನ್ತೇ ಸತತಂ ದ್ವಿಜೈಃ ॥೧೧॥**

**ಸಂಸ್ಕೃತಾಃ ಕಿಲ ಮನ್ತ್ರೈಶ್ಚ ತೇಽಪಿ ಸ್ವರ್ಗಮವಾಪ್ನುವನ್ ॥೧೨॥**

ಯಜ್ಞಾಗ್ನಿಗಳೂ ಮಾಂಸವನ್ನು ಅಪೇಕ್ಷಿಸುತ್ತವೆಂಬುದಕ್ಕೆ ಶ್ರುತಿ ವಚನವೂ ಇರುವುದು. "ಯಸ್ಯಾಗ್ನಯೋ ಜುಹ್ವತೋ ಮಾಂಸ ಕಾಮಾಃ" ಇದೇ ಶ್ರುತಿವಚನವು. ಯಜ್ಞಗಳಲ್ಲಿಯೂ ಬ್ರಾಹ್ಮಣರು ಪಶುಮೇಧವನ್ನು ಮಾಡುತ್ತಲೇ ಇರುತ್ತಾರೆ. ಮಂತ್ರದಿಂದ ಸಂಸ್ಕೃತವಾದ ಆ ಪಶುಗಳಿಗೂ ಸ್ವರ್ಗಪ್ರಾಪ್ತಿಯಾಗುತ್ತದೆ.

**ಯದಿ ನೈವಾಗ್ನಯೋ ಬ್ರಹ್ಮನ್ಮಾಂಸಕಾಮಾಭವನ್ಪುರಾ ।**
**ಭಕ್ಷ್ಯಂ ನೈವಾಭವನ್ಮಾಂಸಂ ಕಸ್ಯಚಿದ್ದ್ವಿಜಸತ್ತಮ ॥೧೩॥**

ದಕ್ಷಿಣಾಗ್ನಿ-ಗಾರ್ಹಪತ್ಯ-ಆಹವನೀಯಗಳೆಂಬ ಅಗ್ನಿತ್ರಯಗಳು ತಮ್ಮ ಪ್ರೀತಿಗಾಗಿ ಮಾಂಸವನ್ನು ಇಚ್ಛಿಸದೇ ಇದ್ದಿದ್ದರೆ ಖಂಡಿತವಾಗಿಯೂ ಮಾಂಸವು ಯಾವನೊಬ್ಬನ ಆಹಾರವೂ ಆಗುತ್ತಿರಲಿಲ್ಲ. ಮಾಂಸಭಕ್ಷಣೆ ಯಲ್ಲಿಯೂ ಋಷಿ-ಮಹರ್ಷಿಗಳು ಒಂದು ನಿರ್ಣಯವನ್ನು ಮಾಡಿರುತ್ತಾರೆ.

**ದೇವತಾನಾಂ ಪಿತೄಣಾಂ ಚ ಭುಙ್ಕ್ತೇ ದತ್ತ್ವಾಪಿ ಯಃ ಸದಾ ।**
**ಯಥಾವಿಧಿ ಯಥಾಶ್ರಾದ್ಧಂ ನ ಪ್ರದುಷ್ಯತಿ ಭಕ್ಷಣಾತ್ ।**
**ಅಮಾಂಸಾಶೀ ಭವತ್ಯೇವಮಿತ್ಯಪಿ ಶ್ರೂಯತೇ ಶ್ರುತಿಃ ॥೧೪॥**

ಪರಿಪಕ್ವವಾದ ಮಾಂಸವನ್ನು ದೇವತೆಗಳಿಗೂ, ಪಿತೃದೇವತೆಗಳಿಗೂ ಸಮರ್ಪಿಸಿ ಯಾವನು ಭಕ್ಷಿಸುತ್ತಾನೆಯೋ–ಆತನು ಆ ಮಾಂಸಭಕ್ಷಣದಿಂದ ದೂಷ್ಯನಾಗುವುದಿಲ್ಲ. ದೇವ-ಪಿತೃಗಳಿಗೆ ನಿವೇದನಮಾಡಿದ ಮಾಂಸವನ್ನು ಪ್ರಸಾದರೂಪವಾಗಿ ಸ್ವೀಕರಿಸಿ ಭಕ್ಷಣಮಾಡುವವನು. 'ಮಾಂಸಾಶೀ' ಎಂದೆ ನಿಸಿಕೊಳ್ಳುವುದಿಲ್ಲವೆಂದು ಶ್ರುತಿಪ್ರಮಾಣವಿದೆ. (ಆದರೆ ಕಲಿಯುಗದಲ್ಲಿ ಪಿತೃಕಾರ್ಯಗಳಲ್ಲಿ ಮಾಂಸಭಕ್ಷಣವು ನಿಷೇಧಿಸಲ್ಪಟ್ಟಿದೆ. ಯಜ್ಞ-ಯಾಗಾದಿ ಗಳಲ್ಲಿ ಮಾತ್ರವೇ ಮಂತ್ರದಿಂದ ಸಂಸ್ಕೃತವಾದ ಪಶುವನ್ನು ಹನನಮಾಡಿ ಅದರ ವಪೆಯನ್ನು ಯಜ್ಞೇಶ್ವರನಿಗೆ ಸಮರ್ಪಿಸಿದ ನಂತರ ಪ್ರಾಪ್ತವಾಗುವ ಯಜ್ಞೇಶ್ವರನಿಂದ ಪಕ್ವವಾದ ವಪೆಯನ್ನು ಪ್ರಸಾದರೂಪವಾಗಿ ಭಕ್ಷಿಸಲು ಅವ ಕಾಶವಿದೆ.)

**ಭಾರ್ಯಾಂ ಗಚ್ಛನ್ಬ್ರಹ್ಮಚಾರೀ ಋತೌ ಭವತಿ ಬ್ರಾಹ್ಮಣಃ ।**

ಋತುಕಾಲದಲ್ಲಿ ಮಾತ್ರವೇ ಭಾರ್ಯಾಸಮಾಗಮವನ್ನು ಮಾಡುವ ಬ್ರಾಹ್ಮಣನು ಯಾವ ರೀತಿಯಲ್ಲಿ 'ಕಾಮೀ' ಎನಿಸಿಕೊಳ್ಳುವುದಿಲ್ಲವೋ 'ಬ್ರಹ್ಮಚಾರೀ' ಎನಿಸಿಕೊಳ್ಳುವನೋ–ಅದೇ ರೀತಿಯಲ್ಲಿ ದೇವ-ಪಿತೃಗಳಿಗೆ ನಿವೇದನಮಾಡಿದ ಮತ್ತು ಯಜ್ಞದಲ್ಲಿ ಹುತವಾದ ಪ್ರಾಣಿಯ ಮಾಂಸವನ್ನು ಭಕ್ಷಿಸುವವನು 'ಮಾಂಸಾಶೀ' ಎನಿಸಿಕೊಳ್ಳುವುದಿಲ್ಲ.

**ಸತ್ಯಾನೃತೇ ವಿನಿಶ್ಚಿತ್ಯ ಅತ್ರಾಪಿ ವಿಧಿರುಚ್ಯತೇ ॥೧೫॥**

ಜ್ಞಾನಮಾರ್ಗ ಮತ್ತು ಕರ್ಮಮಾರ್ಗಗಳು ಯಾವುವೆಂಬುದನ್ನು ನಿಶ್ಚಯಿಸಿ ಈ ವಿಧವಾದ ವಿಧಿನಿಯಮಗಳನ್ನು ಮಾಡಲಾಗಿದೆ.

**ಸೌದಾಸೇನ ತದಾ ರಾಜ್ಞಾ ಮಾನುಷಾ ಭಕ್ಷಿತಾ ದ್ವಿಜ ।**
**ಶಾಪಾಭಿಭೂತೇನ ಭೃಶಮತ್ರ ಕಿಂ ಪ್ರತಿಭಾತಿ ಮೇ ॥೧೬॥**

ಈ ವಿಷಯದಲ್ಲಿ ನನಗೆ ಹೀಗೆ ತೋರುತ್ತದೆ : ಸೌದಾಸನಾದರೋ

ನರಮಾಂಸಭಕ್ಷಕನಲ್ಲ. ಅವನಿಗೆ ಮಾಂಸವನ್ನು ತಿನ್ನುವ ಅಪೇಕ್ಷೆಯಿರಲಿಲ್ಲ. ಆದರೂ ಶಾಪಾಭಿಭೂತನಾಗಿ ಅವನು ಇಚ್ಛೆಯಿಲ್ಲದೆಯೇ ಮಾಂಸವನ್ನು ತಿನ್ನಬೇಕಾಯಿತು. ಶಾಪದ ಕಾರಣದಿಂದ ಯಾವ ರೀತಿಯಲ್ಲಿ ಸೌದಾಸನು ನರಮಾಂಸಭಕ್ಷಕನಾದನೋ-ಅದೇ ರೀತಿಯಲ್ಲಿ ಕರ್ಮದ ವಿಪಾಕದಿಂದ ನಾನು ವ್ಯಾಧನಾಗಿ ಹುಟ್ಟಿರುವೆನೆಂದು ನನಗೆ ಭಾಸವಾಗುತ್ತದೆ.

**ಸ್ವಧರ್ಮ ಇತಿ ಕೃತ್ವಾ ತು ನ ತ್ಯಜಾಮಿ ದ್ವಿಜೋತ್ತಮ ।**
**ಪುರಾ ಕೃತಮಿತಿ ಜ್ಞಾತ್ವಾ ಜೀವಾಮ್ಯೇತೇನ ಕರ್ಮಣಾ ॥೧೭॥**

ನಾನು ಜಾತಿಯಲ್ಲಿ ವ್ಯಾಧನು. ಮಾಂಸವಿಕ್ರಯವು ನನ್ನ ಜಾತಿಗೆ ಹೇಳಿರುವ ಧರ್ಮ. ಈ ಜನ್ಮದಲ್ಲಿ ನನಗೆ ಈ ವ್ಯಾಧತ್ವವು ಹಿಂದೆ ಮಾಡಿದ ಕರ್ಮದಿಂದ ಪ್ರಾಪ್ತವಾಗಿದೆಯೆಂಬುದು ಶತಾಂಶ ಸತ್ಯವಾದುದು. ಆದುದರಿಂದ ನನ್ನ ಜಾತಿಗೆ ಉಕ್ತವಾಗಿರುವ ಕರ್ಮವನ್ನು ನಾನೆಂದಿಗೂ ಬಿಡತಕ್ಕವನಲ್ಲ. ಹಿಂದೆ ಮಾಡಿದ ದುಷ್ಕರ್ಮದಿಂದ ನನಗೆ ಈ ವ್ಯಾಧತ್ವವು ಪ್ರಾಪ್ತವಾಗಿರುವುದೆಂದು ತಿಳಿದುಕೊಂಡು ನಾನು ಇದೇ ವೃತ್ತಿಯಿಂದಲೇ ನನ್ನ ಜೀವನವನ್ನು ನಡೆಸುತ್ತೇನೆ.

**ಸ್ವಕರ್ಮ ತ್ಯಜತೋ ಬ್ರಹ್ಮನ್ನಧರ್ಮ ಇಹ ದೃಶ್ಯತೇ ।**
**ಸ್ವಕರ್ಮನಿರತೋ ಯಸ್ತು ಧರ್ಮಃ ಸ ಇತಿ ನಿಶ್ಚಯಃ ॥೧೮॥**

ಸ್ವವರ್ಣೋಕ್ತವಾದ ಕರ್ಮಗಳನ್ನು ತ್ಯಜಿಸುವುದು ಅಧರ್ಮವೆನಿಸಿ ಕೊಳ್ಳುತ್ತದೆ ಮತ್ತು ಪಾಪಹೇತುವೂ ಆಗುತ್ತದೆ. ಸ್ವವರ್ಣೋಕ್ತವಾದ ಕರ್ಮಗಳಲ್ಲಿ ನಿರತನಾಗಿರುವುದೇ ನಿಜವಾದ ಧರ್ಮಮಾರ್ಗ.

**ಪೂರ್ವಂ ಹಿ ವಿಹಿತಂ ಕರ್ಮ ದೇಹಿನಂ ನ ವಿಮುಞ್ಚತಿ ।**
**ಧಾತ್ರಾ ವಿಧಿರಯಂ ದೃಷ್ಟೋ ಬಹುಧಾ ಕರ್ಮನಿರ್ಣಯೇ ॥೧೯॥**

ಪೂರ್ವಜನ್ಮದಲ್ಲಿ ಮಾಡಿದ ಕರ್ಮಫಲವು ದೇಹಿಯನ್ನು (ಪ್ರಾಣಿಯನ್ನು) ಖಂಡಿತವಾಗಿಯೂ ಬಿಡುವುದಿಲ್ಲ. ಪ್ರಾಣಿಯ ಜನ್ಮವನ್ನೂ ಮತ್ತು ಕರ್ಮವನ್ನೂ ನಿರ್ಣಯಮಾಡುವುದರಲ್ಲಿ ಬ್ರಹ್ಮನು ಆ ಪ್ರಾಣಿಯು ಪೂರ್ವ ಜನ್ಮದಲ್ಲಿ ಮಾಡಿರುವ ಕರ್ಮಫಲವನ್ನು ಮುಖ್ಯವಾಗಿ ಗಣನೆಗೆ ತಂದು ಕೊಳ್ಳುತ್ತಾನೆ.

**ದೃಷ್ಟ್ವಾ ತು ಭವೇತ್ಪ್ರಾಜ್ಞಃ ಕ್ರೂರೇ ಕರ್ಮಣಿ ವರ್ತತಾ ।**
**ಕಥಂ ಕರ್ಮ ಶುಭಂ ಕುರ್ಯಾಂ ಕಥಂ ಮುಚ್ಯೇ ಪರಾಭವಾತ್ ॥೨೦॥**

ಬ್ರಾಹ್ಮಣೋತ್ತಮನೇ! ಆದುದರಿಂದ ಪೂರ್ವಜನ್ಮದ ಕರ್ಮಫಲಾನು ಸಾರವಾಗಿ ಕ್ರೂರಕರ್ಮದಲ್ಲಿ ನಿಯುಕ್ತನಾದ ಮನುಷ್ಯನು 'ತನ್ನ ಕರ್ಮವನ್ನು ಕಳೆದುಕೊಳ್ಳುವುದು ಹೇಗೆ? ಮತ್ತು ಒಳ್ಳೆಯ ಕರ್ಮವನ್ನು ಆಚರಿಸುವುದು ಹೇಗೆ?'–ಎಂಬುದನ್ನು ತನ್ನಲ್ಲಿಯೇ ತಾನು ಸಮಾಲೋಚಿಸಬೇಕು.

**ಕರ್ಮಣಸ್ತಸ್ಯ ಘೋರಸ್ಯ ಬಹುಧಾ ನಿರ್ಣಯೋ ಭವೇತ್ ।**
**ದಾನೇ ಚ ಸತ್ಯವಾಕ್ಯೇ ಚ ಗುರುಶುಶ್ರೂಷಣೇ ತಥಾ ॥೨೧॥**

**ದ್ವಿಜಾತಿಪೂಜನೇ ಚಾಹಂ ಧರ್ಮೇ ಚ ನಿರತಃ ಸದಾ ।**
**ಅಭಿಮಾನಾತಿವಾದಾಭ್ಯಾಂ ನಿವೃತ್ತೋಽಸ್ಮಿ ದ್ವಿಜೋತ್ತಮ ॥೨೨॥**

ಸತ್ಕರ್ಮಗಳಿಂದ ದುಷ್ಕರ್ಮಫಲವನ್ನು ತೊಳೆಯುವ ಸಾಧ್ಯತೆಯಿದೆ. ಇದಕ್ಕೆ ಅನೇಕಮಾರ್ಗಗಳಿವೆ. ನಾನು ಅದೇ ಮಾರ್ಗಗಳನ್ನೇ ಅನುಸರಿಸಿ ನಡೆ ಯುತ್ತಿದ್ದೇನೆ. ಯಥಾಶಕ್ತಿ ದಾನಮಾಡುತ್ತೇನೆ. ಪರಿಹಾಸಕ್ಕಾದರೂ ಸುಳ್ಳು ಹೇಳುವುದಿಲ್ಲ. ಸತ್ಯನಿಷ್ಠನಾಗಿದ್ದೇನೆ. ನನ್ನ ತಂದೆ-ತಾಯಿಗಳ ಶುಶ್ರೂಷೆ ಮಾಡುತ್ತೇನೆ. ಬ್ರಾಹ್ಮಣರನ್ನು ಸತ್ಕರಿಸುತ್ತೇನೆ. ನನ್ನ ವರ್ಣೋಕ್ತವಾದ ಧರ್ಮದಲ್ಲಿ ನಿರತನಾಗಿದ್ದೇನೆ. (ಆತ್ಮಧರ್ಮದಲ್ಲಿ ಸದಾ ನಿರತನಾಗಿದ್ದೇನೆ.) ಅಭಿಮಾನವನ್ನು ತೊರೆದಿದ್ದೇನೆ. ಹೆಚ್ಚು ಮಾತನಾಡುವುದಿಲ್ಲ. ಯಾರೊಡ ನೆಯೂ ಯಾವ ವಿಷಯದಲ್ಲಿಯೂ ತರ್ಕಮಾಡಲು ಹೋಗುವುದಿಲ್ಲ. ಇಷ್ಟುಮಾಡಿಕೊಂಡು ನನ್ನ ಜಾತಿಗೆ ಉಕ್ತವಾದ ಕರ್ಮವನ್ನು ಮಾಡುತ್ತೇನೆ. (ಸತ್ಕಾರ್ಯಗಳನ್ನು ಮಾಡಿ ದುಷ್ಕರ್ಮಫಲಗಳನ್ನು ಕಳೆದುಕೊಂಡು ಮುಂದೆ ಉತ್ತಮಲೋಕವನ್ನು ಪಡೆಯಲು ಅಥವಾ ಉತ್ತಮಜನ್ಮವನ್ನು ಪಡೆಯಲು ಯತ್ನಿಸಬೇಕೇ ಹೊರತು ತನ್ನ ವರ್ಣಕ್ಕೆ ಉಕ್ತವಾದ ಕರ್ಮವನ್ನು ಮಾಡದೇ ಇರುವುದರಿಂದ ಕರ್ಮವನ್ನು ಕಳೆಯಲಾಗುವುದಿಲ್ಲ.)

ಬ್ರಾಹ್ಮಣೋತ್ತಮನೇ! ನಾನು ಕ್ರೂರಕಾರ್ಯವನ್ನು ಮಾಡುತ್ತಿರುವೆ ನೆಂದು ನೀನು ಭಾವಿಸಿರುವೆಯಲ್ಲವೇ? ಪ್ರಪಂಚದಲ್ಲಿ ಕ್ರೂರಕರ್ಮಗಳನ್ನು ಮಾಡದವರಾರು? ಪ್ರಾಣಿವಧೆಯನ್ನು ಮಾಡದಿರುವವರು ಯಾರಿದ್ದಾರೆ?

**ಕೃಷಿಂ ಸಾಧ್ವಿತಿ ಮನ್ಯನ್ತೇ ತತ್ರ ಹಿಂಸಾ ಪರಾ ಸ್ಮೃತಾ ।**
**ಕರ್ಷನ್ತೋ ಲಾಙ್ಗಲೈ ಪಂಸೋ ಘ್ನನ್ತಿ ಭೂಮಿಶಯಾನ್ಬಹೂನ್ ।**
**ಜೀವಾನನ್ಯಾಂಶ್ಚ ಬಹುಶಸ್ತತ್ರ ಕಿಂ ಪ್ರತಿಭಾತಿ ತೇ ॥೨೩॥**

**ಧಾನ್ಯಬೀಜಾನಿ ಯಾನ್ಯಾಹುರ್ವ್ರೀಹ್ಯಾದೀನಿ ದ್ವಿಜೋತ್ತಮ ।**
**ಸರ್ವಾಣ್ಯೇತಾನಿ ಜೀವಾನಿ ತತ್ರ ಕಿಂ ಪ್ರತಿಭಾತಿ ತೇ ॥೨೪॥**

ಬ್ರಾಹ್ಮಣೋತ್ತಮ! ಕೃಷಿಮಾಡುವುದು, ಕೃಷಿಯಿಂದ ಜೀವಿಸುವುದು ಸದ್ವೃತ್ತಿಯೆಂದು ಎಲ್ಲರೂ ಹೇಳುತ್ತಾರಲ್ಲವೇ? ಜನಜೀವನಕ್ಕೆ ಕೃಷಿಯು ಬಹುಮುಖ್ಯವಾದುದು. ಆದರೆ ಕೃಷಿಯನ್ನು ಮಾಡುವಾಗ ಮಾನವರು ನೇಗಿಲಿನಿಂದ ಉಳಬೇಕಲ್ಲವೇ? ಹಾಗೆ ಉಳುವಾಗ ಭೂಮಿಯಲ್ಲಿರುವ ಸಾವಿರಾರು ಪ್ರಾಣಿಗಳ ಕೊಲೆಗೆ ಅವರು ಕಾರಣರಾಗುತ್ತಾರೆ. ಸಾವಿರಾರು ಹುಳುಗಳೂ ಇನ್ನೂ ಅನೇಕ ಸಣ್ಣ-ಸಣ್ಣ ಇರುವೆ ಮೊದಲಾದ ಪ್ರಾಣಿಗಳೂ ಸತ್ತು ಹೋಗುತ್ತವೆ. ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು?

ಇದೂ ಕೊಲೆಯಲ್ಲದೇ ಕ್ರೂರಕರ್ಮವಲ್ಲದೇ ಮತ್ತೇನೆಂದು ನಿನಗನಿಸುತ್ತದೆ? ಸಸ್ಯಾಹಾರವು ಮಾತ್ರ ಯಾವ ವಿಧವಾದ ಕ್ರೌರ್ಯಕ್ಕೂ ಒಳಪಟ್ಟಿಲ್ಲವೆಂದು ಭಾವಿಸಿರುವೆಯಾ? ಅದೂ ಪ್ರಾಣಿಹಿಂಸೆಯೆಂದೇ ನನ್ನ ಭಾವನೆಯಾಗಿದೆ. ವ್ರೀಹಿ-ಯವಾದಿಗಳನ್ನು ಧಾನ್ಯಬೀಜಗಳೆಂದು ಹೇಳುವರಲ್ಲವೇ? ಅವೂ ಜೀವರಾಶಿಗಳೇ ಆಗಿವೆ. ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು?

**ಅಧ್ಯಾಕ್ರಮ್ಯ ಪಶೂಂಶ್ಚಾಪಿ ಘ್ನನ್ತಿ ವೈ ಭಕ್ಷಯನ್ತಿ ಚ ।**
**ವೃಕ್ಷಾಂಸ್ತಥೌಷಧೀಶ್ಚಾಪಿ ಛಿನ್ದನ್ತಿ ಪುರುಷಾ ದ್ವಿಜ ॥೨೫॥**

**ಜೀವಾ ಹಿ ಬಹವೋ ಬ್ರಹ್ಮನ್ವೃಕ್ಷೇಷು ಚ ಫಲೇಷು ಚ ।**
**ಉದಕೇ ಬಹವಶ್ಚಾಪಿ ತತ್ರ ಕಿಂ ಪ್ರತಿಭಾತಿ ತೇ ॥೨೬॥**

ಬೇಟೆಗಾರರು ಮೃಗಗಳನ್ನು ಬೇಟೆಯಾಡಿ ಕೊಂದು ಅವುಗಳ ಮಾಂಸವನ್ನು ಭಕ್ಷಿಸುತ್ತಾರೆ. ಅಂತೆಯೇ ಕೆಲವರು ಅನೇಕವೃಕ್ಷಗಳನ್ನೂ, ಔಷಧಿಲತೆಗಳನ್ನೂ (ಸಸ್ಯಗಳನ್ನೂ) ಕತ್ತರಿಸುತ್ತಾರೆ. ವೃಕ್ಷ-ಲತೆಗಳೂ ಜೀವಿಗಳೇ ಆಗಿವೆ. ಅವುಗಳಲ್ಲಿರುವ ಫಲಗಳಲ್ಲಿಯೂ ಅನೇಕಾನೇಕ ಜೀವಿಗಳಿರುತ್ತವೆ.

ನಾವು ಕುಡಿಯುವ ನೀರಿನಲ್ಲಿಯೂ ಅನೇಕಾನೇಕ ಕ್ರಿಮಿಗಳಿರುತ್ತವೆ. ಆದುದರಿಂದ ಜಲಪಾನ-ಫಲಭಕ್ಷಣಗಳಿಂದಲೂ ಕ್ರೂರಕರ್ಮವನ್ನೇ ಮಾಡಿದಂತಾಗುವುದೆಂದೂ, ಅದೂ ಸಹ ಜೀವಹಿಂಸೆಯಲ್ಲದೇ ಬೇರೆಯಲ್ಲವೆಂದೂ ನನಗೆ ಭಾಸವಾಗುತ್ತದೆ. ಈ ವಿಷಯದಲ್ಲಿ ನಿನಗೆ ಹೇಗೆ ತೋರುತ್ತದೆ? ವಿಪ್ರೋತ್ತಮನೇ! ಒಂದೇ ಮಾತಿನಲ್ಲಿ ಹೇಳುವುದಾದರೆ.

**ಸರ್ವಂ ವ್ಯಾಪ್ತಮಿದಂ ಬ್ರಹ್ಮನ್ಪ್ರಾಣಿಭಿಃ ಪ್ರಾಣಿಜೀವನೈಃ ।**
**ಮತ್ಸ್ಯಾನ್ಗ್ರಸನ್ತೇ ಮತ್ಸ್ಯಾಶ್ಚ ತತ್ರ ಕಿಂ ಪ್ರತಿಭಾತಿ ತೇ ॥೨೮॥**

ಪ್ರಾಣಿಗಳಿಂದಲೇ ಜೀವಿಸಬೇಕಾಗಿರುವ ಪ್ರಾಣಿಗಳಿಂದ ವಿಶ್ವವೇ ತುಂಬಿಹೋಗಿರುವುದು. ದೊಡ್ಡ-ದೊಡ್ಡ ಮೀನುಗಳು ಚಿಕ್ಕ ಮೀನುಗಳನ್ನೇ ತಿಂದು ಜೀವಿಸುತ್ತವೆ. ಆದುದರಿಂದ ಪ್ರಪಂಚದಲ್ಲಿರುವ ಪ್ರಾಣಿಗಳೆಲ್ಲವೂ ಮತ್ತೊಂದು ಪ್ರಾಣಿಯನ್ನು ತಿನ್ನುವುದರಿಂದಲೇ ಜೀವಿಸಿರುವುದು ಸಾಧ್ಯವಾಗಿದೆಯೆಂದು ನನಗೆ ಭಾಸವಾಗುತ್ತದೆ. ನಿನಗೆ ಈ ವಿಷಯವು ಹೇಗೆ ಭಾಸವಾಗುತ್ತದೆ?

**ಸತ್ತ್ವೈಃ ಸತ್ತ್ವಾನಿ ಜೀವನ್ತಿ ಬಹುಧಾ ದ್ವಿಜಸತ್ತಮ ।**
**ಪ್ರಾಣಿನೋಽನ್ಯೋನ್ಯಭಕ್ಷಾಶ್ಚ ತತ್ರ ಕಿಂ ಪ್ರತಿಭಾತಿ ತೇ ॥೨೯॥**

ಒಂದು ಪ್ರಾಣಿಯ ಸತ್ತ್ವದಿಂದ ಮತ್ತೊಂದು ಪ್ರಾಣಿಯು ಜೀವಿಸು ತ್ತದೆ. ಪ್ರಾಣಿಗಳು ಯಾವಾಗಲೂ ಪರಸ್ಪರ ಭಕ್ಷಣಮಾಡುತ್ತವೆ ಮತ್ತು ಅದರಿಂದಲೇ ಜೀವಿಸಿರುತ್ತವೆ. ಈ ವಿಷಯವು ನಿನಗೆ ಹೇಗೆ ಭಾಸವಾಗು ತ್ತದೆ?

(ದೊಡ್ಡ-ದೊಡ್ಡ ಪ್ರಾಣಿಗಳನ್ನು ಕೊಲ್ಲುವ ಸಮಯದಲ್ಲಿ ಅವುಗಳು ಹಿಂಸೆಪಡುತ್ತಿರುವುದು ಪ್ರತ್ಯಕ್ಷವಾಗಿಯೇ ಕಾಣುವುದರಿಂದ ಪ್ರಾಣಿಹಿಂಸೆಯು ವ್ಯಾಕುಲವು ಮನಸ್ಸಿಗುಂಟಾಗುತ್ತದೆ. ಅದೇ ಒಬ್ಬ ಮನುಷ್ಯನು ಅನುದಿನವೂ ನೂರಾರು ಚಿಕ್ಕ-ಪುಟ್ಟ ಪ್ರಾಣಿಗಳನ್ನು ವಿನಾಶಗೊಳಿಸುತ್ತಿದ್ದರೂ–ಆ ಚಿಕ್ಕ ಪ್ರಾಣಿಗಳು ಅವನ ಕಣ್ಣಿಗೆ ಕಾಣದೇ ಇರುವುದರಿಂದ ಮನುಷ್ಯನ ಮನಸ್ಸಿಗೆ ಪ್ರಾಣಿಹಿಂಸೆಯ ವ್ಯಾಕುಲವುಂಟಾಗುವುದಿಲ್ಲ. ಜಿರಲೆ, ಸೊಳ್ಳೆ, ತಿಗಣೆ–ಇವು

ಗಳನ್ನು ಕೊಲ್ಲುವಾಗಲಂತೂ ಮಾನವನಿಗೆ ಅವುಗಳೂ ಪ್ರಾಣಿಗಳು–ಅವು ಗಳಲ್ಲಿಯೂ ಪ್ರಾಣವಿರುತ್ತದೆ–ಎಂಬ ಭಾವನೆಯೇ ಬರುವುದಿಲ್ಲ.)

**ಚಜ ಮ್ಯಮಾಣಾ ಜೀವಾಂಶ್ಚ ಧರಣೀಸಂಶ್ರಿತಾನ್ಬಹೂನ್ ।**
**ಪದ್ಭ್ಯಾಂ ಘ್ನನ್ತಿ ನರಾ ವಿಪ್ರ ತತ್ರ ಕಿಂ ಪ್ರತಿಭಾತಿ ತೇ ॥೨೯॥**

ಮನುಷ್ಯರು ಅತ್ತಿಂದಿತ್ತ ನಡೆಯುವಾಗ ಭೂಮಿಯ ಆಶ್ರಯವನ್ನು ಪಡೆದಿರುವ ನೂರಾರು–ಸಾವಿರಾರು ಪ್ರಾಣಿಗಳನ್ನು ಪಾದಾಘಾತಗಳಿಂದ ಕೊಲ್ಲುತ್ತಲೇ ಇರುತ್ತಾರೆ. ಇದು ಪ್ರಾಣಿಹಿಂಸೆಯಲ್ಲವೇ? ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು?

**ಉಪವಿಷ್ಟಾಃ ಶಯಾನಾಶ್ಚ ಘ್ನನ್ತಿ ಜೀವಾನನೇಕಶಃ ।**
**ಜ್ಞಾನವಿಜ್ಞಾನವನ್ತಶ್ಚ ತತ್ರ ಕಿಂ ಪ್ರತಿಭಾತಿ ತೇ ॥೩೦॥**

ಜ್ಞಾನಿಗಳು ಅಥವಾ ವಿಜ್ಞಾನಿಗಳು ಎಂಬ ತಾರತಮ್ಯವೇ ಇಲ್ಲದೇ ಅಹಿಂಸೋಪಾಸಕರೂ ಸಹ ಕುಳಿತಾಗ, ಮಲಗಿದಾಗ ಅನೇಕಾನೇಕ ಜೀವ ರಾಶಿಗಳನ್ನೇ ಕೊಲ್ಲುತ್ತಿರುತ್ತಾರೆ. (ಇದನ್ನು ನೀನು ಅಹಿಂಸೆಯೆಂದು ಪರಿ ಗಣಿಸುವೆಯಾ?) ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು?

**ಜೀವೈರ್ಗ್ರಸ್ತಮಿದಂ ಸರ್ವಮಾಕಾಶಂ ಪೃಥಿವೀ ತಥಾ ।**
**ಅವಿಜ್ಞಾನಾಚ್ಚ ಹಿಂಸನ್ತಿ ತತ್ರ ಕಿಂ ಪ್ರತಿಭಾತಿ ತೇ ॥೩೧॥**

ಭೂಮಿ ಮತ್ತು ಆಕಾಶಗಳು ಅಣುರೂಪದಿಂದ ಹಿಡಿದು ಬೃಹದ್ರೂಪ ದವರೆಗಿನ ಕೋಟ್ಯಂತರ ಪ್ರಾಣಿಗಳಿಂದ ತುಂಬಿಹೋಗಿರುವುದು. ಇಷ್ಟು ಪ್ರಾಣಿಗಳಿವೆಯೆಂಬ ತಿಳುವಳಿಕೆಯಾದರೂ ಮನುಷ್ಯರಿಗಿರುವುದಿಲ್ಲ. ತಿಳಿಯ ದೆಯೇ ಅವರು ಸಾವಿರಾರು ಪ್ರಾಣಿಗಳನ್ನು ಅನುದಿನವೂ ಕೊಲ್ಲುತ್ತಿರುತ್ತಾರೆ. ಈ ಕಾರಣದಿಂದ ಒಂದು ಪ್ರಾಣಿಯು ಮತ್ತೊಂದನ್ನು ಹಿಂಸಿಸದೇ ಜೀವಿ ಸಲು ಸಾಧ್ಯವೇ ಇಲ್ಲವೆಂದು ನನಗೆ ಭಾಸವಾಗುತ್ತದೆ. ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು?

**ಅಹಿಂಸೇತಿ ಯದುಕ್ತಂ ಹಿ ಪುರುಷೈರ್ವಿಸ್ಮಿತೈಃ ಪುರಾ ।**

**ಕೇ ನ ಹಿಂಸನ್ತಿ ಜೀವಾನ್ವೈ ಲೋಕೇಽಸ್ಮಿನ್ದ್ವಿಜಸತ್ತಮ ।**
**ಬಹು ಸಂಚಿನ್ತ್ಯ ಇತಿ ವೈ ನಾಸ್ತಿ ಕಶ್ಚಿದಹಿಂಸಕಃ ॥೩೨॥**

ತ್ಯಾಗಶೀಲರಾದ ಋಷಿ-ಮಹರ್ಷಿಗಳಿಂದ ಅಹಿಂಸಾತತ್ತ್ವವು ಪ್ರತಿಪಾದಿತವಾಗಿರುವುದು ನಿಶ್ಚಯ. ಆದರೆ ಹಿರಿಯರು ಹೇಳಿರುವ ಅಹಿಂಸಾವ್ರತದ ರಹಸ್ಯವೇನೆಂಬುದನ್ನು ನಾವು ತಿಳಿದುಕೊಳ್ಳಬೇಕಾಗಿದೆ. ಸ್ಥೂಲಪದೃಷ್ಟಿ ಯಿಂದ ನೋಡಿದರೆ ಈ ಲೋಕದಲ್ಲಿ ಪ್ರಾಣಹಿಂಸೆಯನ್ನು ಮಾಡದವನು ಯಾವನಾದರೂ ಇದ್ದಾನೆಯೇ? ಬ್ರಾಹ್ಮಣಸತ್ತಮನೇ! ನಾನು ಬಹು ಪ್ರಕಾರವಾಗಿ ಸಮಾಲೋಚಿಸಿ ಈ ವಿಶ್ವದಲ್ಲಿಯೇ ಅಹಿಂಸಕನು ಇಲ್ಲವೇ ಇಲ್ಲವೆಂಬ ನಿರ್ಧಾರಕ್ಕೆ ಬಂದಿರುವೆನು. ಇದಕ್ಕೆ ನಾನು ಮೇಲೆ ಹೇಳಿರುವ ನಿರೂಪಣೆಗಳೇ ಕಾರಣಗಳಾಗಿವೆ.

**ಅಹಿಂಸಾಯಾಂ ತು ನಿರತಾ ಯತಯೋ ದ್ವಿಜಸತ್ತಮ ।**
**ಕುರ್ವನ್ತ್ಯೇವ ಹಿ ಹಿಂಸಾಂ ತೇ ಯತ್ನಾದಲ್ಪತರಾ ಭವೇತ್ ॥೩೩॥**

ಅಹಿಂಸಾವ್ರತಧಾರಿಗಳಾದ ಯತಿಗಳೇ ಹಿಂಸೆಮಾಡುತ್ತಾರೆ. (ಅವರ ಕುಳಿತುಕೊಳ್ಳುವಾಗ ಮಲಗುವಾಗ ಅನೇಕಪ್ರಾಣಿಗಳ ವಧೆಯೇ ಆಗುತ್ತದೆ.) ಆದರೆ ಅವರು ಚಿಕ್ಕ-ಪುಟ್ಟ ಪ್ರಾಣಿಗಳಿವೆಯೆಂಬುದನ್ನು ಗಮನಿಸಿ ಜಾಗರೂಕರಾಗಿ ಪದಚಲನೆಮಾಡುವ ಕಾರಣ ಪ್ರಾಣಿಗಳ ಹಿಂಸೆಯು ಸ್ವಲ್ಪ ಕಡಿಮೆಯಾಗಬಹುದು. (ಅಷ್ಟೇ ಹೊರತಾಗಿ ಪ್ರಾಣಿಗಳ ವಧೆಯೇ ಆಗುವುದಿಲ್ಲವೆಂದು ಖಂಡಿತವಾಗಿಯೂ ಹೇಳುವ ಸಾಧ್ಯತೆಯಿಲ್ಲ.)

**ಆಲಕ್ಷ್ಯಾಶ್ಚೈವ ಪುರುಷಾಃ ಕುಲೇ ಜಾತಾ ಮಹಾಗುಣಾಃ ।**
**ಮಹಾಘೋರಾಣಿ ಕರ್ಮಾಣಿ ಕೃತ್ವಾ ಲಜ್ಜನ್ತಿ ವೈ ದ್ವಿಜ ॥೩೪॥**

ಬ್ರಾಹ್ಮಣೋತ್ತಮನೇ! ಚೆನ್ನಾಗಿ ತಿಳಿದವರೂ, ಸತ್ಕುಲಪ್ರಸೂತರೂ, ಮಹಾಗುಣಸಂಪನ್ನರೂ ತಮ್ಮ ಕುಲಕ್ರಮಾಗತವಾಗಿ ಬಂದ ಘೋರ ಕರ್ಮವನ್ನು ಲಕ್ಷ್ಯವಿಲ್ಲದೇ ಮಾಡುತ್ತಲೇ ಇರುತ್ತಾರೆ. ಇದರಿಂದಾಗಿ ಅವರು ಲಜ್ಜಿತರಾಗುವರೇ? ಇಲ್ಲ. ಬೇರೆಯವರಿಗೆ ಅದು ಕ್ರೂರಕರ್ಮವಾಗಿ

ಕಂಡುಬಂದರೂ ಕುಲಕ್ರಮಾಗತವಾಗಿ ಬಂದಿರುವ ಆ ಕ್ರೂರವೃತ್ತಿಯೇ ಶ್ರೇಷ್ಠವಾದ ವೃತ್ತಿಯೆಂಬುದು ಅವರ ನಿಶ್ಚಯವಾಗಿರುತ್ತದೆ.

**ಸುಹೃದಃ ಸುಹೃದೋಽನ್ಯಾಂಶ್ಚ ದುರ್ಹೃದಶ್ಚಾಪಿ ದುರ್ಹೃದಃ ।**
**ಸಮ್ಯಕ್ಪ್ರವೃತ್ತಾನ್ಪುರುಷಾನ್ನ ಸಮ್ಯಗನುಪಶ್ಯತಃ ॥೩೫॥**

**ಸಮೃದ್ಧೈಶ್ಚ ನ ನನ್ದನ್ತಿ ಬಾನ್ಧವಾ ಬಾನ್ಧವೈರಪಿ ।**
**ಗುರೂಂಶ್ಚೈವ ವಿನಿನ್ದನ್ತಿ ಮೂಢಾಃ ಪಣ್ಡಿತಮಾನಿನಃ ॥೩೬॥**

**ಬಹು ಲೋಕೇ ವಿಪರ್ಯಸ್ತಂ ದೃಶ್ಯತೇ ದ್ವಿಜಸತ್ತಮ ।**
**ಧರ್ಮಯುಕ್ತಮಧರ್ಮಂ ಚ ತತ್ರ ಕಿಂ ಪ್ರತಿಭಾತಿ ತೇ ॥೩೭॥**

ಸತ್ಪುರುಷರಲ್ಲಿಯೂ ಏಕಾಭಿಪ್ರಾಯವಿರುವುದಿಲ್ಲ. ಅವರಲ್ಲಿಯೂ ನಾನಾಪಂಥದವರಿರುತ್ತಾರೆ. ಒಬ್ಬರ ಪಂಥವು ಮತ್ತೊಬ್ಬರಿಗೆ ಸರಿಹೊಂದದೆಯೂ ಇರಬಹುದು. ದುರ್ಜನರ ವಿಷಯವೂ ಅಷ್ಟೇ. ಎಲ್ಲ ದುರ್ಜನರೂ ಒಂದೇ ಭಾವನೆಯನ್ನು ಹೊಂದಿರಲಾರರು. ಅವರಲ್ಲಿಯೂ ಅನೇಕ ವಿಧವಾದ ಭೇದ-ಭಾವನೆಗಳಿರುತ್ತವೆ ಮತ್ತು ಕಾರ್ಯಗಳಲ್ಲಿಯೂ ಏರು-ಪೇರುಗಳಿರುತ್ತವೆ. ಸದಾಚಾರಸಂಪನ್ನರಾಗಿದ್ದರೂ ಅವರು ತಮಗಾಗದವರಾಗಿದ್ದರೆ ಅಂತಹವರನ್ನು ಜನರು ಒಳ್ಳೆಯ ದೃಷ್ಟಿಯಿಂದ ನೋಡುವುದಿಲ್ಲ. ಅರ್ಥಾತ್ ಪ್ರಪಂಚದಲ್ಲಿರುವ ಸರ್ವಜನರೂ–'ತಾವು ಆಚರಿಸುತ್ತಿರುವ ಧರ್ಮವೊಂದೇ ಸರಿಯಾದುದು. ಇತರರು ಆಚರಿಸುವುದೆಲ್ಲವೂ ಸರಿಯಲ್ಲ'–ಎಂಬ ಭಾವನೆಯನ್ನೇ ಸಾಮಾನ್ಯವಾಗಿ ಹೊಂದಿರುತ್ತಾರೆ. ನೆಂಟರಿಷ್ಟರಲ್ಲಿಯೇ ಹೊಡೆದಾಟಗಳು ನಡೆಯುತ್ತಿರುತ್ತವೆ. ತಮ್ಮಲ್ಲಿ ಒಬ್ಬನು ಉಚ್ಛ್ರಾಯಸ್ಥಿತಿಯಲ್ಲಿರುವುದನ್ನು ಅವರು ಸಹಿಸುವುದಿಲ್ಲ. ಅಸೂಯೆಪಡುತ್ತಾರೆ. ದ್ವೇಷಿಸುತ್ತಾರೆ. ಐಶ್ವರ್ಯವಂತರ ವಿಷಯದಲ್ಲಿ ಇತರರ ಅಸೂಯೆ-ಪ್ರಕೋಪಗಳು ಇದ್ದೇ ಇರುತ್ತವೆ. ಮೂಢರಾದವರು, ತಾವೇ ಸರ್ವಜ್ಞರೆಂದು ಭಾವಿಸಿರುವವರು ತಮಗೆ ಪಾಠಹೇಳಿಕೊಟ್ಟ ಗುರುಗಳನ್ನೇ ನಿಂದಿಸು ತ್ತಾರೆ. ಆದುದರಿಂದ ಈ ಲೋಕದಲ್ಲಿ ಸರ್ವತ್ರ ವಿಪರ್ಯಾಸವೇ ಗೋಚರವಾಗುತ್ತಿದೆ. ಅಧರ್ಮವೇ ಧರ್ಮಯುಕ್ತವಾಗಿದೆಯೆಂದು ನನಗೆ ಭಾಸವಾಗುತ್ತಿದೆ. ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು?

**ವಕ್ತುಂ ಬಹುವಿಧಂ ಶಕ್ಯಂ ಧರ್ಮಾಧರ್ಮೇಷು ಕರ್ಮಸು ।**
**ಸ್ವಕರ್ಮನಿರತೋ ಯೋ ಹಿ ಸ ಯಶಃ ಪ್ರಾಪ್ನುಯಾನ್ಮಹತ್ ॥**

ಕೌಶಿಕನೇ! ಧರ್ಮಾಧರ್ಮವಿಷಯಗಳಲ್ಲಿ ಬಹುವಿಧವಾಗಿ ಮಾತನಾಡಬಹುದು. (ತರ್ಕಬುದ್ಧಿಯಿದ್ದಷ್ಟೂ ಮತ್ತಷ್ಟೂ ವಿಸ್ತರಿಸಿ ಮಾತನಾಡಬಹುದು. ಆದರೆ ಈ ವಿಧವಾದ ತರ್ಕದಿಂದಾಗಲೀ, ಮಾತಿನಿಂದಾಗಲೀ ಹೆಚ್ಚು ಪ್ರಯೋಜನವಿಲ್ಲ.) ಯಾವನು ತನ್ನ ಕುಲಕ್ಕೆ ಯೋಗ್ಯವಾದ ಕರ್ಮದಲ್ಲಿಯೇ ನಿರತನಾಗಿರುವನೋ–ಅವನು ಮಹತ್ತರವಾದ ಯಶಸ್ಸನ್ನು ಗಳಿಸುತ್ತಾನೆಂಬುದೇ ನನ್ನ ನಿರ್ಧಾರವಾಗಿದೆ.”

೨೦೮ನೆಯ ಅಧ್ಯಾಯವು ಮುಗಿಯಿತು.

ಆರನೆಯ ಸಂಪುಟವು ಮುಗಿಯಿತು.

**ಸ್ವಸ್ತಿ ಪ್ರಜಾಭ್ಯಃ ಪರಿಪಾಲಯನ್ತಾಂ**
**ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ ।**
**ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ**
**ಲೋಕಾಃ ಸಮಸ್ತಾಃ ಸುಖಿನೋ ಭವನ್ತು ॥**

**ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ ।**
**ದೇಶೋಽಯಂ ಕ್ಷೋಭರಹಿತೇ ಬ್ರಾಹ್ಮಣಾಃ ಸನ್ತು ನಿರ್ಭಯಾಃ ॥**

**ಅಪುತ್ರಾಃ ಪುತ್ರಿಣಃ ಸನ್ತು ಪುತ್ರಿಣಃ ಸನ್ತು ಪೌತ್ರಿಣಃ ।**
**ಅಧನಾಃ ಸಧನಾಃ ಸನ್ತು ಜೀವನ್ತು ಶರದಾಂ ಶತಮ್ ॥**

ಶ್ರೀಕೃಷ್ಣಾರ್ಪಣಮಸ್ತು

ಶ್ರೀಸದ್ಗುರುಚರಣಾರವಿಂದಾರ್ಪಣಮಸ್ತು

ಓಂ ತತ್ಸತ್



# ಪರಿಶಿಷ್ಟ

ರಾಜ್ಞೋ ಮಹಾನಸೇ ಎಂಬ ಶ್ಲೋಕದಿಂದ ಸೌದಾಸೇನ ತದಾ (ಅಧ್ಯಾಯ ೨೦೮-ಶ್ಲೋಕ-೮ರಿಂದ ೧೬) ಎಂಬ ಶ್ಲೋಕದವರೆಗೆ ಇರುವ ಒಂಬತ್ತು ಶ್ಲೋಕಗಳು ಗೀತಾಮುದ್ರಣಾಲಯ, ಗೋರಖಪುರದವರು ಪ್ರಕಟಿಸಿರುವ ಮಹಾಭಾರತದಲ್ಲಿರುವುದಿಲ್ಲ. ಅವರು ಸಾಮಾನ್ಯವಾಗಿ ಉಪ ಲಬ್ಧವಾಗಿರುವ ಪಾಠಾಂತರಗಳೆಲ್ಲವನ್ನೂ ಕೊಟ್ಟು ಪ್ರಕ್ಷಿಪ್ತವೆಂದು ಸೂಚಿ ಸುವ ಸಲುವಾಗಿ ಆವರಣದಲ್ಲಿ ಕೊಡುತ್ತಾರೆ. ಆದರೆ ಈ ಒಂಬತ್ತು ಶ್ಲೋಕ ಗಳನ್ನು ಪ್ರಕ್ಷಿಪ್ತದ ಸಾಲಿಗೂ ಸೇರಿಸದೇ ಬಿಟ್ಟಿರುವುದು ಗಮನಾರ್ಹವಾಗಿದೆ. ನೀಲಕಂಠೀಯವ್ಯಾಖ್ಯಾನವಿರುವ ಕುಂಭಕೋಣದ ಪ್ರತಿಯಲ್ಲಿಯೂ ಈ ಪಾಠವಿದೆ. ಆದರೆ ಈ ಒಂಬತ್ತು ಶ್ಲೋಕಗಳಿಗೆ ನೀಲಕಂಠರ ವ್ಯಾಖ್ಯಾನವಿಲ್ಲ. ಆದರೆ ಮುಂದಿನ ಶ್ಲೋಕದಲ್ಲಿ ನೀಲಕಂಠರು ರಂತಿದೇವನ ಪ್ರಸ್ತಾಪಮಾಡಿ ರುವುದರಿಂದ ವ್ಯಾಖ್ಯಾನಕಾರರ ಗಮನಕ್ಕೂ ಈ ಶ್ಲೋಕಗಳು ಬಂದಿವೆ ಯೆಂದು ಅರ್ಥವಾಗುತ್ತದೆ.

ಪೂನಾದ ಭಂಡಾರ್‌ಕರ್ ರಿಸರ್ಚ್ ಸಂಸ್ಥೆಯವರು ಪ್ರಕಟಿಸಿರುವ ಮಹಾಭಾರತದಲ್ಲಿಯೂ ಈ ಪಾಠವಿದೆ. ಆದರೆ ಸ್ವಲ್ಪ ವ್ಯತ್ಯಾಸವಿದೆ. ಕಲ್ಕತ್ತಾದ ಪ್ರತಾಪಚಂದ್ರರಾಯ್‌ರವರು ಪ್ರಕಟಿಸಿರುವ ಆಂಗ್ಲಭಾಷಾಂತರದ ಮಹಾಭಾರತದಲ್ಲಿಯೂ ಈ ಪಾಠವಿದೆ. ಈ ಪ್ರಕರಣದಲ್ಲಿ ಜಿಜ್ಞಾಸೆಗೆ ವಿಷಯವಾದ ಶ್ಲೋಕಗಳೆಂದರೆ :

ರಾಜ್ಞೋ ಮಹಾನಸೇ ಪೂರ್ವಂ ರನ್ತಿದೇವಸ್ಯ ವೈ ದ್ವಿಜ ।
ದ್ವೇ ಸಹಸ್ರೇ ತು ವಧ್ಯೇತೇ ಪಶೂನಾಮನ್ವಹಂ ತದಾ ॥೭॥

(ಅಹನ್ಯಹನಿ ವಧ್ಯೇತೇ ದ್ವೇ ಸಹಸ್ರೇ ಗವಾಂ ತಥಾ)
ಸಮಾಂಸಂ ದದತೋ ಹ್ಯನ್ನಂ ರನ್ತಿದೇವಸ್ಯ ನಿತ್ಯಶಃ ॥೮॥

ಅತುಲಾ ಕೀರ್ತಿರಭವನ್ನೃಪಸ್ಯ ದ್ವಿಜಸತ್ತಮ ।
ಚಾತುರ್ಮಾಸ್ಯೇ ಚ ಪಶವೋ ವಧ್ಯನ್ತ ಇತಿ ನಿತ್ಯಶಃ ॥೯॥

ಈ ಶ್ಲೋಕಗಳನ್ನು ಪುಷ್ಟೀಕರಿಸಲೋ ಎಂಬಂತೆ ಶಾಂತಿಪರ್ವದ ಇಪ್ಪತ್ತೊಂಬತ್ತನೆಯ ಅಧ್ಯಾಯದ ೧೨೩ನೆಯ ಶ್ಲೋಕವು ಈ ರೀತಿಯಾಗಿದೆ.

**ಮಹಾನದೀ ಚರ್ಮರಾಶೇರುತ್ಕ್ಲೇದಾತ್ಸುಜತೇ ಯತಃ ।**
**ತತಶ್ಚರ್ಮಣ್ವತೀತ್ಯೇವಂ ವಿಖ್ಯಾತಾ ಸಾ ಮಹಾನದೀ ॥**

ಈ ಶ್ಲೋಕಗಳು 'ಪ್ರಾಚೀನಭಾರತದಲ್ಲಿ ಗೋಮಾಂಸದ ಭಕ್ಷಣೆ ಯಿತ್ತು' ಎಂಬುದನ್ನು ಪ್ರತಿಪಾದಿಸುವವರಿಗೆ ಆಧಾರಭೂತವಾದ ಶ್ಲೋಕ ಗಳಾಗಿ ಪರಿಗಣಿತವಾಗಿವೆ.

ರಾಜಾ ರಾಜೇಂದ್ರಲಾಲ್ ಮಿತ್ರ ಇವರು ಬರೆದಿರುವ `Beef in Ancient India' ಎಂಬ ಪುಸ್ತಕದ ಪೀಠಿಕೆಯಲ್ಲಿ ಈ ಮೇಲಿನ ಶ್ಲೋಕ ವನ್ನುದ್ಧರಿಸಿ ಹೇಗೆ ಹೇಳಿದ್ದಾರೆ.

`According to Mahabharatha 2,000 cows used to be slaughtered everyday at King Rantideva's palace to entertain guests'

ಭಾರತೀಯ ವಿದ್ಯಾಭವನ–ಮುಂಬೈ ಇವರು ಪ್ರಕಟಿಸಿರುವ The History and Culture of the Indian People' ಎಂಬ ಪುಸ್ತಕದ ಎರಡನೆಯ ಭಾಗದ 579ನೇ ಪುಟದಲ್ಲಿ ಮೇಲಿನ ಶ್ಲೋಕವನ್ನು ಉದ್ಧರಿಸದೇ ಹೀಗೆ ಹೇಳಿದ್ದಾರೆ :

`According to Mahabharatha is King called Ranti- deva killed everyday two thousand cattle and two thousand kine in order to dole out meat to his people.'

ರಾಹುಲ್ ಸಂಕೃತ್ಯಾಯನ ಎಂಬುವರು 'ವೋಲ್ಗಾಸೇ ಗಂಗಾ' ಎಂಬ ಹಿಂದೀ ಪುಸ್ತಕದಲ್ಲಿ 'ಮಹಾನದೀಚರ್ಮರಾಶೇಃ' ಎಂಬ ಶ್ಲೋಕದ ಅರ್ಥವನ್ನು ಹೀಗೆ ಮಾಡಿದ್ದಾರೆ. ಅದರ ಇಂಗ್ಲಿಷ್ ಭಾಷಾಂತರವು ಈ ರೀತಿಯಾಗಿದೆ.

``From the undried raw hide of 2,000 cows which used to be killed every day in the kitchen of King Rantideva and stored there liquids oozed out which became a river which was named `Carmanvati' due to its being accumulated from the carma (hide) of the cows".

ಆದರೆ ಮಹಾನದೀ ಚರ್ಮರಾಶೇಃ–ಎಂಬ ಶ್ಲೋಕವು ಶಾಂತಿಪರ್ವದಲ್ಲಿದೆ. 'ರಾಜ್ಞೋ ಮಹಾನಸೇ ಪೂರ್ವಂ' ಎಂಬುದು ವನಪರ್ವದಲ್ಲಿದೆ. ಇದನ್ನು ನಾವಿಲ್ಲಿ ಮುಖ್ಯವಾಗಿ ಗಮನಿಸಬೇಕಾಗಿದೆ. 'ಮಹಾನದೀ ಚರ್ಮರಾಶೇಃ'–ಎಂಬ ಶ್ಲೋಕವನ್ನು ಯಾವ ಸಂದರ್ಭದಲ್ಲಿ ಹೇಳಿದೆ? ಸಂದರ್ಭಾನುಸಾರವಾಗಿ ಹೇಗೆ ಅರ್ಥವಾಗುತ್ತದೆ? ಎಂಬುದನ್ನು ಅನಂತರ ಪರಿಶೀಲಿಸಬಹುದಾಗಿದೆ.

ಆಂಗ್ಲಭಾಷಾಭಿಮಾನಿಗಳ ಈ ವ್ಯಾಖ್ಯಾನಗಳು ಆಂಗ್ಲಪಂಡಿತರ ಹೆಜ್ಜೆಯನ್ನೇ ಅನುಸರಿಸುವುದಾಗಿದ್ದು ವಿವೇಕವೇ ಇಲ್ಲದೇ ಮಾಡಿರುವ ವ್ಯಾಖ್ಯಾನಗಳೆಂದು ವಿಷಾದದಿಂದ ಹೇಳಬೇಕಾಗಿದೆ.

'ರಾಜ್ಞೋಮಹಾನಸೇ ಪೂರ್ವಂ' ಇವೇ ಮುಂತಾದ ಶ್ಲೋಕಗಳನ್ನು ಧರ್ಮವ್ಯಾಧನು ಕೌಶಿಕನೆಂಬ ಬ್ರಾಹ್ಮಣನಿಗೆ ಹೇಳುತ್ತಾನೆ.

ಈ ಶ್ಲೋಕದ ಹಿಂದೆಯೇ ಒಂದು ಶ್ಲೋಕವಿದೆ. ಆ ಶ್ಲೋಕವು ಈ ರೀತಿಯಾಗಿದೆ.

**ಆತ್ಮಮಾಂಸಪ್ರಸಾದೇನ ಶಿಬಿರೌಶೀನರೋ ನೃಪಃ ।**
**ಸ್ವರ್ಗಂ ಸುದುರ್ಗಮಂ ಪ್ರಾಪ್ತಃ ಕ್ಷಮಾಖಾನ್ದ್ವಿಜಸತ್ತಮ ॥೭॥**

ಪುಟ್ಟಹಕ್ಕಿಯ ಪ್ರಾಣವನ್ನುಳಿಸುವ ಸಲುವಾಗಿ ಕ್ಷಮಾವಂತನಾದ ಶಿಬಿ ಚಕ್ರವರ್ತಿಯು ತನ್ನ ಮಾಂಸವನ್ನೇ ಕತ್ತರಿಸಿಕೊಟ್ಟು ಸುದುರ್ಗಮವಾದ ಮತ್ತು ಸುದುರ್ಲಭವಾದ ಸ್ವರ್ಗವನ್ನು ಪಡೆದುಕೊಂಡನು.

'ಸ್ವಮಾಂಸಾರ್ಪಣದಿಂದ ಶಿಬಿಗೆ ಸ್ವರ್ಗಪ್ರಾಪ್ತಿಯಾಯಿತು' ಎಂದು ಹೇಳುವುದು ವ್ಯಾಧನ ಉದ್ದೇಶ. ಇದು ಪರಮಹಿಂಸೆಯಲ್ಲ.

ಈ ಶ್ಲೋಕದ ನಂತರ :

ರಾಜ್ಞೋ ಮಹಾನಸೇ ಪೂರ್ವಂ–ಶ್ಲೋಕವು ಬರುತ್ತದೆ. ರಂತಿ ದೇವನ ದೊಡ್ಡ ಅಡಿಗೆಯ ಮನೆಯಲ್ಲಿ ಎರಡು ಸಾವಿರ ಪಶುಗಳನ್ನು ವಧೆಮಾಡುತ್ತಿದ್ದರು. ಪಶೂನಾಮನ್ವಹಂ ತದಾ–ಎಂಬುದಕ್ಕೇ ಹಸುಗಳನ್ನು ಎಂಬುದಾಗಿ ಬೇಕಾದರೂ ಅರ್ಥಮಾಡಬಹುದಾಗಿತ್ತು. ಆದರೆ ಗೋಮಾಂಸ ಭಕ್ಷಣೆಯಲ್ಲಿ ಇಷ್ಟವುಳ್ಳವರಿಗೆ ಇದು ಸಾಕಷ್ಟು ನೆಮ್ಮದಿಯನ್ನು ಕೊಡಲಿಲ್ಲ. ಅಹನ್ಯಹನಿ ವಧ್ಯೇತೇ ದ್ವೇ ಸಹಸ್ರೇ ಗವಾಂ ತಥಾ–ಎಂದೂ ಸೇರಿಸಿ ಕೊಳ್ಳುವಂತಾಯಿತು. ಇದು ಶ್ಲೋಕದ ಮೂರನೆಯ ಪಂಕ್ತಿಯಾಗಿರುತ್ತದೆ. ಮೇಲಾಗಿ ಭಂಡಾರ್‌ಕರ್ ರಿಸರ್ಚ್ ಸಂಸ್ಥೆಯವರು ಪ್ರಕಟಿಸಿರುವ ಮಹಾ ಭಾರತದಲ್ಲಿ ಇದನ್ನು ಮೂಲದಲ್ಲಿ ಪ್ರಕಟಿಸಿರುವುದಿಲ್ಲ. ಇದನ್ನೂ ಸಹ ನಾವು ಗಮನಿಸಬೇಕಾಗಿದೆ.

ಈ ಶ್ಲೋಕದ ಪೂರ್ಣವಿಮರ್ಶೆಗೆ ಮೊದಲು ಆಧುನಿಕ ಸಿದ್ಧಾಂತ ಗಾರರಿಗೊಂದು ಮಾತು. ಇರುವ ಸುಮಾರು ಒಂದು ಲಕ್ಷ ಶ್ಲೋಕಗಳಲ್ಲಿ ಯಾವುದೋ ಕಾರಣದಿಂದ (ಅಪಭ್ರಂಶವಾಗಿಯೋ-ಕಲ್ಪಿತವಾಗಿಯೋ) ನುಸುಳಿಕೊಂಡಿರುವ ಒಂದೆರಡು ಶ್ಲೋಕಗಳಿಗೆ–ಶ್ಲೋಕಗಳಿರುವ ಸಂದರ್ಭ ವನ್ನೂ ಪರಿಶೀಲಿಸಹೋಗದೇ–ಸಿದ್ಧಾಂತಮಾಡುವುದು ಅವಿವೇಕಪೂರ್ಣವಾ ದುದು. ಮಹಾಭಾರತದಲ್ಲಿರುವ ಅನೇಕ ಜಟಿಲಶ್ಲೋಕಗಳಿಗೆ ಈ ಮಹಾ ಶಯರು ಖಂಡಿತವಾಗಿಯೂ ಅರ್ಥಮಾಡಲಾರರು. ಇವರು ಮಹಾಭಾರತ ವನ್ನು ಆಮೂಲಾಗ್ರವಾಗಿ ಅಧ್ಯಯನಮಾಡುವ ಗೋಜಿಗೂ ಹೋಗುವು ದಿಲ್ಲ. ಕೇವಲ ಆಂಗ್ಲಭಾಷಾಂತರವನ್ನೇ ಇಟ್ಟುಕೊಂಡು ಸಿದ್ಧಾಂತಮಾಡುವ ವರೂ ಅನೇಕ ಮಂದಿ ಇದ್ದಾರೆ. ಉದಾಹರಣೆಗೆ ಒಂದನ್ನು ಮಾತ್ರ ಇಲ್ಲಿ ಸೂಚಿಸುತ್ತೇವೆ.

ಹಿಂದೆ ಸಂಯುಕ್ತಪ್ರಾಂತದಲ್ಲಿ ಡೆಪ್ಯುಟಿಸ್ಪೀಕರ್ ಆಗಿದ್ದ ಶ್ರೀ ಮುಕುಂದೀಲಾಲ್ ಎಂಬುವರು `Cow slaughter-Horns of a Dilemma' ಎಂಬ ಪುಸ್ತಕವನ್ನು ಬರೆದಿರುತ್ತಾರೆ. ತಮ್ಮ ಪುಸ್ತಕಕ್ಕೆ ಆಧಾರಭೂತವಾಗಿ ಶ್ರೀ ರಾಹುಲ್ ಸಂಕೃತ್ಯಾಯನವರ 'ವೋಲ್ಗಾಸೇ ಗಂಗಾ'–ಪುಸ್ತಕದಿಂದ ಅನೇಕವಾಕ್ಯಗಳನ್ನು ಉದ್ಧರಿಸುತ್ತಾರೆ. ಒಂದು

ಕಡೆ ಅವರ ವಾಕ್ಯಗಳನ್ನು ಉದ್ಧರಿಸುತ್ತಾ ತಮ್ಮ ಪುಸ್ತಕದಲ್ಲಿ ಹೀಗೆ ಬರೆದಿರುತ್ತಾರೆ :

**ಸಾಂಕೃತಿಂ ರನ್ತಿದೇವಂ ಚ ಮೃತಂ ಸಂಜಯ ಶುಶ್ರುಮ ।**
**ಯಸ್ಯ ದ್ವಿಶತಸಾಹಸ್ರಾ ಆಸನ್ಸೂದಾ ಮಹಾತ್ಮನಃ ।**
**ಗೃಹಾನಭ್ಯಾಗತಾನ್ವಿಪ್ರಾನತಿಥೀನ್ಪರಿವೇಷಕಾಃ ॥**

ದ್ರೋಣಪರ್ವದ 77ನೇ ಅಧ್ಯಾಯನದಲ್ಲಿ ಬರುವ ಈ ಶ್ಲೋಕಕ್ಕೆ ಶ್ರೀ ರಾಹುಲ್‌ರವರ ವ್ಯಾಖ್ಯಾನವಿದು :

Two thousand cooks were employed in the kitchen of King Rantidev to cook beef.' (ಗೋಮಾಂಸವನ್ನು ಪಕ್ವಮಾಡುವ ಸಲುವಾಗಿ ರಂತಿದೇವನ ಅಡಿಗೆಯ ಮನೆಯಲ್ಲಿ ಎರಡುಸಾವಿರ ಅಡಿಗೆಯವರಿದ್ದರು.) ಮೇಲಿನ ಶ್ಲೋಕವನ್ನು ಸಂಸ್ಕೃತವೇ ಬಾರದವರು ಓದಿದರೂ 'ಗೋಮಾಂಸ' ಎಂಬ ಶಬ್ದವೇ ಇಲ್ಲದಿರುವುದು ವೇದ್ಯವಾಗುತ್ತದೆ. ಹೀಗಿರುವಾಗ ಶ್ರೀ ರಾಹುಲ್‌ರವರು ಧೈರ್ಯವಾಗಿ `to cook beef' ಎಂದು ಸೇರಿಸಿಬಿಟ್ಟಿದ್ದಾರೆ. ಎರಡನೆಯದಾಗಿ ಶ್ಲೋಕದಲ್ಲಿ 'ದ್ವಿಶತಸಾಹಸ್ರಾಃ' ಎಂದಿದೆ. ಇದರ ಅರ್ಥ ಎರಡು ಲಕ್ಷ. ಆದರೆ ರಾಹುಲ್‌ರವರು ಎರಡು ಸಾವಿರ ಎಂದು ಅರ್ಥಮಾಡಿರುತ್ತಾರೆ. ಈ ದುರ್ಭಾಷಾಂತರವನ್ನೇ ಶ್ರೀ ಮುಕುಂದೀಲಾಲ್‌ರವರೂ ಯಥಾವತ್ತಾಗಿ ತೆಗೆದುಕೊಂಡಿರುತ್ತಾರೆ.

ಹೀಗೆ ಅರ್ಥಮಾಡುವುದು ನಮ್ಮ ಸಂಸ್ಕೃತಿಗೂ–ಈ ಮಹಾಗ್ರಂಥಕ್ಕೂ ಮಾಡುವ ದೊಡ್ಡ ಅಪಚಾರವೆಂದೇ ಹೇಳದೇ ವಿಧಿಯಿಲ್ಲ.

ಶ್ಲೋಕದ ಸಂದರ್ಭವನ್ನು ಸೂಚಿಸುವಾಗ ಶಿಬಿಯ ಸ್ವಮಾಂಸಾರ್ಪಣೆಯ ವಿಷಯವು ಸೂಚಿತವಾಗಿದೆಯೆಂದು ಹಿಂದೆಯೇ ಹೇಳಿದ್ದೇವೆ. ಮುಂದಿನ ಶ್ಲೋಕಗಳಲ್ಲಿ ಧರ್ಮವ್ಯಾಧನು ಮಾಂಸವನ್ನು ಎಂತಹ ಸಂದರ್ಭದಲ್ಲಿ ಯಾವ ರೂಪದಲ್ಲಿ ತಿನ್ನಬಹುದು ; ಯಾವ ರೂಪದಲ್ಲಿ ತಿಂದರೆ ದೋಷ ಭಾಗಿಯಾಗುವುದಿಲ್ಲ–ಎಂಬುದನ್ನು ಬಹುಸ್ಪಷ್ಟವಾಗಿ ಹೇಳಿದ್ದಾನೆ. ಹಿಂದೆ ಶಿಬಿಯ ವಿಷಯವನ್ನು ಹೇಳಿ ಅನಂತರದಲ್ಲಿ ಎಂತಹ ಮಾಂಸವನ್ನು ತಿನ್ನ

ಬಹುದೆಂಬ ನಿಯಮವನ್ನು ಹೇಳಿರುವಾಗ ಈ ಮಧ್ಯದಲ್ಲಿ ದಿನಕ್ಕೆ ಎರಡು ಸಾವಿರ ಪಶುಗಳನ್ನೂ ಮತ್ತು ಎರಡು ಸಾವಿರ ಗೋವುಗಳನ್ನೂ ಕೇವಲ ಭಕ್ಷಣೆಗಾಗಿ ವಧೆಮಾಡುವ ಪ್ರಕರಣವು ನುಸುಳಿದ್ದು ಹೇಗೆ? ಅನುವಾದ ವನ್ನು ಮಾಡುವವರಿಗೆ ಇದರ ವಿವೇಚನೆಯುಂಟಾಗುವ ಸಾಧ್ಯತೆಯಿಲ್ಲ.

ಇವರ ದೃಷ್ಟಿಯು ಕೇವಲ ಅನುವಾದದಲ್ಲಿಯೇ ಇರುತ್ತದೆಯೇ ಹೊರತು ಸೂಕ್ತಾಸೂಕ್ತತೆಗಳ ಕಡೆಗಿರುವುದಿಲ್ಲ. ಆ ನಿರ್ಣಯಕಾರರು ಇದನ್ನು ಯೋಚಿಸಲೇಬೇಕು.

ಅಡಿಗೆಯ ಮನೆಯಲ್ಲಿ ಎರಡು ಸಾವಿರ ಪ್ರಾಣಿಗಳನ್ನೂ–ಎರಡು ಸಾವಿರ ಗೋವುಗಳನ್ನೂ ಅನುದಿನವೂ ಕಡಿಯುತ್ತಿದ್ದರೆಂದು ಶ್ಲೋಕದಲ್ಲಿ ಹೇಳಿದೆ. ಕಟುಕರ ಕಸಾಯಿಖಾನೆಗಳಲ್ಲಿಯೂ ಅಷ್ಟು ಪ್ರಾಣಿಗಳನ್ನು ವಧೆ ಮಾಡುವುದಿಲ್ಲ. ವಧ್ಯಗೃಹಗಳು ಊರ ಹೊರಗೆ ಪ್ರತ್ಯೇಕವಾಗಿರುತ್ತವೆ. ಹೀಗಿರುವಾಗ ಮಹಾನುಭಾವನಾದ ರಂತಿದೇವನ ಅಡಿಗೆಯ ಮನೆಯು ವಧ್ಯಗೃಹವಾಗಿದ್ದಿತೇ? ಇದನ್ನು ಯೋಚಿಸಿಯೇ ಕೆಲವರು 'ಮಹಾನಸೇ' ಎಂಬುದಕ್ಕೆ ಬದಲಾಗಿ 'ಮಹಾಧ್ವರೇ' ಎಂಬ ಪಾಠಾಂತರವನ್ನು ಅನುಸರಿಸಿದ್ದಾರೆ. ಯಾವುದೇ ಮಹಾಯಜ್ಞವಾದರೂ ದಿನಂಪ್ರತಿ ಎರಡುಸಾವಿರ ಪಶುಗಳನ್ನೂ, ಎರಡುಸಾವಿರ ಹಸುಗಳನ್ನೂ ಯಜ್ಞಸ್ತಂಭಕ್ಕೆ ಕಟ್ಟಿ ಹನನ ಮಾಡುತ್ತಾರೆಯೇ? ಅಂತಹ ಯಜ್ಞವು ಯಾವುದಾದರೂ ಇರುವುದೇ? ಅಂತಹ ಯಜ್ಞವು ಮಹಾಭಾರತದಲ್ಲಾಗಲೀ–ಶ್ರೌತದಲ್ಲಿಯೇ ಆಗಲೀ ಉಕ್ತವಾಗಿಲ್ಲ. ಅಶ್ವಮೇಧದಲ್ಲಿಯೇ ಒಟ್ಟು ಪಶುಗಳ ಸಂಖ್ಯೆ 276. ಈ ಆರು ಸಾಲುಗಳಲ್ಲಿಯೇ ವಿರೋಧಾಭಾಸಗಳೂ ಇವೆ. ಐದನೆಯ ಸಾಲಿನಲ್ಲಿ 'ಅನ್ವಹಂ' ಪ್ರತಿನಿತ್ಯವೂ ಎಂದಿದೆ. ಆರನೆಯ ಸಾಲಿನಲ್ಲಿ ಚಾತುರ್ಮಾಸ್ಯೇ ಚ ಪಶವೋ ವಧ್ಯನ್ತ ಇತಿ ನಿತ್ಯಶಃ ಎಂದಿದೆ. ವೈಶ್ವದೇವ, ವರುಣ ಪ್ರಘಾಸ, ಸಾಕಮೇಧ ಮತ್ತು ಶುನಾಸೀರಿಯ–ಈ ನಾಲ್ಕು ಪರ್ವಗಳಿಂದ ಕೂಡಿರುವ ಯಾಗಸಮೂಹಕ್ಕೆ ಚಾತುರ್ಮಾಸ್ಯವೆಂದು ಹೆಸರು. ಇವುಗಳಲ್ಲಿ ಪಶುವಧೆಯೇ ಉಕ್ತವಾಗಿಲ್ಲ. ಇವು ನಾಲ್ಕು ತಿಂಗಳಲ್ಲಿ ಮಾಡಬೇಕಾದ ನಾಲ್ಕು ಯಜ್ಞಗಳು. ಈ ನಾಲ್ಕು ಯಜ್ಞಗಳಿಗಾಗಿ ದಿನಂಪ್ರತಿ ಎರಡೆರಡು

ಸಾವಿರ ಪ್ರಾಣಿಗಳನ್ನು ವಧೆಮಾಡಬೇಕಾದ ಅವಶ್ಯಕತೆ ಖಂಡಿತವಾಗಿಯೂ ಇರುವುದಿಲ್ಲ. ಅಶ್ವಮೇಧಯಾಗದಲ್ಲಿ ಬರುವ ಚಾತುರ್ಮಾಸ್ಯವೇ ಇದೆಂದು ಅರ್ಥಮಾಡಿದರೂ ಅಲ್ಲಿ ಒಂದು ಪರ್ವಕ್ಕೆ ಪಶುಗಳು ಉಕ್ತವಾಗಿವೆ. ಹಸುಗಳು ಇದಕ್ಕೆ ಸಂಬಂಧಿಸಿರುವುದಿಲ್ಲ. ನಾಲ್ಕು ಪರ್ವಗಳಿಗೆ 96 ಪಶು ಗಳಾಗುತ್ತವೆ. ಇದು ಕೇವಲ ನಾಲ್ಕು ದಿವಸಗಳ ಪ್ರಕರಣವೇ ಹೊರತು ನಿತ್ಯವೂ ಮಾಡಬೇಕಾದ ಕ್ರಿಯೆಯಲ್ಲ. ಮತ್ತೊಂದು ಚಾತುರ್ಮಾಸ್ಯವಿದೆ. ಆಷಾಢ ಶುಕ್ಲ ದ್ವಾದಶಿಯಿಂದ ಅಥವಾ ಪೌರ್ಣಿಮೆಯಿಂದ ಪ್ರಾರಂಭಿಸಿ ನಾಲ್ಕು ತಿಂಗಳವರೆಗೆ ಮಾಡಬೇಕಾದ ವ್ರತವಿದು. ಈ ಚಾತುರ್ಮಾಸ್ಯವ್ರತ ದಲ್ಲಿ ಒಂದು ತಿಂಗಳು ಶಾಕವ್ರತ (ತರಕಾರಿಯನ್ನು ಬಿಡುವುದು) ; ಒಂದು ತಿಂಗಳು ದಧಿವ್ರತ (ಮೊಸರನ್ನು ಬಿಡುವುದು) ; ಒಂದು ತಿಂಗಳು ಕ್ಷೀರವ್ರತ (ಹಾಲನ್ನು ಬಿಡುವುದು) ; ನಾಲ್ಕನೆಯ ತಿಂಗಳು ದ್ವಿದಳಧಾನ್ಯವ್ರತ. (ತೊಗರೀಬೇಳೆ ಮುಂತಾದುವನ್ನು ಉಪಯೋಗಿಸದಿರುವುದು.) ಇಂತಹ ಕಾಲದಲ್ಲಿ ಮಾಂಸಭಕ್ಷಣೆಯನ್ನು ಮಾಡಿದರೆಂಬುದೂ–ಮಹಾರಾಜನು ಮಾಂಸದ ಭೋಜನ ಮಾಡಿಸಿದನೆಂಬುದೂ–ಅಚ್ಚರಿಯ ಮಾತೇ ಸರಿ.

ಇದಕ್ಕೆ ಯಾವ ವಿಧವಾಗಿ ಸಮಾಧಾನಕರವಾದ ಅರ್ಥವನ್ನು ಹೇಳ ಬಹುದೆಂಬುದನ್ನೂ ಕಡೆಯಲ್ಲಿ ಸೂಚಿಸಲಾಗಿದೆ.

ಇದಿರುವುದು ವನಪರ್ವದಲ್ಲಿ. ಶಾಂತಿಪರ್ವದಲ್ಲಿ 29ನೆಯ ಅಧ್ಯಾಯ ದಲ್ಲಿರುವ ೧೨೩ನೆಯ ಶ್ಲೋಕವನ್ನು ವನಪರ್ವದಲ್ಲಿರುವ ಶ್ಲೋಕಗಳಿಗೆ ಸಂಬಂಧಿಸಿ ಅರ್ಥಮಾಡಲಾಗಿದೆ. ಆದರೆ ಅಲ್ಲಿಯೂ ಸಹ ಹೀಗೆ ಅರ್ಥ ಮಾಡಲು ಸಂದರ್ಭವನ್ನು ಪರಿಗಣಿಸಿರುವುದಿಲ್ಲ. ಸಂದರ್ಭವನ್ನು ಪರಿಗಣಿ ಸಿದರೆ ಮಹಾನದೀ ಚರ್ಮರಾಶೇಃ–ಎಂಬ ಶ್ಲೋಕಕ್ಕೆ ಖಂಡಿತವಾಗಿಯೂ ಹಾಗೆ ಅರ್ಥಮಾಡುವ ಸಾಧ್ಯತೆಯಿಲ್ಲ.

ಅಲ್ಲಿ ರಂತಿದೇವನ ಪ್ರಕರಣವು ಹೀಗೆ ಬರುತ್ತದೆ :

**ರನ್ತಿದೇವಂ ಚ ಸಾಂಕೃತ್ಯಂ ಮೃತಂ ಸೃಂಜಯ ಶುಶ್ರುಮ ।**
**ಸಮ್ಯಗಾರಾಧ್ಯ ಯಃ ಶಕ್ರಾದ್ವರಂ ಲೇಭೇ ಮಹಾತಪಾಃ ॥೧೨೦॥**

**ಅನ್ನಂ ಚ ನೋ ಬಹು ಭವೇದತಿಥೀಂಶ್ಚ ಲಭೇಮಹಿ ।**
**ಶ್ರದ್ಧಾ ಚ ನೋ ಮಾ ವ್ಯಗಮನ್ಮಾ ಚ ಯಾಚಿಷ್ಮ ಕಂಚನ ॥೧೨೧॥**

ಸಂಕೃತಿಯ ಮಗನಾದ ಕೀರ್ತಿಮಂತನಾದ ರಂತಿದೇವನೂ ಸಹ ಕಾಲವು ಸನ್ನಿಹಿತವಾಗಲಾಗಿ ಮೃತ್ಯುವಶನಾದನು. ಮಹಾತಪಸ್ವಿಯಾದ ಅವನು ಇಂದ್ರನನ್ನು ಚೆನ್ನಾಗಿ ಆರಾಧಿಸಿ ಅವನಿಂದ ಈ ವರವನ್ನು ಪಡೆದನು.

'ನಮಗೆ ಅನ್ನವು ಸಮೃದ್ಧಿಯಾಗಿ ಸಿಕ್ಕಲಿ. ನಮ್ಮ ಮನೆಗೆ ಅತಿಥಿಗಳೂ ತಂಡ-ತಂಡವಾಗಿ ಬರಲಿ. ಅತಿಥಿಸತ್ಕಾರವನ್ನು ಮಾಡುವುದರಲ್ಲಿ ನಮ್ಮ ಶ್ರದ್ಧೆಯು ಸ್ವಲ್ಪವಾದರೂ ಕಡಿಮೆಯಾಗದಿರಲಿ. ನಾವು ಯಾರೊಬ್ಬರನ್ನೂ ಯಾಚನೆ ಮಾಡದಂತಾಗಲಿ.'

**ಉಪಾತಿಷ್ಠನ್ತ ಪಶವಃ ಸ್ವಯಂ ತಂ ಸಂಶಿತವ್ರತಮ್ ।**
**ಗ್ರಾಮ್ಯಾರಣ್ಯಾ ಮಹಾತ್ಮಾನಂ ರನ್ತಿದೇವಂ ಯಶಸ್ವಿನಮ್ ॥೧೨೨॥**

ಊರಿನ ಮತ್ತು ಅರಣ್ಯದ ಪಶುಪ್ರಾಣಿಗಳು ಕಠೋರವ್ರತಾನುಷ್ಠಾನ ಪರನಾದ, ಮಹಾತ್ಮನಾದ, ಯಶೋವಂತನಾದ ರಂತಿದೇವನನ್ನು ಸುತ್ತು ವರಿದು ತಾವಾಗಿಯೇ ಬಂದು ನಿಂತುಕೊಳ್ಳುತ್ತಿದ್ದುವು.

ಈ ಶ್ಲೋಕದಲ್ಲಿ 'ಪಶವಃ' ಪಶುಗಳು ಎಂದಿರುವುದೇ ಹೊರತು ಗೋವುಗಳೆಂದು ನಿರ್ದಿಷ್ಟವಾಗಿಲ್ಲ. ಹಸುಗಳೂ ಆಗಬಹುದು. 'ಅಕ್ಕರೆ ಯಿಂದ ಇವನನ್ನು ಸುತ್ತುವರಿದು ನಿಂತುವು' ಎಂದು ಹೇಳಲು ಅವಕಾಶ ವಿರುವುದೇ ಹೊರತು 'ತಮ್ಮನ್ನು ವಧಿಸಲಿ' ಎಂಬ ಭಾವನೆಯಿಂದ ಅವನ ಹತ್ತಿರ ಹೋಗಿ ನಿಂತುಕೊಂಡುವು–ಎಂದು ಹೇಳುವ ಸಾಧ್ಯತೆಯಿಲ್ಲ. ಸಾಧು- ಸಂತರನ್ನೂ, ಋಷಿಗಳನ್ನೂ ಕಂಡರೆ ಜಿಂಕೆ ಮುಂತಾದ ಪ್ರಾಣಿಗಳು ಹತ್ತಿರ ಹೋಗುವುವು. ವ್ಯಾಧನನ್ನು ಕಂಡೊಡನೆಯೇ ಓಡಿಹೋಗುವುವು. ಇದು ಸಕಲಪ್ರಾಣಿಗಳ ಸ್ವಭಾವವೂ ಆಗಿರುವುದು. ಇದೇ ವಿಷಯವಾಗಿ ರಾಮ ಚರಿತಮಾನಸದಲ್ಲಿ ಸಂತ ತುಳಸೀದಾಸರು ಹೀಗೆ ಹೇಳಿರುತ್ತಾರೆ :

**ಮುನಿಗಣನಿಕಟ ವಿಹಗಮೃಗ ಜಾಹೀ ।**
**ಬಾಧಕ ವಧಿಕಬಿಲೋಕಿ ಪರಾಹೀ ॥**

ಅಯೋಧ್ಯಾಕಾಂಡ ; ದೋಹ 263

ಪಕ್ಷಿಗಳೂ ಮತ್ತು ಮೃಗಗಳೂ ಋಷಿಗಳ ಸಮೀಪಕ್ಕೆ ಅಕ್ಕರೆಯಿಂದ ಹೋಗುತ್ತವೆ. ಕೊಲ್ಲಲು ಬಂದ ವ್ಯಾಧನನ್ನು ಕಂಡೊಡನೆಯೇ ಓಡಿ ಹೋಗುತ್ತವೆ.

ಹೀಗಿರುವಾಗ ಕಾಡಿನ ಮತ್ತು ಊರಿನ ಪ್ರಾಣಿಗಳು ರಂತಿದೇವನ ಸಮೀಪಕ್ಕೆ ಅಕ್ಕರೆಯಿಂದ ಬಂದುವೇ ಹೊರತು–'ಕೊಲ್ಲಲಿ' ಎಂದಾಗಲೀ, ಪ್ರಾಣಿಸಾಮಾನ್ಯಕ್ಕೂ ಅತ್ಯಂತಪ್ರಿಯವಾದ ಪ್ರಾಣವನ್ನು ಪರಿತ್ಯಾಗಮಾಡ ಲೆಂದಾಗಲೀ ಬರಲಿಲ್ಲ. ಹಾಗೆ ಅರ್ಥಮಾಡುವುದು ಸರಿಯಲ್ಲವೆಂಬುದು ನಮ್ಮ ಅಭಿಪ್ರಾಯವಾಗಿದೆ.

ಈ ಶ್ಲೋಕದ ನಂತರ ಚರ್ಮಣ್ವತೀನದಿಯ ವಿಷಯವು ಬರುವುದು :

**ಮಹಾನದೀ ಚರ್ಮರಾಶೇರುತ್ಕ್ಲೇದಾತ್ಸಸೃಜೇ ಯತಃ ।**
**ತತಶ್ಚರ್ಮಣ್ವತೀತ್ಯೇವಂ ವಿಖ್ಯಾತಾ ಸಾ ಮಹಾನದೀ ॥೧೨೩॥**

ಅಕ್ಕರೆಯಿಂದ ತನ್ನ ಬಳಿಗೆ ಬಂದ ಪಶುಗಳೆಲ್ಲವನ್ನೂ ರಂತಿದೇವನು (ಒಬ್ಬನೇ) ಕೊಂದನೆಂದೂ, ಆ ಪ್ರಾಣಿಗಳ ಮಾಂಸಪೃಥಕ್ಕರಣದಿಂದ ಅಲ್ಲಿ ದೊಡ್ಡ ಚರ್ಮದ ರಾಶಿಯೇ ಬಿದ್ದಿತೆಂದೂ–ಅಧ್ಯಾಹಾರವನ್ನು ಮಾಡಿ ಕೊಂಡು ಶ್ರೀ ರಾಹುಲ್ ಸಾಂಕೃತ್ಯಾಯನ ಪ್ರಭೃತಿಗಳು–ಮಹಾನದಿಯು ರಂತಿದೇವನು ಮಾಡಿದ ಅನೇಕಸಹಸ್ರಪಶುಗಳ ಮತ್ತು ಗೋವುಗಳ ಹನನ ದಿಂದ ರಾಶಿಯಾಗಿ ಬಿದ್ದಿದ್ದ ಚರ್ಮದಿಂದ ಹೊರಹೊರಟ ನೀರಿನಿಂದಲೇ ಸೃಷ್ಟಿಯಾದುದರಿಂದ ಆ ಮಹಾನದಿಯೇ ಮುಂದೆ ಚರ್ಮಣ್ವತಿ–ಎಂದು ವಿಖ್ಯಾತವಾಯಿತು' ಎಂದು ಅರ್ಥಮಾಡಿರುತ್ತಾರೆ.

ಇದು ವಿವೇಚನೆಯಿಲ್ಲದ ಅಧ್ಯಾಹಾರ.

ಅಕ್ಕರೆಯಿಂದ ತನ್ನ ಸಮೀಪಕ್ಕೆ ಬಂದು ತನ್ನ ಸುತ್ತಲೂ ನಿಂತಿದ್ದ ಪ್ರಾಣಿಗಳ ಮೈಯ್ಯನ್ನು ರಂತಿದೇವನು ತೊಳೆದ ಕಾರಣ ತೋಯ್ದು ಚರ್ಮ ಗಳಿಂದ ಹರಿದುಬಂದ ನೀರಿನಿಂದ ಸೃಷ್ಟವಾದ ಕಾರಣ ಚರ್ಮಣ್ವತೀ ಎಂದೇ ಆ ಮಹಾನದಿಯು ವಿಖ್ಯಾತವಾಯಿತು. 'ಕ್ಲೇದ' ಎಂಬುದಕ್ಕೆ 'ತೇವ' ಎಂಬ ಅರ್ಥವಿದೆ. ಬಂದ ಪಶುಗಳ ಮೈಯ್ಯನ್ನು ರಂತಿದೇವನು ತೊಳೆದನು.

ಅಥವಾ ತೊಳೆಸಿದನು ಎಂದರೆ ದೋಷವೇನೂ ಉಂಟಾಗುವುದಿಲ್ಲ. ಅಕ್ಕರೆಯಿಂದ ತಾವಾಗಿಯೇ ಬಂದ ಪಶುಗಳನ್ನು ಅಥವಾ ಗೋವುಗಳನ್ನು ದಾನ ಕೊಡುವ ಸಲುವಾಗಿ ತೊಳೆದನೆಂದರೆ ಅಥವಾ ತೊಳೆಸಿದನೆಂದರೆ ಆ ಸಂದರ್ಭಕ್ಕೂ ಹೊಂದಿಕೊಳ್ಳುತ್ತದೆ. ಅದನ್ನು ಬಿಟ್ಟು ಸಮೀಪಕ್ಕೆ ಬಂದು ಸುತ್ತಲೂ ನಿಂತಿದ್ದ ಪ್ರಾಣಿಗಳನ್ನು ರಾಜನು ಕೊಂದನೆಂದು ಅಧ್ಯಾಹಾರಮಾಡುವುದು ಬಹಳ ಆಭಾಸವೇ ಆಗುತ್ತದೆ.

ಮುಂದಿನ ಶ್ಲೋಕಗಳು ಹೀಗಿವೆ :

**ಬ್ರಾಹ್ಮಣೇಭ್ಯೋ ದದೌ ನಿಷ್ಕಾನ್ಸದಸಿ ಪ್ರತತೇ ನೃಪಃ ।**
**ತುಭ್ಯಂ ನಿಷ್ಕಂ ತುಭ್ಯಂ ನಿಷ್ಕಮಿತಿ ಕ್ರೋಶನ್ತಿ ವೈ ದ್ವಿಜಾಃ ॥೧೨೪॥**

**ಸಹಸ್ರಂ ತುಭ್ಯಮಿತ್ಯುಕ್ತ್ವಾ ಬ್ರಾಹ್ಮಣಾನ್ಸಮ್ಪ್ರಪದ್ಯತೇ ।**
**ಅನ್ವಾಹಾರ್ಯೋಪಕರಣಂ ದ್ರವ್ಯೋಪಕರಣಂ ಚ ಯಚ್ ॥೧೨೫॥**

**ಘಟಾಃ ಪಾತ್ರ್ಯಃ ಕಟಾಹಾನಿ ಸ್ಥಾಲ್ಯಶ್ಚ ಪಿಠರಾಣಿ ಚ ।**
**ನಾಸೀತ್ಕಿಂಚಿದಸೌವರ್ಣಂ ರನ್ತಿದೇವಸ್ಯ ಧೀಮತಃ ॥೧೨೬॥**

ರಂತಿದೇವನು ವಿಶಾಲವಾದ ತನ್ನ ಸಭೆಯಲ್ಲಿ ನೆರೆದಿದ್ದ ಬ್ರಾಹ್ಮಣರಿಗೆ ಸುವರ್ಣದ ನಿಷ್ಕಗಳನ್ನು (ನಾಣ್ಯಗಳನ್ನು) ಕೊಡುತ್ತಿದ್ದನು. ಬ್ರಾಹ್ಮಣರನ್ನು ಸಂಬೋಧಿಸಿ–'ಬ್ರಾಹ್ಮಣರೇ! ಈ ನಿಷ್ಕರಾಶಿಯು ತಮ್ಮದಾಗಿದೆ. ತಾವು ತೆಗೆದುಕೊಳ್ಳಿ ; ನಿಮಗೆ ಸಹಸ್ರನಿಷ್ಕಗಳನ್ನು ಕೊಡುತ್ತೇನೆ. ಸ್ವೀಕರಿಸಿರಿ'–ಹೀಗೆಂದು ಹೇಳುತ್ತಾ ಆಹ್ವಾನಿಸುತ್ತಿದ್ದನು.

ರಂತಿದೇವನ ಯಜ್ಞಕ್ಕೆ ಸಂಬಂಧಿಸಿದ ಮತ್ತು ದ್ರವ್ಯಸಂಗ್ರಹಣಕ್ಕೆ ಸಂಬಂಧಿಸಿದ ಗಡಿಗೆಗಳು, ಪಾತ್ರೆಗಳು, ಕಡಾಯಿಗಳು, ಸ್ಥಾಲಿಗಳು ಮತ್ತು ಅಡಿಗೆಯ ಪಾತ್ರೆಗಳು–ಎಲ್ಲವೂ ಸ್ವರ್ಣಮಯವಾಗಿದ್ದುವು.

**ಸಾಂಕೃತೇ ರನ್ತಿದೇವಸ್ಯ ಯಾಂ ರಾತ್ರಿಮವಸನ್ಗೃಹೇ ।**
**ಆಲಭ್ಯನ್ತ ಶತಂ ಗಾವಃ ಸಹಸ್ರಾಣಿ ಚ ವಿಂಶತಿಃ ॥೧೨೭॥**

ಯಾವ ರಾತ್ರಿಯಲ್ಲಿ ಸಂಕೃತಿಯ ಮಗನಾದ ರಂತಿದೇವನ ಮನೆಯಲ್ಲಿ ಅಗಣಿತರಾದ ಅತಿಥಿಗಳು ಬಂದು ತಂಗುತ್ತಿದ್ದರೋ–ಆ ಸಮಯದಲ್ಲಿ ರಂತಿ

ದೇವನು 20,100 ಗೋವುಗಳನ್ನು ದಾನವಾಗಿ ಕೊಡುತ್ತಿದ್ದನು.'' ಈ ಶ್ಲೋಕದಲ್ಲಿ 'ಆಲಭ್ಯನ್ತ' ಎಂಬ ಪದವು ಗೋಮಾಂಸಭಕ್ಷಣವನ್ನು ಪ್ರತಿ ಪಾದಿಸುವವರಿಗೆ ಸಹಕಾರಿಯಾಗಿದೆ. 'ಆಲಭ್ಯನ್ತ' ಎಂಬುದಕ್ಕೆ 'ಹನನ ಮಾಡಿ ದರು' ಎಂದವರು ಅರ್ಥಮಾಡುತ್ತಾರೆ. ಹಿಂದೆ ವನಪರ್ವದಲ್ಲಿ ಎರಡು ಸಾವಿರ ಪಶುಗಳನ್ನೂ, ಎರಡು ಸಾವಿರ ಗೋವುಗಳನ್ನೂ ಅನುದಿನವೂ ಹನನಮಾಡಿದರೆಂದು ಉಕ್ತವಾಗಿದೆ. ಇಲ್ಲಿನ ಪ್ರಕರಣದಲ್ಲಿ ಒಂದೇ ರಾತ್ರಿ ಯಲ್ಲಿ 20,100 ಹಸುಗಳನ್ನು ಹನನಮಾಡಿದರು ಎಂಬ ಅರ್ಥಬರುತ್ತದೆ. ಎರಡನೆಯದಾಗಿ ಮಹಾನದೀ ಎಂಬ ಶ್ಲೋಕಕ್ಕೂ ಈ ಶ್ಲೋಕಕ್ಕೂ ಸಂಬಂಧ ವಿಲ್ಲದಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ. 'ಆಲಭ್ಯನ್ತ' ಎಂಬ ಪದಕ್ಕೆ ಸ್ಪರ್ಶ ಮತ್ತು ಹನನ ಎಂಬ ಎರಡರ್ಥಗಳೂ ಇರುವುದು ನಿಜ. ಆದರೆ ಯಜ್ಞಸಂದರ್ಭದಲ್ಲಿ ಹನನ ಎಂಬ ಅರ್ಥವನ್ನು ಕೊಡುತ್ತದೆ. ಇಲ್ಲಿ ಯಜ್ಞದ ಸಂದರ್ಭವಿಲ್ಲ. ದಾನದ ಸಂದರ್ಭ. ನಿಷ್ಕದಾನವನ್ನು ಕೊಟ್ಟಿರುವುದನ್ನು ಈ ಹಿಂದೆ ಹೇಳಿದೆ. ಆದುದರಿಂದ ಈ ಶ್ಲೋಕದಲ್ಲಿ ಬಂದಿರುವ 'ಅಲಭ್ಯನ್ತ' ಪದಕ್ಕೆ ಸ್ಪರ್ಶಾರ್ಥವೇ ಹೊರತು ಹನನಾರ್ಥವಲ್ಲ. (ಡು-ಲಭಷ್ ಪ್ರಾಪ್ತೌ) ರಾತ್ರಿಯಲ್ಲಿ ಬಂದ ಅಸಂಖ್ಯಾತರಾದ ಅತಿಥಿಗಳಿಗೆ 20,100 ಹಸುಗಳನ್ನು ದಾನವಾಗಿ ಕೊಡುತ್ತಿದ್ದರು ಎಂಬ ಅರ್ಥವೇ ಸಾಧುವಾಗಿದೆ.

**ತತ್ರ ಸ್ಮ ಸೂದಾಃ ಕ್ರೋಶನ್ತಿ ಸುಮೃಷ್ಟಮಣಿಕುಣ್ಡಲಾಃ ।**
**ಸೂಪಂ ಭೂಯಿಷ್ಠಮಶ್ನೀಧ್ವಂ ನಾದ್ಯ ಭೋಜ್ಯಂ ಯಥಾ ಪುರಾ ॥**

ಮಣಿಕುಂಡಲಗಳನ್ನು ಧರಿಸಿದ್ದ ಅಡಿಗೆಯವರು–''ತೊವ್ವೆಯನ್ನು (ತೊವ್ವೆಯ ಅನ್ನವನ್ನು) ಸಮೃದ್ಧವಾಗಿ ತಿನ್ನಿರಿ. ಈಗಿರುವ ಭೋಜ್ಯವಸ್ತುಗಳು ಹಿಂದಿದ್ದಂತಿಲ್ಲ. ಸಮೃದ್ಧವಾಗಿಯೂ, ರುಚಿಯಾಗಿಯೂ ಇವೆ''–ಎಂದು ಕೂಗುತ್ತಿದ್ದರು.

**ನಾದ್ಯ ಭೋಜ್ಯಂ** ಎಂಬುದಕ್ಕೆ ಬದಲಾಗಿ ನಾದ್ಯ ಮಾಸಂ ; ನಾದ್ಯ ಮಾಂಸಂ ಎಂಬ ಪಾಠಗಳೂ ಇದೆ.

'ನಾದ್ಯ ಮಾಂಸಂ' ಎಂಬ ಪಾಠಾಂತರದ ಪ್ರಕಾರ–'ಹಿಂದೆ ಇದ್ದಷ್ಟು

ಮಾಂಸವೀಗ ಇರುವುದಿಲ್ಲ. ಆದುದರಿಂದ ತೊವ್ವೆಯನ್ನೇ ಯಥೇಚ್ಛವಾಗಿ ತಿನ್ನಿರಿ'–ಎಂದು ಅರ್ಥಮಾಡಲಾಗಿದೆ.

ರಾಹುಲ್ ಸಾಂಕೃತ್ಯಾಯನರವರು ಮಾಂಸವನ್ನು ಮಾಂಸವನ್ನಾಗಿ ಪರಿವರ್ತಿಸಿಕೊಂಡು ಹೀಗೆ ಅರ್ಥಮಾಡಿದ್ದಾರೆ.

The number of guests used to increase in such an extent that due to shortage of meat, the cooks had to request them to accept more quantity of soup.

ಅಂದರೆ 20,100 ಪ್ರಾಣಿಗಳನ್ನು ಕೊಂದಿದ್ದು ಸಾಲದೆಂಬ ಅಭಿಪ್ರಾಯವೇ? ಈ ವಿಧವಾಗಿ ಅರ್ಥಬರೆದು ಭಾರತದಲ್ಲಿ ಗೋಮಾಂಸಭಕ್ಷಣೆಯಿತ್ತೆಂಬುದನ್ನು ಸಾಧಿಸಹೋಗಿರುವುದು ಖಂಡನೀಯವೇ ಸರಿ.

'ನಾದ್ಯ ಭೋಜ್ಯಂ' ಎಂದಿರುವುದೇ ಸರಿಯಾದ ಪಾಠ.

ಮುಕುಂದೀಲಾಲ್ ಮುಂತಾದವರ ಅಭಿಪ್ರಾಯದಂತೆ ರಂತಿದೇವನು ಮಾಂಸದ ಸಂತರ್ಪಣೆಯನ್ನೇ ಅನುದಿನವೂ ಮಾಡಿಸುವವನಾಗಿದ್ದರೆ ತಾನೂ ಮಾಂಸಾಹಾರಿಯೇ ಆಗಿದ್ದಿರಬೇಕಲ್ಲವೇ? ಮಾಂಸಾಹಾರಿಯಾಗದೇ ಇರಲು ಸಾಧ್ಯವೇ ಇಲ್ಲ.

ಆದರೆ ಮಾಂಸಭಕ್ಷಣಮಾಡದವರ ಸಾಲಿನಲ್ಲಿ ರಂತಿದೇವನು ಸೇರಿದ್ದಾನೆ. ಅನುಶಾಸನಪರ್ವದ ೧೧೫ನೆಯ ಅಧ್ಯಾಯನದಲ್ಲಿ ಹೀಗೆ ಹೇಳಿದೆ :

**ಶ್ಯೇನಚಿತ್ರೇಣ ರಾಜೇನ್ದ್ರ ಸೋಮಕೇನ ವೃಕೇಣ ಚ**
**ರೈವತೇ ರನ್ತಿದೇವೇನ ವಸುನಾ ಸೃಞ್ಜಯೇನ ಚ ॥೬೩॥**

**ಏತೈಶ್ಚಾನ್ಯೈಶ್ಚ ರಾಜೇನ್ದ್ರ ಕೃಪೇಣ ಭರತೇನ ಚ ।**
**ದುಷ್ಯನ್ತೇನ ಕರೂಷೇಣ ರಾಮಾಲರ್ಕನರೈಸ್ತಥಾ ॥೬೪॥**

**ವಿರೂಪಾಶ್ವೇನ ನಿಮಿನಾ ಜನಕೇನ ಚ ಧೀಮತಾ ।**
**ಐಲೇನ ಪೃಥುನಾ ಚೈವ ವೀರಸೇನೇನ ಚೈವ ಚ ॥೬೫॥**

**ಇಕ್ಷ್ವಾಕುಣಾ ಶಮ್ಭುನಾ ಚ ಶ್ವೇತೇನ ಸಗರೇಣ ಚ ।**
**ಅಜೇನ ದುನ್ಧುನಾ ಚೈವ ತಥೈವ ಚ ಸುಬಾಹುನಾ ॥೬೬॥**

**ಹರ್ಯಶ್ವೇನ ಚ ರಾಜೇನ್ದ್ರ ಕ್ಷುಪೇಣ ಭರತೇನ ಚ ।**
**ಏತೈಶ್ಚಾನ್ಯೈಶ್ಚ ರಾಜೇನ್ದ್ರ ಪುರಾ ಮಾಂಸಂ ನ ಭಕ್ಷಿತಮ್ ॥೬೭॥**

ಈ ಪ್ರಕರಣದಿಂದ ರಂತಿದೇವನು ಮಾಂಸಭಕ್ಷಕನಲ್ಲವೆಂಬುದು ಸ್ಪಷ್ಟ ವಾಗಿದೆ.

ಭಾಗವತದಲ್ಲಿ ರಂತಿದೇವನ ಕಥೆಯು ಹೀಗೆ ಬರುತ್ತದೆ :

ರಂತಿದೇವನು ಒಮ್ಮೆ ಪತ್ನೀ-ಪುತ್ರ-ಪರಿವಾರಗಳೊಡನೆ ಅರಣ್ಯದಲ್ಲಿ ತಪಸ್ಸುಮಾಡುತ್ತಾ ದೀನಾವಸ್ಥೆಯಲ್ಲಿದ್ದನು. ಒಮ್ಮೆ ಅವನು ೪೮ ದಿನಗಳು ಉಪವಾಸಮಾಡಿದನು. ೪೯ನೆಯ ದಿನ ದಿವ್ಯಭೋಜನವು ದೇವ ಲೋಕದಿಂದ ಬಂದಿತು. ರಂತಿದೇವನು ಅದನ್ನು ಪತ್ನೀ-ಪುತ್ರ-ಪರಿವಾರ ಗಳಿಗೆ ಹಂಚಿಕೊಟ್ಟು ತಾನು ಶೇಷವನ್ನು ಭುಂಜಿಸಬೇಕೆಂದಿರುವಷ್ಟರಲ್ಲಿ ಒಬ್ಬ ಬ್ರಾಹ್ಮಣನು ಬಂದನು. ಅನ್ನವನ್ನು ಅವನಿಗೆ ಬಡಿಸಿ, ಆತನನ್ನು ತೃಪ್ತಿಪಡಿಸುವಷ್ಟರಲ್ಲಿ ಒಬ್ಬ ಶೂದ್ರನು ಅಭ್ಯಾಗತನಾಗಿ ಬಂದು ಅನ್ನವನ್ನು ಬೇಡಿದನು. ಶೂದ್ರನೂ ಭೋಜನಮಾಡಿ ತೃಪ್ತನಾದನು. ಒಡನೆಯೇ ಒಬ್ಬ ಬೇಡನು ನಾಯಿಗಳ ಸಂಗಡ ಬಂದು–'ಬಹಳ ಹಸಿವಾಗುತ್ತಿದೆ, ಅನ್ನವನ್ನು ಕೊಡು'–ಎಂದು ಕೇಳಲಾಗಿ, ರಂತಿದೇವನು ಮಿಕ್ಕ ಅನ್ನವನ್ನೆಲ್ಲಕೊಟ್ಟು ಭಗ ವಂತನನ್ನು ಸ್ಮರಿಸಿ, ಆ ಬೇಡನಿಗೂ ನಾಯಿಗಳಿಗೂ ನಮಸ್ಕಾರ ಮಾಡಿದನು. ಆಗ ರಂತಿದೇವನ ಪಾಲಿಗೆ ನೀರು ಮಾತ್ರ ಮಿಕ್ಕಿತ್ತು. ಅಷ್ಟರಲ್ಲಿ ಒಬ್ಬ ಪುಲ್ಕ ಸನು ಬಂದು ದಾಹಶಾಂತಿಗಾಗಿ ಜಲವನ್ನು ಯಾಚಿಸಲಾಗಿ ತನ್ನಲ್ಲಿದ್ದ ಉದಕ ವನ್ನೂ ರಂತಿದೇವನು ಭಗವತ್ಪ್ರೀತಿಯಾಗಲೆಂಬ ಬುದ್ಧಿಯಿಂದ ಕೊಟ್ಟು, ತಾನು ಹಸಿವು-ನೀರಡಿಕೆಗಳಿಂದ ಸಾಯುವಂತಿದ್ದರೂ ನಿರ್ವಿಕಾರನಾಗಿ ದ್ದನು. ಅಷ್ಟರಲ್ಲಿ ಬ್ರಹ್ಮಾದಿಗಳು ಮೈದೋರಿದರು. ರಂತಿದೇವನು ಅವರೆಲ್ಲ ರಿಗೂ ನಮಸ್ಕರಿಸಿ, ಯಾವುದೊಂದು ವರವನ್ನೋ ಬೇಡದೇ ಸುಮ್ಮನೆ ನಿಂತಿದ್ದನು. ಆಗ ದೇವತೆಗಳ ಅನುಗ್ರಹದಿಂದ ರಂತಿದೇವನು ಮಾಯಾ ಪಾಶವನ್ನು ಕಳಚಿ ಬಿಸುಟು ಜ್ಞಾನಸಂಪನ್ನನಾದನು. ರಂತಿದೇವನ ಸಹ ವಾಸದಲ್ಲಿದ್ದವರೂ ಕೂಡ ಪರಮಯೋಗಿಗಳಾದರು.

ಅಂತಹ ಮಹಾನುಭಾವನು ದಿನಕ್ಕೆ ಎರಡುಸಾವಿರ ಗೋವುಗಳನ್ನೂ ಎರಡುಸಾವಿರ ಪಶುಗಳನ್ನೂ ತನ್ನ ಅಡಿಗೆಯಮನೆಯಲ್ಲಿ ಕಡಿಯಲು ಅವ ಕಾಶವಿತ್ತನೇ? ಇದು ಊಹಿಸಲೂ ಸಾಧ್ಯವಾಗದ ಮಾತೇ ಸರಿ.

ಆದರೆ ವನಪರ್ವದಲ್ಲಿ ಈ ಶ್ಲೋಕವು ಹೇಗೆ ಬಂದಿತು? ಶ್ಲೋಕದ ಅಪಭ್ರಂಶವೇನಾದರೂ ಆಗಿದೆಯೇ?–ಎಂಬುದಕ್ಕೆ ಈ ವಿಧವಾಗಿ ಉತ್ತರ ಹೇಳಬಹುದಾಗಿದೆ : ಯದ್ಯಪಿ ಈ ಪ್ರಕರಣದಲ್ಲಿ ಧರ್ಮವ್ಯಾಧನು ಮಾಂಸ ವಿಕ್ರಯದಲ್ಲಿ ದೋಷವಿಲ್ಲವೆಂಬುದನ್ನು ಸಮರ್ಥನೆಮಾಡಿಕೊಳ್ಳುವ ಸಲು ವಾಗಿ ಮಾತನಾಡುತ್ತಿರುವನಾದರೂ–ಹಿಂದೆ ಹೇಳಿದ ಶಿಬಿಯ ವಿಷಯ ವನ್ನೂ ಮತ್ತು ಈ ಶ್ಲೋಕಗಳನಂತರ ಹೇಳುವ ಮಾಂಸಭಕ್ಷಣದ ನಿಯಮ ಗಳನ್ನೂ ಹೇಳಿರುವುದನ್ನು ನೋಡಿದರೆ ಈ ಶ್ಲೋಕಗಳನ್ನು ವ್ಯಾಧನು ಹೇಳಿ ರುವ ಸಾಧ್ಯತೆಯಿಲ್ಲ. ಮೇಲಾಗಿ ಮೂರು ಶ್ಲೋಕಗಳಲ್ಲಿಯೇ ವಿರೋಧಾ ಭಾಸಗಳಿವೆ. ಅಪಶಬ್ದಗಳಿವೆ. ಆದುದರಿಂದ ಇರು ಪ್ರಕ್ಷಿಪ್ತವೆಂದು ಹೇಳು ವುದೇ ಸಾಧುವಾಗಿದೆ.

ಕೊಲ್ಲವು ಅರ್ಥಬರಬೇಕಾದರೆ **‘ಹನ್ಯೇತೇ’** ಎಂದಿರಬೇಕಾಗಿದ್ದಿತು. **‘ಅವಧೀತ್’** ಎಂದಾದರೂ ಇರಬೇಕಾಗಿದ್ದಿತು. ವ್ಯಾಕರಣನಿಯಮದ ಪ್ರಕಾರ **‘‘ವಧ್ಯೇತೇ’** ಎಂಬ ಕ್ರಿಯಾಪದದ ರೂಪವು ಸಿದ್ಧವಾಗುವುದಿಲ್ಲ. **ಹನೋ ವಧ ಲಿಜೆ, ಲುಜೆ ಚ**–ಎಂಬ ಸೂತ್ರಗಳಿಂದ ಲಿಙು-ಲುಙುಗಳಲ್ಲಿ ಮಾತ್ರ ವಧಾದೇಶವು ಬರುತ್ತದೆ. **‘ನ ಹನ್ಯತೇ ಹನ್ಯಮಾನೇ ಶರೀರೇ’** ಎಂದಿರುವುದೇ ಹೊರತು **‘ನ ವಧ್ಯತೇ... ಶರೀರೇ’** ಎಂದಿಲ್ಲ.

‘ವಬಯೋರಭೇದಃ ಎಂಬುದರಿಂದ ಇದು ಬಧ್ಯೇತೇ ಆಗಬಹುದು. (**ಬಧ–ಬಂಧನೇ** ಎಂಬುದರಿಂದ ಈ ರೂಪವು ಸಿದ್ಧವಾಗುತ್ತದೆ ಮತ್ತು ಇದು ಉಚಿತವಾಗಿಯೂ ಕಾಣುತ್ತದೆ) ಅರ್ಥಾತ್ ರಾಜನ ಅಡಿಗೆಯ ಮನೆ ಯಲ್ಲಿ (ಸಮೀಪದಲ್ಲಿ) ಹಾಲು ಕರೆಯುವ ಸಲುವಾಗಿ ಎರಡು ಸಾವಿರ ಹಸು ಗಳನ್ನು ಕಟ್ಟುತ್ತಿದ್ದರು–ಎಂದು ಅರ್ಥಮಾಡಬಹುದು. **‘ಸಮಾಂಸಂ’** ಸರಿಯಲ್ಲ. ಸ ಮಾಸಂ ಸರಿಯಾಗಿ ಕಾಣಿಸುತ್ತದೆ. ಮಾಸಪೂರ್ತಿಯಾಗಿ ಅನ್ನದಾನಮಾಡುತ್ತಿದ್ದುದರಿಂದ ಅವನ ಕೀರ್ತಿಯೂ ಅತುಲವಾಯಿತು.

ಚಾತುರ್ಮಾಸಯಾಗವು ನಡೆಯುವಾಗಲೂ ಕ್ಷೀರಾರ್ಥವಾಗಿ ಸಾವಿರಾರು ಹಸುಗಳನ್ನು ಅಡಿಗೆಯ ಮನೆಯ ಸಮೀಪದಲ್ಲಿ ಕಟ್ಟುತ್ತಿದ್ದರು. ಶಿಬಿಯು ಆತ್ಮಮಾಂಸಪ್ರದಾನದಿಂದ ಸ್ವರ್ಗವನ್ನು ಪಡೆದರೆ–ರಂತಿದೇವನು ಅತುಲ ವಾದ ಅನ್ನದಾನಮಾಡಿ ಕೀರ್ತಿಮಂತನಾದನು. ಹೀಗೆ ಅರ್ಥಮಾಡಬಹು ದಾಗಿದೆ.

ಹೀಗೆ ಅರ್ಥಮಾಡದಿದ್ದರೆ ಈ ಮೂರು ಶ್ಲೋಕಗಳಿಗೂ ಅಸಂಬದ್ಧ ಪ್ರಲಾಪಗಳೇ ಆಗುವುವು. ನಮ್ಮ ಆಧುನಿಕಪಂಡಿತರು ಮಹಾಗ್ರಂಥಗಳಿಗೆ ವಿವೇಚನೆಯಿಲ್ಲದೇ ಅಪಾರ್ಥಮಾಡುವುದನ್ನು ನಿಲ್ಲಿಸಿರಿ.

---

# ತೀರ್ಥಕ್ಷೇತ್ರಗಳು

## (ಕಳೆದ ಸಂಪುಟದಿಂದ ಮುಂದುವರಿದಿದೆ.)

ಸೋಮನಾಥ : ಯಮುನೆಯ ಆಚೆಯ ದಡದಲ್ಲಿ ಅರೈಟ್ ಗ್ರಾಮದಲ್ಲಿ ಬಿಂದು ಮಾಧವನ ಗುಡಿಯ ಹತ್ತಿರ ಈ ಚಿಕ್ಕ ಶಿವಮಂದಿರವಿದೆ. ಸಂಗಮ ದಿಂದ ಅಥವಾ ಕೋಟೆಯಿಂದ ಇಲ್ಲಿಗೆ ದೋಣಿಯಲ್ಲಿ ಹೋಗಬಹುದು.

ನಾಗವಾಸುಕಿ : ದಾರಾಗಂಜ್ ಮುಹಲ್ಲೆಯಲ್ಲಿ ಶ್ರೀ ಬಿಂದುಮಾಧವನ ದರ್ಶನಮಾಡಿಕೊಂಡು ಅಲ್ಲಿಂದ ಸುಮಾರು ಒಂದು ಮೈಲಿ ದೂರದಲ್ಲಿ ಬಕ್ಷೀಮುಹಲ್ಲೆಯಲ್ಲಿ ಗಂಗಾತಟದ ಮೇಲೆ ನಾಗವಾಸುಕಿಯ ಮಂದಿರವು ಸಿಗುತ್ತದೆ. ನಾಗಪಂಚಮಿಯಂದು ಇಲ್ಲಿ ಜಾತ್ರೆ ನಡೆಯುತ್ತದೆ.

ಶೇಷ (ಬಲದೇವಜೀ) : ನಾಗವಾಸುಕಿಯಿಂದ ಮುಂದೆ ಸುಮಾರು 3 ಮೈಲಿ ಪಶ್ಚಿಮಕ್ಕೆ ಗಂಗೆಯ ದಡದಲ್ಲಿ ಈ ಗುಡಿಯಿದೆ.

ಶಿವಕುಟೀ : ಇದಕ್ಕೆ ಹಿಂದೆ ಕೋಟಿತೀರ್ಥವೆಂಬ ಹೆಸರಿತ್ತು. ಈಗ ಶಿವ ಕುಟೀ ಎಂದು ಕರೆಯುತ್ತಾರೆ. ಶೇಷದೇವರ ಗುಡಿಯಿಂದ 3 ಮೈಲಿಗಳ ದೂ ರ ದಲ್ಲಿ ಗಂಗೆಯ ದಡದಲ್ಲಿ ಈ ಗುಡಿಯಿದೆ. ಶ್ರಾವಣದಲ್ಲಿ ಇಲ್ಲಿ ಜಾತ್ರೆ ನಡೆ ಯುತ್ತದೆ. ಇಲ್ಲಿ ಒಂದು ಶಿವಾಲಯವೂ, ಒಂದು ಧರ್ಮಶಾಲೆಯೂ ಇವೆ.

**ಭರದ್ವಾಜಾಶ್ರಮ :** ಶಿವಕುಟಿಯಿಂದ ಹಿಂದಿರುಗುವಾಗ ನಗರದ ಒಳ ಭಾಗದಲ್ಲಿ ಕರ್ನಲ್‌ಗಂಜ್‌ನಲ್ಲಿ ಈ ಸ್ಥಾನವಿದೆ. ನಾಗವಾಸುಕಿಯಿಂದ ಭರ ದ್ವಾಜಾಶ್ರಮದ ಮೇಲೆಯೂ ಶೇಷದೇವರ ಗುಡಿಗೆ ಹೋಗಬಹುದು. ಇಲ್ಲಿ ಭರದ್ವಾಜೇಶ್ವರ ಶಿವಲಿಂಗವಿದೆ. ಮತ್ತೊಂದು ಗುಡಿಯಲ್ಲಿ ಸಹಸ್ರಫಣಗಳುಳ್ಳ ಶೇಷಮೂರ್ತಿಯಿದೆ.

**ಅಲೋಪೀದೇವಿ :** ಚೌಕದಿಂದ ದಾರಾಗಂಜ್‌ಗೆ ಹೋಗುವ ಗ್ರಾಂಡ್‌ಟ್ರಂಕ್ ರಸ್ತೆಯಲ್ಲಿ ದಾರಾಗಂಜಿನಿಂದ ೪ ಫರ್ಲಾಂಗ್ ದೂರದಲ್ಲಿ ಈ ಗುಡಿಯಿದೆ. ಇಲ್ಲಿ ಪ್ರಾಯಶಃ ಯಾವಾಗಲೂ ಜಾತ್ರೆ ನೆರೆದೇ ಇರುತ್ತದೆ. ಲಲಿತಾದೇವಿಯನ್ನೇ ಅಲೋಪೀದೇವಿಯೆಂದೂ ಕರೆಯುತ್ತಾರೆ.

**ಬಿಂದುಮಾಧವ :** ಸಂಗಮದಿಂದ ಅಥವಾ ಸೋಮನಾಥನ ದರ್ಶನದ ನಂತರ ಗಂಗೆಯನ್ನು ದಾಟಿಹೋದರೆ ಮುಂಶಿಬಾಗ್‌ನಲ್ಲಿ ಬಿಂದುಮಾಧವನ ದರ್ಶನವಾಗುತ್ತದೆ. ಈ ಸ್ಥಾನದಿಂದ ಗಂಗೆಯ ಕರೆಯಲ್ಲಿಯೇ ನಡೆಯುತ್ತಾ ಹೋದರೆ, ಸುಮಾರು ಒಂದು ಮೈಲಿಯೊಳಗೆ ಪ್ರತಿಷ್ಠಾನಪುರ (ಝೂಸಿ) ಸಿಗುತ್ತದೆ. ಯಾತ್ರಿಕರು ದಾರಾಗಂಜಿನಿಂದ ಪೀಪಾಯಿಗಳ ಸೇತುವೆಯ ಮೇ ಲೆ ಗಂಗೆಯನ್ನು ದಾಟಿ ತಿವಾರಿಯ ಶಿವಾಲಯ, ಹಂಸಕೂಪ, ಸಮುದ್ರಕೂಪ ಗಳನ್ನು ದರ್ಶನಮಾಡಿಕೊಂಡು ಇಲ್ಲಿಗೆ ಬರಬಹುದು. ಅಥವಾ ಇಲ್ಲಿಂದ ಹಿಂದಿರುಗುವಾಗ ನಡೆಯುತ್ತಾ ಮೇಲೆ ಹೇಳಿದ ತೀರ್ಥಗಳ ದರ್ಶನವನ್ನೂ ಮಾಡಿಕೊಂಡು ಸೇತುವೆಯ ಮೇಲೆ ಗಂಗೆಯನ್ನು ದಾಟಿ ದಾರಾಗಂಜಿಗೆ ಬಂದು ಸೇರಬಹುದು.

**ಝೂಸೀ (ಪ್ರತಿಷ್ಠಾನಪುರ) :** ಇದು ಪುರೂರವನ ರಾಜಧಾನಿಯಾಗಿ ದ್ದಿತೆಂದು ಹೇಳುತ್ತಾರೆ. ತ್ರಿವೇಣಿಸಂಗಮದ ಎದುರಿಗೆ ಸರಿಯಾಗಿ ಗಂಗೆಯ ಆಚೆಯ ದಡದ ಮೇಲೆ ಹಳೆಯ ಕೋಟೆಯೊಂದಿದೆ. ಅದು ಈಗ ಕೇವಲ ಒಂದು ದಿಣ್ಣೆಯಂತಿದೆ. ಅದರ ಮೇಲೆ ಸಮುದ್ರಕೂಪವೆಂದು ಕರೆಯಲ್ಪ ಡುವ ಒಂದು ಬಾವಿಯಿದೆ. ಅದು ಬಹಳ ಪವಿತ್ರವಾದುದೆಂದು ಪರಿಗಣಿಸಲ್ಪ ಟ್ಟಿದೆ. ಅಲ್ಲಿಂದ ಉತ್ತರಕ್ಕೆ ಹೋದರೆ ಝೂಸಿಯ ಹಳೆಯ ಮತ್ತು ಹೊಸ ಊರುಗಳ ನಡುವೆ ಹಂಸಕೂಪವೆಂಬ ಹೆಸರಿನ ಬಾವಿಯಿದೆ. ಇದರ ಹತ್ತಿರ

ಹಂಸತೀರ್ಥವೆಂದು ಕರೆಯಲ್ಪಡುವ, ಕುಂಡಲಿನಿಯೋಗದ ಆಧಾರದ ಮೇಲೆ ನಿರ್ಮಿಸಲ್ಪಟ್ಟಿರುವ ಮಂದಿರವಿದೆ. ಅದರ ಪೂರ್ವದ್ವಾರದ ಹತ್ತಿರ ಸಂಧ್ಯಾವಟ ಮತ್ತು ಸಂಕಷ್ಟಹರಮಾಧವನ (ಭಿನ್ನವಾದ) ಮೂರ್ತಿಯಿದೆ. ಅಲ್ಲಿಂದ ಮುಂದೆ ಹೊಸ ಝೂಸಿಯಲ್ಲಿ ತಿವಾರಿಯ ಶಿವಾಲಯವು ಸುಸ್ಥಿತಿ ಯಲ್ಲಿರುವ ಗುಡಿಯಾಗಿದೆ. ಝೂಸಿಯಲ್ಲಿ ಶ್ರೀ ಪ್ರಭುದತ್ತಜೀ ಬ್ರಹ್ಮ ಚಾರಿಯವರ ಪ್ರಸಿದ್ಧವಾದ ಸಂಕೀರ್ತನಭವವಿದೆ. ಅಲ್ಲಿ ನಿತ್ಯವೂ ಕೀರ್ತನ-ಪ್ರವಚನಗಳು ನಡೆಯುತ್ತಿರುತ್ತವೆ.

**ಲಲಿತಾದೇವಿ :** ತಂತ್ರಚೂಡಾಮಣಿಯ ಪ್ರಕಾರ 51 ಶಕ್ತಿಪೀಠಗಳಲ್ಲಿ ಒಂದು ಪ್ರಯಾಗದಲ್ಲಿದೆ. ಸತೀದೇವಿಯ ಕೈಬೆರಳುಗಳು ಬಿದ್ದ ಪವಿತ್ರ ಸ್ಥಳವಿದು. ಇಲ್ಲಿಯು ಶಕ್ತಿದೇವತೆ ಲಲಿತಾದೇವೀ. ಭೈರವನ ಹೆಸರು ಭವ. ಪ್ರಯಾಗದಲ್ಲಿ ಲಲಿತಾದೇವಿಯ ಮೂರ್ತಿಗಳಿವೆ. ಒಂದು ಅಕ್ಷಯವಟದ ಸಮೀಪದಲ್ಲಿದೆ. ಮತ್ತೊಂದು ಮೀರಪುರದ ಕಡೆಗಿದೆ. ಕೋಟೆಯಲ್ಲಿ ಲಲಿತಾ ದೇವಿಯ ಹತ್ತಿರದಲ್ಲಿಯೇ ಲಲಿತೇಶ್ವರಶಿವನ ಸನ್ನಿಧಿಯಿದೆ. ಲಲಿತಾದೇವಿಯ ನಿಜಸ್ಥಾನವು ಅಲೋಪೀದೇವಿಯ ಮಂದಿರವೇ. ಅದೇ ಶಕ್ತಿಪೀಠ.

**ಪ್ರಯಾಗಕ್ಷೇತ್ರದ ಪ್ರದಕ್ಷಿಣಾಕ್ರಮ :** ಪ್ರಯಾಗಕ್ಷೇತ್ರದ ಅನ್ತರ್ವೇದೀಪ್ರದಕ್ಷಿಣೆಯು 3 ದಿವಸಗಳ ಕಾಲ ಹಿಡಿಯುತ್ತದೆ. ಬಹಿರ್ವೇದೀ ಪ್ರದಕ್ಷಿಣೆಗೆ 10 ದಿವಸಗಳ ಕಾಲ ಹಿಡಿಯುತ್ತದೆ. ಇದರ ಸಂಕ್ಷಿಪ್ತವರ್ಣನೆಯು ಕೆಳಗೆ ಕೊಡಲ್ಪಟ್ಟಿದೆ. ಆದರೆ ಪ್ರದಕ್ಷಿಣಾಮಾರ್ಗದಲ್ಲಿ ಹೇಳಲ್ಪಡುವ ಅನೇಕ ತೀರ್ಥಗಳೂ ಗಂಗಾ-ಯಮುನಾನದಿಗಳಲ್ಲಿಯೇ ಇವೆ. ಅವುಗಳ ಸ್ಥಾನ ನಿರ್ದೇಶಕ್ಕಾಗಿ (ಎಂದರೆ ಗುರುತಿಗಾಗಿ) ನಿಲ್ಲಿಸಲ್ಪಟ್ಟಿರುವ ಶಿಲೆಗಳೂ ಇಲ್ಲ ವಾಗಿವೆ. ಕೆಲವು ತೀರ್ಥಗಳು ಸಂಪೂರ್ಣವಾಗಿ ಲುಪ್ತವಾಗಿ ಹೋಗಿವೆ.

**ಅಂತರ್ವೇದೀಪ್ರದಕ್ಷಿಣೆ :** ತ್ರಿವೇಣಿಯಲ್ಲಿ ಸ್ನಾನಮಾಡಿದ ನಂತರ ಅಲ್ಲಿಯೇ ಜಲರೂಪದಲ್ಲಿರುವ ಶ್ರೀಬಿಂದುಮಾಧವನನ್ನು ಪೂಜಿಸಿ ಯಾತ್ರೆ ಯನ್ನು ಪ್ರಾರಂಭಿಸಬೇಕು. ಯಮುನೆಯಲ್ಲಿಗೆ ಮಧುಕುಲ್ಯಾ, ಘೃತಕುಲ್ಯಾ, ನಿರಂಜನತೀರ್ಥ, ಆದಿತ್ಯತೀರ್ಥ ಮತ್ತು ಋಣಮೋಚನತೀರ್ಥಗಳು ಕೋಟೆಯ ಹತ್ತಿರದವರೆಗೂ ಇವೆ. ಇವುಗಳಲ್ಲಿ ಸ್ನಾನ ಅಥವಾ ಮಾರ್ಜ

ನಾದಿಗಳನ್ನು ಮಾಡಬಹುದು. ಮುಂದೆ ಯಮುನೆಯ ತೀರದಲ್ಲಿಯೇ ಪಾಪ ವಿಮೋಚತೀರ್ಥ, ಪರಶುರಾಮತೀರ್ಥ (ಸರಸ್ವತೀಕುಂಡದ ಕೆಳಗೆ), ಗೋಘಟ್ಟನತೀರ್ಥ, ಪಿಶಾಚಮೋಚನತೀರ್ಥ, ಕಾಮೇಶ್ವರತೀರ್ತ (ಮನಃ ಕೋಮೇಶ್ವರ), ಕಪಿಲತೀರ್ಥ, ಇಂದ್ರೇಶ್ವರಶಿವ, ತಕ್ಷಕಕುಂಡ, ತಕ್ಷಕೇಶ್ವರ ಶಿವ, (ಬರುಆಘಾಟ್‌ನಿಂದ ಮುಂದೆ ದರಿಯಾಬಾದ್ ಮುಹಲ್ಲೆಯಲ್ಲಿ ಯಮುನಾತೀರದಲ್ಲಿ) ಕಾಲೀಯಹ್ರದ, ಚಕ್ರತೀರ್ಥ, ಸಿಂಧುಸಾಗರತೀರ್ಥ (ಕಕರಹಾ ಘಟ್ಟದ ಹತ್ತಿರ), ಮುಂದೆ ದಾರಿಯಲ್ಲಿ ಪಾಂಡವಕೂಪ, ವರುಣಕೂಪ (ಗಢ ಈ ಧರ್ಮಛತ್ರದಲ್ಲಿ), ಕಶ್ಯಪತೀರ್ತ, ದ್ರವ್ಯೇಶ್ವರ ನಾಥಶಿವ (ಚೌಕದಲ್ಲಿ), ಸೂರ್ಯಕುಂಡದ ಮೇಲೆ ಹೋಗಿ ಭರದ್ವಾಜಾ ಶ್ರಮ (ಕರ್ನಲ್‌ಗಂಜ್)ನಲ್ಲಿ ರಾತ್ರಿ ತಂಗುವುದು. ಮಾರನೆಯ ದಿನ ಪ್ರಾತಃಕಾಲ ಭರದ್ವಾಜೇಶ್ವರ, ಸೀತಾರಾಮಾಶ್ರಮ, ವಿಶ್ವಾಮಿತ್ರಾಶ್ರಮ, ಗೌತಮಾಶ್ರಮ, ಜಗದಗ್ನ್ಯಾಶ್ರಮ, ವಶಿಷ್ಠಾಶ್ರಮ, ವಾಯ್ವಾಶ್ರಮ (ಇವೆಲ್ಲವೂ ಭರದ್ವಾಜಾಶ್ರಮದಲ್ಲಿಯೇ ಇವೆ)–ಇವುಗಳ ದರ್ಶನಮಾಡಿ ಕೊಂಡು ಮುಂದೆ ಉಚ್ಚೈಃಶ್ವಸ್ಥಾನ, ನಾಗವಾಸುಕಿ, ಬ್ರಹ್ಮಕುಂಡ, ದಶಾಶ್ವಮೇಧೇಶ್ವರ, ಲಕ್ಷ್ಮೀತೀರ್ಥ, ಮಹೋದಧೀತೀರ್ಥ, ಮಲಾಪಹ ತೀರ್ಥ, ಉರ್ವಶೀಕುಂಡ, ಶಕ್ರತೀರ್ಥ, ವಿಶ್ವಾಮಿತ್ರತೀರ್ತ, ಬೃಹಸ್ಪತಿ ತೀರ್ಥ, ಅತ್ರಿತತೀರ್ಥ, ದತ್ತಾತ್ರೇಯತೀರ್ಥ, ದುರ್ವಾಸತೀರ್ಥ, ತೀರ್ಥ, ಸಾರಸ್ವತತೀರ್ಥ (ಈ ತೀರ್ಥಗಳೆಲ್ಲವೂ ಗಂಗೆಯಲ್ಲಿಯೇ ಇವೆ.) ಈ ಎಲ್ಲ ತೀರ್ಥಗಳ ದರ್ಶನ-ನಮಸ್ಕಾರಾದಿಗಳನ್ನು ಮಾಡಿ ಕಡೆಯಲ್ಲಿ ಶ್ರೀ ಆಂಜನೇಯನ ದರ್ಶನಮಾಡಿ ತ್ರಿವೇಣಿಯಲ್ಲಿ ಸ್ನಾನಮಾಡುವುದು.

**ಬಹಿರ್ವೇದೀಪ್ರದಕ್ಷಿಣೆ :** ಮೊದಲನೆಯ ದಿನ ತ್ರಿವೇಣಿಯಲ್ಲಿ ಸ್ನಾನ ಪೂಜಾದಿಗಳನ್ನು ಮುಗಿಸಿಕೊಂಡು, ಅಕ್ಷಯವಟವನ್ನು ದರ್ಶನಮಾಡಿ ಕೊಂಡು ಕೋಟೆಯ ಕೆಳಗಿನಿಂದ ಯಮುನೆಯನ್ನು ದಾಟಿ, ಆಚೆಯ ದಡ ದಲ್ಲಿರುವ ಶೂಲಟಂಕೇಶ್ವರ, ಸುಧಾರಸತೀರ್ಥ, ಉರ್ವಶೀಕುಂಡ (ಯಮುನೆ ಯಲ್ಲಿ), ಮುಂದೆ ಆದಿಬಿಂದುಮಾಧವನನ್ನು ಪೂಜಿಸಿ ನದಿಯ ಕರೆಯಲ್ಲಿಯೇ ಇರುವ ಹನುಮಾನ್‌ತೀರ್ಥ, ಸಿತಾಕುಂಡ, ರಾಮತೀರ್ಥ, ವರುಣತೀರ್ಥ

ಮತ್ತು ಚಕ್ರಮಾಧವರನ್ನು ದರ್ಶಿಸಿ ಪೂಜಿಸಿ ಸೋಮೇಶ್ವರನಾಥಮಂದಿರದಲ್ಲಿ ರಾತ್ರಿ ವಿಶ್ರಮಿಸುವುದು.

ಎರಡನೆಯ ದಿನ: ಯಮುನೆಯ ತೀರದ ಮೇಲೆಯೇ ಸೋಮ ತೀರ್ಥ, ಸೂರ್ಯತೀರ್ಥ, ಕುಬೇರತೀರ್ಥ, ವಾಯುತೀರ್ಥ, ಅಗ್ನಿತೀರ್ಥ ಗಳೆಲ್ಲವೂ ನದಿಯ ಪ್ರವಾಹದೊಳಗೇ ಇರುವುದರಿಂದ ಮನಸ್ಸಿನಲ್ಲಿಯೇ ಸ್ಮರಿಸಿ ನಮಸ್ಕರಿಸುತ್ತಾ ದೇವರಿಖ್ ಗ್ರಾಮದಲ್ಲಿ ಮಹಾಪ್ರಭು ವಲ್ಲಭಾಚಾರ್ಯರ ಪೀಠವನ್ನು ದರ್ಶಿಸಿ, ಮುಂದೆ ನೈನೀಗ್ರಾಮದಲ್ಲಿ ಗದಾಮಾಧವನನ್ನು ಪೂಜಿಸಿ, ಕಂಬಲಾಶ್ವತರದ (ಛಿಲುಕಾ ನಿಲ್ದಾಣ ಆಚೆಗೆ) ಮೇಲೆ ಮುಂದೆ ಹೋಗಿ ಸಾಮಸಾಗರದಲ್ಲಿ ವಿಶ್ರಮಿಸಿಕೊಳ್ಳುವುದು.

ಮೂರನೆಯ ದಿನ: ವೀಕಲ್ ದೇವರಿಯಾದಲ್ಲಿ ಯಮುನಾತೀರದಲ್ಲಿ ರಾತ್ರಿ ನಿವಾಸ ಮತ್ತು ಮರುದಿನ ಶ್ರಾದ್ಧ. ಇಲ್ಲಿ ಶ್ರಾದ್ಧಮಾಡುವುದರಿಂದ ಅನಂತಫಲವು ದೊರಕುವುದು. ಇಲ್ಲಿ ಯಮುನೆಯ ಮಧ್ಯದಲ್ಲಿ ಬೆಟ್ಟದ ಮೇಲೆ ಮಹಾದೇವ ಗುಡಿಯಿದೆ.

ನಾಲ್ಕನೆಯ ದಿನ: ವೀಕರದಿಂದ ಯಮುನೆಯನ್ನು ದಾಟಿ ಕರಹ ದಾದ ಹತ್ತಿರ ವನಖಿಂಡೀ ಮಹಾದೇವಮಂದಿರದಲ್ಲಿ ರಾತ್ರಿ ನಿವಾಸ.

ಐದನೆಯ ದಿನ: ಬೇಗಂ ಸರಾಯ್‌ನಿಂದ ಮುಂದೆ ನೀಮಾಘಾಟಿನ ಮೇಲೇ ದ್ರೌಪದೀಘಾಟಿಗೆ ಹೋಗಿ ಅಲ್ಲಿ ರಾತ್ರಿ ವಿಶ್ರಮಿಸುವುದು.

ಆರನೆಯ ದಿನ: ಶಿವಕೋಟಿತೀರ್ಥದಲ್ಲಿ ರಾತ್ರಿ ನಿವಾಸ

ಏಳನೆಯ ದಿನ: ಪಡಿಲಾ ಮಹಾದೇವನ ದರ್ಶನಮಾಡಿಕೊಂಡು ಮಾನಸತೀರ್ಥದಲ್ಲಿ ರಾತ್ರಿ ವಿಶ್ರಮಿಸಿಕೊಳ್ಳುವುದು.

ಎಂಟನೆಯ ದಿನ: ಝೂಸಿಯ ಮೇಲೆ ನಾಗೇಶ್ವರನಾಥ ಕ್ಷೇತ್ರದಲ್ಲಿ ನಾಗತೀರ್ಥದ ದರ್ಶನಮಾಡಿಕೊಂಡು ಶಂಖಮಾಧವಮಂದಿರದಲ್ಲಿ ರಾತ್ರಿನಿವಾಸ.

ಒಂಬತ್ತನೆಯ ದಿನ: ವ್ಯಾಸಾಶ್ರಮ, ಸಮುದ್ರಕೂಪ, ಐಲತೀರ್ಥ, ಸಂಕಷ್ಟಹರಮಾಧವ (ಹಂಸತೀರ್ಥ), ಸಂಧ್ಯಾವಟ, ಹಂಸಕೂಪ, ಬ್ರಹ್ಮ

ಕುಂಡ, ಉರ್ವಶೀತೀರ್ಥ ಮತ್ತು ಅರುಂಧತೀಮಂದಿರದ ಮೇಲೆ ಪ್ರತಿಷ್ಠಾನ ಪುರದಲ್ಲಿ ರಾತ್ರಿ ವಿಶ್ರಾಮ.

ಹತ್ತನೆಯ ದಿನ: ಪ್ರತಿಷ್ಠಾನಪುರದಿಂದ (ಝೂಸಿ) ತ್ರಿವೇಣಿಗೆ ಹೋಗಿ ಪ್ರದಕ್ಷಣೆಯನ್ನು ಪೂರಯಿಸುವುದು. ಬಹಿರ್ವೇದೀಪ್ರದಕ್ಷಿಣೆ ಮಾಡುವವರು ಹತ್ತನೆಯ ದಿನ ತ್ರಿವೇಣೀತಟಕ್ಕೆ ಹೋಗಿ ಅಂತರ್ವೇದೀಪ್ರದಕ್ಷಿಣೆಯನ್ನು ಮಾಡಬೇಕು.

ಪ್ರಯಾದ ಸುತ್ತಮುತ್ತಲಿರುವ ಕೆಲವು ಕ್ಷೇತ್ರಗಳು :-

**ದುರ್ವಾಸಾಶ್ರಮ :** ಪ್ರಯಾಗದಲ್ಲಿ ತ್ರಿವೇಣೀಸಂಗಮದ ಹತ್ತಿರ ಗಂಗೆಯನ್ನು ದಾಟಿ ನದಿಯ ಕರೆಯಲ್ಲಿಯೇ ಹೋದರೆ ಸಂಗಮದಿಂದ ಸುಮಾರು 6 ಮೈಲಿಗಳ ದೂರದಲ್ಲಿ ಮತ್ತು ಛತಗಾ (ಶಂಖಮಾಧವ) ದಿಂದ 4 ಮೈಲಗಳ ದೂರದಲ್ಲಿ ಕಕರಾ ಗ್ರಾಮವು ಸಿಗುತ್ತದೆ. ಅಲ್ಲಿಯೇ ದುರ್ವಾಸ ಮಹರ್ಷಿಗಳ ಆಶ್ರಮವಿದೆ. ಶ್ರಾವಣದಲ್ಲಿ ಜಾತ್ರೆ ನಡೆಯುತ್ತದೆ. ಝೂಸಿ ಯಿಂದ ಕಾಶಿಯ ಕಡೆಗೆ ಹೋಗುವ ಪೂರ್ವೇತ್ತರ ರೈಲ್ವೇಗಾಡಿಯಲ್ಲಿ ಹೋದರೆ 7 ಮೈಲಿಗಳ ದೂರದಲ್ಲಿ ರಾಮನಾಥಪುರ ನಿಲ್ದಾಣ ಸಿಗುತ್ತದೆ. ಅಲ್ಲಿಂದ ಕಕರ ಗ್ರಾಮವು 3 ಮೈಲಿಗಳಷ್ಟಾಗುತ್ತದೆ.

**ಐನ್ದ್ರೀದೇವಿ :** ದುರ್ವಾಸಾಶ್ರಮದಿಂದ ಅರ್ಧಮೈಲಿಯ ದೂರದಲ್ಲಿ ಐನ್ದ್ರೀದೇವಿಯ ದೇವಸ್ಥಾನವಿದೆ. ದೇವಿಯನ್ನು ಆನನ್ದೀದೇವಿಯೆಂದೂ ಕರೆಯುತ್ತಾರೆ. ರಾಕ್ಷಸರಿಂದ ದುರ್ವಾಸಮಹರ್ಷಿಗಳ ತಪಸ್ಸಿಗೆ ವಿಘ್ನವೊದಗ ದಿರಲು ಮತ್ತು ಅದರ ರಕ್ಷಣೆಗಾಗಿ ಮಹರ್ಷಿಗಳಾದ ಭರದ್ವಾಜರು ಐನ್ದ್ರೀ ದೇವಿಯನ್ನು ಆವಾಹಿಸಿ ಸ್ಥಾಪನೆ ಮಾಡಿದ್ದರು. ಆ ದೇವಿಯೇ ಇಲ್ಲಿ ಪೂಜಿಸ ಲ್ಪಡುತ್ತಾಳೆ.

**ಲಾಕ್ಷಾಗೃಹ :** ಈ ಸ್ಥಳದ ಈಗಿನ ಹೆಸರು 'ಲಚ್ಛಾಗಿರ್' ಎಂದು. ಇಲ್ಲಿಯೇ ದುರ್ಯೋಧನನು ಪಾಂಡವರನ್ನು ಸಜೀವವಾಗಿಯೇ ಸುಟ್ಟು ಭಸ್ಮ ಮಾಡಲು ಅರಗಿನ ಮನೆಯನ್ನು ಕಟ್ಟಿಸಿದುದು. ಈ ಸ್ಥಳವು ಗಂಗೆಯ ದಡದ ಮೇಲೆಯೇ ದುರ್ವಾಸಾಶ್ರಮದಿಂದ 18 ಮೈಲಿಗಳ ದೂರದಲ್ಲಿದೆ. ಝೂಸಿ ಯಿಂದ ಪೂರ್ವೋತ್ತರ ರೈಲ್ವೇಮಾರ್ಗದಲ್ಲಿ 18 ಮೈಲಿಗಳ ದೂರದಲ್ಲಿ

ಹಡಿಯಾಖಾಸ್ ನಿಲ್ದಾಣ ಸಿಗುತ್ತದೆ. ಆ ನಿಲ್ದಾಣದಿಂದ ಲಾಕ್ಷಾಗೃಹವು 3 ಮೈಲಿಗಳ ದೂರದಲ್ಲಿದೆ.

**ಸೀತಾಮಢೀ :** ವಾಲ್ಮೀಕಿಮಹರ್ಷಿಗಳ ಆಶ್ರಮಗಳು ದೇಶದ ಹಲ ವೆಡೆಗಳಲ್ಲಿ ಇರುವುದಾಗಿ ಐತಿಹ್ಯಗಳಿವೆ. ಆದರೆ ವಾಲ್ಮೀಕಿರಾಮಾಯಣದ ಪ್ರಕಾರ ಆಶ್ರಮವು ಗಂಗೆಯ ದಡದಲ್ಲಿಯೇ ಚಿತ್ರಕೂಟದ ದಿಕ್ಕಿನಲ್ಲಿ ಪ್ರಯಾಗದ ಸುತ್ತಮುತ್ತಲಿರುವ ಪ್ರದೇಶದಲ್ಲಿಯೇ ಇದ್ದಿರಬೇಕು. ಸೀತಾದೇವಿಯನ್ನು ಲಕ್ಷ್ಮಣನು ಕಾಡಿನಲ್ಲಿ ಬಿಟ್ಟ ಸ್ಥಳವೂ, ಲವ-ಕುಶರ ಜನ್ಮಸ್ಥಳವೂ ಈ ಆಶ್ರಮಭೂಮಿಯೇ. ಪೂರ್ವೋತ್ತರ ರೈಲ್ವೇಮಾರ್ಗದ ಹಡಿಯಾಖಾಸ್ ನಿಲ್ದಾಣದಿಂದ 5 ಮೈಲಿಗಳ ಅಂತರದಲ್ಲಿ ಭೀಟೀ ನಿಲ್ದಾಣವು ಸಿಗುತ್ತದೆ. ಅಲ್ಲಿಂದ 3 ಮೈಲಿಗಳ ದೂರದಲ್ಲಿ ಗಂಗೆಯ ದಡದಲ್ಲಿರುವ ಸೀತಾಮಢಿಯೇ ವಾಲ್ಮೀಕಿಗಳ ಆಶ್ರಮವೆಂದು ಕರೆಯಲ್ಪಡುತ್ತದೆ.

**ಇಮಿಲಿಯನ್ ದೇವಿ :** ಪ್ರಯಾಗದ ಬಹಿರ್ವೇದೀಪ್ರದಕ್ಷಿಣೆಯಲ್ಲಿ 'ವೀಕರ'ದ ಹೆಸರು ಬಂದಿದೆ. ಇಲ್ಲಿಯೇ ಯಮುನೆಯ ಮಧ್ಯದಲ್ಲಿ ಒಂದು ಬೆಟ್ಟವಿದೆ. ಅದನ್ನು 'ಸುಜಾವ್ ದೇವತಾ' ಎಂದು ಕರೆಯುತ್ತಾರೆ. ತ್ರಿವೇಣೀಸಂಗಮದಿಂದ ನೌಕ್ಯಯಲ್ಲಿ ಹೋದರೆ ಇಮಿಲಿಯನ್ ದೇವಿಯ ಸ್ಥಾನವಿದೆ. ಇಲ್ಲಿ ನೆರೆಯುವ ಜಾತ್ರೆ ಪ್ರಸಿದ್ಧವಿದೆ.

**ಋಷಿಯನ್ :** ಈ ಸ್ಥಳವನ್ನು 'ಮಲೂಭಿಟೋ' ಎಂದು ಕರೆಯುತ್ತಾರೆ. ಶ್ರೀರಾಮಚಂದ್ರನು ಕಾಡಿನಲ್ಲಿ ದಾರಿತೋರಿಸಲು ಭರದ್ವಾಜ ಮಹರ್ಷಿಗಳ ಆಶ್ರಮದಿಂದ ನಾಲ್ಕುಜನ ಬ್ರಹ್ಮಚಾರಿಗಳನ್ನು ಕರೆದುಕೊಂಡು ಹೋಗಿ ಅನಂತರ ಅವರನ್ನು ಇಲ್ಲಿಯೇ ಬೀಳ್ಕೊಟ್ಟನು.

**ರಾಜಾಪುರ :** ಅಲಹಾಬಾದ್ ಜಂಕ್ಷನ್‌ನಿಂದ 24 ಮೈಲಿಗಳ ದೂರದಲ್ಲಿ ಭರವಾರೀ ನಿಲ್ದಾಣ ಸಿಗುತ್ತದೆ. ಅಲ್ಲಿಂದ ಮುಂಝುನ್‌ಪುರದ ಮೇಲೆ, ಬಸ್ಸಿನಲ್ಲೋ ಕುದುರೆಗಾಡಿಯಲ್ಲೋ ರಾಜಾಪುರಕ್ಕೆ ಹೋಗಬೇಕು. ಅಲಹಾಬಾದಿನಿಂದಲೇ ಬಸ್ಸಿನಲ್ಲಿ ನೇರವಾಗಿ ರಾಜಾಪುರಕ್ಕೆ ಹೋಗಬಹುದು.

ರಾಜಾಪುರವು ಕೆಲವು ವಿದ್ವಾಂಸರ ಅಭಿಪ್ರಾಯದಂತೆ ಗೋಸ್ವಾಮೀ ತುಲಸೀದಾಸರ ಜನ್ಮಭೂಮಿಯೂ ಹೌದು ; ಮತ್ತೆ ಕೆಲವರ ಅಭಿಪ್ರಾಯ

ದಂತೆ ಅವರ ಸಾಧನಭೂಮಿಯೂ ಹೌದು. ಗೋಸ್ವಾಮೀ ತುಲಸೀದಾಸರ ಸ್ವಹಸ್ತಲಿಖಿತ ರಾಮಚರಿತಮಾನಸದ ಅಯೋಧ್ಯಾಕಾಂಡದ ಪ್ರತಿಯು ಇಲ್ಲಿ ಸುರಕ್ಷಿತವಾಗಿ ಇಡಲಾಗಿದೆ.

**ಶೃಙ್ಗವೇರಪುರ :** ಪ್ರಯಾಗದಿಂದ ಶೃಙ್ಗವೇರಪುರಕ್ಕೆ ಬಸ್ಸುಗಳು ಓಡುತ್ತವೆ. ಉತ್ತರ ರೈಲ್ವೇ ಅಲಹಾಬಾದ್–ರಾಯ್‌ಬರೇಲಿ ಮಾರ್ಗದಲ್ಲಿ ಅಲಹಾಬಾದಿನಿಂದ 21 ಮೈಲಿಗಳ ದೂರದಲ್ಲಿ ರಾಮಚೌರಾರೋಡ್ ನಿಲ್ದಾಣಸಿಗುತ್ತದೆ. ಅಲ್ಲಿಂದ ಶೃಙ್ಗವೇರಪುರವು 3 ಮೈಲಿಗಳ ದೂರದಲ್ಲಿದೆ. ವನವಾಸದ ಸಮಯದಲ್ಲಿ ಶ್ರೀರಾಮಚಂದ್ರನು ನಿಷಾದರಾಜನಾಗಿದ್ದ ಗುಹನ ಇಚ್ಛೆಯಂತೆ ಇಲ್ಲಿಯೇ ಒಂದು ರಾತ್ರಿ ವಿಶ್ರಮಿಸಿದ್ದನು. ಇಲ್ಲಿ ಶೃಂಗಿಋಷಿ (ಋಷ್ಯಶೃಙ್ಗ) ಮತ್ತು ಅವನ ಪತ್ನಿ ದಶರಥನ ಮಗಳಾಗಿದ್ದ ಶಾಂತಾ ದೇವಿಯ ಗುಡಿಯಿದೆ. ಗ್ರಾಮದ ಪಶ್ಚಿಮಕ್ಕೆ 2 ಫರ್ಲಾಂಗ್ ದೂರದಲ್ಲಿ ಗಂಗೆಯಲ್ಲಿ ಋಷ್ಯಶೃಙ್ಗನ ತಂದೆಯ ಹೆಸರಿನ ವಿಭಾಂಡಕಕುಂಡವಿದೆ. ಶೃಙ್ಗ ವೇರಪುರದಲ್ಲಿ ಸುಮಾರು 1 ಮೈಲಿ ಪೂರ್ವಕ್ಕೆ ರಾಮಚೌರಾ ಗ್ರಾಮವಿದೆ. ಅಲ್ಲಿ ಶ್ರೀರಾಮನ ಚರಣಚಿಹ್ನೆಗಳಿವೆ. ಇದಕ್ಕೆ ಹೊಂದಿಕೊಂಡಂತೆಯೇ ರಾಮನಗರವಿದೆ. ಪ್ರತಿ ಪೂರ್ಣಿಮೆ ಮತ್ತು ಅಮಾವಾಸ್ಯೆಗಳಲ್ಲಿ ಜಾತ್ರೆ ನೆಡೆ ಯುತ್ತದೆ.

**ಕಡಾ :** ಪ್ರಯಾಗದಿಂದ 40 ಮೈಲಿಗಳ ದೂರದಲ್ಲಿ ಈ ಸ್ಥಳವಿದೆ. ಪ್ರಸಿದ್ಧಸಂತರಾದ ಮಲೂಕದಾಸರ ಜನ್ಮಸ್ಥಳವಿದು. ಇಲ್ಲಿಯ ಶೀತಲಾ ಭವಾನೀ ಪ್ರಸಿದ್ಧದೇವಿ. ಆಷಾಢಬಹುಳ ಅಷ್ಟಮಿಯಲ್ಲಿ ಮುಖ್ಯ ಜಾತ್ರೆ ನೆರೆ ಯುತ್ತದೆ. ಶೀತಲಾಭವಾನೀಮಂದಿರದಲ್ಲಿ ಮೂರ್ತಿಯಿಲ್ಲ. ಮಂದಿರದಲ್ಲಿ ಒಂದು ಕುಂಡವಿದೆ. ಕುಂಡದಲ್ಲಿರುವ ನೀರು ಒಣಗಿಹೋದಾಗ ಅದರಲ್ಲಿ ಒಂದು ಹಸ್ತಚಿಹ್ನೆಯು (ಪಂಜಾ) ಕಾಣುತ್ತದೆ. ಮಂದಿರದ ಹತ್ತಿರ 10-15 ಧರ್ಮಶಾಲೆಗಳಿವೆ. ಜಯಚಂದಕಾಳಿಕಾಮಂದಿರವೂ ಇಲ್ಲಿಯ ಗುಡಿಗಳ ಲ್ಲೊಂದು ಇಲ್ಲಿಂದ ಅರ್ಧಮೈಲಿ ಪೂರ್ವಕ್ಕೆ ಜಾಹ್ನವೀಕುಂಡವಿದೆ. ಇಲ್ಲಿಯೇ ಜಹ್ನುಋಷಿಯ ಆಶ್ರಮವಿತ್ತು ಎನ್ನುತ್ತಾರೆ. ರಾಮನಗರದಿಂದ 1 1/2 ಮೈಲಿ ಗಳ ದೂರದಲ್ಲಿ ಭೈರವ ಮತ್ತು ಶಂಕರರ ಸ್ಥಾನಗಳಿವೆ. ಅವುಗಳ ಎದುರಿಗೆ

ಸರಿಯಾಗಿ ಗಂಗೆಯ ಆಚೆಯ ದಡದಲ್ಲಿ ಕುರಯೀ ಬಸ್ತಿಯಿದೆ. ಇವೆರಡರ ಮಧ್ಯೆ ಗಂಗೆಯಲ್ಲಿ ಸೀತಾಕುಂಡವಿದೆ. ಈ ಕುಂಡದಿಂದಲೇ ಸೀತಾದೇವಿಯು ಮೃತ್ತಿಕೆಯನ್ನು ತೆಗೆದುಕೊಂಡಳೆಂದು ಐತಿಹ್ಯ. ಆಶ್ಚರ್ಯದ ಸಂಗತಿಯೆಂದರೆ ಗಂಗೆಯಲ್ಲಿ ಪ್ರವಾಹವು ದಕ್ಷಿಣದ ದಡದಲ್ಲಿರುವಾಗ ಈ ಕುಂಡದಲ್ಲಿ ಜಲವು ಉತ್ತರದ ಕಡೆಗಿರುತ್ತದೆ. ಪ್ರವಾಹವು ಉತ್ತರಕ್ಕಿದ್ದಾಗ ಕುಂಡದಲ್ಲಿ ಜಲವು ದಕ್ಷಿಣದ ಕಡೆಗಿರುತ್ತದೆ.

ಪಡಿಲಾ ಮಹಾದೇವ : ಉತ್ತರ ರೈಲ್ವೇ ಅಲಹಾಬಾದ್-ಜೌನ್‌ಪುರ ಮಾರ್ಗದಲ್ಲಿ ಭರವ ಈ ನಿಲ್ದಾಣ ಸಿಗುತ್ತದೆ. ನಿಲ್ದಾಣದಿಂದ 1 ಮೈಲಿ ದೂರದಲ್ಲಿ ಈ ಸ್ಥಾನವಿದೆ. ಪಾಂಡವೇಶ್ವರ ಎನ್ನುವುದೇ ಈಗ ಪಡಿಲಾ ಮಹಾದೇವ ಎಂದು ಕರೆಯಲ್ಪಡುತ್ತದೆ. ಇದು ಪ್ರಯಾಗದಿಂದ 10 ಮೈಲಿಗಳ ದೂರದಲ್ಲಿದೆ. ಇಲ್ಲಿ ಕೆಲವು ಧರ್ಮಶಾಲೆಗಳಿವೆ. ಇಲ್ಲಿ ಪಾಂಡವೇಶ್ವರ ಮಹಾದೇವನ ಗುಡಿಯಿದೆ. ಗುಡಿಯಿಂದ 2 ಮೈಲಿಗಳ ದೂರದಲ್ಲಿ ಭೀಮ ಕುಂಡವಿದೆ. ಪರೀಕ್ಷಿತನಿಗೆ ರಾಜ್ಯವನ್ನು ವಹಿಸಿಕೊಟ್ಟನಂತರ ಪಾಂಡವರು ಈ ಮಾರ್ಗದಿಂದಲೇ ಹಿಮಾಲಯಕ್ಕೆ ಹೊರಟರೆಂದು ಹೇಳುತ್ತಾರೆ. ಈ ಸ್ಥಳದಲ್ಲಿಯೇ ಬೈಜೂ ಎಂಬ ಒಬ್ಬ ಸಂತಮಹಾತ್ಮರು ಇದ್ದರು. ಭಕ್ತ ಬೈಜೂವಿನ ಪ್ರಥಮಪೂಜೆ ಸಂದನಂತರವೇ ಪಾಂಡವೇಶ್ವರನಿಗೆ ಪೂಜೆ ಸಲ್ಲುತ್ತದೆ. ಶಿವರಾತ್ರೆಯಂದು ಇಲ್ಲಿ ಜಾತ್ರೆ ನಡೆಯುತ್ತದೆ.

---

## ಗಯಾಕ್ಷೇತ್ರ

**ಗಯಾಮಹಾತ್ಮ್ಯವು :**

**ತತೋ ಗಯಾಂ ಸಮಾಸಾದ್ಯ ಬ್ರಹ್ಮಚಾರೀ ಸಮಾಹಿತಃ ।**
**ಅಶ್ವಮೇಧಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥**

**ತತ್ರಾಕ್ಷಯವಟೋ ನಾಮ ತ್ರಿಷು ಲೋಕೇಷು ವಿಶ್ರುತಃ ।**
**ತತ್ರ ದತ್ತಂ ಪಿತೃಭ್ಯಸ್ತು ಭವತ್ಯಕ್ಷಯಮುಚ್ಯತೇ ॥**

**ಮಹಾನದ್ಯಾಮುಪಸ್ಪೃಶ್ಯ ತರ್ಪಯೇತ್ ಪಿತೃದೇವತಾಃ ।**
**ಅಕ್ಷಯಾನ್ಪ್ರಾಪ್ನುಯಾಲ್ಲೋಕಾನ್ ಕುಲಂ ಚೈವ ಸಮುದ್ಧರೇತ್ ॥**

[ಮಹಾಭಾರತ-ವನ-ತೀರ್ಥಯಾತ್ರಾ.ಅ-೮೪ ಶ್ಲೋ-೮೨-೮೪
ಪದ್ಮ ಪು-ಆದಿ-ಅ-೩೯-ಶ್ಲೋ-೨-೪]

ಅನಂತರ ಗಯಾಕ್ಷೇತ್ರಕ್ಕೆ ಬ್ರಹ್ಮಚರ್ಯಪಾಲನಪೂರ್ವಕವಾಗಿ, ಏಕಾಗ್ರಚಿತ್ತನಾಗಿ ಪ್ರವೇಶಿಸಬೇಕು. ಅಲ್ಲಿ ಪ್ರವೇಶಿಸಿದ ಮಾತ್ರದಿಂದಲೇ ಮನುಷ್ಯನು ಅಶ್ವಮೇಧಯಾಗಮಾಡಿದ ಫಲವನ್ನು ಪಡೆಯುವನು. ಆ ಗಯಾಕ್ಷೇತ್ರದಲ್ಲಿಯೇ ತ್ರಿಲೋಕಪ್ರಸಿದ್ಧವಾದ ಅಕ್ಷಯವಟವೆಂಬ ಅನಾದಿಯಾದ ಆಲದ ಮರವಿರುವ ಪುಣ್ಯಕ್ಷೇತ್ರವಿದೆ. ಆ ಸ್ಥಳದಲ್ಲಿ ಪಿತೃಗಳಿಗೆ ತರ್ಪಣಾದಿಗಳನ್ನೂ, ಶ್ರಾದ್ಧಾದಿಗಳನ್ನೂ ಮಾಡುವುದು ಅಕ್ಷಯವಾಗಿ ಉಳಿಯುತ್ತದೆಂದು ತಿಳಿದವರು ಹೇಳುತ್ತಾರೆ. ಅಕ್ಷಯವಟದ ಸಮೀಪದಲ್ಲಿರುವ ಮಹಾನದಿಯಲ್ಲಿ ಸ್ನಾನಮಾಡಿ ದೇವತೆಗಳನ್ನೂ, ಪಿತೃಗಳನ್ನೂ ಪೂಜಾ-ತರ್ಪಣ-ಶ್ರಾದ್ಧಾದಿಗಳಿಂದ ಅರ್ಚನೆಮಾಡುವುದರಿಂದ ಶಾಶ್ವತ ವಾದ ಪುಣ್ಯಲೋಕಗಳು ಲಭ್ಯವಾಗುತ್ತವೆ ಮತ್ತು ಯಾತ್ರಿಕನ ವಂಶವೇ ಪಾವನವಾಗುತ್ತದೆ.

**ಏಷ್ಟವ್ಯಾ ಬಹವಃ ಪುತ್ರಾ ಯದ್ಯೇಕೋಽಪಿ ಗಯಾಂ ವ್ರಜೇತ್ ।**
**ಯಜೇತ ವಾಶ್ವಮೇಧೇನ ನೀಲಂ ವಾ ವೃಷಮುತ್ಸೃಜೇತ್ ॥**

[ಪದ್ಮ ಪು-ಸರ್ಗ-೩೮ ಶ್ಲೋ-೧೭ ವಾಯು,
ಅಗ್ನಿ ಮುಂತಾದ ಪುರಾಣಗಳಲ್ಲಿ]

ಮನುಷ್ಯನು ಅನೇಕಪುತ್ರರನ್ನು ಪಡೆಯಬೇಕು. ಏಕೆಂದರೆ : ಅವರಲ್ಲಿ ಒಬ್ಬನಾದರೂ ಗಯೆಗೆ ಹೋಗಿ ಪಿಂಡದಾನಮಾಡಿಯಾನು; ಅಶ್ವಮೇಧ ಯಾಗವನ್ನು ಮಾಡಿಯಾನು ; ಅಥವಾ ಕಪ್ಪುಬಣ್ಣದ ಗೂಳಿಯನ್ನಾದರೂ (ಉತ್ತರಕ್ರಿಯೆಯ ಕಾಲದಲ್ಲಿ) ಬಿಟ್ಟಾನು ಎಂದು.

**ಗಯಾಯಾಂ ತು ನ ತತ್ ಸ್ಥಾನಂ ಯತ್ರ ತೀರ್ಥಂ ನ ವಿದ್ಯತೇ ।**
**ಸಾಂನಿಧ್ಯಂ ಸರ್ವತೀರ್ಥಾನಾಂ ಗಯಾತೀರ್ಥಂ ತತೋ ವರಮ್ ॥**

**ಬ್ರಹ್ಮಜ್ಞಾನೇನ ಕಿಂ ಸಾಧ್ಯಂ ಗೋಗೃಹೇ ಮರಣೇನ ಕಿಮ್ ।**
**ವಾಸೇನ ಕಿಂ ಕುರುಕ್ಷೇತ್ರೇ ಯದಿ ಪುತ್ರೋ ಗಯಾಂ ವ್ರಜೇತ್ ॥**

[ವಾಯುಪುರಾಣ-ಗಯಾಮಾಹಾತ್ಮ್ಯ-೩]

ಗಯೆಯಲ್ಲಿ ತೀರ್ಥವಿಲ್ಲದ ಸ್ಥಾನವೇ ಇಲ್ಲ. ಎಲ್ಲ ತೀರ್ಥಗಳ ಸಾನ್ನಿಧ್ಯವೂ ಗಯೆಯಲ್ಲಿದೆ. ಆದುದರಿಂದ ಗಯೆಯು ಸರ್ವಶ್ರೇಷ್ಠವಾದ ತೀರ್ಥವು. ಪುತ್ರನು ಗಯೆಗೆ ಹೋಗಿ ಪಿಂಡದಾನಮಾಡಿದ್ದೇ ಆದರೆ–ಬ್ರಹ್ಮಜ್ಞಾನದಿಂದಲೇ ಆಗಲೀ, ಕುರುಕ್ಷೇತ್ರದಲ್ಲಿ ವಾಸಮಾಡುವುದರಿಂದಾಗಲೀ ಅಥವಾ ಗೋಶಾಲೆಯಲ್ಲಿ ಮರಣ ಹೊಂದುವುದರಿಂದಾಗಲೀ–ಆಗ ಬೇಕಾದುದಾದರೂ ಏನು?

ಭಾರತವರ್ಷದ ಪ್ರಮುಖಪಿತೃತೀರ್ಥವೇ ಗಯೆ. ತಮ್ಮ ವಂಶದಲ್ಲಿ ಒಬ್ಬನಾದರೂ ಗಯೆಗೆ ಹೋಗಿ ಶ್ರಾದ್ಧಮಾಡಿಯಾನೆಂದು ಪಿತೃಗಳ ಸತತ ಪ್ರಾರ್ಥನೆಯಾಗಿರುತ್ತದೆ. ಗಯಾಶ್ರಾದ್ಧವನ್ನು ಮಾಡಿದ ನಂತರ ವಾರ್ಷಿಕ ಶ್ರಾದ್ಧವನ್ನು ಮಾಡುವ ಆವಶ್ಯಕತೆಯಿಲ್ಲವೆಂಬ ಅಭಿಪ್ರಾಯವೂ ಜನರಲ್ಲಿದೆ. ಆದರೆ ಇದು ಸರಿಯಲ್ಲ. ಗಯೆಯಲ್ಲಿ ಪಿಂಡದಾನಮಾಡುವುದರಿಂದ ಪಿತೃಗಳಿಗೆ ಅಕ್ಷಯತೃಪ್ತಿಯುಂಟಾಗುತ್ತದೆ. ಅನಂತರ ವಾರ್ಷಿಕಶ್ರಾದ್ಧಮಾಡದಿದ್ದರೂ ದೋಷವುಂಟಾಗುವುದಿಲ್ಲ ; ಆದರೆವಾರ್ಷಿಕ ಶ್ರಾದ್ಧಮಾಡಿದರೆ ಬಹಳ ಒಳ್ಳೆಯದೇ ಆಗುತ್ತದೆ. ಅದರಿಂದ ಪಿತೃಗಳು ಹೆಚ್ಚು ಪ್ರಸನ್ನರಾಗುತ್ತಾರೆ.

ಮೊದಲನೆಯ 1 ಕ್ರೋಶ (2 ಮೈಲಿ) ದಷ್ಟು ಪ್ರದೇಶವು ಗಯಾಶೀರ್ಷವೆಂದೂ, 2 ಕ್ರೋಶಗಳಷ್ಟು ಪ್ರದೇಶವು ಗಯೆಯೆಂದೂ, 5 ಕ್ರೋಶಗಳಷ್ಟು ಪ್ರದೇಶವು ಗಯಾಕ್ಷೇತ್ರವೆಂದೂ ಕರೆಯಲ್ಪಡುತ್ತದೆ. ಇವುಗಳ ಮಧ್ಯದಲ್ಲಿಯೇ ಎಲ್ಲ ತೀರ್ಥಗಳೂ ಬರುತ್ತವೆ.

**ಗಯಾಕ್ಷೇತ್ರಯಾತ್ರೆಯ ವಿಧಿ–ನಿಯಮಗಳು :** ಗಯೆಯಲ್ಲಿ ಯಾವ ಸಮಯದಲ್ಲಿ ಬೇಕಾದರೂ ಪಿಂಡದಾನವನ್ನು ಮಾಡಬಹುದೆಂದು ಗಯಾಮಾಹಾತ್ಮ್ಯದಲ್ಲಿ ಸ್ಪಷ್ಟವಾಗಿ ಹೇಳಿದೆ. ವಿಧಿಪೂರ್ವಕವಾಗಿ ಅಲ್ಲಿಗೆ ಹೋಗದಿರುವವರೂ ಅಕಸ್ಮಾತ್ತಾಗಿ ಹೋದವರೂ ಅಥವಾ ಸಂಪೂರ್ಣವಿಧಿನಿಯಮಗಳನ್ನು ಪಾಲಿಸಲಾಗದಿದ್ದವವೂ–ಗಯೆಯಲ್ಲಿ ಪಿತೃಶ್ರಾದ್ಧಾದಿಗಳನ್ನು

ಮಾಡಬಹುದು. ಇದು ಗಯೆಯ ಮಾತಾಯಿತು. ಯಾವುದೇ ವಿಧವಾದ ವ್ರತಾನುಷ್ಠಾನ, ತೀರ್ಥಕ್ಷೇತ್ರಗಮನಗಳೇ ಮುಂತಾದ ಪುಣ್ಯಕಾರ್ಯಗಳ ಪ್ರಾರಂಭದ ಪೂರ್ವದಲ್ಲಿ ಕೆಲವು ನಿಯಮಗಳನ್ನು ಅನುಸರಿಸಬೇಕೆಂಬ ಶಾಸ್ತ್ರವಿಧಿಯಿದೆ. ಮೋಕ್ಷಕಾಮಿಯಾದವನೂ ತೀರ್ಥಾಟನದ ಸಮಯದಲ್ಲಿ ಕೆಲವು ನಿಯಮಗಳನ್ನು ಪಾಲಿಸಬೇಕಾಗುತ್ತದೆ. ಪುತ್ರಕಾಮರಾಗಿ, ರೋಗ ನಿವಾರಣೆಯೇ ಮುಂತಾದ ಕಾರಣಗಳಿಗಾಗಿ ವ್ರತಾನುಷ್ಠಾನ-ತೀರ್ಥ ಯಾತ್ರಾದಿಗಳನ್ನು ಮಾಡುವವರು ಶಾಸ್ತ್ರಗಳಲ್ಲಿ ಹೇಳಿರುವ ಪ್ರಕಾರ ನಿಯಮನಿಷ್ಠರಾಗಿ ಮಾಡುವುದು ಒಳ್ಳೆಯದು. ಆದರೆ ಈಗಿನ ಕಾಲದಲ್ಲಿ ಶಾಸ್ತ್ರೋಕ್ತವಾದ ನಿಯಮಗಳನ್ನು ಸಂಪೂರ್ಣವಾಗಿ ಅನುಷ್ಠಿಸುವುದು ಎಂತಹವರಿಗೂ ಅಸಾಧ್ಯವೇ ಸರಿ. ಆದರೂ ಅಲ್ಪ-ಸ್ವಲ್ಪವಾಗಿಯಾದರೂ ಶಾಸ್ತ್ರೋಕ್ತನಿಯಮಗಳನ್ನು ಅನುಸರಿಸಲು ಪ್ರಯತ್ನಪಡುವುದೊಳ್ಳೆಯದು. ಯಾತ್ರೆಹೊರಡುವುದಕ್ಕೆ ಮುಂಚೆ ಸಾಧ್ಯವಾದಷ್ಟು–48 ದಿನಗಳು ಅಥವಾ 24, 12, 7–ಕನಿಷ್ಠ ಪಕ್ಷ 3 ದಿನಗಳಾದರೂ ಶುದ್ಧರಾಗಿ ಎಂದರೆ ನಿಷಿದ್ಧವಾದ ಆಹಾರಗಳನ್ನು ವರ್ಜಿಸಿ, ಬ್ರಹ್ಮಚರ್ಯದಿಂದಿದ್ದು, ಅಲ್ಪ-ಸ್ವಲ್ಪ ದಾನಾದಿಗಳನ್ನು ಮಾಡಿ ಹೊರಡುವುದು ಶ್ರೇಯಸ್ಕರ. ಇವು ಯಾವುದೂ ಸಾಧ್ಯವಾಗದಿದ್ದರೆ ತತ್‌ಕ್ಷಣವೇ ಹೊರಡಬೇಕಾದರೆ, ಗುರು-ಹಿರಿಯರಿಗೆ ನಮಸ್ಕರಿಸಿ ಅನುಜ್ಞೆ ಮತ್ತು ಆಶೀರ್ವಾದಗಳನ್ನು ಪಡೆದು ಹೊರಡುವುದು ಒಳ್ಳೆಯದು. ಮನೋರಂಜನೆಗಾಗಿಯೋ (Pleasure trip) ಅಥವಾ ಪ್ರೇಕ್ಷಣೀಯಸ್ಥಳಗಳ ಹೊರನೋಟಕ್ಕಾಗಿಯೋ (Sight seeing) ತೀರ್ಥಕ್ಷೇತ್ರಗಳಿಗೆ ಹೋಗಕೂಡದು. ಯಾವ ಕೆಲಸವನ್ನು ಮಾಡ ಬೇಕಾದರೂ ಅದಕ್ಕೆ ಮುನ್ನ, ಅದಕ್ಕೆ ತಕ್ಕ ಮನೋಧರ್ಮವನ್ನು ರೂಢಿಸಿಕೊಳ್ಳಬೇಕು. ಆಗಲೇ ಆಯಾ ಕಾರ್ಯಗಳ ಸಾರ್ಥಕ್ಯವು ಪ್ರತ್ಯಕ್ಷವಾಗಿ ಕಂಡುಬರುವುದು.

ಗಯಾಯಾತ್ರೆಮಾಡಲು ಸಂಕಲ್ಪಿಸಿರುವವನು ಮೊದಲು ತನ್ನ ಗ್ರಾಮದ ಪಿತೃಭೂಮಿಗೆ ಹೋಗಿ ತಲೆಯ ಮತ್ತು ಗಡ್ಡ-ಮೀಸೆಗಳ ಕೂದಲನ್ನು ಮುಂಡನಮಾಡಿಸಿಕೊಂಡು ಹೊಂಬಣ್ಣದ ವಸ್ತ್ರಗಳನ್ನುಟ್ಟು ಪಿತೃಗಳನ್ನು ಆವಾಹಿಸಬೇಕು. ಅನಂತರ ಸುಗಂಧದ್ರವ್ಯಗಳನ್ನು ನೀರಿನಲ್ಲಿ ಕಲೆಸಿ ಆ

ನೀರನ್ನೋ ಅಥವಾ ಹಾಲನ್ನೋ ಧಾರೆಯಾಗಿ ಬಿಡುತ್ತಾ ಸಂಪೂರ್ಣಗ್ರಾಮ ವನ್ನೂ ಮತ್ತು ಗ್ರಾಮದ ಶ್ಮಶಾನವನ್ನೂ ಪ್ರದಕ್ಷಿಣೆಮಾಡಬೇಕು. ಅನಂತರ ಮನೆಗೆ ಹಿಂದಿರುಗದೇ ಗ್ರಾಮದಿಂದ ಸುಮಾರು 4 ಮೈಲಿಗಳ ದೂರ ಹೋಗಿ ಅಲ್ಲಿಯೇ ಪಿತೃಶ್ರಾದ್ಧವನ್ನು ಮಾಡಿ ಮಿಕ್ಕ ಅನ್ನವನ್ನು ಎಂದರೆ ಪಿತೃಶೇಷವನ್ನು ಭುಂಜಿಸಿ ರಾತ್ರಿ ಅಲ್ಲಿಯೇ ವಿಶ್ರಮಿಸಿಕೊಳ್ಳಬೇಕು. ಮಾರನೆಯ ಪ್ರಾತಃಕಾಲ ಸ್ನಾನಾದಿಗಳ ನಂತರ ಮುಂದೆ ಹೊರಡಬೇಕು. ಗಯೆಯಿಂದ ಹಿಂದಿರುಗಿದ ಮೇಲೆ ಹವನಾದಿಗಳನ್ನು ಮಾಡಿದನಂತರ ದೀಕ್ಷಾವಸ್ತ್ರಗಳನ್ನು ವಿಸರ್ಜಿಸಬಹುದು.

ಗಯೆಯನ್ನು ಮುಟ್ಟುವ ಮೊದಲು ಯಾತ್ರಿಕನು ಪುನಪುನನದಿಯ ದಡದಲ್ಲಿ ಶ್ರಾದ್ಧಮಾಡಬೇಕು. ಪೂರ್ವರೈಲ್ವೆಯ ಪಟನಾ-ಗಯಾಮಾರ್ಗದಲ್ಲಿ ಪಟನಾ ಜಂಕ್ಷನ್‌ನಿಂದ 9 ಮೈಲಿಗಳ ದೂರದಲ್ಲಿ ಪುನಪುನ ನಿಲ್ದಾಣವು ಸಿಗುತ್ತದೆ. ಅಲ್ಲೊಂದು ಚಿಕ್ಕ ಪೇಟೆಯಿದೆ. ಅಲ್ಲಿಯೇ ಇಳಿದು ಯಾತ್ರಿಯು ಶ್ರಾದ್ಧಮಾಡಬಹುದು. ಗಯೆಯನ್ನೇ ಮೊದಲು ಮುಟ್ಟಿದವರು ಅಲ್ಲಿಂದ ಪುನಪುನಕ್ಕೆ ಹೋಗಿ ಶ್ರಾದ್ಧಮಾಡಿ ಪುನಃ ಗಯೆಗೆ ಹಿಂದಿರುಗಬಹುದು. ವಾರಾಣಸೀ ಮೊಗಲ್‌ಸರಾಯಿ ಮಾರ್ಗವಾಗಿ ಬರುವವರು ಸೋನಾನಗರ್ ನಿಲ್ದಾಣದಲ್ಲಿಳಿದು ಅಲ್ಲಿಂದ ಪೂರ್ವಕ್ಕೆ 11/2 ಮೈಲಿಗಳ ದೂರದಲ್ಲಿರುವ ಪುನಪುನ ನದಿಯ ದಡದಲ್ಲಿ ಶ್ರಾದ್ಧಾದಿಗಳನ್ನು ಮಾಡಬಹುದು.

**ಮಾರ್ಗ :** ಪೂರ್ವರೈಲ್ವೇ ಮಾರ್ಗದಲ್ಲಿ ಗಯೆಯು ಒಂದು ಮುಖ್ಯ ನಿಲ್ದಾಣವಾಗಿದೆ. ಕಲ್ಕತ್ತೆಯಿಂದ ಗಯೆಯ ಮೇಲೆ ದೆಹಲಿಗೆ ರೈಲುಗಳು ಓಡುತ್ತವೆ. ಪಟನಾದಿಂದ ಗಯೆಗೆ ನೇರ ರೈಲುಮಾರ್ಗವಿದೆ. ಸುತ್ತಮುತ್ತ ಲಿರುವ ಎಲ್ಲ ದೊಡ್ಡ ಊರುಗಳೂ ಗಯೆಯೊಂದಿಗೆ ಒಳ್ಳೆಯ ರಸ್ತೆ ಸಂಪರ್ಕ ವನ್ನು ಹೊಂದಿವೆ.

**ತಂಗುದಾಣಗಳು :** ಗಯೆಯಲ್ಲಿ ಪ್ರಾಯಶಃ ಬಹಳ ಜನರು ಪಂಡಾಗಳ ಮನೆಗಳಲ್ಲಿ ಉಳಿಯುತ್ತಾರೆ. ಕೆಲವು ಧರ್ಮಶಾಲೆಗಳೂ ಇವೆ.

ದಕ್ಷಿಣದೇಶದಿಂದ ಹೋಗುವವರು : ಬಚ್ಚೂಆಚಾರ್ಯ-ನಾರಾಯಣಾ ಚಾರ್ಯ–ಪಂಚಮೊಹಲ್ಲಾ–ಗಯಾ ಈ ವಿಳಾಸಕ್ಕೆ ಪತ್ರ ಬರೆದು ಹೋಗ ಬಹುದು. ಕರ್ಣಾಟಕದವರೇ ಆದ ಇವರು ಒಂದು ಸುಂದರವಾದ ಛತ್ರ

ವನ್ನೂ ಕಟ್ಟಿಸಿದ್ದಾರೆ ಅಲ್ಲಿ ಎಲ್ಲ ಅನುಕೂಲಗಳೂ ಇವೆ. ತ್ರಿಮತಸ್ಥರಿಗೂ ಶ್ರಾದ್ಧಾದಿಗಳನ್ನು ಅವರವರ ಸಂಪ್ರದಾಯಾನುಸಾರವಾಗಿ ಮಾಡಿಸುವ ಸೌಲಭ್ಯವಿದೆ.

1) ರೈಲ್ವೇನಿಲ್ದಾಣದ ಹತ್ತಿರ ಸೇಠ್ ಶಿವಪ್ರಸಾದ್‌ಜಿಝುಂಝುನ್ ವಾಲಾ ಧರ್ಮಶಾಲೆ. 2) ಇವರದೇ ಮತ್ತೊಂದು ಛತ್ರ ಚಾಂದ್-ಚೌರಾ ಹತ್ತಿರವೂ ಇದೆ. 3) ಶ್ರೀಗುಲ್‌ರಾಜ್‌ರಾಮವಿಲಾಸ ಛತ್ರ, ಚೌಕ. 4) ಭಾರತಸೇವಾಶ್ರಮ ಸಂಘದ ಛತ್ರ. 5) ಮಹಾಬೋಧೀ ಸೊಸೈಟಿ ಧರ್ಮ ಶಾಲೆ (ಬುದ್ಧಗಯೆ). ಇಲ್ಲಿ ಬೌದ್ಧರು ಮಾತ್ರ ಇಳಿದುಕೊಳ್ಳಬಹುದು. 6) ಜೈನ ಧರ್ಮಶಾಲೆ. ನಿಲ್ದಾಣದಿಂದ 1 1/2 ಮೈಲಿ ದೂರದಲ್ಲಿದೆ.

**ದರ್ಶನೀಯ ಸ್ಥಳಗಳು :** ಗಯೆಯ ಮುಖ್ಯದೇವಾಲಯ ವಿಷ್ಣುಪದ ದೇವಾಲಯ. ಇದು ನಿಲ್ದಾಣದಿಂದ ಸುಮಾರು 2 ಮೈಲಿ ದೂರದಲ್ಲಿದೆ. ಗಯೆಯಲ್ಲಿರುವ ಮಿಕ್ಕ ಪವಿತ್ರಸ್ಥಳಗಳೂ ದೂರದೂರದಲ್ಲಿಯೇ ಇವೆ. ಆದರೆ ಅವುಗಳನ್ನು ತಲುಪಲು ಟಾಂಗಾ, ರಿಕ್ಷಾ ಮುಂತಾದ ವಾಹನಗಳು ಬಾಡಿಗೆಗೆ ದೊರೆಯುತ್ತವೆ.

**ಫಲ್ಗು :** ಈ ನದಿಯು ಗಯೆಯ ಪೂರ್ವದಿಕ್ಕಿನಲ್ಲಿ ಹರಿಯುತ್ತದೆ. ಮಳೆಗಾಲದಲ್ಲಿ ಮಾತ್ರ ಇದರಲ್ಲಿ ನೀರಿರುತ್ತದೆ. ಬೇರೆ ಕಾಲದಲ್ಲಿ ನದಿಯಲ್ಲಿಯ ಮರಳನ್ನು ಅಗೆದು ತೋಡಿದರೆ ಸ್ವಚ್ಛವಾದ ನೀರು ಸಿಗುತ್ತದೆ. ಗಯೆಯ ಪೂರ್ವದಿಕ್ಕಿನಲ್ಲಿ 'ನಗಕೂಟ' ಎಂಬ ಬೆಟ್ಟವಿದೆ. ಅದರಿಂದ ದಕ್ಷಿಣಕ್ಕೆ ಹರಿಯುವ ಫಲ್ಗುನದಿಯನ್ನು **'ಮಹಾನಾ'** ಎಂದು ಕರೆಯುತ್ತಾರೆ. ಗಯೆಯಿಂದ ದಕ್ಷಿಣಕ್ಕೆ 3 ಮೈಲಿಗಳ ದೂರದಲ್ಲಿ 'ನೀಲಾಂಜನ' ನದಿಯು ಈ ಮಹಾನಾನದಿಯನ್ನು ಕೂಡಿಕೊಳ್ಳುತ್ತದೆ. ಈ ಸಂಗಮದಿಂದ 1 ಮೈಲಿ ದಕ್ಷಿಣಕ್ಕಿರುವ ಸರಸ್ವತೀದೇವಾಲಯದವರೆಗೆ ಈ ನದಿಯು **'ಸರಸ್ವತೀ'** ಎಂದೇ ಕರೆಯಲ್ಪಡುತ್ತದೆ. **'ಮಧುಸ್ರವಾ'** ಎಂಬ ಚಿಕ್ಕನದಿಯೊಂದು ಗಯೆಯ ದಕ್ಷಿಣದಲ್ಲಿ ಮಹಾನದಿಯನ್ನು ಕೂಡಿಕೊಳ್ಳುತ್ತದೆ. ಈ 'ಮಧು ಸ್ರವಾ' ನದಿಯು ಮಳೆಗಾಲದ ನಂತರ (ಫಲ್ಗುನದಿಯು ಒಣಗಿಹೋದ ನಂತರ) ಫಲ್ಗುವಿನಿಂದ ಬೇರೆಯಾಗಿ ಗದಾಧರದೇವಾಲಯದ ಕೆಳಗೆ ಹರಿ

ಯುತ್ತದೆ. ಗಯೆಯಲ್ಲಿ (ಪುನಪುನದಲ್ಲಿ ಮಾಡುವ ಶ್ರಾದ್ಧವಲ್ಲದೆ) 7 ದಿವಸಗಳ ಶ್ರಾದ್ಧಕರ್ಮಗಳೂ ಇವೆ. ಬಹಳ ಜನ ಈ ಕರ್ಮಗಳನ್ನು 15 ಅಥವಾ 17 ದಿನಗಳಲ್ಲಿ ವಿಭಾಗಮಾಡಿ ಮುಗಿಸುತ್ತಾರೆ. ಇದರಲ್ಲಿ ಪ್ರಥಮ ದಿವಸ ಫಲ್ಗುನದಿಯಲ್ಲಿ ಸ್ನಾನಮಾಡಿ ಫಲ್ಗುನದಿಯ ದಡದಲ್ಲಿ ಶ್ರಾದ್ಧಮಾಡಬೇಕು.

**ವಿಷ್ಣುಪದ :** ಇದು ಗಯೆಯ ಪ್ರಧಾನಮಂದಿರ. ಫಲ್ಗುನದಿಯ ದಡದಲ್ಲಿ ವಿಶಾಲವಾದ ಈ ದೇವಾಲಯವಿದೆ. ಗುಡಿಯೊಳಗೆ ಅಷ್ಟಕೋನಗಳ ವೇದಿಕೆಯ ಮೇಲೆ ಭಗವಂತನಾದ ಶ್ರೀಮಹಾವಿಷ್ಣುವಿನ ಪವಿತ್ರವಾದ ಚರಣಚಿಹ್ನೆ ಇದೆ. ಮಂದಿರದ ಹೊರಗಡೆ ಸಭಾಮಂಟಪವಿದೆ. ಯಾತ್ರಿಕರು ಶ್ರಾದ್ಧಮಾಡಲು 2 ದೊಡ್ಡ ಮಂಟಪಗಳಿವೆ. ಹತ್ತಿರದಲ್ಲಿಯೇ ಗರುಡದೇವರ ಸನ್ನಿಧಿಯೂ ಇದೆ. ಈ ಗುಡಿಯ ದಕ್ಷಿಣದಲ್ಲಿ ಜಗನ್ನಾಥಮಂದಿರವಿದೆ. ಅಲ್ಲಿಯೇ ಒಂದು ಧರ್ಮಶಾಲೆಯೂ ಇದೆ. ಅದೇ ಸ್ಥಳದಲ್ಲಿ ಲಕ್ಷ್ಮೀನಾರಾಯಣಸ್ವಾಮಿಯ ಗುಡಿಯೊಂದಿದೆ.

**ಗದಾಧರ :** ವಿಷ್ಣುಪದ ದೇವಾಲಯದ ಪೂರ್ವೋತ್ತರ ದಿಕ್ಕಿನಲ್ಲಿ ಕೆಲವು ಗಜಗಳ ಅಂತರದಲ್ಲಿ ಫಲ್ಗುನದಿಯ ದಡದ ಮೇಲೆ ಗದಾಧರದೇವರ ಗುಡಿಯಿದೆ. ಗುಡಿಯಲ್ಲಿ ಗದಾಧರಭಗವಂತನ ಚತುರ್ಭುಜಮೂರ್ತಿಯಿದೆ. ಗದಾಧರದೇವರ ವರಪ್ರಸಾದದಿಂದಲೇ ಶ್ರೀರಾಮಕೃಷ್ಣಪರಮ ಹಂಸರ ಅವತಾರವಾಯಿತು. ಈ ಗುಡಿಯ ಜಗನ್ಮೋಹನದಲ್ಲಿ ಶ್ರೀ ಸೀತಾ ರಾಮ, ಲಕ್ಷ್ಮಣ ಮತ್ತು ಬ್ರಹ್ಮದೇವರ ಮೂರ್ತಿಗಳಿವೆ.

ಗಯಾಶಿರ **:** ವಿಷ್ಣುಪದದೇವಾಲಯದ ದಕ್ಷಿಣಕ್ಕೆ ಗಯಾಶಿರವಿದೆ. ಅಲ್ಲಿ ಪಡಸಾಲೆಯಂತಹ ಆವರಣದಲ್ಲಿ ಒಂದು ಚಿಕ್ಕ ಕುಂಡವಿದೆ. ಆ ಪಡಸಾಲೆಯಲ್ಲಿಯೇ ಜನರು ಪಿಂಡದಾನ ಮಾಡುತ್ತಾರೆ. ಗಯಾಶಿರದ ಪಶ್ಚಿಮಕ್ಕೆ ಗಯಾಕೂಪವಿದೆ.

**ಮುಣ್ಡಪೃಷ್ಠ :** ಗಯಾಶಿರದಿಂದ ಸ್ವಲ್ಪದೂರದಲ್ಲಿಯೇ ಈ ಸ್ಥಾನವಿದೆ. ಇಲ್ಲಿ ದ್ವಾದಶಭುಜಯುಕ್ತಳಾದ ಮುಣ್ಡಪೃಷ್ಠಾದೇವಿಯ ಮೂರ್ತಿಯಿದೆ.

ಆದಿಗಯೆ **:** ಗಯೆಯಲ್ಲಿ ಇದು ಎಲ್ಲಕ್ಕಿಂತ ಬಹುಪ್ರಾಚೀನಸ್ಥಾನವೆಂದು ಗಣಿಸಲ್ಪಡುತ್ತದೆ. ಮುಣ್ಡಪೃಷ್ಠದಿಂದ ದಕ್ಷಿಣ-ಪಶ್ಚಿಮ ಎಂದರೆ

ನೈಋತ್ಯದಿಕ್ಕಿನಲ್ಲಿ ಈ ಸ್ಥಾನವಿದೆ. ಇಲ್ಲಿರುವ ಶಿಲೆಯೊಂದರ ಮೇಲೆ ಪಿಂಡ ದಾನವು ಮಾಡಲ್ಪಡುತ್ತದೆ. ಅಲ್ಲಿಂದ ಐದು ಮೆಟ್ಟಿಲುಗಳು ಇಳಿದುಹೋದರೆ ಒಂದು ಅಂಗಳವು ಸಿಗುತ್ತದೆ. ಅಂಗಳದಿಂದ ಪಶ್ಚಿಮಕ್ಕೆ ಮೂರು ಮೆಟ್ಟಿಲು ಗಳನ್ನು ಇಳಿದುಹೋದರೆ ಒಂದು ಚಿಕ್ಕ ಕೋಣೆಯಲ್ಲಿ ಕೆಲವು ಮೂರ್ತಿಗಳಿವೆ.

**ಧೌತಪಾದ :** ಆದಿಗಯೆಯ ನೈಋತ್ಯಕ್ಕೆ ಗಯೆಯ ದಕ್ಷಿಣಮಹಾ ದ್ವಾರದ ಪೂರ್ವಕ್ಕಿರುವ ಪಡಸಾಲೆಯಲ್ಲಿ ಒಂದು ಬಿಳಿಯ ಶಿಲೆಯಿದೆ. ಆ ಶಿಲೆಯ ಮೇಲೆ ಮತ್ತು ಸುತ್ತಮುತ್ತಲೂ ಪಿಂಡದಾನ ಮಾಡಲ್ಪಡುತ್ತದೆ.

**ಸೂರ್ಯಕುಣ್ಡ :** ವಿಷ್ಣುಪದದಲ್ಲಿ ಸುಮಾರು ನೂರಿನ್ನೂರು ಗಜಗಳ ದೂರದಲ್ಲಿ ಉತ್ತರಕ್ಕೆ ಈ ಸರೋವರವಿದೆ. ಈ ಸರೋವರದ ಉತ್ತರಭಾಗ ವನ್ನು 'ಉದೀಚೀ' ಎಂದೂ, ಮಧ್ಯಭಾಗವನ್ನು 'ಕನಖಲ'ವೆಂದೂ, ದಕ್ಷಿಣ ಭಾಗವನ್ನು ದಕ್ಷಿಣಮಾನಸತೀರ್ಥವೆಂದೂ ಕರೆಯುತ್ತಾರೆ. ಈ ಕುಣ್ಡದ ಪಶ್ಚಿಮಕ್ಕಿರುವ ಒಂದು ಗುಡಿಯಲ್ಲಿ ಸೂರ್ಯನಾರಾಯಣದೇವರ ಚತು ರ್ಭುಜಮೂರ್ತಿಯಿದೆ. ಇದನ್ನು ದಕ್ಷಿಣಾರ್ಕವೆಂದು ಕರೆಯುತ್ತಾರೆ.

**ಜಿಹ್ವಾಲೋಲಾ :** ಸೂರ್ಯಕುಣ್ಡದಿಂದ ಸುಮಾರು 80 ಗಜಗಳು ದಕ್ಷಿಣಕ್ಕೆ ಫಲ್ಗುನದಿಯ ದಡದಲ್ಲಿ ಈ ತೀರ್ಥವಿದೆ. ಒಂದು ಅಶ್ವತ್ಥವೃಕ್ಷವಿದೆ.

**ಸೀತಾಕುಣ್ಡ ಮತ್ತು ರಾಮಗಯೆ :** ವಿಷ್ಣುಪದಮಂದಿರದ ಎದುರಿಗೆ ಸರಿಯಾಗಿ ಫಲ್ಗುನದಿಯ ಆಚೆಯ ದಡದಲ್ಲಿ ಸೀತಾಕುಣ್ಡವಿದೆ. ಅಲ್ಲಿರುವ ಗುಡಿಯಲ್ಲಿ ಕೃಷ್ಣಶಿಲೆಯಲ್ಲಿ ಮಾಡಿರುವ ದಶರಥಮಹಾರಾಜನ ಹಸ್ತವಿದೆ. ಅಲ್ಲಿಯೇ ಇರುವ ಒಂದು ಶಿಲೆಯನ್ನು 'ಭರತಾಶ್ರಮದ ವೇದಿಕೆ' ಎನ್ನುತ್ತಾರೆ. ಅದನ್ನೇ ರಾಮಗಯೆಯೆಂದೂ ಕರೆಯುತ್ತಾರೆ. ಅಲ್ಲಿ ಮಾತಙ್ಗ ಋಷಿಯ ಚರಣಚಿಹ್ನೆಗಳಿವೆ ಮತ್ತು ಅನೇಕದೇವತಾಮೂರ್ತಿಗಳೂ ಇವೆ.

**ಉತ್ತರಮಾನಸ :** ವಿಷ್ಣುಪದದಿಂದ 1 ಮೈಲಿ ಉತ್ತರಕ್ಕೆ ರಾಮಶಿಲೆಗೆ ಹೋಗುವ ಮಾರ್ಗದಲ್ಲಿ ಉತ್ತಮಮಾನಸಸರೋವರವಿದೆ. ಆ ಸರೋ ವರದ ನಾಲ್ಕು ಕಡೆಗಳಲ್ಲಿಯೂ ಸೋಪಾನಗಳಿವೆ. ಅದರ ಪಶ್ಚಿಮಕ್ಕೆ ಒಂದು ಧರ್ಮಶಾಲೆಯಿದೆ ಮತ್ತು ಉತ್ತರಕ್ಕಿರುವ ಒಂದು ಗುಡಿಯಲ್ಲಿ ಉತ್ತರಾರ್ಕ ಸೂರ್ಯ ಮತ್ತು ಶೀತಲಾದೇವಿಯವರ ಮೂರ್ತಿಗಳಿವೆ. ಸರೋವರದ

ಪಶ್ಚಿಮೋತ್ತರ ಎಂದರೆ ವಾಯವ್ಯದಿಕ್ಕಿನಲ್ಲಿ ಮೌನೇಶ್ವರ ಮತ್ತು ಪಿತಾಮಹೇಶ್ವರರ ಗುಡಿಗಳಿವೆ. ಇಲ್ಲಿ ಶ್ರಾದ್ಧಮಾಡಿದನಂತರ ಯಾತ್ರಿಕರು ಮೌನದಿಂದ ಸೂರ್ಯಕುಣ್ಡದವರೆಗೂ ಹೋಗುತ್ತಾರೆ.

**ರಾಮಶಿಲಾ :** ವಿಷ್ಣುಪದದಿಂದ 3 ಮೈಲಿಗಳ ಉತ್ತರಕ್ಕೆ ಫಲ್ಗುನದಿಯ ದಡದಲ್ಲಿ ರಾಮಶಿಲಾ ಎಂಬ ಚಿಕ್ಕ ಬೆಟ್ಟವಿದೆ. ಬೆಟ್ಟದ ಬುಡದಲ್ಲಿ ರಾಮಕುಣ್ಡವೆಂಬ ಸರೋವರವಿದೆ. ಸರೋವರದ ದಕ್ಷಿಣಕ್ಕೆ ಒಂದು ಶಿವಾಲಯವಿದೆ. ರಾಮಶಿಲಾ ಬೆಟ್ಟಕ್ಕೆ ಹೊಂದಿಕೊಂಡೇ 20 ಮೆಟ್ಟಿಲುಗಳ ಮೇಲೆ ಶ್ರೀರಾಮದೇವರ ಗುಡಿಯಿದೆ. ಒಂದು ಧರ್ಮಶಾಲೆಯೂ ಇದೆ. 340 ಮೆಟ್ಟಿಲುಗಳನ್ನು ಹತ್ತಿ ಹೋದರೆ ರಾಮಶಿಲಾತೀರ್ಥವು ಸಿಗುತ್ತದೆ. ಆ ತೀರ್ಥದ ಮೇಲೆ ಒಂದು ಶಿವಾಲಯವಿದೆ ; ಅದರ ಜಗನ್ಮೋಹನದಲ್ಲಿ ಚರಣಚಿಹ್ನೆಗಳಿವೆ. ಮಂದಿರದ ದಕ್ಷಿಣಕ್ಕೆ ಒಂದು ಪಡಸಾಲೆಯಲ್ಲಿ ಕೆಲವು ಮೂರ್ತಿಗಳಿವೆ. ಶ್ರೀರಾಮದೇವರ ಆಗಮನಕ್ಕೆ ಮೊದಲು ಆ ಬೆಟ್ಟವನ್ನು ಪ್ರೇತಶಿಲೆಯೆಂದೇ ಕರೆಯುತ್ತಿದ್ದರು.

**ಕಾಕಬಲಿ :** ರಾಮಶಿಲೆಯಿಂದ 200 ಗಜಗಳ ದಕ್ಷಿಣಕ್ಕೆ ಒಂದು ಆವರಣವಿದೆ. ಅದರ ಮಧ್ಯದಲ್ಲಿ ಒಂದು ವಟವೃಕ್ಷವಿದೆ. ಅಲ್ಲಿ ಕಾಕಬಲಿ, ಯಮಬಲಿ ಮತ್ತು ಶ್ವಾನಬಲಿಗಳನ್ನು ಕೊಡುತ್ತಾರೆ.

**ಪ್ರೇತಶಿಲಾ ಮತ್ತು ಬ್ರಹ್ಮಕುಂಡ :** ರಾಮಶಿಲಾ ಬೆಟ್ಟದಿಂದ 4 ಮೈಲಿಗಳ ಪಶ್ಚಿಮಕ್ಕೆ ಪ್ರೇತಶಿಲೆಯಿದೆ. ಅದರ ಪುರಾತನವಾದ ಹೆಸರು ಪ್ರೇತಪರ್ವತವೆಂದು. ಗುಹೆಯಿಂದ ಈ ಸ್ಥಳವು 7 ಮೈಲಿಗಳ ದೂರದಲ್ಲಿದೆ. ಬೆಟ್ಟದ ಬುಡದಲ್ಲಿ ಒಂದು ಒಳ್ಳೆಯ ಸರೋವರವಿದೆ. ಅದನ್ನು ಬ್ರಹ್ಮಕುಂಡವೆಂದೂ ಕರೆಯುತ್ತಾರೆ. ಅಲ್ಲಿಯವರೆಗೆ ಎಂದರೆ, ಗಯೆಯಿಂದ ರಾಮಶಿಲಾ ಬೆಟ್ಟದ ಮಾರ್ಗದ ಮೇಲೆ ಬ್ರಹ್ಮಕುಂಡದ ತನಕ ಒಳ್ಳೆಯ ರಸ್ತೆಯಿದೆ. ಬ್ರಹ್ಮಕುಂಡದ ಹತ್ತಿರವೇ ಒಂದೆರಡು ಗುಡಿಗಳಿವೆ. ಬ್ರಹ್ಮಕುಂಡದಿಂದ ಸುಮಾರು 400 ಮೆಟ್ಟಿಲುಗಳನ್ನು ಹತ್ತಿ ಪ್ರೇತಶಿಲೆಯನ್ನು ಮುಟ್ಟಬೇಕಾಗುತ್ತದೆ. ಮೇಲೆ ಒಂದು ಚಿಕ್ಕ ಮಂದಿರವಿದೆ.

**ವೈತರಣೀ :** ಗಯೆಯ ದಕ್ಷಿಣಮಹಾದ್ವಾರದ ದಕ್ಷಿಣಭಾಗದಲ್ಲಿ ಈ ಸರೋವರವಿದೆ.

**ಭೀಮಗಯಾ :** ವೈತರಣಿಯ ಪಶ್ಚಿಮೋತ್ತರದಿಕ್ಕಿನಲ್ಲಿ ಒಂದು ಆವರಣದ ಒಳಗಡೆಯಲ್ಲಿ ಒಂದು ಶಿಲೆಯಿದೆ. ಆವರಣದ ಒಂದು ಪಡಸಾಲೆಯಲ್ಲಿ ಭೀಮಸೇನನ ಮೂರ್ತಿಯಿದೆ. ದಕ್ಷಿಣದಲ್ಲಿರುವ ಒಂದು ಪಡಸಾಲೆಯಲ್ಲಿ ಭೀಮಸೇನನ ಅಂಗುಷ್ಠದ ಮೂರು ಮೊಳ ಆಳವಾದ ಚಿಹ್ನೆಯಿದೆ.

**ಭಸ್ಮಕೂಟ–ಗೋಪ್ರತಾರ :** ಭೀಮಗಯೆಯಿಂದ ದಕ್ಷಿಣ-ಪಶ್ಚಿಮಕ್ಕೆ ಈ ಚಿಕ್ಕ ಬೆಟ್ಟವಿದೆ. ಇದರ ಮೇಲೆ ಜನಾರ್ದನದೇವರ ಗುಡಿಯಿದೆ. ಆ ಗುಡಿಯಿಂದ ಸ್ವಲ್ಪ ದೂರದಲ್ಲಿಯೇ ಮಂಗಳಾದೇವಿಯ ಗುಡಿಯಲ್ಲಿ ಮಂಗಳೇಶ್ವರಶಿವಲಿಂಗವೂ, ಮಂಗಳಾದೇವಿಯ ಮೂರ್ತಿಯೂ ಇವೆ. ಅಲ್ಲಿಯೇ ಗೋಪ್ರತಾರ ತೀರ್ಥಗಳೂ ಇವೆ. ಒಂದು ಶಿಲೆಯ ಮೇಲೆ ಹಸುಗಳ ಗೊರಸಿನ ಚಿಹ್ನೆಗಳಿವೆ. ಬ್ರಹ್ಮದೇವನು ಇಲ್ಲಿ ಗೋದಾನವನ್ನು ಮಾಡಿದ್ದನೆಂದು ಹೇಳುತ್ತಾರೆ.

**ಬ್ರಹ್ಮಸರೋವರ :** ಗಯೆಯ ದಕ್ಷಿಣಾಮಹಾದ್ವಾರದಿಂದ ಸುಮಾರು 250 ಗಜಗಳ ದೂರದಲ್ಲಿ ವೈತರಿಣೀಸರೋವರದ ಹತ್ತಿರ ಈ ಸರೋವರವಿದೆ. ಇದರಲ್ಲಿ ಗದಾಖಂಡವು ಬಿದ್ದಿದೆ ; ಇದನ್ನು ಪ್ರದಕ್ಷಿಣೆ ಮಾಡಲಾಗುತ್ತದೆ. ಇದರ ಹತ್ತಿರವೇ ಎರಡನೆಯ ಕಾಕಬಲಿ ವೇದಿಕೆಯಿದೆ. ಹತ್ತಿರದಲ್ಲಿಯೇ 'ತಾರಕಬ್ರಹ್ಮ' ದರ್ಶನಮಾಡಿ 'ಆಮ್ರಸಿಂಚನ' ಮಾಡಬೇಕೆಂಬ ವಿಧಿಯಿದೆ ; ಆದರೆ ಈಗ ಆಮ್ರವೃಕ್ಷ (ಮಾವಿನ ಮರ) ಅಲ್ಲಿಲ್ಲ. ಕೇವಲ ಒಂದು ಹಳ್ಳ (ತಗ್ಗು)ವಿದೆ.

**ಅಕ್ಷಯವಟ :** ಬ್ರಹ್ಮಸರೋವರದ ಹತ್ತಿರವೇ ಅಕ್ಷಯವಟವೃಕ್ಷವಿದೆ. ನಾಲ್ಕು ಗೋಡೆಗಳಿಂದ ಆವೃತವಾಗಿರುವ ದೊಡ್ಡ ಅಂಗಳದ ಮಧ್ಯೆದಲ್ಲಿ ವಟವೃಕ್ಷವಿದೆ. ಇದರ ಉತ್ತರದಲ್ಲಿ ವಟೇಶ್ವರಮಹಾದೇವನ ಗುಡಿಯಿದೆ. ಅಕ್ಷಯವಟದಿಂದ ಪಶ್ಚಿಮಕ್ಕೆ ರುಕ್ಮಿಣೀಸರೋವರವೂ ಮತ್ತು ಅಕ್ಷಯವಟದ ಉತ್ತರಕ್ಕೆ ವೃದ್ಧಪಿತಾಮಹೇಶ್ವರ ಗುಡಿಯೂ ಇವೆ.

**ಗದಾಲೋಲ :** ಅಕ್ಷಯವಟದ ದಕ್ಷಿಣಕ್ಕೆ ಗದಾಲೋಲವೆಂಬ ಹೆಸರಿನ

ಸರೋವರವಿದೆ. ಸರೋವರದಲ್ಲಿ ಒಂದು ಸ್ತಂಭದ ರೂಪದಲ್ಲಿ ಗದೆಯಿದೆ. ಅಸುರಸಂಹಾರಾನಂತರ ಭಗವಂತನು ಗದೆಯನ್ನು ಈ ಸರೋವರದಲ್ಲಿ ತೊಳೆದನೆಂದು ಪ್ರತೀತಿಯಿದೆ.

**ಮಙ್ಗಳಾಗೌರಿ :** ಬ್ರಹ್ಮಸರೋವರದ ಹತ್ತಿರ ಗುಡ್ಡದ ಮೇಲೆ 125 ಮೆಟ್ಟಿಲುಗಳ ಮೇಲೆ ಈ ಗುಡ್ಡ ಸಿಗುತ್ತದೆ. ಇದೇ ಗುಡ್ಡವನ್ನು ಇನ್ನೂ ಹತ್ತಿದರೆ ಅವಿಮುಕ್ತೇಶ್ವರನಾಥನ ಪ್ರಾಚೀನದೇವಾಲಯವು ಸಿಗುತ್ತದೆ. ಇಲ್ಲಿ ಭಗವಂತನ ಚತುರ್ಭುಜಮೂರ್ತಿಯಿದೆ. ತಮಗಾಗಿ ಶ್ರಾದ್ಧಮಾಡಲು ಉತ್ತ ರಾಧಿಕಾರಿಗಳಾರೂ ಇಲ್ಲದವರೂ, ತಮಗಾಗಿ ತಾವೇ ಶ್ರಾದ್ಧಮಾಡಿಕೊಳ್ಳ ಲಿಚ್ಛಿಸುವವರೂ–ಇಲ್ಲಿರುವ ಭಗವನ್ಮೂರ್ತಿಯ ಬಲಗೈಯ್ಯಲ್ಲಿ ತಿಲರಹಿತ ವಾಗಿ (ಎಳ್ಳನ್ನು ಸೇರಿಸದೇ), ಮೊಸರನ್ನು ಸೇರಿಸಿ ಮಾಡಿದ ಮೂರು ಪಿಂಡ ಗಳನ್ನು ಸಮರ್ಪಿಸಬೇಕು. ಇದು ಶಾಸ್ತ್ರವಿಧಿ.

**ಆಕಾಶಗಂಗೆ :** ಮಂಗಳಾಗೌರೀ ಬೆಟ್ಟದ ಹತ್ತಿರವೇ ಇನ್ನೊಂದು ಬೆಟ್ಟದ ಮೇಲೆ ಆಂಜನೇಯನ ಗುಡಿಯಿದೆ. ಇಲ್ಲಿರುವ ಒಂದು ಕುಂಡವನ್ನು ಆಕಾಶಗಂಗೆಯೆನ್ನುತ್ತಾರೆ. ಇದರ ಕೆಳಗೆ ಸ್ವಲ್ಪ ದೂರದಲ್ಲಿರುವ ಕುಂಡವನ್ನು ಪಾತಾಳಗಂಗೆಯೆನ್ನುತ್ತಾರೆ. ಗುಡ್ಡದ ಕೆಳಗೆ ಪಶ್ಚಿಮಕ್ಕೆ ಕಪಿಲಧಾರೆಯಿದೆ.

**ಗಾಯತ್ರಿದೇವೀ :** ವಿಷ್ಣುಪದಮಂದಿರದ ಅರ್ಧ ಮೈಲಿ ಉತ್ತರಕ್ಕೆ ಫಲ್ಗುನದಿಯ ದಡದಲ್ಲಿ ಗಾಯತ್ರೀಘಟ್ಟವಿದೆ. ಘಟ್ಟದ ಮೇಲೆ ಗಾಯತ್ರೀ ದೇವಿಯ ಗುಡಿಯಿದೆ. ಇದರ ಉತ್ತರಕ್ಕೆ ಲಕ್ಷ್ಮೀನಾರಾಯಣನ ಮಂದಿರ ವಿದೆ. ಹತ್ತಿರದಲ್ಲಿಯೇ ಬಭನೀಘಟ್ಟದಲ್ಲಿ ಫಲ್ಗೀಶ್ವರ ಶಿವಾಲಯವಿದೆ. ಇದರ ಉತ್ತರಕ್ಕೆ ಗದಾದಿವ್ಯನೆಂಬ ಹೆಸರಿನ ಚತುರ್ಭುಜಸೂರ್ಯನ ಗುಡಿಯಿದೆ.

**ಸಂಕಟಾದೇವೀ ಪ್ರಪಿತಾಮಹೇಶ್ವರ :** ವಿಷ್ಣುಪದಗುಡಿಯಿಂದ ಸುಮಾರು 250 ಗಜಗಳಷ್ಟು ದಕ್ಷಿಣದಲ್ಲಿ ಸಂಕಟಾದೇವೀ ಮತ್ತು ಪ್ರಪಿತಾ ಮಹೇಶ್ವರರ ಚಿಕ್ಕ ಚಿಕ್ಕ ಗುಡಿಗಳಿವೆ.

ಬ್ರಹ್ಮಯೋನಿ : ಗಯೆಯಿಂದ ಸುಮಾರು 2 ಮೈಲಿಗಳ ದೂರದಲ್ಲಿ (ಬುದ್ಧಗಯೆಯ ಕಡೆಗೆ) ಈ ಬೆಟ್ಟವಿದೆ. ಸುಮಾರು 470 ಮೆಟ್ಟಿಲುಗಳ

ಮೇಲೆ ಬ್ರಹ್ಮದೇವರ ಗುಡಿಯಿದೆ. ಈ ಬೆಟ್ಟದ ಮೇಲೆ ಎರಡು ಕಲ್ಲುಗಳು ಗುಹೆಯ ರೂಪದಲ್ಲಿ ಬಿದ್ದಿವೆ. ಇವನ್ನು ಬ್ರಹ್ಮಯೋನಿ ಮತ್ತು ಮಾತೃ ಯೋನಿಯೆಂದು ಕರೆಯುತ್ತಾರೆ. ಕೆಲವರು ಇವುಗಳಲ್ಲಿ ನುಸುಳಿ ಆಚೆಗೆ ಬರುತ್ತಾರೆ. ಪರ್ವತಶಿಖರದಿಂದ ಕೆಳಗೆ ಬ್ರಹ್ಮಕುಂಡವೆಂಬ ಒಳ್ಳೆಯ ಸರೋವರವಿದೆ.

**ಸರಸ್ವತೀಕುಂಡ ಮತ್ತು ಸಾವಿತ್ರೀಕುಂಡ :** ಬ್ರಹ್ಮಯೋನಿ ಬೆಟ್ಟದ ಕೆಳಗೆ ಈ ಎರಡು ಕುಂಡಗಳಿವೆ. ಸಾವಿತ್ರೀಕುಂಡದ ನೀರು ಸ್ವಚ್ಛವಾಗಿದೆ. ಇಲ್ಲಿಯೇ ಸಾವಿತ್ರೀದೇವಿಯ ಗುಡಿಯೂ ಕರ್ಮನಾಶಾಸರೋ ವರವೂ ಇವೆ.

**ಸರಸ್ವತೀನದಿ :** ಗಯೆಯಿಂದ ಮೂರು ಮೈಲಿಗಳಷ್ಟು ಮುಂದೆ ಮುಖ್ಯರಸ್ತೆಯನ್ನು ಬಿಟ್ಟು ಕಾಲುದಾರಿಯಲ್ಲಿ ಒಂದು ಮೈಲಿ ಹೋದರೆ ಸರಸ್ವತೀನದಿಯು ಸಿಗುತ್ತದೆ. ಇದರ ದಡದಲ್ಲಿ ಸರಸ್ವತೀದೇವಿಯ ಚಿಕ್ಕಗುಡಿ ಯಿದೆ. ಇಲ್ಲಿಯೇ ಒಂದು ಪಡಸಾಲೆಯಲ್ಲಿ ಚರಣಚಿಹ್ನೆಯೂ ಕೆಲವು ಶಿವ ಲಿಂಗಗಳೂ ಇವೆ.

**ಮತಂಗವಾಪೀ :** ಸರಸ್ವತೀನದಿಯಿಂದ ಸುಮಾರು 1 ಮೈಲಿ ದೂರ ದಲ್ಲಿ ಮತಂಗವಾಪೀ ಎಂಬ ಕೊಳವಿದೆ. ಇಲ್ಲಿಗೆ ಕಾಲುದಾರಿಯಲ್ಲಿ ಹೋಗ ಬೇಕಾಗುತ್ತದೆ. ಕೊಳದ ಉತ್ತರಕ್ಕೆ 4 ಗುಡಿಗಳಿವೆ. ಮತಂಗೇಶ್ವರನ ಗುಡಿ ಅವುಗಳಲ್ಲಿ ಮುಖ್ಯವಾದುದು.

**ಧರ್ಮಾರಣ್ಯ :** ಮತಂಗವಾಪಿಯಿಂದ 2 ಮೈಲಿಗಳಷ್ಟು ದಕ್ಷಿಣ ಪೂರ್ವಕ್ಕೆ ಈ ಸ್ಥಾನವಿದೆ. ಇಲ್ಲಿ ಒಂದು ಭಾವಿಯಿದೆ. ಪಿಂಡದಾನದ ನಂತರ ಈ ಭಾವಿಯಲ್ಲಿ ಪಿಂಡಗಳು ಹಾಕಲ್ಪಡುತ್ತವೆ. ಇಲ್ಲಿ ಧರ್ಮರಾಜಾಯುಧಿ ಷ್ಠಿರನ ಚಿಕ್ಕ ಗುಡಿಯಿದೆ. ಪಕ್ಕದಲ್ಲಿಯೇ 'ರಹಟಕೂಪ'ವಿದೆ. ಪುತ್ರಾರ್ಥಿಗಳು ಇದರ ಹತ್ತಿರ ಪಿಂಡದಾನ ಮಾಡುತ್ತಾರೆ. ಕೂಪದ ಹತ್ತಿರವೇ ಭೀಮಸೇನನ ಚಿಕ್ಕಗುಡಿಯಿದೆ. ಯುಧಿಷ್ಠಿರನು ತನ್ನ ತಂದೆಯ ಶ್ರಾದ್ಧಮಾಡಲು ಭೀಮನೊಡನೆ ಇಲ್ಲಿ ಬಂದಿದ್ದಾಗ ಇಲ್ಲಿಯೇ ಕೆಲವು ಕಾಲ ತಪಸ್ಸುಮಾಡಿದ್ದ ನೆಂದು ಹೇಳುತ್ತಾರೆ.

**ಬೋಧಗಯಾ :** (ಬುದ್ಧಗಯಾ) ಧರ್ಮಾರಣ್ಯದಿಂದ ಪಶ್ಚಿಮಕ್ಕೆ

1 ಮೈಲಿಯಲ್ಲಿ ಈ ಸ್ಥಾನವಿದೆ ; ಗಯೆಯಿಂದ 7 ಮೈಲಿಗಳಷ್ಟಾಗುತ್ತದೆ. ಇಲ್ಲಿ ಬುದ್ಧದೇವನ ವಿಶಾಲಮಂದಿರವಿದೆ. ಗುಡಿಯ ಹಿಂದೆ ಕಲ್ಲಿನ ಕಟ್ಟೆಯಿದೆ. ಇದನ್ನು ಬೌದ್ಧಸಿಂಹಾಸನವೆಂದು ಕರೆಯುತ್ತಾರೆ. ಈ ಸ್ಥಳದಲ್ಲಿ ಕುಳಿತೇ ಬುದ್ಧನು ತಪಸ್ಸುಮಾಡಿ ಬೋಧಿವೃಕ್ಷದ ಕೆಳಗೆ ಜ್ಞಾನಪಡೆದುದು. ಈ ಬೋಧಿವೃಕ್ಷವು ಈಗ ಇಲ್ಲ. ಹೊಸದಾಗಿ ಅಶ್ವತ್ಥವೃಕ್ಷವೊಂದು ನೆಡಲ್ಪಟ್ಟಿದೆ. ಗುಡಿಯ ಸ್ವಲ್ಪದೂರದಲ್ಲಿಯೇ ಪೇಟೆಯಿದೆ.

**ಬಕರೌರ್ :** ಬುದ್ಧಗಯೆಯಿಂದ ಸ್ವಲ್ಪದೂರ ಪೂರ್ವಕ್ಕೆ ಈ ಪ್ರಾಚೀನ ಸ್ಥಾನವಿದೆ. ಕೆಲವು ಸ್ತೂಪಗಳೂ ಭಗ್ನಾವಶೇಷಗಳೂ ಇಲ್ಲಿವೆ.

—— —

## ಗಯಾಶ್ರಾದ್ಧಕ್ರಮ

**ಪ್ರಥಮದಿನ :** ಪುನಪುನನದಿಯ ದಡದಲ್ಲಿ ಶ್ರಾದ್ಧಮಾಡಿದ ನಂತರ ಗಯೆಗೆ ಬಂದು ಮೊದಲನೆಯ ದಿನ ಫಲ್ಗುನದಿಯಲ್ಲಿ ಸ್ನಾನ, ನದಿಯ ದಡದಲ್ಲಿ ಶ್ರಾದ್ಧ. ಆ ದಿನ ಗಾಯತ್ರೀತೀರ್ಥದಲ್ಲಿ ಪ್ರಾತಃಸ್ನಾನ-ಸಂಧ್ಯೆ ; ಮಧ್ಯಾಹ್ನದಲ್ಲಿ ಸಾವಿತ್ರೀಕುಂಡದಲ್ಲಿ ಸ್ನಾನ-ಸಂಧ್ಯೆ ; ಸಾಯಂಕಾಲ ಸರಸ್ವತೀ ಕುಂಡದಲ್ಲಿ ಸ್ನಾನ-ಸಂಧ್ಯೆಗಳನ್ನಾಚರಿಸಬೇಕು.

**ದ್ವಿತೀಯದಿನ :** ಫಲ್ಗುಸ್ನಾನ ; ಪ್ರೇತಶಿಲೆಗೆ ಹೋಗಿ ಬ್ರಹ್ಮಕುಂಡ ಮತ್ತು ಪ್ರೇತಶಿಲೆಗಳ ಮೇಲೆ ಪಿಂಡದಾನ ; ಅಲ್ಲಿಂದ ರಾಮಶಿಲೆಗೆ ಬಂದು ರಾಮಕುಂಡ ಮತ್ತು ರಾಮಶಿಲೆಗಳ ಮೇಲೆ ಪಿಂಡದಾನ ಮತ್ತು ಅಲ್ಲಿಂದ ಕೆಳಗಿಳಿದು ಕಾಕಬಲಿಸ್ಥಾನದಲ್ಲಿ ಕಾಕ, ಯಮ ಮತ್ತು ಶ್ವಾನಬಲಿ—ಪಿಂಡದಾನ ಗಳನ್ನು ಮಾಡಬೇಕು.

**ತೃತೀಯದಿನ :** ಫಲ್ಗುನದಿಯಲ್ಲಿ ಸ್ನಾನ ; ಅನಂತರ ಉತ್ತರಮಾನಸಕ್ಕೆ ಹೋಗಿ ಅಲ್ಲಿ ಸ್ನಾನ, ತರ್ಪಣ, ಪಿಂಡದಾನ, ಉತ್ತರಾರ್ಕದರ್ಶನ ಮತ್ತು ಅಲ್ಲಿಂದ ಮೌನವಾಗಿ ಸೂರ್ಯಕುಂಡಕ್ಕೆ ಹೋಗಿ—ಅದರ ಉದೀಚೀ, ಕನ ಖಲ ಮತ್ತು ದಕ್ಷಿಣಮಾನಸತೀರ್ಥಗಳಲ್ಲಿ ಸ್ನಾನ, ತರ್ಪಣ, ಪಿಂಡದಾನ ; ಅನಂತರ ದಕ್ಷಿಣಾರ್ಕದರ್ಶನ-ಪೂಜನ. ಅಲ್ಲಿಂದ ಫಲ್ಗುನದಿಗೆ ಹೋಗಿ ಅಲ್ಲಿ

ಸ್ನಾನ-ತರ್ಪಣ ; ಅನಂತರ ಭಗವಾನ್ ಗದಾಧರನನ್ನು ದರ್ಶಿಸಿ ಪೂಜಿಸಬೇಕು.

**ಚತುರ್ಥದಿನ :** ಫಲ್ಗುಸ್ನಾನ ; ಮತಂಗವಾಪಿಗೆ ಹೋಗಿ ಅಲ್ಲಿ ಸ್ನಾನ, ಪಿಂಡದಾನ, ಧರ್ಮೇಶ್ವರದರ್ಶನ, ದರ್ಮಾರಣ್ಯದಲ್ಲಿ ಪಿಂಡದಾನ ಮತ್ತು ಅಲ್ಲಿಂದ ಬುದ್ಧಗಯೆಗೆ ಹೋಗಿ ಅಲ್ಲಿ ಬೋಧಿವೃಕ್ಷದ ಕೆಳಗೆ ಶ್ರಾದ್ಧಮಾಡಬೇಕು.

**ಪಂಚಮದಿನ :** ಫಲ್ಗುಸ್ನಾನ ; ಬ್ರಹ್ಮಸರಸ್ಸಿನಲ್ಲಿ ಸ್ನಾನ-ತರ್ಪಣ, ಪಿಂಡದಾನ, ಆಮ್ರಸೇಚನ, ಬ್ರಹ್ಮಸರಸ್ಸಿನ ಪ್ರದಕ್ಷಿಣೆ, ಅಲ್ಲಿ ಕಾಕ-ಯಮ-ಶ್ವಾನಬಲಿ, ಮತ್ತೆ ಸ್ನಾನ.

**ಷಷ್ಠದಿನ :** ಫಲ್ಗುನದಿಯಲ್ಲಿ ಸ್ನಾನ ; ವಿಷ್ಣುಪದಮಂದಿರದಲ್ಲಿ ವಿಷ್ಣುಪದ, ರುದ್ರಪದ, ದಕ್ಷಿಣಾಗ್ನಿಪದ, ಗಾರ್ಹಸ್ಪತ್ಯಪದ, ಆಹವನೀಯಪದ, ಸಭ್ಯಪದ, ಆವಸಥ್ಯಪದ, ಸೂರ್ಯಪದ, ಕಾರ್ತಿಕೇಯಪದ, ಕ್ರೌಂಚಪದ ಮತ್ತು ಕಶ್ಯಪಪದ–(ವಿಷ್ಣುಪದಮಂದಿರದಲ್ಲಿಯೇ ಇವೆಲ್ಲವೂ ಇವೆ.) ಈ ವೇದಿಕೆಗಳ ದರ್ಶನ ಮತ್ತು ಅವುಗಳ ಮೇಲೆ ಪಿಂಡದಾನ-ಅನಂತರ ಗಣಕರ್ಣಿಕೆಯಲ್ಲಿ ತರ್ಪಣ, ಗಯಾಶಿರ, ಜಿಹ್ವಾಲೋಲ, ಮಧುಸ್ರವಾ, ಮುಂಡಪೃಷ್ಠಗಳಲ್ಲಿ ಪಿಂಡದಾನ.

**ಸಪ್ತಮದಿನ :** ಫಲ್ಗುನದೀಸ್ನಾನ ; ಗದಾಲೋಲದಲ್ಲಿ ಸ್ನಾನ-ಶ್ರಾದ್ಧ ; ಅಕ್ಷಯವಟದ ಕೆಳಗೆ ಶ್ರಾದ್ಧ ಮತ್ತು ಅಲ್ಲಿಯೇ ಮೂರು ಅಥವಾ ಒಬ್ಬ ಬ್ರಾಹ್ಮಣನಿಗೆ ಭೋಜನಮಾಡಿಸಬೇಕು.

ಈ ಏಳು ದಿನಗಳ ಕರ್ಮಗಳು ಸಕಾಮಶ್ರಾದ್ಧ ಮಾಡುವವರಿಗೆ ಮಾತ್ರ. ಈ ಏಳು ದಿನಗಳಲ್ಲದೇ ವೈತರಣಿ, ಭಸ್ಮಕೂಟ, ಗೋಪ್ರತಾರ, ಆದಿಗಯಾ, ಧೌತಪಾದ, ಜಿಹ್ವಾಲೋಲ, ರಾಮಗಯೆಗಳಲ್ಲಿ ಸ್ನಾನ- ತರ್ಪಣ-ಪಿಂಡದಾನಾದಿಗಳು ಮಾಡಲ್ಪಡುತ್ತವೆ. ಗಯೆಯಲ್ಲಿ ಆಶ್ವಯುಜ ಕೃಷ್ಣಪಕ್ಷದಲ್ಲಿ ಬಹಳ ಜನರು ಶ್ರಾದ್ಧಮಾಡಲು ಬರುತ್ತಾರೆ. ಸಂಪೂರ್ಣಪಿತೃಪಕ್ಷವನ್ನೂ ಗಯೆಯಲ್ಲಿಯೇ ಕಳೆಯುತ್ತಾರೆ. ಪಿತೃಪಕ್ಷದಲ್ಲಿ ಪಿಂಡದಾನಾದಿಗಳು ಈ ರೀತಿ ಇವೆ.

**ಭಾದ್ರಪದಶುಕ್ಲ ಚತುರ್ದಶೀ :** ಪುನಪುನನದಿಯ ದಡದಲ್ಲಿ ಶ್ರಾದ್ಧ.

**ಭಾದ್ರಪದ ಪೂರ್ಣಿಮೆ :** ಫಲ್ಗುನದೀಸ್ನಾನ ; ಅಲ್ಲಿಯೇ ಖೀರಿನಲ್ಲಿ ಮಾಡಿದ ಪಿಂಡದಾನ-ಶ್ರಾದ್ಧ.

**ಆಶ್ವಯುಜ ಕೃಷ್ಣ ಪ್ರತಿಪತ್ :** ಬ್ರಹ್ಮಕುಂಡ, ಪ್ರೇತಶಿಲೆ ರಾಮಕುಂಡ ಮತ್ತು ರಾಮಶಿಲೆಗಳಲ್ಲಿ ಶ್ರಾದ್ಧ ಮತ್ತು ಕಾಕಬಲಿ.

**ಆಶ್ವಯುಜ ಕೃಷ್ಣ ದ್ವಿತೀಯಾ :** ಉತ್ತರಮಾನಸ, ಉದೀಚಿ, ಕನ ಖಲ, ದಕ್ಷಿಣಮಾನಸ ಮತ್ತು ಜಿಹ್ವಾಲೋಲತೀರ್ಥಗಳಲ್ಲಿ ಪಿಂಡದಾನ.

**ಆಶ್ವಯುಜ ಕೃಷ್ಣ ತೃತೀಯಾ :** ಸರಸ್ವತೀನದಿಯಲ್ಲಿ ಸ್ನಾನ, ಮತಂಗವಾಪೀ, ಧರ್ಮಾರಣ್ಯ ಮತ್ತು ಬುದ್ಧಗಯೆಗಳಲ್ಲಿ ಶ್ರಾದ್ಧ.

**ಆಶ್ವಯುಜ ಕೃಷ್ಣ ಚತುರ್ಥೀ :** ಬ್ರಹ್ಮಸರೋವರದಲ್ಲಿ ಶ್ರಾದ್ಧ, ಆಮ್ರಸೇಚನ, ಕಾಕಬಲಿ.

**ಆಶ್ವಯುಜ ಕೃಷ್ಣ ಪಂಚಮೀ :** ವಿಷ್ಣುಪದಮಂದಿರದಲ್ಲಿ, ರುದ್ರಪದ, ವಿಷ್ಣುಪದ, ಬ್ರಹ್ಮಪದಗಳಲ್ಲಿ ಖೀರಿನ ಪಿಂಡದಾನ.

**ಆಶ್ವಯುಜ ಕೃಷ್ಣ ಷಷ್ಠಿಯಿಂದ ಅಷ್ಟಮಿಯವರೆಗೆ :** ವಿಷ್ಣುಪದ ಮಂದಿರದ ಷೋಡಶವೇದೀ ಎಂಬ ಮಂಟಪದಲ್ಲಿ 14 ಸ್ಥಾನಗಳಲ್ಲಿ ಮತ್ತು ಹತ್ತಿರದ ಮತ್ತೊಂದು ಮಂಟಪದಲ್ಲಿ 2 ಸ್ಥಾನಗಳಲ್ಲಿ ಪಿಂಡದಾನ.

ವೇದಿಕೆಗಳ ಹೆಸರುಗಳು ಈ ರೀತಿ ಇವೆ–ಕಾರ್ತಿಕಪದ, ದಕ್ಷಿಣಾಗ್ನಿ, ಗಾರ್ಹಪತ್ಯಾಗ್ನಿ, ಆಹವನೀಯಾಗ್ನಿ, ಸಾತತ್ಯಾಗ್ನಿ, ಆವಸಥ್ಯಾಗ್ನಿ, ಸೂರ್ಯ ಪದ, ಚಂದ್ರಪದ, ಗಣೇಶಪದ, ದಧೀಚಿಪದ, ಕಣ್ವಪದ, ಮತಂಗಪದ, ಕ್ರೌಂಚಪದ, ಇಂದ್ರಪದ, ಅಗಸ್ತ್ಯಪದ ಮತ್ತು ಕಶ್ಯಪಪದ. ಅಷ್ಟಮಿಯಲ್ಲಿ ಷೋಡಶವೇದೀಮಂಟಪದಲ್ಲಿ ಹಾಲಿನಿಂದ ಗಜಕರ್ಣ–ತರ್ಪಣ ಕೊಡಬೇಕು.

**ಆಶ್ವಯುಜಕೃಷ್ಣ ನವಮಿ :** ರಾಮಗಯೆಯಲ್ಲಿ ಶ್ರಾದ್ಧ; ಸೀತಾ ಕುಂಡದಲ್ಲಿ ಮಾತಾ, ಪಿತಾಮಹೀ, ಪ್ರಪಿತಾಮಹೀ (ತಾಯಿ, ತಂದೆಯ ತಾಯಿ, ತಂದೆಯ ತಂದೆಯ ಹೆಂಡತಿ ಎಂದರೆ ಮುತ್ತಜ್ಜಿ) ಇವರಿಗೆ ಮರಳಿ (ಉಸುಕು) ನಲ್ಲಿ ಮಾಡಿದ ಪಿಂಡದಾನ.

**ಆ.ಕೃ. ದಶಮಿ :** ಗಯಾಶಿರ ಮತ್ತು ಗಯೂಕೂಪಗಳಲ್ಲಿ ಪಿಂಡದಾನ.

**ಆ.ಕೃ. ಏಕಾದಶಿ :** ಮುಂಡಪೃಷ್ಠ, ಆದಿಗಯೆ ಮತ್ತು ಧೌತಪಾದಗಳಲ್ಲಿ ಖೋವೀ ಅಥವಾ ಎಳ್ಳು-ಬೆಲ್ಲದ ಪಿಂಡದಾನ.

**ಆ.ಕೃ. ದ್ವಾದಶೀ :** ಭೀಮಗಯಾ, ಗೋಪ್ರತಾರ ಮತ್ತು ಗದಾ ಲೋಲಗಳಲ್ಲಿ ಪಿಂಡದಾನ.

**ಆ.ಕೃ. ತ್ರಯೋದಶೀ :** ಫಲ್ಗುನದಿಯಲ್ಲಿ ಸ್ನಾನ ಮತ್ತು ಹಾಲಿನ ತರ್ಪಣ. ಗಾಯತ್ರೀ, ಸಾವಿತ್ರೀ ಮತ್ತು ಸರಸ್ವತೀತೀರ್ಥಗಳಲ್ಲಿ ಕ್ರಮವಾಗಿ ಪ್ರಾತಃ-ಮಧ್ಯಾಹ್ನ-ಸಾಯಂಸ್ನಾನ ಮತ್ತು ಸಂಧ್ಯೆ.

**ಆ.ಕೃ. ಚತುರ್ದಶೀ :** ವೈತರಣೀಸ್ನಾನ ಮತ್ತು ತರ್ಪಣ.

**ಆ.ಕೃ. ಅಮಾವಾಸ್ಯೆ:** ಅಕ್ಷಯವಟದ ಕೆಳಗೆ ಶ್ರಾದ್ಧ ಮತ್ತು ಬ್ರಾಹ್ಮಣಭೋಜನ.

**ಆಶ್ವಯುಜ ಶುಕ್ಲ ಪ್ರತಿಪತ್ :** ಗಾಯತ್ರೀಘಟ್ಟದಲ್ಲಿ ಮೊಸರು–ಅಕ್ಷತೆಯ ಪಿಂಡದಾನದೊಂದಿಗೆ ಗಯಾಶ್ರಾದ್ಧವು ಸಮಾಪ್ತಿಗೊಳ್ಳುತ್ತದೆ.

(ಇದು ಬಾರ್ಹಸ್ಪತ್ಯಮಾನರೀತಿಯಿಂದ ಹೇಳಲ್ಪಟ್ಟಿದೆ. ಚಾಂದ್ರಮಾನದ ಪ್ರಕಾರ ಭಾದ್ರಪದ ಕೃಷ್ಣ ಪಾಡ್ಯಮಿಯಿಂದ ಭಾದ್ರಪದ ಕೃಷ್ಣ ಅಮಾವಾಸ್ಯಾಪರ್ಯಂತ ಪಿತೃಪಕ್ಷವಾಗುತ್ತದೆ.)

**ಗಯೆಯ ಇತಿಹಾಸ :** ಧರ್ಮನ ಮಗಳಾದ ಧರ್ಮವತಿಯು ತನ್ನ ಪತಿಯಾದ ಮರೀಚಿಯ ಪಾದಗಳನ್ನು ಒತ್ತುತ್ತಿದ್ದರು. ಆ ಸಮಯಕ್ಕೆ ಸರಿ ಯಾಗಿ ಬ್ರಹ್ಮದೇವನು ಅಲ್ಲಿಗೆ ಬಂದನು. ಪೂಜ್ಯನಾದ ಮಾವನನ್ನು ಸ್ವಾಗತಿ ಸಲು ಧರ್ಮವತಿಯು ಎದ್ದುನಿಂತಳು. ಆದರೆ ಮರೀಚಿಮಹರ್ಷಿಯು ಇದನ್ನು ಪತಿಸೇವೆಯ ತ್ಯಾಗರೂಪವಾದ ದೋಷವೆಂದು ಪರಿಗಣಿಸಿ ಪತ್ನಿ ಯನ್ನು ಶಿಲೆಯಾಗಿಹೋಗುವಂತೆ ಶಪಿಸಿಬಿಟ್ಟನು. ಅನಂತರ ಧರ್ಮ ವತಿಯು ಒಂದು ಸಾವಿರ ವರ್ಷಗಳ ಕಾಲ ಕಠಿನ ತಪಸ್ಸನ್ನಾಚರಿಸಿದಳು. ಈ ತಪಸ್ಸಿನಿಂದ ಪ್ರಸನ್ನನಾದ ಶ್ರೀಮನ್ನಾರಾಯಣನೂ ಮತ್ತು ಇತರ ದೇವತೆ ಗಳೂ–ಧರ್ಮವತಿಯ ಶಿಲಾರೂಪದ ಮೇಲೆ ಎಲ್ಲ ದೇವತೆಗಳ ಸಾನ್ನಿಧ್ಯವೂ ಇರುವಂತೆ–ವರವನ್ನು ಕರುಣಿಸಿದರು.

ಗಯನೆಂಬ ಅಸುರನು ತಪಶ್ಚರಣೆಯಲ್ಲಿಯೇ ನಿರತನಾಗಿದ್ದನು.

ಅವನು ದೀರ್ಘಕಾಲದವರೆಗೂ ನಿಷ್ಕಾಮಭಾವನೆಯಿಂದ ತಪಶ್ಚರಣೆಯಲ್ಲಿಯೇ ನಿರತನಾಗಿದ್ದನು. ಭಗವಂತನಾದ ಶ್ರೀಮನ್ನಾರಾಯಣನು ಗಯನ ದೇಹವು ಎಲ್ಲ ತೀರ್ಥಗಳಿಗಿಂತಲೂ ಹೆಚ್ಚು ಪವಿತ್ರವಾಗಲೆಂದು ವರನೀಡಿದನು. ಆ ವರವನ್ನು ಪಡೆದ ನಂತರವೂ ಗಯಾಸುರನು ತಪಸ್ಸನ್ನು ಮಾಡುತ್ತಲೇ ಇದ್ದುಬಿಟ್ಟನು. ಅವನ ತಪೋಜ್ವಾಲೆಯಿಂದ ಮೂರು ಲೋಕಗಳೂ ಸಂತಪ್ತವಾದುವು. ದೇವತೆಗಳೂ ಸಂತ್ರಸ್ತರಾದರು. ಕಡೆಯಲ್ಲಿ ಭಗವಂತನಾದ ಶ್ರೀಮನ್ನಾರಾಯಣನ ಆದೇಶದಂತೆ ಬ್ರಹ್ಮದೇವನು ಗಯನ ಹತ್ತಿರ ಹೋಗಿ ಅವನ ದೇಹವನ್ನೇ ಯಜ್ಞವೇದಿಯನ್ನಾಗಿ ಮಾಡಿಕೊಳ್ಳಲು ಬೇಡಿದನು. ಗಯನು ನೆಲದಮೇಲೆ ಮಲಗಲು, ಅವನ ಶರೀರದ ಮೇಲೆಯೇ ಯಜ್ಞವು ಪ್ರಾರಂಭವಾಯಿತು. ಆದರೆ ಯಜ್ಞವು ಪೂರ್ಣವಾದ ನಂತರ ಗಯನು ಪುನಃ ಏಳು ಪ್ರಾರಂಭಿಸಿದನು. ಆಗ ದೇವತೆಗಳು 'ಧರ್ಮ ವತೀ ಶಿಲೆ'ಯನ್ನು ಗಯಾಸುರನ ಮೇಲೆ ಇಟ್ಟುಬಿಟ್ಟರು. ಇಷ್ಟಾದರೂ ಗಯಾಸುರನು ಮೇಲಕ್ಕೇಳಲು ಪ್ರಯತ್ನಪಟ್ಟನು. ಆಗ ದೇವತೆಗಳೆಲ್ಲ ರೊಂದಿಗೆ ಶ್ರೀಮಹಾವಿಷ್ಣುವು ಆ ಶಿಲೆಯ ಮೇಲೆ ಉಪಸ್ಥಿತನಾದನು.

ಗಯನಾಮಕನಾದ ಅಸುರನ 5 ಕ್ರೋಶ (10 ಮೈಲಿ) ವಿಸ್ತೃತವಾದ ಸಂಪೂರ್ಣಶರೀರವೂ ಪರಮಪವಿತ್ರವಾದುದು. ಅದರ ಮೇಲೆ ಎಲ್ಲಿಯೇ ಆಗಲೀ ಪಿಂಡದಾನಮಾಡುವುದರಿಂದ ಪಿತೃಗಳು ಪ್ರೇತಯೋನಿ ಮತ್ತು ನರಕಗಳಿಂದ ಬಿಡುಗಡೆಹೊಂದಿ ಅಕ್ಷಯತೃಪ್ತಿಯನ್ನು ಹೊಂದುತ್ತಾರೆ.

ದೇವ : ಇದು ಗಯಾ ಜಿಲ್ಲೆಯ ಔರಂಗಾಬಾದ್ ತಾಲ್ಲೂಕಿನಲ್ಲಿದೆ. ಐಲಪುರೂರವನಿಂದ ಸ್ಥಾಪಿಸಲ್ಪಟ್ಟ ವಿಶಾಲವಾದ ಸೂರ್ಯಮಂದಿರವಿಲ್ಲಿದೆ. ಅವನಿಂದಲೇ ನಿರ್ಮಿಸಲ್ಪಟ್ಟ ಸೂರ್ಯಕುಂಡವೂ ಇಲ್ಲಿದೆ. ಆತತಾಯಿಗಳಾದ ವಿಧರ್ಮೀಯಶಾಸಕರಿಂದ ಪುರಾತನಮೂರ್ತಿಗಳು ಒಡೆದುಹಾಕಲ್ಪಟ್ಟುವು. ಈಗ ಇರುವ ಮೂರ್ತಿಗಳು ಈಚೆಗೆ ಸ್ಥಾಪಿಸಲ್ಪಟ್ಟುವು. ಗುಡಿಯಲ್ಲಿ ಶ್ರೀ ಸೀತಾ-ರಾಮ-ಲಕ್ಷ್ಮಣರ ಮೂರ್ತಿಗಳಿವೆ. ಮೂರ್ತಿಗಳಿರುವ ಸಿಂಹಾಸನದ ಕೆಳಗೆ ಸೂರ್ಯನ ಮೂರ್ತಿಯು ಕೆತ್ತಲ್ಪಟ್ಟಿದೆ. ಗುಡಿಯ ದ್ವಾರದಲ್ಲಿ ಒಂದು

ಕಡೆ ಸೂರ್ಯನ ಮೂರ್ತಿಯೂ ಮತ್ತೊಂದು ಕಡೆಯಲ್ಲಿ ಶಿವ-ಪಾರ್ವತಿಯರ ಮೂರ್ತಿಗಳೂ ಇವೆ. ಎತ್ತರವಾದ ಗುಡಿಯ ಮಧ್ಯದಲ್ಲಿ ಗಣೇಶನ ವಿಗ್ರಹವೊಂದಿದೆ. ಈ ವಿಶಾಲವಾದ ದೇವಸ್ಥಾನದ ಪ್ರಾಕಾರದಲ್ಲಿ ಒಟ್ಟು 12 ಮಂದಿರಗಳಿವೆ. ಚೈತ್ರ ಮತ್ತು ಕಾರ್ತಿಕ ಮಾಸಗಳ ಷಷ್ಠಿಯಂದು ಇಲ್ಲಿ ಜಾತ್ರೆ ನೆರೆಯುತ್ತದೆ.

**ಪಂಚತೀರ್ಥ :** ಗಯೆಯಿಂದ ಮೌಬಾಜಾರ್‌ಗೆ ಬಸ್ಸುಗಳು ಓಡುತ್ತವೆ. ಅಲ್ಲಿಂದ ಕುರ್ಥಾವರೆಗೆ ಕಚ್ಚಾರಸ್ತೆಯಿದೆ. ಕುರ್ಥಾದಿಂದ 2 ಮೈಲಿ (ಎಂದರೆ ಗಯೆಯಿಂದ 20 ಮೈಲಿ)ಗಳ ದೂರದಲ್ಲಿ ಪಂಚತೀರ್ಥವಿದೆ. ಪುನಪುನ ನದಿಯ ತೀರದಲ್ಲಿರುವ ಇದನ್ನು ಪಾಂಡವತೀರ್ಥವೆಂದೂ ಕರೆಯುತ್ತಾರೆ. ಇಲ್ಲಿ ಒಂದು ಶಿವಾಲಯವೂ ದೇವೀಚೌರಾ ಎಂಬ ದೇವಿಯ ವೇದಿಕೆಯೂ ಇವೆ. ಪಾಂಡವರು ಪುನಪುನನದಿಯ ಈ ಸ್ಥಳದಲ್ಲಿಯೇ ಶ್ರಾದ್ಧಮಾಡಿದರೆಂದು ಪ್ರತೀತಿ. ಶಿವಮಂದಿರದಿಂದ ಸ್ವಲ್ಪ ದೂರದಲ್ಲಿಯೇ ಪಂಚಪಾಂಡವ ಘಟ್ಟವಿದೆ. ಕಾರ್ತಿಕ ಪೂರ್ಣಿಮೆ ಮತ್ತು ಮೇಷ-ಮಕರಸಂಕ್ರಾಂತಿಗಳಲ್ಲಿ ಇಲ್ಲಿ ಜಾತ್ರೆ ನೆರೆಯುತ್ತದೆ.

**ತಪೋವನ :** ಗಯಾ-ಕ್ಯೂಲ್ ರೈಲ್ವೇ ಮಾರ್ಗದಲ್ಲಿ ಗಯೆಯಿಂದ 15 ಮೈಲಿಗಳ ದೂರದಲ್ಲಿ ವಜೀರ್‌ಗಂಜ್ ನಿಲ್ದಾಣವಿದೆ. ಅಲ್ಲಿ ಇಳಿದು 6 ಮೈಲಿಗಳು ನಡೆದೇ ಹೋಗಬೇಕಾಗುತ್ತದೆ. ಮಳೆಗಾಲದಲ್ಲಲ್ಲದೇ ಇತರ ಕಾಲಗಳಲ್ಲಿ ಗಯೆಯಿಂದ ಸೌತರ್ ತನ'ಕ ಬಸ್ಸುಗಳು ಓಡುತ್ತವೆ. ಸೌತರ್ ನಿಂದ ತಪೋವನಕ್ಕೆ 2 ಮೈಲಿಗಳಷ್ಟು ದೂರ ನಡೆದುಹೋಗಬೇಕಾಗುತ್ತದೆ. ತಪೋವನದಲ್ಲಿ ಬಿಸಿನೀರಿನ 4 ಕುಂಡಗಳಿವೆ. ಇವುಗಳನ್ನು ಸನಕ, ಸನಂದನ ಸನಾತನ ಮತ್ತು ಸನತ್ಕುಮಾರಕುಂಡಗಳೆಂದು ಕರೆಯುತ್ತಾರೆ. ಇಲ್ಲೊಂದು ಶಿವಾಲಯವೂ ಇದೆ. ಇಲ್ಲಿ ಜನವಸತಿ ಯಾವುದೂ ಇಲ್ಲ. ಬಹಳ ಹತ್ತಿರವಿರುವ ಹಳ್ಳಿ 2 ಮೈಲಿ ದೂರದಲ್ಲಿದೆ. ಮಕರಸಂಕ್ರಾಂತಿ ಮತ್ತು ಪುರುಷೋತ್ತಮಮಾಸಗಳಲ್ಲಿ ಇಲ್ಲಿ ಜಾತ್ರೆ ನೆರೆಯುತ್ತದೆ. ಆ ಸಮಯಗಳಲ್ಲಿ ಇಲ್ಲಿ ಅಂಗಡಿಗಳಿರುತ್ತವೆ.

**ಸಂಡೇಶ್ವರ :** ಗಯೆಯಿಂದ 21 ಮೈಲಿಗಳ ದೂರದಲ್ಲಿ ಪಹಾಡಪುರ ರೈಲ್ವೇನಿಲ್ದಾಣವಿದೆ. ಅಲ್ಲಿಂದ 2 ಮೈಲಿಗಳ ದೂರದಲ್ಲಿ ಸಂಡೇಶ್ವರವಿದೆ.

ಅಲ್ಲಿ ಸಂಡೇಶ್ವರನಾಥನ ಪ್ರಾಚೀನ ಮಂದಿರವಿದೆ. ಇಲ್ಲಿರುವ ಶಿವಲಿಂಗವು ಭೂಮಟ್ಟದಿಂದ ಎರಡು ಗಜಗಳಷ್ಟು ಕೆಳಗಡೆಯಿದೆ. ಕಾಡಿನ ಮಧ್ಯದಲ್ಲಿರುವ ಈ ಸಂಡೇಶ್ವನಾಥನ ಮಹಿಮೆಯು ಈ ಕಡೆಯಲ್ಲೆಲ್ಲಾ ಪ್ರಖ್ಯಾತವಾಗಿದೆ. ಶಿವರಾತ್ರಿ ಮತ್ತು ರಾಮನವಮಿಯಂದು ಇಲ್ಲಿ ಜಾತ್ರೆ ನೆರೆಯುತ್ತದೆ. ಇಲ್ಲೊಂದು ಧರ್ಮಶಾಲೆಯಿದೆ. ಸುತ್ತಮುತ್ತಲೂ ಭಗ್ನಾವಶೇಷಗಳಿವೆ.

ಉಮಗಾ : ಗಯಾ ಜಿಲ್ಲೆಯ ಮದನಪುರ ತಾಲ್ಲೂಕಿನಲ್ಲಿ ಉಮಗಾ ಪರ್ವತವಿದೆ. ಇದು ಗ್ರಾಂಡ್‌ಟ್ರಂಕ್ ರಸ್ತೆ 307ನೆಯ ಮೈಲಿಕಲ್ಲಿಗೆ 1 ಮೈಲಿ ದಕ್ಷಿಣಕ್ಕಿದೆ. ಇಲ್ಲಿ ಪರ್ವತದ ಮೇಲೆ ಪ್ರಾಚೀನಕಾಲದ ಅತ್ಯಂತ ಕಲಾಪೂರ್ಣ ವಾದ ಸೂರ್ಯದೇವಾಲಯವಿದೆ. ಈ ದೇವಾಲಯವು 60 ಅಡಿಗಳಷ್ಟು ಎತ್ತರವಾಗಿದೆ. ಪೂರ್ವದಲ್ಲಿ ಇದು ಜಗನ್ನಾಥಮಂದಿರವಾಗಿತ್ತೆಂದು ಹೇಳು ತ್ತಾರೆ. ಇಲ್ಲಿ ಸುತ್ತಮುತ್ತಲೂ 52 ಚಿಕ್ಕ-ದೊಡ್ಡ ಮಂದಿರಗಳಿವೆ. ಬೆಟ್ಟದ ಮೇಲೆ ಒಂದು ಸರೋವರವೂ, ಒಂದು ಕುಂಡವೂ ಇವೆ. ವಿಜಯದಶಮೀ ಮತ್ತು ಶಿವರಾತ್ರಿಗಳಲ್ಲಿ ಜಾತ್ರೆ ನೆರೆಯುತ್ತದೆ.

ರಾಜಗೃಹ :

**ತತೋ ರಾಜಗೃಹಂ ಗಚ್ಛೇತ್ ತೀರ್ಥಸೇವೀ ನರಾಧಿಪ ।**
**ಉಪಸ್ಪೃಶ್ಯ ತತಸ್ತತ್ರ ಕಕ್ಷೀವಾನಿವ ಮೋದತೇ ॥**
**ಯಕ್ಷಿಣ್ಯಾ ನೈತ್ಯಕಂ ತತ್ರ ಪ್ರಾಶ್ನೀತ ಪರುಷಃ ಶುಚಿಃ ।**
**ಯಕ್ಷಿಣ್ಯಾಸ್ತು ಪ್ರಸಾದೇನ ಮುಚ್ಯತೇ ಬ್ರಹ್ಮಹತ್ಯಯಾ ॥**

[ಪ.ಪು.ಆದಿ. 38-22,23 ; ವನಪರ್ವ-ತೀರ್ಥ 84/105-5]

ಅನಂತರ ಯಾತ್ರಿಕನು ರಾಜಗೃಹಕ್ಕೆ ಹೋಗಬೇಕು. ಅಲ್ಲಿ ಸ್ನಾನ ಮಾಡಿದ ಪುರುಷನು ಕಕ್ಷೀವಾನನಂತೆ ಆನಂದವನ್ನು ಹೊಂದುತ್ತಾನೆ. ಅಲ್ಲಿ ಪವಿತ್ರನಾಗಿ ಯಕ್ಷಿಣಿಯ ಪ್ರಸಾದವನ್ನು ತಿನ್ನುವ ಮನುಷ್ಯನು ಬ್ರಹ್ಮಹತ್ಯಾ ಪಾತಕದಿಂದ ಮುಕ್ತಿಹೊಂದುತ್ತಾನೆ. ರಾಜಗೃಹವು ಸನಾತನಧರ್ಮಿಗಳಾದ ಹಿಂದೂಗಳಿಗೂ, ಜೈನ ಮತ್ತು ಬೌದ್ಧರಿಗೂ ಪವಿತ್ರತೀರ್ಥವೆನಿಸಿದೆ. ಪಾಟಲೀ ಪುತ್ರ (ಪಾಟನಾ)ಕ್ಕೆ ಮುಂಚೆ ರಾಜಗೃಹವೇ ಮಗಧಸಾಮ್ರಾಜ್ಯದ ರಾಜಧಾನಿ ಯಾಗಿತ್ತು. ಈಗಲೂ ಸಹ ರಾಜಗೃಹವು ಪವಿತ್ರತೀರ್ಥವೆನಿಸಿದೆ. ಪುರು ಷೋತ್ತಮಮಾಸದಲ್ಲಿ ಅಧಿಕಸಂಖ್ಯೆಯಲ್ಲಿ ಯಾತ್ರಾರ್ಥಿಗಳು ಬರುತ್ತಾರೆ.

**ಫಲಶ್ರುತಿಃ**

ಶ್ರುತ್ವಾ ತು ಚರಿತಂ ಪುಣ್ಯಂ ಪಾಣ್ಡವಾನಾಂ ಮಹಾತ್ಮನಾಮ್ ।
ನಾಧಿವ್ಯಾಧಿಭಯಂ ತೇಷಾಂ ಜಾಯತೇ ಪುಣ್ಯಕರ್ಮಣಾಮ್ ॥

ದುರ್ಗತೇಸ್ತರಣೇ ತೇಷಾಮಾಯತಂ ತರಣಂ ಭವೇತ್ ।
ಸುಭಿಕ್ಷಂ ಕ್ಷೇಮಮಾರೋಗ್ಯಂ ಪುಣ್ಯವೃದ್ಧಿಃ ಪ್ರಜಾಯತೇ ॥

ಸರ್ವಪಾಪಾನಿ ನಶ್ಯನ್ತಿ ಜಾಯನ್ತೇ ಸರ್ವಸಮ್ಪದಃ ।
ಏಕಾಕೀ ವಿಜಯೇಚ್ಛತ್ರೂನ್ ಸ್ಮೃತ್ವಾ ಫಾಲ್ಗುನಕರ್ಮ ಚ ।
ಈತಯಃ ಸಮ್ಪ್ರಣಶ್ಯನ್ತಿನ ವಿಯೋಗಃ ಪ್ರಿಯೇ ಜನೇ ॥

ಇದಮಾರಣ್ಯಕಂ ಶ್ರುತ್ವಾ ಮಹಾಪಾಪೈಃ ಪ್ರಮುಚ್ಯತೇ ।
ಅಧನೋ ಧನಮಾಪ್ನೋತಿ ಪುತ್ರಪೌತ್ರಸಮನ್ವಿತಃ ॥

ಯಂ ಯಂ ಪ್ರಾರ್ಥಯತೇ ಕಾಮಂ ತಂ ತಂ ಪಾಪ್ನೋತ್ಯ-
ಸಂಶಯಮ್ ।

ನಾರೀ ವಾ ಪುರುಷೋ ವಾಪಿ ಶುಚಿಃ ಪ್ರಯತಮಾನಸಃ ॥
ಆರಣ್ಯಕೇ ಶ್ರುತೇऽಧೀತೇ ಬ್ರಾಹ್ಮಣಾನ್ಪಾಯಸಾದಿಭಿಃ ।
ಭೋಜಯೇದ್ವಸ್ತ್ರಗೋಸ್ವರ್ಣದಾನೈ ರತ್ನೈಃ ಪ್ರಪೂಜಿತಾನ್ ॥

ಬ್ರಾಹ್ಮಣೇಷು ಚ ತುಷ್ಟೇಷು ಸನ್ತುಷ್ಟಾಃ ಪಾಣ್ಡುನನ್ದನಾಃ ।
ಬ್ರಹ್ಮಾ ವಿಷ್ಣುಸ್ತಥಾ ರುದ್ರಃ ಶಕ್ರೋ ದೇವಗಣಾಸ್ತಥಾ ॥
ಭೂತಾನಿ ಮುನಯೋ ದೇವ್ಯಸ್ತಥಾ ಪಿತೃಗಣಾಶ್ಚ ಯೇ ।
ವಾಚಕಂ ಪೂಜಯೇಚ್ಛಕ್ತ್ಯಾ ವಸ್ತ್ರಾನ್ನೈಃ ಸ್ವರ್ಣಭೂಷಣೈಃ ॥

ವಿಶೇಷತಸ್ತು ಕಪಿಲಾ ದೇಯಾ ತು ಜಯಪಾಠಕೇ ।
ಕಾಂಸ್ಯದೋಹಾ ರೌಪ್ಯಖುರಾ ಸ್ವರ್ಣಶೃಙ್ಗೀ ಸಭೂಷಣಾ ।
ಪಾಣ್ಡೂನಾಂ ಪರಿತೋಷಾರ್ಥಂ ದದ್ಯಾದನ್ನಂ ದ್ವಿಜಾತಯೇ ॥

ಆರಣ್ಯಕಾಖ್ಯಮಾಖ್ಯಾನಂ ಶೃಣುಯಾದ್ಯೋ ನರೋತ್ತಮಃ ।
ಸ ಸರ್ವಕಾಮಾನಾಪ್ನೋತಿ ಪುನಃ ಸ್ವರ್ಗತಿಮಾಪ್ನುಯಾತ್ ॥

